# ಕರ್ನಾಟಕದಲ್ಲಿ ಒಕ್ಕಲಿಗರು ಹಾಗೂ ಒಕ್ಕಲಿಗ ಸಂಘಗಳು: ಸಮಗ್ರ ಅಧ್ಯಯನ

ಡಾಕ್ಟರ್ ಆಫ್ ಫಿಲಾಸಫಿ (ಪಿಎಚ್.ಡಿ.) ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ
ಸಲ್ಲಿಸುತ್ತಿರುವ ಮಹಾಪ್ರಬಂಧ

ಸಂಶೋಧಕ
ಎಮ್.ಕೆ.ಮಹದೇವಯ್ಯ
ಉಪನ್ಯಾಸಕರು

ಮಾರ್ಗದರ್ಶಕರು
ಡಾ.ಎನ್.ಚಿನ್ನಸ್ವಾಮಿ ಸೋಸಲೆ
ಪ್ರವಾಚಕರು



ಚರಿತ್ರೆ ವಿಭಾಗ
ಸಮಾಜ ವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬
೨೦೦೭

# ಕರ್ನಾಟಕದಲ್ಲಿ ಒಕ್ಕಲಿಗರು ಹಾಗೂ ಒಕ್ಕಲಿಗ ಸಂಘಗಳು: ಸಮಗ್ರ ಅಧ್ಯಯನ

ಡಾಕ್ಟರ್ ಆಫ್ ಫಿಲಾಸಫಿ (ಪಿಎಚ್.ಡಿ.) ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ
ಸಲ್ಲಿಸುತ್ತಿರುವ ಮಹಾಪ್ರಬಂಧ


ಸಂಶೋಧಕ

**ಎಮ್.ಕೆ.ಮಹದೇವಯ್ಯ**

ಉಪನ್ಯಾಸಕರು

ಮಾರ್ಗದರ್ಶಕರು

**ಡಾ.ಎಸ್.ಚಿನ್ನಸ್ವಾಮಿ ಸೋಸಲೆ**

ಪ್ರವಾಚಕರು





ಚರಿತ್ರ ವಿಭಾಗ

ಸಮಾಜ ವಿಜ್ಞಾನಗಳ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬

೨೦೦೭

<u>ಮಾರ್ಗದರ್ಶಕರ ಪ್ರಮಾಣ ಪತ್ರ</u>

ಶ್ರೀ ಎಮ್.ಕೆ. ಮಹದೇವಯ್ಯ ಅವರು 'ಕರ್ನಾಟಕದಲ್ಲಿ ಒಕ್ಕಲಿಗರು ಹಾಗೂ ಒಕ್ಕಲಿಗ ಸಂಘಗಳು: ಸಮಗ್ರ ಅಧ್ಯಯನ' ಎಂಬ ಶೀರ್ಷಿಕೆಯ ಸಂಶೋಧನಾ ಮಹಾಪ್ರಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಇವರು ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ಪ್ರಸ್ತುತ ಮಹಾಪ್ರಬಂಧವನ್ನು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ಡಾ. ಎನ್. ಚಿನ್ನಸ್ವಾಮಿ ಸೋಸಲೆ 22-08-07.
ಪ್ರವಾಚಕರು ಮತ್ತು ಮಾರ್ಗದರ್ಶಕರು
ಚರಿತ್ರೆ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

ದಿನಾಂಕ : ೨೨.೦೮.೨೦೦೭
ಸ್ಥಳ : ವಿದ್ಯಾರಣ್ಯ

## ಸಂಶೋಧಕರ ಪ್ರಮಾಣ ಪತ್ರ

ಶ್ರೀ ಎಮ್.ಕೆ. ಮಹದೇವಯ್ಯ ಆದ ನಾನು 'ಕರ್ನಾಟಕದಲ್ಲಿ ಒಕ್ಕಲಿಗರು ಹಾಗೂ ಒಕ್ಕಲಿಗ ಸಂಘಗಳು: ಸಮಗ್ರ ಅಧ್ಯಯನ' ಎಂಬ ಶೀರ್ಷಿಕೆಯ ಸಂಶೋಧನಾ ಮಹಾಪ್ರಬಂಧವನ್ನು ಡಾ. ಎನ್.ಚಿನ್ನಸ್ವಾಮಿ ಸೋಸಲೆ, ಪ್ರವಾಚಕರು, ಚರಿತ್ರೆ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದೇನೆ. ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ಈ ಮಹಾಪ್ರಬಂಧವನ್ನು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

M.K.Mahah

ಎಮ್.ಕೆ. ಮಹದೇವಯ್ಯ
ಸಂಶೋಧಕರು
ಚರಿತ್ರೆ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

ದಿನಾಂಕ : ೨೨.೦೮.೨೦೦೭
ಸ್ಥಳ : ವಿದ್ಯಾರಣ್ಯ

# ಪರಿವಿಡಿ

* * * * *

## ಪ್ರಸ್ತಾವನೆ

ಕನ್ನಡ ನಾಡು ನುಡಿ ಹಾಗೂ ಜನಾಂಗೀಯ ಉದ್ಧಾರಕ್ಕೆಂದೇ ಜನ್ಮ ತಳೆದು ಒಂದು ಶತಮಾನಕ್ಕಿಂತಲೂ ಹೆಚ್ಚಿನ ಕಾಲ ಶ್ರಮಿಸಿದ ಕರ್ನಾಟಕದ ಒಕ್ಕಲಿಗರ ಸಂಘ ಕುರಿತು ಸಮಗ್ರ ಅಧ್ಯಯನ ನಡೆಸಲು ಪ್ರಾರಂಭಿಸಿದ್ದಾಗ ಕಣ್ಣೆದುರಿಗೆ ನೂರಾರು ಆತಂಕ ಕಾಣುತ್ತಿತ್ತು. ಆದರೆ ಅಧ್ಯಯನದಲ್ಲಿ ತೊಡಗಿದ್ದಾಗ ಆತಂಕದ ಛಾಯೇ ಇಲ್ಲವಾಗಿ ಎನೆಲ್ಲಾ ಬರೆಯಬಹುದು. ಇತಿಹಾಸವನ್ನು ಇಂದಿನ ಜನಾಂಗಕ್ಕೆ ಪರಿಚಯಿಸಬಹುದು ಎನ್ನುವ ಕುತೂಹಲದಿಂದ ಈ ಅಧ್ಯಯನ ಕೈಗೊಳ್ಳಲಾಯಿತು. ಸಂಘದ ಜನಕರೆಂಬ ಕೀರ್ತಿಗೆ ಪಾತ್ರರಾದ ಶ್ರೀ ಕೆ.ಎಚ್.ರಾಮಯ್ಯ ರವರು ಹಾಗೂ ಇವರ ಕುಟುಂಬದವರು ಹೆಚ್ಚಿನ ಶ್ರಮಪಟ್ಟಿದ್ದಾರೆ. ಅವರೇ ಹಲವಾರು ವರ್ಷಗಳ ಕಾಲ ಸಂಘದ ಕಾರ್ಯಧ್ಯಕ್ಷರಾಗಿ ದುಡಿದು ಅದರ ಅಭಿವೃದ್ಧಿ ಕಾರ್ಯದಲ್ಲಿ ಪಾಲುಗೊಂಡವರು. ಇದಲ್ಲದೆ, ಮೈಸೂರು ಸಂಸ್ಥಾನದ ರಾಜಶ್ರೀ ಎಂದೇ ಖ್ಯಾತಿಯಾಗಿರುವ ನಾಲ್ವಡಿ ಕೃಷ್ಣರಾಜ ಒಡೆಯರಿಗೆ ಆತ್ಮೀಯವಾಗಿ ಜನಾಂಗದ ಮುಖಂಡರಾಗಿ ಅಂದೇ ಲಂಡನ್‌ನಲ್ಲಿ ಬಾರ್‌ಆರ್ಟ್ ಪದವಿಯನ್ನು ಪಡಿದಿದ್ದ ಅವರು ಸಾಕಷ್ಟು ಪರಿಶ್ರಮಪಟ್ಟು ಈ ಸಂಘವನ್ನು ಬೆಳಿಸಿದ್ದಾರೆ. ಹೀಗಾಗಿ ಒಕ್ಕಲಿಗರ ಸಂಘ ನಂಬಲರ್ಹವಾದ ಇತಿಹಾಸವಷ್ಟೇ ಅಲ್ಲದೆ ಅಚ್ಚುಕಟ್ಟಾದ ಶಿಕ್ಷಣ ವ್ಯವಸ್ಥೆ ಹಾಗೂ ಗ್ರಾಮೀಣ ಕೃಷಿಗಳ ಅಭಿವೃದ್ಧಿಗೆ ಶ್ರಮಿಸುತ್ತಿರುವುದು ಆಶ್ಚರ್ಯವನ್ನುಂಟು ಮಾಡುವುದಿಲ್ಲ.

ಒಕ್ಕಲಿಗರ ಸಂಘದಂಥ ಸಂಸ್ಥೆಯ ಅವಶ್ಯಕತೆ ಮೊದಲು ಹೊಳೆದಿದ್ದು ಸುದೈವದಿಂದ ಒಕ್ಕಲಿಗ ಜನಾಂಗದ ಪ್ರಜ್ಞಾವಂತರು ಇವರಿಗೆ ಸಕ್ರಿಯ ಸಹಕಾರ ದೊರೆತಿದುದರಿಂದ ಅವರ ಕನಸು ನನಸಾಯಿತು. ಇವರ ಕ್ರಿಯಾಶಕ್ತಿ, ಲೋಕಸಂಗ್ರಹ ಸಾಮರ್ಥ, ಜನಾಂಗದವರ ಮೇಲಿನ ಪ್ರೀತಿ ಸಂಘದ ಪ್ರಾರಂಭದ ವರ್ಷಗಳಲ್ಲಿ ಅವರ ಬೆನ್ನೆಲುಬಾಗಿದ್ದವು. ಇದಕ್ಕೆ ಮುಖ್ಯವಾಗಿ ಮೈಸೂರು ಸಂಸ್ಥಾನದಲ್ಲೂ ನಡೆದ ಅಂದಿನ ಸಾಮಾಜಿಕ ಘಟನೆಗಳು ಹೆಚ್ಚು ಸಹಕರಿಸಿದವು.

ಕರ್ನಾಟಕ ಚರಿತ್ರೆಯಲ್ಲಿ ಮಾತ್ರವಲ್ಲ ಭಾರತದ ಚರಿತ್ರೆಯಲ್ಲೂ ಮೈಸೂರು ಸಂಸ್ಥಾನಕ್ಕೆ ಒಂದು ವಿಶಿಷ್ಟ ಸ್ಥಾನವಿದೆ. ಏಕೆಂದರೆ ಒಕ್ಕಲಿಗರು, ದಲಿತರು, ಶೋಷಿತರು, ಕೆಳವರ್ಗದವರು, ಮಹಿಳೆಯರು, ಬುಡಕಟ್ಟು

ಸಮುದಾಯಗಳೂ ಮೊದಲಾದ ಬ್ರಾಹ್ಮಣೇತರ ಸಮುದಾಯಗಳು ಮೊದಲಬಾರಿಗೆ ಸಾಮಾಜಿಕ, ನ್ಯಾಯ ಹಾಗೂ ಒದಲಾವಣೆಯ ಮುಖಾಂತರ ಮಾತನಾಡಿದ್ದು ಇದೇ ಸಂದರ್ಭದಲ್ಲಿ. ಇವಕ್ಕೆಲ್ಲ ಮೂಲಕಾರಣವೆಂದರೆ ಆಧುನಿಕ ಮೈಸೂರಿನ ನಿರ್ಮಾಪಕರೆನ್ನಿಸಿರುವ 'ರಾಜಶ್ರೀ' ನಾಲ್ವಡಿ ಕೃಷ್ಣರಾಜ ಒಡೆಯರ್ ರವರು. ಇವರು ತಮ್ಮ ೩೮ ವರ್ಷಗಳ ಸುದೀರ್ಘ ಆಳ್ವಿಕೆಯ ಅವಧಿಯಲ್ಲಿ ಕೈಗೊಂಡ ಸಾಮಾಜಿಕ, ಶೈಕ್ಷಣಿಕ ಹಾಗೂ ಅಭಿವೃದ್ಧಿ ಕಾಳಜಿಯ ಕಾರ್ಯಗಳು ರಾಷ್ಟ್ರಕ್ಕೆ ಮಾದರಿಯಾಗಿದ್ದವು. ಇದರಿಂದಾಗಿ ಭಾರತದಲ್ಲಿಯೇ ಮೈಸೂರು ಸಂಸ್ಥಾನ 'ಮಾದರಿ ಸಂಸ್ಥಾನ' ಎಂದೆನ್ನಿಸಿಕೊಂಡಿತ್ತು.

ಕೇವಲ ಮದ್ರಾಸು ಹಾಗೂ ಮೈಸೂರು ಬ್ರಾಹ್ಮಣರೇ ಸಂಸ್ಥಾನದ ಉನ್ನತ ಹುದ್ದೆಗಳನ್ನು ಅಲಂಕರಿಸಿ ಆಳ್ವಿಕೆಮಾಡುತ್ತಿದ್ದಂತಹ ಸನ್ನಿವೇಶದಲ್ಲಿ ತಮ್ಮ ಅಸ್ಥಿತ್ವದ ಉಳಿವಿಗಾಗಿ ಬ್ರಾಹ್ಮಣೇತರರು ಸಂಘಟಿತರಾಗಿ ತಮ್ಮ ಹಕ್ಕಿಗಾಗಿ ಮಹಾರಾಜರ ಬಳಿ ಮನವಿಸಲ್ಲಿಸಿದರು. ಇವರ ಪರ-ವಿರುದ್ಧ ವಾದವಿವಾದಗಳು ನಡೆದವು. ಇದಕ್ಕಾಗಿ ಬ್ರಾಹ್ಮಣೇತರರು ಬೃಹತ್ ಚಳವಳಿಯನ್ನೇ ಮಾಡಬೇಕಾಯಿತು. ಇಂತಹ ಸಂದರ್ಭದಲ್ಲಿ ಮೈಸೂರು ಸಂಸ್ಥಾನದಲ್ಲಿ ಬ್ರಾಹ್ಮಣೇತರರಲ್ಲಿ ಜಮಿನ್ದಾರಿಕೆಯ ವರ್ಗವಾಗಿದ್ದ ಒಕ್ಕಲಿಗರು ಸಂಘಟಿತರಾಗಿ ತಮ್ಮ ಜನಾಂಗದ ಕುಂದು ಕೊರತೆಗಳನ್ನು ನಿವಾರಿಸಲು ೧೯೦೬ರಲ್ಲಿಯೇ 'ಒಕ್ಕಲಿಗರ ಸಂಘ' ಸ್ಥಾಪನೆಮಾಡಿದರು. ಇದು ಆಡಳಿತವರ್ಗ ಹಾಗೂ ಪುರೋಹಿತ ಶಾಹಿಗಳ ಯಾಜಮಾನ್ಯ ಸಂಸ್ಕೃತಿಯಿಂದ ಪಾರಾಗಿ ನಾವೂ ನಿಮ್ಮ ಸಮಾನರೆಂದು ಕೇಳುವ ಧ್ವನಿಯನ್ನು ಸೃಷ್ಟಿಸಿತು. ಈ ಎಲ್ಲಾ ಪ್ರೇರಣೆಯ ಹಿಂದೆ ಸಂಸ್ಥಾನದ ದೊರೆಯಾಗಿದ್ದ ಶ್ರೀ ನಾಲ್ವಡಿ ಕೃಷ್ಣರಾಜ ಒಡೆಯರ ಪ್ರೀತಿ, ಅಭಿಮಾನ ಮುಖ್ಯವಾಗಿದೆ. ಜಾತಿ-ಮತ, ಪಂಥಗಳನ್ನು ಬಿಟ್ಟು ದೇಶ ಭಾಷೆ ವಯಸ್ಸುಗಳ ಅಂತರವನ್ನು ಮರೆತು ಮೇಲುಕೀಳೆಂಬ ತಾರತಮ್ಯವನ್ನಳಿದು ಸಾಮಾನ್ಯ ಜನತೆಯ ಮೊದಲಬಾರಿಗೆ ಸಮಾಜದ ಮುಖ್ಯವಾಹಿನಿಗೆ ಬರಬೇಕೆಂದು ತಮ್ಮ ಆಳ್ವಿಕೆಯನ್ನು ಅಪಾರವಾಗಿ ತೊಡಗಿಸಿಕೊಂಡದ್ದು ಹಾಗೂ ಸರ್ವಕಾಲಿಕ ಮೌಲ್ಯದ ಆಡಳಿತವನ್ನು ಕೊಟ್ಟು 'ರಾಜರ್ಷಿ' ಯಾದದ್ದು ನಾಲ್ವಡಿಯವರೆ.

ಈ ಸಂದರ್ಭದಲ್ಲಿ ಕರ್ನಾಟಕದಲ್ಲಿ ಒಕ್ಕಲಿಗರ ಸಂಘ ಸ್ಥಾಪನೆಯಾಯಿತು. ಈ ಸಂಘದ ಸ್ಥಾಪನೆಯ ಕುರಿತು ಚರ್ಚಿಸಲಾಗಿದೆ.

## ಒಕ್ಕಲಿಗರ ಸಂಘ ಸ್ಥಾಪನೆ ಮತ್ತು ಸಾಧನೆ

ಇದೀಗ ಒಕ್ಕಲಿಗರ ಸಂಘದ ಮಹೋದಯ ಕಾಲ. ಒಕ್ಕಲಿಗರ ಸಂಘ ಸರ್ವತೋಮುಖವಾಗಿ ಬೆಳೆದು ಬೆಳಗಲಾರಂಭಿಸಿದೆ. ಇಂತಹ ಮಹತ್ತರ ಹೊಣೆಗಾರಿಕೆ ಎದೆಗೂಟ್ಟು ನಿಲ್ಲತಕ್ಕ ಸಮರ್ಥ ಮುಖಂಡರು ಹೆಚ್ಚಿನ ಸಂಖ್ಯೆಯಲ್ಲಿ ಮುಂದೆ ಬರಬೇಕಾಗಿದೆ. ಸಮಸ್ತ ಒಕ್ಕಲಿಗರ ಮಹಾಜನರ ಒಕ್ಕೂಟದ ಆಡಳಿತದಲ್ಲಿ ಸಂಘದ ಯೋಜನೆಗಳು ಸಿದ್ಧಿಸುವ ಕಾಲ ಬಂದಿದೆ. ಸರ್ವೋದಯ ಕಾಲವು ಸನ್ನಿಹಿತವಾಗಿದೆ. ವಿಶ್ವಖ್ಯಾತಿಗಳಿಸುವ ಸುಸಂಧಿಯಲ್ಲಿ ಒಕ್ಕಲಿಗರು ಮುನ್ನಡೆಯಬೇಕಾಗಿದೆ.

'ನ್ಯಗ್ರೋಧ ಬೀಜಂ ಕೆಲಂ ಸಿಡಿದು ಪೆರ್ಮರನಾಗದೇ' ಎಂದು ನುಡಿದ್ದಿದ್ದಾನೆ ಕನ್ನಡ ಕವಿ ಸೋಮನಾಥ. ಈ ನುಡಿಯ ಪ್ರತ್ಯಕ್ಷ ಸ್ವರೂಪವೇ ಒಕ್ಕಲಿಗರ ಸಂಘ ಎಂದರೆ ತಪ್ಪಾಗದು. ಆಲದ ದೊಡ್ಡ ಮರವಾಗುವಂತೆ ಒಕ್ಕಲಿಗರ ಸಂಘವೂ ಸಹ ಕಿರಿದಾಗಿ ಮೊಳೆತು ಹಿರಿದಾಗಿ ಬೆಳೆದು ಬರುತ್ತಿದೆ. ಇದೊಂದು ಐತಿಹಾಸಿಕ ಘಟನೆ, ೧೯೦೬ರಂದು ಸಂಭವಿಸಿದ ಮಹಾಸಂಘಟನೆ.

ಒಕ್ಕಲಿಗರ ಸಂಘದ ಅಭ್ಯುದಯವನ್ನು ಚಿತ್ರಿಸುವುದರಲ್ಲಿ ಮೂರುಮುಖ್ಯ ಪರ್ವಕಾಲಗಳನ್ನು ನಾವು ಗಮನಿಸುವುದು ಸೂಕ್ತವಾಗಿರುತ್ತದೆ. ಅವು ಯಾವುದೆಂದರೆ

೧. ಒಕ್ಕಲಿಗರ ಸಂಘದ ಅರಣೋದಯ ಕಾಲ, ೧೯೦೬ ರಿಂದ ೧೯೪೭ರ ವರೆಗೆ

೨. ಒಕ್ಕಲಿಗರ ಸಂಘದ ನವೋದಯ ಕಾಲ, ೧೯೪೭ರಿಂದ ೧೯೭೨ರ ವರೆಗೆ

೩. ಒಕ್ಕಲಿಗರ ಸಂಘದ ಮಹೋದಯ ಕಾಲ, ೧೯೭೨ ಆ ತರುವಾಯ

**೨. ಐದು ಪ್ರಮುಖ ಘಟ್ಟಗಳು**

ಒಕ್ಕಲಿಗರ ಸಂಘದ ೧೦೦ ವರ್ಷಗಳ ಅವಧಿಯಲ್ಲಿ ಐದು ಪ್ರಮುಖ ಘಟ್ಟಗಳನ್ನು ನಾವು ಗುರುತಿಸಬಹುದು. ೧೯೦೬, ೧೯೨೮, ೧೯೪೭, ೧೯೬೧, ೧೯೮೧ ಮತ್ತು ೨೦೦೦ ಈ ವರ್ಷಗಳಲ್ಲಿ ಒಕ್ಕಲಿಗರ ಸಂಘವು ತನ್ನ ಸರ್ವಾಂಗಸಿದ್ಧಿಯ ವಿವಿಧ ಹಂತಗಳಲ್ಲಿ ಗರಿಗೂಡಿ ಸಾಧಿಸಿದ ವಿಕ್ರಮಗಳ ಪಕ್ಷಿನೋಟವನ್ನು ಮೊಟ್ಟಮೊದಲು ಗಮನಿಸಬಹುದಾಗಿದೆ.

೧೯೦೬ ಇಪ್ಪತ್ತನೆಯ ಶತಮಾನದ ಪ್ರಥಮ ದಶಕ. ಹಿಂದುಳಿದ ಜನಾಂಗಗಳೆಂದು ಆಗ ಹೆಸರುವಾಸಿಯಾಗಿದ್ದ ಯಾವುದೊಂದು ಜನಾಂಗವೇ ಆಗಲಿ ಸಂಘಟನೆಯ ನಿಟ್ಟಿನಲ್ಲಿ, ಒಕ್ಕೂಟದ ಹಾದಿಯಲ್ಲಿ, ಕಾರ್ಯಸಾಧನೆ ಮಾಡುವ ಗುಟ್ಟನ್ನು ಅರಿತಿರಲಿಲ್ಲ. ಕೂಪಮಂಡೂಕಗಳಂತೆ, 'ಅವಶ್ಯಂ ಅನುಭೋಕ್ತವ್ಯಂ ಕೃತಕೃತ್ಯ ಶುಭಾಶುಭಃ' ಎಂಬ ಪ್ರಾರಬ್ಧ ಮಂತ್ರ ಜಪಿಸುತ್ತ ತಮ್ಮ ತಮ್ಮ ಕರ್ಮಕಾಂಡವನ್ನು ಸೊಂಟ ಕಟ್ಟಿ ಸವೆಸುತ್ತಿದ್ದ ಕಾಲ ಅದು. ಇಂತಹ ಭೀಕರ ಸನ್ನಿವೇಶದಲ್ಲಿ ಒಕ್ಕಲಿಗರ ಸಂಘ ಸ್ಥಾಪನೆಗೆ ಬುನಾದಿಯಾಗಿ ಒದಗಿದ ಅಪೂರ್ವ ಸಂದರ್ಭ ನಿಜಕ್ಕೂ ದೈವದತ್ತವಾಗಿತ್ತು; ಕ್ರಾಂತಿದಾಯಕವೂ ಆಗಿತ್ತು.

೧೯೨೮ ನೇ ಈ ವರ್ಷ ಒಕ್ಕಲಿಗ ಸಂಘ ನಿರ್ವಹಿಸಿದ ಮತ್ತೊಂದು ಮಹಾಸಾಧನೆ ಶ್ರೀ ಆದಿಚುಂಚನಗಿರಿ ಮಹಾಕ್ಷೇತ್ರದ ಪುನರುತ್ಥಾನ. ಶ್ರೀ ಭೈರವೇಶ್ವರ ಈ ಮಹಾಕ್ಷೇತ್ರದ ಆಧಿದೇವತೆ. ಇದೊಂದು ಗುರುಪೀಠ. ಬೆಂಗಳೂರು ಹಾಸನ ರಾಷ್ಟ್ರೀಯ ಹೆದ್ದಾರಿಯಲ್ಲಿ ನೆಲ್ಲೀಗೆರೆ ಬಳಿ ಮಾಯಸಂದ್ರಕ್ಕೆ ಹೋಗುವ ಕವಲು ರಸ್ತೆಯಲ್ಲಿದೆ ಈ ಕ್ಷೇತ್ರ. ಒಕ್ಕಲಿಗ ಜನಾಂಗದಲ್ಲಿ ಭೈರವನ ಒಕ್ಕಲು ಅಸಂಖ್ಯಾತ. ೧೯೨೬ ರಲ್ಲಿ ಪೀಠಾಧಿಕಾರಿಗಳಾಗಿದ್ದ ಶ್ರೀ ತೇಜನಾಥಸ್ವಾಮಿಗಳು ಉತ್ತರಾಧಿಕಾಯಿಲ್ಲದೆ ನಿಧನರಾದ ಪ್ರಯುಕ್ತ, ಶ್ರೀ ಸಿದ್ಧ ಸಿಂಹಾಸನಕ್ಕೆ ಅರ್ಹರಾದ ಒಕ್ಕಲಿಗ ಯೋಗಿಯನ್ನು ನೇಮಿಸಬೇಕೆಂಬ ವಿಚಾರದಲ್ಲಿ ೧೯೨೬ ರಿಂದ ೧೯೨೮ರ ವರೆಗೆ ಒಕ್ಕಲಿಗ ಮುಖಂಡರು ಮುಂದೆ ಬಂದು, ಭೈರವ ಹಾಗೂ ಕೇಶವ ಎಂಬ ಪಂಥಭೇದ ವಿಲ್ಲದೆ, ನಡೆಸಿದ ಸರ್ಕಾರದ ಪರಿಶೀಲನೆಗೆ ಶ್ರೀಮನ್ಮಹಾರಾಜರ ಅಂಗೀಕಾರ ದೊರೆಯಿತು. ಈ ಕಾರ್ಯಸಾಧನೆಯಲ್ಲಿ ಒಕ್ಕಲಿಗ ಸಂಘದ ಪ್ರಮುಖರಾದ ಶ್ರೀ ಕೆ.ಹೆಚ್. ರಾಮಯ್ಯನವರೂ, ಶ್ರೀ ಎಂ.ಸಿ. ಲಿಂಗೇಗೌಡರೂ ಪಟ್ಟಶ್ರಮ ವರ್ಣನಾತೀತ.

ಆಗ ಮೇಲುಕೋಟೆಯಲ್ಲಿ ಒಕ್ಕಲಿಗ ಸೇವಾಶ್ರಮಸ್ಥಾಪಕಾಗಿದ್ದ ದರಸಗುಪ್ಪೆಯ ಶ್ರೀ ಗುರುರಾಮಯ್ಯನವರು ಒಕ್ಕಲಿಗ ಮುಖಂಡರ ಕೋರಿಕೆಯಂತೆ, ೧೯೨೬ ಫೆಬ್ರುವರಿ ೨೩ ಸೋಮವಾರ ಭಕ್ತಾನಾಥ ಸ್ವಾಮಿಗಳು ಎಂಬ ಅಭಿದಾನದಿಂದ ಶ್ರೀ ಆದಿಚುಂಚನಗಿರಿ ಉರಿಗದ್ದುಗೆಯ ಶ್ರೀ ಸಿದ್ಧ ಸಿಂಹಾಸನವನ್ನೇರಿದರು. ಜಗದ್ಗುರು ಶ್ರೀ

ಭಕ್ತನಾಥ ಸ್ವಾಮಿಗಳವರು ಶ್ರೀ ಆದಿಚುಂಚನಗಿರಿ ಮಹಾಕ್ಷೇತ್ರದಲ್ಲಿ ನಾಥ ಸಂಪ್ರದಾಯದಂತೆ ಶ್ರೀಮಠದ ಕಾರ್ಯಗಳನ್ನು ನಡೆಸಲಾರಂಭಿದರು. ಶ್ರೀ ಗುರು ಪರಂಪರೆಯಲ್ಲಿ ಈಗಿನ ಪೀಠಧ್ಯಕ್ಷರು ನಾಲ್ಕನೆಯವರು.

೧೯೪೭ ಇದು ಸಮಸ್ತ ಜನರ ಗಮನವನ್ನೂ ದೇಶ ಸೇವೆಯ ಕಡೆಗೆ ಸೆಳೆದ ಕಾಲ. ಭಾರತೀಯರಿಗೆ ಸ್ವಾತಂತ್ರ್ಯ ಲಭಿಸಿದ ಕಾಲ. ಇದು ಒಕ್ಕಲಿಗರ ಆಚಾರ ವಿಚಾರಗಳಲ್ಲೂ, ಸಾಮಾಜಿಕ, ರಾಜಕೀಯ ಹಾಗೂ ಶೈಕ್ಷಣಿಕ ಸಮಸ್ಯೆಗಳಲ್ಲೂ ಜನಾಂಗದ ನಿಲುವನ್ನು ಮಾರ್ಪಾಡಿಸಿತು. ವಿಶಾಲ ಮೈಸೂರು ರಾಜ್ಯ ೧೯೫೬ರಲ್ಲಿ ರಚನೆಯಾದ ಮೇಲಂತೂ ಅನೇಕ ಜಟಿಲ ಸಮಸ್ಯೆಗಳು ತಲೆದೋರಿದುವು. ಜನಾಂಗದ ಪ್ರಗತಿಗೆ ಒಂದು ಹೊಸ ತಿರುವನ್ನು ಕೊಟ್ಟು, ಜನಾಂಗದ ಹಿತ ಮತ್ತು ಹಕ್ಕು ಬಾಧ್ಯತೆಗಳನ್ನು ಸಂರಕ್ಷಿಸಲು ಒಕ್ಕಲಿಗರೆಲ್ಲರೂ ನಿಸ್ವಾರ್ಥ ಪ್ರಯತ್ನದಿಂದ ಮಿನ್ನುಗ್ಗುವ ಅವಶ್ಯಕತೆ ಕಂಡುಬಂತು. ಇಂದು ೧೯೭೩ ನವೆಂಬರ್ ಒಂದರಿಂದ ವಿಶಾಲ ಮೈಸೂರು ರಾಜ್ಯವು **ಕರ್ನಾಟಕ ರಾಜ್ಯವಾಗಿದೆ.**

೧೯೬೧ ಇದು ಒಕ್ಕಲಿಗ ಸಂಘದ ಸುವರ್ಣ ಮಹೋತ್ಸವ ನಡೆದ ಕಾಲ. ೧೯೦೬ರ ಕಾಲಕ್ಕೂ ಸುವರ್ಣ ಮಹೋತ್ಸವ ಕಾಲಕ್ಕೂ ಇದ್ದ ೫೫ ವರ್ಷಗಳ ಅಂತರದಲ್ಲಿ ಕಂಡುಬಂದ ಪರಿಸ್ಥಿತಿಯ ಬದಲಾವಣೆಯನ್ನು ಇಲ್ಲಿ ನಾವು ಗಮನಿಸಬೇಕು. ಅದರಲ್ಲೂ ಮುಖ್ಯವಾಗಿ ಕುಲಮುಖಂಡರ ಅಭಾವ ಅಗಾಧವಾಗುತ್ತ ಬಂದಿತ್ತು. ಹಿಂದುಳಿದ ವರ್ಗಗಳಿಗೆ ಸೇರಿದ ಎಲ್ಲ ಜನಾಂಗಗಳಲ್ಲಿಯೂ ಈ ಸಮಸ್ಯೆ ಉದ್ಭವಿಸಿತ್ತು. ಹಿಂದೆಯೇ ಹೇಳಿರುವಂತೆ ೧೯೪೭ರಲ್ಲಿ ದೇಶಕ್ಕೆ ಸ್ವಾತಂತ್ರ್ಯ ಬಂದ ಮೇಲಂತೂ ನಮ್ಮಲ್ಲಿದ್ದ ಕುಲಸೇವಕರು ದೇಶಸೇವೆಗೆ ನಿಂತರು. ಹೀಗಾಗಿ ದೇಶಸೇವೆಗೆ ನಿಂತವರು ಕುಲಸೇವೆಗೆ ಇಲ್ಲದಂತಾಯಿತು. ಇದರ ಜತೆಗೆ ಸರ್ಕಾರಿ ನೌಕರಿಗೆ ಸೇರಿದವರು ನೇರವಾಗಿ ಕುಲಸೇವೆಗಾಗಲಿ, ದೇಶಸೇವೆಗಾಗಲಿ ಕೈಹಾಕುವಂತಿರಲಿಲ್ಲ.

ಇತ್ತ ಒಕ್ಕಲಿಗ ಸಂಘದ ಕಾರ್ಯಕಲಾಪಗಳಲ್ಲಿ ೧೯೧೫ರ ವೇಳೆಗಾಗಲೇ ಮುಖಂಡರ ಅಭಾವ ಉಂಟಾಗಿತ್ತು. ಸಂಘ ಸ್ಥಾಪನೆಯ ಮೂಲ ಪುರುಷರಾದ ಶ್ರೀ ಬಿ. ನಾಗಪ್ಪನವರೂ, ಶ್ರೀ ಕೆ.ಹೆಚ್. ರಾಮಯ್ಯನವರೂ, ಶ್ರೀ ಬಿ. ಪುಟ್ಟಯ್ಯನವರೂ ಸರ್ಕಾರದ ಗದ್ದುಗೆ ಏರಿದರು. ಇದರಿಂದ ಒಕ್ಕಲಿಗರ ಸಂಘದ ಆಡಳಿತದಲ್ಲಿ ಈ ಮಹನೀಯರ ನಿರರ್ಗಳ ಸೇವೆಗೆ ಅವಕಾಶ ತಪ್ಪಿತು. ಅಷ್ಟೇ ಅಲ್ಲ. ಒಕ್ಕಲಿಗರ ಸಂಘ ಸ್ಥಾಪನೆಗೆ ಕಾರಣಕರ್ತರಾದ ೫೧ ಮಂದಿ ಗಣ್ಯರಲ್ಲಿ (ಅನುಬಂಧ ನೋಡಿ) ಯಾರೊಬ್ಬರೂ ಸುವರ್ಣ ಮಹೋತ್ಸವ ಕಾಲದಲ್ಲಿ ಬದುಕಿರಲಿಲ್ಲ. ಅವರುಗಳಲ್ಲಿ ಒಕ್ಕಲಿಗರ ಸಂಘದ ರೂಪರೇಖೆಗಳನ್ನು ಚಿತ್ರಿಸಿದ ನವಮಣಿಗಳು ಶ್ರೀಗಳಾದ ಟಿ.ಬೈಯಣ್ಣ, ಬಿ.ನಾಗಪ್ಪ, ಬಿ.ಎನ್.ಚೆನ್ನಿಗಪ್ಪ, ಎಂ.ಸುಬ್ಬಯ್ಯ, ಬಿ.ಕೆಂಪಣ್ಣ, ಎಂ.ಎಲ್.ಶ್ಯಾಮಗೌಡ, ಎಸ್.ಪುಟ್ಟಣ್ಣ, ಸಿ.ಲಕ್ಷ್ಮಣಗೌಡ ಮತ್ತು ಕೆ.ಹೆಚ್.ರಾಮಯ್ಯ ಇವರುಗಳ ಅಕಾಲ ಮರಣದಿಂದ ಉಂಟಾದ ಕಗ್ಗತ್ತಲೆಯ ಕಾಂಡದಲ್ಲಿ ಒಕ್ಕಲಿಗರ ಸಂಘವು ಇದ್ದ ಅಲ್ಪ ಸ್ವಲ್ಪ ಕೆಲಸದಲ್ಲಿಯೇ ತೃಪ್ತರಾಗಬೇಕಾಗಿತ್ತು.

ಇಂತಹ ವಿಷಮ ಪರಿಸ್ಥಿತಿಯಲ್ಲಿ ಕಳೆದುಳಿದ ಕುಲ ಮುಖಂಡರು ನಿವೃತ್ತ ಸರ್ಕಾರಿ ಅಧಿಕಾರಿಗಳ ಬೆಂಬಲದಿಂದ ಒಕ್ಕಲಿಗರ ಸಂಘದ ಆಡಳಿತವನ್ನು ನಡೆಸಲು ಸಿದ್ಧರಾದರು. ಎಷ್ಟೇ ಪ್ರಯತ್ನ ನಡೆಸಿದರೂ ಒಕ್ಕಲಿಗರ ಸಂಘದ ಆರ್ಥಿಕ ಪರಿಸ್ಥಿತಿ ಕುಗ್ಗಿತು. ಇದನ್ನು ಸರಿಪಡಿಸಿ ಇಡೀ ದಕ್ಷಿಣ ಭಾರತದ ಪರಿಸರದಲ್ಲಿ ಒಕ್ಕಲಿಗರ ಸಂಘಕ್ಕೆ ನವ ತೇಜಸ್ಸನ್ನು ತುಂಬುವುದೇ ಈ ಸುವರ್ಣ ಮಹೋತ್ಸವದ ಹೆಗ್ಗುರಿಯಾಗಿತ್ತು.

೨೦೦೬ ಇದೀಗ ಒಕ್ಕಲಿಗರ ಸಂಘದ ಶತಮಾನೋತ್ಸವದ ಪ್ರತಿಷ್ಠಿತ ವರ್ಷ. ಇಂದು ಒಕ್ಕಲಿಗ ಜನಾಂಗವು ಸಂಪಾದನಾ ಮಾರ್ಗ, ಸಾಹಿತ್ಯ ಮಾರ್ಗ ಮತ್ತು ಸಿದ್ಧಾಂತ ಮಾರ್ಗಗಳಲ್ಲಿ ಅಷ್ಟಿಷ್ಟು ಮುಂದುವರಿದಿದೆ. ಆದರೆ ಇಂಡಿಯಾ ದೇಶದ ಇತರ ಮುಂದುವರಿದ ಜನಾಂಗದವರಂತೆ ಒಕ್ಕಲಿಗರೂ ಸಹ ಅವರಿಗೆ ನಿಜವಾಗಿಯೂ ಸರಿಸಾಟಿಯಾಗಿ, ಏಕಮತ್ಯ ಹಾಗೂ ಏಕಧರ್ಮಗಳ ಜಾಡಿನಲ್ಲಿ ಮುಂದುವರಿಯುತ್ತಿದ್ದಾರೆಯೇ ಎಂಬುದನ್ನು ಮತ್ತಷ್ಟು ನಿರ್ದಿಷ್ಟವಾಗಿ ಪರ್ಯಾಲೋಚಿಸಬೇಕಾದ ಸಮಸ್ಯೆ ನಮ್ಮ ಮುಂದಿದೆ. ಹಳ್ಳಿಗಳಲ್ಲಿ ವ್ಯವಸಾಯ ವೃತ್ತಿಯಲ್ಲಿ ನಿರತರಾಗಿರುವ ಒಕ್ಕಲಿಗರೂ ನಗರ ಪ್ರದೇಶಗಳಲ್ಲಿ ಉದ್ಯೋಗಶೀಲರಾಗಿ ಮುಂದುವರಿಯುತ್ತಿರುವ ಒಕ್ಕಲಿಗರೂ ಸರ್ವ ಸಮಾನತೆಯಿಂದ ಒಕ್ಕಲಿಗರ ಸಂಘದ ಆಶ್ರಯದಲ್ಲಿ ಅಜೀವ ಸದಸ್ಯರಾಗಿ, ಸಂವಿಧಾನದ ಚೌಕಟ್ಟಿನಲ್ಲಿ ಶಿಸ್ತಿನಿಂದ ಬಾಳಬೇಕಾದ ಕಾಲ ಬಂದಿದೆ. ಒಕ್ಕಲಿಗರ ಕೀರ್ತಿಕಳಶ ಬೆಳಗಬೇಕಾಗಿದೆ.

**ಒಕ್ಕಲಿಗರ ಸಂಘ ಸ್ಥಾಪನೆ**

೧೯೦೬ ರಿಂದ ೧೯೪೭ರ ವರೆಗೆ ಒಕ್ಕಲಿಗರ ಸಂಘದ ಅರುಣೋದಯ ಕಾಲ ಎನ್ನಬಹುದು.)

೧೯೦೬ರಲ್ಲಿ ಮೈಸೂರು ಸಂಸ್ಥಾನದ ರಾಜಮನೆತನದಿಂದಲೂ ಅವರ ಸರ್ಕಾರಿ ವರ್ಗದಿಂದಲೂ ದೊರೆತ ಉತ್ತೇಜನವನ್ನು ಮೊದಲು ಸ್ಮರಿಸಬೇಕು. ಆಗಿನ 'ರಾಜರ್ಷಿ' ಶ್ರೀ ನಾಲ್ವಡಿ ಶ್ರೀಕೃಷ್ಣ ರಾಜೇಂದ್ರ ಒಡೆಯರ್ ಬಹದ್ದೂರ್ ಅವರ ಆಳ್ವಿಕೆಯಲ್ಲಿ ಮೈಸೂರು ಸಂಸ್ಥಾನ 'ರಾಮರಾಜ್ಯ'ವಾಗಿ ಮೆರೆದಿತ್ತು. ಆ ದಿನಗಳಲ್ಲಿ ಹಿರಿಯಣ್ಣನಿಗೆ ಸದೃಶ್ಯರಾಗಿ ಬೆಳಗಿದ್ದರು ಯುವರಾಜ ಶ್ರೀ ಕಂಠೀರವ ನರಸಿಂಹರಾಜ ಒಡೆಯರ್ ಅವರು. ಇವರೀರ್ವರ ಅನುಮತಿಯಾಗಿ, ಹಿಂದುಳಿದ ವರ್ಗಗಳ ಹಿತೈಷಿಯಾಗಿ ಮೈಸೂರು ಸರ್ಕಾರದ ಆಡಳಿತ ಸೂತ್ರ ಹಿಡಿದಿದ್ದರು ಶ್ರೀ ವಿ.ಪಿ.ಮಾಧವರಾಯರು. ಸಮರ್ಥ ದಿವಾನರಾಗಿ ಇಂತಹ ಸುಸಂಧಿಯಲ್ಲಿ ರೂಪುಗೊಂಡಿತ್ತು. ಒಕ್ಕಲಿಗರ ಸಂಘ ಸಂಸ್ಥಾಪನೆಯ ಅದ್ಭುತಕ್ರಿಯೆ.

೧೯೦೬ ಏಪ್ರಿಲ್ ಒಂದನೆಯ ತಾರೀಖು. ಆಗ್ಗೆ ಬ್ಯಾರಿಸ್ಟರ್ ಆಗಿದ್ದ ಶ್ರೀ ಬಿ.ನಾಗಪ್ಪನವರೂ ತಹಶೀಲ್‌ದಾರರಾಗಿದ್ದ ಶ್ರೀ ಬಿ.ಎನ್.ಚೆನ್ನಪ್ಪನವರೂ ಒಂದು ದಿನ ಇಂಗ್ಲೆಂಡಿನ ರೈತರ ಹಾಗೂ ನಮ್ಮ ದೇಶದ ರೈತರ ಪರಿಸ್ಥಿತಿಯ ಏರುಪೇರುಗಳನ್ನು ಕುರಿತು ಚಿಂತಿಸುತ್ತಿದ್ದಾಗ ನಮ್ಮ ರೈತರು ಅರ್ಥಾತ್ ಒಕ್ಕಲಿಗರು ಉದ್ಧಾರವಾಗಬೇಕಾದರೆ ಸಂಘ ಸ್ಥಾಪನೆಯೊಂದೇ ಶ್ರೇಷ್ಠ ಮಾರ್ಗ ಎಂಬುದು ಅವರಿಗೆ ಮನದಟ್ಟಾಯಿತು.

ಮರುದಿನವೇ ಶ್ರೀನಾಗಪ್ಪನವರು ಅವರ ಮಾವಂದಿರೂ ಸದರ್ಮಶೀಲರೂ ಆದ ಊರಿಗಾಂ ಚಿನ್ನದ ಗಣಿ ಕಂಟ್ರಾಕ್ಟರ್ ಶ್ರೀ.ಟಿ.ಬೈಯಣ್ಣನವರನ್ನು ಕಂಡು ತಮ್ಮ ಅಭಿಪ್ರಾಯವವನ್ನು ತಿಳಿಸಿ ಅವರ ಒಪ್ಪಿಗೆ ಪಡೆದರು. ಹೀಗೆ ಪ್ರೋತ್ಸಾಹಗೊಂಡ ಬಿ.ನಾಗಪ್ಪ, ಬಿ.ಎನ್.ಚೆನ್ನಿಗಪ್ಪ ತಮ್ಮ ಆಶಯವನ್ನು ಎಂ.ಸುಬ್ಬಯ್ಯ, ಬಿ.ಕೆಂಪಣ್ಣ, ಎಂ.ಎಲ್.ಶ್ಯಾಮಗೌಡ, ಎಸ್.ಪುಟ್ಟಣ್ಣ, ಸಿ.ಲಕ್ಷ್ಮಣಗೌಡ ಮತ್ತು ಕೆ.ಎಚ್.ರಾಮಯ್ಯ ಇವರುಗಳಿಗೆ ತಿಳಿಸಿದ ಕೂಡಲೇ ೧೯೦೬ ಏಪ್ರಿಲ್ ಎರಡು ಲಾಲ್‌ಬಾಗ್ ರಸ್ತೆಯ ಎಂ.ಸುಬ್ಬಯ್ಯನವರ ತೋಟದಲ್ಲಿ ಆಗಿನ ಮೆಸರ್ಸ್ ಎಂ.ರುದ್ರಪ್ಪ ಅಂಡ್ ಸನ್ ಎಂಬ ಸುಪ್ರಸಿದ್ಧ ಸಸ್ಯವಾಟಿಕೆಯಲ್ಲಿ ಒಂದು ಸಂಜೆ ಎಲ್ಲರೂ ಸಂಧಿಸಿದರು. ಸಂಘದ ಸ್ಥಾಪನೆಯ ನವಮಣಿಗಳಾಗಿ ಈ ಸಭೆಯಲ್ಲಿ ಒಕ್ಕಲಿಗರ ಸಂಘ ಸ್ಥಾಪನೆಯ ನಿರ್ಧಾರ ಕೈಗೊಂಡಾಗ ಬೆಂಗಳೂರಿನ ಒಕ್ಕಲಿಗ ಮಹಾಜನರಿಗೆ ಉಂಟಾದ ಆನಂದ ಅಪರಿಮಿತವಾಗಿತ್ತು.

**ಮೊದಲ ಹೆಜ್ಜೆ**

ಒಕ್ಕಲಿಗರ ಸಂಘ ಸ್ಥಾಪನೆಗೆ ಪೂರ್ವಭಾವಿಯಾಗಿ ೧೯೦೬ ಏಪ್ರಿಲ್ ೧೫ರಂದು ಬೆಂಗಳೂರು ಕೋಟೆ ಪಕ್ಕದಲ್ಲಿರುವ ಸಾಹುಕಾರ್ ದೊಡ್ಡಣ್ಣನವರ ಶ್ರೀ ಲಕ್ಷ್ಮೀನರಸಿಂಹಸ್ವಾಮಿ ಧರ್ಮಶಾಲೆಯಲ್ಲಿ ಮೊದಲ ಸಭೆ ನಡೆಯಿತು. ಈ ಸಭೆಯಲ್ಲಿ ಒಂದು ಕಾರ್ಯಸಮಿತಿ ಏರ್ಪಟ್ಟು ಬಿ.ಕೆಂಪಣ್ಣನವರನ್ನು ಅಧ್ಯಕ್ಷರನ್ನಾಗಿಯೂ ಕೆ.ಎಚ್.ರಾಮಯ್ಯನವರನ್ನು ಕಾರ್ಯದರ್ಶಿಯನ್ನಾಗಿಯೂ ನೇಮಿಸಿ ೪೯ ಮಂದಿ ಸ್ಥಳೀಯ ಮಹನೀಯರನ್ನು ಉಪಸಮಿತಿಯ ಸದಸ್ಯರನ್ನಾಗಿ ಚುನಾಯಿಸಿದುದಲ್ಲದೆ ಬೆಂಗಳೂರು ಮತ್ತು ಸುತ್ತಮುತ್ತಲಿನ ಗ್ರಾಮಗಳಲ್ಲಿರತಕ್ಕ ಸಮಸ್ತ ಒಕ್ಕಲಿಗರನ್ನೂ ಬರಮಾಡಿಕೊಂಡು, ಮತ್ತೊಂದು ಸಭೆ ಸೇರಿಸಿ ಮುಂದಿನ ಏರ್ಪಾಡುಗಳನ್ನು ನಡೆಸಬೇಕೆಂದು ತೀರ್ಮಾನಿಸಿದರು.

**ಎರಡನೆಯ ಹೆಜ್ಜೆ**

ಎರಡನೆಯ ಸಭೆ ೧೯೬೦ ಏಪ್ರಿಲ್ ೨೯ ಭಾನುವಾರ ಸಂಜೆ ೩ ಗಂಟೆಗೆ ಯಥಾಪ್ರಕಾರ ದೊಡ್ಡಣ್ಣನವರ ಶ್ರೀ ಲಕ್ಷ್ಮೀನರಸಿಂಹಸ್ವಾಮಿ ಧರ್ಮಶಾಲೆಯಲ್ಲಿ ಸೇರಿ ಒಂದು ವಿನಂತಿ ಪತ್ರಿಕೆಯನ್ನು ಸಿದ್ಧಪಡಿಸಿತ್ತು. ಈ ವಿನಂತಿಯ ಒಕ್ಕಣೆ ಹೀಗಿತ್ತು.

**ಒಕ್ಕಲಿಗ ಬಂಧುಗಳೇ**

ನಮ್ಮ ದೇಶದಲ್ಲಿ ವ್ಯವಸಾಯದಿಂದಲೇ ಮುಖ್ಯವಾಗಿ ಜೀವಿಸುತ್ತಿರುವ ಒಕ್ಕಲಿಗ ಜನಾಂಗದವರು ಇತರ ವರ್ಗದವರಿಗಿಂತಲೂ ಅಧಿಕ ಸಂಖ್ಯೆಯುಳ್ಳದ್ದಾಗಿದ್ದರೂ ವಿದ್ಯಾವಿಹೀನತೆಯಿಂದ ಏಳಿಗೆಗೆ ಬಾರದೆ ಇರುವುದು ತಮಗೆ ತಿಳಿದೇ ಇದೆ.

ಪ್ರಸ್ತುತ ಈ ಅವಸ್ಥೆಯನ್ನು ಹೋಗಾಲಾಡಿಸಿ ನಮ್ಮವರನ್ನು ಉನ್ನತ ಸ್ಥಿತಿಗೆ ತರುವುದು ಈ ಸಂಘದ ಉದ್ದೇಶವಾಗಿದೆ. ಅದನುಸಾರವಾಗಿ ೧೯೦೬ ಏಪ್ರಿಲ್ ೧ ಮತ್ತು ೮ನೇಯ ತಾರೀಖುಗಳಲ್ಲಿಯೂ ಮತ್ತೆ ೧೯೬೦ ಏಪ್ರಿಲ್ ೧೫ ಹಾಗೂ ೨೯ನೆಯ ತಾರೀಖುಗಳಲ್ಲಿಯೂ ಜಾತಿಯವರ ಪೈಕಿ ಬೆಂಗಳೂರಿನಲ್ಲಿರುವ ಕೆಲವರು ದೊಡ್ಡ ಮನುಷ್ಯರನ್ನು ಸೇರಿಸಿಕೊಂಡು ಯೋಚನೆಮಾಡಿದ್ದರಲ್ಲಿ ಶ್ರೀ ಬಿ.ಕೆಂಪಣ್ಣನವರ ಅಧ್ಯಕ್ಷತೆಯಲ್ಲಿ ಒಂದು ಉಪ ಸಮಿತಿಯನ್ನು ನೇಮಿಸಲಾಯಿತು.

ಈಗ ಒಕ್ಕಲಿಗರ ಮೊದಲನೆಯ ಮಹಾ ಸಭೆಯನ್ನು ೧೯೦೬ ಅಕ್ಟೋಬರ್ ತಿಂಗಳಲ್ಲಿ ಬೆಂಗಳೂರಿನಲ್ಲಿ ನಡೆಸುಂತೆ ನಿರ್ಧರಿಸಲಾಗಿದೆ. ಈ ಮಹಾಸಭೆಗೆ ಸಮಸ್ತ ಒಕ್ಕಲಿಗ ಮಹನೀಯರೂ ದಯಮಾಡಿಸಬೇಕೆಂದು ವಿನಂತಿ.

ಕೆ.ಹೆಚ್.ರಾಮಯ್ಯ

ಕಾರ್ಯದರ್ಶಿ

ಈ ಸಂದರ್ಭದಲ್ಲಿ ಎಂ.ಸುಬ್ಬಯ್ಯನವರು ಲಾಲ್‌ಬಾಗ್ ರಸ್ತೆಯಲ್ಲಿದ್ದ ತಮ್ಮ ಶ್ರೀ ಚಾಮುಂಡೇಶ್ವರಿ ಮುದ್ರಣಾಲಯದಲ್ಲಿ ಸಂಘದ ಸಮಸ್ತ ಮುದ್ರಣ ಕಾರ್ಯವನ್ನೂ ಉಚಿತವಾಗಿ ಮಾಡಿಸಿಕೊಟ್ಟರು. ಅಲ್ಲದೆ ಆಗಾಗ್ಗೆ ಸಭೆ ನಡೆಸಲು ತಮ್ಮ ಬಂಗಲೆಯಲ್ಲಿ ಸ್ಥಳಾನುಕೂಲವನ್ನು ಮಾಡಿಕೊಟ್ಟರು.

ಇತ್ತ ಬಿ.ನಾಗಪ್ಪನವರು ಆಗ್ಗೆ ದಿವಾನರಾಗಿ ಹೊಸದಾಗಿ ನೇಮಕವಾಗಿದ್ದ ವಿ.ಪಿ.ಮಾಧವರಾಯರನ್ನು ಕಂಡರು. ಸ್ನೇಹಪರರಾಗಿದ್ದ ಅವರಿಗೆ ತಾವು ಒಕ್ಕಲಿಗ ಸಂಘವನ್ನು ಸ್ಥಾಪಿಸಬೇಕೆಂದಿರುವ ವಿಚಾರವನ್ನು ತಿಳಿಸಿ ಅವರಿಂದ ಸಂಪೂರ್ಣವಾದ ಸಹಾನುಭೂತಿ ದೊರೆಯುವಂತೆ ಮಾಡಿದರು. ಅಲ್ಲದೆ ಸಂಘದ ಕಟ್ಟಡಗಳನ್ನು ಕಟ್ಟುವುದಕ್ಕೋಸ್ಕರ ಒಂದು ವಿಸ್ತಾರವಾದ ಜಮೀನನ್ನು ಕೊಡಿಸಿಕೊಡುವಂತೆ ಅವರಿಂದ ವಾಗ್ದಾನವನ್ನೂ ಪಡೆದುಕೊಂಡರು. ರಾಜಸಭಾ ಭೂಷಣ ದಿವಾನ್ ಬಹುದ್ದೂರ್ ಸರ್ ಕೆ.ಪಿ.ಪುಟ್ಟಣ್ಣಶೆಟ್ಟರ ಮೂಲಕವೂ ಹೇಳಿಸಿ, ಮಾಧವರಾಯರೇ ಒಕ್ಕಲಿಗರ ಸಂಘದ ಪ್ರಥಮ ಮಹಾಸಭೆಯ ಪ್ರಾರಂಭೋತ್ಸವ ನಡೆಸಿಕೊಡುವಂತೆ ಒಪ್ಪಿಸಿದರು. ಆಗ ಬ್ರಿಟೀಷ್ ರೆಸಿಡೆಂಟರಾಗಿದ್ದ ಮಿ.ಫ್ರೇಜರ್ ಅವರ ಪರಿಚಯ ವಿದ್ದುದರಿಂದ ಅವರನ್ನೂ ಕಂಡು ಅವರ ಸಹಾಯ ಸಹಾನುಭೂತಿ ಸಂಘಕ್ಕೆ ಒದಗುವಂತೆ ಮಾಡಿದರು.

ಈ ಪ್ರಚಾರ ಕಾರ್ಯದಲ್ಲಿ ಶ್ರೀ ಕೆ.ಹೆಚ್.ರಾಮಯ್ಯನವರ ಪ್ರಚಾ ವೈಖರಿ ಅಸದೃಶ್ಯವಾಗಿತ್ತು. ಅವರ ಉತ್ಸಾಹವೇ ಉತ್ಸಾಹ, ವಿಜೃಂಭಣೆಯೇ ವಿಜೃಂಭಣೆ. ಸ್ವಾಭಾವಿಕವಾಗಿ ವಾಚಾಳಿಗಳೂ ಸಂತೋಷ ಪ್ರಕೃತಿಯುಳ್ಳವರೂ, ಧೈರ್ಯಶಾಲಿಗಳೂ, ಸ್ವಾರ್ಥತ್ಯಾಗಿಗಳೂ ಆದ ಈ ಮಹನೀಯರಿಗೆ ಒಕ್ಕಲಿಗರ ಸಂಘ ಮತ್ತು ಒಕ್ಕಲಿಗ ಮಹಾಜನರ ಘನಸೇವೆ ಎಂಬುದು ಮನಸ್ಸಿಗೆ ನಾಟಿದ ಕೂಡಲೇ ತಮ್ಮನ್ನು ತಾವೇ ಮರೆತರು. ತಮ್ಮ ಸರ್ವಸ್ವವನ್ನೂ ಒಕ್ಕಲಿಗರ ಸಂಘದ ಸೇವೆಗೆ ಸೂರೆಗೊಡಲು ಉದ್ಯುಕ್ತರಾದರು.

ದಿವಾನರಿಂದ ಸಂಸ್ಥಾನದ ಎಲ್ಲ ಅಮಲ್ದಾರರಿಗೂ ಪರಿಚಯ ಪತ್ರವನ್ನು ಪಡೆದರು. ಆಗಿನ ಎಂಟು ಜಿಲ್ಲೆಗಳ ಎಲ್ಲ ತಾಲ್ಲೂಕುಗಳಿಗೂ, ಗ್ರಾಮಗಳಿಗೂ ಸಂಚಾರ ಹೊರಟು ಹೃದಯಂಗಮವಾದ ಉಪನ್ಯಾಸಗಳ ಮೂಲಕ ಒಕ್ಕಲಿಗರನ್ನೆಲ್ಲ ಗಾಢನಿದ್ರೆಯಿಂದ ಎಚ್ಚರಿಸಿದರು. ಸರ್ಕಾರಿ ಅಧಿಕಾರಿಗಳೆಲ್ಲರೂ ಇವರಿಗೆ ಸಹಾಯವಾಗಿ ನಿಂತು ಅವಶ್ಯಕವಾದ ಅನುಕೂಲಗಳನ್ನೆಲ್ಲ ಒದಗಿಸಿಕೊಟ್ಟರು. ಸುಮಾರು ನಾಲ್ಕು ತಿಂಗಳ ಕಾಲ ರಾಮಯ್ಯನವರು ನಿಲುಗಡೆಯಿಲ್ಲದೆ ಸಾವಿರಾರು ಊರುಗಳನ್ನು ಸುತ್ತಿ, ಅನ್ನ ನೀರನ್ನೂ ಲೆಕ್ಕಿಸದೆ ತಮ್ಮ ಅಸದೃಶ್ಯ ವಾಗ್ಝರಿಯಿಂದ ಉತ್ತೇಜಕರ ಮಾತುಗಳಿಂದ ಜನರ ಹೃದಯವನ್ನು ಕರಗಿಸಿ ತಮ್ಮ ದೇಹವನ್ನೇ ಧಾರೆಯೆರೆದರು. ಒಕ್ಕಲಿಗರ ಅಜ್ಞಾನ ಹಾಗೂ ನಾಗರಿಕತೆಯನ್ನು ತಮ್ಮದೇ ಆದ ಶೈಲಿಯಲ್ಲಿ ತಿಳಿಹಾಸ್ಯದೊಡನೆ ಕೆಣಕಿ ಹೇಳುತ್ತಿದ್ದರು. ಅವರ ತಿಳಿಹಾಸ್ಯದ ಒಂದು ನುಡಿಯನ್ನು ಇಲ್ಲಿ ಕೊಟ್ಟಿದೆ. ಒಕ್ಕಲಿಗ ರೈತನ ಹೀನದೀನ ಪರಿಸ್ಥಿತಿಯನ್ನು ಕುರಿತು.

**ಮುಂದೆ ಎರಡೆತ್ತು, ಹಿಂದೆ ಒಂದೆತ್ತು,** ಎನ್ನುತ್ತಿದರು ಎಂದರೆ ''ನೇಗಿಲನ್ನು ಹೆಗಲ ಮೇಲೆ ಹೊತ್ತು ಮುದೆ ಎಳೆಯುತ್ತಿರುವ ಎರಡು ಎತ್ತುಗಳಂತೆಯೇ ಹಿಂದೆ ಮೇಣಿ ಹಿಡಿದು ಉಳುತ್ತಿರುವ ರೈತನೂ ಸಹ ಮೂರ್ಖನಾಗಿದ್ದಾನೆ''. ಎಂಬುದು ಇದರ ತಿಳಿಹಾಸ್ಯ.

ಕೆ.ಹೆಚ್.ರಾಮಯ್ಯನವರ ಅಮರದುಂದುಭಿ ದೇಶದಾದ್ಯಂತ ಮೊಳಗಿ ಶತಶತಮಾನಗಳಿಂದ ನಿದ್ರಿಸುತ್ತಿದ್ದ ಒಕ್ಕಲಿಗರನ್ನು ದಂಗುಬಡಿದು ಎಬ್ಬಿಸಿತು. ''ಒಕ್ಕಲಿಗ ಜನರ ಏಳಿಗೆಗೋಸ್ಕರ ಕೆಲಸ ಮಾಡುವುದಕ್ಕಿಂತ ಬೇರೆ ಕೆಲಸ ಇನ್ನೆಂತಹುದು'' ಎಂದು ನಂಬಿ. ಶ್ರೀರಾಮಯ್ಯರವರು ಅಠಾರಾ ಕಛೇರಿಯ ತಮ್ಮ ಸರ್ಕಾರಿ ಗುಮಾಸ್ತೆ ನೌಕರಿಗೆ ರಾಜೀನಾಮೆ ನೀಡಿದರು. ಒಕ್ಕಲಿಗ ಜನ ಸಮುದಾಯದ ಏಳಿಗೆಗೋಸ್ಕರವೇ ಜನಿಸಿದ 'ಅವತಾರ ಪುರುಷ' ಎಂದು ಇವರನ್ನು ಎಲ್ಲರೂ ಪೂಜಿಸಿದರು. ಈ ಸಂದರ್ಭದಲ್ಲಿ ಬಿ.ಪುಟ್ಟಯ್ಯನವರು ಚಿತ್ರದುರ್ಗದ ಡೆಪ್ಯುಟಿ ಕಮೀಷನರ್ ಕಛೇರಿಯಲ್ಲಿ ನೌಕರರಾಗಿದ್ದರು. ಈ ಪ್ರಕಟಣೆ ಅವರ ಕೈಗೆ ಸೇರಿದ ದಿನ ಅವರಿಗೆ ಏನೋ

ಒಂದು ದೊಡ್ಡ ನಿಧಿ ದೊರೆತಂತಾಯಿತು. ಅವರ ಉತ್ಸಾಹಕ್ಕೂ, ಸಂತೋಷಕ್ಕೂ ಪಾರವೇ ಇರಲಿಲ್ಲ. ಕೂಡಲೆ ಚಿತ್ರದುರ್ಗ ಜಿಲ್ಲೆಯ ಎಲ್ಲಾ ತಾಲ್ಲೂಕುಗಳಲ್ಲಿರುವ ಒಕ್ಕಲಿಗರ ದೊಡ್ಡ ಮಹನೀಯರುಗಳ ಪಟ್ಟಿಯನ್ನು ಮಾಡಿಸಿ ಅವರೆಲ್ಲರಿಗೂ ಪ್ರಕಟಣಾ ಪತ್ರಿಕೆಗಳನ್ನು ತರಿಸಿ ಹಂಚಿದರು.

ಒಂದು ದಿನ ಕೆ.ಹೆಚ್.ರಾಮಯ್ಯನವರೂ ಬಿ.ಪುಟ್ಟಯ್ಯನವರೂ ಸಂಘದ ಏಳಿಗೆಯ ವಿಚಾರವನ್ನು ಪ್ರಸ್ತಾಪಿಸುತ್ತ ಸಂಘದ ಉತ್ತರೋತ್ತರ ಅಭಿವೃದ್ಧಿ ಮಾರ್ಗವನ್ನು ಕುರಿತು ಯೋಚಿಸುತ್ತಿದ್ದರು. ಆಗ ರಾಮಯ್ಯ, ಪುಟ್ಟಯ್ಯನವರನ್ನು ಕರೆಳಿಸಿ ''ಏನಯ್ಯ ನಾನು ಉತ್ಸವ ಮೂರ್ತಿಯಾಗುವುದಕ್ಕೂ, ನೀನು ಪೂಜಾ ಮೂರ್ತಿಯಾಗುವುದಕ್ಕೂ ನಮ್ಮ ಸ್ವಭಾವಗಳು ಒಪ್ಪುತ್ತವೆ. ಒಂದಿಲ್ಲದಿದ್ದರೆ ಮತ್ತೊಂದು ಶೋಭಿಸುವುದಿಲ್ಲ. ಸಂಘ ಉದ್ಧಾರವಾಗಬೇಕಾದರೆ ಎರಡೂ ಇರಬೇಕು. ನಾವು ಪ್ರಚಾರಕ್ಕಾಗಿ ಒಕ್ಕಲಿಗರ ಪತ್ರಿಕೆ ಹೊರಡಿಸಬೇಕೆಂದಿದ್ದೇವೆ. ನೀನು ಅದನ್ನೂ ಸಂಘದ ಬರವಣಿಗೆ ಕೆಲಸವನ್ನೂ ವಹಿಸಿಕೊಂಡುಬಿಡು. ಸರ್ಕಾರಿ ನೌಕರಿಯಲ್ಲಿ ನಿನ್ನ ಯೋಗ್ಯತೆ ತಕ್ಕಂತೆ ಹೊರಭೀಳುವುದಿಲ್ಲ. ಸಂಘದಲ್ಲಾದರೂ ದುಡಿದರೆ ಕುಲಜನರ ದಿವ್ಯ ಸೇವೆ ಮಾಡುವುದೊಂದು ದುಡಿದರೆ ಕುಲಜನರ ದಿವ್ಯಯ ಸೇವೆ ಮಾಡುವುದೊಂದು ಆತ್ಮ ಸಂತೋಷವಾದರೂ ಉಂಟಾಗುತ್ತದೆ. ತನ್ಮೂಲಕ ಈಶ್ವರನ ಕೃಪೆ ತಲೆದೋರಿ ಇನ್ನೂ ಅತಿಶಯ ಪ್ರಯೋಜನವೂ ಆಗಬಹುದು. ಆದುದರಿಂದ ತಾತ್ಕಾಲಿಕ ಪ್ರಯೋಜನವನ್ನು ಮರೆತು, ಶಾಶ್ವತ ಪರೋಪಕಾರದಲ್ಲಿ ನಿರತರಾದರೆ ಒಳ್ಳೆಯದು'' ಎಂದು ಹೇಳಿದರು.

ಅದರಂತೆ ಬಿ.ಪುಟ್ಟಯ್ಯ ಸರ್ಕಾರಿ ನೌಕರಿಯನ್ನು ಬಿಟ್ಟು ತಮ್ಮ ಜೀವಮಾನವನ್ನು ಒಕ್ಕಲಿಗರ ಸಂಘಕ್ಕೆ ಮುಡಿಪು ಕೊಡುವುದಾಗಿ ರಾಮಯ್ಯನವರಿಗೆ ತಿಳಿಸಿದರು. ಕೂಡಲೆ ರಾಮಯ್ಯನವರು ವಿ.ಪಿ.ಮಾಧವರಾಯರನ್ನು ಕಂಡು ಪುಟ್ಟಯ್ಯನವರನ್ನು ಬೆಂಗಳೂರಿಗೆ ವರ್ಗಮಾಡಿಕೊಡಬೇಕೆಂದು ಕೇಳಿಕೊಂಡರು. ಸರ್ಕಾರಿ ನೌಕರಿಯಿಂದ ಎರಡು ವರ್ಷ ಸಂಬಳವಿಲ್ಲದ ರಜವನ್ನು ಪಡೆದು ಅವರು ಬೆಂಗಳೂರಿಗೆ ಬಂದರು. ಹೀಗೆ ನಾಲ್ಕು ತಿಂಗಳ ಪ್ರಚಾರ ಕಾರ್ಯವು ತೀವ್ರಾಸಕ್ತಿಯಿಂದ ನಡೆಯಿತು. ೧೯೦೬ರಲ್ಲಿ ನಡೆದ ಈ ಪ್ರಚಂಡ ಪ್ರಚಾರ ವೈಖರಿಯ ಪ್ರತಿಧ್ವನಿ ೧೯೨೦ರಲ್ಲೂ ಕುಗ್ಗಿರಲಿಲ್ಲ.

ಇಲ್ಲಿ ಇದಕ್ಕೊಂದು ಚಿಕ್ಕ ಉದಾಹರಣೆ ಕೂಡುವುದು ಸೂಕ್ತವೆಂದು ತೋರುತ್ತದೆ. ಇಲ್ಲಿ ಎಸ್.ನಿಂಗಪ್ಪರವರು ತಮ್ಮ ಆತ್ಮಕಥೆಯಲ್ಲಿ ಬರೆದಿರುವುದನ್ನು ಉಲ್ಲೇಖಿಸಲಾಗಿದೆ. ೧೯೨೦ರಲ್ಲಿ ನಾನು ನಾಗಮಂಗಲ ತಾಲ್ಲೂಕು ಬೆಳ್ಳೂರು ಎ.ವಿ.ಸ್ಕೂಲಿನಲ್ಲಿ ಈಗಿನ ಮಿಡ್ಲ್‌ಸ್ಕೂಲು ಲೋಯರ್ ಸೆಕೆಂಡರಿ ಪರೀಕ್ಷೆಯಲ್ಲಿ ಈಗಿನ ೭ನೆಯ ಸ್ಟಾಂಡರ್ಡ್ ಪ್ರಥಮ ಶ್ರೇಣಿಯಲ್ಲಿ ತೇರ್ಗಡೆಯಾಗಿದ್ದೆ. ಮೇ ತಿಂಗಳ ಒಂದು ಭಾನುವಾರ ಮಧ್ಯಾಹ್ನ ಎರಡು ಗಂಟೆಗೆ ಒಬ್ಬ ಮಹನೀಯರು ನಮ್ಮೂರು ಶ್ರೀರಂಗಪುರಕ್ಕೆ ಬಂದರು. ತಾವು ನಾಗಮಂಗಲ ತಾಲ್ಲೂಕು, ದಡಮುಡಿಕೆ ಗ್ರಾಮದ ಕೆಂಪೇಗೌಡರೆಂದೂ, ಒಕ್ಕಲಿಗರ ಸಂಘಕ್ಕೆ ಮಿಷನರಿಯಾಗಿ ಪ್ರಚಾರ ಮಾಡುತ್ತಿರುವುದಾಗಿಯೂ ತಿಳಿಸಿದರು. ಬಳಿಕ ನನ್ನನ್ನು ಹತ್ತಿರ ಕರೆದು ಒಕ್ಕಲಿಗರ ಸಂಘದ ಮೂವರು ಮುಖಂಡರಿಗೆ ಕಾಗದ ಬರೆದರೆ ಅವರು ಬಡ ಹುಡುಗರಿಗೆ ಸಹಾಯ ಮಾಡುವುದಾಗಿ ತಿಳಿಸಿ ಎಂ.ಸುಬ್ಬಯ್ಯ, ಕೆ.ಹೆಚ್.ರಾಮಯ್ಯ ಮತ್ತು ರಾವ್ ಸಾಹೇಬ್ ಎಚ್.ಚೆನ್ನಯ್ಯ ಅವರುಗಳ ವಿಳಾಸ ಕೊಟ್ಟರು. ಕಾಗದ ಬರೆದೆ ಶ್ರೀ ಎಂ.ಸುಬ್ಬಯ್ಯನವರಿಂದ ಬೆಂಗಳೂರಿಗೆ ಕೂಡಲೆ ಬರುವಂತೆ ಉತ್ತರ ಬಂತು. ಇಲ್ಲಿಗೆ ಬಂದಾಗಲೇ ಅವರು ಒಕ್ಕಲಿಗ ಸಂಘದ ಜನರಲ್ ಕೌನ್ಸಿಲ್ ಕಾರ್ಯದರ್ಶಿಗಳು ಎಂದು ನನಗೆ ತಿಳಿದದ್ದು.

ಹೀಗೆ ೧೯೦೬ ಏಪ್ರಿಲ್ ೨೯ರಂದು ಉದ್ಭವಿಸಿದ ಸಂಘ ಸ್ಥಾಪನೆಯ ಹೊಂಬೆಳಕಿನಲ್ಲಿ ಪ್ರಮುಖ ಪಾತ್ರ ವಹಿಸಿದ್ದ ಎಂಟು ಮಂದಿ ಕುಲಸೇವಕರು ಶ್ರೀಗಳಾದ ಟಿ.ಬೈಯ್ಯಣ್ಣ ಬಿ.ಎಸ್.ಮಾರಪ್ಪ, ಜಿ.ಕೆಂಪಣ್ಣ, ಬಿ.ಎಸ್.ಮುಸ್ಸಾಮಪ್ಪ, ಬಿ.ನಾಗಪ್ಪ, ಎಂ.ಸುಬ್ಬಯ್ಯ ಬಿ.ಎ., ಕೆ.ಎಚ್.ರಾಮಯ್ಯ ಬಿ.ಎ., ಮತ್ತು ಬಿ.ಪುಟ್ಟಯ್ಯ ಬಿ.ಎ. ಆರು ಮಂದಿ ಮುರಸು ಮಹನೀಯರ ಧೈರ್ಯ ಹಾಗೂ ಕೊನೆಯ ಇಬ್ಬರು ಗಂಗಡಿಕಾರ ಒಕ್ಕಲಿಗ ಮಹನೀಯರ ಸಾಹಸ ಇವೆರಡೂ ಸಮರಸವಾಗಿ ಬೆರೆತಿದ್ದುವು. ಮಿಕ್ಕ ಕಾಲ ಮಹನೀಯರು ಯಾರೇ ಆಗಲಿ ಪರಸ್ಪರ ಚಮತ್ಕಾರದಲ್ಲಿ ತೊಡಗದೆ ಇವರು ತೋರಿದ ದಾರಿಯಲ್ಲಿ ಒಮ್ಮತ ಸಮ್ಮತವಾಗಿ ನಡೆತಂದರೆ. ಇದೀಗ ಆಗಿನ ಒಗ್ಗಟ್ಟಿನ ಗುಟ್ಟು ಈಗಿನ ಗುಟ್ಟಾದರೂ ಅಷ್ಟೆ.

**ಒಕ್ಕಲಿಗರ ಸಂಘದ ಮೊದಲನೆಯ ಮಹಾಸಭೆ**

೧೯೦೬ ಅಕ್ಟೋಬರ್ ೭,೮,೯ ಈ ಮೂರು ದಿನಗಳಲ್ಲಿ ಬೆಂಗಳೂರಿನಲ್ಲಿ ಒಕ್ಕಲಿಗರ ಸಂಘದ ಮೊದಲನೆಯ ಮಹಾಸಭೆ ಬಿ.ಎಸ್.ಮಾರಪ್ಪನವರ ಅಧ್ಯಕ್ಷತೆಯಲ್ಲಿ ನಡೆಯಿತು. ದಿವನ್ ವಿ.ಪಿ.ಮಾಧವರಾಯರು ಮಹಾಸಭೆಯನ್ನು ಉದ್ಘಾಟಿಸಿದರು. ಅದೇ ತಿಂಗಳು ಮೈಸೂರು ದಸರಾ ಮಹೋತ್ಸವ ಸಮಯದಲ್ಲಿ ಜರುಗಿದ ಪ್ರಜಾಪ್ರತಿನಿಧಿ ಸಭೆಯಲ್ಲಿ (ಈಗಿನ ವಿಧಾನಸಭೆ) ತಮ್ಮ ಭಾಷಣದಲ್ಲಿ ಒಕ್ಕಲಿಗರ ಸಂಘದ ಉದ್ಭವ ಮತ್ತು ಏಳಿಗೆಯನ್ನು ಪ್ರಸ್ತಾಪಿಸಿದುದಲ್ಲದೆ ಸಂಘದ ಅಭಿವೃದ್ಧಿಯಿಂದ ಇಡೀ ಸಂಸ್ಥಾನಕ್ಕೆ ಉಂಟಾಗುವ ಪ್ರಯೋಜನವನ್ನು ವಿಸ್ತರಿಸಿ ಹೇಳಿದರು. ಇದರಿಂದ ಸಂಘಕ್ಕೂ ಒಕ್ಕಲಿಗ ಜನಾಂಗಕ್ಕೂ ಸಮಾಜದಲ್ಲಿ ಹೆಚ್ಚಿನ ಮನ್ನಣೆ ಲಭಿಸಿತು.

ಅಲ್ಲದೆ ಮತ್ತೊಂದು ಅಪೂರ್ವವೂ, ಅಮೋಘವೂ ಆದ ಘಟನೆ ಆದಿನ ಎಲ್ಲರಿಗೂ ಮಹದಾನಂದವನ್ನುಂಟುಮಾಡಿತು. ಮೊದನೆಯ ಸಹಾಸಭೆಗೆ ಮೈಸೂರು ಸಂಸ್ಥಾನದ ಸಮಸ್ತ ದಿಗ್ಭಾಗಗಳಿಂದ ಎಂದು ಕಾಣದೇ ಇದ್ದಂತಹ ಒಕ್ಕಲಿಗರ ಪ್ರಮುಖರು ಸಾವಿರಾರು ಮಂದಿ ತಂಡ ತಂಡವಾಗಿ ಬೆಂಗಳೂರಿಗೆ ಬಂದು ಸಭೆಯಲ್ಲಿ ಮಂಡಿಸಿದ್ದರು. ನಾಗಮಂಗಲ, ಕುಣಿಗಲು ಪ್ರಾಂತ್ಯದ ಆಜಾನುಬಾಹುಗಳಾದ ಗೌಡರುಗಳು, ತೀರ್ಥಹಳ್ಳಿ ಮುಂತಾದ ಪ್ರಾಂತ್ಯಗಳಿಂದ ತುಂಬ ಚಟುವಟಿಕೆಯುಳ್ಳ ನಾಮಧಾರಿ ಗೌಡರು, ಮಂಜರಾಬಾದು ಸೀಮೆಯ ಅಂದವಾದ ನಾಡಗೌಡರು ಇವರನ್ನೆಲ್ಲಾ ಮೊಟ್ಟ ಮೊದಲು ನೋಡಿದ ಜನರಿಗೆ ಒಕ್ಕಲಿಗ ಜನಾಂಗದಲ್ಲಿ ಗೌರವವೂ, ಹೆಮ್ಮೆಯೂ ಉಂಟಾದವು. ಇಂತಹ ವಿಸ್ತಾರವಾದ ಜನ ಸಮೂಹದ ಪ್ರತಿನಿಧಿಗಳಾಗಿ ಕೆಲಸ ಮಾಡುವುದು ಒಂದು ಪೂರ್ವಾರ್ಜಿತ ಪುಣ್ಯವೆಂದು ಸಂಘದ ಮುಂದಾಳುಗಳಿಗೆ ಮಂದಟ್ಟಾಯಿತು. ಅದುವರೆಗೂ 'ಒಕ್ಕಲಿಗ' ಎಂದು ಕರೆಯಿಸಿಕೊಳ್ಳುವುದು ಅವಮಾನಕರವೆಂದು ಬಗೆದಿದ್ದವರಿಗೆ 'ಒಕ್ಕಲಿಗ' ಎಂಬ ಹೆಸರೇ ಸರಿ ಎನಿಸಿತು. ಬಿ.ಎಸ್.ಮಾರಪ್ಪನವರು ಅಂದು ಒಕ್ಕಲಿಗರ ಸಂಘದ ಮಹಾಸಭೆಗೆ ದಯೆಮಾಡಿಸಿದ್ದ ಒಕ್ಕಲಿಗ ಮಹಾಜನರಿಗೆ ಮೃಷ್ಟಾನ್ನ ಭೋಜನ ನೀಡಿ ತಮ್ಮ ಸಂತೃಪ್ತಿಯನ್ನು ವ್ಯಕ್ತಪಡಿಸಿದರು.[೩]

**ದಿವಾನ್ ವಿ.ಪಿ.ಮಾಧವರಾಯರ ಅನುಗ್ರಹ**

ದಿವಾನ್ ವಿ.ಪಿ.ಮಾಧವರಾಯರು ಸಂಘದ ಕಾರ್ಯಕಲಾಪಗಳನ್ನು ಮೆಚ್ಚಿ ಮೊದಲನೆಯ ಮಹಾಸಭೆಯ ಕಾಣಿಕೆಯಾಗಿ ೧೨ ಎಕರೆ ೧೩ ಗುಂಟೆ ಜಮೀನನ್ನು ಎಂದರೆ ದಕ್ಷಿಣೋತ್ತರ ವಿಶ್ವೇಶ್ವರಪುರ ಆರ್ಟ್ಸ್ ಕಾಲೇಜು ಹಾಗೂ ಸಂಜಯ ಟಾಕೀಸ್ ಪ್ರದೇಶ, ಪೂರ್ವ ಪಶ್ಚಿಮ ಆಗಿನ ಕೊರಚರ ಪಾಳ್ಯ (ಈಗಿನ ಪಾರ್ವತಿಪುರ) ಮತ್ತು ಕೃಷ್ಣರಾಜೇಂದ್ರ ರಸ್ತೆವರೆಗಿನ ಪ್ರದೇಶ ಇಷ್ಟನ್ನು ಉಚಿತವಾಗಿ ನೀಡಿದ್ದರು.[೪]

ಈ ಮಹಾಸಭೆಯಲ್ಲಿ ಬಿ.ಎಸ್.ಮಾರಪ್ಪನವರೂ ಇವರ ತಮ್ಮಂದಿರು ಬಿ.ಎಸ್.ಮುನಿಸ್ವಾಮಪ್ಪನವರೂ ಸುಮಾರು ೩೦,೦೦೦ ರೂಪಾಯಿಗಳ ವೆಚ್ಚದಲ್ಲಿ ಸಂಘದ ಸಭಾಭವನವನ್ನೂ, ವಿದ್ಯಾರ್ಥಿ ನಿಲಯವನ್ನೂ ಕಟ್ಟಿಸಿಕೊಡಲು ಒಪ್ಪಿದರು. ಈಗ ಕಾಣುತ್ತಿರುವ ಸಮಾನಾಂತರದ ಎರಡು ಸಾಲು (೧೮ ಮತ್ತು ೧೯) ಕೊಠಡಿಗಳ ರೂಪದಲ್ಲಿರುವ ವಿದ್ಯಾರ್ಥಿನಿಲಯ ಈ ಮಹನೀಯರ ಅಮೋಘ ಸೇವೆಯ ಪ್ರತೀಕ.

ಈಚೆಗೆ ೧೯೩೫ರಂದು ಒಂದು ಎಕರೆಗೂ ಸ್ವಲ್ಪ ಹೆಚ್ಚಿನ ಭಾಗವನ್ನು ಬೂಲ್‌ವಾ ವಿಹಾರ ಪ್ರದೇಶಕ್ಕಾಗಿ ಸರ್ಕಾರದವರು ಸ್ವೀಕರಿಸಿ, ಅದಕ್ಕೆ ಪ್ರತಿಯಾಗಿ ಸಂಜಯ ಟಾಕೀಸ್‌ನಿಂದ ಉತ್ತರಕ್ಕೆ ಸ್ಕೌಟ್ ಕಛೇರಿ ರಸ್ತೆಯವರೆಗಿನ ಭೂಭಾಗವನ್ನು ಬಿಟ್ಟುಕೊಟ್ಟರು. ೩೦.೦೧.೮೦ರಂದು ಕೆಂಪೇಗೌಡ ವೈದ್ಯಕೀಯ ಮಹಾವಿದ್ಯಾಲಯದ ಶಂಕುಸ್ಥಾಪನೆ ನಡೆದುದು ಈ ಪ್ರದೇಶದಲ್ಲಿಯೇ. ಮುಂದೆ ಈ ಮಹಾವಿದ್ಯಾಲಯದ ದಿವ್ಯ ಭವನ ರೂಪಗೊಳ್ಳುವುದೂ ಇಲ್ಲಿಯೇ ಅಂತು ಇಂದು ಒಟ್ಟಿನಲ್ಲಿ ೧೩ ಎಕರೆ ೩೬ ಗುಂಟೆ ಜಮೀನು ಸಂಘದ ಸ್ವತ್ತಾಗಿ ಉಳಿದಿದೆ. ಅಲ್ಲದೆ ಪೂರ್ವದ ಗಡಿಯಲ್ಲಿ ಪಾರ್ವತೀಪರುದ ರಸ್ತೆಗಾಗಿ ಸಂಘದ ಭೂಮಿಯನ್ನು ಬಿಟ್ಟುಕೊಟ್ಟಾಗ ಅದಕ್ಕೆ ಬದಲಾಗಿ ಬೆಂಗಳೂರು ಕಾರ್ಪೊರೇಷನ್ ಬಳಿ೨೬,೦೦೦ ಚದರಡಿಗಳ ಭೂಮಿ ದೊರೆಯಿತು. ಅಲ್ಲಿ ಹದಿನೈದು ಅಂತಸ್ತುಗಳ ಮಹಲು ನಿರ್ಮಾಣವಾಗಿದೆ.

**ಒಕ್ಕಲಿಗರ ಸಂಘದ ಅಂಗರಚನೆ**

೧೯೦೭ ಸೆಪ್ಟಂಬರ್ ೯ರಂದು ಒಕ್ಕಲಿಗರ ಸಂಘವು ಮುಂದಿನ ನಡವಳಿಕೆಗಳಿಗೆ ಸೂಕ್ತ ವಿಧಿ ನಿಯಮಗಳನ್ನು ರಚಿಸಿ, ಎಕ್ಸಿಕ್ಯೂಟಿವ್ ಕೌನ್ಸಿಲ್ ಹಾಗೂ ಜನರಲ್ ಕೌನ್ಸಿಲ್ ಎಂಬ ದ್ವಿಮುಖ ಆಡಳಿತ ಕ್ರಮದಲ್ಲಿ ರಿಜಿಸ್ಟರಾಯಿತು. ಮೊಟ್ಟ ಮೊದನೆಯ ಎಕ್ಸಿಕ್ಯೂಟಿವ್ ಕೌನ್ಸಿಲ್ ಹಾಗೂ ಜನರಲ್ ಕೌನ್ಸಿಲ್ ಸಮಿತಿಗಳನ್ನು ಅನುಬಂಧದಲ್ಲಿ ಕೊಟ್ಟಿದೆ.

೧೯೩೫ರ ವರೆಗೆ ಹೀಗೆ ದ್ವಿಮುಖ ಆಡಳಿತವೇ ಇತ್ತು. ಎಕ್ಸಿಕ್ಯೂಟಿವ್ ಕೌನ್ಸಿಲ್ ಒಳಗಣ ಕಾರ್ಯಗಳಾದ ಹಾಸ್ಟೆಲ್, ಒಕ್ಕಲಿಗರ ಮುದ್ರಣಾಲಯ ಇವುಗಳ ಕಾರ್ಯ ಕಲಾಪಗಳನ್ನು ಗಮನಿಸುತ್ತಿತ್ತು. ಆದರೆ ೧೯೩೫ರಲ್ಲಿ ಈ ಬಗೆಯ ದ್ವಿಮುಖ ಆಡಳಿತ ತಪ್ಪಿ, ಸಂಘದ ಸಕಲ ಕಾರ್ಯಸೂತ್ರಗಳನ್ನೂ ಎಕ್ಸಿಕ್ಯೂಟಿವ್ ಕೌನ್ಸಿಲ್ (ಕಾರ್ಯಕಾರಿ ಸಮಿತಿ) ನಡೆಸಲಾರಂಭಿಸಿತು.

ಮತ್ತೆ ೨೯.೩.೧೯೭೫ರಂದು ಒಕ್ಕಲಿಗರ ಸಂಘದ ಆಳಿತ ನಿಯಮಾವಳಿ (ಬೈಲಾ) ಬದಲಾವಣೆಗೊಂಡು ಈಗಿನ ಹೊಸ ಪರಿಸರಕ್ಕೆ ಹೊಂದಿಕೆಯಾಗಿದೆ. ಇದರಂತೆ ಒಕ್ಕಲಿಗರ ಸಂಘದ ವ್ಯಾಪ್ತಿಯು ಭೂ ವ್ಯವಸಾಯವನ್ನೇ ಮುಖ್ಯ ವೃತ್ತಿಯನ್ನಾಗಿ ಇಟ್ಟುಕೊಂಡಿರುವ ಒಕ್ಕಲಿಗರಿಗೆ ಮಾತ್ರವಲ್ಲದೆ, ಇತರ ವೃತ್ತಿಗಳನ್ನು ಅವಲಂಬಿಸಿರುವ ಒಕ್ಕಲಿಗ ಸಮಾಜದವರೆಲ್ಲರಿಗೂ, ಎಂದರೆ ಗಂಗಡಿಕಾರ, ರೆಡ್ಡಿ, ಮರಸು, ಹಳ್ಳಿಕಾರ, ಕುಂಚಟಿಗ, ನಾಮಧಾರಿ, ಬಂಟ, ಕಮ್ಮ, ಹಾಲಕ್ಕಿ, ದಾಸ, ವೆಲ್ಲಾಳ, ನಾಡವರು, ಬಡಗ ಹಾಗೆ ನಾನಾ ಹೆಸರುಗಳುಳ್ಳ ಎಲ್ಲ ಒಳಪಂಗಡದವರೂ ಸಹ ಕರ್ನಾಟಕ ಹಾಗೂ ಭಾರತ ದೇಶದ ಯಾವುದೇ ಪ್ರದೇಶಗಳಲ್ಲಿದ್ದರೂ ಒಕ್ಕಲಿಗರ ಸಂಘದ ವ್ಯಾಪ್ತಿಗೆ ಸಲ್ಲುತ್ತಾರೆ. ಅಂತು ಒಳಪಂಗಡಗಳು ಯಾವುದೇ ಕೋಮಿನಲ್ಲಿದ್ದರೂ ಅವು ಒಂದಾಗಿ ತಮ್ಮ ಸಾಮಾಜಿಕ ಓರೆಕೋರೆಗಳಲ್ಲಿ ಆದಷ್ಟು ಶೀಘ್ರದಲ್ಲಿ ಪರಿವರ್ತನೆಗೊಳಿಸಿ, ಸಮಾನ ಸ್ಕಂಧರಾಗಿ ನಡೆಯುವುದು ಅತ್ಯವಶ್ಯಕ ಎಂಬ ಆದರ್ಶ ಸಂಘ ಪಾಲಿಸುತ್ತದೆ.

**ಒಕ್ಕಲಿಗರ ಪತ್ರಿಕೆ**

೧೯೦೭ ಮಾರ್ಚ್ ೧೫ರಂದು ಒಕ್ಕಲಿಗರ ಪತ್ರಿಕೆಯ ಮೊದಲನೆಯ ಸಂಚಿಕೆ ಯುಗಾದಿ ಹಬ್ಬದ ದಿನ ಪ್ರಟವಾಯಿತು. ಪತ್ರಿಕೆಯನ್ನು ಆಗಿನ ಬೆಂಗಳೂರು ಕೋಟೆ ಪ್ರದೇಶದಲ್ಲಿ 'ಸ್ಟ್ಯಾಂಡರ್ಡ್' ಮತ್ತು 'ನಡೆಗನ್ನಡಿ' ಎಂಬ ಪತ್ರಿಕೆಗಳನ್ನು ಪ್ರಕಟಿಸುತ್ತಿದ್ದ ಶ್ರೀನಿವಾಸಯ್ಯಂಗಾರ್ ಮುದ್ರಣಾಲಯದಲ್ಲಿ ಅಚ್ಚುಹಾಕಿಸುವ ಏರ್ಪಾಡುಮಾಡಿದರು. ಸುಮಾರು ಒಂದೂವರೆ ವರ್ಷ ಬಿ.ಪುಟ್ಟಯ್ಯನವರು ಪತ್ರಿಕೆಯ ಅಂಶಗಳನ್ನೆಲ್ಲ ತಾವೇ ಬರೆಯುವುದು, ಅಚ್ಚು ಹಾಕಿಸುವುದು, ಅದಕ್ಕೆ ಸಂಬಂಧಪಟ್ಟ ಪತ್ರವ್ಯವಹಾರ ಇತ್ಯಾದಿ ಸಮಸ್ತ ಕಾರ್ಯಗಳನ್ನೂ ನಿರ್ವಹಿಸುತ್ತಿದ್ದರು. ಪತ್ರಿಕೆಯ ಅಗ್ರಲೇಖನವನ್ನು ಮಾತ್ರ ಸಿ.ಲಕ್ಷ್ಮಣಗೌಡ, ಬಿ.ಎ., ಬಿ.ಎಲ್.ಅವರು ಬರೆದು ಕೊಡುತ್ತಿದ್ದರು. ಒಕ್ಕಲಿಗರ ಪತ್ರಿಕೆ ಅಂದಿನ ದಿನಗಳಲ್ಲಿ ಪ್ರಬಲ ವಾರಪತ್ರಿಕೆಯಾಗಿತ್ತು.

ಬಿ.ಪುಟ್ಟಯ್ಯನವರು ಒಕ್ಕಲಿಗರ ಪತ್ರಿಕೆಯ ವಿಚಾರದಲ್ಲಿ ಎಷ್ಟೊಂದು ಅಭಿಮಾನ ತಳೆದಿದ್ದರೆಂಬುದಕ್ಕೆ ಈ ಲೇಖಕನ ಅನುಭವಕ್ಕೆ ಬಂದ ಒಂದು ಸಂಗತಿಯನ್ನು ಇಲ್ಲಿ ತಿಳಿಸಿದರೆ ಉಪಯುಕ್ತವೆನ್ನಿಸುತ್ತದೆ. ಒಬ್ಬ ಒಕ್ಕಲಿಗ ಹೈಸ್ಕೂಲು ವಿದ್ಯಾಭ್ಯಾಸಕ್ಕಾಗಿ ೧೯೨೦ರಲ್ಲಿ ಎಂ.ಸುಬ್ಬಯ್ಯನವರ ಆಹ್ವಾನದಂತೆ ಬೆಂಗಳೂರಿಗೆ ಬಂದು ಒಕ್ಕಲಿಗರ ಸಂಘ ಹಾಸ್ಟೆಲಿನಲ್ಲಿ ಸ್ಥಳವಸತಿ ಪಡೆದರು ಅವರು ಹೈಸ್ಕೂಲಿನಲ್ಲಿದ್ದಾಗಲೇ ಒಕ್ಕಲಿಗರ ಪತ್ರಿಕೆಗೆ ಲೇಖನಗಳನ್ನು ಬರೆಯುತ್ತಿದ್ದರು. ಇದನ್ನು ಬಿ.ಪುಟ್ಟಯ್ಯನವರು ಗಮನಿಸಿ ಅವರ ಆಪ್ತ ಮಿತ್ರರಾದ ಎಂ.ಸುಬ್ಬಯ್ಯನವರಿಗೆ ತಿಳಿಸಿದರು. ಆ ದಿನಗಳಲ್ಲಿ ಲಾಲ್‌ಬಾಗ್ ರಸ್ತೆಯಲ್ಲಿದ್ದ ಎಂ.ಸುಬ್ಬಯ್ಯನವರ ಮೆಸರ್ಸ್ ಎಂ.ರುದ್ರಪ್ಪ ಅಂಡ್ ಸನ್ ತೋಟದ ಆವರಣವು ಮೈಸೂರು ಸರ್ಕಾರದ ಪ್ರಮುಖ ಅಧಿಕಾರಿಗಳ ಸಂಜೆಯ ಆರಾಮ ಕೂಟಕ್ಕೆ ನೆಲೆಯಾಗಿತ್ತು. ಅಲ್ಲಿ ಪ್ರಾಮುಖ್ಯ ಸರ್ಕಾರಿ ಸಂಗತಿಗಳ ಬಗ್ಗೆ ವಿಚಾರ ವಿನಿಮಯ ನಡೆಯುತ್ತಿತ್ತು. ಎಂ.ಸುಬ್ಬಯ್ಯನವರು ಪುಟ್ಟಯ್ಯನವರ ಸೂಚನೆಯಂತೆ ಅವರನ್ನು ಕರೆಯಿಸಿ, ಆಯಾ ಸಂಜೆ ವಿಚಾರ ವಿನಿಮಯವಾಗುವ ಮುಖ್ಯಾಂಶಗಳನ್ನು ಸಂಗ್ರಹಿಸಿ ಒಕ್ಕಲಿಗರ ಪತ್ರಿಕೆಗೆ ಬರೆದು ಕೊಡುವಂತೆ ಸೂಚಿಸಿದರು. ಇದು ೧೯೨೧ರಿಂದ ೧೯೨೩ರ ವರೆಗೆ ನಡೆಯಿತು. ಎಂ.ಸುಬ್ಬಯ್ಯನವರು ೧೯೨೩ರಲ್ಲಿ ನಿಧನರಾದ ಮೇಲೆ ಇದು ನಿಲ್ಲಬೇಕಾಯಿತು. ಈರೀತಿಯ ಚರಿತ್ರೆಯನ್ನು ಧಾಖಲಿಸಿದ ವ್ಯಕ್ತಿಯೇ ಎಸ್.ನಿಂಗೇಗೌಡ

**ಒಕ್ಕಲಿಗರ ಸಂಘದ ಎರಡನೆಯ ಮಹಾಸಭೆ**

ಒಕ್ಕಲಿಗರ ಸಂಘದ ಎರಡನೆಯ ಮಹಾಸಭೆಯು ೧೯೦೭ ಅಕ್ಟೋಬರ್ ೧೭ರಂದು ಮೈಸೂರಿನಲ್ಲಿ ಬಿ.ನಾಗಪ್ಪನವರ ಅಧ್ಯಕ್ಷತೆಯಲ್ಲಿ ನಡೆಯಿತು. ಮೈಸೂರು ಸಂಸ್ಥಾನದ ಮಹಾರಾಜರಾದ ನಾಲ್ವಡಿ ಕೃಷ್ಣ ರಾಜೇಂದ್ರ ಒಡೆಯರ್ ಬಹದ್ದೂರ್ ಮಹಾಸ್ವಾಮಿಗಳವರು ಮಹಾಸಭೆಯ ಉದ್ಘಾಟನೆಯನ್ನ ನಡೆಸಿಕೊಟ್ಟರು. ಮೊದಲನೆಯ ಮಹಾಸಭೆಯು ಅತ್ಯಂತ ವಿಜೃಂಭಣೆಯಿಂದ ನಡೆದುದನ್ನೂ ಒಕ್ಕಲಿಗರೆಲ್ಲರೂ ಎಚ್ಚೆತ್ತುಕೊಂಡು ಉತ್ಸಾಹಶೀಲರಾಗಿರುವುದನ್ನೂ ತಿಳಿದು ಮಹಾ ಸ್ವಾಮಿಯವರು ಸಂತೋಷಪಟ್ಟರು. ಒಕ್ಕಲಿಗರ ಸಂಘದ ಘನ ಪೋಷಕರಾಗಿರಲು ಒಪ್ಪಿದರು. ಅಂದು ಅವರು ಮಹಾಸಭೆಯನ್ನುದ್ದೇಶಿಸಿ ಮಾಡಿದ ಭಾಷಣದಲ್ಲಿ ಈ ರೀತಿ ಎಚ್ಚರಿಗೆ ಕೊಟ್ಟರು.

'ಒಕ್ಕಲಿಗ ಜನಾಂಗದವರು ಬರೀ ಮಾತಿನವರಲ್ಲವೆಂದೂ, ಕಾರ್ಯಾನುವರ್ತಿಗಳೆಂದೂ ಇದುವರೆಗೂ ಖ್ಯಾತಿಗಳಿಸಿದ್ದಾರೆ. ಈ ಪುರಾತನ ಖ್ಯಾತಿಯನ್ನು ಕಾಪಾಡಿಕೊಂಡು ಶ್ರಮಪಟ್ಟು ಕೆಲಸ ಮಾಡುತ್ತ, ಬರೀ ಮಾತನಾಡುವ ಯಂತ್ರಗಳಂತಾಗಲಿ ಕೇವಲ ಸ್ವಕಾರ್ಯ ಪ್ರಕಟಣೆಯಲ್ಲಾಗಲಿ ಈ ಸಂಘದವರು ಆಸಕ್ತರಾಗಿರಲಾರರೆಂದು ನಾವು ನಂಬುತ್ತೇವೆ. ಸಂಘದವರು ತಮ್ಮ ಜನಾಂಗದವರ ಪ್ರಯೋಜನಕ್ಕಾಗಿ ಯಾವು ವಿಷಯದಲ್ಲೇ ಆಗಲಿ ವಿಜ್ಞಾಪನೆ ಮಾಡಿಕೊಂಡರೂ ಅವುಗಳನ್ನು ನಾವು ಆದರದಿಂದ ಕೇಳುತ್ತೇವೆ. ಸರ್ಕಾರದವರು ಈ ವಿಷಯದಲ್ಲಿ ಯುಕ್ತವಾದ ಮತ್ತು ಶಕ್ಯವಾದ ಎಲ್ಲಾ ಸಹಾಯವನ್ನೂ ಮಾಡುವರೆಂದು ನಾವು ದೃಢವಾಗಿ ಎಲ್ಲ ಸಹಾಯವನ್ನೂ ಮಾಡುವರೆಂದು ನಾವು ದೃಢವಾಗಿ ಹೇಳುತ್ತೇವೆ.'

ಶ್ರೀಮನ್ಮಹಾರಾಜರ ಈ ಹಿತವಚನಗಳು ಒಕ್ಕಲಿಗರ ಸಂಘದ ವ್ಯವಸ್ಥಾಪಕರಿಗೆ ಇಂದಿಗೂ ಅಮೃತಪ್ರಾಯವಾಗಿವೆ.

**ಒಕ್ಕಲಿಗರ ಸಂಘದ ಮೂರನೆಯ ಸಭೆ**

ಒಕ್ಕಲಿಗರ ಸಂಘದ ಇತಿಹಾಸದಲ್ಲಿ ೧೯೧೦ಲ ಅತ್ಯಂತ ಸಂಪತ್ಸಮೃದ್ಧಿಯಿಂದ ಬೆಳಗಿತೆಂದೇ ನಾವು ತಿಳಿಯಬೇಕು. ಏಕೆಂದರೆ ಸಂಘದ ಮೂರನೆಯ ಮಹಾಸಭೆಯು ೧೯೧೦ಲ ಏಪ್ರಿಲ್ ೨೮ರಂದು ಬೆಂಗಳೂರಿನಲ್ಲಿ ನಡೆದಾಗ, ದಿವಾನ್ ವಿ.ಪಿ.ಮಾಧವರಾಯರೇ ಪುನಃ ಅಗ್ರಪಾತ್ರವನ್ನು ವಹಿಸಿ ಆರಂಭೋತ್ಸವ ನೆರವೇರಿಸಿದುದಲ್ಲದೆ, ನೀಲಗಿರಿಯ ಪ್ರಸಿದ್ಧ ತೋಟಗಾರರಾದ ಸಿ.ರಂಗೇಗೌಡರು ಅಧ್ಯಕ್ಷತೆ ವಹಿಸಿದ್ದರು. ಒಕ್ಕಲಿಗರ ಸಂಘದ ಕಛೇರಿಗೂ ಒಕ್ಕಲಿಗರ ಪತ್ರಿಕೆಯ ಮುದ್ರಣಾಲಯಕ್ಕೂ ಟಿ.ಬೈಯ್ಯಣ್ಣನವರು ಅರಳೇ ಪೇಟೆಯಲ್ಲಿದ್ದ ತಮ್ಮ ವಿಶಾಲವಾದ ಮನೆಗಳೆರಡನ್ನು ಬಿಟ್ಟುಕೊಟ್ಟರು. ಮೊದನೆಯ ಮಹಾಸಭೆಯಲ್ಲಿ ವಾಗ್ದಾನಮಾಡಿದ್ದ ಹತ್ತು ಸಾವಿರ ರೂಪಾಯಿಗಳಿಗೆ ಹೊಸ ಮುದ್ರಣ ಯಂತ್ರಸಾಧನಗಳನ್ನು ಕೊಡಿಸಿದರು. ಅಂದು ಹೀಗೆ ಇಷ್ಟು ಧಾರಾಳವಾಗಿ ಹಣ ಸಹಾಯವನ್ನೂ, ಸ್ಥಳವಸತಿಯನ್ನೂ ಬೈಯ್ಯಣ್ಣನವರು ಮಾಡಿಕೊಡದೆ ಹೋಗಿದ್ದರೆ ಸಂಘದ ಶಾಶ್ವತ ತಳಹದಿಗೆ ತುಂಬ ತಡವಾಗುತ್ತಿತ್ತೋ ಏನೋ. ಇದೇ ಸಮಯದಲ್ಲಿ ಸಿ.ರಂಗೇಗೌಡರು ಸಂಘಕ್ಕೆ ಹತ್ತು ಸಾವಿರ ರೂಪಾಯಿಗಳನ್ನು ಕೊಡುವುದಾಗಿ ವಾಗ್ದಾನ ಮಾಡಿದುದಲ್ಲದೆ, ಸಂಘದ ಮುದ್ರಣಾಲಯಕ್ಕೆ ಅತ್ಯವಶ್ಯಕವಾಗಿ ಬೇಕಾಗಿದ್ದ ಸುಮಾರು ಮೂರುಸಾವಿರ ರೂಪಾಯಿ ಬೆಲೆ ಬಾಳುವಷ್ಟು ಅಚ್ಚಿನ ಮೊಳೆಗಳನ್ನು ಕೊಡಿಸಿಕೊಟ್ಟದ್ದಂತೂ ಬತ್ತಿದ ಸರೋವರಕ್ಕೆ ಹೊಸ ನೀರು ಬಂದಂತಾಯಿತು ಎಂದನ್ನಿಸುತ್ತದೆ.

**ಒಕ್ಕಲಿಗರ ಪತ್ರಿಕೆಯ ಮುದ್ರಣಾಲಯ**

ಟಿ.ಬೈಯ್ಯಣ್ಣನವರ ಹಾಗೂ ಸಿ.ರಂಗೇಗೌಡರ ಉದಾರಾಶ್ರಯದಿಂದ ಮುದ್ರಣಾಲಯದ ಸ್ಥಾಪನೆಯ ಮಹೋತ್ಸವವು ೧೫.೩.೧೯೧೭ರಂದು ದಿವಾನ್ ವಿ.ಪಿ.ಮಾಧವರಾಯರ ಅಧ್ಯಕ್ಷತೆಯಲ್ಲಿ ಬೈಯ್ಯಣ್ಣನವರ ಅರಳೇಪೇಟೆ ಮನೆಯಲ್ಲಿ ನೆರವೇರಿತು. ಮುದ್ರಣಾಲಯವನ್ನು ಸ್ಥಾಪಿಸುವ ವಿಚಾರದಲ್ಲಿ ಬೈಯ್ಯಣ್ಣನವರು ಆಗಿನ ಸರ್ಕಾರಿ ಮುದ್ರಣಾಲಯದ ಸೂಪರಿಂಟೆಂಡೆಂಟರಾಗಿದ್ದ ಮಿ.ಏಟ್ಸ್ ಅವರ ಮನೆಗೆ ಹೋಗಿ ಅವರಿಂದ ಅನೇಕ ಸಲಹೆಗಳನ್ನು ಪಡೆದು ಉತ್ತಮವಾದ ಮುದ್ರಣ ಯಂತ್ರಸಾಮಗ್ರಿಗಳನ್ನು ತರಿಸಿಕೊಟ್ಟರು.

೧೯೨೩ರಲ್ಲಿ ಮುದ್ರಣಾಲಯವು ಒಕ್ಕಲಿಗರ ಸಂಘದ ಸ್ವಂತ ಕಟ್ಟಡವನ್ನು ಪಡೆಯಿತು. ಆದರೆ, ಮುದ್ರಣಾಲಯದಿಂದ ನಡೆಯುತ್ತಿದ್ದ ಕೆಲಸ ಕಾರ್ಯಗಳನ್ನು ೧೯೭೨ ಫೆಬ್ರವರಿ ತಿಂಗಳಿನಿಂದ ನಿಲ್ಲಿಸಲಾಯಿತು. ಹಳೆಯ ಮುದ್ರಣ ಯಂತ್ರಗಳನ್ನು ಕುವೆಂಪು ಟ್ರಸ್ಟ್‌ನವರಿಗೆ ಮಾರಲಾಯಿತು. ಹೊಸ ಮುದ್ರಣಾಲಯವನ್ನು ಸಂಘದ ಆವರಣದಲ್ಲಿಯೇ ಕಟ್ಟಿಸಿ ಆಧುನಿಕ ಯಂತ್ರ ಸಾಧನಗಳನ್ನು ಅಳವಡಿಸಿ ಒಕ್ಕಲಿಗರ ಪತ್ರಿಕೆಯನ್ನು ಮತ್ತೆ ಪ್ರಾರಂಭಿಸುವ ಪ್ರಯತ್ನ ನಡೆಯುತ್ತಿದೆ.

**ಒಕ್ಕಲಿಗರ ವಿದ್ಯಾರ್ಥಿ ನಿಲಯ**

ಇದೇ ಸಮಯದಲ್ಲಿ ಟಿ.ಬೈಯ್ಯಣ್ಣನವರು ಅರಳೇ ಪೇಟೆಯಲ್ಲಿದ್ದ ತಮ್ಮ ಇನ್ನೊಂದು ಮನೆಯನ್ನು ವಿದ್ಯಾರ್ಥಿ ನಿಲಯಕ್ಕಾಗಿ ಬಿಟ್ಟುಕೊಟ್ಟರು. ವಿದ್ಯಾರ್ಥಿಗಳ ಸಂಖ್ಯೆ ಹೆಚ್ಚಿದುದರಿಂದ ನಿಲಯಕ್ಕೆ ಕೆಲವು ಕಾಲ ಚಾಮರಾಜ ಪೇಟೆಯಲ್ಲಿ ಮಂಡಿ ವರ್ತಕರಾದ ಎಸ್.ಕೆ.ನರಸಿಂಹಯ್ಯನವರ ಸ್ವಗೃಹದಲ್ಲಿ ಸ್ಥಳಾವಕಾಶ ದೊರೆಯಿತು. ನರಸಿಂಹಯ್ಯನವರ ಅಳಿಯಂದಿರು ಎಸ್.ಕೆ.ಗೌಡರು ಎರಡು ವರ್ಷಗಳ ಕಾಲ ತಮ್ಮ ಸ್ವಂತ ಖರ್ಚಿನಿಂದ ವಿದ್ಯಾರ್ಥಿ ನಿಲಯವನ್ನು ನಡೆಸಿಕೊಟ್ಟು ಸಂಘಕ್ಕೆ ಸಹಕಾರ ಮಾಡಿದರು.

**ಸಂಘದ ಪ್ರದೇಶದಲ್ಲಿ ಸ್ವಂತ ಕಟ್ಟಡಗಳ ನಿರ್ಮಾಣ**

ಟಿ.ಬೈಯ್ಯಣ್ಣನವರು ೧೯೦೯ರಲ್ಲಿ ದೈವಾಧೀನರಾದ ಮೇಲೆ ಬಿ.ಎಸ್.ಮಾರಪ್ಪನವರು ಸಂಘದ ಎಕ್ಸಿಕ್ಯುಟಿಲ್ ಕೌನ್ಸಿಲ್ಲಿನ ಅಧ್ಯಕ್ಷರಾದರು. ಜನರಲ್ ಕೌನ್ಸಿಲ್ಲಿನಲ್ಲಿ ಖಾಲಿ ಬಿದ್ದ ಸ್ಥಾನಕ್ಕೆ ನೀಲಗಿರಿ ಸಿ.ರಂಗೇಗೌಡರು ಅಧ್ಯಕ್ಷರಾದರು. ಹಿಂದೆ ಬಿ.ಎಸ್.ಮಾರಪ್ಪನವರು ೧೯೦೬ರಲ್ಲಿ ಮೊದಲನೆಯ ಮಹಾಸಭೆಯಲ್ಲಿ ವಾಗ್ದಾನ ಮಾಡಿದ್ದ ಪ್ರಕಾರ ೧೯೦೯ರಂದು ಒಕ್ಕಲಿಗರ ಸಂಘದ ಕಟ್ಟಡಗಳನ್ನುಸಂಘದ ಸ್ವಂತ ಜಮೀನಿನಲ್ಲಿ ಕಟ್ಟಲು ಸಿದ್ದರಾದರು. ೧೯೧೦ರಲ್ಲಿ ಸಭಾ ಮಂದಿರದ ಶಂಕುಸ್ಥಾಪನೆಯನ್ನು ಯುವರಾಜ ಕಂಠೀರವ ನರಸಿಂಹರಾಜ ಒಡೆಯರ್‌ಇವರು ನಡೆಸಿಕೊಟ್ಟುದಲ್ಲದೆ ಸಂಘಕ್ಕೆ ಉಪಪೋಷಕರಾಗಿರಲು ಒಪ್ಪಿ ಸಂಘದ ಮೂಲ ಧನಕ್ಕೆ ೨,೦೦೦ರೂಪಾಯಿ ದಾನ ಮಾಡಿದರು.

**ವಿದ್ಯಾರ್ಥಿನಿಲಯದ ಸ್ವಂತ ಕಟ್ಟಡ**

ಮೊಟ್ಟ ಮೊದಲು ವಿದ್ಯಾರ್ಥಿ ನಿಲಯದ ಕಟ್ಟಡವು ಸಿದ್ಧವಾಯಿತು. ಇದು ಹಿಂದೆಯೇ ತಿಳಿಸಿರುವಂತೆ ಸಮಾನಾಂತರದ ಎರಡು ಸಾಲುಗಳುಳ್ಳ ಹದಿನೆಂಟು ಮತ್ತು ಹತ್ತೊಂಭತ್ತು ಕೊಠಡಿಗಳ ರೂಪದಲ್ಲಿತ್ತು. ಇದು ಇಂದಿಗೂ ಹಾಗೆಯೇ ಇದೆ. ಅರಳೇಪೇಟೆಯಲ್ಲೂ ಆ ತರುವಾಯ ಚಾಮರಾಜಪೇಟೆಯಲ್ಲೂ ಪರಾಶ್ರಯದಲ್ಲಿ ನಡೆಯುತ್ತಿದ್ದ ಒಕ್ಕಲಿಗರ ವಿದ್ಯಾರ್ಥಿ ನಿಲಯ ಕೊನೆಗೆ ೧೯೨೦ರಲ್ಲಿ ಸ್ವಂತ ಕಟ್ಟಡ ಪಡೆಯಿತು. ಅಡಿಗೆ ಮನೆ, ಬಚ್ಚಲು ಮನೆ, ಊಟದ ಮನೆ, ಉಗ್ರಾಣದ ಮನೆ, ಮ್ಯಾನೇಜರ ಆಫೀಸು ಹೀಗೆ ೫ ಕೊಠಡಿಗಳನ್ನ ಹದಿನೆಂಟು ಕೊಠಡಿಗಳಿಗೆ ಹಂಚಿದ್ದರು. ಹಿಂದೆ ಕೆಲವು ದಿನಗಳ ಮಟ್ಟಿಗೆ ಚಿಮಿಣಿ ದೀಪದಲ್ಲಿಯೇ ವ್ಯಾಸಂಗ ಮಾಡಬೇಕಾಗಿತ್ತು. ಆಗ ಚಾಮರಾಜಪೇಟೆಯ ಸಾಹುಕಾರ್ ಬಿ.ಕೆ. ಚಿಕ್ಕವೀರಪ್ಪನವರು ಮೂಲತ್ತೇಳು ಕೊಠಡಿಗಳಿಗೂ ಎರಡು ಪಡಸಾಲೆಗಳಿಗೂ ತಮ್ಮ ಸ್ವಂತ ಖರ್ಚಿನಿಂದವಿದ್ಯುತ್ ದೀಪಗಳನ್ನು ಹಾಕಿಸಿ ಉಪಕಾರ ಮಾಡಿದರು.

**ಸಭಾಭವನ, ಮುದ್ರಣಾಲಯ ಹಾಗೂ ಅಡಿಗೆ ಮನೆ ಕಟ್ಟಡಗಳು**

ಜಿ.ಎಸ್.ಮಾರಪ್ಪನವರು ವಾಗ್ದಾನ ಮಾಡಿದ್ದ ೩೦,೦೦೦ ರೂಪಾಯಿಗಳು ವಿದ್ಯಾರ್ಥಿ ನಿಲಯದ ಕಟ್ಟಡಕ್ಕೂ, ಸಭಾ ಭವನದ ನಾಲ್ಕುಗೋಡೆಗಳಿಗೂ ಸಾಕಾಗಿತ್ತು. ವಿದ್ಯಾರ್ಥಿಗಳು ಬಹಳ ಕಾಲ ಬಾಗಿಲಿಲ್ಲದ ಈ ಗೋಡೆಗಳ ಮೂಲಕ ನಿಲಯಕ್ಕೆ ಪ್ರವೇಶ ಮಾಡಬೇಕಾಗಿತ್ತು. ಮಾರಪ್ಪನವರ ತರುವಾಯ ೧೯೨೦ರಲ್ಲಿ ಬಿ.ನಾಗಪ್ಪನವರು ಎಕ್ಸಿಕುಟಿವ್ ಕೌನ್ಸಿಲಿನ ಅಧ್ಯಕ್ಷರಾದ ಮೇಲೆ ಸಭಾಭವನವು ಪೂರೈಕೆಯಾದುದು ಮಾತ್ರವಲ್ಲದೆ ಮುದ್ರಣಾಲಯದ ಕಟ್ಟಡ ಹಾಗೂ ಅಡಿಗೆಯ ಮನೆ ಕಟ್ಟಡಗಳೂ ರೂಪುಗೊಂಡವು.

ಇದು ನಡೆದುದು ಹೀಗೆ, ನಾಗಪ್ಪನವರು ಸಂಘದ ಏಳಿಗೆಯ ವಿಷಯದಲ್ಲಿ ಅತ್ಯಂತ ಶ್ರದ್ಧೆ ವಹಿಸಿ, ದಿವಾನ್ ಸರ್ ಅಲ್ಬಿಯನ್ ಬ್ಯಾನರ್ಜಿ ಅವರ ಸ್ನೇಹ ಸಂಪಾದಿಸಿ, ಅವರನ್ನು ಸಂಘದ ಉಪಾಧ್ಯಕ್ಷರನ್ನಾಗಿ ಗೌರವಿಸಿ, ಸಂಘದ ಸಭಾ ಭವನ, ಮುದ್ರಣಾಲಯ, ಅಡಿಗೆ ಮನೆ ಕಟ್ಟಡಗಳಿಗೆ ಸಹಾಯ ಕೋರಿದರು. ಇದರಂತೆ ಸರ್ಕಾರದಿಂದ 'ಮ್ಯಾಚಿಂಗ್ ಗ್ರಾಂಟ್' ಎಂದರೆ ಸಮ ಪ್ರಮಾಣದ ಸಹಾಯ ಪಡೆಯಲು ಅನುಮತಿ ದೊರೆಯಿತು. ಮ್ಯಾಚಿಂಗ್ ಗ್ರಾಂಟ್ ಸಹಾಯ ನಿಯಮದಂತೆ ಸಂಘದವರು ಎಷ್ಟು ಹಣವನ್ನು ಚಂದಾ ಮೂಲಕ ಶೇಖರಿಸುವರೋ ಅಷ್ಟು ಹಣವನ್ನು ಕೊಡಲು ಸರ್ಕಾರದವರು ಒಪ್ಪಿದರು. ಸಂಘದ ಸಭಾಭವನ, ಮುದ್ರಣಾಲಯ ಹಾಗೂ ಅಡಿಗೆ ಮನೆ ಕಟ್ಟಡಗಳಿಗೆ ೪೦,೦೦೦ ರೂಪಾಯಿಗಳನ್ನು ಚಂದಾ ಮೂಲಕ ಒದಗಿಸಬೇಕೆಂದು ಸಂಘದವರು ನಿಶ್ಚಯಿಸಿದರು. ಶ್ರೀಗಳಾದ ಬಿ.ಕೆಂಪಣ್ಣನವರು, ಲೋಕ ಸೇವಾ ನಿರತ ರಾವ್ ಸಾಹೇಬ್ ಎಚ್.ಚೆನ್ನಯ್ಯನವರು, ಕಾಂತರಾಜಪುರುದ ಎಂ.ನಂಜಪ್ಪನವರು ಮುಂತಾದ ಮುಖಂಡರು ಒಕ್ಕಲಿಗ ಮಹನೀಯರಿಂದ ಚಂದಾ ಎತ್ತಿ ಒಂದು ತಿಂಗಳೊಳಗಾಗಿ ೨೦,೦೦೦ ರೂಪಾಯಿಗಳನ್ನು ಶೇಖರಿಸಿ ಮೈಸೂರು ಬ್ಯಾಂಕಿನಲ್ಲಿ ಪಾವತಿ ಮಾಡಿ, ರಸೀತಿಯನ್ನು ದಿವಾನರವರಿಗೆ ತೋರಿಸಿದರು. ಅದರ ಆಧಾರದ ಮೇರೆಗೆ ಸರ್ಕಾರದವರೂ ರೂ.೨೦,೦೦೦ ರೂಪಾಯಿಗಳ ಗ್ರಾಂಟ್ ಕೊಟ್ಟರು. ಇದರ ಜೊತೆಗೆ ನಾಗಪ್ಪನವರು ಧರ್ಮಾರ್ಥವಾಗಿ ಐದು ಸಾವಿರ ರೂಪಾಯಿಗಳನ್ನು ಪಾವತಿ ಮಾಡಿದುದ್ದಲ್ಲದೆ, ಅತ್ಯಂತ ಶೀಘ್ರವಾಗಿ ಸಭಾಭವನ ಮುದ್ರಣಾಲಯ ಹಾಗೂ ಅಡಿಗೆ ಮನೆ ಕಟ್ಟಡಗಳನ್ನು ಪೂರೈಸಿದರು.[೬]

ಕೂಡಲೇ ೧೯೦೮ರಿಂದ ಅರಳೇಪೇಟೆಯಲ್ಲಿ ಟಿ.ಬೈಯ್ಯಣ್ಣನವರ ಗೃಹದಲ್ಲಿದ್ದ ಸಂಘದ ಮುದ್ರಣಾಲಯವು ೧೯೨೩ರಲ್ಲಿ ಸ್ವಂತ ಕಟ್ಟಡ ಪಡೆಯಿತು. ಇದೇ ಸಂದರ್ಭದಲ್ಲಿ ಒಕ್ಕಲಿಗರ ವಿದ್ಯಾರ್ಥಿ ನಿಲಯಕ್ಕೆ ಅನುಕೂಲವಾದ ಒಂದು ಅಡಿಗೆ ಮನೆಯೂ ದೊರೆಯಿತು. ಹೀಗೆ ಬಿ.ನಾಗಪ್ಪನವರ ಅಸದೃಶ್ಯವಾದ ಆಸಕ್ತಿಯಿಂದ ಸಂಘದ ಸಭಾಭವನ, ಮುದ್ರಣಾಲಯ ಹಾಗೂ ಅಡಿಗೆ ಮನೆಯ ಕಟ್ಟಡಗಳು ಕಣ್ಮನಗಳನ್ನು ತಣಿಸಿ ಮುಂದಿನ ನವೋದಯಕ್ಕೆ ನಾಂದಿಯಾದವು. ಈ ಕಾರ್ಯಗಳಿಗಾಗಿ ಸರ್ಕಾರದಿಂದ ಮತ್ತೆ ಹದಿನೈದು ಸಾವಿರ ರೂಪಾಯಿಗಳ ಗ್ರಾಂಟು ಬರುವಂತಾಯಿತು.

**ಹಾಸನದಲ್ಲಿ ಒಕ್ಕಲಿಗರ ಮಹಾಸಭೆ**

ಇದೇ ಸಮಯದಲ್ಲಿ ಹಾಸನದಲ್ಲಿ ಒಕ್ಕಲಿಗರ ಮಹಾ ಸಭೆ ನಡೆದು, ಅಲ್ಲಿ ಒಂದು ವಿದ್ಯಾರ್ಥಿ ನಿಲಯವನ್ನು ಕಟ್ಟಲು ತೀರ್ಮಾನವಾಯಿತು. ಇದಕ್ಕಾಗಿ ಅರಸೀಕೆರೆ ಸಾಹುಕಾರ್ ದಿವಗಂತ ಶ್ರೀ ಚೌಡಯ್ಯನವರ ಮೊಮ್ಮಕ್ಕಳು ಶ್ರೀ ಪುಟ್ಟಸ್ವಾಮಯ್ಯನವರು. ೨,೫೦೦ ರೂಪಾಯಿಗಳನ್ನು, ಕಾಂತರಾಜಪುರದ ಶ್ರೀ ಎಂ. ನಂಜಪ್ಪನವರು ಒಂದು

ಸಾವಿರ ರೂಪಾಯಿಗಳನ್ನೂ, ಇನ್ನು ಇತರ ಗಣ್ಯ ಮಹನೀಯರು ಶಕ್ತಿ ಮೀರಿ ಧನ ಸಹಾಯ ಮಾಡಿದರು. ಈ ಮಹಾಸಭೆಯ ಕಾರ್ಯಕಲಾಪಗಳಲ್ಲಿ ಆಗ ಹಾಸನದಲ್ಲಿ ವಕೀಲರಾಗಿ ನ್ಯಾಯವಿಧಾಯಕ ಸಭೆ ಸದಸ್ಯರಾಗಿದ್ದ ಶ್ರೀ ಎಚ್.ಬಿ. ಗುಂಡಪ್ಪಗೌಡರು ತುಂಬ ಶ್ರಮವಹಿಸಿ ಸಹಾಯ ಮಾಡಿದರು.

**ಇತರ ಕೇಂದ್ರಗಳಲ್ಲಿ ಒಕ್ಕಲಿಗರ ವಿದ್ಯಾರ್ಥಿ ನಿಲಯಗಳು**

ಒಕ್ಕಲಿಗರ ಸಂಘ ಅದುವರೆಗೆ ನಡೆಯಿಸಿದ ಕಾರ್ಯದ ಫಲವಾಗಿ ಮೈಸೂರು ಸಂಸ್ಥಾನದ ಆಗಿನ ೯ ಜಿಲ್ಲೆಗಳ ಪ್ರಾಮುಖ್ಯ ಕೇಂದ್ರಗಳಲ್ಲಿ ಸ್ಥಳೀಯ ಮಹಿನೀಯರ ಸಹಾಯದಿಂದ ಒಕ್ಕಲಿಗ ವಿದ್ಯಾರ್ಥಿನಿಯಗಳು ಸ್ಥಾಪಿಸಲ್ಪಟ್ಟುವು. ಮೈಸೂರಿನಲ್ಲಿ ಶ್ರೀ ದಾಸಪ್ಪನವರ ಹಾಗೂ ಶ್ರೀ ಎನ್.ಜಿ.ಗುಜ್ಜೇಗೌಡರ ಮೇಲ್ವಿಚಾರಣೆಯಲ್ಲಿ ಒಂದು ನಿಲಯವು ಏರ್ಪಾಡಾಯಿತು. ಮದ್ದೂರಿನಲ್ಲಿ ಶ್ರೀ.ಎಂ.ಸಿ. ಲಿಂಗೇಗೌಡರು, ಶ್ರವಣಬೆಳಗೊಳದಲ್ಲಿ ಎಸ್.ಸಿ. ಮಲ್ಲಯ್ಯನವರು ಮುಂತಾದ ದೊಡ್ಡ ಮನುಷ್ಯರುಗಳ ಪ್ರಯತ್ನದಿಂದ ಒಂದೊಂದು ನಿಲಯವು ಸ್ಥಾಪಿತವಾಯಿತು. ಕಡಬದ ಶ್ರೀ ಹುಚ್ಚವೀರೇಗೌಡರು ಸಂಘಕ್ಕೆ ಸಾವಿರಾರು ರೂಪಾಯಿಗಳನ್ನು ಸಲ್ಲಿಸಿದ್ದಲ್ಲದೆ, ತುಮಕೂರಿನಲ್ಲಿ ಒಂದು ವಿದ್ಯಾರ್ಥಿನಿಲಯವನ್ನೂ, ಸ್ಥಾಪಿಸಿದರು. ಕಾಂತರಾಪುರದ ಸಾಹುಕಾರ್ ಶ್ರೀ.ಎಂ.ನಂಜಪ್ಪನವರು ಕಾಂತರಾಜಪುರದಲ್ಲಿ ತಮ್ಮ ಸ್ವಂತ ಖರ್ಚಿನಿಂದ ಒಂದು ಸ್ಕೂಲನ್ನೂ, ಹಾಗೂ ವಿದ್ಯಾರ್ಥಿನಿಲಯವನ್ನೂ ಕಟ್ಟಿಸಿದರು. ಇದೇ ರೀತಿ ಕೃಷ್ಣರಾಜಪೇಟೆಯಲ್ಲಿ ಶೀಳನೆರೆ ಸಾಹುಕಾರ್ ಶ್ರೀ ತಿಮ್ಮಪ್ಪಗೌಡರೂ, ಅಕ್ಕಿಹೆಬ್ಬಾಳಿನಲ್ಲಿ ಪಟೇಲ್ ಶ್ರೀ. ಲಿಂಗೇಗೌಡರೂ ಒಂದೊಂದು ವಿದ್ಯಾರ್ಥಿ ನಿಲಯಗಳನ್ನು ಸ್ಥಾಪಿಸಿದರು. ಚಿಕ್ಕಬಳ್ಳಾಪುರದಲ್ಲಿ ಶ್ರೀ ನಂದಿ ಸೋಣಪ್ಪನವರು ಒಂದು ವಿದ್ಯಾಥಿನಿಲಯವನ್ನು ಸ್ಥಾಪಿಸಿದರು. ಆದರೆ ಇವುಗಳಲ್ಲಿ ಕೆಲವು ಮಾತ್ರ ಈಗ ಅಸ್ತಿತ್ವದಲ್ಲಿವೆ.

ಇತ್ತೀಚೆಗೆ ಮುಖಂಡರ ಸ್ವಪ್ರಯತ್ನದಿಂದ ಮಂಡ್ಯ, ಶ್ರೀರಂಗಪಟ್ಟಣ, ಕೋಲಾರ, ರಾಮನಗರ ಶಿವಮೊಗ್ಗ. ತೀರ್ಥಹಳ್ಳಿ ಮತ್ತು ಚಿಕ್ಕಮಗಳೂರಿನಲ್ಲಿ ಒಕ್ಕಲಿಗ ವಿದ್ಯಾರ್ಥಿನಿಲಯಗಳು ಏರ್ಪಟ್ಟಿವೆ.

**ಸರ್ಕಾರಿ ಆಜ್ಞೆ,ದಕ್ಷ ಮುಖಂಡರ ಅಭಾವ**

೧೯೩೪ರಿಂದು ಸರ್ಕಾರಿ ಹುದ್ದೆಗಳಲ್ಲಿರುವವರು ನೇರವಾಗಿ ಖಾಸಗಿ ಸಂಘ ಸಂಸ್ಥೆಗಳ ಕಾರ್ಯನಿರ್ವಾಹಕ ಸಮಿತಿಗಳಲ್ಲಿ ಅಧಿಕಾರ ಸ್ಥಾನ ವಹಿಸಬಾರದೆಂದು ಮೈಸೂರು ಸರ್ಕಾರದವರು ಆಜ್ಞೆಯನ್ನು ಹೊರಡಿಸಿದರು. ಅದಕ್ಕನುಸಾರವಾಗಿ ಶ್ರೀ ಬಿ.ನಾಗಪ್ಪನವರು ಸಂಘದ ಅಧ್ಯಕ್ಷ ಸ್ಥಾನವನ್ನು ಬಿಡಬೇಕಾಯಿತು. ಇದಕ್ಕೆ ಮುನ್ನವೇ ಒಕ್ಕಲಿಗರ ಸಂಘಕ್ಕಾಗಿ ಅಹರ್ನಿಶಿ ದುಡಿದಿದ್ದ ಶ್ರೀ ಕೆ.ಎಚ್. ರಾಮಯ್ಯನವರೂ, ಶ್ರೀ.ಬಿ.ಪುಟ್ಟಯ್ಯನವರೂ ಒಕ್ಕಲಿಗರ ಸಂಘದ ಪ್ರಾರ್ಥನೆಯಂತೆ ಸರ್ಕಾರಿ ವೇತನ ಪಡೆದು, ಲಂಡನ್ನಿನಲ್ಲಿ ಉನ್ನತ ವ್ಯಾಸಂಗ ಮುಗಿಸಿ ಹಿಂದಿರುಗಿದ ಮೇಲೆ, ಶ್ರೀ.ಕೆ.ಎಚ್.ರಾಮಯ್ಯನವರು ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆಯಲ್ಲಿ ಅಸಿಸ್ಟೆಂಟ್ ಡೈರೆಕ್ಟರಾಗಿಯೂ, ಶ್ರೀ.ಬಿ.ಪುಟ್ಟಯ್ಯನವರು ಸರ್ಕಾರಿ ಮುದ್ರಣಾಲಯದ ಅಸಿಸ್ಟೆಂಟ್ ಸೂಪರಿಂಟೆಂಡೆಂಟರಾಗಿಯೂ ಅಧಿಕಾರ ವಹಿಸಿಕೊಂಡರು. ಹೀಗಾಗಿ, ಅವರೂ ಸಂಘದ ಆಡಳಿತದಲ್ಲಿ ಪ್ರತ್ಯಕ್ಷ ಪಾತ್ರ ವಹಿಸದಂತಾಯಿತು.

ಶ್ರೀ ಬಿ.ನಾಗಪ್ಪನವರು ತರುವಾಯ ಅವರ ಸ್ಥಾನದಲ್ಲಿ ಫ್ರೀಡರ್ ಶ್ರೀ ಬಿ.ಕೆಂಪಣ್ಣನವರು ಸಂಘದ ಅಧ್ಯಕ್ಷರಾದರು. ಸಂಘದ ಕಾರ್ಯಕಲಾಪಗಳು ಯಥಾವಿಧಿಯಾಗಿ ನಡೆದುಬರುತ್ತಿದ್ದುವು. ಕೆಂಪಣ್ಣನವರ ತರುವಾಯ ಬಿ.ನಾಗಪ್ಪನವರ ಪುತ್ರರಾದ ಬ್ಯಾರಿಸ್ಟರ್ ಬಿ.ಎನ್.ವಿಜಯದೇವ ಅವರು ಸಂಘದ ಅಧ್ಯಕ್ಷ ಸ್ಥಾನಕ್ಕೆ ಬಂದರು.

**ನವೋದಯ ಕಾಲ**

(೧೯೪೮ ರಿಂದ ೧೯೭೨ರ ವರೆಗೆ ಒಕ್ಕಲಿಗರ ಸಂಘದ ನವೋದಯ ಕಾಲ ಎನ್ನಬಹುದು)

**ವಿದ್ಯಾ ಸಂಸ್ಥೆಗಳ ಸ್ಥಾಪನೆ**

ಶ್ರೀ.ಬಿ.ಎನ್.ವಿಜಯದೇವ ಅವರ ಅಧಿಕಾರವಧಿಯಲ್ಲಿ ಒಕ್ಕಲಿಗರ ಸಂಘವು ವಿದ್ಯಾ ಸಂಸ್ಥೆಗಳ ಸ್ಥಾಪನೆಯ ಕಡೆಗೆ ಗಮನ ಹರಿಸಿತು. ಇದನ್ನೇ ಸಂಘದ ನವೋದಯ ಕಾಲ ಎಂದು ಕರೆಯಬಹುದು. ಡಾ.ಎಸ್.ಪಿ. ಚಿನ್ನಪ್ಪನವರು ಹಿಂದೆ ಒಕ್ಕಲಿಗರ ಸಂಘದ ಆವರಣದಲ್ಲಿ ನಡೆಸುತ್ತಿದ್ದ "ನ್ಯೂ ಹೈಸ್ಕೂಲ್" ಕಟ್ಟಡ ಸರ್ಕಾರದ ವಶದಲ್ಲಿತ್ತು. ಇದನ್ನು ಒಕ್ಕಲಿಗರ ಸಂಘವು ಸರ್ಕಾರಕ್ಕೆ ಸುಮಾರು ೩೦,೦೦೦ ರೂಪಾಯಿ ಸಲ್ಲಿಸಿ ವಶಪಡಿಸಿ ಕೊಂಡಿತ್ತು. ಆದರೆ ಅದನ್ನು ಬೆಂಗಳೂರು ಹೈಸ್ಕೂಲು ಹಾಗೂ ವಿಜಯ ಕಾಲೇಜುಗಳ ವ್ಯವಸ್ಥಾಪಕರಿಗೆ ೩೦.೮.೧೯೪೮ರಲ್ಲಿ ಮೂರು ವರ್ಷಗಳ ಕಾಲ ಲೀಸ್ ಕರಾರಿನಂತೆ ವಹಿಸಲಾಗಿತ್ತು. ಈ ಕರಾರು ೩೦.೮.೧೯೫೧ರಲ್ಲಿ ಮುಕ್ತಾಯಗೊಂಡಾಗ ಸಂಘದ ಅಧ್ಯಕ್ಷರಾದ ಶ್ರೀ ಬಿ.ಎನ್.ವಿಜಯದೇವ ಅವರು ವಿದ್ಯಾಭ್ಯಾಸ ಇಲಾಖೆಯೊಡನೆ ವ್ಯವಹಾರ ನಡೆಸಿ, ೧೨.೩.೧೯೫೨ ರಂದು ೨೯, ೫೬೩ ರೂಪಾಯಿಗಳ ಪರಿಹಾರ ಧನವನ್ನು ಗುತ್ತಿಗೆದಾರರಿಗೆ ಪಾವತಿಮಾಡಿ, ವಿದ್ಯಾಸಂಸ್ಥೆಯ ಕಟ್ಟಡವನ್ನು ಹಿಂದಕ್ಕೆ ಪಡೆದರು. ಮುಂದೆ ಇದನ್ನು ವಿಸ್ತರಿಸಿ ೧೯೬೬ರಲ್ಲಿ ವಿಶ್ವೇಶ್ವರಪುರ ವಿಜ್ಞಾನ ಮತ್ತು ಕಲೆ (ಹಗಲು) ಕಾಲೇಜುಗಳು. ೧೯೬೭ರಲ್ಲಿ ವಾಣಿಜ್ಯ ಮತ್ತು ಕಲೆ (ಸಂಜೆ) ಕಾಲೇಜುಗಳು, ೧೯೭೧ರಲ್ಲಿ ವಾಣಿಜ್ಯ (ಹಗಲು) ಕಾಲೇಜು, ೧೯೭೨ರಲ್ಲಿ ಕಾನೂನು (ಹಗಲು) ಕಾಲೇಜು ಸ್ಥಾಪಿಸಲು ತುಂಬ ಅನುಕೂಲ ಉಂಟಾಯಿತು.

**'ಜನರಲ್ ಹಾಸ್ಟೆಲ್' ಸಾರ್ವಜನಿಕ ವಿದ್ಯಾರ್ಥಿ ನಿಲಯ**

ಸಾರ್ವಜನಿಕ ವಿದ್ಯಾಥಿ ನಿಲಯವು ೩೦.೧೧.೧೯೬೪ರಂದು ಆಗಿನ ರೆವಿನ್ಯೂ ಸಚಿವರಾಗಿದ್ದ ಶ್ರೀಮಾನ್ ಎಂ.ವಿ.ಕೃಷ್ಣಪ್ಪನವರ ಅಧ್ಯಕ್ಷತೆಯಲ್ಲಿ ಮಾನ್ಯ ಮುಖ್ಯಮಂತ್ರಿ ಶ್ರೀಮಾನ್ ಎಸ್.ನಿಜಲಿಂಗಪ್ಪನವರಿಂದ ಉದ್ಘಾಟಿಸಲ್ಪಟ್ಟಿತು. ಶ್ರೀ.ಕೆ.ಹನುಮಂತಯ್ಯನವರು ಮೈಸೂರು ರಾಜ್ಯದ ಮುಖ್ಯಮಂತ್ರಿಗಳಾಗಿದ್ದ ಕಾಲದಲ್ಲಿ ಅವರ ಆದರ್ಶ ನೀತಿಯಂತೆ ರಾಜ್ಯದ ನಾನಾ ಪ್ರದೇಶಗಳಲ್ಲಿ ಸಾರ್ವಜನಿಕ ಹಾಸ್ಟೆಲುಗಳನ್ನು ಸರ್ಕಾರದವರು ಕಟ್ಟಿಸಿದರು. ಈ ಕ್ರಮವನ್ನು ಒಕ್ಕಲಿಗರ ಸಂಘಕ್ಕೂ ತಿಳಿಸಿ, ಖಾಲಿ ನಿವೇಶನವನ್ನು ಒದಗಿಸಿದರೆ ಒಕ್ಕಲಿಗರ ಸಂಘದ ಆವರಣದಲ್ಲಿಯೂ ಒಂದು ಜನರಲ್ ಹಾಸ್ಟೆಲ್ ಕಟ್ಟಲು ಅನುಮತಿ ನೀಡುವುದಾಗಿ ಸರ್ಕಾರದ ಆದೇಶ ಬಂತು. ಅದರಂತೆ, ೧೯೬೨ರಂದು ಜನರಲ್ ಹಾಸ್ಟೆಲ್ ಸರ್ಕಾರದ ವೆಚ್ಚದಲ್ಲಿ ಕಟ್ಟಲ್ಪಟ್ಟಿತು. ಮುಂದೆ ಇದನ್ನು ಒಕ್ಕಲಿಗರ ಸಂಘದ ಆಡಳಿತಕ್ಕೆ ವಹಿಸುವಾಗಿ ಅದಕ್ಕೆ ಸಂಬಂಧಪಟ್ಟ ಕಟ್ಟಡದ ವೆಚ್ಚವನ್ನು ಸರ್ಕಾರಕ್ಕೆ ಕಟ್ಟಬೇಕಾಗಿತ್ತು. ಇದನ್ನು ಶ್ರೀ.ಎಂ.ವಿ.ಕೃಷ್ಣಪ್ಪನವರು ಹಣಪಾವತಿ ಮಾಡಿ ತಪ್ಪಿಸಿದರು. ಈಗ ವಿದ್ಯಾರ್ಥಿಗಳಿಗೆ ಹಾಸ್ಟೆಲ್ ವಸತಿ ಸಾಲದುದರ ದೆಸೆಯಿಂದ ಇದಕ್ಕೊಂದು ಮೇಲ್ಮಹಡಿಯನ್ನೂ ಕಟ್ಟಲಾಗಿದೆ. ಇಲ್ಲಿ ಒಕ್ಕಲಿಗರ ಸಂಘದ ವಿವಿಧ ಕಾಲೇಜುಗಳನ್ನು ವ್ಯಾಸಂಗ ಮಾಡುವ ವಿದ್ಯಾರ್ಥಿಗಳಿಗೆ ಮೊದಲು ಸ್ಥಳಕೊಟ್ಟು, ಮಿಕ್ಕರೆ ಹೊಗಿನ ಕಾಲೇಜು ವಿದ್ಯಾರ್ಥಿಗಳೂ ಸೇರುವ ಅವಕಾಶವಿರುತ್ತದೆ.

**ಹಣಕಾಸಿನ ತೊಂದರೆ**

ಈ ಅವಧಿಯಲ್ಲಿ ಒಕ್ಕಲಿಗರ ಸಂಘಕ್ಕೆ ಒದಗಿದ ಹಣಕಾಸಿನ ತೊಂದರೆಯನ್ನು ಪರಿಹರಿಸುವುದಕ್ಕಾಗಿ ಹಲವು ಪ್ರಯತ್ನಗಳ ನಡೆದುವು. ಹಿಂದೆ ಒಕ್ಕಲಿಗರ ಸಂಘದ ಮುದ್ರಾಣಲಯ ಮತ್ತು ಒಕ್ಕಲಿಗರ ಪತ್ರಿಕೆಯನ್ನು ೧೯೩೩ರಲ್ಲಿ

ತಿಂಗಳೊಂದಕ್ಕೆ ೧೦೦ ರೂಪಾಯಿಗಳ ಬಾಡಿಗೆಗೆ ಒಂದು ವರ್ಷ ಲೀಸ್ ಕರಾರಿನ ಮೂಲಕ ಒಪ್ಪಿಸಿರುವುದು ಕಂಡುಬರುತ್ತದೆ. ಈಗ ಒಕ್ಕಲಿಗರ ಸಂಘದ ಸಭಾಭವನದ ಮೇಲ್ಮಹಡಿಯನ್ನು ಕೆಲವು ಕಾಲ ಬೆಂಗಳೂರು ಡಿಸ್ಟ್ರಿಕ್ಟ್ ಬೋರ್ಡಿಗೂ, ಆ ತರುವಾಯ ಇಡೀ ಸಭಾಂಗಣವನ್ನೇ ಸರ್ಕಾರದ ಆಹಾರ ಸಾಮಗ್ರಿಗಳ ಉಗ್ರಾಣಕ್ಕಾಗಿಯೂ ಇದಾದಮೇಲೆ ಶಾರಾದ ಟಾಕೀಸ್ ಚಿತ್ರ ಮಂದಿರಕ್ಕಾಗಿ, ಕೊನೆಗೆ ೧೯೬೨ರಲ್ಲಿ ಮೈಸೂರು ಖಾದಿ ಮತ್ತು ಗ್ರಾಮೋದ್ಯೋಗ ಬೋರ್ಡಿನವರಿಗೂ ಬಾಡಿಗೆಗೆ ಕೊಡಲಾಗಿತ್ತು.

**ಒಕ್ಕಲಿಗರ ಸಂಘದ ಸುವರ್ಣ ಮಹೋತ್ಸವ**

ಬಿ.ಎನ್.ವಿಜಯದೇವ ಅವರ ತರುವಾಯ ಎಂ.ಸಿ.ಲಿಂಗೇಗೌಡರು ಒಕ್ಕಲಿಗರ ಸಂಘದ ಅಧ್ಯಕ್ಷರಾಗಿ ಆಯ್ಕೆಯಾದರು. ಒಕ್ಕಲಿಗರ ಸಂಘದ ಹಣಕಾಸಿನ ಪರಿಸ್ಥಿತಿಯನ್ನು ಪರಿಹರಿಸುವುದೇ ಸುವರ್ಣ ಮಹೋತ್ಸವದ ಮುಖ್ಯ ಗುರಿಯಾಗಿತ್ತು. ಆದುದರಿಂದ ೧೯೬೧ರ ಸೆಪ್ಟಂಬರ್ ೨೦, ೨೧,೨೨ ಮತ್ತು ೨೩ರಂದು ಸುಮಾರು ೬ ಲಕ್ಷ ರೂಪಾಯಿಗಳ ಅಂದಾಜಿನಲ್ಲಿ ಒಕ್ಕಲಿಗರ ಸಂಘದ ಸುವರ್ಣ ಮಹೋತ್ಸವವನ್ನು ನಡೆಸಲು ಸಿದ್ಧತೆ ನಡೆಯಿತು. ಅಲ್ಲದೆ ಒಕ್ಕಲಿಗರ ಸಂಘದ ಕಾರ್ಯಕಲಾಪಗಳಿಗೆ ಒಂದು ಹೊಸ ಸ್ವರೂಪವನ್ನು ಕೊಡುವ ಉದ್ದೇಶದಿಂದ ಸುವರ್ಣ ಮಹೋತ್ಸವದ ಜತೆಗೆ ದಕ್ಷಿಣ ಭಾರತ ಒಕ್ಕಲಿಗರ ಮಹಾಸಮ್ಮೇಳನ ಹಾಗೂ ವಸ್ತು ಪ್ರದರ್ಶನವನ್ನೂ ನಡೆಸಲಾಯಿತು.

ಸಮ್ಮೆಳನವನ್ನು ಉದ್ಘಾಟಿಸಲು ಆಗಿನ ಮೈಸೂರು ರಾಜ್ಯಪಾಲರಾಗಿದ್ದ ಶ್ರೀಮಾನ್ ಮಹಾರಾಜ ಶ್ರೀಜಯ ಚಾಮರಾಜೇಂದ್ರ ಒಡೆಯರವರೂ, ಕಲ್ಯಾಣ ಮಂಟಪದ ಶಂಕುಸ್ಥಾಪನೆ ನಡೆಸಿಕೊಡಲು ಶ್ರೀಮನ್ ಮಹಾರಾಣಿಯವರೂ, ವಿದ್ಯಾರ್ಥಿನಿ ನಿಲಯದ ಶಂಕುಸ್ಥಾಪನೆ ನಡೆಸಿಕೊಡಲು ರಾಜಕುಮಾರಿ ಗಾಯಿತ್ರಿ ದೇವಿಯವರೂ ವಸ್ತು ಪ್ರದರ್ಶನವನ್ನು ಪ್ರಾರಂಭಿಸಲು ವಿಶಾಲ ಮೈಸೂರು ರಾಜ್ಯದ ಮುಖ್ಯಮಂತ್ರಿಗಳಾದ ಕೆ.ಕೆಂಗಲ್ ಹನುಮಂತಯ್ಯ ನವರು ಆಗಮಿಸಿದ್ದರು. ಈ ಸಂದರ್ಭದಲ್ಲಿ ಒಕ್ಕಲಿಗರ ಸಂಘದ ಅಧ್ಯಕ್ಷರಾದ ಶ್ರೀ ಎಂ.ಸಿ.ಲಿಂಗೇಗೌಡರು ಹೊರಡಿಸಿದ ಮನವಿಯಲ್ಲಿ ಅವರು ತಿಳಿಸಿರುವ ಒಂದು ಮಾತು ಅಂದಿನ ಕ್ಲಿಷ್ಟ ಪರಿಸ್ಥಿತಿಯನ್ನು ವ್ಯಕ್ತಗೊಳಿಸುತ್ತದೆ.

'ನಮ್ಮ ಜನಾಂಗದ ಪುರೋಭಿವೃದ್ಧಿಯೇ ತಮ್ಮ ಜೀವನದ ಮುಖ್ಯ ಗುರಿಯೆಂದು ಭಾವಿಸಿ ದುಡಿದ ನಮ್ಮ ಮುಂದಾಳುಗಳ ಕಾರ್ಯ ಒಂದು ಹೊರತು, ನಾವು ಹೆಮ್ಮೆ ಪಡುವಂತಹ ಕೆಲಸ ಕಾರ್ಯಗಳೇನೂ ಇತ್ತೀಚೆಗೆ ನಡೆದಿಲ್ಲ. ಕಾಲಧರ್ಮಕ್ಕನುಸಾರವಾಗಿ ನಮ್ಮ ಜನಾಂಗದ ಶ್ರೇಯೋಭಿವೃದಿಯನ್ನು ಗಮನಿಸಿ ಸಂಘದ ಸುತ್ತಮುತ್ತಲಿನ ಖಾಲಿ ನಿವೇಶನದಲ್ಲಿ ಹಲವಾರು ಕಟ್ಟಡಗಳ ನಿರ್ಮಾಣ ಕಾರ್ಯವನ್ನು ಕೈಗೊಳ್ಳುವುದ ಸೂಕ್ತವೆನಿಸಿದೆ' ಎಂದಿದ್ದಾರೆ.

ಅಲ್ಲದೆ ೧೮.೪.೧೯೬೧ ರಾತ್ರಿ ಎನ್.ಧೋಂಡೂಸಾ ಗಂಗಾಬಾಯಿ ಕಲ್ಯಾಣ ಮಂಟಪದಲ್ಲಿ ನಡೆದ ಭೋಜನ ಕೂಟದಲ್ಲಿ ಹಣಕಾಸಿನ ಸಮಿತಿ ಅಧ್ಯಕ್ಷರಾದ ಎಚ್.ಕೆ.ವೀರಣ್ಣಗೌಡರು ಈ ರೀತಿ ತಿಳಿಸಿದರು. ಕೇವಲ ಸುವರ್ಣ ಮಹೋತ್ಸವವನ್ನು ಆಚರಿಸಿ ಅಲ್ಲಿಗೇ ಕೈಬಿಡುವುದಷ್ಟೇ ನಮ್ಮ ಉದ್ದೇಶವಲ್ಲ. ಹಿಂದುಳಿದ ನಮ್ಮ ಜನಾಂಗಕ್ಕೆ ಸತತ ಪ್ರಯೋಜನವಾಗಲೆಂಬ ದೃಷ್ಟಿಯಿಂದ ಹಲವಾರು ಕಟ್ಟಡ ನಿರ್ಮಾಣ ಯೋಜನೆಗಳನ್ನು ಕೈಗೊಳ್ಳಬೇಕೆಂದು ನಿರ್ಣಯಿಸಲಾಗಿದೆ. ಆದುದರಿಂದ ನಮ್ಮ ಜನಾಂಗದ ಪ್ರತಿಯೊರ್ವ ಉನ್ನತ ಅಧಿಕಾರಿಯೂ, ಲೋಕಸಭೆ ಮತ್ತು

ವಿಧಾನ ಮಂಡಲದ ಸದಸ್ಯರೂ ತಮ್ಮ ಒಂದು ತಿಂಗಳಿನ ಸಂಬಳವನ್ನು ಒಂದೇ ಗಂಟಿನಲ್ಲಾಗಲಿ ಅಥವಾ ಕಂತುಗಳಲ್ಲಾಗಲಿ ಸುವರ್ಣ ಮಹೋತ್ಸವನಿಧಿಗಾಗಿ ನೀಡಬೇಕೆಂದು ಪ್ರಾರ್ಥಿಸುತ್ತೆ.

ಈ ಇಬ್ಬರು ಮಹನೀಯರು ಹೇಳಿದಂತೆ

೧. ಸಂಘದಲ್ಲಿ ಹೆಮ್ಮೆಪಡುವಂತಹ ಕೆಲಸ ಕಾರ್ಯಗಳೇನೂ ಇತ್ತೀಚೆಗೆ ನಡೆದಿರಲಿಲ್ಲ ೨. ಖಾಲಿ ನಿವೇಶನಗಳಲ್ಲಿ ಹಲವಾರು ಕಟ್ಟಡಗಳ ನಿರ್ಮಾಣ ಕಾರ್ಯ ಕೈಗೊಳ್ಳಬೇಕಾಗಿತ್ತು. ೩. ಹಣದ ಅಭಾವವನ್ನು ಸರಿಪಡಿಸುವುದಕ್ಕಾಗಿ ಸುವರ್ಣ ಮಹೋತ್ಸವದ ನಿಧಿಯನ್ನು ಸ್ಥಾಪಿಸಬೇಕಾಗಿತ್ತು ಎಂಬುದು ಗಮನಾರ್ಹವಾಗಿದೆ.

೧೯೬೧ರ ಸೆಪ್ಟಂಬರ್ ೨೦,೨೧,೨೨, ಮತ್ತು ೨೩ ಹೀಗೆ ನಡೆದ ನಾಲ್ಕು ದಿನಗಳ ಸಮಾರಂಭದಲ್ಲಿ ಒಕ್ಕಲಿಗರ ಸಂಘದ ಸುವರ್ಣ ಮಹೋತ್ಸವವೂ, ದಕ್ಷಿಣ ಭಾರತದ ಒಕ್ಕಲಿಗರ ಮಹಾಸಮ್ಮೇಳನವೂ ನಿಜಕ್ಕೂ ಸುವರ್ಣರಂಜಿತವಾಗಿಯೇ ನಡೆದುವೆಂದರೆ ಅಚ್ಚರಿಯಲ್ಲ. ನಿಜ ಅರ್ಧ ಶತಮಾನದ ಹಿಂದೆ ಹಿರಿಯ ಮುಖಂಡರು ನಡೆಸಿದ ಅಮೋಘ ಸಂಘಟನೆಗೆ ಅನುಗುಣವಾಗಿ ಅದುವರೆಗೂ ಹೆಮ್ಮೆಪಡುವಂತಹ ಕಾರ್ಯಗಳೇನನ್ನೂ ಮಾಡದಿದ್ದ ಒಕ್ಕಲಿಗರ ಸಂಘದ ಆಡಳಿತವರ್ಗ ಆಗ ಎಚ್ಚೆತ್ತು ನಿಂತಿತ್ತು. ಇಂದು ಒಕ್ಕಲಿಗರಸಂಘದ ಖಾಲಿ ನಿವೇಶನದಲ್ಲಿ ಹಲವಾರು ಕಟ್ಟಡಗಳು ವಿಜೃಂಭಿಸುತ್ತಿರಬೇಕಾದರೆ ಅದಕ್ಕೆ ಬಹು ಮುಖ್ಯ ಕಾರಣ ಅಂದು ಸುವರ್ಣ ಮಹೋತ್ಸವದಲ್ಲಿ ಭುಜತಟ್ಟಿನಿಂತ ಒಕ್ಕಲಿಗ ಮಹಾಜನರ ಹುರುಪು. ಆದರೆ ಹಣದ ಅಭಾವವನ್ನು ಸರಿಪಡಿಸುವ ಕಾರ್ಯ ಸುವರ್ಣ ಮಹೋತ್ಸವ ನಿಧಿ ಸಂಗ್ರಹಣೆಯಿಂದ ಸಾಧ್ಯವಾಗಲಿಲ್ಲ.

ಅಲ್ಲದೆ ಕಲ್ಯಾಣ ಮಂಟದ ಕಾರ್ಯವಾಗಲಿ ವಿದ್ಯಾರ್ಥಿನಿ ನಿಲಯದ ಕಾರ್ಯವಾಗಲಿ ಊರ್ಜಿತವಾಗಲಿಲ್ಲ. ಸಂಬಂಧಪಟ್ಟ ದಾನಿಗಳು ಕಾರಣಾಂತರದಿಂದ ತಮ್ಮ ವಾಗ್ದಾನಗಳನ್ನು ಪೂರೈಸಲಾಗಲಿಲ್ಲ. ಅದು ಹೇಗೇ ಇರಲಿ ಕೊನೆಗೆ ಉಳಿದುದು ಒಕ್ಕಲಿಗರ ಸಂಘದಲ್ಲಿ ಹಣಕಾಸಿನ ಪರಿಸ್ಥಿತಿ. ಒಕ್ಕಲಿಗ ಸಂಘದ ಸುವರ್ಣ ಮಹೋತ್ಸವದಲ್ಲಿ ಪ್ರಧಾನ ಪಾತ್ರವಹಿಸಿ, ಸುವರ್ಣ ಮಹೋತ್ಸವ ಸಂಪುಟವನ್ನು ಪ್ರಕಟಣಾ ಸಮಿತಿಯ ಕುರಿತು ಈ ಪ್ರಬಂಧದಲ್ಲಿ ಚರ್ಚಿಸಲಾಗಿದೆ.

**ಸಂಜಯ ಟಾಕೀಸ್ ಜನನ**

ಶ್ರಿ ಎಂ.ಸಿ.ಲಿಂಗೇಗೌಡರ ತರುವಾಯ ಎಚ್.ಕೆ.ವೀರಣ್ಣಗೌಡರು ಅಧ್ಯಕ್ಷರಾಗಿ ಚುನಾಯಿತರಾಗಿ ಒಕ್ಕಲಿಗರ ಸಂಘದ ಕಾರ್ಯಕಲಾಪಗಳನ್ನು ವಹಿಸಿಕೊಂಡಾಗ ಅವರ ಎದುರಿಗೆ ದುರ್ಗಮವಾಗಿ ಅಡ್ಡ ಬಂದುದು ಒಕ್ಕಲಿಗರ ಸಂಘದ ಆರ್ಥಿಕ ಪರಿಸ್ಥಿತಿ. ಇವರು ೧೯೬೪ರಿಂದ ೧೯೭೧ರ ವರೆಗೆ ಏಳು ವರ್ಷಗಳ ಅವಧಿಯಲ್ಲಿ ಒಕ್ಕಲಿಗರ ಹಣಕಾಸಿನ ಪರಿಸ್ಥಿತಿಯ ಏರುಪೇರುಗಳನ್ನು ಸರಿಗೂಡಿಸುವುದರಲ್ಲ ಬಹಳ ಶ್ರಮಪಟ್ಟರು. ಆಗ ಉಪಾಧ್ಯಕ್ಷರಾಗಿದ್ದ ಎಲ್.ಬಿ.ಶಿವಲಿಂಗಯ್ಯ ಮತ್ತಿತರ ಕೆಲಸೇವಕರು ಈ ಕಷ್ಟ ಕಾರ್ಯದಲ್ಲಿ ತುಂಬಾ ಸಹಕರಿಸಿದರು. ಇವರುಗಳು ಸೈನ್ಸ್ ಮತ್ತು ಆರ್ಟ್ಸ್ ಕಾಲೇಜುಗಳನ್ನು ಸ್ಥಾಪಿಸುವುದರಲ್ಲಿಯೂ ನಿಕಟ ಪಾತ್ರ ವಹಿಸಿದರು.

ಒಕ್ಕಲಿಗ ಸಂಘದ ದಿವ್ಯ ಸಭಾಭವನ ಇಂದು ಸಂಜಯ ಟಾಕೀಸ್ ಗರ್ಭದಲ್ಲಿ ಅಡಗಿಬಿಟ್ಟಿದೆ. ಇದು ಒಕ್ಕಲಿಗರ ಸಂಘಕ್ಕೆ ಒದಗಿದ್ದ ಹಣಕಾಸಿನ ತೊಂದರೆಯನ್ನು ಸರಿಗೂಡಿಸಲು ಆಗ ಕಾರ್ಯಕಾರಿ ಸಮಿತಿಯ ಅಧ್ಯಕ್ಷರಾಗಿದ್ದ ಎಚ್.ಕೆ ವೀರಣ್ಣಗೌಡ ನೇತೃತ್ವದಲ್ಲಿ ಸಾಧಿಸಿದ ಪ್ರತಿಷ್ಠಿತ ಘಟನೆ. ಇದಕ್ಕಾಗಿ ಮಂಡ್ಯದಲ್ಲಿ ನಂದಾ ಎಂಟರ್‌ಪ್ರೈಸಸ್ ಮಾಲೀಕರಾದ ಚನ್ನಯ್ಯನವರಿಗೂ ಒಕ್ಕಲಿಗರ ಸಂಘದ ಪರವಾಗಿ ಅಧ್ಯಕ್ಷರಾದ ಎಚ್.ಕೆ.ವೀರಣ್ಣಗೌಡರು ಹಾಗೂ

ಕಾರ್ಯದರ್ಶಿ ಎಂ.ಎಲ್.ಮಲ್ಲಿಕಾರ್ಜುನ ಇವರುಗಳ ನಡುವೆ ಸಭಾಭವನವೂ ಸೇರಿದಂತೆ ಇಡೀ ಪ್ರದೇಶವನ್ನು (ಲೀಸ್) ಗುತ್ತಿಗೆ ಕೊಡುವ ಸಂಬಂಧದಲ್ಲಿ ದೀರ್ಘ ವ್ಯವಹಾರ ನಡೆಯಿತು. ಕೊನೆಗೆ ಸಂಜಯ ಟಾಕೀಸ್ ಮಾಲೀಕರಾದ ಎನ್.ಕೆ.ಗೋಪಾಲಕೃಷ್ಣ ಅವರಿಗೂ, ಒಕ್ಕಲಿಗರ ಸಂಘಕ್ಕೂ ಗುತ್ತಿಗೆ ಕರಾರು ೨೭.೧೧.೧೯೬೫ರಲ್ಲಿ ಸಿದ್ಧವಾಯಿತು. ಈ ಕರಾರಿನ ಪ್ರಕಾರ ಗುತ್ತಿಗೆದಾರರು ಒಕ್ಕಲಿಗರ ಸಂಘಕ್ಕೆ ಮುಂಗಡವಾಗಿ ಒಂದು ಲಕ್ಷರೂಪಾಯಿ ಕೊಡಬೇಕೆಂದೂ ತಿಂಗಳೊಂದಕ್ಕೆ ಕರಾರಿನ ಪ್ರಕಾರ ಬಾಡಿಗೆ ಸಲ್ಲಿಸಬೇಕೆಂದೂ ಈ ಬಾಡಿಗೆಯಲ್ಲಿ ಮುಂಗಡ ಹಣವನ್ನು ಒಂದು ವ್ಯವಸ್ಥಿತ ಕ್ರಮದಲ್ಲಿ ಇಳುವರಿ ಮಾಡತಕ್ಕುದೆಂದೂ ಪರಸ್ಪರ ಇತ್ಯರ್ಥವಾಯಿತು. ೨೦ವರ್ಷಗಳ ಈ ಗುತ್ತಿಗೆ ಕರಾರು ೧೯೮೫ಕ್ಕೆ ಮುಕ್ತಾಯಗೊಳ್ಳುತ್ತದೆ. ಆ ತರುವಾಯ ಸಂಜಯ ಟಾಕೀಸ್ ಕಟ್ಟಡ ಮಾತ್ರ ಒಕ್ಕಲಿಗರ ಸಂಘದ ವಶಕ್ಕೆ ಬರಬೇಕಾಗಿದೆ ಅಥವಾ ಮತ್ತೆ ಐದು ವರ್ಷಕ್ಕೆ ಲೀಸ್ ಮುಂದುವರಿಸಲೂ ಬಹುದು.

ಇಲ್ಲಿ ಒಂದು ಮಾತು. ಕಷ್ಟದಿಂದ ಅರ್ಜಿಸಿದ ಒಕ್ಕಲಿಗರ ಸಂಘದ ಸಭಾಭವನ ಸಂಜಯ ಟಾಕೀಸ್ ಗರ್ಭದಲ್ಲಿ ಸೇರಿ ಕಣ್ಮರೆಯಾದುದು ವಿಧಿ ಸಂಕಲ್ಪವೋ ಅಥವಾ ಅದು ಸ್ವಯಂಕೃತ ಅಪರಾಧವೋ ಹೇಳುವಂತಿಲ್ಲ. ಆದರೆ ಇದರಿಂದುಂಟಾದ ಮುಖ್ಯ ಫಲಿತಾಂಶ ಆಗಿನ ಸಂದರ್ಭದಲ್ಲಿ ಸಂಘದ ಕಣಕಾಸಿನ ಬಿಕ್ಕಟ್ಟಿಗೆ ಪರಿಹಾರ. ಅಲ್ಲದೆ ಹಳೆಯ ಸಭಾಭವನವೂ ಶಿಥಿಲಗೊಂಡಿತ್ತು. ಸಭಾಭವನದ ಪೂರ್ವ ಪಾರ್ಶ್ವದ ಗೋಡೆ ಬಿರುಕು ಬಿಟ್ಟಿತ್ತು. ಹೆಂಚಿನ ಮೇಲ್ಹಾವಣಿ ಅಲ್ಲಲ್ಲಿ ಕುಸಿದಿತ್ತು. ಆದರೂ ಈ ಸಭಾಭವನವನ್ನು ಉಳಿಸಿಕೊಂಡು ಭವನದ ಉತ್ತರ ಭಾಗದಲ್ಲಿದ್ದ ಖಾಲಿ ನಿವೇಶನದಲ್ಲಿ ಸಂಜಯ ಟಾಕೀಸ್ ಕಟ್ಟಬಹುದಾಗಿತ್ತಲ್ಲಾ ಎಂದು ಅಭಿಪ್ರಾಯಪಟ್ಟವರೂ ಇದ್ದರು. ಆದರೆ ಅದೇ ಪ್ರದೇಶದಲ್ಲಿ ೧೯೮೧ರಲ್ಲಿ ವಜ್ರ ಮಹೋತ್ಸವ ಕಾಲಕ್ಕೆ 'ಕೆಂಪೇಗೌಡ ವೈದ್ಯಕೀಯ ಮಹಾವಿದ್ಯಾಲಯ' ಉದ್ಭವಿಸುತ್ತದೆಂದೂ ಆಗ ಯಾರಿಗೂ ತಿಳಿದಿರಲಿಲ್ಲ.

**ಶ್ರೀಗಂಧದ ಕಾವಲು ಪ್ರದೇಶ**

ಬೆಂಗಳೂರು ಉತ್ತರ ತಾಲ್ಲೂಕು ಯಶವಂತಪುರ ಹೋಬಳಿ, ಶ್ರೀಗಂಧದ ಕಾಲವು ಗ್ರಾಮಕ್ಕೆ ಸೇರಿದ ಬಯಲಿನಲ್ಲಿ ೨.೧.೧೯೭೬ರಂದು ಶ್ರೀ ಎಂ.ವಿ.ಕೃಷ್ಣಪ್ಪನವರ ಪ್ರಯತ್ನದಿಂದ ಸರ್ಕಾರದವರು ಜನಾಂಗದ ವಿದ್ಯಾಭಿವೃದ್ಧಿಗಾಗಿ ೪೫ ಎಕರೆಗಳಷ್ಟು ಭೂಮಿಯನ್ನು ಸಂಘಕ್ಕೆ ವಹಿಸಿದರು. ಒಳ್ಳೆಯ ಹವಾಗುಣದಿಂದ ಕೂಡಿದ ಈ ಪ್ರದೇಶದಲ್ಲಿ ಒಂದು ಪ್ರೌಢಶಾಲೆ ಮತ್ತು ಒಂದು ಮಾಧ್ಯಮಿಕ ಶಾಲೆ, ಕಿರಿಯ ಕಾಲೇಜು, ಪದವಿ ಕಾಲೇಜುಗಳನ್ನು ಸಂಘದವರು ನಡೆಸುತ್ತಿದ್ದಾರೆ. ಮುಂದೆ ರೈತರ ಮಕ್ಕಳಿಗೆ ವೃತ್ತಿಶಿಕ್ಷಣ ಒದಗಿಸುವುದಕ್ಕಾಗಿ ಒಂದು ವೃತ್ತಿ ಶಿಕ್ಷಣ ಕೇಂದ್ರವನ್ನೂ ಒಂದು ರೆಸಿಡೆನ್ಸಿಯಲ್ ಕಾಲೇಜನ್ನು ಎಂದರೆ ವಸತಿಪೂರ್ಣ ವಿದ್ಯಾನಿಕೇತನವನ್ನೂ ಸ್ಥಾಪಿಸಬೇಕೆಂದು ಪ್ರಯತ್ನ ನಡೆಯುತ್ತಿದೆ. ಸಂಘದವರು ಅರಣ್ಯ ಇಲಾಖೆಯ ಸಹಾಯದಿಂದ ೬೦,೦೦೦ ಯೂಕಲಿಪ್ಟಸ್ ಗಿಡಗಳನ್ನು ನೆಡಿಸಿ ಕಾವಲಿನ ಗುಡ್ಡದ ಸೊಬಗನ್ನು ಮತ್ತಷ್ಟು ಹೆಚ್ಚಿಸಿದ್ದಾರೆ.

**ಸರ್ವೋದಯಕಾಲ**

**(೧೯೭೨ರ ತರುವಾಯ ಒಕ್ಕಲಿಗರ ಮಹೋದಯ ಕಾಲ ಎನ್ನಬಹುದು.)**

೧೯೭೨ರ ತರುವಾಯ ಒಕ್ಕಲಿಗರ ಸಂಘದ ಹಲವು ಕಾರ್ಯಕಲಾಪಗಳಲ್ಲಿ ಮುಖಂಡರು ಮುಂದುವರಿಯಲು ಹಣಕಾಸಿನ ಕೊರತೆ ಅಡ್ಡಬರಲಿಲ್ಲ. ಇಂತಹ ಮಹೋದಯ ಕಾಲವನ್ನು ನಾವು ೬.೨.೧೯೭೨ರಂದು

ಕೆ.ಆರ್.ಪುರುದೇವೇಗೌಡರು ಒಕ್ಕಲಿಗರ ಸಂಘದ ಅಧ್ಯಕ್ಷತೆ ವಹಿಸಿಕೊಂಡ ಅವಧಿಯಿಂದ ಕಾಣುತ್ತೇವೆ.

ಎಚ್.ಕೆ.ವೀರಣ್ಣಗೌಡರ ತರುವಾಯ ದಿವಂಗತ ಕೆ.ಎಚ್.ರಾಮಯ್ಯನವರ ಜ್ಯೇಷ್ಠಪುತ್ರರಾದ ಕೆ.ಆರ್.ಮುರುದೇವೇಗೌಡರು ೬.೨.೧೯೭೨ರಲ್ಲಿ ನಡೆದ ಸಕಲ ಸದಸ್ಯರ ಸಭೆಯಲ್ಲಿ ಆಯ್ಕೆಯಾಗಿ ಸಂಘದ ಅಧ್ಯಕ್ಷತೆ ವಹಿಸಿಕೊಂಡರು. ಇವರು ಅಧ್ಯಕ್ಷತೆ ವಹಿಸಿದ್ದ ಸುಮಾರು ಏಳು ವರ್ಷಗಳಅವಧಿಯಲ್ಲಿ ಸಂಘದ ಚರಿತ್ರೆಯಲ್ಲೇ ಹಿಂದೆಂದೂ ನಡೆಯದಂತಹ ಮಹತ್ಕಾರ್ಯಗಳು ನಡೆದಿವೆ. ಇದೇ ಕಾಲದಲ್ಲಿ ಪ್ರಧಾನ ಕಾರ್ಯದರ್ಶಿ ಸ್ಥಾನಕ್ಕೆ ಎಂ.ಎಲ್.ಮಲ್ಲಿಕಾರ್ಜುನ ಅವರ ತರುವಾಯ ಗುತ್ತಲಗೌಡರು ಆಯ್ಕೆಯಾದರು. ಈ ಹೊಸ ಆಡಳಿತ ವರ್ಗದ ಅವಧಿಯಲ್ಲಿ ಕಾರ್ಯಕಾರಿ ಸಮಿತಿಯ ಸದಸ್ಯರ ಅನ್ಯೋನ್ಯ ಸಹಕಾರದಿಂದ ಒಕ್ಕಲಿಗರ ಸಂಘದ ಕಾರ್ಯಕಲಾಪಗಳು ಸುಗಮವಾಗಿ ಮುಂದುವರಿದುವು.

ಮುಖ್ಯವಾಗಿ ಆಗಿನ ಪರಿಸ್ಥಿತಿಯಲ್ಲಿ ತುರ್ತಾಗಿ ಗಮನಿಸಬೇಕಾಗಿದ್ದ ೧. ಒಕ್ಕಲಿಗರ ಸಂಘದ ಆಸ್ತಿಗಳ ಸುವ್ಯವಸ್ಥೆ ೨.ವಿದ್ಯಾರ್ಥಿಗಳ ಸೌಕರ್ಯ ಸಾಧನೆ, ೩. ವಿದ್ಯಾಸಂಸ್ಥೆಗಳ ನಿರ್ಮಾಣ ಇವುಗಳ ಕಡೆಗೆ ಇವರು ಗಮನ ಕೊಟ್ಟರು.

**ಆಸ್ತಿಗಳ ಸುವ್ಯವಸ್ಥೆ:** ೧೯೦೬ರಲ್ಲಿ ಮೈಸೂರು ಸರ್ಕಾರದಿಂದ ದಿವಾನ್ ವಿ.ಪಿ.ಮಾಧವರಾಯರ ಮೂಲಕ ಒಕ್ಕಲಿಗರ ಸಂಘಕ್ಕೆ ದೊರೆತ ಭೂಮಿಯ ಗಡಿಯನ್ನು ಕ್ರಮಬದ್ಧವಾಗಿ ಗುರುತುಮಾಡಿರಲಿಲ್ಲ. ಇದರ ಪರಿಣಾಮವಾಗಿ ಅಕ್ಕಪಕ್ಕದ ಜನರು ಅತಿಕ್ರಮ ಪ್ರವೇಶ ಮಾಡಲು ಪ್ರಯತ್ನಿಸುತ್ತಿದ್ದುದನ್ನು ತಪ್ಪಿಸಲು ಬೆಂಗಳೂರು ಕಾರ್ಪೊರೇಷನ್ ಅವರಿಂದ ಕಾನೂನು ಪ್ರಕಾರ ಸರ್ವೆ ಮಾಡಿಸಿ ಒಕ್ಕಲಿಗರ ಸಂಘಕ್ಕೆ ಸೇರಿದ ಈಗಿನ ೧೩.೯ ಎಕರೆ ಜಮೀನಿನ ಸರಹದ್ದನ್ನು ಗುರುತು ಮಾಡಿಸಲಾಯಿತು. ಜತೆಗೆ, ಕಾರ್ಪೊರೇಷನ್ ಕಮೀಷನರ್ ಅವರಿದೆ ಲೈಸೆನ್ಸ್ ಪಡೆದು ಈ ಸರಹದ್ದಿನ ಪೂರ್ವ, ದಕ್ಷಿಣ ಮತ್ತು ಉತ್ತರ ಗಡಿಗಳಲ್ಲಿ ಅಡ್ಡಗೋಡೆ ಹಾಕಿಸಲಾಯಿತು.

ಒಕ್ಕಲಿಗರ ಸಂಘದ ಜಮೀನಿನ ಪಶ್ಚಿಮ ಭಾಗದಲ್ಲಿ ಪಾರ್ವತಿ ಚಂದ್ರಶೇಖರ ಬಲ್‌ವಾ ಪ್ರದೇಶದಲ್ಲಿ ಈ ಕೆಳಗೆ ನಮೂದಿಸಿರುವಂತೆ ೭೨' x ೧೯೩', ೭೨' x ೩೧೮', ಮತ್ತು ೭೨' x ೫೦೪' ಚದರವುಳ್ಳ ಈ ಪ್ರದೇಶವನ್ನು ನಗರ ಕಾರ್ಪೊರೇಷನ್ನಿನವರಿಂದ ಸದ್ಯಕ್ಕೆ ೧೫ ವರ್ಷಗಳ ಕಾಲ ಲೀಸ್ ಕರಾರಿನಂತೆ ಪಡೆದಿದ್ದಾರೆ.

**ವಿದ್ಯಾರ್ಥಿಗಳ ಸೌಕರ್ಯಸಾಧನೆ**

ಸಂಘದಲ್ಲಿ ಕೆಲವು ವರ್ಷಗಳಿಂದ ಅರ್ಹರಾದ ಬಡ ವಿದ್ಯಾರ್ಥಿಗಳಿಗೆ ಉಚಿತ ಊಟ ಒದಗಿಸಲು ಹಣದ ಅಭಾವದಿಂದ ಸಾಧ್ಯವಾಗಿರಲಿಲ್ಲ. ಆದರೆ ೧೯೭೬-೭೭, ೭೭-೭೮, ೭೮-೭೯, ಮತ್ತು ೭೯-೮೦ ಈ ಸಾಲುಗಳಿಂದ ಅರ್ಧ ಊಟ ಮತ್ತು ವಸತಿ ಉಚಿತವಾಗಿ ಒದಗಿಸಲಾಗುತ್ತಿದೆ. ಕಾರ್ಪೊರೇಷನ್ ಪಕ್ಕದಲ್ಲಿ ನಿರ್ಮಾಣವಾಗುತ್ತಿರುವ ಅನೇಕ ಅಂತಸ್ತುಗಳ ಭಾರಿ ಕಟ್ಟಡ ಮುಗಿದು ಅದರ ಉತ್ಪಾದನೆಯಿಂದ ಸಾಲ ತೀರಿಸಿದ ನಂತರ ಸುಮಾರು ೫೦ಲಕ್ಷ ಉಳಿತಾಯವಿರುವುದರಿಂದ ಈ ಉಳಿತಾಯದಿಂದ ವಿದ್ಯಾರ್ಥಿ ಹಾಗೂ ವಿದ್ಯಾರ್ಥಿನಿಯರಿಗೆ ಒಂದೊಂದು ಉಚಿತ ಊಟ ವಸತಿ ನಿಲಯಗಳನ್ನು ಪ್ರತ್ಯೇಕವಾಗಿ ಪ್ರಾರಂಭಿಸುವ ಯೋಜನೆ ಸಂಘ ಹೊಂದಿದೆ.

### ಭವ್ಯ ವಿದ್ಯಾಮಂದಿರದ ನಿರ್ಮಾಣ

ಸಂಘದವರು ಡಾ.ಎಸ್.ಪಿ.ಚಿನ್ನಪ್ಪನವರಿಂದ ಕೊಂಡುಕೊಳ್ಳಲಾದ ನ್ಯೂ ಹೈಸ್ಕೂಲ್ ಕಟ್ಟಡವನ್ನು ತಕ್ಕಷ್ಟು ವಿಸ್ತರಿಸಿ, ತರುವಾಯ ೧೯೬೬, ೧೯೬೭, ೧೯೭೧ರಲ್ಲಿ ವಾಣಿಜ್ಯ, ಕಲೆ ಮತ್ತು ವಿಜ್ಞಾನ ಹಗಲು ಮತ್ತು ಸಂಜೆ ಕಾಲೇಜುಗಳನ್ನು ೧೯೭೨ರಲ್ಲಿ ಕಾಯಿದೆ ಕಾಲೇಜನ್ನೂ ಪ್ರಾರಂಭಿಸಿದುದು ಸರಿಯಷ್ಟೆ. ಈ ಕಟ್ಟಡವನ್ನು ಸಾಕಷ್ಟು ವಿಸ್ತರಿಸಿದರೂ ಸ್ಥಳಾವಕಾಶ ಇನ್ನೂ ಸಾಲದೆ ಹೆಚ್ಚು ವಿದ್ಯಾರ್ಥಿಗಳನ್ನು ಸೇರಿಸಿಕೊಳ್ಳಲು ಆಗಲಿಲ್ಲ. ಈ ಹಳೆಯ ಕಾಲೇಜಿನ ಮೇಲಿನ ಪುಸ್ತಕ ಭಂಡಾರ ಅಲ್ಲದೆ ಭೌತಶಾಸ್ತ್ರ, ಸಸ್ಯಶಾಸ್ತ್ರ ಮತ್ತು ಪ್ರಾಣಿಶಾಸ್ತ್ರ ಮುಂತಾದ ಕಟ್ಟಡಗಳನ್ನು ಸುಮಾರು ೧೨ ಲಕ್ಷ ರೂಪಾಯಿಗಳಲ್ಲಿ ಕಟ್ಟಿಸಲಾಗಿತ್ತು. ಆದರೆ ಕಾಲೇಜು ನಗರ ಮಧ್ಯದಲ್ಲಿರುವುದರಿಂದ ವಿದ್ಯಾರ್ಥಿಗಳ ಸಂಖ್ಯೆ ಇನ್ನೂ ಹೆಚ್ಚುವ ಸಂದರ್ಭಕ್ಕಾಗಿ ಕಾಲೇಜು ಬಡಾವಣೆಗೋಸ್ಕರ ೩ ಅಂತಸ್ತಿನ ಹೊಸ ಕಟ್ಟಡವನ್ನು ಸುಮಾರು ೩೦ ಲಕ್ಷ ರೂಪಾಯಿಗಳ ಅಂದಾಜಿನಲ್ಲಿ ಕಟ್ಟಲು ನಿರ್ಧರಿಸಿ ಆದಿಚುಂಚನಗಿರಿ ಜಗದ್ಗುರು ಬಾಲಗಂಗಾಧರನಾಥ ಸ್ವಾಮಿಗಳವರಿಂದ ಕಟ್ಟಡದ ಶಂಕು ಸ್ಥಾಪನೆ ೮.೮.೭೬ರಲ್ಲಿ ನಡೆದು ಕುವೆಂಪು ಅವರು ೧೫.೧.೮೦ ಉದ್ಘಾಟನೆ ನೆರವೇರಿಸಿದರು.

ಕಾನೂನು ಕಾಲೇಜು ಹಳೆಯ ಕಾಲೇಜು ಕಟ್ಟಡದಲ್ಲಿ ಮೊದಲು ಪ್ರಾರಂಭವಾಯಿತಷ್ಟೆ. ೧೯೭೬-೭೭ರಿಂದ ಈ ಹೊಸ ಕಟ್ಟಡದಲ್ಲಿಯೇ ಕಾಲೇಜು ನಡೆಯುತ್ತಿದೆ. ಬೆಳಗಿನ ಮತ್ತು ಸಂಜೆ ಕಾನೂನು ಕಾಲೇಜುಗಳಲ್ಲಿ ಎಲ್.ಎಲ್.ಬಿ ಪದವಿಯ ಮೂರು ತರಗತಿಗಳೂ ಇಂದು ನಡೆಯುತ್ತಿವೆ.

### ಹಿಂದುಳಿದ ವರ್ಗಗಳ ಆಯೋಗಕ್ಕೆ ವರದಿ

ನಮ್ಮ ಕೋಮಿನವರನ್ನು ಹಿಂದುಳಿದ ವರ್ಗಕ್ಕೆ ಸೇರಿಸಬೇಕೆಂದು ಕಾರ್ಯಕಾರಿ ಸಮಿತಿಯ ಅಧ್ಯಕ್ಷರು ಮತ್ತು ಸದಸ್ಯರು ಒಂದು ವರದಿಯನ್ನು ತಯಾರಿಸಿ ಮೈಸೂರು ಹಿಂದುಳಿದ ವರ್ಗಗಳ ಆಯೋಗದ ಅಧ್ಯಕ್ಷರನ್ನು ಭೇಟಿಮಾಡಿ ಜನವರಿ ೨೩ರಲ್ಲಿ ವರದಿಯನ್ನು ಸಾಕ್ಷಿ ಆಧಾರಗಳ ಸಹಿತ ನೀಡಿ ಒಕ್ಕಲಿಗರನ್ನು ಹಿಂದುಳಿದ ವರ್ಗಕ್ಕೆ ಸೇರಿಸಲಾಗಿದೆ.

೧೯೭೫ ಜನವರಿ ೨೩ರಂದು ವಿಶೇಷ ಸರ್ವಸದಸ್ಯರ ಸಭೆಯಲ್ಲಿ ತಿದ್ದುಪಡಿ ಮಾಡಲಾಗಿದೆ. ಈ ಹೊಸ ಅಂಗರಚನೆ ಹಿಂದೆಯೇ ತಿಳಿಸಿರುವಂತೆ ೧೯೭೫ ಮಾರ್ಚ್ ೨೯ರಿಂದ ಜಾರಿಗೆ ಬಂದಿದೆ.

೧೯೭೨ ಜೂನ್ ೨ ರಂದು ಒಕ್ಕಲಿಗರ ಸಂಘದ ಅಧ್ಯಕ್ಷರಾಗಿ ಆಯ್ಕೆಯಾದ ಸುಸಂಸ್ಕೃತರೂ, ಸಮರ್ಥರೂ ಆದ ಕೆ.ಆರ್.ಮರುದೇವೇಗೌಡರು ತಮ ಏಳು ವರ್ಷಗಳ ಆಡಳಿತದಲ್ಲಿ ಮೇಲೆ ವಿವರಿಸಿರುವ ಸಮಸ್ತ ಕಾರ್ಯಗಳನ್ನೂ ನಿರ್ವಹಿಸಿ ಒಕ್ಕಲಿಗರ ಸಂಘದ ಮಹೋದಯಕ್ಕೆ ಅಸ್ತಿಭಾರ ಹಾಕಿದರು. ಆದರೆ, ಇವರ ಅನಿರೀಕ್ಷಿತ ನಿಧನ ೧೯೭೯ ಫೆಬ್ರವರಿ ೧೬ರಂದು ಸಂಭವಿಸಿ ಎಲ್ಲರಿಗೂ ದಿಗ್ಭ್ರಾಂತಿಯನ್ನುಂಟುಮಾಡಿತು. ಇವರ ಸ್ಥಾನಕ್ಕೆ ಆಗಿನ ಉಪಾಧ್ಯಕ್ಷರಲ್ಲೊಬ್ಬರಾಗಿದ್ದ ಡಾ.ಎಂ.ಎಚ್.ಮರಿಗೌಡರು ಕಾರ್ಯಸಮಿತಿಯ ಸಮ್ಮತಿಯಂತೆ ಸಂಘದ ಅಧ್ಯಕ್ಷರಾಗಿ ಅಧಿಕಾರ ವಹಿಸಿಕೊಂಡರು. ಹಿಂದಿನ ಅವಧಿಯಲ್ಲಿ ಪ್ರಧಾನ ಕಾರ್ಯದರ್ಶಿಯಾಗಿದ್ದ ಗುತ್ತಲಗೌಡರೇ ಈ ಅವಧಿಯಲ್ಲೂ ಪ್ರಧಾನ ಕಾರ್ಯದರ್ಶಿಯಾಗಿ ಮುಂದುವರೆದವರು. ಇವರೀರ್ವರೂ ದಿವಂಗತ

ಕೆ.ಆರ್.ಮರುದೇವೇಗೌಡರು ಹಾಕಿಕೊಟ್ಟ ಮೇಲ್ಪಂಗ್ತಿಯಂತೆ ಕಾರ್ಯ ನಿರ್ವಹಿಸುತ್ತ ಒಕ್ಕಲಿಗರ ಸಂಘದ ಕೀರ್ತಿ ಪ್ರತಿಷ್ಠೆಗಳನ್ನು ಎತ್ತಿ ಹಿಡಿದರು.

**ಯು.ಜಿ.ಸಿ. ಗ್ರ್ಯಾಂಟ್ ಕಟ್ಟಡ**

ಯೂನಿವರ್ಸಿಟಿ ಗ್ರಾಂಟ್ ಕಮೀಷನ್ನಿನವರು ಒಂದು ಕಾಲೇಜು ಕಟ್ಟಡವನ್ನು ನಿರ್ಮಿಸಲು ೧.೬೭,೦೦೦ ರೂಪಾಯಿ ಮಂಜೂರು ಮಾಡಿದರು. ಈ ಹಣದ ಜೊತೆಗೆ ರಾಜ್ಯ ಸರ್ಕಾರದ ಸಹಾಯ ಹಾಗೂ ಸಂಘದ ಹಣದಿಂದ ಈ ಕಟ್ಟಡ ನಿರ್ಮಾಣ ನಡೆದು ಹೆಚ್ಚು ಸ್ಥಳಾವಕಾಶವನ್ನು ಒದಗಿಸಿದೆ.

**ಬೆಂಗಳೂರು ಇನ್‌ಸ್ಟಿಟ್ಯೂಟ್ ಆಫ್ ಟೆಕ್ನಾಲಜಿ (ಬಿ.ಐ.ಟಿ)**

ರಾಜ್ಯ ಸರ್ಕಾರ ಮತ್ತು ವಿಶ್ವವಿದ್ಯಾನಿಲಯಗಳ ಬೆಂಬಲದಿಂದ ೧೯೭೯ರಲ್ಲಿ ವಿನಾಯಕ ಚತುರ್ಥಿಯ ದಿನ, ಬೆಂಗಳೂರು ಇನ್‌ಸ್ಟಿಟ್ಯೂಟ್ ಆಫ್ ಟೆಕ್ನಾಲಜಿ (ಬಿ.ಐ.ಟಿ ಎಂಬ ಅಭಿದಾನದಲ್ಲಿ ಒಕ್ಕಲಿಗರ ಸಂಘದ ತಾಂತ್ರಿಕ ಮಹಾವಿದ್ಯಾಲಯ ಯು.ಜಿ.ಸಿ. ಗ್ರಾಂಟ್ ಕಟ್ಟಡದಲ್ಲಿ ಕಾರ್ಯಾರಂಭ ಮಾಡಿತು. ಇಲ್ಲಿ ಕರ್ನಾಟಕ ಹಾಗೂ ಹೊರ ರಾಜ್ಯಗಳಿಂದ ೫೦೦ಕ್ಕೂ ಹೆಚ್ಚಿನ ವಿದ್ಯಾರ್ಥಿ ಹಾಗೂ ವಿದ್ಯಾರ್ಥಿನಿಯರು ವ್ಯಾಸಂಗ ಮಾಡುತ್ತಿದ್ದಾರೆ. ಸಂಘದ ಈಶಾನ್ಯ ದಿಸೆಯಲ್ಲಿ ಸುಸಜ್ಜಿತವಾದ ವರ್ಕ್‌ಷಾಪ್ ಹಾಗೂ ಷೆಡ್ ನಿರ್ಮಾಣವಾಗಿದೆ. ಬಿ.ಐ.ಟಿ ಕಾಲೇಜಿಗಾಗಿ ಎಂಟು ಅಂತಸ್ಥಿನ ಭವ್ಯ ಮಹಾಭವನವನ್ನು ಸಂಘದ ಆವರಣದಲ್ಲಿ ಕಟ್ಟಲಾಗುತ್ತಿದೆ. ರಾಷ್ಟ್ರಕವಿ ಕುವೆಂಪು ಅವರು ಈ ಕಟ್ಟಡದ ಶಂಕುಸ್ಥಾಪನೆಯನ್ನು ೧೫.೧.೧೯೮೦ರಂದು ನೆರವೇರಿಸಿದರು.

**ಕೆಂಪೇಗೌಡ ವೈದ್ಯಕೀಯ ಮಹಾವಿದ್ಯಾಲಯ**

೩೦.೧೧.೮೦ರಂದು ಕೆಂಪೇಗೌಡ ವೈದ್ಯಕೀಯ ಮಹಾವಿದ್ಯಾಲಯದ ಶಂಕುಸ್ಥಾಪನೆಯಾಗಿ ಹೊಸ ಕಾಲೇಜು ಭವನದ ಎರಡನೆಯ ಅಂತಸ್ತಿನಲ್ಲಿ ಕಾರ್ಯಾರಂಭವಾಗಿದೆ. ಇದೊಂದು ಮಹಾಪ್ರಸಂಗ. ಕರ್ನಾಟಕದ ಅಂದಿನ ಮುಖ್ಯಮಂತ್ರಿಗಳಾಗಿದ್ದ ಶ್ರೀ ಆರ್. ಗುಂಡೂರಾವ್ ಅವರು ಈ ಮಹಾವಿದ್ಯಾಲಯದ ಶಂಕುಸ್ಥಾಪನೆ ನೆರವೇರಿಸಿ, ನಾಡಪ್ರಭು ಕೆಂಪೇಗೌಡರವರ ಭಾವಚಿತ್ರವನ್ನು ಅನಾವರಣ ಮಾಡಿದ್ದಾರೆ. ಅವರ ಸಹಧರ್ಮಿಣಿ ಶ್ರೀಮತಿ ವರಲಕ್ಷ್ಮಿ ಗುಂಡೂರಾವ್ ಅವರು ಒಕ್ಕಲಿಗರ ವಿದ್ಯಾರ್ಥಿನಿ ನಿಲಯದ ಶಂಕುಸ್ಥಾಪನೆ ನಡೆಸಿಕೊಟ್ಟಿದ್ದಾರೆ. ಶ್ರೀ ಆದಿಚುಂಚನಗಿರಿ ಸಿದ್ಧಸಿಂಹಾಸನಾಧೀಶರಾದ ಶ್ರೀ ಬಾಲಗಂಗಾಧರನಾಥ ಸ್ವಾಮಿಗಳವರು ಮಹಾಸಭೆಯ ಅಧ್ಯಕ್ಷತೆ ವಹಿಸಿ ಸಂದೇಶ ನೀಡಿದ್ದಾರೆ. ಕೆಂಪೇಗೌಡ ವೈಧ್ಯಕೀಯ ಮಹಾವಿದ್ಯಾಲವನ್ನು ಶಂಕುಸ್ಥಾಪನೆಮಾಡುತ್ತ, ಮುಖ್ಯಮಂತ್ರಿಗಳು ನುಡಿದ ಮಾರ್ಗದರ್ಶನದಲ್ಲಿ ಈ ರೀತಿ ತಿಳಿಸಿದ್ದಾರೆ. ನಾನು ಒಕ್ಕಲಿಗರ ನಡುವೆ ಬೆಳೆದು ಬಂದವನು. ಒಕ್ಕಲಿಗರು ಸ್ವಭಾವತಃ ಮಿಲಿಟೆಂಟ್ ಕಲಹಪ್ರಿಯರು. ಇವರು ಒಗ್ಗಟ್ಟಿನಿಂದ ಬದುಕುವುದಾದರೆ ಎಂತಹ ಉನ್ನತ ಸ್ಥಾನಮಾನಗಳನ್ನಾದರೂ ಸಾಧಿಸಬಲ್ಲರು. ಇದೇ ಸಂದರ್ಭದಲ್ಲಿ ಒಕ್ಕಲಿಗರ ವಿದ್ಯಾರ್ಥಿ ನಿಲಯದ ಬಡಾವಣೆಗಾಗಿಯೂ, ವಿದ್ಯಾರ್ಥಿನೀ ಮಹಾವಿದ್ಯಾಲಯಕ್ಕಾಗಿಯೂ ಖಾಲಿ ನಿವೇಶನವನ್ನು ಕೊಡಲು ಭರವಸೆ ನೀಡಿದ್ದಾರೆ.

**ಒಕ್ಕಲಿಗರ ಸಂಘದ ಆರ್ಥಿಕ ಪರಿಸ್ಥಿತಿ**

ಒಕ್ಕಲಿಗರ ಸಂಘದ ಹಣಕಾಸಿನ ಪರಿಸ್ಥಿತಿ ಸ್ವಯಂ ಪೂರ್ಣವೂ ದಿಟ್ಟವೂ ಆಗಿ ಬೆಳಗಲು ನಡೆಸಬೇಕಾದ ವಿವಿಧ ಕಾರ್ಯಕ್ರಮಗಳನ್ನು ೧೯೬೧ರಲ್ಲಿ ನಡೆದ ಸುವರ್ಣ ಮಹೋತ್ಸವದಲ್ಲಿ ನೆರೆದಿದ್ದ ಹಿರಿಯರು ನಿರ್ಧರಿಸಿದರೆಂದು ಹಿಂದೆಯೇ ಹೇಳಲಾಗಿದೆ. ಇದರಂತೆ ಒಕ್ಕಲಿಗರ ಸಂಘವು ವಿದ್ಯಾಪ್ರಗತಿಯ ಕಡೆಗೆ ವಿಶೇಷ ಗಮನಕೊಟ್ಟು, ಪಾಠ ಶಾಲೆ, ಪ್ರೌಢಶಾಲೆ, ಮಹಾ ವಿದ್ಯಾಲಯಗಳನ್ನು ಸ್ಥಾಪಿಸಲಾರಂಭಿಸಿದ ಮೇಲೆ ಇದರ ಫಲವಾಗಿ ಒಕ್ಕಲಿಗರ ಸಂಘದ ಆರ್ಥಿಕ ಪರಿಸ್ಥಿತಿಯೂ ತಕ್ಕಷ್ಟು ಉತ್ತಮಗೊಂಡಿದೆ.

ಇಂತಹ ಸುಸಜ್ಜಿತವೂ, ಪ್ರತಿಷ್ಠಿತವೂ ಆದ ವಿದ್ಯಾ ಸಂಸ್ಥೆಗಳ ವಿವರವನ್ನು ಅನುಬಂಧದಲ್ಲಿ ಕೊಟ್ಟಿದೆ.

ಮುಂದೆ ಒಂದು ಮಹಿಳಾ ಪ್ರೌಢ ವಿದ್ಯಾಲಯವನ್ನೂ, ವಿದ್ಯಾರ್ಥಿನಿ ನಿಲಯವನ್ನು, ಔದ್ಯೋಗಿಕ ಮಹಿಳೆಯರ ನಿಲಯವನ್ನೂ ಸ್ಥಾಪಿಸುವ ಪ್ರಯತ್ನದಲ್ಲಿ ಒಕ್ಕಲಿಗರ ಸಂಘವು ತೊಡಗಿದೆ.

ಇತ್ತೀಚಿನ ವರ್ಷಗಳಲ್ಲಿ ಸಂಘವು ವಿದ್ಯಾಕ್ಷೇತ್ರದಲ್ಲಿ ಸಾಧಿರುವ ಪ್ರಗತಿಯನ್ನು ಗಮನಿಸಿಅನೇಕ ಮಹನೀಯರು ಸಂಘಕ್ಕೆ ನೆರವಾಗಲು ಮುಂದೆ ಬಂದಿದ್ದಾರೆ. ಅವರುಗಳಲ್ಲಿ ಅಗ್ರಸ್ಥಾನ ಶಿವಾಜಿ ನಗರದ ಲಕ್ಷ್ಮಣ ಹಾಗೂ ಮೊದಲಿಯಾರ್ ರಸ್ತೆಯಲ್ಲಿ ವಾಸವಾಗಿರುವ ಸಂಗದ ಅಜೀವ ಸದಸ್ಯರಾದ ಬಿ.ಕೆ.ಪುಟ್ಟಸ್ವಾಮಯ್ಯನವರಿಗೆ ಸಲ್ಲುತ್ತದೆ. ಅವರು ತಮ್ಮ ಪೂರ್ವಿಕರಿಂದ ಬಂದ ವಿದ್ಯಾರ್ಜನೆಗೆಂದು ಉಳಿಸಿಕೊಂಡಿದ್ದ ಮಾಗಡಿ ರಸ್ತೆಯ ಬಳಿ ಕಾಮಾಕ್ಷಿಪಾಳ್ಯದ ಹತ್ತಿರವಿರುವ ಸುಮಾರು ನೂರು ಎಕರೆ ಭೂಮಿಯನ್ನು ಶ್ರೀಮತಿ ರಂಗಮ್ಮ ಕೃಷ್ಣಪ್ಪ ಟ್ರಸ್ಟ್ ಎಂಬ ಹೆಸರಿನಲ್ಲಿ ವಿದ್ಯಾಭಿವೃದ್ಧಿಗಾಗಿ ಉಪಯೋಗಿಸಬೇಕೆಂದು ಸಂಘಕ್ಕೆ ಬರೆದು ಕೊಟ್ಟು ಮಹದುಪಕಾರ ಮಾಡಿದ್ದಾರೆ. ಇದೇ ರೀತಿ ನಮ್ಮ ಸಂಘದ ಕಾರ್ಯಕಾರಿ ಸಮಿತಿಯ ಸದಸ್ಯರಾದ ತಣಸಂದ್ರದ ನಾರಾಯಣಗೌಡರು ಸಹ ಭೂಮಿಧಾನ ಮಾಡಿದ್ದಾರೆ.

ಮೇಲಿನ ಎಲ್ಲಾ ವಿಷಯಗಳನ್ನು ಕುರಿತು ಸಮಗ್ರವಾಗಿ ವಸ್ತುನಿಷ್ಠೆಯಾಗಿ ಅಧ್ಯಯನ ಮಾಡುವುದು, ಅಧ್ಯಯನದ ಮುಖ್ಯ ಉದ್ದೇಶವಾಗಿದೆ. ಅಧ್ಯಯನಕ್ಕೆ ಪೂರಕವಾದ ಮಾಹಿತಿಯನ್ನು ಸ್ಮರಣಸಂಚಿಕೆಗಳು, ಗ್ರಂಥಗಳು, ಆತ್ಮಚರಿತ್ರೆಗಳು ಹಾಗೂ ಸರ್ಕಾರಿ ದಾಖಲೆಗಳನ್ನು ಹೆಚ್ಚಿನ ಆಧಾರವಾಗಿ ಬಳಸಿಕೊಳ್ಳಲಾಗಿದೆ. ಜೊತೆಗೆ ಸಂದರ್ಶನದಿಂದ ಹೆಚ್ಚಿನ ಮಾಹಿತಿಯನ್ನು ಸಂಗ್ರಹಿಸಲಾಗಿದೆ.

* * * * *

# ಅಧ್ಯಾಯ -೨

# ಒಕ್ಕಲಿಗರ ಇತಿಹಾಸ

೨.೧. ಒಕ್ಕಲಿಗ ಜನಾಂಗ

೨.೨. ಶಾಸನಗಳಲ್ಲಿ ಒಕ್ಕಲಿಗರು

## ೨.೧ ಒಕ್ಕಲಿಗರ ಜನಾಂಗ

ಒಕ್ಕಲಿಗರು ಕರ್ನಾಟಕದಲ್ಲಿ ಒಂದು ಪ್ರಮುಖ ಜನಾಂಗ. ಒಕ್ಕಲಿಗ ಎಂದರೆ ಸಂಸಾರಿ, ಕುಟುಂಬಜೀವಿ, ಬೇಸಾಯಗಾರ, ಅನ್ನದಾತ ಎಂದರ್ಥ. ಈ ಜನ ವಿಶೇಷವಾಗಿ ವ್ಯವಸಾಯಗಾರರು. 'ಒಕ್ಕಲಿಗ' ಪದದ ಅರ್ಥ 'ಗೌಡರು' ಎಂಬ ನಿರ್ದಿಷ್ಟ ಅರ್ಥಕ್ಕೆ ಒಳಗಾಗಿ ರೈತರು ಬೇಸಾಯಗಾರರು ಮೊದಲಾದವರೆಲ್ಲ ಗೌಡರು ಎಂದೇ ಕರೆಯಲ್ಪಟ್ಟರು. ಮುಂದೆ ಅವರು ಊರಿನ, ಪ್ರಾಂತ್ಯದ, ರಾಜ್ಯದ ಒಡೆಯರಾದರು. ರಾಜರಾದಾಗ ಬೇರೆ ಬೇರೆ ಮತಧರ್ಮದ ಪ್ರಭಾವಕ್ಕೆ ಒಳಗಾಗಿ ಆಯಾ ಮತದಮುದ್ರೆಯನ್ನೂ ಪಡೆದು ಜೈನರು, ಶೈವರು, ಕ್ಷತ್ರಿಯರೂ ಆದುದರಲ್ಲಿ ಸಂಶಯವಿಲ್ಲ. ಆದರೆ ಮೂಲತಃ ಅವರೆಲ್ಲ ಗೌಡ ಜನಾಂಗಕ್ಕೆ ಸೇರಿದವರೆ. ಇವರು ಸ್ವಯಂ ಸಾಹಸಿಗಳೂ ಸಚ್ಚಾರಿತ್ರರೂ ಆಗಿದ್ದಾರೆ. ಪ್ರತಿ ಹಳ್ಳಿಯಲ್ಲೂ ಒಕ್ಕಲಿಗ ಜನಾಂಗಕ್ಕೆ ಸೇರಿದ ನಿವಾಸಿಗಳಿದ್ದಾರೆ. ಅವರಿಲ್ಲದ ಹಳ್ಳಿಯಿಲ್ಲ, ಪಟೇಲ ಅಥವಾ ಗೌಡರಿಲ್ಲದ ಗ್ರಾಮವಿಲ್ಲ.

ಒಕ್ಕಲಿಗರಲ್ಲಿ ವಿವಿಧ ಪಂಗಡಗಳಿದ್ದು ಅವರಲ್ಲಿ ಅನೇಕ ಭೇದಭಾವನೆಗಳೂ ಇವೆ. ಈ ಅಧ್ಯಯನದ ಸದುದ್ದೇಶವೆಂದರೆ ಸಮಸ್ತ ಕನ್ನಡನಾಡಿನ ವಿವಿಧ ಒಕ್ಕಲಿಗರನ್ನು ಹಾಗೂ ಒಕ್ಕಲಿಗ ಸಂಘಗಳನ್ನು ಒಂದುಗೂಡಿಸುವುದು, ಅವರಲ್ಲಿರುವ ಭೇದಭಾವಗಳನ್ನು ದೂರ ಮಾಡುವುದು.

'ಗೌಡ' ಎಂಬ ಪದ ಒಕ್ಕಲಿಗರ ಅನೇಕ ಪಂಗಡಗಳಲ್ಲಿ ಬಂದಿದೆ. ಈ ಪದವು ಪ್ರಾಚೀನ ಕಾಲದಿಂದಲೇ ರೂಢಿಯಲ್ಲಿತ್ತೆಂದು ಆಧಾರಗಳಿಂದ ತಿಳಿದು ಬರುತ್ತದೆ. 'ಗೌಡ' ಎಂದರೆ ಯಜಮಾನ, ನಾಯಕ, ಒಡೆಯ ಎಂದರ್ಥ. ಗಾವುಂಡ, ಗೌಡ, ರೆಡ್ಡಿ, ಹೆಗ್ಗಡೆ, ಶೆಟ್ಟಿ, ರೈ. ಆಳ್ವ (ಕರಾವಳಿ ಪ್ರದೇಶದಲ್ಲಿ) ಎಂದೂ ಗೌಡನನ್ನು ಕರೆಯುತ್ತಾರೆ. ಪಾಟೇಲ; ದೇಸಾಯಿ ಎಂಬ ಪದಗಳೂ ರೂಢಿಯಲ್ಲಿ ಬಂದಿವೆ. ಪ್ರಾಚೀನ ಕಾಲದಲ್ಲಿ ಗೌಡರನ್ನು ಗೌಳರು, ಗೋವಳರು, ವಲ್ಲಭರು, ನಾಡಗೌಡರು ಎಂದು ಕರೆಯುತ್ತಿದ್ದರು. ವಲ್ಲಭ ಗೌಡರು ಮಹಾಭಾರತ ಕಾಲದಲ್ಲಿ ಕಾಣಿಸಿಕೊಂಡಿದ್ದಾರೆ. ಈ ಗೌಡ ವಂಶಕ್ಕೆ ಸೇರಿದವರೇ ಕರ್ನಾಟಕದಲ್ಲಿ ಆಳಿ ಮೆರೆದ ಪ್ರಸಿದ್ಧ ರಾಜವಂಶಗಳಾದ ಗಂಗ, ರಾಷ್ಟ್ರಕೂಟ ಎಂದು ಹೆಸರು ಪಡೆದು ಇತಿಹಾಸದಲ್ಲಿ ಚಿರಸ್ಮರಣೀಯರಾಗಿದ್ದಾರೆ.

೧. ಮೊರಸು ಒಕ್ಕಲಿಗರು

ಮೊರಸು ಒಕ್ಕಲಿಗರು ತಮ್ಮನ್ನು ಬೆರಳು ಕೊಡುವ ಒಕ್ಕಲಿಗರೆಂದು ಕರೆದುಕೊಂಡಿದ್ದಾರೆ. ಬೆಂಗಳೂರು ನಿರ್ಮಾಪಕ ಮಾಗಡಿ ಕೆಂಪೇಗೌಡರು ಮೊರಸು ಒಕ್ಕಲಿಗರೆಂದು ಹೇಳಲು ಐತಿಹಾಸಿಕ ಆಧಾರಗಳಿವೆ. ಕೆಂಪೇಗೌಡ ವಂಶದ ಮೂಲಪುರುಷರು ಆವತಿಯನ್ನಾಳಿದ ಕೋಲಾರ ತುಮಕೂರು ಹಾಗೂ ಬೆಂಗಳೂರು ಜಿಲ್ಲೆಗಳಲ್ಲಿ ಹೆಚ್ಚಾಗಿ ಕಂಡು ಬರುತ್ತಾರೆ.

ಮೊರಸ ಎಂಬ ಹೆಸರು ಹೇಗೆ ಬಂದಿತು? ಬೆರಳು ಕೊಡುವ ಒಕ್ಕಲಿಗರೆಂದು ಏಕೆ ಕರೆದರು? ಎಂಬುದಕ್ಕೆ ಎರಡು ಕಾರಣಗಳಿವೆ.

೧. ಡಾ. ಎಂ. ಕೃಷ್ಣರಾವ್‌ರವರು ಬರೆದ 'ಕರ್ನಾಟಕ ಇತಿಹಾಸ ದರ್ಶನ'ದಲ್ಲಿ '೧೪ನೇ ಶತಮಾನದಲ್ಲಿ ಕಂಚಿ ಸಂಸ್ಥಾನದ ಯಣಮಂಜಿ ಪುತ್ತೂರಿನಿಂದ ಬಂದ ರಣಭೈರೇಗೌಡರು ಹಾಗೂ ಅವರ ಸಹೋದರರು ನಂದಿದುರ್ಗದ ತಪ್ಪಲಲ್ಲಿ ರಾಮಸ್ವಾಮಿ ಬೆಟ್ಟದ ಬಳಿ ಬಂದು ನೆಲಸಿ ಆವತಿ ನಾಡನ್ನು ಕಟ್ಟಿದರು. ಮೊದಲಿಗೆ ಅವರಿದ್ದ ಪ್ರದೇಶಕ್ಕೆ ಮೊರಸು ನಾಡೆಂದು ಹೆಸರಿತ್ತು. ಮೊರಸು ನಾಡಿನಿಂದ ಬಂದವರಾಗಿದ್ದರಿಂದ ಅವರನ್ನು ಮೊರಸು ಒಕ್ಕಲಿಗರೆಂದು ಕರೆದರು' ಎಂದು ಉಲ್ಲೇಖಿಸಿದ್ದಾರೆ.

ಮತ್ತೆ ಕೆಲವು ವಿದ್ವಾಂಸರು ಆವತಿ ನಾಡಿನ ಸುತ್ತ ಮುತ್ತಲ ಬೆಟ್ಟ ಗುಡ್ಡಗಳ ಸೀಮೆಗೆ ಮೊರಸು ನಾಡೆಂದು ಹೆಸರಿತ್ತು. ಆದುದರಿಂದಲೇ ಅವರನ್ನು ಮೊರಸು ಒಕ್ಕಲಿಗರೆಂದು ಕರೆದರೆಂದು ಅಭಿಪ್ರಾಯಪಟ್ಟಿದ್ದಾರೆ. ಇವರು ಪ್ರಾರಂಭದಿಂದಲೇ ಭೈರವೇಶ್ವರನ ಆರಾಧಕರಾಗಿದ್ದು, ನಂತರ ಗಂಗಾಧರೇಶ್ವರನನ್ನು ಪೂಜಿಸಿದರು. ಇವರ ಕುಲದೇವತೆ ಆದಿಶಕ್ತಿ ಕೆಂಪಾಂಜಿ. ಇವರು ತಮ್ಮ ಕುವರಿಯರ ವಿವಾಹಕ್ಕೆ ಪೂರ್ವದಲ್ಲಿ ಅವರ ಕಿರುಬೆರಳಿನ್ನು (ಉಂಗುರದ ಬೆರಳು) ಕತ್ತರಿಸುತ್ತಿದ್ದರಂತೆ. ಮಾಕೋನಹಳ್ಳಿ ದೊಡ್ಡಪ್ಪಗೌಡರು ರಚಿಸಿದ 'ಒಕ್ಕಲಿಗ' ಎಂಬ ಗ್ರಂಥದಲ್ಲಿ ಪೌರಾಣಿಕ ಕಥೆಯನ್ನು ವಿಸ್ತರಿಸಿ ಮೊರಸು ಒಕ್ಕಲಿಗರು ಬೆರಳು ಕೊಡುವುದಕ್ಕೆ ಕಾರಣವನ್ನು ಕೊಟ್ಟಿದ್ದಾರೆ.

ಬಹಳ ಹಿಂದಿನ ಕಾಲದಲ್ಲಿ ಭಸ್ಮಾಸುರನೆಂಬ ಅಸುರನು ಶಿವನನ್ನು ಕುರಿತು ಘೋರ ತಪಸ್ಸು ಮಾಡಲು ದಯಾಮಯನಾದ ಪರಮೇಶ್ವರನು ಅವನ ತಪಸ್ಸಿಗೆ ಮೆಚ್ಚಿ ಪ್ರತ್ಯಕ್ಷನಾಗಿ ವರವನ್ನು ಬೇಡಲು ಹೇಳಿದಾಗ. ಆ ರಾಕ್ಷಸನು ತಾನು ಯಾರ ತಲೆಯ ಮೇಲೆ ಹಸ್ತವನ್ನಿಟ್ಟರೂ ಅವರು ಸುಟ್ಟು ಬೂದಿಯಾಗುವಂತೆ ಅನುಗ್ರಹಿಸು ಎಂದು ಬೇಡಿದನಂತೆ. ವರವನ್ನು ಪಡೆದ ಭಸ್ಮಾಸುರನು ಪರಶಿವನ ತಲೆಯ ಮೇಲೆಯೇ ಕೈಯಿಟ್ಟು ಪರೀಕ್ಷಿಸಲು ಹೋದನಂತೆ. ವರ ಕೊಟ್ಟ ತಪ್ಪಿಗೆ ಸಂಕಟಕ್ಕೆ ಸಿಲುಕಿದ ಶಿವನು ಭಯದಿಂದ ಅರಣ್ಯದಲ್ಲಿ ಓಡುತ್ತಾ ಬಂದು ಒಂದು ಗಿಡದ ಮರೆಯಲ್ಲಿ ಅಡಗಿ ಕುಳಿತನಂತೆ, ಶಿವನನ್ನು ಹುಡುಕುತ್ತಾ ಬಂದ ಅಸುರನು ಹತ್ತಿರದ ಹೊಲದಲ್ಲಿ ಕೆಲಸ ಮಾಡುತ್ತಿದ್ದ ರೈತನನ್ನು ಶಿವನೆಲ್ಲಿ ಎಂದು ಕೇಳಿದನಂತೆ. ಸತ್ಯವನ್ನು ಹೇಳಲಾರದೆ ಅಸತ್ಯವನ್ನು ನುಡಿಯಲಾರದೆ ರೈತ ತನ್ನ ಬೆರಳಿನಿಂದ ಶಿವನು ಅಡಗಿ ಕುಳಿತ ಗಿಡದ ಕಡೆ ತೋರಿಸಿದನಂತೆ. ಅಷ್ಟರಲ್ಲಿ ಮಹಾವಿಷ್ಣುವು ಶಿವನನ್ನು ಪಾರು ಮಾಡಲು ಸುಂದರಳಾದ ಮೋಹಿನಿಯ ರೂಪವನ್ನು ತಾಳಿ ಬಂದು ಭಸ್ಮಾಸುರನನ್ನು ಬೆರುಗುಗೊಳಿಸಿ, ಅಂತ್ಯಗೊಳಿಸಿದನಂತೆ. ಶಿವನು ಈಚೆಗೆ ಬಂದು ರೈತನ ಮೇಲೆ ಕುಪಿತನಾಗಿ ತನ್ನ ಸುಳಿವನ್ನು ತೋರಿಸಿದ ತಪ್ಪಿಗಾಗಿ ರೈತನ ಬೆರಳನ್ನು ಕತ್ತರಿಸಲು ಬಂದನಂತೆ, ರೈತನ ಹೆಂಡತಿ ಶಿವನನ್ನು ಪ್ರಾರ್ಥಿಸಿ ಗಂಡನ ಬೆರಳಿಗೆ ಬದಲಾಗಿ

ತನ್ನ ಎರಡು ಬೆರಳುಗಳನ್ನು ಕತ್ತರಿಸಿಕೊಟ್ಟಳಂತೆ. ಶಿವನು ಸುಪ್ರೀತನಾಗಿ ನಿಮ್ಮ ವಂಶದಲ್ಲಿ ಜನಿಸುವ ಮೊದಲ ಮಗಳ ಎರಡು ಬೆರಳುಗಳನ್ನು ತನಗೆ ಮೀಸಲಾಗಿ ಅರ್ಪಿಸುವಂತೆ ಆಜ್ಞಾಪಿಸಿದನಂತೆ. ಅಂದಿನಿಂದ ಅವರನ್ನು ಬೆರಳು ಕೊಡುವ ಒಕ್ಕಲಿಗರೆಂದು ಕರೆದರೆಂದು ಮಾಕೋನಹಳ್ಳಿ ದೊಡ್ಡಪ್ಪಗೌಡರು ಬರೆದಿದ್ದಾರೆ. ಶಿವನಿಗೆ ಬೆರಳು ಕೊಡುವ ಈ ಘಟನೆ ಸತ್ಯವೋ, ಮಿಥ್ಯವೋ ಗೊತ್ತಿಲ್ಲ. ಇಂದಿನ ಮೊರಸು ಒಕ್ಕಲಿಗರು ಬೆರಳು ಕೊಡುವ ಪದ್ಧತಿಯನ್ನು ರದ್ದುಪಡಿಸಿದ್ದಾರೆ. ಈ ಪದ್ಧತಿ ಬೆಂಗಳೂರು ನಿರ್ಮಾಪಕ ಕೆಂಪೇಗೌಡರ ಕಾಲದಲ್ಲಿ ಜಾರಿಯಲ್ಲಿದ್ದು ಶಾಂತಿಪ್ರಿಯರೂ ಧರ್ಮಪ್ರಭುವೂ ಆದ ಕೆಂಪೇಗೌಡರು ಈ ಪದ್ಧತಿಯನ್ನು ರದ್ದುಪಡಿಸಿದರಂತೆ.

ಮೊರಸು ಒಕ್ಕಲಿಗರ ಆಚಾರ ವಿಚಾರಗಳು, ಮದುವೆ ಸಂಪ್ರದಾಯಗಳು ಎಲ್ಲಾ ಒಕ್ಕಲಿಗರಂತೆಯೇ ಇವೆ. ಇವರಲ್ಲಿ ಕೋಲಾರ, ಬೆಂಗಳೂರು ಜಿಲ್ಲೆಗಳಲ್ಲಿ ವಾಸ ಮಾಡುವ ಕೆಲವರು ತೆಲುಗು, ಕನ್ನಡವನ್ನು ಮಾತನಾಡುತ್ತಾರೆ. (ಮೊರಸು ಒಕ್ಕಲಿಗರ ಹೆಚ್ಚಿನ ವಿವರ 'ಗೌಡ ಪ್ರಭುಗಳ' ಅಧ್ಯಾಯದಲ್ಲಿ ಬರುತ್ತದೆ).

**೨. ಗಂಗಟಿಕಾರರು**

ಒಕ್ಕಲಿಗ ಜನಾಂಗದಲ್ಲಿ ಬಹು ಸಂಖ್ಯಾತರು ಗಂಗಟಿಕಾರರು. ಕರ್ನಾಟಕದ ಬಹು ಭಾಗಗಳಲ್ಲಿ ಇವರು ವಾಸಿಸುತ್ತಾರೆ. ಮಂಡ್ಯ, ಮೈಸೂರು, ಚಿತ್ರದುರ್ಗ, ತುಮಕೂರು, ಹಾಸನ, ಬೆಂಗಳೂರು ಜಿಲ್ಲೆಗಳಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಕಾಣಸಿಗುತ್ತಾರೆ. ಗಂಗಟಿಕಾರರೂ, ಮೊರಸು ಒಕ್ಕಲಿಗರೂ ಒಂದೇ ಜನಾಂಗಕ್ಕೆ ಸೇರಿ ಒಂದೇ ಸಂಪ್ರದಾಯಸ್ಥರಾದವರು. ಮೊದಲಿಗೆ ವಿವಾಹ ಸಂಬಂಧವನ್ನು ಬೆಳೆಸಿಕೊಂಡಿರಲಿಲ್ಲ. ಇತ್ತೀಚೆಗೆ ನಾವೆಲ್ಲಾ ಒಂದೇ ಎಂಬ ಮನೋಭಾವ ಬೆಳೆದು ವಿವಾಹ ಸಂಬಂಧವನ್ನು ಸಾಕಷ್ಟು ಸಂಖ್ಯೆಯಲ್ಲಿ ಬೆಳೆಸಿಕೊಂಡಿದ್ದಾರೆ.

ಗಂಗಟಿಕಾರ ಎಂಬ ಹೆಸರು ಹೇಗೆ ಬಂದಿತೆಂಬುದನ್ನು ಸ್ಥೂಲವಾಗಿ ಹೀಗೆ ವಿವರಿಸಬಹುದಾಗಿದೆ. ಗಂಗಟಿಕಾರ ಎಂಬುದು 'ಗಂಗವಾಡಿಕಾರ' ಅಥವಾ 'ಗಂಗಾವಾಡಿಯವ' ಎಂದಾಗುತ್ತದೆ. ಡಾ. ಎಂ.ವಿ. ಕೃಷ್ಣರಾಯರು ತಲಕಾಡಿನಲ್ಲಿ ರಾಜ್ಯವನ್ನು ಕಟ್ಟಿ ಆಳಿದ ಪುರಾತನ ರಾಜ ಮನೆತನವಾದ ಗಂಗರಸರು ಎಂಬ ಹೆಸರು ಹೇಳುವಾಗ ಅವರ ಕುರುಹಾಗಿ ಇಂದು ನೋಡಸಿಗುವ ಕುರುಹು ಗಂಗಟಿಕಾರ ಎಂದು ಕರೆದುಕೊಳ್ಳುವ ಒಕ್ಕಲಿಗ ಜನಾಂಗವಾಗಿದೆ ಎಂದು ಅಭಿಪ್ರಾಯ ಪಡುತ್ತಾರೆ. ಗಂಗರಸರು ಮೂಲತಃ ಗೌಡ ಒಕ್ಕಲಿಗರೇ ಎಂಬುದನ್ನು ಅನೇಕ ಐತಿಹಾಸಿಕ ಆಧಾರಗಳು ಹೇಳುತ್ತವೆ. ವಿಥಿಲೆಗೌಡ ದೇಶವನ್ನಾಳಿದ ಕಳಿಂಗ ಗಂಗರು. ಕ್ರಿ. ಶ. ೩೫೦ ರಿಂದ ೧೦೨೫ರವರೆಗೂ ತಲಕಾಡನ್ನು ಆಳಿದ ಗಂಗರು ಇಬ್ಬರೂ ಒಂದೇ ವಂಶಕ್ಕೆ ಸೇರಿದವರೆಂದು ತಿಳಿಯುತ್ತದೆ. ಗಂಗರಸರು ಇತಿಹಾಸದಿಂದ ಮರೆಯಾದರೂ ಅವರ ಪೀಳಿಗೆಯವರಾದ ಗಂಗಟಿಕಾರ ಒಕ್ಕಲಿಗರು ಬಹುಸಂಖ್ಯಾತರಾಗಿ ಕರ್ನಾಟಕದಲ್ಲಿದ್ದಾರೆ.

ಇವರ ಆಚಾರ ವಿಚಾರಗಳು, ಮದುವೆ ಸಂಪ್ರದಾಯಗಳು ಇತರ ಒಕ್ಕಲಿಗರಂತೆಯೇ ಇವೆ. ಮದುವೆಯ ಹಿಂದಿನ ರಾತ್ರಿ ಇವರು ಗಂಗೆಯನ್ನು ಪೂಜಿಸಿ ದೇವರನ್ನು ತರುವ ಪದ್ಧತಿ ಇದೆ.

**೩. ಸಾಮಧಾರಿಗಳು**

ಒಕ್ಕಲಿಗ ಜನಾಂಗದಲ್ಲಿ ಶಿವನನ್ನು ಆರಾಧಿಸುವಂತೆ ಮಹಾವಿಷ್ಣುವನ್ನು ಪೂಜಿಸುವ, ಶ್ರೀವೈಷ್ಣವ ಪಂಥವನ್ನು ಸ್ವೀಕರಿಸಿದ ಒಕ್ಕಲಿಗರೂ ಇದ್ದಾರೆ. ಬೆಂಗಳೂರು ನಿರ್ಮಾಪಕ ಮಾಗಡಿ ಕೆಂಪೇಗೌಡ ವಂಶದವರು ಬೆಂಗಳೂರಿನಲ್ಲಿ ರಾಜ್ಯವಾಳುತ್ತಿದ್ದಾಗ ಶಿವಭಕ್ತರಾಗಿದ್ದು. ಮಾಗಡಿಗೆ ರಾಜಧಾನಿಯನ್ನು ಬದಲಾಯಿಸಿದಾಗ ವಿಷ್ಣುಭಕ್ತರಾಗಿ ಶ್ರೀ

ರಂಗನಾಥಸ್ವಾಮಿಯನ್ನು ಆರಾಧ್ಯ ದೈವವನ್ನಾಗಿ ಮಾಡಿಕೊಂಡರು. ಇದೇ ರೀತಿ ನಾಮಧಾರಿ ಒಕ್ಕಲಿಗರು ತಿರುಪತಿಯ ವೆಂಕಟೇಶ್ವರನನ್ನು, ಬೇಲೂರಿನ ಚನ್ನಕೇಶವ ಸ್ವಾಮಿಯನ್ನು ಪೂಜಿಸುತ್ತಾರೆ. ಈ ಜನಾಂಗದವರು ಶಿವಮೊಗ್ಗ ಜಿಲ್ಲೆಯ ಕೆಲವು ಪ್ರದೇಶಗಳಲ್ಲಿ, ಮಲೆನಾಡು, ಚಿಕ್ಕಮಗಳೂರು, ನರಸಿಂಹರಾಜಪುರ, ಶೃಂಗೇರಿ, ದಕ್ಷಿಣ ಕನ್ನಡ ಜಿಲ್ಲೆ, ಪಿರಿಯಾಪಟ್ಟಣ ಪ್ರಾಂತ್ಯಗಳಲ್ಲಿ ಹೆಚ್ಚಾಗಿ ವಾಸಿಸುತ್ತಾರೆ.

ನಾಮಧಾರಿ ಒಕ್ಕಲಿಗರ ಬಗ್ಗೆ ಒಂದು ಐತಿಹಾಸಿಕ ಕಥೆ ಇದೆ. ೧೨ ನೇಯ ಶತಮಾನದಲ್ಲಿ ಹೊಯ್ಸಳ ಸಾಮ್ರಾಟ ಬಿಟ್ಟಿದೇವನು ಶ್ರೀ ರಾಮಾನುಜಾಚಾರ್ಯರ ತಪೋಶಕ್ತಿಗೆ ತಲೆದೂಗಿ ಜೈನಮತವನ್ನು ಬಿಟ್ಟು ಶ್ರೀ ವೈಷ್ಣವ ಮತವನ್ನು ಸ್ವೀಕರಿಸಿ ವಿಷ್ಣುವರ್ಧನನೆಂಬ ನಾಮಾಂಕಿತವನ್ನು ಪಡೆದು, ಬೇಲೂರಿನ ಶ್ರೀ ಚನ್ನಕೇಶವ ಸ್ವಾಮಿಯ ದೇವಾಲಯವನ್ನು ಕಟ್ಟಿಸಿದನು. 'ಯಥಾ ರಾಜಾ ತಥಾ ಪ್ರಜಾ' ಎಂಬಂತೆ ಅನೇಕ ಒಕ್ಕಲಿಗರು ವೈಷ್ಣವರಾಗಿ ಶ್ರೀ ಹರಿಯನ್ನು ಪೂಜಿಸಿದರು. ಇವರನ್ನು ನಾಮಧಾರಿ ಒಕ್ಕಲಿಗರೆಂದು ಕರೆದರು. ಆದರೆ ಇಂದು ಸಮಸ್ತ ಒಕ್ಕಲಿಗ ಪಂಗಡಗಳು ಹರಿಹರದಲ್ಲಿ ಭೇದವಿಲ್ಲದೆ ಎಲ್ಲಾ ದೇವದೇವತೆಯನ್ನು ಪೂಜಿಸುತ್ತಾರೆ. ನಾಮಧಾರಿ ಒಕ್ಕಲಿಗ ಜನಾಂಗದ ಕೆಲವರು ಕೊಡಗಿನ ಅರಸರ ಕಾಲದಲ್ಲೆ ಅಲ್ಲಿಗೆ ಹೋಗಿ ನೆಲಸಿದವರು ಈಗಲೂ ಇದ್ದಾರೆ. ಅವರನ್ನು ತುಳುಗೌಡರೆಂದು ಕರೆಯುತ್ತಾರೆ.

**೪. ಚೋಳ ಒಕ್ಕಲಿಗರು**

ಚೋಳ ಎಂಬ ಪದವು ಅನಾದಿ ಕಾಲದಿಂದಲೇ ರೂಢಿಯಲ್ಲಿ ಬಂದಿದೆ. ಭರತಖಂಡದ ನೂರೈವತ್ತಾರು ದೇಶಗಳಲ್ಲಿ ಚೋಳದೇಶವೂ ಒಂದು. ಮಹಾಭಾರತದ ಯುದ್ಧದಲ್ಲಿ ಚೋಳರು ಭಾಗವಹಿಸಿದ್ದರಂತೆ. ಚೋಳ ಎಂಬ ಪದವು ಚೋಡ, ಚೂಡ ಎಂಬ ಪದಗಳಿಂದ ಬಂದಿರಬಹುದು. ಪೂರ್ವದಲ್ಲಿ ಈ ಜನಾಂಗ ಉಣ್ಣೆ, ಹತ್ತಿ, ಕೂದಲು ಮುಂತಾದ ವ್ಯಾಪಾರ ವ್ಯವಹಾರಗಳನ್ನು ಮಾಡುತ್ತಿದ್ದರೆಂದು ತಿಳಿದುಬರುತ್ತದೆ. ತಮಿಳುನಾಡಿನಲ್ಲಿ ಪ್ರಾಚೀನ ಕಾಲದಲ್ಲಿ ಚೋಳ ರಾಜವಂಶಜರು ಇದ್ದು ಇವರು ಪಾಂಡ್ಯಪಲ್ಲವರೊಡನೆ ಅನೇಕ ಯುದ್ಧಗಳನ್ನು ಮಾಡಿದ್ದಾರೆ. ಕ್ರಿ. ಶ. ೯೪೯ರಲ್ಲಿ ಪಾಂಡ್ಯ ಹಾಗೂ ಪಲ್ಲವರು ಅಧಿಕಾರವನ್ನು ಕಳೆದುಕೊಂಡ ಮೇಲೆ ಚೋಳರು ಮತ್ತೆ ಅಧಿಕಾರಕ್ಕೆ ಬಂದರು. ಕರ್ನಾಟಕದಲ್ಲಿ ಕೆಲವು ಒಕ್ಕಲಿಗ ಕುಟುಂಬಗಳಿಗೆ ಚೋಳ ಒಕ್ಕಲಿಗರು ಎಂಬ ಹೆಸರು ಬರಲು ಕಾರಣವೇನು ಎಂಬುದಕ್ಕೆ ಮಾಕೋನಹಳ್ಳಿ ಶ್ರೀ ದೊಡ್ಡಪ್ಪಗೌಡರು 'ಒಕ್ಕಲಿಗ' ಎಂಬ ತಮ್ಮ ಗ್ರಂಥದಲ್ಲಿ ಕೆಳಗೆ ಕೊಟ್ಟಿರುವಂತೆ ಉಲ್ಲೇಖಿಸಿದ್ದಾರೆ.

''ಕರ್ನಾಟಕದಲ್ಲಿ ೧೧ನೇ ಶತಮಾನದಲ್ಲಿ ಗಂಗರಸರು ಜೈನಮತವನ್ನು ಸ್ವೀಕರಿಸಿದರೆಂಬ ಕೋಪದಿಂದ ಒಕ್ಕಲಿಗರು ಗಂಗರಸರದ ಮೇಲೆ ಯುದ್ಧ ಹೂಡಿ ಇತಿಹಾಸದಿಂದ ಅಳಿಸಿ ಹಾಕಿದರೆಂದು ಕೆಲವರ ಅಭಿಪ್ರಾಯವಾದರೆ, ಮತ್ತೆ ಕೆಲವರ ಅಭಿಪ್ರಾಯ ಹೀಗಿದೆ ಜೈನಮತವನ್ನು ಸ್ವೀಕರಿಸಿದ ಗಂಗರಸರು, ಆದಿಚುಂಚನಗಿರಿಯ ಸಂಸ್ಥಾನ ಮಠಾಧೀಶರನ್ನಾಗಿ ಪಾರ್ಶ್ವನಾಥರೆಂಬ ಜೈನ ಆಚಾರ್ಯರನ್ನು ನೇಮಿಸಿದರಂತೆ. ಅವಧೂತ ಯೋಗಿಗಳ ಶಿಷ್ಯರಾದ ಕೆಲವು ಒಕ್ಕಲಿಗರು ಕುಪಿತರಾಗಿ ಸಹಾಯ ಮಾಡಿದರಂತೆ. ಅದಕ್ಕಾಗಿ ಚೋಳರು ಅವಧೂತ ಯೋಗಿಗಳನ್ನು ಆದಿಚುಂಚನಗಿರಿಯ ೫೨ನೆಯ ಗುರುವನ್ನಾಗಿ ಮಾಡಿದರು. ಚುಂಚನಗಿರಿಯ ಸುತ್ತಲ ಪ್ರಾಂತ್ಯಕ್ಕೆ ವಿಕ್ರಮ ಚೋಳಮಂಡಲವೆಂದು ಹೆಸರು ಇದ್ದಿತೆಂದು ತಿಳಿದು ಬರುತ್ತದೆ. ಚುಂಚನಗಿರಿಯ ಶಿಖರದ ಮೇಲೆ ಚೋಳರ ಕಂಬವಿದೆ. ಸಮೀಪದಲ್ಲಿಯೇ ಚೇಳೂರ ಎಂಬ ಗ್ರಾಮವಿದೆ. ಅಲ್ಲಿ ಒಂದು ಕಲ್ಯಾಣಿಯಿದೆ, ಇತ್ತೀಚಿನವರೆಗೆ

ಅಲ್ಲಿ ಪರಂಪರಾಗತವಾಗಿ ನಡೆದು ಬಂದ ವಾಡಿಕೆಯಂತೆ ವರ್ಷಕ್ಕೊಮ್ಮೆ ನಡೆಯುವ ಉತ್ಸವ ಕಾಲದಲ್ಲಿ ಚೋಳೂರು ಕಂಬದ ಮೇಲೆ ದೀಪವನ್ನು ಹೊತ್ತಿಸಿ ಅದರ ಪ್ರತಿಬಿಂಬ ಚೇಳೂರು ಗ್ರಾಮದ ಕಲ್ಯಾಣಿಯಲ್ಲಿ ಮೂಡುವವರೆಗೆ ಆ ಗ್ರಾಮಸ್ಥರು ಊಟ ಮಾಡುತ್ತಿರಲಿಲ್ಲವಂತೆ. ಕಾಲಭೈರವೇಶ್ವರ ದೇವಸ್ಥಾನದ ಗೋಪುರವನ್ನು ಚೋಳರೇ ಕಟ್ಟಿಸಿದರಂತೆ. ಭೈರವೇಶ್ವರನ ಪ್ರಭುತ್ವವನ್ನು ಅಂಗೀಕರಿಸಿದವರನ್ನು ಚೋಳ ಒಕ್ಕಲಿಗರೆಂದು ಕರೆದರು. ಆದರೆ ಅವರು ಮೂಲತಃ ಗಂಗವಂಶಕ್ಕೆ ಸೇರಿದ ಒಕ್ಕಲಿಗರೇ ಆಗಿದ್ದರು''.

೫. ಬಂಟರು

ಬಂಟ ಒಕ್ಕಲಿಗ ಜನಾಂಗದವರು ಅಲ್ಪ ಸಂಖ್ಯಾತರಾಗಿದ್ದಾರೆ. ಈ ಜನಾಂಗವು ಮೈಸೂರು, ಕೊಡಗು, ಉಡುಪಿ, ದಕ್ಷಿಣ ಕನ್ನಡಗಳಲ್ಲಿ ಕಂಡು ಬರುತ್ತಾರೆ. ಐತಿಹಾಸಿಕ ಆಧಾರಗಳಿಂದ ಬಂಟರು ಎಂಬ ಹೆಸರು ಬರಲು ಕಾರಣ ಪೂರ್ವದಲ್ಲಿ ಇವರು ಅನೇಕ ಯುದ್ಧಗಳಲ್ಲಿ ಭಾಗವಹಿಸಿ ನಾಡಿಗಾಗಿ, ಧರ್ಮಕ್ಕಾಗಿ ಹಾಗೂ ತಮ್ಮ ಸಾಮ್ರಾಟರ ವಿಜಯಕ್ಕಾಗಿ ಕಲಿತನದಿಂದ ಕಾದಾಡಿ ವಿಜಯವನ್ನೋ, ವೀರಮರಣವನ್ನೋ ಪಡೆದವರಾಗಿದ್ದರು. ಇವರ ಧೈರ್ಯ ಶೌರ್ಯ, ಸಾಹಸ ತ್ಯಾಗಗಳ ನೆನಪಿಗಾಗಿ ವೀರಗಲ್ಲುಗಳನ್ನು ಕೆತ್ತಿಸಿದರು. ಇಂತಹ ವೀರಗಲ್ಲುಗಳನ್ನು ದೇಶದ ನಾನಾ ಭಾಗಗಳಲ್ಲಿ ನಾವಿಂದಿಗೂ ನೋಡಬಹುದು. ಕೆಲವೊಮ್ಮೆ ಬಂಟರು ತಮ್ಮ ರಾಜನು ದಿಗ್ವಿಜಯಕ್ಕೆ ಹೊರಟಾಗ ಅಥವಾ ಶತ್ರುವಿನೊಡನೆ ಹೋರಾಟಕ್ಕೆ ನಿಂತಾಗ ತಮ್ಮ ರಾಜನಿಗೆ ಜಯದೊರೆಯಲೆಂದು ತಮ್ಮ ಪ್ರಾಣ ಬಲಿಯನ್ನೇ ಕೊಟ್ಟಿದ್ದಾರೆ. ಇವರನ್ನು ವೀರ ಬಂಟರೆಂದು ಕರೆಯುತ್ತಾರೆ. ತುಳುವರು, ಬಂಟರು, ಗಾವಡರು, ಗೊಲ್ಲರು, ಗೋಹಟ್ಟಿಗಳು, ಗೌಡ (ಗೌಳ) ವಂಶದಿಂದ ಬಂದವರೇ ಎಂದು ಪ್ರಸಿದ್ಧ ಇತಿಹಾಸ ತಜ್ಞರಾದ ಡಾ. ಶಂ.ಬಾ. ಜೋಶಿಯವರು ಉಲ್ಲೇಖಿಸಿದ್ದಾರೆ. ಬಂಟರು ವೀರಾವೇಶದಿಂದ ಹೋರಾಡಿ ಉನ್ನತ ಪದವಿಗಳನ್ನು ಪಡೆದು ರಾಜ್ಯಗಳನ್ನು ಸ್ಥಾಪಿಸಿದರು. ಬಂಟರು ದಕ್ಷಿಣದ ಗಂಗರಿಗೂ, ಕಳಿಂಗ ಗಂಗರಿಗೂ ಮೂಲ ಪುರುಷರೆಂದು ತಿಳಿದು ಬರುತ್ತದೆ.

ಬಂಟರು ವೀರಗಲ್ಲನಿಂದ ಅವರರಾದವರು

ದಕ್ಷಿಣದ ಗಂಗರು ಕಳಿಂಗ ಗಂಗರು

ಗಂಗಾವಾಡಿ ಗಂಗಡಿಕಾರರು

ಕಾಪು ರೆಡ್ಡಿ ರಟ್ಟರು, ರಾಷ್ಟ್ರಕೂಟಾದಿಗಳ ಬಳಗ  ಮುಂದೆ ಕಾಪು ರೆಡ್ಡಿ, ಮುಂತಾದವರು ತೆಲುಗುನಾಡಿನ ಆಧಾರ ಸ್ತಂಭರಾದವರು.

ಬೆಳಗಾವಿ ಜಿಲ್ಲೆಯ ತುರುಕಾರ ವಂಶದ ಗೌಡರೂ ದೇಸಾಯಿಗಳು

ಮೇಲ್ಕಂಡ ನಕ್ಷೆಯಿಂದ ಬಂಟರಿಗೂ ಕರ್ನಾಟಕದ ಇತರ ಒಕ್ಕಲಿಗರಿಗೂ ಮತ್ತು ತೆಲುಗುನಾಡಿನ ಕಾಪು ರೆಡ್ಡಿಗಳಿಗೂ ಪೂರ್ವದಲ್ಲಿಯೇ ಸಂಬಂಧವಿತ್ತೆಂದು ಗೊತ್ತಾಗುತ್ತದೆ.

ಬಂಟ ಒಕ್ಕಲಿಗರ ಆಚಾರ ಸಂಪ್ರದಾಯಗಳು ಎಲ್ಲಾ ಒಕ್ಕಲಿಗರಂತೆಯೇ ಇವೆ. ಈಗ ಇವರು ಭೇಧಭಾವಗಳನ್ನು ಮರೆತು ಇತರ ಒಕ್ಕಲಿಗರೊಡನೆ ವೈವಾಹಿಕ ಸಂಬಂಧವನ್ನು ಬೆಳೆಸಿಕೊಳ್ಳುತ್ತಿದ್ದಾರೆ.  ಆದರೆ ಇದು ಹೆಚ್ಚಾಗಿ ಉನ್ನತಾಧಿಕಾರಿಗಳ ಸ್ಥಾನ ಮಾನಕ್ಕೆ ಮಾತ್ರ ಮೀಸಲಾಗಿದೆ.

## ೬. ರೆಡ್ಡಿ ಒಕ್ಕಲಿಗರು

ರೆಡ್ಡಿ ಎಂದರೆ ಗೌಡ ಎಂಬ ಪದದ ಅರ್ಥದಂತೆಯೇ ಮುಖಂಡ, ಯಜಮಾನ, ಒಡೆಯ, ನಾಯಕ ಎಂದೂ ಕರೆಯುತ್ತಾರೆ. ಕನ್ನಡದಲ್ಲಿ ಗ್ರಾಮದ ಒಡೆಯನಿಗೆ ಗೌಡ ಎಂದರೆ ತೆಲುಗಿನಲ್ಲಿ ರೆಡ್ಡಿಯೆಂದು ಕರೆಯುತ್ತಾರೆ. ಕರ್ನಾಟಕದಲ್ಲಿ ರೆಡ್ಡಿ ಜನಾಂಗ ಬಹುತೇಕ ಕೋಲಾರ ಜಿಲ್ಲೆಯಲ್ಲೂ, ತುಮಕೂರು ಜಿಲ್ಲೆಯ ಮಧುಗಿರಿ, ಪಾವಗಡ ತಾಲ್ಲೂಕು, ಬೆಂಗಳೂರು ಜಿಲ್ಲೆಯಲ್ಲೂ ನೆಲಸಿದ್ದಾರೆ. ತಮಿಳುನಾಡಿನ ಕೆಲವು ಪ್ರದೇಶಗಳಲ್ಲಿ ಹೆಚ್ಚಾಗಿ ಈ ಜನರು ವಾಸಿಸುತ್ತಾರೆ. ಇವರು ಕನ್ನಡ, ತೆಲುಗು ಭಾಷೆಗಳನ್ನು ಮಾತನಾಡುತ್ತಾರೆ, ಮೊರಸು ಒಕ್ಕಲಿಗರಲ್ಲಿಯೂ ಕೆಲವರು ರೆಡ್ಡಿ ಎಂಬ ಹೆಸರನ್ನು ಇಟ್ಟುಕೊಂಡಿದ್ದಾರೆ.

ಒಕ್ಕಲಿಗರೇ ಆದ ರೆಡ್ಡಿ ಜನಾಂಗದವರು ಎಲ್ಲಿಂದ ಬಂದರು ಇವರ ಮೂಲ ಯಾವುದು ಎಂದು ಗಮನಿಸುವುದಾದರೆ ಕೆಲವು ವಿದ್ವಾಂಸರು ಇವರನ್ನು ಚೇರರು, ಚೇರಾಧಿಪತಿಗಳು ಎಂದಿದ್ದಾರೆ. ಮತ್ತೆ ಕೆಲವರು ಇವರನ್ನು ಕಳಿಂಗ ಗಂಗವಂಶಕ್ಕೆ ಸೇರಿದವರೆಂದೂ, ಮಾನ್ಯಖೇಟದ ರಾಷ್ಟ್ರಕೂಟದ ತೆಲುಗು ರೆಡ್ಡಿ ವಂಶೋದ್ಭವರೆಂದು ಡಾ. ಬರ್ನಲ್‌ರವರು ಅಭಿಪ್ರಾಯಪಟ್ಟಿದ್ದಾರೆ. ಡಾ. ಎಂ.ವಿ. ಕೃಷ್ಣರಾಯರು ಈ ಅಭಿಪ್ರಾಯವನ್ನು ತಿರಸ್ಕರಿದ್ದಾರೆ. ಈ ವಿದ್ವಾಂಸರ ಅಭಿಪ್ರಾಯಗಳು ಏನೇ ಇರಲಿ ರೆಡ್ಡಿ ಜನಾಂಗದವರು ಒಕ್ಕಲಿಗರು : ಕಾಪುರೆಡ್ಡಿ, ರಟ್ಟರು, ರಾಷ್ಟ್ರಕೂಟಾದಿಗಳ ಬಳಿಗವು ದಕ್ಷಿಣದ ಗಂಗವಂಶದವರಿಂದಲೇ ಬಂದದ್ದು.

## ೭. ಕೊಂಡವೀಟ ರೆಡ್ಡಿ ರಾಜರು (೧೩೨೪-೧೪೨೪)

ಕ್ರಿ.ಶ. ೧೩೨೩ರಲ್ಲಿ ದೆಹಲಿಯ ಸುಲ್ತಾನರ ಧಾಳಿಗೆ ಸಮಸ್ತ ದಕ್ಷಿಣ ಭಾರತವು ತುತ್ತಾಗಿ ವೈಭವದಿಂದ ಮೆರೆದ ದೇವಗಿರಿ, ಆಂಧ್ರದ ಕಾಕತೀಯ ಸಾಮ್ರಾಜ್ಯ, ಮಧುರೆ ಮತ್ತು ದೋರಸಮುದ್ರಗಳು ನಾಶವಾದವು. ಹೊಯ್ಸಳ ಸಾಮ್ರಾಜ್ಯದ ಮುಮ್ಮಡಿ ಬಲ್ಲಾಳನಿಂದ ಕನ್ನಡನಾಡು ಗಂಡಾಂತರದಿಂದ ಪಾರಾಯಿತು. ಈ ಸಮಯದಲ್ಲಿ ಕಾಕತೀಯ ರಾಜನಾದ ಪ್ರತಾಪರುದ್ರನು ಯವನರಿಗೆ ಸೋತು ಅವರ ಬಂದಿಯಾಗಿ ಜೀವನದಲ್ಲಿ ಜುಗುಪ್ಸೆಗೊಂಡು ಆತ್ಮಹತ್ಯೆ ಮಾಡಿಕೊಂಡನು. ಸಮಸ್ತ ಆಂಧ್ರ ರಾಜ್ಯವು ಮುಸಲ್ಮಾನರ ವಶವಾಯಿತು. ಕಾಕತೀಯ ಸಾಮಂತರ ದಂಡನಾಯಕನಾಗಿದ್ದ. ಪ್ರೋಲಿಯ ವೇಮರೆಡ್ಡಿ, ದೆಹಲಿಯ ಸುಲ್ತಾನರ ಸೇನೆಯೊಡನೆ ವೀರಾವೇಶದಿಂದ ಹೋರಾಡಿದನಾದರೂ, ರಾಜ್ಯ ಹಾಗೂ ದೊರೆಯನ್ನು ಈ ಯುದ್ಧದಲ್ಲೇ ಕಳೆದುಕೊಳ್ಳಬೇಕಾಯಿತು. ಆಂಧ್ರವು ಮಹಮ್ಮದೀಯರ ಅಧಿಕಾರಕ್ಕೆ ಸಿಲುಕಿ ತೊಂದರೆಗೀಡಾಯಿತು. ಕನ್ನಡನಾಡಿನ ಹೊಯ್ಸಳ ಸಾಮ್ರಾಟ ಮುಮ್ಮಡಿ ಬಲ್ಲಾಳನ ಪ್ರೋತ್ಸಾಹದಿಂದ ಪ್ರೋಲಾಯ ವೇಮರೆಡ್ಡಿ ದೆಹಲಿಯ ಸುಲ್ತಾನನನ್ನು ಪ್ರತಿಭಟಿಸಿ ಸ್ವತಂತ್ರ ಸಾಮ್ರಾಜ್ಯವನ್ನು ಸ್ಥಾಪಿಸಿದನು. ಗುಂಟೂರು, ನೆಲ್ಲೂರುಗಳಲ್ಲಿದ್ದ ದೆಹಲಿ ಪ್ರತಿನಿದಿಗಳನ್ನು ಪರಾಜಯಗೊಳಿಸಿ ಶ್ರೀಶೈಲದವರೆಗೂ ರಾಜ್ಯವನ್ನು ವಿಸ್ತರಿಸಿದನು. ೨೪ ಕೋಟೆಗಳನ್ನು ಕಟ್ಟಿಸಿದನು. ಕೊಂಡವಿಡು, ಕೊಂಡಪಲ್ಲೆ, ಬಿಲ್ಲಂಕೊಂಡ, ಚಂದವೋಟೆ, ಧರಣಿಕೋಟ ಮುಂತಾದ ಕೋಟೆಗಳು ಅವನು ಕಟ್ಟಿಸಿದ ಕೋಟೆಗಳಲ್ಲಿ ಮುಖ್ಯವಾದವು.

ಪ್ರೋಲಿಯ ವೇಮರೆಡ್ಡಿಯ ನಂತರ ಈತನ ಮಗನಾದ ಅಸಪೋತೆರೆಡ್ಡಿ ಆಳಿದನು. ಈತನು ರಾಜಧಾನಿಯನ್ನು ಅದ್ದಂಕಿಯಿಂದ ಕೊಂಡವೀಡಿಗೆ ಬದಲಾಯಿಸಿದನು. ಅಂದಿನಿಂದ ಇವರನ್ನು ಕೊಂಡವೀಟರೆಡ್ಡಿ ರಾಜರೆಂದು ಕೆರೆದರು. ಆನವೇಮಾರೆಡ್ಡಿಯು, ಈ ರೆಡ್ಡಿ ರಾಜರಲ್ಲಿ ಇತಿಹಾಸ ಪ್ರಸಿದ್ದಿ ಪಡೆದವನಾಗಿದ್ದಾನೆ.

ಈತನು ಕೃಷ್ಣ ಗೋದಾವರಿ ವಿಶಾಖ ಪ್ರಾಂತಗಳನ್ನು ಗೆದ್ದು ತನ್ನ ರಾಜ್ಯಕ್ಕೆ ಸೇರಿಸಿಕೊಂಡನು. ಅನೇಕ ಕೆರೆ ಕಟ್ಟೆಗಳನ್ನು ಕಟ್ಟಿಸಿ ದಾನ ಧರ್ಮಗಳನ್ನು ಮಾಡಿದನು. ಈತನ ನಂತರ ಕುಮಾರ ಗಿರಿರೆಡ್ಡಿ, ಪೆದಕೋಮಟಿ, ವೇಮರೆಡ್ಡಿಗಳು ರಾಜ್ಯವಾಳಿದರು.

**೮. ಇತರರು**

೧. ಕೊಡತಿ ಒಕ್ಕಲಿಗ ಜನಾಂಗದವರು

೨. ಪೆನಗೊಂಟಿ ಒಕ್ಕಲಿಗ ಜನಾಂಗದವರು

೩. ಮೊರಸು ಒಕ್ಕಲಿಗ ಜನಾಂಗದವರು

೪. ಕುಂಚಟಿಗರಲ್ಲಿಯೂ ಕೊಡ ರೆಡ್ಡಿಗಳಿದ್ದಾರೆ

೫. ಕರುಬರಲ್ಲಿ (ಹಾಲು ಮತಸ್ಥರು) ರೆಡ್ಡಿಗಳಿದ್ದಾರೆ

೬. ಬಲಿಜ ಜನಾಂಗದಲ್ಲಿ ರೆಡ್ಡಿಗಳಿದ್ದಾರೆ

೭. ಪೊಟಾಟಿ ರೆಡ್ಡಿಗಳು (ಆಂಧ್ರದ ರೆಡ್ಡಿಗಳು)*

**೯. ಸೋಲಿಗ ಒಕ್ಕಲಿಗರು**

ಮೈಸೂರು ಜಿಲ್ಲೆಯ ಯಳಂದೂರು ತಾಲೂಕಿನಲ್ಲಿ ಬಿಳಿಗಿರಿ ಬೆಟ್ಟವಿದೆ. ನಂಜನಗೂಡಿನಿಂದ ೩೮ ಮೈಲಿಗಳ ದೂರದಲ್ಲಿ ಈ ಬೆಟ್ಟವು ಉತ್ತರ ದಕ್ಷಿಣವಾಗಿ ೧೦ಮೈಲಿಗಳಷ್ಟು ದೂರದವರೆಗೆ ಹಬ್ಬಿದೆ. ಬೆಟ್ಟದ ಮೇಲೆ ಶ್ರೀರಂಗಸ್ವಾಮಿ ದೇವಸ್ಥಾನದ ಬೆಟ್ಟ ಬಿಳಿ ಕಲ್ಲುಗಳಿಂದ ತುಂಬಿದೆ. ಆದುದರಿಂದಲೇ ಈ ಬೆಟ್ಟಕ್ಕೆ ಬಿಳಿಗಿರಿ ರಂಗನ ಬೆಟ್ಟವೆಂದು ಕರೆಯುತ್ತಾರೆ. ಇದನ್ನು ಸಂಸ್ಕೃತದಲ್ಲಿ ಶ್ವೇತಾದ್ರಿ ಎಂದು ಕರೆಯಲಾಗಿದೆ. ಬೆಲೆ ಬಾಳುವ ತೇಗ, ಶ್ರೀಗಂಧ, ಹೊನ್ನೆ, ಮತ್ತಿ, ಬೀಟೆ ಮುಂತಾದ ಮರಗಳು ಮುಗಿಲೆತ್ತರಕ್ಕೆ ಬೆಳೆದು ನಿಂತಿವೆ. ವಿವಿಧ ಪ್ರಾಣಿಪಕ್ಷಿ ಸಮೂಹಗಳಿಂದ ಸಂಪದ್ಭರಿತವಾಗಿ ಕೂಡಿದ ಈ ಗಿರಿಧಾಮದಲ್ಲಿ ಹಾಗೂ ಸುತ್ತಮುತ್ತಲ ಪ್ರದೇಶದಲ್ಲಿ ವಾಸ ಮಾಡುವ ಜನಾಂಗಕ್ಕೆ ಸೋಲಿಗ ಒಕ್ಕಲಿಗರೆಂದು ಕರೆಯುತ್ತಾರೆ. ಸೋಲಿಗರು ಬಿಳಿಗಿರಿಯ ಪರಮಭಕ್ತರು. ಸೋಲಿಗ ಒಕ್ಕಲಿಗರು ಬಿಳಿಗಿರಿರಂಗನನ್ನು ಭಾವನೆಂದು ಕರೆಯುತ್ತಾರೆ. ಇದಕ್ಕೊಂದು ದಂತ ಕಥೆಯಿದೆ.

ಪ್ರಾಚೀನ ಕಾಲದಲ್ಲಿ ಸೋಲಿಗರ ಕುಲದ ಯಜಮಾನ ಬೊಮ್ಮೇಗೌಡನಿಗೆ ಏಳು ಮಂದಿ ರೂಪವತಿಯರಾದ ಹೆಣ್ಣುಮಕ್ಕಳಿದ್ದರಂತೆ. ಕೊನೆಯವಳು ಅಪ್ಸರೆಯಂತೆ ರೂಪವತಿಯಾಗಿ ಬಿಳಿಗಿರಿ ರಂಗನ ಪರಮಭಕ್ತಳೂ ಆಗಿದ್ದಳಂತೆ. ಈಕೆಯು ಬಿಳಿಗಿರಿ ರಂಗನನ್ನೇ ಮದುವೆಯಾಗಬೇಕೆಂದು ಸದಾ ಅವನನ್ನೇ ನೆನೆಯುತ್ತಾ ಅವನಲ್ಲಿ ಭಕ್ತಿ ಪರವಶತೆಯಿಂದ ಕೂಡಿರುತ್ತಿದ್ದಳು. ಅವಳ ಭಕ್ತಿಗೆ ಮೆಚ್ಚಿದ ಬಿಳಿಗಿರಿರಂಗನು ಆಕೆಯನ್ನು ಮದುವೆಯಾಗಿ,ಸೋಲಿಗರಿಗೆ ಬಾವನಾಗಿ, ಕುಲದೇವನಾಗಿ ಆರಾದಿಸಲ್ಪಟ್ಟನು. ಬೆಟ್ಟದ ತುದಿಯಲ್ಲಿ ಹಳೆಯಕಾಲದ ಕೋಟೆಯೊಂದಿದೆ. ಇದನ್ನು ಕಂಚಿಕೋಟೆಯಂದು ಕರೆಯುತ್ತಾರೆ. ಈ ಕೋಟೆಯನ್ನು ಶಿವನ ಸಮುದ್ರದ ಗಂಗರಾಜನು ಕಟ್ಟಿಸಿದನೆಂಬುದಕ್ಕೆ ಐತಿಹಾಸಿಕ ಆಧಾರಗಳಿವೆ. ಬಿಳಿಗಿರಿ ಬೆಟ್ಟ ನೂರಾರು ವರ್ಷ ಗಂಗರ ಅಧೀನದಲ್ಲಿತ್ತು. ಗಂಗರಸರು ಬಿಳಿಗಿರಿರಂಗನನ್ನು ಆರಾಧಿಸುತ್ತಿದ್ದರು. ಸೋಲಿಗ ಒಕ್ಕಲಿಗರ ಆಚಾರ ವಿಚಾರ ಪದ್ಧತಿಗಳೆಲ್ಲಾ ಇತರ ಒಕ್ಕಲಿಗರಂತೆಯೇ ಇವೆ.

## ೧೦. ಕುಂಚಟಿಗ ಒಕ್ಕಲಿಗರು

ಒಕ್ಕಲಿಗ ಜನಾಂಗದ ಒಂದು ಅಂಗವಾದ ಕುಂಚಟಿಗ ಕೋಮಿನವರು ತುಮಕೂರು, ಚಿತ್ರದುರ್ಗ, ಮೈಸೂರು, ಶಿವಮೊಗ್ಗ, ಧಾರವಾಡ, ಹಾಸನ ಮತ್ತು ಬೆಂಗಳೂರು ಜಿಲ್ಲೆಗಳಲ್ಲಿ ಹೆಚ್ಚಾಗಿನೆಲಸಿದ್ದಾರೆ. ನೆರೆ ರಾಜ್ಯವಾದ ಆಂದ್ರಪ್ರದೇಶದ ಅನಂತಪುರ ಜಿಲ್ಲೆಯಲ್ಲಿಯೂ ಅವರ ವಾಸ್ತವ್ಯ ಬಹುವಾಗಿ ಕಂಡುಬರುತ್ತದೆ. ಐತಿಹಾಸಿಕ ಆಧಾರಗಳಿಂದ ಪರಿಶೀಲಿಸಿದಾಗ ಒಕ್ಕಲಿಗ ಜನಾಂಗದ ಇತರೆ ಕೋಮುಗಳಾದ ಗಂಗಟಿಕಾರರು ಮತ್ತು ಮೊರಸು ಒಕ್ಕಲಿಗರೊಂದಿಗೆ ಕುಂಚಟಿಗರ ಸಂಬಂಧವಿರುವುದು ವೇದ್ಯವಾಗುತ್ತದೆ. ಕುಂಚಟಿಗರಲ್ಲಿ ೪೮ ಉಪ ಪಂಗಡಗಳಿವೆ. ಗೌಡ ಮತ್ತು ರೆಡ್ಡಿ ಎಂಬ ಜಾತಿಸೂಚಕಗಳೊಂದಿಗೆ ತಮ್ಮ ಹೆಸರಿಟ್ಟುಕೊಂಡಿದ್ದಾರೆ. ಕುಂಚಟಿಗರ ಸಮಾಜಕ್ಕೆ ವ್ಯವಸ್ಥಿತವಾದ ಇತಿಹಾಸ ಪರಂಪರೆ ಇದೆ

**ಕುಂಚಟಿಕ ಶಬ್ದದ ಸ್ವರೂಪ**

೧. ಅರಸಿಕೆರೆ ಶಾಸನದಲ್ಲಿ (ಕಾಲ ಕ್ರಿ. ಶ. ೧೧೭೮) 'ಕುಂಚಟಿಗರು' (ಇದುಇದುವರೆಗೆ ಸಿಕ್ಕಿರುವ ಅತ್ಯಂತ ಪ್ರಾಚೀನರೂಪ) ಎಂಬ ಪದದ ಉಲ್ಲೇಖವಿದೆ.

೨. ಶ್ರೀರಂಗಪಟ್ಟಣದ ಹತ್ತಿರ ಇರುವ 'ಕರಿಘಟ್ಟದ ಶಾಸನ'ದಲ್ಲಿ (ಕಾಲ-೧೮೫೬) 'ಕುಂಚಟಿಗ' ಎಂದು ಪ್ರಯೋಗವಾಗಿದೆ,

೩. ರೆವರೆಂಡ ಡಾ. ಎಫ್.ಕಿಟ್ಟಲ್ ಅವರ ಶಬ್ದಕೋಶದಲ್ಲಿ-ಕುಂಚಟಿಗ ಕುಂಜಗ, ಕುಂಚವಡಿಗ, ಕುಂಚಿಗ-A Sudro ಎಂದು ನಮೂದಿಸಿದ್ದಾರೆ.

೪. ಮೈಸೂರು ಗೆಜೆಟಿಯರ್ Volume-1 ಪುಟ 247 ರಲ್ಲಿ ಪ್ರಕಟವಾದಕಾಲ-1927. Kunchigay-Kunchiti Okkalu ಎಂದು ನಮೂದಿಸಿದ್ದಾರೆ.

೫. ತುಮಕೂರ ಜಿಲ್ಲೆಯ ಮೈಸೂರು ಗೆಜೆಟಿಯರ ಪುಟ-೯೩ ರಲ್ಲಿ The Kunchitigay are also Kunchatti okkalu ಎಂದು ನಮೂದಿಸುದ್ದಾರೆ.

೬. ಚಿತ್ರದುರ್ಗ ಜಿಲ್ಲೆ ಮೈಸೂರು ಗೆಜಿಟಿಯರ ಪುಟ ೧೧೫ ರಲ್ಲಿ Kunchigay or kunchitigay ಎಂದಿದೆ.

೭. ಜೋಗೆಂದ್ರನಾಥ ಭಟ್ಟಾಚಾರ್ಯ, ಎಂ. ಎ. ಡಿ. ಎಲ್. ಅವರ Hindu Caste and Sects ಎಂಬ ಗ್ರಂಥದಲ್ಲಿ (ಕಾಲ ೧೯೮೬) ಕುಂಚಟಿಗೆ ಎಂದೇ ಪ್ರಯೋಗವಾಗಿದೆ.

೮. ಕುಂಚಟಿಗ = ಕುಂಚ + ಅಡಿಗ ಈ ಶಬ್ದಗಳಿಗೆ ಕಿಟ್ಟಲ್ ಕೊಡುವ

**ಅರ್ಥಗಳು :-**

ಕುಂಚ : Kuncha = ಕುಚ್ಚು a bunch, cluster resembling

fassel : abrushed weavey.

ಕುಚಿಗೆ = a whisk, a kind of fan or chowry. (ಸಂಸ್ಕೃತ-ಚಾಮರ, ತಮಿಳು ಮತ್ತು ಮಲೆಯಾಳಂ-ಕುಂಜ, ತೆಲಗು-ಕುಂಚ) ಅಡಿಗ-ಅಟಿಗ-ಅಣಿಗ-ಅಡಿಗ, a suffix denoting one who moves

in, plays with on employed or dabbles in.

ನೋಡಿ : ದೇವಾಡಿಗ, ಹೂವಾಡಿಗ, ಹಾವಾಡಿಗ, ಇತ್ಯಾದಿ. ಹೀಗೆ ಕುಂಚ ಮತ್ತು ಅಡಿಗ ಎರಡು ಶಬ್ದಗಳು ಸೇರಿ ಕುಂಚಟಿಗ ಎಂದಾಗಿರಬಹುದು.

ಕುಚಂಟಿಗ ಜನಾಂಗದ ಬಗೆಗಿರುವ ದಂತಕತೆಯ ಪ್ರಕಾರ ಕುರಿಗಾಹಿಯೊಬ್ಬನು ಈ ಜನಾಂಗದವರು, ದಕ್ಷಿಣಕ್ಕೆ ಬರುವಾಗ ಒಂದು ನದಿಯನ್ನು ದಾಟಲು ಸಹಾಯ ಮಾಡಿದನಂತೆ ಅವನ ಸ್ಮರಣಾರ್ಥವಾಗಿ ಅವನ ಮುಖ್ಯ ಸಾಧನವಾದ ಕುಂಚವನ್ನು ತಮ್ಮ ಕುಲದ ಸಂಕೇತವಾಗಿ ಬಳಸಿದರು. ಈ ಕಾರಣದಿಂದ ಕುಂಚಟಿಗ ಎಂದು ಹೆಸರು ಬಂದಿದೆ. ದಂತ ಕಥೆಯ ಈ ಅಂಶ ಕಿಟ್ಟಲ್ ಕೋಶದ ಮೇಲಿನ ನಿಷ್ಪತ್ತಿಗೆ ಹತ್ತಿರ ಬರುವಂತಿದೆ.

ಎರಡನೆಯದಾಗಿ ಕುಂಚ ಎಂದರೆ ಗೊಂಚಲು, ಗುಂಪು ಎಂದೂ, ಅಡಿಗ ಎಂದರೆ ಅದರಲ್ಲಿ ವ್ಯವಹರಿಸುವವನು ಸಂಚರಿಸುವವನು ಎಂದಾಗುವುದರಿಂದ ಕುಂಚಟಿಗ ಜನಾಂಗದವರು ಉತ್ತರದಿಂದ ದಕ್ಷಿಣಕ್ಕೆ ಗುಂಪುಗುಂಪಾಗಿ ಬಂದುದರಿಂದಲೂ ಈ ಹೆಸರು ಬಂದಿರಬಹು ಎಂದು ಊಹಿಸಬಹುದಾಗಿದೆ.

ಉತ್ತರ ಕರ್ನಾಟಕದಲ್ಲಿ ನೆಲೆಸಿರುವ ಕುಂಚಟಿಗ ಬಾಂಧವರನ್ನು 'ಕಾಮಟಿಗಳು' ಎಂದು ಕರೆಯುತ್ತಾರೆ. ಕಾಮಟಿ ಎಂದರೆ ವ್ಯವಸಾಯಗಾರರು, ಕೃಷಿ ಕಾರ್ಮಿಕರು ಆಗಿರುವುದರಿಂದ ಕಾಮಟಿಗಳೆಂದು ಕರೆಸಿಕೊಂಡಿದ್ದಾರೆ. ಕಮತ ಎಂದರೆ ಬೇಸಾಯ, ಕಮತದಿಂದಲೇ, ಕಾಮಟ ಎಂಬ ಶಬ್ದ ನಿಷ್ಪತ್ತಿಯಾಗಿರಬಹುದು ಎಂದು ಭಾವಿಸಲಾಗಿದೆ. ಕೆಂಪುನಾರಾಯಣನ ಐತಿಹಾಸಿಕ ಗ್ರಂಥವಾದ 'ಮುದ್ರಾಮಂಜೂಷ'ದಲ್ಲಿ 'ಕಾಮಟ' ಎಂಬ ಪದದ ಬಳಕೆ ಇದೆ. ತಮಿಳುನಾಡಿನ ನೀಲಗಿರಿಯಲ್ಲಿ ನೆಲೆಸಿರುವ ಕುಂಚಟಿಗರನ್ನು 'ಕೊಂಡಕಾವು' ಎಂದು ಕರೆಯಲಾಗುತ್ತಿದೆ.

**ಕುಂಚಟಿಗ ಜನಾಂಗದ ಇತಿಹಾಸ**

ಕುಂಚಟಿಗರ ಚರಿತ್ರೆಯನ್ನು ಅರಿಯಲು ನಮಗಿರುವ ಮೂಲಾಧಾರಗಳೆಂದರೆ ದಂತ ಕತೆಗಳು. ಈ ಜಾನಪದ ದಂತ ಕಥೆಗಳು ಬಾಯಿಂದ ಬಾಯಿಗೆ ಬಂದು ಜನ ಸಾಮಾನ್ಯರ ಸ್ವತ್ತಾಗಿದೆ.

**ಒಂದು ದಂತ ಕತೆ ಹೀಗದೆ :** ಉತ್ತರ ಭಾರತದಲ್ಲಿ, ಇಂದ್ರ ಪ್ರಸ್ಥದಲ್ಲಿ ಉಂಡೆವಿತ್ತರಾಯ ಎಂಬುವರೊಬ್ಬರಿದ್ದರು. ಅವರು ಜನ ಸಮುದಾಯದ ಮುಖಂಡರಾಗಿದ್ದರು. ಅವರಿಗೆ ಅತ್ಯಂತ ರೂಪವತಿಯಾದ ಕುವರಿಯಿದ್ದಳು. ಆ ಊರಿನ ತುರುಕರ ದೊರೆ ಅವಳನ್ನು ಮೋಹಿಸಿ ಮದುವೆಯಾಗಲು ಬಯಸಿದನು. ಅದಕ್ಕೊಪ್ಪದ ರಾಯರು ಅವನ ಕಾಟದಿಂದ ತಪ್ಪಿಸಿಕೊಳ್ಳಲು ಸಾಧ್ಯವಿಲ್ಲದ ಕಾರಣದಿಂದ ತಮ್ಮ ಜನ ಸಮುದಾಯದೊಡನೆ ಊರನ್ನು ತೊರೆದು ದಕ್ಷಿಣಾಭಿಮುಖವಾಗಿ ಹೊರಟರು. ನಡುವೆ ಗೋದಾವರಿ ನದಿ ಅಡ್ಡ ಬಂತು. ಏನೂ ಮಾಡಲು ತೋಚಲಿಲ್ಲ. ಆಗ ಅವರ ಜೊತೆಯಲ್ಲಿದ್ದ ಕುರುಗಾಹಿ ತನ್ನ ಹೆಸರನ್ನು ಸ್ಥಿರಪಡಿಸುವುದಾದರೆ, ನದಿಯನ್ನು ದಾಟಲು ಸಹಾಯ ಮಾಡುವುದಾಗಿ ಹೇಳಿದನು. ಈ ಕುರಿಗಾಹಿಯ ಹೆಸರು ಜಲದಿಬಪ್ಪರಾಯನೆಂದು. ರಾಯರು ಇದಕ್ಕೆ ಒಪ್ಪಿದರು. ಆಗ ಜಲದಿಬಪ್ಪರಾಯನು ತನ್ನ ತಲೆಯನ್ನು ಕಡಿದು ಅಂಗೈಯಲ್ಲಿ ಹಿಡಿದುಕೊಂಡು ಗೋದಾವರಿ ದೇವಿಗೆ ಆರತಿ ಬೆಳಗಿದನು. ಅವನ ಭಕ್ತಿಗೆ ಮೆಚ್ಚಿ ನದಿಯು ಇಬ್ಭಾಗವಾಯಿತು. ಜನ ಸಮುದಾಯದವರು ಸುರಕ್ಷಿತವಾಗಿ ಆಚೆ ದಡ ಸೇರಿದರು. ರಾಯರು ಕೊಟ್ಟ ಮಾತಿನಂತೆ ಜಲದಿಬಪ್ಪರಾಯನ ರುಂಡವಿಲ್ಲದ ಮುಂಡಕ್ಕೆ ತಮ್ಮ ಮಗಳನ್ನು ಕೊಟ್ಟು ವಿವಾಹ ಮಾಡಿದರು. ಇವರ ಸತ್ಯ ಧರ್ಮಗಳನ್ನು ಮೆಚ್ಚಿದ ಶಿವಪಾರ್ವತಿಯರು

ಪ್ರತ್ಯಕ್ಷರಾಗಿ, ಜಲದಿಬ್ಬರಾಯನನ್ನು ಪುನಃ ಬದುಕಿಸಿದರು. ಅನಂತರ ರಾಯರು ಆತನ ಬಳಿ ಇದ್ದ 'ಕುಂಚ' ಅಂದರೆ ಕಂಬಳಿಯ ನೆಯ್ಗೆಯಲ್ಲಿ ಉಪಯೋಗಿಸತಕ್ಕಂತಹ ಒಂದು ಸಾಧನವನ್ನೇ ಪವಿತ್ರವಾಗಿ ಮಾಡಿಕೊಂಡು ತಮ್ಮ ಜನಸಮುದಾಯಕ್ಕೆ 'ಕುಂಚಿಗರೆಂದು' ಕರೆದರು. ಇದು ಕೊಟ್ಟ ಮಾತಿನ ಸಂಕೇತಕ್ಕೆ ಸಂಸ್ಮರಣೆಯಾಗಿದೆ.

**೧೧. ಕೊಡಗು ಒಕ್ಕಲಿಗರು**

ಕೊಡಗು ನಾಡಿನಲ್ಲಿ ಕೊಡವರನ್ನು ಬಿಟ್ಟರೆ ಒಕ್ಕಲಿಗ ಜನಾಂಗದವರು ಬಹಳ ಸಂಖ್ಯೆಯಲ್ಲಿದ್ದಾರೆ. ಕ್ರಿ. ಶ. ೧೭೬೬ ರಲ್ಲಿ ಹೈದರಾಲಿ ಮತ್ತು ಟಿಪ್ಪು ಸುಲ್ತಾನರು ಕೊಡಗಿನಲ್ಲಿದ್ದ ಬಹಳ ಮಂದಿ ಯುವಕರನ್ನು ಬಲಾತ್ಕಾರದಿಂದ ಸೈನ್ಯಕ್ಕೆ ಸೇರಿಸಿಕೊಂಡರು ಹಾಗೂ ಕೆಲವರನ್ನು ಮತಾಂತರಗೊಳಿಸಿದರು. ಯುವ ಜನಾಂಗದ ಕೊರತೆಯಿಂದ ಕೊಡಗಿನಲ್ಲಿ ವ್ಯವಸಾಯ ಮಾಡುವವರಿಲ್ಲದೆ ಭೂಮಿ ಬಂಜರು ಬೀಡಾಯಿತು. ಕ್ರಿ. ಶ. ೧೮೦೦ರಲ್ಲಿ ದೊಡ್ಡವೀರ ರಾಜೇಂದ್ರನು ತನ್ನ ಸೇನಾನಾಯಕರನ್ನು ದಕ್ಷಿಣ ಕನ್ನಡ ಜಿಲ್ಲೆ, ಹಾಸನ, ಮೈಸೂರು ಪ್ರಾಂತ್ಯಗಳಿಗೆ ಕಳಿಸಿ ಹಳ್ಳಿಗೆ ೧೫ ಮಂದಿಯಂತೆ ಒಕ್ಕಲಿಗ ಜನಾಂಗದ ರೈತರನ್ನು ಬಲಾತ್ಕಾರದಿಂದ ಬರಮಾಡಿಕೊಂಡರು. ಹೀಗೆ ಬಂದವರಲ್ಲಿ ಹೆಚ್ಚಾಗಿ ನಾಗಮಂಗಲ, ಬೇಂಗುನಾಡು ಮತ್ತು ಮಡಿಕೇರಿ ತಾಲ್ಲೂಕಿನ ಕೆಲವು ಭಾಗಗಗಳಲ್ಲಿ ನೆಲೆಸಿದರು. ಇವರ ಮಾತೃಭಾಷೆ ಅರೆಗನ್ನಡ ಇವರು ಬಹುಬೇಗ ಅಲ್ಲಿನ ಪರಿಸ್ಥಿತಿಗಳಿಗೆ ಹೊಂದಿಕೊಂಡು ವ್ಯವಸಾಯವನ್ನು ಅಭಿವೃದ್ಧಿಪಡಿಸಿ ಕೊಡವರಿಗೆ ಆದರ್ಶಪ್ರಾಯರಾದರು. ಅವರ ಜನಸಂಖ್ಯೆ ಕ್ರಿ. ಶ. ೧೯೮೬ರಲ್ಲಿ ೩೦ ಸಾವಿರವಿತ್ತು. ಮೈಸೂರಿನಿಂದ ಬಂದ ಒಕ್ಕಲ ಗೌಡರು ಕೊಡಲಿಪೇಟೆ, ಸೋಮವಾರಪೇಟೆ ಹಾಗೂ ಕುಶಾಲನಗರಗಳಲ್ಲಿ ನೆಲೆಸಿದರು. ೧೯೫೨ರಿಂದ ಈ ಕೋಮಿನ ಜನರು ರಾಜಕೀಯ ಮತ್ತು ಆರ್ಥಿಕ ಕ್ಷೇತ್ರಗಳಲ್ಲಿ ಬಹಳ ಮುಂದುವರಿದಿದ್ದಾರೆ.

ಕೊಡಗು ರಾಜರ ಕಾಲದಲ್ಲಿ ಪುತ್ತೂರು ಅಮರಸೂಳ್ಯ ಕೊಡಗಿಗೆ ಸೇರಿದ್ದವು. ಬ್ರಿಟೀಷರು ಬಂದ ತರುವಾಯ ಈ ಪ್ರಾಂತ್ಯಗಳು ದಕ್ಷಿಣ ಕನ್ನಡ ಜಿಲ್ಲೆಯಲ್ಲಿದ್ದ ಒಕ್ಕಲಿಗ ಗೌಡರುಗಳನ್ನು ಪುನಃ ಕೊಡಗಿಗೆ ಬಂದು ನೆಲೆಸುವಂತೆ ಮಾಡಿದರು. ಸೋಮವಾರಪೇಟೆ, ಕೊಡ್ಲಿಪೇಟೆ, ಶನಿವಾರ ಸಂತೆ ಪ್ರಾಂತ್ಯಗಳಲ್ಲಿರುವ ಒಕ್ಕಲಿಗ ಗೌಡರು ಮೈಸೂರಿನಿಂದ ಬಂದವರು. ಅಮ್ಮತ್ತಿ, ಪೊನ್ನಂಪೇಟೆ, ಹಾತೂರು, ಶ್ರೀಮಂಗಲ ಮುಂತಾದ ಪ್ರದೇಶಗಳಲ್ಲಿ ವಾಸಮಾಡುವ ಒಕ್ಕಲಿಗ ಗೌಡರು ಹಾಸನ ಜಿಲ್ಲೆಯಿಂದ ಬಂದವರು. ಕೊಡಗಿನಲ್ಲಿ ಬಹಳಷ್ಟು ಮಂದಿ ತಿರುಪತಿ ವೆಂಕಟರಮಣನ ಭಕ್ತರು. ಶಿವ ಭಕ್ತರೂ ಇದ್ದಾರೆ. ೧೯೫೬ರಲ್ಲಿ ಕೊಡಗು ವಿಶಾಲ ಮೈಸೂರು ರಾಜ್ಯಕ್ಕೆ ವಿಲೀನಗೊಂಡಾಗ ಕೊಡಗಿನ ಒಕ್ಕಲಿಗರು ಕರ್ನಾಟಕದ ತಮ್ಮ ಒಕ್ಕಲಿಗರ ಜೊತೆ ವಿವಾಹ ಸಂಬಂಧವನ್ನು ಬೆಳೆಸಿ ಅವರೊಂದಿಗೆ ಸೇರಿಕೊಳ್ಳುವುದನ್ನು ಆರಂಭಿಸಿದರು. ಕೊಡಗಿನಲ್ಲಿ ಹೈದರಾಲಿ ಮತ್ತು ದೊಡ್ಡವೀರ ರಾಜೇಂದ್ರನ ಕಾಲದಲ್ಲಿ ಹಾಸನ ಮತ್ತು ಮೈಸೂರಿನಿಂದ ಹೋಗಿ ನೆಲೆಸಿದವರಿಗಿಂತಲೂ ಮುಂಚೆಯೇ ಒಕ್ಕಲಿಗರಿದ್ದರು.

ಕೊಡಗು ಪ್ರಾಚೀನ ಕಾಲದಲ್ಲಿಯೇ ತಲಕಾಡು ಗಂಗರಸರ ಆಧಿಪತ್ಯಕ್ಕೆ ಸೇರಿತ್ತು. ನಾವಿಂದಿಗೂ ಕೊಡಗಿನಲ್ಲಿ ಗಂಗರಸರ ಅನೇಕ ಶಾಸನಗಳನ್ನು ನೋಡಬಹುದು. ಕೊಡಗಿನ ಖಜಾನೆಯಲ್ಲಿ ಗಂಗರಸರ ತಾಮ್ರ ಶಾಸನಗಳನ್ನು ಸುರಕ್ಷಿತವಾಗಿಟ್ಟಿದ್ದಾರೆ. ಆದ್ದರಿಂದ ಈ ಶಾಸನಗಳನ್ನು ಖಜಾನೆ ಶಾಸನಗಳೆನ್ನುತ್ತಾರೆ. ೪, ೫ ನೇಯ ಶತಮಾನದಲ್ಲಿ ಗಂಗರಸರು ಕೊಡಗು ನಾಡನ್ನು ಆಳುತ್ತಿದ್ದಾಗ ಗಂಗರಸರ ಸಂಬಂಧಿಕರಲ್ಲಿ ಒಬ್ಬ ಗೌಡನ ಸೊಸೆಯಾದ ಮಹಾಪತಿವ್ರತೆ ಹೊನ್ನಮ್ಮನ ಕಥೆ ಜಾನಪದ ಸಾಹಿತ್ಯದಲ್ಲಿ ಬರುತ್ತದೆ.

**ಹೊನ್ನಮ್ಮನ ಕೆರೆ**

ಕೊಡಗು ಜಿಲ್ಲೆಯು ಅಂದು ಗಂಗರಸರ ಆಳ್ವಿಕೆಯಲ್ಲಿತ್ತು. ದೇಶವು ಸುಭಿಕ್ಷವಾಗಿ ಕಂಗೊಳಿಸುತ್ತಿತ್ತು. ಗಂಗರಸರ ಸಂಬಂಧಿಕರನೇಕರು ಕೊಡಗು ಜಿಲ್ಲೆಯ ಪ್ರತಿನಿಧಿಗಳಾಗಿ ಕೆಲವು ಪ್ರಾಂತಗಳನ್ನು ಪರಿಪಾಲಿಸುತ್ತಿದ್ದರು. ಹಾನನಹಳ್ಳಿ ಗ್ರಾಮದ ಸುತ್ತಲೂ ವಿಶಾಲವಾದ ಬಯಲು ಪ್ರದೇಶ, ತೆಂಗು, ಕಂಗು, ಬಾಳೆ, ಹಲಸು, ಮಾವು, ಮುಂತಾದ ಫಲವೃಕ್ಷಗಳಿಂದಲೂ, ಹುಲುಸಾಗಿ ಬೆಳೆದಿರುವ ಧಾನ್ಯಗಳ ಹೊಲಗದ್ದೆಗಳಿಂದಲೂ, ತೋಟಗಳಿಂದಲೂ ಆವೃತವಾಗಿರುವ ಆ ಗ್ರಾಮಕ್ಕೆ ಬರವೆಂದರೇನೆಂದು ತಿಳಿಯದಾಗಿತ್ತು. ಆ ಗ್ರಾಮಕ್ಕೆ ನಾಡಗೌಡನೊಬ್ಬ ನಾಯಕನಾಗಿದ್ದ. ಈತನು ಗಂಗರಸರಿಗೆ ಸಾಮಂತನಾಗಿದ್ದು ಕೋಟೆ, ಅರಮನೆಗಳನ್ನು ಕಟ್ಟಿಕೊಂಡಿದ್ದನು. ಸುತ್ತಮುತ್ತಲ ಪ್ರಾಂತಗಳಿಗೆ ಆದರ್ಶ ಪ್ರಾಯನಾಗಿ ಪ್ರಜೆಗಳನ್ನು ಪಾಲಿಸುತ್ತಾ, ಪರೋಪಕಾರಿಯಾಗಿ, ಸದಾ ದೇಶ ಹಾಗೂ ಜನರ ಹಿತವನ್ನೇ ಬಯಸುತ್ತಿದ್ದನು. ಗೌಡನ ನಿಷ್ಕಳಂಕ ದೇಶ ಪ್ರೇಮಕ್ಕೆ, ಆಡಳಿತಕ್ಕೆ ಮೆಚ್ಚಿ ವಿಶೇಷ ಬಿರುದು ಬಾವಲಿಗಳನ್ನು, ಹಗಲ ದೀವಟಿಕೆ, ಅಡ್ಡಪಲ್ಲಕ್ಕಿ, ಚಕ್ರಪಕ್ಕಾಡಿ, ಖಡ್ಗ, ಆನೆ, ಕುದುರೆಗಳನ್ನು ಬಹುಮಾನವಾಗಿ ಅವನ ಅರಸರು ಕೊಟ್ಟಿದ್ದರು. ಯುದ್ಧ ಸಂಭವಿಸಿದಾಗ ಗೌಡನು ತನ್ನ ಪರಿವಾರದೊಂದಿಗೆ ವೀರಾವೇಶದಿಂದ ಹೋರಾಡಿ ದೊರೆಗೆ ಸಹಾಯ ಮಾಡುತ್ತಿದ್ದನು.

ಗೌಡನಿಗೆ ಒಂಬತ್ತು ಮಂದಿ ಗಂಡು ಮಕ್ಕಳು, ಎಂಟು ಮಂದಿಗೆ ಮದುವೆಯಾಗಿತ್ತು. ಎಂಟನೆಯವನ ಹೆಸರು ಶಿವಯ್ಯ. ಈತ ಕೆಚ್ಚೆದೆಯ ಮಹಾವೀರ, ಈತನ ಹೆಂಡತಿ ನೆರೆಯೂರಿನ ಗೌಡನ ಮಗಳು, ಮಹಾಪತಿವ್ರತೆ, ಅಸಮಾನ್ಯ ರೂಪವತಿ, ಅತ್ತೆ ಮಾವಂದಿರಿಗೆ, ಭಾವಂದರಿಗೆ ಈಕೆಯ ಮೇಲೆ ಬಹಳ ಅಭಿಮಾನ, ಮೈದುನ ಬಸವೇಗೌಡನಿಗೆ ಅತ್ತಿಗೆ ಎಂದರೆ ಮಾತೃ ಪ್ರೇಮ, ಹಾಲಿನಂತಹ ಸಂಸಾರ, ಯಾವ ಜನ್ಮದ ಸುಕೃತ ಫಲವೋ ಆ ಸಂಸಾರ ನೆಮ್ಮದಿಯಿಂದ ಬಾಳುತ್ತಿತ್ತು. ಹೀಗೆ ನೆಮ್ಮದಿಯಿಂದ ಬಾಳುತ್ತಿರುವ ಸಮಯದಲ್ಲಿ ಅನಿರೀಕ್ಷಿತವಾಗಿ ರಾಜ್ಯಕ್ಕೆ ಯುದ್ಧವು ಬಂದೊದಗಿತು. ಸುತ್ತಮುತ್ತಲ ಯುವಜನಾಂಗವನ್ನು ಕೂಡಿಹಾಕಿ ಯುದ್ಧಕ್ಕೆ ಬಂದು ದೇಶವನ್ನು ಕಾಪಾಡಲು ಅರಸನಿಂದ ಓಲೆಯು ಬಂದಿತು. ಮುದುಕನಾದ ತಂದೆಯಿಂದ ಯುದ್ಧಕ್ಕೆ ಅನುಮತಿಯನ್ನು ಕೇಳಿದನು. ಊರಿನ ಮುಖಂಡರು ಮತ್ತು ವೀರ ಪುರುಷನಾದ ಶಿವಯ್ಯ ಯುದ್ಧಕ್ಕೆ ಹೋಗಲು ಅನುಮತಿಯಿತ್ತನು.

ಗೊತ್ತಾದ ದಿನ ಸುತ್ತಮುತ್ತಲ ಗ್ರಾಮಗಳಿಂದ ಸಾವಿರಾರು ಮಂದಿ ತರುಣರು ಶಿವಯ್ಯಗೌಡನ ಜೊತೆಯಲ್ಲಿ ಯುದ್ಧಕ್ಕೆ ಹೋಗಲು ಸಿದ್ಧರಾಗಿ ಬಂದರು, ದೇವಸ್ಥಾನದಲ್ಲಿ ವಿಶೇಷ ಪೂಜೆಯನ್ನು ಮಾಡಿ ಎಲ್ಲರಿಗೂ ತೀರ್ಥ ಪ್ರಸಾದವನ್ನು ಹಂಚಿದರು. ಗಂಡನು ದಂಡನಾಯಕನಾಗಿ ಹೋಗುವ ಸಮಯದಲ್ಲಿ ಹೊನ್ನಮ್ಮ ಆರತಿ ಎತ್ತಿ ತಿಲಕವಿಟ್ಟು, ವಿಜಯಮಾಲೆಯನ್ನು ಕೊಂಡು ಬನ್ನಿರೆಂದು ಹಾರೈಸಿದಳು. ಒಂಬತ್ತು ತಿಂಗಳು ಪೂರ್ಣ ಗರ್ಭಿಣಿಯಾದ ಹಂಡತಿಯನ್ನೇ ಒಂದೆರಡು ಕ್ಷಣ ನೋಡಿ, ತಾಯಿ ತಂದೆ, ಅಣ್ಣಂದಿರಿಗೆ ನಮಸ್ಕರಿಸಿ ಕುದುರೆಯೇರಿ ದಂಡಿನೊಡನೆ ಹೊರಟುಹೋದನು. ಕೆಲವು ದಿನಗಳಲ್ಲಿ ಹೊನ್ನಮ್ಮ ಗಂಡು ಮಗನಿಗೆ ಜನ್ಮವಿತ್ತಳು. ಮೊಮ್ಮಗನನ್ನು ಪಡೆದ ಗೌಡನು ಸಂತೋಷದಿಂದ ಊರಿಗೆಲ್ಲಾ ಔತಣವನ್ನೇರ್ಪಡಿಸಿದನು.

ಯುದ್ಧಕ್ಕೆ ಹೋದ ಶಿವಯ್ಯಗೌಡರು ಎರಡು ವರ್ಷವಾದರೂ ಮರಳಲಿಲ್ಲ. ಗಂಗರಸರ ಭೀಕರ ಹೋರಾಟ ಹಲವಾರು ವರ್ಷಗಳಾದರೂ ನಿಲ್ಲಲಿಲ್ಲ. ದಂಡಿಗೆ ಹೋದ ಊರ ತರುಣರು ಮರಳಿ ಬಾರದ ಕಾರಣ ವ್ಯವಸಾಯ

ಮಾಡುವವರಿಲ್ಲದೆ ಧಾನ್ಯದ ಕಣಜಗಳು ಬರಿದಾಗಿ ಮುಂದೇನು ಗತಿಯೆಂದು ವೃದ್ಧಜನಾಂಗ ಚಿಂತಿಸಿತು. ಎರಡು ವರ್ಷ ಮಳೆಯೂ ಆಗಲಿಲ್ಲ. ಬೆಳೆಯು ಇದರಿಂದ ಕೈಗೆ ಸಿಗಲಿಲ್ಲ.

ಗ್ರಾಮಸ್ಥರೆಲ್ಲರೂ ಗೌಡನ ಬಳಿಗೆ ಬಂದು ಹೊಸ ಕೆರೆಯೊಂದನ್ನು ಕಟ್ಟಿಸಬೇಕೆಂದು ಕೇಳಿಕೊಂಡರು. ಈಗಾಗಲೇ ಬರದ ಬವಣೆಯಿಂದ ಬೆಂದಿದ್ದ ಪ್ರಜೆಗಳಿಗೆ ತನ್ನಲಿದ್ದ ಸಂಪತ್ತೆಲ್ಲವನ್ನೂ ಹಂಚಿದ್ದ ಗೌಡರು ಊರವರ ಸಹಕಾರದಿಂದ ಹೊಸ ಕೆರೆಯನ್ನು ತೋಡಿಸಲು ನಿಪುಣರಾದ ನೀರೊಡ್ಡರನ್ನು ಕರೆಯಿಸಿ ಕೆಲಸವನ್ನು ಪ್ರಾರಂಭಿಸಿದನು. ನೂರಾರು ಜನರು ತಿಂಗಳುಗಟ್ಟಲೆ ಕೆಲಸ ಮಾಡಿದ ಮೇಲೆ ಗಂಗೆಯು ಕರುಣಿಸಿದಂತೆ ಕಾಣಿಸಿತು. ಕೆರೆಯನ್ನು ನೋಡಲು ಬಂದು ಹೋಗುತ್ತಿದ್ದ ಹೆಂಗಸರನ್ನು ಕೆಲಸಗಾರರ ಮುಖಂಡನಾದ ಮಣ್ಣೊಡ್ಡನು ಕಾಮುಕ ದೃಷ್ಟಿಯಿಂದ ನೋಡುತ್ತಿದ್ದನು. ಒಂದು ದಿನ ಗೌಡರ ಕಿರಿಯ ಸೊಸೆ ಹೊನ್ನಮ್ಮನ ಮೇಲೆ ಅವನ ವಕ್ರದೃಷ್ಟಿ ಬಿದ್ದಿತು. ಆಕೆಯ ಸೌಂದರ್ಯ ಅವನನ್ನು ಹುಚ್ಚು ಹಿಡಿಸಿತು. ಅವಳ ಅಂಗಸುಖವನ್ನು ಪಡೆಯಲು ಕನಸು ಕಾಣುತ್ತಿದ್ದನು. ಒಂದು ದಿನ ಶುಕ್ರವಾರ ಸಂಜೆ ಹೊನ್ನಮ್ಮನು ದೇವಸ್ಥಾನಕ್ಕೆ ಹೋಗಿ ಮನೆಗೆ ವಾಪಸ್ಸು ಹೋಗುತ್ತಿದ್ದಳು. ಜೊತೆಯಲ್ಲಿ ಬಂದಿದ್ದ ಹೆಂಗಸರು ಮುಂಚೆಯೇ ಹೊರಟು ಹೋಗಿದ್ದರು. ಒಬ್ಬಂಟಿಗಳಾಗಿ ಬರುತ್ತಿದ್ದ ಹೊನ್ನಮ್ಮಳನ್ನು ನೋಡಿದ ಮಣ್ಣೊಡ್ಡನು ಆಕೆಯನ್ನು ವಶಪಡಿಸಿಕೊಳ್ಳಲು ಪ್ರಯತ್ನಿಸಿದನು. ಚತುರೆಯೂ ಸಾಹಸಿಯೂ ಆದ ಆಕೆ ಆತನಿಂದ ತಪ್ಪಿಸಿಕೊಂಡು ಮನೆ ಸೇರಿದಳು. ನಿರಾಶನಾದ ಮಣ್ಣೊಡ್ಡನು ಕೆರೆಯ ಕೆಲಸವನ್ನು ನಿಲ್ಲಿಸಿ ಹೇಗಾದರೂ ಮಾಡಿ ಹೊನ್ನಮ್ಮನ ಮೇಲೆ ಸೇಡು ತೀರಿಸಿಕೊಳ್ಳಬೇಕೆಂದು ನಿಶ್ಚಯಿಸಿದನು, ಗೌಡರು ಕೆರೆಯ ಕೆಲಸ ನಿಲ್ಲಿಸಲು ಕಾರಣವನ್ನು ಕೇಳಲಾಗಿ ನೀರಿನ ಬುಗ್ಗೆಯು ಸಿಗಬೇಕಾದರೆ ನರಬಲಿಯನ್ನು ಕೊಡಬೇಕು. ಅದೂ ಎಂಟನೆಯ ಮಗನಾಗಿ ಹುಟ್ಟಿದವನ ಹೆಂಡತಿಯೇ ಆಗಬೇಕು. ಹಾಗೂ ಒಂದು ಮಗುವಿನ ತಾಯಿಯಾಗಿರಬೇಕು. ಎಂದನು, ನರಬಲಿಯ ವಿಚಾರವನ್ನು ಕೇಳಿದ ಗೌಡನು ಬಹಳ ಚಿಂತಾಕ್ರಾಂತನಾದನು. ಎಂಟನೆಯ ಮಗನ ಹೆಂಡತಿಯೆಂದರೆ ತನ್ನ ಸೊಸೆ ಹೊನ್ನಮ್ಮನನ್ನು ಬಲಿಕೊಡಬೇಕೆ? ಎಂದು ಯೋಚಿಸುತ್ತಾ ನಿದ್ರಾಹಾರಗಳನ್ನು ತೊರೆದು ಹಾಸಿಗೆ ಹಿಡಿದನು. ಮಾವನ ಚಿಂತೆಗೆ ಕಾರಣವನ್ನರಿತ ಸೊಸೆಯಂದಿರು ಮಹಾಪತಿವ್ರತೆಯೂ, ರೂಪವತಿಯೂ, ಒಂದು ಗಂಡು ಮಗುವಿನ ತಾಯಿಯೂ ಮಹಾ ಪರಾಕ್ರಮಿಯಾದ ತನ್ನ ಪುತ್ರ ಶಿವಯ್ಯಗೌಡನ ಪತ್ನಿಯೂ ಆದ ಹೊನ್ನಮ್ಮನನ್ನು ಬಲಿಕೊಡಬೇಕೆ? ಮಾವನಾದ ನನಗೇನು ಅಧಿಕಾರವಿದೆ ಅವಳನ್ನು ಬಲಿಕೊಡಲು? ಅವಳ ಗಂಡ ಯುದ್ಧದಿಂದ ಬಂದರೆ ಏನೆಂದು ಉತ್ತರಿಸಲಿ ಎಂದು ಚಿಂತಿಸಿ ವ್ಯಾಧಿಗ್ರಸ್ತನಾಗಿ ಹಾಸಿಗೆ ಹಿಡಿದನು. ಈ ಕಡೆ ಮಣ್ಣೊಡ್ಡ ಕೆರೆಯ ಬಲಿ ಬಂದು ಹೋಗುವ ಗ್ರಾಮಸ್ಥರಿಗೆಲ್ಲಾ ಗೌಡನ ಬಗ್ಗೆ ಇಲ್ಲ ಸಲ್ಲದ ಅಪಪ್ರಚಾರಗಳನ್ನು ಮಾಡುತ್ತಿದ್ದ. ಸಾವಿರಾರು ಜನರ ಪ್ರಾಣ ಉಳಿಸುವುದಕ್ಕಿಂತ ಆತನ ಸೊಸೆಯ ಪ್ರಾಣವೇ ಹೆಚ್ಚಾಗಿದೆ. ತನ್ನ ಮಗನಿಗೆ ಹೆದರಿ ಹಿಂಜರಿಯುತ್ತಿದ್ದಾನೆ. ಹೆಣ್ಣುಗಳಿಗೇನು ಬರ, ಒಂದಲ್ಲದಿದ್ದರೆ ಹತ್ತಾದರೂ ತಂದು ಮದುವೆ ಮಾಡಬಹುದು ಮಗನಿಗೆ ಎಂದು ಹೇಳಿಕೊಳ್ಳುತ್ತಿದ್ದ. ಗ್ರಾಮಸ್ಥರು ಮಣ್ಣೊಡ್ಡನ ಮಾತಿಗೆ ಕಿವಿ ಗೊಟ್ಟು ಗುಸುಗುಸು ಮಾತಾಡಿಕೊಳ್ಳುತ್ತಿದ್ದರು. ಗೌಡನ ಸೊಸೆಯಂದಿರ ಕಿವಿಗಳಿಗೆ ಈ ಮಾತುಗಳು ಬಿದ್ದು ಗ್ರಾಮಸ್ಥರು ಆಡಿಕೊಳ್ಳುತ್ತಿದ್ದ ಮಾತುಗಳನ್ನ ತಮ್ಮ ಗಂಡಂದಿರಿಗೆ ತಿಳಿಸಿದರು. ಆದರೆ ಶಿವಯ್ಯಗೌಡನ ಏಳು ಮಂದಿ ಅಣ್ಣಂದಿರು ತಂದೆಗೆ ಹೆದರಿ, ಊರಿನವರಿಗೆ ಯಾವ ಉತ್ತರವನ್ನೂ ಕೊಡದೆ ತಟಸ್ಥರಾಗಿದ್ದರು. ಈ ವಿಚಾರ ಮಹಾಸತಿ ಹೊನ್ನಮ್ಮನಿಗೆ ತಿಳಿದು ಮಗನನ್ನು ಎದೆಗವಚಿಕೊಂಡು ಗೋಳೋ

ಎಂದು ಅತ್ತಳು. ತನ್ನ ಪತಿ ಯುದ್ಧದಿಂದ ಇಂದಲ್ಲ ನಾಳೆ ಬರಬಹುದೆಂದು ಕಾದು ಸುಸ್ತಾದಳು. ಯುದ್ಧ ತೀರಲಿಲ್ಲ. ಪತಿರಾಯ ಬರಲಿಲ್ಲ. ಗ್ರಾಮಸ್ಥರ ಮಾತುಗಳು ಗೌಡನ ಕಿವಿಗೆ ಚುಚ್ಚುವಂತಾದವು. ನಿದ್ರೆಯಿಲ್ಲದೆ ರಾತ್ರಿಯೆಲ್ಲಾ ಕುಳಿತು ಯೋಚಿಸಿದ, ಕೊನೆಗೆ ಸೊಸೆಯನ್ನು ಬಲಿಕೊಡಲು ನಿರ್ಧರಿಸಿದ. ಊರು ಉಳಿಯ ಬೇಕಾದರೆ ಸೊಸೆಯನ್ನು ಬಲಿಕೊಡಲೇಬೇಕು. ಸೊಸೆಯ ಮೇಲಿನ ಮಮಕಾರದಿಂದ ಪ್ರಜೆಗಳ ಕಷ್ಟಕ್ಕೆ ನೆರವಾಗದಿದ್ದರೆ ನಾನೆಂತಹ ನಾಯಕ, ಸೊಸೆ ಹೊನ್ನಮ್ಮನ ಗಂಡ ಯುದ್ಧಕ್ಕೆ ಹೋದವನು ಮರಳಿ ಬರುವನೋ ಇಲ್ಲವೋ ತಿಳಿದವರಾರು? ಎಂದು ಅನೇಕ ಬಗೆಯಾಗಿ ಚಿಂತಿಸಿದನು, ಬಲಿಕೊಡುವ ದಿನ ಅತ್ತೆಯು ಬಂದು ಹೊನ್ನಮ್ಮನಿಗೆ ಅವಳು ಮದುವೆಯಲ್ಲಿ ಉಟ್ಟಿದ್ದ ಪಟ್ಟೆ ಸೀರೆ, ಚಿನ್ನದ ಆಭರಣಗಳನ್ನು ತೊಡಿಸಿ, ಹಣೆಗೆ ಕುಂಕುಮವನ್ನು ಇಟ್ಟು, ಚಿನ್ನದ ಕೊಡವನ್ನು ಕೊಟ್ಟು 'ಹೊಸಕೆರೆಗೆ ಹೋಗಿ ನೀರು ತರಲು ನಿನ್ನ ಮಾವ ಹೇಳಿದ್ದಾರೆ, ಹೋಗಮ್ಮ' ಎಂದಳು. ತನ್ನ ಅಳಿಗಾಲ ಬಂದಿತೆಂದು ನಿಶ್ಚಯಿಸಿದ ಆ ಮಹಾಸಾಧ್ವಿ ನಿದ್ರಿಸುತ್ತಿದ್ದ ಮಗನನ್ನು ದುಃಖದಿಂದ ನೋಡಿ, 'ಅಳಬೇಡ, ಸುಖವಾಗಿ ನಿದ್ರಿಸು ಮಗನೇ! ನಿನ್ನ ತಂದೆ ಯುದ್ಧದಿಂದ ಬರುವವರೆಗೂ ನಿನಗೆ ಎಚ್ಚರವಾಗದಿರಲಿ, ಅಲ್ಲಿಯವರೆಗೂ ನಿನ್ನ ತೊಟ್ಟಿಲು ತೂಗುತ್ತಿರಲಿ, ಹಾಕಿದ ಬಾಗಿಲು ನನ್ನ ಪತಿರಾಯ ಬರುವವರೆಗೂ ತೆಗೆಯದಿರಲಿ' ಎಂದು ಹೇಳಿ ಹೊಸಿಲ ಬಳಿಗೆ ಬಂದಳು. ಮೈದುನ ಬಸವಯ್ಯ ಅತ್ತಿಗೆ ಕಾಲಿಗೆ ಬಿದ್ದು ಬಿಕ್ಕಿ ಬಿಕ್ಕಿ ಅತ್ತ. 'ಹೊಸಕೆರೆಗೆ ನೀರಿಗೆ ಹೋಗುತ್ತಿದ್ದೇನೆ, ಅಳಬೇಡ' ಎಂದು ಅವನನ್ನು ಸಂತೈಸಿ ಕೆರೆಯ ಕಡೆ ಹೊರಟಳು.

ಮುಸ್ಸಂಜೆಯಾಗುತ್ತಿತ್ತು. ಹೊಸಕೆರೆಯ ಬಳಿ ಗ್ರಾಮದ ಜನರು ಬಲಿಗಾಗಿ ಬರುವ ವ್ಯಕ್ತಿಯನ್ನು ಕಾಯುತ್ತಾ ನಿಂತಿದ್ದರು. ದೇವತೆಯಂತೆ ವಸ್ತ್ರಾಭರಣ ಭೂಷಿತಳಾಗಿ ಬರುತ್ತಿದ್ದ ಹೊನ್ನಮ್ಮನನ್ನು ನೋಡಿ ಜನ ಭಯ ವಿಸ್ಮಿತರಾಗಿ ನೋಡುತ್ತಾ ನಿಂತರು.

ಮಣ್ಣೊಡ್ಡ ಇಂತಹ ಸುಂದರ ಶರೀರವನ್ನು ಅನುಭವಿಸುವ ಸುಯೋಗ ದೊರೆಯಲಿಲ್ಲ. ಆದರೂ ಸೇಡನ್ನು ತೀರಿಸಿಕೊಂಡನೆಂಬ ಸಂತೋಷದಿಂದ ಇದ್ದ. ಗೌಡರು ಉಕ್ಕಿ ಬರುವ ದುಃಖದಿಂದ 'ನೀರಿಗಾಗಿ ಹೊಸಕೆರೆಯ ಮೆಟ್ಟಿಲನ್ನು ಇಳಿಯಮ್ಮ' ಎಂದರು, ಹೊನ್ನಮ್ಮ ಒಂದು ಮೆಟ್ಟಿಲಿಳಿದಳು. ನೀರು ಕಾಲನ್ನು ತೊಯ್ದವು. ಒಂದೊಂದೇ ಮೆಟ್ಟಿಲನ್ನು ಇಳಿದ ಹೊನ್ನಮ್ಮ ಗಂಗೆಯಲ್ಲಿ ಮರೆಯಾದಳು, ಕೋಪದಿಂದಲೋ, ಮಹಾಸತಿ ಹೊನ್ನಮ್ಮನ ಪಾತಿವ್ರತ್ಯದಿಂದಲೋ ಗಂಗೆ ಉಕ್ಕಿ ಮೇಲೇರಿದಳು, ಹೊನ್ನಮ್ಮ ಕೆರೆಗೆ ಬಲಿಯಾದಳು. ಅಂದಿನಿಂದ ಆ ಕೆರೆಗೆ ಹೊನ್ನಮ್ಮನ ಕೆರೆ ಎಂದು ಹೆಸರಾಯಿತು.

ಮಣ್ಣೊಡ್ಡ ಕೆರೆಯನ್ನು ಪೂರ್ತಿಗೊಳಿಸಿದ. ಹೊನ್ನಮ್ಮನ ಕೆರೆಯಲ್ಲಿ ಸಾಕಷ್ಟು ನೀರು ಬಂದು ಜನರ ಕಷ್ಟಗಳು ತೀರಿದವು. ದೇಶ ಸುಭಿಕ್ಷವಾಗಿತ್ತು. ಯುದ್ಧಕ್ಕೆ ಹೋದ ಶಿವಣ್ಣಗೌಡನು ವಿಜಯಿಯಾಗಿ ಬಿರುದು ಬಾವಲಿಗಳೊಂದಿಗೆ ಹಿಂದಿರುಗಿದ. ಮರಳಿ ಬಂದ ತರುಣರ ತಂದೆತಾಯವರು ಸಂತಸದಿಂದ ತಮ್ಮ ಮಕ್ಕಳನ್ನು ಬರಮಾಡಿಕೊಂಡರು. ಶಿವಯ್ಯಗೌಡನು ಮನೆಗೆ ಬರಲು ಯಾರೂ ಸ್ವಾಗತಿಸದಿರಲು ಅಚ್ಚರಿಯುಂಟಾಯಿತು. ತನ್ನ ತಂದೆ ತಾಯಿಗಳೇನಾದರೂ ತೊಂದರೆಗೀಡಾದರೋ ಅಥವಾ ಪರರಾಜರಿಂದ ಗ್ರಾಮವು ಸಂಕಷ್ಟಕ್ಕೀಡಾಯಿತೋ, ಇಲ್ಲ ನನ್ನ ಹೆಂಡತಿ ಮಕ್ಕಳೇನಾದರೋ ಎಂದು ನಾನಾ ರೀತಿ ಅನುಮಾನಿಸಿ ಗ್ರಾಮಸ್ಥರನ್ನು ಕೇಳಲು ಯಾರೂ ಏನೂ ಹೇಳಲಿಲ್ಲ. ಕುದುರೆಯಿಂದಿಳಿದು ಅರಮನೆ ಪ್ರವೇಶಿಸಿದ. ದಾಸದಾಸಿಯರು ಈತನಿಗೆ ಮುಖ ತೋರಿಸದೆ

ಕಂಬಗಳ ಮರೆಯಲ್ಲಿ ಅವಿತುಕೊಂಡರು. ತಂದೆ ತಾಯಿಗಳ ಕೊಠಡಿಗೆ ಹೋಗಿ 'ಅಪ್ಪಾಜಿ' 'ಅಮ್ಮಾ' ಎಂದು ಕರೆದ. ಸೊಸೆಯ ಚಿಂತೆಯಲ್ಲಿ ಅನೇಕ ದಿನಗಳಿಂದ ಹಾಸಿಗೆ ಹಿಡಿದಿದ್ದ ಅವರಿಗೆ ಉತ್ತರಿಸಲು ತ್ರಾಣವಿರಲಿಲ್ಲ. ಅಣ್ಣ ಅತ್ತಿಗೆಯರನ್ನು ಕರೆದ. ಹೆಂಡತಿಯನ್ನು ಕರೆದ. ಯಾರೂ ಬರಲಿಲ್ಲ. ಅರಮನೆಯಲ್ಲೆಲ್ಲಾ ಹುಚ್ಚನಂತೆ ಹೊನ್ನ, ಹೊನ್ನಾ ಎಂದು ಕರೆದ. ಕೆದರಿದ ಕೂದಲಿನಿಂದ ಕೂಡಿ ಅತ್ತಿಗೆಗೋಸ್ಕರ ಅನ್ನಹಾರಗಳನ್ನು ತೊರೆದು ಬಡಕಲಾಗಿದ್ದ ತಮ್ಮ ಬಸವಯ್ಯ ಅಣ್ಣನನ್ನು ತಬ್ಬಿಕೊಂಡು ಗೋಳೋ ಎಂದು ಅತ್ತು ನಡೆದ ವಿಚಾರಗಳನ್ನು ಹೇಳಿದ. ಈ ವಾರ್ತೆ ಕೇಳಿ ಶಿವಯ್ಯ ತತ್ತರಿಸಿಹೋದ, ಸ್ವಲ್ಪ ಹೊತ್ತಿಗೆ ಚೇತರಿಸಿಕೊಂಡ ತನ್ನ ಮಗುವನ್ನು ಮಲಗಿಸಿದ್ದ ಕೊಠಡಿಯ ಕಡೆಗೆ ಹೋದ. ಬಾಗಿಲನ್ನು ದೂಡಿದ. ತೊಟ್ಟಿಲಲ್ಲಿ ಆಗ ತಾನೆ ಹಾಲುಂಡು ನಿದ್ರಿಸುತ್ತಿದ್ದಂತೆ ಇದ್ದ ಮಗನನ್ನು ಎತ್ತಿಕೊಂಡು ಬಸವಯ್ಯನನ್ನು ಕರೆದುಕೊಂಡು ಕೆರೆಯ ಕಡೆ ಧಾವಿಸಿದ. ಆತನ ಕಣ್ಣುಗಳು ಪ್ರತೀಕಾರಕ್ಕೆ ಕಾತುರಗೊಂಡಿದ್ದವು.

ಮಣ್ಣೊಡ್ಡ ಊಟವನ್ನು ಮುಗಿಸಿ ಎಲೆ ಅಡಿಕೆಯನ್ನು ಸವಿದು, ಕಲ್ಲು ಬೆಂಚಿನ ಮೇಲೆ ಕುಳಿತು ಹೊನ್ನಮ್ಮನ ರೂಪವನ್ನು ನೆನೆಯುತ್ತಾ, 'ಓ ಹೆಣ್ಣೇ ಮನದಾಸೆಯನ್ನು ತೀರಿಸಿದ್ದರೆ ನಿನ್ನ ಬಲಿದಾನ ನಡೆಯುತ್ತಿತ್ತೆ ಮಹಾ ಪತಿವ್ರತೆಯೆಂಬ ಅಭಿಮಾನದಿಂದ ನಿನ್ನ ಶೀಲವನ್ನು ಉಳಿಸಿಕೊಳ್ಳಲು ನನ್ನಾಸೆಗೆ ಮಣ್ಣೆರಚಿ ನೀರುಪಾಲಾದೆ, ನಿನ್ನ ಸುಂದರ ದೇಹವನ್ನು ಜಲಚರ ಪ್ರಾಣಿಗಳು ತಿನ್ನುತ್ತಿವೆ. ಪ್ರಯೋಜನವೇನು, ನಿನ್ನ ಗಂಡನೂ ಇನ್ನು ಬರಲಾರ, ಅವನೆಂದೋ ಯುದ್ಧದಲ್ಲಿ ಸತ್ತ. ನಿನ್ನ ಮಾವನ ಮನೆಯವರು ನಿನ್ನ ಚಿಂತೆಯಲ್ಲಿ ವ್ಯಾಧಿಗ್ರಸ್ಥರಾಗಿ ಇಷ್ಟರಲ್ಲೇ ಮಸಣದ ಪಾಲಾಗುವರು. ಮುಂದೆ ನಾನೇ ಗ್ರಾಮದ ಒಡೆಯ. ನಿನಗಿಂತ ರೂಪವತಿಯೊಡನೆ ಚಂಕ್ಕಂದವಾಡುವೆನು' ಎಂದು ಕನಸು ಕಾಣುತ್ತಾ ಕುಳಿತ್ತಿದ್ದನು. ಆಗ ಕಾಲಯಮನಂತೆ ಸಮಯವಿಲ್ಲದೆ ಹಾಗೇ ಕುಳಿತ ಶಿವಯ್ಯಗೌಡ ಬಂದವನೇ 'ಪಾಪಿ' 'ವಂಚಕ' ಎಂದು ಎಡಗಾಲಿನಲ್ಲಿ ಮಣ್ಣೊಡ್ಡನನ್ನು ಒದ್ದ.ಕೆಳಕ್ಕುರಳಿದ ಮಣ್ಣೊಡ್ಡ 'ಕಾಪಾಡಿ ಕಾಪಾಡಿ' ಎಂದು ಪ್ರಲಾಪಿಸಿದ. ಅವನ ಜುಟ್ಟನ್ನು ಹಿಡಿದು ದರದರನೆ ಕೆರೆಯ ಕಟ್ಟೆಯ ಮೇಲೆ ಎಳೆದುಕೊಂಡು ಹೋದ. ಒರೆಯಿಂದ ಖಡ್ಗಗವನ್ನು ಹಿಡಿದುಕೊಂಡು 'ಹೊನ್ನ ಇದೋ ನಿನ್ನನ್ನು ಕೊಂದ ಮೋಸಗಾರನನ್ನು ನಿನಗೆ ಬಲಿಕೊಡುತ್ತೇನೆ', ಎಂದು ಒಂದೇ ಏಟಿಗೆ ಅವನ ಶಿರಸ್ಸನ್ನು ಕಡಿದ, ಅವನ ತಲೆ ಹಾರಿ ಕೆರೆಯಲ್ಲಿ ಬಿತ್ತು. ಹೊನ್ನಮ್ಮ ಸಂತೋಷದಿಂದ ನಕ್ಕಂತೆ ನೀರಿನ ತೆರೆಗಳು ಜುಳು ಜುಳು ಎಂದು ದಡಕ್ಕೆ ಅಪ್ಪಳಿಸಿದವು.

ಶಿವಯ್ಯ ಮಗನನ್ನು ಎತ್ತಿಕೊಂಡು 'ಹೊನ್ನ! ಇದೋ ನಾನು ನಿನ್ನ ಪತಿ, ಬಂದಿದ್ದೇನೆ, ನಿನ್ನ ಮಗ, ನಿನ್ನ ಮೈದುನ ಬಸವಯ್ಯ ಎಲ್ಲಾ ಬಂದಿದ್ದಾರೆ ಮಾತಾಡು ಎಂದು ಕೂಗಿದ. ಸರ್ವಾಭರಣಭೂಷಿತಳಾಗಿ ನೀರನ ಅಲೆಗಳ ಮೇಲೆ ನಿಂತು ಮೋಸಗಾರರಿಂದ ಕೂಡಿದ ಮನುಕುಲದಲ್ಲಿ ನಾವು ಜೀವಿಸಲು ಸಾಧ್ಯವಿಲ್ಲ ಬನ್ನಿ ಎಂದು ಕೈ ಬೀಸಿ ಕರೆದಂತಾಯಿತು. ಮಗುವನ್ನು ಎದೆಗವಚಿಕೊಂಡು ನನ್ನ ಹೊನ್ನ ಕರೆಯುತ್ತಿದ್ದಾಳೆಂದು ಕೆರೆಗೆ ಹಾರಿದ, ಬಸವಯ್ಯನೂ ಅಣ್ಣ ನಾನೂ ಬರುತ್ತೇನೆ ಎಂದು ಜೊತೆಯಲ್ಲಿ ಹಾರಿದ, ಅಷ್ಟು ಹೊತ್ತಿಗೆ ಗ್ರಾಮದ ಸಾವಿರಾರು ಜನರು ಬಂದು ಸೇರಿದ್ದರು. ಅವರಿಗೆ ತಮ್ಮ ತಪ್ಪಿನ ಅರಿವಾಗಿ ಪಶ್ಚಾತ್ತಾಪದಿಂದ ದುಃಖಿಸಿದರು. ಮಣ್ಣೊಡ್ಡನ ಮೇಲೆ ಅವರಿಗೆ ಎಲ್ಲಿಲ್ಲದ ಕೋಪ ಬಂದು ಆತನ ಕಡೆಯವರ ಮನೆ ಮಠಗಳನ್ನು ಕೆಡವಿ ಅವರನ್ನು ಹೊಡೆದು ಗ್ರಾಮದಿಂದ ಓಡಿಸಿದರು.

ಮಗ ಶಿವಯ್ಯ ಮತ್ತು ಬಸವಯ್ಯ ಹಾಗೂ ಮೊಮ್ಮಗ ಎಲ್ಲರು ಸೊಸೆಯ ಜೊತೆ ಕೆರೆಗೆ ಬಲಿಯಾದರೆಂದು ಗೌಡ ಮತ್ತು ಗೌಡತಿಯು ಮೂರ್ಛಿತರಾಗಿ ಬಿದ್ದವರು ಮತ್ತೆ ಏಳಲಿಲ್ಲ.

ಗ್ರಾಮಸ್ಥರು ಹೊನ್ನಮ್ಮನಿಗೆ, ಶಿವಯ್ಯನಿಗೆ, ಗೌಡನಿಗೆ ಕೆರೆಯ ಕಟ್ಟೆಯ ಮೇಲೆ ದೇವಸ್ಥಾನವನ್ನು ಕಟ್ಟಿಸಿದರು. ಅವರು ಶಿವಪಾರ್ವತಿಯರೆಂದು ಈಗಲೂ ಪೂಜಿಸಲ್ಪಡುತ್ತಿದ್ದಾರೆ.

ಹೊನ್ನಮ್ಮ, ದೊಡ್ಡಾಂಬೆ, ತ್ಯಾಗಿ ಲಕ್ಷ್ಮೀದೇವಿಯರು ಒಕ್ಕಲಿಗರ ಆದಿದೇವತೆಯಾದ ಆದಿಶಕ್ತಿ ಕೆಂಪಾಂಬಿಕೆಯ ಮಕುಟದ ರತ್ನಗಳಂತೆ ಇತಿಹಾಸದಲ್ಲಿ ಶೋಭಾಯಮಾನರಾಗಿದ್ದಾರೆ.

**ಹಳ್ಳಿಕಾರ ಒಕ್ಕಲಿಗರು**

ಇವರು ತುಮಕೂರು ಜಿಲ್ಲೆಯ ಶಿರಾ, ಗುಬ್ಬಿ, ಮಧುಗಿರಿ ಮತ್ತು ಚಿಕ್ಕನಾಯಕನಹಳ್ಳಿ ತಾಲ್ಲೂಕುಗಳಲ್ಲಿ ವ್ಯಾಪಕವಾಗಿ ಹಾಗೂ ಹಾಸನ, ಮೈಸೂರು ಮತ್ತು ಬೆಂಗಳೂರು ಜಿಲ್ಲೆಗಳಲ್ಲಿ ವಿರಳವಾಗಿ ನೆಲೆಸಿದ್ದಾರೆ. ಇವರನ್ನೂ ಸರ್ವೆಗಾರರು ಎಂದು ಕರೆಯುತ್ತಾರೆ. ಪಶುಪಾಲನೆಯೇ ಪ್ರಧಾನ ಕಸುಬಾದ್ದರಿಂದ ಈ ಹೆಸರು ಬಂದಿದೆ. ತಮ್ಮ ಹೆಸರಿನ ಕೊನೆಗೆ ಗೌಡ, ನಾಯ್ಕ ಎಂಬ ಅಂಕಿತವನ್ನು ಬಳಸುತ್ತಾರೆ. ಇವರ ಮನೆ ಮಾತು ಕನ್ನಡ, ಇವರು ವೈಷ್ಣವ ಸಂಪ್ರದಾಯದವರು. ಶಿವನನ್ನೂ ಆರಾಧಿಸುತ್ತಾರೆ. ಪಶುಪಾಲನೆಯ ಜೊತೆಗೆ ವ್ಯವಸಾಯ ವೃತ್ತಿಯನ್ನು ಕೈಗೊಂಡಿದ್ದಾರೆ. ಹಳ್ಳಿಕಾರರ ತಳಿ ಹಸುಗಳು ಈಗಲೂ ಉತ್ಕೃಷ್ಟ ಹಸುಗಳೆಂದು ಹೆಸರುವಾಸಿಯಾಗಿವೆ. ವಿಜಯನಗರದ ಪತನದ ನಂತರ ಹಳ್ಳಿಕಾರರು ಬೇರೆ ಬೇರೆ ಕಡೆ ಚದುರಿ ನೆಲಸಿದ್ದಾರೆಂಬ ಅಭಿಪ್ರಾಯವಿದೆ.

**೨.೨ ಶಾಸನಗಳಲ್ಲಿ ಒಕ್ಕಲಿಗರು**

'ಒಕ್ಕಲಿಗರು' ಎಂಬ ಪದದ ಅರ್ಥ ಬೇಸಾಯಗಾರರು ಎಂದಾಗುತ್ತದೆ. ಈ ವ್ಯಾಪ್ತಿಗೆ ನಮ್ಮ ಜನಸಂಖ್ಯೆಯ ದೊಡ್ಡ ಭಾಗವೇ ಸೇರುತ್ತದೆ. ಆದರೆ ಇಂದಿನ ಅರ್ಥದಲ್ಲಿ ಇದನ್ನು ಒಂದು ಪಂಗಡ ಅಥವಾ ಸಮುದಾಯ ಎಂದು ಪರಿಗಣಿಸಿದಾಗ ಅದಕ್ಕೆ ಕೆಲವು ಮಿತಿಗಳು ಬರುತ್ತವೆ. ಒಕ್ಕಲಿಗರು ಇತಿಹಾಸ ಕಾಲದಲ್ಲಿ ವಿವಿಧ ಧರ್ಮ ಪಂಥಗಳಲ್ಲಿ ಹಂಚಿಹೋಗಿರುವುದುಂಟು. ಇದು ಈ ವ್ಯಾಖ್ಯೆಗೆ ಬರುವ ಒಕ್ಕಲಿಗ ಸಮುದಾಯವನ್ನು, ಅದರಲ್ಲೂ ಶಾಸನಗಳಲ್ಲಿ, ಹುಡುಕುವುದು ಸುಲಭವಲ್ಲ ಮತ್ತು ಅದು ಪರಿಪೂರ್ಣವೂ ಆಗಲಾರದು. ಆದರೂ ನಾವು ಕೆಲವೊಂದು ಆಧಾರಗಳ ಮೇಲೆ ಒಕ್ಕಲಿಗ ಸಮುದಾಯದ ಸಾಮಾಜಿಕ ಸ್ಥಾನಮಾನ, ಕಾರ್ಯ ಚಟುವಟಿಕೆಗಳು, ಜೀವನ ದೃಷ್ಟಿ ಮೊದಲಾದವುಗಳಿಗೆ ಸಂಬಂಧಿಸಿದಂತೆ ಒಂದು ಸ್ಥೂಲ ಚಿತ್ರ ರೂಪಿಸಬಹುದು.

**೨. ಎದುರಾಗುವ ತೊಡಕು**

ಶಾಸನಗಳಲ್ಲಿ ಒಕ್ಕಲಿಗರನ್ನು ಕುರಿತು ಅಧ್ಯಯನ ಮಾಡಲು ಎದುರಾಗುವ ತೊಡಕೆಂದರೆ ಶಾಸನದ ವ್ಯಾಪ್ತಿ ಸೀಮಿತವಾಗಿರುವುದು. ಶಾಸನಗಳಲ್ಲಿ ರಾಜರು, ಸಾಮಂತರು, ದಂಡನಾಯಕರು, ಬ್ರಾಹ್ಮಣರು, ವೈಶ್ಯರು, ಗ್ರಾಮಾಧಿಕಾರಿಗಳು, ಶಿಲ್ಪಿಗಳು, ವೀರರು, ಪಂಡಿತರು, ಗುರುಗಳು, ಮಹಾಸತಿಯರು, ದಾನಿಗಳು, ಮೊದಲಾದವರ ಚಟುವಟಿಕೆಗಳನ್ನು ಕುರಿತು ಹೆಚ್ಚಿನ ಪ್ರಸ್ತಾಪಗಳು ಬರುತ್ತವೆ. ಆದರಲ್ಲಿ ವಿಶೇಷ ಸಂದರ್ಭಗಳಲ್ಲಿ ಮಾತ್ರ ಜಾತಿ, ಪಂಗಡ ಮತ್ತಿತರ ವಿವರಗಳಿರುವುದನ್ನು ಬಿಟ್ಟರೆ, ಉಳಿದಂತೆ ಸಾಮಾಜಿಕ ಚಿತ್ರ ನಿರೂಪಿತವಾಗಿರುವುದಿಲ್ಲ. ಶಾಸನಗಳನ್ನು ಬರೆಸುವುದು ಬಹು ಜನರಿಗೆ ಸಾಧ್ಯವಿಲ್ಲದ್ದರಿಂದ ಮತ್ತು ಶಾಸನಗಳ ಉದ್ದೇಶ

ನಿರ್ದಿಷ್ಟವಾಗಿದ್ದುದರಿಂದ ಅದರಲ್ಲಿ ಸಾವಿರಾರು ವರ್ಷಗಳ ಇತಿಹಾಸವಿರುವ ಜನಜೀವನದ ಪೂರ್ಣ ಪರಿಚಯ ಎಂದಿಗೂ ಸಾಧ್ಯವಿಲ್ಲ. ಡಾ.ಚಿದಾನಂದ ಮೂರ್ತಿಯವರ ಅಭಿಪ್ರಾಯದಲ್ಲಿ ''ಶಾಸನಗಳು ಜನ ಜೀವನದ ಒಂದು ಮುಖವನ್ನು ಮಾತ್ರ ಚಿತ್ರಿಸುತ್ತವೆ. ಶ್ರೀಮಂತರ ಶ್ರೀಮಂತಿಕೆಯನ್ನೂ, ದಾನಿಗಳ ಔದಾರ್ಯವನ್ನೂ ಮುಕ್ತಕಂಠದಿಂದ ಕೊಂಡಾಡುವಂತೆ, ದರಿದ್ರರ ಸಮಸ್ಯೆಗಳನ್ನೂ, ಅವರ ಕಷ್ಟಗಳನ್ನೂ ಚಿತ್ರಿಸುವುದಿಲ್ಲ''[೧]. ಹೀಗಾಗಿ, ಶಾಸನಗಳ ಅಧ್ಯಯನದಲ್ಲಿ ಬಹು ಎಚ್ಚರಿಕೆ ಅಗತ್ಯವಾಗಿರುತ್ತದೆ. ಹಾಗೆಂದು ಶಾಸನಗಳನ್ನು ಅಲಕ್ಷಿಸುವಂತೆಯೂ ಇಲ್ಲ. ಅವು ನಮ್ಮ ಪ್ರಾಚೀನ ಕಾಲ ಕೋಶಗಳಾಗಿದ್ದು, ನಮ್ಮ ಪರಂಪರೆಯ ರೂಪರೇಖೆಗಳನ್ನು ನೀಡಬಲ್ಲ ಸಾಧನಗಳಲ್ಲಿ ಅತ್ಯಂತ ಪ್ರಮುಖವಾಗಿವೆ ಎಂದಿದ್ದಾರೆ.

ಈ ಬಗೆಯ ಶಾಸನಾಧ್ಯಯನದಲ್ಲಿ ನಮಗೆ ಮೊದಲಿಗೆ ಎದುರಾಗುವ ಸಮಸ್ಯೆ ಎಂದರೆ ಒಂದು ನಿರ್ದಿಷ್ಟ ಸಮುದಾಯವನ್ನು ಶಾಸನಗಳಲ್ಲಿ ಗುರುತಿಸುವುದು ಹೇಗೆ ಎಂಬುದು. ಕೆಲವು ಸಮುದಾಯದಲ್ಲಿ ಶಾಸನತಜ್ಞ ಮಿತ್ರರಿಂದಲೇ ಈ ಪ್ರಶ್ನೆ ಎದುರಿಸಬೇಕಾಯಿತು. ಕರ್ನಾಟಕದ ವ್ಯಾವಸಾಯಿಕ ಜನಸಂಖ್ಯೆಯ ಬಹು ಭಾಗ ಒಂದು ಕಾಲದಲ್ಲ ಒಕ್ಕಲಿಗರಿಂದ ಕೂಡಿತ್ತು. ಈ ಒಕ್ಕಲಿಗರು ಗಾವುಂಡ, ಗಾಮುಂಡ, ಗವುಡ, ಗಾವುಂಡಿ, ಗವುಡಿ, ಗೌಡ ಮುಂತಾದ ಉಪನಾಮವುಳ್ಳವರಾಗಿದ್ದರು. ಆದರೆ ಇಲ್ಲಿ ನಮಗೆ ಎದುರಾಗುವ ಇನ್ನೊಂದು ಪ್ರಶ್ನೆಯೆಂದರೆ ಈ ರೀತಿ ಉಪನಾಮವುಳ್ಳವರೆಲ್ಲ ಒಕ್ಕಲಿಗರಾಗಿದ್ದರೇ ಇಲ್ಲವೇ ಎಂಬುದು. ಕರ್ನಾಟಕ ಸರ್ಕಾರ ನೇಮಿಸಿದ್ದ ಹಾವನೂರು ಆಯೋಗದ ವ್ಯಾಖ್ಯೆ ಹೀಗಿದೆ, ಒಕ್ಕಲಿಗರೆಂದರೆ ''ಒಕ್ಕಲಿಗ, ಹಳ್ಳಿಕಾರ್, ಕುಂಚಟಿಗ, ರೆಡ್ಡಿ, ಗೌಡ, ಕಾಪು, ಹೆಗ್ಗಡೆ, ಕಮ್ಮ, ಗೌಂಡರ್''[೨] ಇಂದಿನ ಈ ವ್ಯಾಖ್ಯೆಯನ್ನು ಶಾಸನಗಳಿಗೆ ಹೊಂದಿಸುವುದು ಕಷ್ಟ. ಉತ್ತರ ಕರ್ನಾಟಕದಲ್ಲಿ ಗಾವುಂಡ ಅಥವಾ ಗೌಡ ಎಂಬ ಉಪನಾಮ ಪಡೆದ ಸಮುದಾಯದ ಬಹು ಭಾಗ ವೀರಶೈವ ಪಂಥಾನುಯಾಯಿಗಳಾಗಿದ್ದಾರೆ. ಅದಕ್ಕೂ ಹಿಂದೆಯೇ ಗಣನೀಯವಾಗಿ ಗಾವುಂಡಗಳು ಜೈನರಾಗಿದ್ದುದು ಶಾಸನಗಳಿಂದ ತಿಳಿದು ಬರುತ್ತದೆ. ಮತ್ತೆ ಅವರಲ್ಲಿ ಬಹು ಮಂದಿ ತಮ್ಮ ಪೂರ್ವಾಶ್ರಮಕ್ಕೆ ಬಂದರು ಇಲ್ಲವೇ ವೀರಶೈವರಾದರು. ಶ್ರೀ ರಾಮಾನುಜರ ಪ್ರಭಾವದಿಂದ ಒಕ್ಕಲಿಗರ ಒಂದು ಗುಂಪು ಶ್ರೀ ವೈಷ್ಣವ ಪಂಥ ಅನುಸರಿಸಿ ನಾಮಧಾರಿ ಒಕ್ಕಲಿಗರಾದರು. ಒಕ್ಕಲಿಗರ ವ್ಯಾಪ್ತಿಗೆ ಕೆಲವೆಡೆ ಹೆಗ್ಗಡೆ ಮತ್ತು ನಾಯಕರು ಸೇರುತ್ತಾರೆ. ಇನ್ನು ಗೌಡ, ನಾಯಕ ಮತ್ತು ಹೆಗ್ಗಡೆಗಳೆಂಬ ಉಪನಾಮವುಳ್ಳವರೂ ಒಕ್ಕಲಿಗರಲ್ಲದ ಇತರ ಪಂಗಡ ಅಥವಾ ಜಾತಿಗಳಲ್ಲಿದ್ದಾರೆ. ಉದಾ. ಈಡಿಗರು, ಕುರುಬರು, ಹಾಲಕ್ಕಿ ಒಕ್ಕಲಿಗರು, ತಿಗಳರು ಇತ್ಯಾದಿ. ಜೊತೆಗೆ ಶಾಸನಗಳಲ್ಲಿ ಗಾವುಂಡ ಇತ್ಯಾದಿ ಉಪನಾಮಗಳಿಲ್ಲದ ಹೆಸರುಗಳುಳ್ಳವರೂ ಒಕ್ಕಲಿಗರಾಗಿರುವ ಸಂಭವವಿದೆ. ಉದಾಹರಣೆಗೆ, ಈ ಶಾಸನ ನೋಡಿ,

''ಕೊಂಗಣಿ ಗಾವುಣ್ಣನ ಮಮ್ಮ(ಗ) ಮಾದುವಡೆಯನ

ಮಗಂ ರಾಚಮ್ಮನ ಬಿಯಳಬ್ಬೆಯ ಮಗಂ ಮಾಕಯ್ಯಂ''[೩]

ಇಲ್ಲಿ 'ಗಾವುಂಡ', 'ವಡೆಯ' ಮತ್ತು 'ಅಯ್ಯ' ಎಂಬ ಉಪನಾಮಗಳನ್ನೂ ಒಂದೇ ಕುಟುಂಬದ ಸದಸ್ಯರು ಹೊಂದಿರುವುದು ಕಂಡು ಬರುತ್ತದೆ. ಹೀಗಾಗಿ ಗಾವುಂಡ ಮತ್ತಿತರ ಉಪನಾಮಗಳಿಲ್ಲದ ಹೆಸರುಗಳುಳ್ಳ ಶಾಸನಗಳು ಒಕ್ಕಲಿಗರಿಗೆ ಸಂಬಂಧಿಸಿದವಲ್ಲವೆಂದು ಬಗೆದರೆ ಅದೂ ಅಸಮರ್ಪಕವಾಗುತ್ತದೆ.

### ೩. ಕೆಲವು ಸೂತ್ರಗಳು

ಆದ್ದರಿಂದ ಶಾಸನಗಳಲ್ಲಿ ಒಕ್ಕಲಿಗರ ಕುರಿತು ಅಧ್ಯಯನಕ್ಕೆ ನಾವು ಕೆಲವೊಂದು ಸೂತ್ರಗಳನ್ನು ಅನುಸರಿಸಬೇಕಾಗುತ್ತದೆ. ಇಂದು ಕಂಡು ಬರುವ ಒಕ್ಕಲಿಗ ಸಮುದಾಯದಲ್ಲಿ ಗೌಡ ಉಪನಾಮ ಅಧಿಕವಾಗಿದೆ. ಮತ್ತು ಹನ್ನೆರಡನೆಯ ಶತಮಾನಕ್ಕೂ ಹಿಂದಿನ ಶಾಸನಗಳಲ್ಲಿ ಬರುವ ಗೌಡ ಉಪನಾಮ ಬಹುಮಟ್ಟಿಗೆ ಒಕ್ಕಲಿಗರನ್ನೇ ಕುರಿತು ಹೇಳುತ್ತಿರಬಹುದು. ಜೊತೆಗೆ ಇಂದಿನ ಒಕ್ಕಲಿಗರು ಗ್ರಾಮೀಣ ಪ್ರದೇಶದಲ್ಲಿ ಹಿಂದೆ ಪ್ರಧಾನ ಪಾತ್ರ ವಹಿಸುತ್ತಿದ್ದುದು ಸಾಮಾಜಿಕ ಇತಿಹಾಸದಿಂದ ತಿಳಿದು ಬರುತ್ತದೆ. ಈ ಕಾರಣಗಳಿಂದ ಶಾಸನಗಳಲ್ಲಿ ಉಕ್ತವಾಗಿರುವ ಒಕ್ಕಲಿಗರಿಗೆ ಸಂಬಂಧಿಸಿದ ಪೂರ್ವೋಕ್ತ ಉಪನಾಮಗಳನ್ನೇ ಆಧಾರವಾಗಿಟ್ಟುಕೊಂಡು ಉಳಿದ ಸಂಗತಿಗಳನ್ನು ಪೂರಕವಾಗಿ ಬಳಸಿಕೊಂಡು ಒಕ್ಕಲಿಗ ಸಮುದಾಯದ ಬಗ್ಗೆ ಒಂದು ಚಿತ್ರ ರೂಪಿಸಲು ಸಾಧ್ಯವಿದೆ.

### ೪. ಆಡಳಿತ ಕ್ಷೇತ್ರದಲ್ಲಿ

ಗೌಡರು ಆಡಳಿತದಲ್ಲಿ ಮೊದಲಿನಿಂದಲೂ ಪ್ರಸಿದ್ಧರಾಗಿದ್ದರು. ಇದರಿಂದಾಗಿ ಗಾವುಂಡತನ ಮತ್ತು ಗೌಡಿಕೆಗಳು ಶತಮಾನಗಳ ಕಾಲ ಸ್ಥಿರ ಹುದ್ದೆಗಳಾಗಿ ಮಾರ್ಪಟ್ಟವು. ಯಾವ ರಾಜ ಅಥವಾ ರಾಜ ಮನೆತನಗಳು ಬದಲಾದರೂ ಸ್ಥಳೀಯ ಗ್ರಾಮ ನಾಡು ಮತ್ತು ಮಹಾನಾಡುಗಳ ಆಡಳಿತ ಗಾವುಂಡರ ಕೈಯಲ್ಲೇ ಇರುತ್ತಿತ್ತು. ಊರ ಗಾವುಂಡಗರ, ನಾಡ ಗಾವುಂಡಗರ ಚಟುವಟಿಕೆಗಳನ್ನು ಕುರಿತು ಸಾವಿರಾರು ಶಾಸನಗಳಲ್ಲಿ ಉಲ್ಲೇಖಗಳಿವೆ. ರಾಜ ಮನೆತನಗಳ ವಂಶಾವಳಿ ಮತ್ತು ದಿಗ್ವಿಜಯಗಳ ಬಗ್ಗೆ ಶಾಸನಗಳಲ್ಲಿ ಬರುವ ವಿವರಗಳು ಕೆಲವೆಡೆ ಸಂದೇಹಕ್ಕೆಡೆ ನೀಡುವಂತಿದ್ದರೂ, ಗ್ರಾಮ್ಯ ಇತಿಹಾಸವನ್ನು ತಿಳಿಸುವ ಸ್ಥಳೀಯ ವಿಷಯವನ್ನು ಕುರಿತ ಶಾಸನಗಳು ಹೆಚ್ಚು ಕಡಿಮೆ ಪೂರ್ಣಶಃ ನಂಬಬಹುದಾದಂತವೇ ಎಂದು ಶಾಸನ ತಜ್ಞ ಡಾ. ಕೆ.ವಿ. ರಮೇಶರವರ ಅಭಿಮತದ[೧] ಬೆಳಕಿನಲ್ಲಿ ನಾವು ಗ್ರಾಮಜೀವನಕ್ಕೆ ಸಂಬಂಧಿಸಿದ ಶಾಸನಗಳನ್ನು ವಿಶ್ವಾಸನೀಯವೆಂದು ಪರಿಗಣಿಸಬಹುದು.

ಸ್ಥಳೀಯ ಆಡಳಿತದಲ್ಲಿ ಗಾವುಂಡರು ಅಥವಾ ಗಾಮುಂಡರು ವಹಿಸುತ್ತಿದ್ದ ಪಾತ್ರದ ಬಗ್ಗೆ ಶಾಸನಗಳನ್ನು ಅಧ್ಯಯನ ಮಾಡಿದ ಕೆಲವು ವಿದ್ವಾಂಸರ ನಿರೂಪಣೆಯನ್ನು ಗಮನಿಸೋಣ, ಡಾ. ಎ.ವಿ. ವೆಂಕಟರತ್ನಂ ಪ್ರಕಾರ[೨] ''ಗೌಡಿಕೆ ಅಥವಾ ಗ್ರಾಮ ಮುಖಂಡತ್ವ ಹುದ್ದೆಯು ಆರ್ಹವಾಗಿತ್ತು. ವಿಜಯನಗರದ ಹಿಂದಿನ ಕಾಲದಲ್ಲಿ ಕರ್ನಾಟಕದಲ್ಲಿ ಗಾವುಂಡ ಅಥವಾ ಗ್ರಾಮ ಮುಖಂಡರು ಗ್ರಾಮ ಸಭೆಯ ಮುಖ್ಯ ಕಾರ್ಯನಿರ್ವಾಹಕ ಮತ್ತು ಗ್ರಾಮಾಡಳಿತದ ಪ್ರಧಾನ ಅಧಿಕಾರಿಯಾಗಿದ್ದನು. ಗ್ರಾಮ ಸಭೆಯೊಡನೆ ಅವನು ಗ್ರಾಮದ ಅಭ್ಯುದಯಕ್ಕೆ ಜವಾಬ್ದಾರಿ ಹೊಂದಿದ್ದನು. ಗೌಡಿಕೆ ಹುದ್ದೆಯನ್ನು ರಾಜನು ಅಥವಾ ಅಧಿಕಾರಿಗಳು ಅಥವಾ ಗ್ರಾಮಸ್ಥರು ಅಥವಾ ನಾಡಿನವರು ಗ್ರಾಮ ಅಥವಾ ಗ್ರಾಮಗಳ ಸೇವೆಯಿಂದ ಹೆಸರುವಾಸಿಯಾದವನಿಗೆ ಕೊಡುತ್ತಿದ್ದರು. ಆತನು ಜನರ ಪ್ರತಿನಿಧಿಯಾಗಿ ಮತ್ತು ಸರ್ಕಾರದ ನಿಯೋಗಿಯಾಗಿ ಕೆಲಸಮಾಡುತ್ತಿದ್ದನು. ಅವನ ಸಂಭಾವನೆ ಉಡುಗೋರೆ ಅಥವಾ ತೆರಿಗೆಯಿಂದ ರಿಯಾಯಿತಿ ಪಡೆದ ಭೂಮಿ. ಆತನು ಗ್ರಾಮದ ದಂಡಾಧಿಕಾರಿಯಾಗಿ ಸಣ್ಣಪುಟ್ಟ ಅಪರಾಧಗಳ ವಿಚಾರಣೆ ನಡೆಸುತ್ತಿದ್ದನು. ಗ್ರಾಮ ಮುಖಂಡರನ್ನು ರೆಡ್ಡಿ ಅಥವಾ ಗೌಡನೆಂದು ತಮಿಳು ಪ್ರಾಂತ್ಯದಲ್ಲಿ ಕರೆಯುತ್ತಿದ್ದರು. ಅವನನ್ನು 'ಗ್ರಾಮ ಕೂಟ' ಎಂದೂ ಕರೆಯುತ್ತಿದ್ದರು. 'ಗೌಡ' ಎಂಬ ಪದವು ಈ ಪದದಿಂದ ಬಂದಿರಬಹುದು.''[೩]

ಶಾಸನಗಳಿಂದ ನಮಗೆ ಒಂದು ಊರಿಗೆ ಒಬ್ಬ ಗಾವುಂಡನಿರುತ್ತಿದ್ದುದು ಹಾಗೂ ಕೆಲವು ಸಂದರ್ಭಗಳಲ್ಲಿ ಒಬ್ಬರಿಗಿಂತ ಹೆಚ್ಚು ಗಾವುಂಡಗಳಿರುತ್ತಿದ್ದುದು ತಿಳಿದು ಬರುತ್ತದೆ. ಕೆಲವೊಮ್ಮೆ ಇಬ್ಬರು ಒಂದು ಊರಿನ ಗೌಡಿಕೆ

ಮಾಡುತ್ತಿದ್ದರು. ಡಾ. ಚಿಂದಾನಂದ ಮೂರ್ತಿಯವರ ಪ್ರಕಾರ, ದೇಶದ ರಾಜನು ಬೇರೆ ಬೇರೆ ಊರುಗಳ ಗಾವುಂಡರಿಗೆ ಪಟ್ಟವನ್ನು ಕಟ್ಟಿ ಅವರಿಗೆ ತನ್ನ ಹೆಸರನ್ನಿಟ್ಟು ಗೌರವಿಸುತ್ತಿದ್ದ ಸಂಪ್ರದಾಯವೊಂದರ ಉಲ್ಲೇಖ ಹಲವು ಶಾಸನಗಳಲ್ಲಿದೆ ಎಂದಿದ್ದಾರೆ. ಸುಮಾರು ಕ್ರಿ.ಶ. ೮೯೦ ರಲ್ಲಿ ಗಂಗರಾಜ ಶ್ರೀಮತ್ ಪೆರ್ಮಾನಡಿಗಳು ಜೆಡಲ ಏರೆಯಂಗ ಗಾವುಂಡನ ಮಗನಿಗೆ 'ಪೆರ್ಮಾಡಿ ಪಟ್ಟಂಗಟ್ಟಿದ' ವಿಷಯ ಶಾಸನವೊಂದರಲ್ಲಿದೆ. ರಾಷ್ಟ್ರಕೂಟರ ಸಾಮಂತ ಕನ್ನಯ್ಯನು ರಾಚೆಯ ಎನ್ನುವವನಿಗೆ 'ರಟ್ಟಗಾವುಂಡನೆಂದು ಬೊಟ್ಟಿಟ್ಟ' ವಿಷಯವು ಇನ್ನೊಂದು ಶಾಸನದಲ್ಲಿದೆ....... ಹೀಗೆ, ರಾಜನಾದವನು ಗಾವುಂಡ ಪಟ್ಟವನ್ನು ಕಟ್ಟಿ ತನ್ನ ಹೆಸರಿಡುತ್ತಿದ್ದ ಪದ್ಧತಿಯ ಮೂಲವೇನು, ಅದಕ್ಕೆ ಕಾರಣವೇನು ಎಂಬುದರ ಸೂಚನೆಗಳು ಶಾಸನಗಳಲ್ಲಿ ದೊರಕುವುದಿಲ್ಲ. ರಾಜನು ಪಟ್ಟವನ್ನು ಕಟ್ಟಿ ಆ ವ್ಯಕ್ತಿಗೆ ಯಾವುದೋ ಊರನ್ನೋ ಅಥವಾ ತಳಿಗೆ, ಅಡ್ಡಣಿಗೆ ಮುಂತಾದ ವಸ್ತುಗಳನ್ನೋ ಕೊಟ್ಟು ಗೌರವಿಸುವುದನ್ನು ನೋಡಿದರೆ, ತನ್ನ ವಿಶೇಷ ಶಕ್ತಿಯಿಂದಲೋ ತಾನು ಮಾಡಿದ ವಿಶೇಷ ಕಾರ್ಯದಿಂದಲೋ ಅಂತಹ ಗೌರವಕ್ಕೆ ಆ ವ್ಯಕ್ತಿಯು ಪಾತ್ರನಾಗುತ್ತಿದ್ದನು ಎಂದು ಭಾವಿಸಬಹುದು.''[೬]

ಈ ಗಾವುಂಡಗಳ ವ್ಯಕ್ತಿತ್ವದ ಬಗ್ಗೆ ಇದೇ ಲೇಖಕರ ಅಭಿಪ್ರಾಯವನ್ನು ಆಳುತ್ತಿದ್ದರು. ಅವರು ಊರೊಡೆಯರೂ ಹೌದು. ಅನೇಕ ಶಾಸನಗಳು ಅವರ ಗುಣಗಾನವನ್ನು ಮಾಡಿವೆ. ಅವರು ಅಖಿಲ ಗುಣಾಗ್ರಣಿಗಳೆಂದೂ, ಧರ್ಮ ಪ್ರತಿಪಾಲನಾಪರರೆಂದೂ 'ಶೂರ'ರೆಂದೂ ದಾನಿಗಳೆಂದೂ ಶಾಸನಗಳು ಹೊಗಳುತ್ತವೆ. ದತ್ತಿಗಳನ್ನು ಬಿಟ್ಟು ಕೊಡುವಾಗ ಆ ಊರಿನ ಗಾವುಂಡ ಅಥವಾ ಗಾವುಂಡರು ಸಾಮಾನ್ಯವಾಗಿ ಅಲ್ಲಿ ಇರುತ್ತಿದ್ದರು. ಅನೇಕ ದತ್ತಿಗಳಿಗೆ ಗಾವುಂಡರು ಧರ್ಮದರ್ಶಿಗಳಾಗಿರುತ್ತಿದ್ದರು ಎಂಬುದು ತಿಳಿದುಬರುತ್ತದೆ.[೭]

ಹೀಗೆ, ಗುರುತರ ಜವಾಬ್ದಾರಿ ಹೊತ್ತ ಗಾವುಂಡರು ದೇಶದ ಆಂತರಿಕ ಶಾಂತಿ ಸ್ಥಿರತೆಗೆ ಬಹುವಾಗಿ ಕಾರಣರಾಗಿರುತ್ತಿದ್ದರು. ಅವರ ಕರ್ತವ್ಯಗಳು ಹಲವಾರಿದ್ದುವು. ಆದರೆ ಗಾವುಂಡನು ಸರ್ವಾಧಿಕಾರಿಯಾಗಿರಲಿಲ್ಲ. ಅವನು ಊರಿನ ಹಿರಿಯರ ಮಾತಿನಿಂದ ನಿಯಂತ್ರಿತವಾಗಿದ್ದನು. ಈ ಗ್ರಾಮಸಭೆಯ ತೀರ್ಮಾನವೇ ಬಹು ಸಂದರ್ಭಗಳಲ್ಲಿ ಗಾವುಂಡನ ತೀರ್ಮಾನವಾಗಿರುತ್ತಿದ್ದಿತು. ಡಾ.ಎಸ್.ಚಿನ್ನಸ್ವಾಮಿ ಸೋಸಲೆಯವರು ಗ್ರಾಮಸಭೆಯ ಬಗ್ಗೆ ಹೀಗೆ ಹೇಲುತ್ತಾರೆ: ''ಒಂದೊಂದು ಊರಿನಲ್ಲಿಯೂ ಒಂದೊಂದು ಗ್ರಾಮಸಭೆಯಿರುತ್ತಿದ್ದಿತು. ಆ ಸಭೆಗೆ ಮುಖ್ಯಸ್ಥ ಅಲ್ಲಿಯ ಗಾವುಂಡ ಅಥವಾ ಪ್ರಭು ಗಾವುಂಡ; ಗ್ರಾಮಸಭೆಯ ಇತರ ಸದಸ್ಯರು ಆ ಊರಿನ ಸಹಜ ನಾಯಕರಾದ ಹಿರಿಯರು. ರಾಜ್ಯದಲ್ಲಿ ರಾಜನಿಗೆ ಪರಮಾಧಿಕಾರವಿದ್ದಂತೆ ಗ್ರಾಮದಲ್ಲಿ ಗ್ರಾಮಸಭೆಗೆ ಪರಮಾಧಿಕಾರವಿದ್ದಿತು. ಗ್ರಾಮಸಭೆಯು ಆಧುನಿಕ ಕಾಲದ ಕಲೆಕ್ಟರ್, ಮ್ಯಾಜಿಸ್ಟ್ರೇಟ್ ಮತ್ತು ಮುನಿಸಿಪಾಲಿಟಿಗಳ ಕರ್ತವ್ಯವನ್ನು ಪರಿಪಾಲಿಸುತ್ತಿದ್ದಿತು. ಈ ಗ್ರಾಮಸಭೆಗಳು ಪರಮಾಧಿಕಾರವಾದ್ದರಿಂದ ಅವು ಸ್ವರೂಪತಃ ಸಮಾಜವಾದಿ ಸಂಸ್ಥೆಗಳಾಗಿದ್ದು (Socialistic in Character) ಶುದ್ಧ ಪ್ರಜಾಪ್ರಭುತ್ವದ ತತ್ವಗಳನ್ನು ಅಳವಡಿಸಿಕೊಂಡಿದ್ದವು.''[೮]

ಗಾವುಂಡರು ರಾಜ್ಯದ ಆಡಳಿತದ ಆಧಾರ ಸ್ತಂಭವಾಗಿದ್ದರು. ಅವರು ಗ್ರಾಮಗಳನ್ನಷ್ಟೇ ಅಲ್ಲದೆ ಸುಮಾರಾಗಿ ಈಗಿನ ಹೋಬಳಿಗೆ ಸಮನಾದ ಹಲವು ಗ್ರಾಮಗಳ ಗುಂಪಾದ 'ನಾಡ'ನ್ನು ಮತ್ತು ಈಗಿನ ತಾಲ್ಲೂಕಿಗೆ ಸಮನಾದ 'ಮಹಾನಾಡ'ನ್ನು ಆಳುತ್ತಿದ್ದರು. ಕೆಲವು ವೇಳೆ ಮಹಾನಾಡು ಸುಮಾರಾಗಿ ಈಗಿನ ಒಂದು ಜಿಲ್ಲೆಯಷ್ಟೇ ವಿಸ್ತಾರವಾಗಿರುತ್ತಿತ್ತು. '' 'ನಾಡು' ಸಭೆಗೆ ಅತ್ಯಂತ ಮುಂಚಿನ ದಾಖಲೆ ಕ್ರಿ.ಶ. ೫ನೇ ಶತಮಾನದ ಹಲ್ಮಿಡಿ

ಶಾಸನದಲ್ಲಿ ದೊರಕುತ್ತವೆ. ನಾಡಗೌಡನನ್ನು ರಾಜನು ನೇಮಿಸುತ್ತಿದ್ದನು. ಮುಂದೆ ಅದು ವಂಶಪಾರಂಪರ್ಯವಾಗಿರುತ್ತಿತ್ತು. ರಾಜವಂಶ ಪದಚ್ಯುತವಾದಾಗ ಅಥವಾ ಗಾವುಂಡನು ಸರ್ಕಾರಕ್ಕೆ ಅನುಚಿತವಾಗಿ ನಡೆದುಕೊಂಡಾಗ ಮಾತ್ರ ನಾಡಗೌಡಿಕೆ ಬದಲಾಗುತ್ತಿತ್ತೆಂದು ತೋರುತ್ತದೆ. ಸಾಮಾನ್ಯವಾಗಿ ಹಿಂದಿನ ರಾಜರು ಕೊಟ್ಟಿದ್ದ ಹುದ್ದೆಗಳನ್ನು ಹೊಸದಾಗಿ ಸಿಂಹಾಸನವೇರಿದ ರಾಜ ಮನೆತನ ಮುಂದುವರಿಸಿಕೊಂಡು ಹೋಗುತ್ತಿತ್ತು.[೯] ನಾಡಗೌಡನು ''ತೆರಿಗೆಗಳ ವಸೂಲಿ, ನ್ಯಾಯ ವಿತರಣೆ ಮತ್ತು ಅವನ ಹತೋಟಿಯಲ್ಲಿದ್ದ ದೇವಸ್ಥಾನಗಳ ಉಸ್ತುವಾರಿ'' ಮುಂತಾದ ಕರ್ತವ್ಯಗಳನ್ನು ನಿರ್ವಹಿಸುತ್ತಿದ್ದನು. ಸೀಮೇಗೌಡ ಎಂಬ ಇನ್ನೊಂದು ಹುದ್ದೆಯೂ ಇದ್ದಿತು.

ಮಹಾನಾಡು ಒಂದು ದೊಡ್ಡ ಸಭೆಯಾಗಿತ್ತು. ಅದರಲ್ಲಿ ಹಲವು ನಾಡಿನ ಗೌಡರು ಇತರ ಗಣ್ಯರು ಸದಸ್ಯರಾಗುತ್ತಿದ್ದರು. ಮಹಾನಾಡ ಪ್ರಭುವು ಇದಕ್ಕೆ ಮುಖ್ಯಸ್ಥನಾಗಿರುತ್ತಿದ್ದನು. ಸಾಮಾನ್ಯವಾಗಿ ಮಹಾಮಂಡಲೇಶ್ವರರು ಮತ್ತು ಸಾಮಂತರಿಗೆ ಮಾತ್ರ ಈ ಮಹಾನಾಡ ಪ್ರಭುವು ಅಧೀನವಾಗಿರುತ್ತಿದ್ದನು. ಡಾ. ವೆಂಕಟರತ್ನಂರವರ ಈ ವಿವರಣೆಯನ್ನು ನೋಡಿ: ಶಾಸನಗಳು ''ಮಹಾನಾಡು ಪ್ರಭು'' ಎಂಬ ಅಧಿಕಾರಿಯನ್ನು ತಿಳಿಸುತ್ತವೆ. ಇದಕ್ಕೆ ಹಲವು ಉದಾಹರಣೆಗಳನ್ನು ಕೊಡಬಹುದು. ಕ್ರಿ.ಶ. ೧೫೦೫ ರ ಒಂದು ಶಾಸನ ಮಹಾಮಂಡಲೇಶ್ವರ ರಾಮರಾಜ ಜಗನ್ನಾಥ, ರಾಜದೇವ ಮಹಾ ಅರಸು ಮತ್ತು ''ಮಹಾನಾಡ ಪ್ರಭು'' ಕೆಂಪವೀರಪ್ಪ ಗೌಡ, ಮಾಚಿನಾಯಕನಿಗೆ ಬಿಟ್ಟನಕುರಿಕೆಯನ್ನು ದಾನಮಾಡಿದುದನ್ನು ದಾಖಲೆ ಮಾಡಿದೆ. ಕ್ರಿ.ಶ. ೧೫೫೩ ರ ಒಂದು ಶಾಸನವು ''ಮಹಾನಾಡ ಪ್ರಭು'' ಬಿಜಾವರ ಚಿಕ್ಕಪ್ಪಗೌಡನ ಮಗ ಒಂದು ಕೋಟೆಯನ್ನು ಕಟ್ಟಿಸಿದನೆಂದು ತಿಳಿಸುತ್ತದೆ. ಕ್ರಿ.ಶ. ೧೫೫೮ ರಲ್ಲಿ ''ಮಹಾನಾಡ ಪ್ರಭು'' ಬಿದ್ಯಾವರ ಮುಮ್ಮಡಿ ಚಿಕ್ಕಪ್ಪಗೌಡರಯ್ಯ ಒಂದು ಗ್ರಾಮವನ್ನು ಉಂಬಳಿಯಾಗಿ ಕೊಟ್ಟನೆಂದು ತಿಳಿಸುತ್ತದೆ.[೧೦] ಈ ಮಹಾನಾಡ ಪ್ರಭುವಿನ ಹೊಣೆ ಗ್ರಾಮಾಡಳಿತದಲ್ಲಿ ಅಷ್ಟಿಲ್ಲದಿದ್ದರೂ, ನಾಡಿನ ರಕ್ಷಣೆ, ರಾಜ್ಯದ ರಾಜಕೀಯ ವ್ಯವಹಾರಗಳಲ್ಲಿ ಅವನು ಗಣನೀಯ ಪಾತ್ರವಹಿಸುತ್ತಿದ್ದಿರಬೇಕು. ಕೆಲವೊಮ್ಮೆ ಇಂತಹ ನಾಡ ಪ್ರಭುಗಳು ಸಾಮ್ರಾಜ್ಯ ದುರ್ಬಲವಾಗಿದ್ದಾಗ ಸ್ವತಂತ್ರರಾಗಿ ರಾಜರ ಸ್ಥಾನಮಾನ ಪಡೆಯುತ್ತಿದ್ದುದೂ ಉಂಟು. ಇದಕ್ಕೆ ಯಲಹಂಕದ ಪ್ರಭುಗಳು ಅಥವಾ ಅವತಿಯ ನಾಡಪ್ರಭುಗಳೇ ಸಾಕ್ಷಿ.

ಈ ಸ್ಥಳೀಯ ಸಂಸ್ಥೆಗಳು ಎಷ್ಟೇ ಸುವ್ಯವಸ್ಥಿತವಾಗಿದ್ದರೂ ಅವು ದಬ್ಬಾಳಿಕೆಯ ಛಾಯೆಯಿಂದ ಪೂರ್ಣವಾಗಿ ಮುಕ್ತವಾಗಿರಲಿಲ್ಲ. ಗ್ರಾಮ ಅಥವಾ ನಾಡುಗಳ ಮುಖ್ಯಸ್ಥರ ವೈಯಕ್ತಿಕ ಧೋರಣೆಯೂ ಹೆಚ್ಚು ಪಾತ್ರ ವಹಿಸುತ್ತಿತ್ತು. ಸಾಮಾನ್ಯವಾಗಿ, ಅದರಲ್ಲೂ ವಿಜಯನಗರ ಕಾಲದಲ್ಲಿ ಸೈನಿಕ ಸೇವೆ ಸಲ್ಲಿಸುತ್ತಿದ್ದುದಕ್ಕೆ ಪ್ರತಿಯಾಗಿ 'ನಾಯಕತನ' ಅಥವಾ 'ನಾಯಂಕರ' ಪದ್ಧತಿ ರೂಢಿಗೆ ಬಂದಿತ್ತು. ರಾಜನು ನಾಯಕರಿಗೆ ಭೂಮಿಯನ್ನು ಜಹಗೀರು ಬಿಡುತ್ತಿದ್ದನು. ಚಕ್ರವರ್ತಿ ಅಥವಾ ರಾಜನು ಈ ಗಾವುಂಡರು, ನಾಡಪ್ರಭುಗಳು, ನಾಯಕರು ಮೊದಲಾದ ಸ್ಥಳೀಯ ಅಧಿಕಾರಿಗಳ ಮೇಲೆ ಹೆಚ್ಚೆಚ್ಚು ಅವಲಂಬಿಸಿದಷ್ಟೂ ಊಳಿಗಮಾನ್ಯ ಪದ್ಧತಿ ಅಥವಾ ಪಾಳೆಗಾರಿಕೆ ದೃಢವಾಗುತ್ತಿತ್ತು. ಇದರ ಪರಿಣಾಮವಾಗಿ ಗೌಡಿಕೆ ಅಥವಾ ಗೌಡಾಳ್ವಿಕೆಯ ಆದರ್ಶಗಳೇನೇ ಇದ್ದರೂ, ವಾಸ್ತವವಾಗಿ ಅದು ಕೇಂದ್ರ ಸರ್ಕಾರದ ದೃಢತೆಗೆ ಹೊಂದಿಕೊಂಡಿತ್ತು. ಚಿಕ್ಕಮಗಳೂರು ತಾಲ್ಲೂಕಿನ ಒಂದು ಶಾಸನವು ಒಂದು ಊರಿನ ಅಕ್ಕಸಾಲಿಗ ಮಾಡಿದ ಅಪರಾಧಕ್ಕೆ ಆ ಊರಿನಲ್ಲಿ ಒಬ್ಬನೇ ಅಕ್ಕಸಾಲಿಗನಿದ್ದ ಕಾರಣವಾಗಿ ನೆರೆ ಊರಿನ ಅಕ್ಕಸಾಲಿಗನನ್ನು

ಮರಣದಂಡನೆಗೆ ಗುರಿಪಡಿಸಲು ಗಾವುಂಡರು ನಿರ್ಧರಿಸುತ್ತಾರೆಂದು ತಿಳಿಸುತ್ತದೆ. ಹೀಗೆ ಎಷ್ಟೋ ವೇಳೆ ನ್ಯಾಯ ನಿರ್ಣಯಗಳು ಪಕ್ಷಪಾತದಿಂದ ಕೂಡಿರುತ್ತಿದ್ದುವು. ಇನ್ನೊಂದು ಶಾಸನದ ಪ್ರಕಾರ ಒಬ್ಬ ಬ್ರಾಹ್ಮಣನ ಬಳಿ ಇದ್ದ ಆಸ್ತಿಗೆ ಮೂವರು ಗಾವುಂಡರು ಹಕ್ಕು ಸ್ಥಾಪಿಸಲಾಗಿ ಆ ಬ್ರಾಹ್ಮಣನು ನಿಮ್ಮಲ್ಲಿ ಯಾರಾದರೊಬ್ಬರು ಸತ್ತು ತಮ್ಮ ಹಕ್ಕಿಗೆ ಪ್ರಮಾಣ ತೋರಿಸಿದರೆ ಹಾಗೆ ಸತ್ತವನಕುಟುಂಬಕ್ಕೆ ಎರಡು ಪಾಲನ್ನು ಕೊಡುವುದಾಗಿ ತಿಳಿಸುತ್ತಾನೆ. ಅದರಂತೆ ಒಬ್ಬ ಗಾವುಂಡನು ಸಾಯುತ್ತಾನೆ. ಇಂತಹ ಆಕರಗಳು ಪ್ರಸಂಗಗಳು, ಕೆಲವೊಮ್ಮೆ ಗ್ರಾಮೀಣ ಜೀವನದಲ್ಲಿ ಕಂಡು ಬರುತ್ತಿದ್ದ ವಿವೇಚನೆಯ ಪರಿಮಿತಿಯನ್ನು ತೋರಿಸುತ್ತದೆ.

ಒಟ್ಟಿನಲ್ಲಿ, ಶಾಸನಗಳಿಂದ ತಿಳಿದುಬರುವಂತೆ ಗಾವುಂಡ ಅಥವಾ ಗಾವುಂಡರು ಇತಿಹಾಸದ ಪ್ರಾರಂಭಕಾಲದಿಂದಲೂ ಗ್ರಾಮೀಣ ಜೀವನದ ಸ್ಥಿರತೆಯನ್ನು ಕಾಪಾಡಲು ಶ್ರಮಿಸಿದರು. ಯಾವ ರಾಜ ಬದಲಾದರೂ, ಸಿಂಹಾಸನಗಳುದುರಿದರೂ ಗ್ರಾಮೀಣ ಜೀವನ ಕ್ಷೋಭೆಗೀಡಾಗದಂತೆ ನೋಡಿಕೊಂಡರು. ಬಿ.ವಿ. ಸಾಲೆತೊರೆಯವರ ಈ ಅಭಿಪ್ರಾಯವನ್ನು ನೋಡಿ: ''The Gaudas of different services were as much responsible for the growth of the empire as the Gurus of Sringeri; the part played by the latter has been unduly magnified while the share of the former has not been estimatd.''[೨] ವಿಜಯನಗರ ಸಾಮ್ರಾಜ್ಯ ಕಟ್ಟಲು ಅಗತ್ಯವಿದ್ದ ಬಲ ಸಂವರ್ಧನೆಗೆ ಈ ಸ್ಥಳೀಯ ಮುಖಂಡರು ಹೇಗೆ ನೆರವಾದರೆಂಬ ಬಗ್ಗೆ ಈ ವಾಸ್ತವದ ದೃಷ್ಟಿಯಲ್ಲಿ ಕಟುಸತ್ಯವಿದೆ. ಹಾಗೆಯೇ ಕೃಷ್ಣದೇವರಾಯನ ಕಾಲದಲ್ಲಿ ಆಂಧ್ರದ ರೆಡ್ಡಿಗಳು ಒರಿಸ್ಸಾ ಮತ್ತು ತಮಿಳು ನಾಡುಗಳಲ್ಲಿ ಅವನ ಆಳ್ವಿಕೆ ದೃಢಗೊಳ್ಳಲು ನೆರವಾಗುತ್ತಾರೆ.

**೫. 'ಗೌಡ' ಪದದ ನಿಷ್ಪತ್ತಿ**

ಇಲ್ಲಿ ಗಾವುಂಡ, ಗಾಮುಂಡ, ಗವುಡ ಅಥವಾ ಗೌಡ ಎಂಬ ಉಪನಾಮ ಹೇಗೆ ಬಂದಿರಬಹುದೆಂಬುದರ ಬಗ್ಗೆ ಪ್ರಸ್ತಾಪಿಸಿದರೆ ಅಪ್ರಸ್ತುತವಾಗಲಾರದೆಂದು ಭಾವಿಸಬಹುದು. ಕೆಲವು ವಿದ್ವಾಂಸರು 'ಗ್ರಾಮಕೂಟ' ದಿಂದ 'ಗಾವುಂಡ' ಬಂದಿರಬಹುದೆಂದೂ, ಇನ್ನು ಕೆಲವರು 'ಗಾಮವೃದ್ಧ' ಎಂಬ ಪದದಿಂದ ಬಂದಿರಹುದೆಂದೂ ತರ್ಕಿಸಿದ್ದಾರೆ. ಆದರೆ ಈ ಸಮಸ್ಯೆಯನ್ನು ಸರಳವಾಗಿ ಬಿಡಿಸಲಾಗುದಿಲ್ಲ. ಮೊದಲನೆಯದಾಗಿ, ಗಾವುಂಡ ಅಥವಾ ಗವುಡ ಎಂಬ ಪದ ಯಾವ ಕಾಲದಿಂದ ರೂಢಿಗೆ ಬಂತೆಂದು ತಿಳಿಯಲು ಶಾಸನಗಳಾಗಲಿ ಇತರ ಮೂಲಗಳಾಗಲಿ ನೆರವಾಗುವುದಿಲ್ಲ. ಕರ್ನಾಟಕದಲ್ಲಿ ಕನ್ನಡ ಮತ್ತು ಸಂಸ್ಕೃತ ಶಾಸನಗಳನ್ನು ಹಾಕಿಸಲು ಪ್ರಾರಂಭಿಸುವ ಮೊದಲೆ ಗಾವುಂಡ ಸಂಪದ್ಧತಿ ಇತ್ತು. 'ಗಾವುಣ್ಣ' ಎಂಬುದು ಗ್ರಾಮಾಧಿಕಾರಿ ಹುದ್ದೆಯಾಗಿದ್ದು ಆ ಕಾರಣದಿಂದ ಗೌಡ ಎಂಬ ಉಪನಾಮ ಬಂದಿತ್ತೆಂದು ವಾದಿಸಲು ಆಧಾರಗಳಿಲ್ಲ. ಗಾವುಂಡನ ಅಥವಾ ಗೌಡಿಕೆ ರಾಜಕೀಯವಾಗಿ ಮಾನ್ಯತೆಗೆ ಬಂದಮೇಲೆ ಈ ಉಪನಾಮಧಾರಣೆ ಪ್ರಾರಂಭವಾಗಿದ್ದರೆ, ಇಂದು ಒಕ್ಕಲಿಗರಲ್ಲಿ ಈ ಉಪನಾಮ ಇಷ್ಟೊಂದು ಸಾರ್ವತ್ರಿಕವಾಗಿ ಕಂಡು ಬರುತ್ತಿರಲಿಲ್ಲ. ಉದಾಹರಣೆಗೆ, ಕುಲಕರ್ಣಿ, ಹೆಬ್ಬಾರುವ, ಹೆಗ್ಗಡೆ ಇವೆಲ್ಲ ಸ್ಥಾನನಿಮಿತ್ತದಿಂದ ಬಂದವಾಗಿದ್ದು, ಅವುಗಳ ಉಪನಾಮವಿರುವ ಜನಸಂಖ್ಯೆ ಸೀಮಿತವಾಗಿದೆ. ಜೊತೆ ಒಕ್ಕಲಿಗರಲ್ಲದ ಮತ್ತು ಬುಡಕಟ್ಟು ಜನರಿಗೆ ಸನಿಹರಾದ ಉತ್ತರ ಕನ್ನಡದ ಹಾಲಕ್ಕಿ ಗೌಡರಲ್ಲೂ ಈ ಉಪನಾಮವಿದೆ. ಅಂದಮೇಲೆ ಗಾವುಂಡ ಅಥವಾ ಗೌಡ ಎಂಬ ಪದ ನಮ್ಮ ಆಡಳಿತ ವ್ಯವಸ್ಥೆ ದೃಢಗೊಳ್ಳುವ ಮೊದಲೇ ರೂಢಿಗೆ ಬಂದ್ದದೆಂದು ಊಹಿಸಬಹುದು.

ದಕ್ಷಿಣ ಭಾರತವನ್ನು ಬಿಟ್ಟರೆ ಉತ್ತರ ಭಾರತದಲ್ಲಿ ಈಗಿನ ಬಂಗಾಳ ಮತ್ತು ಒರಿಸ್ಸಾ ರಾಜ್ಯಗಳ ಕೆಲವು ಪ್ರದೇಶಗಳು ಸೇರಿದ ಪ್ರಾಂತ್ಯಕ್ಕೆ 'ಗೌಡದೇಶ' ವೆಂಬಹೆಸರಿದೆ. ಅಲ್ಲಿ 'ಗೌಡ' ಎಂಬ ಪದವನ್ನು ದೇಶ ಹಾಗೂ ಜನತೆ ಎರಡಕ್ಕೂ ಅನ್ವಯಿಸಿ ಬಳಸಲಾಗಿದೆ.[೧೩] ಕೊಂಕಣಿ ಮಾತನಾಡುವ 'ಗೌಡ ಸಾರಸ್ವತರು' ಈ ಗೌಡ ದೇಶದ ಸರಸ್ವತಿ ನದಿ ತೀರದಿಂದ ಬಂದವರೆಂದು ಅಭಿಪ್ರಾಯವಿದೆ. ಈ ಅಂಶಗಳನ್ನು ಗಮನಿಸಿದರೆ 'ಗೌಡ' ಎಂಬ ಪದದ ಮೂಲ ಇತಿಹಾಸ ಪೂರ್ವಕಾಲಕ್ಕೆ ಹೋಗುತ್ತದೆ.

ಮಾನವಶಾಸ್ತ್ರ, ಭಾಷಾಶಾಸ್ತ್ರ ಮತ್ತು ಪ್ರಾಗೈತಿಹಾಸಿಕ ಆಧಾರಗಳು ದ್ರಾವಿಡ ಭಾಷಾ ಕುಟುಂಬಕ್ಕೆ ಸೇರಿದ ಭಾಷೆಗಳನ್ನು ಮಾತನಾಡುವ ದ್ರಾವಿಡ ಜನರ ಸಂಸ್ಕೃತಿ ಮೂಲತಃ ಮೆಡಿಟರೇನಿಯನ್ ಪ್ರದೇಶದಿಂದ ಬಂದದ್ದೆಂದು ತಿಳಿಸುತ್ತವೆ. ಹೀಗೆ, ತಂಡ ತಂಡವಾಗಿ ಭಾರತವನ್ನು ಪ್ರವೇಶಿಸಿ ದಕ್ಷಿಣದತ್ತ ಚಲಿಸುತ್ತಿದ್ದ ಸಮೂಹಗಳು ಅಲ್ಲಲ್ಲಿ ನೆಲಸುತ್ತಿದ್ದವು. ಹಾಗೇ ಒಂದು ಸಮೂಹ ಉತ್ತರದ ಗೌಡ ದೇಶದಲ್ಲಿ ನೆಲಸಿದ್ದಿರಬೇಕು. 'ಗೌಡ' ಎನ್ನುವುದು 'ಗಾವುಂಡ' ಎಂಬುದರ ಸಂಸ್ಕೃತ ರೂಪ. ಈ ಗಾವುಂಡ ಪದ ಆ ಕಾಲದಲ್ಲಿ ಒಂದು ಗುಂಪಿನ ಅಥವಾ ಹಳ್ಳಿಯ ಒಡೆಯನಿಗೆ ಅನ್ವಯಿಸಿ ಬಳಕೆಯಲ್ಲಿತ್ತು. ದ್ರಾವಿಡ ಅಥವಾ ಪ್ರಾಕೃತ ಮೂಲವಾದ ಗಾವ್ ಅಥವಾ ಗಾವು, ಗಾವೆ ಎಂಬ ಪದ ಹಳ್ಳಿಗೆ, ಇಲ್ಲವೇ ಒಂದು ಗುಂಪು ನೆಲಸಿದ್ದ ಪ್ರದೇಶಕ್ಕೆ ಅನ್ವಯಿಸುತ್ತಿತ್ತು. 'ಉಂದ' ಎಂದರೆ ಗೌರವಸ್ಥ, ಮರ್ಯಾದೆಗೆ ಯೋಗ್ಯವಾದ ಎಂಬ ಅರ್ಥ.[೧೪] ಅಂದರೆ ಗಾವುಂದ ಅಥವಾ ಗಾವುಂಡ ಎಂದರೆ, ಗ್ರಾಮದ ಅಥವಾ ಗುಂಪಿನ ಯಜಮಾನ ಎಂಬ ಅರ್ಥದಿಂದ ಕೂಡಿತ್ತು. 'ಊರು ಹಾಳಾದರೂ ಗಾವುದ ಕಿರಿದೇ?' ಎಂಬ ಗಾದೆ ಪ್ರಾಚೀನ ಕಾಲದಲ್ಲಿ ಬಳಕೆಯಲ್ಲಿದ್ದುದು ಸಾಹಿತ್ಯದಿಂದ ತಿಳಿದುಬರುತ್ತದೆ. ಅಂದರೆ ಗಾವುದ ಎಂಬ ಅಳತೆಯು ಒಂದು ಗುಂಪು ನೆಲಸಲು ಬೇಕಾದ ಅಥವಾ ನಿರ್ದಿಷ್ಟವಾದ ಪ್ರದೇಶದ ಅಳತೆಯಾಗಿತ್ತೆಂದು ತೋರುತ್ತದೆ. ಗಾವುದ ಅನ್ನುವುದು ಗಾವು ಅಥವಾ ಹಳ್ಳಿಯಿಂದ ಬಂದಂತೆ ಗಾವುಂಡ ಅಥವಾ ಗೌಡ ಪದವೂ ಹಳ್ಳಿಯ ಅಥವಾ ಗುಂಪಿನ ಮುಖಂಡ ಎಂಬುದರಿಂದ ಬಂದಿತ್ತು. ಈ ದೃಷ್ಟಿಯಿಂದ 'ಗಾನ್‌ಕಾರ್' ಅಥವಾ 'ಗಾಂವ್‌ಕಾರ್' ಹಾಗೂ 'ಗಾವಿಲರು' ಮುಂತಾದ ಪದಗಳ ನಿಷ್ಪತ್ತಿಯನ್ನು ಪರಿಶೀಲಿಸಬಹುದು.

ಹೀಗೆ, ಗಾವುಂಡರನ್ನು ಹೊಂದಿದ್ದ ಜನ ಸಾಮಾಜಿಕ ಮತ್ತು ರಾಜಕೀಯ ವ್ಯವಸ್ಥೆ ಬೆಳೆದಾಗ ಅವರಿದ್ದ ಪ್ರದೇಶ ಸಂಸ್ಕೃತದಲ್ಲಿ 'ಗೌಡದೇಶ'ವಾಯಿತು. ಮುಂದೆ ಈ ಸಮೂಹಗಳು ದಕ್ಷಿಣದತ್ತ ಚಲಿಸಿ ಇತರ ಸಮೂಹಗಳೊಂದಿಗೆ ಬೆರೆತಾಗ, ತಮ್ಮ ಗುಂಪಿನ ಪ್ರತ್ಯೇಕತೆಗಾಗಿ ಅವರು ಗೌಡ ಉಪನಾಮಗಳನ್ನು ಇಟ್ಟುಕೊಳ್ಳತೊಡಗಿದರು. ಈ ದೊಡ್ಡ ಸಮೂಹದಲ್ಲಿ ವಿವಿಧ ಗುಂಪುಗಳು ಚದುರಿಹೋಗಿ ನೆಲೆಸಿದಾಗ ಅವರಲ್ಲೇ ಬೇರೆ ಬೇರೆ ವೃತ್ತಿಪರ ಬಣಗಳು ಬೆಳೆದು, ಹಿಂದೂ ಜಾತಿಪದ್ಧತಿಯಲ್ಲಿ ಪ್ರತ್ಯೇಕಗೊಂಡವು. ಆದ್ದರಿಂದಲೇ 'ಗೌಡ' ಎಂಬ ಉಪನಾಮ ಇಂದು ಒಕ್ಕಲಿಗರು, ಗಿರಿಜನರು, ಕುರುಬರು, ತಿಗಳರು, ಈಡಿಗರು ಮೊದಲಾದವರಲ್ಲಿ ಕಂಡುಬರುವುದು. ಕರ್ನಾಟಕದಲ್ಲಿ ರಾಜಕೀಯ ವ್ಯವಸ್ಥೆ ದೃಢಗೊಂಡಾಗ ಗ್ರಾಮೀಣ ಪ್ರದೇಶದಲ್ಲಿ ಈ ಗಾವುಂಡಗಳ ಪ್ರಾಬಲ್ಯವನ್ನು ಮನಗಂಡ ರಾಜರುಗಳು ಅವರನ್ನೇ ಗ್ರಾಮಾಧಿಕಾರಿಗಳನ್ನಾಗಿ ನೇಮಿಸತೊಡಗಿದರು. ಇದರಿಂದ 'ಗಾವುಂಡತನ' ಅಥವಾ 'ಗೌಡಿಕೆ' ತಲೆ ತಲಾಂತರದವರೆಗೂ ಮುಂದುವರಿಯಿತು.

೬. ಪೌರುಷ ಮತ್ತು ತ್ಯಾಗ

ಶಾಸನಗಳನ್ನು ಪರಿಶೀಲಿಸಿದಾಗ ಒಕ್ಕಲಿಗರು ಪೌರುಷ ಮತ್ತು ತ್ಯಾಗಕ್ಕೆ ಹೆಸರಾಗಿದ್ದರೆಂಬುದು ತಿಳಿದುಬರುತ್ತದೆ. 'ಧರ್ಮಶಾಸ್ತ್ರ'ಕಾರರು ಸೃಷ್ಟಿಸಿದ್ದ ಕಲ್ಪನೆಯ ವರ್ಣಾಶ್ರಮ ಧರ್ಮಕ್ಕೂ, ವಾಸ್ತವ ಸ್ಥಿತಿಗೂ ಅಜಗಜಾಂತರ ವ್ಯತ್ಯಾಸವಿತ್ತು. ಕ್ಷತ್ರಿಯರು ರಾಜ್ಯಭಾರ ಮಾಡುತ್ತಾರೆಂದೂ, ರಣರಂಗದಲ್ಲಿ ಹೋರಾಡುತ್ತಾರೆಂದೂ, ಶೂದ್ರನು ದೈಹಿಕ ಶ್ರಮದ ಕೆಲಸ ಮತ್ತು ಕೀಳು ಕೆಲಸಗಳನ್ನು ಮಾಡುತ್ತಾನೆಂದೂ ಶಾಸ್ತ್ರಗಳು ತಿಳಿಸುತ್ತವೆ. ಜೊತೆಗೆ ವೈಶ್ಯರು ವ್ಯವಸಾಯ ಹಾಗೂ ವ್ಯಾಪಾರ ಮಾಡುತ್ತಾರೆಂದು ತಿಳಿಸುತ್ತವೆ. ಆದರೆ ಒಕ್ಕಲಿಗರನ್ನು ಈ ದೃಷ್ಟಿಯಿಂದ ನೋಡಿದರೆ ಅವರು ವೈಶ್ಯರೂ ಹೌದು ಮತ್ತು ಶೂದ್ರರೂ ಹೌದೆಂದು ತೋರುತ್ತದೆ. ಆದರೂ ವಾಸ್ತವದಲ್ಲಿ ಈ ವಿಂಗಡಣೆಗಳಿರಲಿಲ್ಲ. ಒಕ್ಕಲಿಗರು ಕ್ಷತ್ರಿಯರೆಂದೆನಿಸದಿದ್ದರೂ, ಕ್ಷಾತ್ರದಿಂದ ಹೋರಾಡಲು ಮುಂದಾಗುತ್ತಿದ್ದುದು ಶಾಸನಗಳಿಂದ ತಿಳಿದುಬರುತ್ತದೆ. ಶತ್ರು ರಾಜರು ದಾಳಿಮಾಡಿದಾಗ, ಊರಿನ ಮೇಲೆ ದರೋಡೆಕಾರರು ನುಗ್ಗಿ ಗೋವುಗಳನ್ನೂ, ಸ್ತ್ರೀಯರನ್ನೂ ಅಪಹರಿಸಲೆತ್ನಿಸಿದಾಗ ಗೋವುಗಳ ಮೇಲೆ ಹುಲಿಗಳು ಎರಗಿದಾಗ, ಧೈರ್ಯದಿಂದ ಹೋರಾಡಿ ಗೆದ್ದ ಮತ್ತು ಮಡಿದು ಜೀವನ ಸಾರ್ಥಕಮಾಡಿಕೊಂಡ ಗಾವುಂಡರ ಪ್ರಸಂಗಗಳನ್ನು ತಿಳಿಸುವ ನೂರಾರು ಶಾಸನಗಳು ಕಂಡುಬರುತ್ತವೆ. ಈ ವಿಷಯವನ್ನು ತಿಳಿಸುವ ವೀರಗಲ್ಲುಗಳು ಹೇರಳವಾಗಿ ದೊರೆಯುತ್ತವೆ. ಒಂದು ಶಾಸನವು[**] ಪೆರ್ಗಡೆಗೌಡನ ಸಾಹಸವನ್ನು ವರ್ಣಿಸುತ್ತ

''ಕೋಟೆಯ ಸುಟ್ಟು ಅಲ್ಲಿನ ನಾಯಕನ ಬಳಮಂ ವೈರಿ ಸಂಹಾರಂ ಮಾಡಿ ಸ್ವರ್ಗಸ್ತನಾದಂ''

ಎಂದು ತಿಳಿಸುತ್ತದೆ. ಕೃಷ್ಣರಾಜಪೇಟೆ ತಾಲ್ಲೂಕಿನ ಶಾಸನ ಒಂದು ಗಾವುಂಡನೊಬ್ಬನ ಪರಾಕ್ರಮವನ್ನು ಹೀಗೆ ವರ್ಣಿಸಿದೆ.

''ಮಾರಗೊಂಡನ ಪುತ್ರ ಪಯಿತ್ರ ಗೋತ್ರ ಚಿಂತಾಮಣಿ ನೆರೆಯದ ಗಂಡಂ ಪಿರಿದುಂ ಕಾಯಿದುರದೆ ಹೊರಗೆ ಹಳಿವರ ಗಂಡಂ, ಮನ್ನೆಯಬೇಂಟೆಕಾರ ಚಲಕ್ಕೆ ಬಲುದಡೆ ವೀರಕೈವಿಳಷವನೆ ಗುಡ್ಡಂ ರಣರಂಗ ಧೀರ''

ಶಿಕಾರಿಪುರದ ಶಾಸನವೊಂದು ಗೌಡನೊಬ್ಬ ಪೈಲವಾನರೊಡನೆ ಕಾದಿ ಮಡಿದಾಗ ಅವನ ಮಗಳು ಹರಿಯಕ್ಕ ಎಂಬುವಳು ಆ ಪೈಲವಾನರನ್ನು ಹೊಂಚುಹಾಕಿ ಎದುರಿಸಿ ಹೋರಾಡಿ ಸ್ವರ್ಗಸ್ಥಳಾದಳು ಎಂದು ತಿಳಿಸುತ್ತದೆ. ಇದು ವೀರವನಿತೆಯ ಶೌರ್ಯಕ್ಕೆ ಸಾಕ್ಷಿಯಾಗಿದೆ.

ಗೋವುಗಳನ್ನು ಕಳ್ಳಕಾಕರಷ್ಟೇ ಅಲ್ಲದೆ, ಕೆಲವೊಮ್ಮೆ ಸಾಮಂತರೂ ಅಪಹರಿಸಲೆತ್ನಿಸುತ್ತಿದ್ದರು. ಅಂತಹ ಸಂದರ್ಭದಲ್ಲಿ ಸಹೋದರರಿಬ್ಬರು ತೋರಿದ ಶೌರ್ಯದ ವರ್ಣನೆ ಹೀಗಿದೆ. ''ಶ್ರೀಮನ್ಮಹಾಮಂಡಳೇಶ್ವರ ಜಗದೇಕರಸರು ಕೊರಕೋಡು ಎಂಬ ಊರಿನ ತುರುಗಳನ್ನು ಹೊಡೆದುಕೊಂಡು ಹೋಗುವಾಗ, ದೇವಗಾವುಂಡ ಮತ್ತು ಮಲ್ಲಗಾವುಂಡ ಎಂಬ ಇಬ್ಬರು ಸೋದರರು ಊರ ಹೆಬ್ಬಾಗಿಲಲ್ಲಿ ಸಿಂಹಗಳಂತೆ ನಿಂತು ಬಾಣಗಳ ಮಳೆಯನ್ನೇ ಸುರಿಸುತ್ತಾರೆ. ಬಾಣಗಳನ್ನು ಬಿಟ್ಟೂ, ಬಿಟ್ಟು, ಬಿಲ್ಲಿನ ಹಗ್ಗವೇ ತೆಗೆದುಕೊಂಡು ಶತ್ರುಗಳ ಮೇಲೆ ಬಿದ್ದು ಅನೇಕರನ್ನು ಕೊಂದು ಮಡಿಯುತ್ತಾರೆ. ಇದನ್ನು ನೋಡಿ ಸಹಿಸದ ಬಪ್ಪಗಾವುಂಡನು ತನ್ನ ಅಣ್ಣಂದಿರು ಆದದ್ದನ್ನೇ ಆಗಲು ಬಯಸಿ, ಸೇನೆಯನ್ನು ಬೆನ್ನಟ್ಟುತ್ತಾನೆ. ಅಷ್ಟರಲ್ಲಿ ಎಕ್ಕಲರಸನ ಆಳು ಕುದುರೆಗಳು ಅವನ ಸಹಾಯಕ್ಕೆ ಬಂದದ್ದರಿಂದ, ಹಾಲ್ಗಟ್ಟದ ಬಯಲಿನಲ್ಲಿ 'ಒಡನೊಡ್ಡಿ' ಶತ್ರುಗಳನ್ನು ಕೊಂದು ದನಗಳನ್ನು ಹಿಂದಿರುಗಿಸಿ, ಅಣ್ಣಂದಿರಿಗೆ ಜಲದಾನಕ್ರಿಯೆಯನ್ನು ಮಾಡಿ ವೀರಗಲ್ಲನ್ನು ನಿಲ್ಲಿಸುತ್ತಾನೆ.

ಇಂತಹ ನೂರಾರು ಪ್ರಸಂಗಗಳು ಶಾಸನಗಳಲ್ಲಿದ್ದು, ಅವು ಓದುಗರ ಮನಮಿಡಿಯುತ್ತವೆ. ಕಾನೂನನ್ನು ಸರಿಯಾಗಿ ಜಾರಿಗೊಳಿಸಲಾಗದ ಮತ್ತು ಸಂಪರ್ಕ ವ್ಯವಸ್ಥೆ ಬಹು ಅಲ್ಪವಾಗಿದ್ದ ಪ್ರಾಚೀನ ಕಾಲದಲ್ಲಿ ಊರಿನ ಯುವಕರು ಮತ್ತು ವೀರರೇ ಧನ, ದನ ಮತ್ತು ಸ್ತ್ರೀಯರನ್ನು ರಕ್ಷಿಸಬೇಕಾಗಿತ್ತು. ಅವರು ಅದಕ್ಕಾಗಿ ತಮ್ಮ ಪ್ರಾಣ ಅರ್ಪಿಸಲೂ ಸಿದ್ಧರಾಗಿಬೇಕಾಗಿತ್ತು ಅವರ ಈ ತ್ಯಾಗಕ್ಕೆ ಆದರ್ಶವಾಗಿರುವ ವಾಕ್ಯಗಳೂ ಶಾಸನಗಳಲ್ಲಿ[೧೮] ದೊರೆಯುತ್ತವೆ.

''ಸಣಗಾವುಂಡನಳಿಯ ಕಾಮಗಾವುಂಡಂ

ಪರೋಪಕಾರಾರ್ತ್ಥ ಮಿದಂ ಶರೀರಮೆಂಬ

ವಾಕ್ಯಾರ್ತ್ಥಮಂ ನೆನೆದು.''

ಇಂತಹ ತ್ಯಾಗಕ್ಕೆ ಸಿದ್ಧನಾದನೆಂದು ಶಾಸನವೊಂದು ತಿಳಿಸುತ್ತದೆ. ಅಂದರೆ, ಅಂತಹವರು ತಮ್ಮ ಜೀವನವನ್ನೇ ಹೇಗೆ ಒಳ್ಳೆಯ ಕಾರ್ಯಕ್ಕಾಗಿ, ನ್ಯಾಯಪಾಲನೆಗಾಗಿ ಸವೆಸುತ್ತಿದ್ದರೆಂಬುದು ತಿಳಿದುಬರುತ್ತದೆ.

**೭. ವಿದ್ಯೆ**

ಪ್ರಾಚೀನ ಕಾಲದಲ್ಲಿ ವಿದ್ಯೆ ಪುರೋಹಿತ ವರ್ಗಕ್ಕೆ ಮಾತ್ರ ಮೀಸಲಾಗಿತ್ತೆಂಬ ಭಾವನೆ ಸ್ವಲ್ಪಮಟ್ಟಿಗೆ ಪ್ರಚಲಿತವಾಗಿರುವುದನ್ನು ಕಾಣುತ್ತೇವೆ. ಆದರೆ ಇದು ವಸ್ತು ಸಂಗತಿಗೆ ದೂರವಾದುದು. ಅಗ್ರಹಾರಗಳನ್ನು ಸ್ಥಾಪಿಸಿ ಬ್ರಾಹ್ಮಣರಿಗೆ ಅಧ್ಯನಯಕ್ಕಾಗಿ ವಿಶೇಷ ಸೌಲಭ್ಯ ಕಲ್ಪಿಸುತ್ತಿದ್ದರೂ ''ವೇದಗಳನ್ನು ಬಿಟ್ಟು ಸ್ಮೃತಿ, ಪುರಾಣ, ಮಹಾ ಕಾವ್ಯಗಳನ್ನು ಶೂದ್ರರೂ ಅಧ್ಯಯನ ಮಾಡಬಹುದಿತ್ತು''[೧೯].

ಜೊತೆಗೆ ಜೈನಧರ್ಮ ಮತ್ತು ವಿರಶೈವ ಧರ್ಮಗಳು ವೈದಿಕೇತರರಿಗೆ ವಿದ್ಯಾಪ್ರಾಪ್ತಿಗಾಗಿ ಹೆಚ್ಚು ಅವಕಾಶಗಳನ್ನು ಕಲ್ಪಿಸಿದವು. ಸ್ಥಳೀಯ ಆಡಳಿತ ಹೊಣೆ ಹೊತ್ತ ಗಾವುಂಡರು ವಿದ್ಯೆ ಕಲಿಯುವುದು ಅನಿವಾರ್ಯವೂ ಆಗಿತ್ತು. ಇಂದಿಗೂ ಹಳ್ಳಿಗಳಲ್ಲಿ ದೊರೆಯುವ ಪ್ರಾಚೀನ ಓಲೆಗರಿ ಕೃತಿಗಳು ಹಿಂದಿನ ತಲೆಮಾರಿನವರ ಅಕ್ಷರಜ್ಞಾನಕ್ಕೆ ಸಾಕ್ಷಿಯಾಗಿವೆ. ಶಾಸನವೊಂದರಲ್ಲಿ[೨೦] ಗಾವುಂಡನೊಬ್ಬನ ವಿದ್ಯಾ ಪ್ರೌಢಿಮೆಯನ್ನು ಹೀಗೆ ವರ್ಣಿಸಲಾಗಿದೆ.

''ಮಸಣಗುಡನ ಪ್ರತಾಪವೆಂತೆಂದಡೆ

ವಿವೇಕ ವಿದ್ಯಾಧರ ಸಾಹಿತ್ಯ ಸಪನ್ನಂ ರೂಪಿನ

ಕಾಮದೇವ ಭೋಗದಲಿಂದ್ರಂ ಗೋತ್ರಪವಿತ್ರ ಪುರುಷ ಚಿಂತಾಮಣಿ ಕಾಯದಲ್ಲಿ ಬ್ರೆಹಸ್ಪತಿ''

ಗೌಡರು ಅನೇಕ ಅಗ್ರಹಾರಗಳಿಗೆ ದಾನದತ್ತಿಗಳನ್ನು ಬಿಟ್ಟು ವಿದ್ಯಾಭ್ಯಾಸದ ಪ್ರೋತ್ಸಾಹಕ್ಕೆ ಕಾರಣರಾಗಿರುವುದು ಶಾಸನಗಳಿಂದ ತಿಳಿದುಬರುತ್ತದೆ. ವಿಶೇಷವಾಗಿ ಭಾರತೀಯ ಸಮಾಜದಲ್ಲಿ ವಿದ್ಯೆಗೆ ಮತ್ತು ಬರವಣಿಗೆಗೆ ಸಂಬಂಧಪಟ್ಟ ಕೆಲಸಗಳನ್ನು ಬ್ರಾಹ್ಮಣರೇ ಮಾಡುತ್ತಾ ಬಂದದ್ದರಿಂದ ಇತರರಿಗೆ ಉದ್ಯೋಗಾವಕಾಶಗಳಿಲ್ಲದಿದ್ದರೂ ವ್ಯಾಪಕವಾದ ವಿದ್ಯಾಪ್ರಸಾರಕ್ಕೆ ನಿರುತ್ತೇಜನಕ ಪರಿಸ್ಥಿತಿಯಾಗಿತ್ತೆಂಬುದನ್ನು ಗಮನಿಸಬಹುದು.

**೮. ಧರ್ಮ ಕಾರ್ಯ**

ಧರ್ಮ ಕಾರ್ಯಗಳಲ್ಲಿ ಗಾವುಂಡರು ಮುಂದಾಗುತ್ತಿದ್ದರು. ಸ್ವರ್ಗ-ನರಕಗಳ, ಪಾಪ-ಪುಣ್ಯಗಳು, ಕಲ್ಪನೆಗುಳು ಅವರಲ್ಲಿ ದೃಢವಾಗಿ ಮನೆಮಾಡಿದ್ದಂತೆ ತೋರುತ್ತವೆ. ತಮ್ಮ ಹಿರಿಯರು ಮೃತರಾದಾಗ, ಅವರಿಗೆ ಸದ್ಗತಿ

ದೊರೆಯಲೆಂದು ದಾನಧರ್ಮ ಮಾಡುತ್ತಿದ್ದರು. ಚಿನ್ನಣ್ಣ ಎಂಬುವನು ಕ್ರಿ.ಶ ೧೩೬೫ರಲ್ಲಿ ತನ್ನ ತಂದೆ ಮಾಚಗಾವುಂಡ ಮತ್ತು ತಾಯಿ ಮೆಲಯಕ್ಕಾರಿಗೆ ಸ್ವರ್ಗ ಪ್ರಾಪ್ತಿಯಾಗಲೆಂದು ವಿಘ್ನೇಶ್ವರ ದೇವರಿಗೆ 'ದೀಪಮಾಲೆ' ಕಂಬವನ್ನು ಸ್ಥಾಪಿಸುತ್ತಾನೆ.[೨೦] ಇನ್ನೊಂದು ಶಾಸನದಿಂದ[೨೧] ಗಾವುಂಡನೊಬ್ಬನು ತನ್ನ ತಂದೆ, ತಾಯಿ ಮತ್ತು ಗುರುವಿಗೆ ಸದ್ಗತಿದೊರೆಯಲೆಂದು ಗೃಹ ತೆರಿಗೆ ಬಿಟ್ಟುಕೊಡುತ್ತಾನೆಂದು ತಿಳಿದುಬರುತ್ತದೆ. ಗೌಡರುಗಳು ಕೆರೆಗಳ ನಿರ್ಮಾಣ, ದೇವಾಲಯಗಳು ಸ್ಥಾಪನೆ, ಅವುಗಳ ದುರಸ್ತಿ ಮೊದಲಾದ ಸಾರ್ವಜನಿಕ ಕಾರ್ಯಗಳಿಗಾಗಿ ದಾನ ಮಾಡುತ್ತಿದ್ದರು. ದತ್ತಿ ಬಿಡುತ್ತಿದ್ದರು. ಹೀಗೆ ದಾನಗಳನ್ನು ಕೇವಲ ಊರ ಮುಖ್ಯಸ್ಥರಷ್ಟೇ ನೀಡುತ್ತಿರಲಿಲ್ಲ. ಇತರರೂ ತಮ್ಮ ಶಕ್ತ್ಯಾನುಸಾರ ದಾನ ಮಾಡುತ್ತಿದ್ದರು. ಕೆಲವು ಗೌಡರು ಸೇರಿ ನಂಜನಗೂಡು ತಾಲ್ಲೂಕಿನ ಹೆಂಮರಗಾಲದಲ್ಲಿದ್ದ ಬೀರೇದೇವರ ಗುಡಿಯನ್ನು ದುರಸ್ತಿ ಮಾಡಿ ನಡೆಸಿಕೊಂಡು ಹೋಗುತ್ತಾರೆ. ಆದರೆ ಕಾಲಾನಂತರದಲ್ಲಿ ಅವರ ಉತ್ತರಾಧಿಕಾರಿಗಳು ತಮ್ಮಿಂದ ಈ ದೇವಾಲಯದ ಖರ್ಚುವೆಚ್ಚವನ್ನು ವಹಿಸಲು ಸಾಧ್ಯವಿಲ್ಲವೆಂದು ತಮ್ಮ ಅಸಹಾಯಕತೆಯನ್ನು ವ್ಯಕ್ತಪಡಿಸುತ್ತಾರೆ. ಆಗ ಅದೇ ಊರಿನ ದೊಡ್ಡ ಬೀರೇಗೌಡ ಎಂಬವನು ಆ ಜವಾಬ್ದಾರಿಯನ್ನು ಹೊತ್ತುಕೊಂಡು, ದೇವಾಲಯದ ಧೂಪ ದೀಪ ಸೇವೆ ಮುಂದುವರಿಯುವಂತೆ ಮಾಡುತ್ತಾನೆ.[೨೨] ಸೋಮಣ್ಣ ನೆಂಬುವನು ತನ್ನ ಸ್ವರ್ಗಸ್ಥ ತಾಯಿ ಕೇತಗಾವುಂಡಿಯ ಸದ್ಗತಿಗಾಗಿ ಬಾವಿ ತೋಡಿಸಿ,ತೋಪು ನೆಡಿಸುತ್ತಾನೆಂದು ಶಾಸನವೊಂದರಿಂದ ತಿಳಿದುಬರುತ್ತದೆ.

ಒಕ್ಕಲಿಗರು ಶಿವ, ವಿಷ್ಣು, ಬ್ರಹ್ಮ, ಜಿನ ಎಂಬ ಭೇದಭಾವ ವಿಲ್ಲದೆ ದೇವಕಾರ್ಯಗಳನ್ನು ನಡೆಸಿಕೊಂಡು ಬರುತ್ತಿದ್ದರು. ವೈಯಕ್ತಿಕವಾಗಿ ಅವರು ಯಾವುದಾದರೊಂದು ಮತಾನುಚರಣೆ ಮಾಡುತ್ತಿದ್ದ ವಿಷಯವು ಶಾಸನಗಳಿಂದ ತಿಳಿದು ಬರುತ್ತದೆ. ಗಂಗರು ಮತ್ತು ಹೊಯ್ಸಳರ ಪ್ರಾರಂಭದ ಕಾಲದಲ್ಲಿ ಒಕ್ಕಲಿಗರ ಮುಖಂಡರು ಜೈನಧರ್ಮದತ್ತ ಒಲವು ತೋರಿಸಿದ್ದು ಕಂಡುಬರುತ್ತದೆ. ಹೆಗ್ಗಡದೇವನ ಕೋಟೆಯ ಶಾನವೊಂದು.[೨೩]

''ಅರುಂದಲೆ ಗಣಾಗ್ರಗಂಣ್ಯರಪ್ಪ

ಶ್ರೀಮತ್ಪಂಡಿತದೇವ ಯಿವರ ಶಿಷ್ಯರು ಬಯಿನಾಡ

ಮಹಾಪ್ರಭು ಮಸಣೆಯ ಹಳಿಯ ಕಂಪಣಗವುಡರು

......ಬೆಳಗುಳದ ಶ್ರೀ ಗುಂಮಟನಾಥ ಸ್ವಾಮಿಗಳ

ಅಂಗರಂಗ ಭೋಗ ಸಂರಕ್ಷಣಾರ್ಥವಾಗಿ''

ತೋಟದಲ್ಲಿ ಎಂಬ ಗ್ರಾಮಕ್ಕೆ ಗುಮ್ಮಟಪುರವೆಂದು ಪುನರ್ನಾಮಕರಣ ಮಾಡಿದರೆಂದು ತಿಳಿಸುತ್ತದೆ. ಬೆಂಕಚಿಯ ಗೌಡನು ಶಿವಪೂಜೆಗಾಗಿ ವೀರಣ್ಣ ಒಡೆಯನೆಂಬುವನಿಗೆ ಒಂದು ಹಳ್ಳಿಯನ್ನೇ ಪುರವನ್ನಾಗಿ ಪರಿವರ್ತಿಸಿಕೊಡುತ್ತಾನೆ. ಬಹುಶಃ ಗಾವುಂಡರು ಹೀಗೆ ಹಳ್ಳಿಗಳ ಆದಾಯವನ್ನು ದಾನಮಾಡುವ ಅಧಿಕಾರ ಪಡೆದಿದ್ದಂತೆ ತೋರುತ್ತದೆ. ಆ ಕಾಲದಲ್ಲಿ ಜನರು ಕೇವಲ ಪೂಜೆ ಪುನಸ್ಕಾರಗಳಿಂದ ದೇವರನ್ನು ಮೆಚ್ಚಿಸಲು ಸಾಧ್ಯವಿಲ್ಲ. ಹತ್ತು ಜನರಿಗೆ ಉಪಯೋಗವಾಗುವಂತಹ ಕೆಲಸಕಾರ್ಯಗಳನ್ನು ಮಾಡಿ, ಜೀವನ ಸಾರ್ಥಕ ಪಡಿಸಿಕೊಳ್ಳಬೇಕೆಂದು ಬಗೆದಿದ್ದರು. ಇಂತಹ ದಾನ ಶಾಸನಗಳು ಶಾಸನಗಳ ಸಂಪುಟವನ್ನು ತಿರುವಿಹಾಕಿದಾಗ ಎಲ್ಲಂದರಲ್ಲಿ ಕಂಡುಬರುತ್ತವೆ.

೯. ಸ್ತ್ರೀಯರು

ಪ್ರಾಚೀನ ಕಾಲದಲ್ಲಿ ಸ್ತ್ರೀಯರ ಚಟುವಟಿಕೆಗೆ ಹೆಚ್ಚಿನ ಅವಕಾಶವಿರಲಿಲ್ಲವೆಂಬುದು ಮತ್ತು ಅವರಿಗೆ ಸಾಮಾಜಿಕ ಮನ್ನಣೆ ಕಡಿಮೆ ಇತ್ತೆಂಬುದೂ ಸಾಮಾನ್ಯಾಭಿಪ್ರಾಯ, ಅವಿಭಕ್ತ ಕುಟುಂಬವೇ ಪ್ರಧಾನವಾಗಿದ್ದ ಮತ್ತು ವ್ಯವಸಾಯ ಪ್ರಧಾನ ಸಮಾಜದಲ್ಲಿ ಈ ಲಕ್ಷಣಗಳಿದ್ದುದು ಸಹಜವೇ ಆದರೂ ಶಾಸನಗಳು ಮತ್ತ ಜನಪದ ಸಾಹಿತ್ಯ ಸ್ತ್ರೀಯರ ಆದರ್ಶ ಜೀವನವನ್ನು ಕೊಂಡಾಡಿರುವುದು ಮತ್ತು ಹೆಣ್ಣಿನ ರಕ್ಷಣೆಯ ಬಗ್ಗೆ ಕಾಳಜಿ ತೋರಿಸುವುದನ್ನು ನೋಡಿದರೆ ಅವರಲ್ಲೂ ಕೆಲವರಿಗಾದರೂ ಮಾನ್ಯತೆ ದೊರೆತಿದ್ದುದು ಕಂಡುಬರುತ್ತದೆ. ರಾಣಿಯರು ಮತ್ತು ನಾಯಕರುಗಳ ಪತ್ನಿಯರಿಗೆ ಪ್ರಾಶಸ್ತ್ಯ ಕೊಟ್ಟಂತೆಯೇ, ಕೆಲವೆಡೆ ಗಾವುಂಡರ ಪತ್ನಿಯರನ್ನೂ ಹೊಗಳಲಾಗಿದೆ. ಅವರ ಗುಣಲಕ್ಷಣಗಳನ್ನು ವರ್ಣಿಸಲಾಗಿದೆ. ಕೃಷ್ಣರಾಜಪೇಟೆ ತಾಲ್ಲೂಕಿನ ಒಂದು ಶಾಸನದಲ್ಲಿ ಈ ರೀತಿ ವರ್ಣನೆ ಇದೆ.

''ಕತ್ತರಿಗಟ್ಟಿದ ನಾಡಾಳ್ವಪ್ರಭು ಮೊಡವನ ಕೋಡಿಯ

ಮಾಚೆಗುಡನ ಅರ್ಧಾಂಗ ಲಕ್ಷುಮಿ ಧರ್ಮದಮೇರು

ಪಾರ್ಬತಿ ಗಉರಿ ಅಭಿಮಾನ ಸುಗ್ಗಲದೇವಿ

ಗೋತ್ರ ಚಿಂತಾಮಣಿ ರಾಣಿ ಮೊಖ ಜೋತಿ ಮಾದಗವುಡಿ''[೨೫]

ಇದನ್ನು ಗಮನಿಸಿದವರು ಗೌಡರ ಪತ್ನಿಯರು ಸಾರ್ವಜನಿಕವಾಗಿ ಮಾನ್ಯತೆ ಪಡೆದಿದ್ದುದು ತಿಳಿದುಬರುತ್ತದೆ. ಅಂದಿನ ಒಕ್ಕಲಿಗರಲ್ಲಿ ಸಹಗಮನ ಪದ್ಧತಿ ರೂಢಿಯಲ್ಲಿದ್ದಂತೆ ಕಂಡುಬರುತ್ತದೆ. ಜೈನ ಗವುಡನೊಬ್ಬನು ಮೃತನಾಗಲು ಆತನ ಪತ್ನಿ ಗವುಡಿಯು ''ಆತನ ಕೊಡೆ ಸಮಾಧಿಯನು ಕೂಡಿದಳು''[೨೬] ಎಂದು ಶಾಸನ ಒಂದರಲ್ಲಿ ತಿಳಿಸಲಾಗಿದೆ. ಹೀಗೆ, ಮಹಾಸತಿಯರಾಗಿ ತಮ್ಮ ಪತಿಭಕ್ತಿಯನ್ನು ತೋರಿಸಿದ ಅನೇಕ ಸ್ತ್ರೀಯರ ಬಗ್ಗೆ ಮಹಾಸತಿ ಕಲ್ಲುಗಳು ಸಾಕ್ಷಿಯಾಗಿವೆ. ಕೆರೆಗಳನ್ನು ತೋಡಿಸಿದಾಗ ನೀರು ಬರದಿದ್ದರೆ ಹಾಗೆ ತೋಡಿಸಿದವರ ಕುಟುಂಬದ ಮಹಿಳೆಯೊಬ್ಬಳು ಬಲಿಯಾದರೆ ನೀರು ಬರುತ್ತದೆಂಬ ನಂಬಿಕೆ ಆ ಕಾಲದಲ್ಲಿ ಪ್ರಚಲಿತವಾಗಿತ್ತು. ಈ ರೀತಿ ಕೆರೆಗೆ ಬಲಿಯಾದವರ ಅನೇಕ ಪ್ರಸಂಗಗಳು ಜನಪದ ಸಾಹಿತ್ಯದಿಂದಲೂ, ಶಾಸನಗಳಿಂದಲೂ ತಿಳಿದು ಬರುತ್ತವೆ. ಬೆಂಗಳೂರು ಕೆಂಪೇಗೌಡನ ಸೊಸೆ ಆ ಊರಿನ ಮುಖ್ಯದ್ವಾರ ನಿರ್ಮಾಣ ಕಾಲದಲ್ಲಿ ತನ್ನನ್ನೇ ಬಲಿಕೊಟ್ಟು ಕೊಂಡು ಪ್ರಕರಣ ಐತಿಹಾಸಿಕ ಘಟನೆಯಾಗಿದೆ.

ಹೀಗೆ ಶಾಸನಗಳಿಂದ ತಿಳಿದು ಬರುವಂತಹ ಸಂಗತಿಗಳನ್ನು ಕ್ರೋಡೀಕರಿಸಿದರೆ, ನಮಗೆ ಒಕ್ಕಲಿಗ ಸಮುದಾಯದ ಬಗ್ಗೆ ಹಲವಾರು ಚಿತ್ರಗಳು ಮೂಡುತ್ತವೆ. ಈ ಲೇಖನದ ವ್ಯಾಪ್ತಿಯನ್ನು ದೃಷ್ಟಿಯಲ್ಲಿಟ್ಟುಕೊಂಡು, ಕೇವಲ ಒಂದು ರೂಪು ರೇಷೆಯನ್ನಷ್ಟೇ ಕೊಡಲು ಇಲ್ಲಿ ಪ್ರಯತ್ನಿಸಿದ್ದೇನೆ.

೧೦. ಒಕ್ಕಲಿಗರು ಮತ್ತು ರಾಜವಂಶಗಳು

ಈ ದೃಷ್ಟಿಯಿಂದ ಅಧ್ಯಯನ ಮಾಡುವವರಿಗೆ ಇದು ಕೆಲವು ಹೊಳಹುಗಳನ್ನು ನೀಡಲೆಂಬುದೇ ಇದರ ಉದ್ದೇಶ. ಅದು ನಮ್ಮ ರಾಜವಂಶಗಳನ್ನು ಕುರಿತದ್ದು. ಕರ್ನಾಟಕದಲ್ಲಿ ಆಳಿದ ಕದಂಬರು, ಗಂಗರು, ಚಾಲುಕ್ಯರು, ರಾಷ್ಟ್ರಕೂಟರು, ಹೊಯ್ಸಳರು, ಕೊನೆಯದಾಗಿ ಇತ್ತೀಚಿನವರೆಗಿದ್ದ ಮೈಸೂರು ಒಡೆಯರು ಅವರ ಮೂಲದ

ಬಗ್ಗೆ ಅಥವಾ ಅವರು ಯಾವ ಸಾಮಾಜಿಕ ಹಿನ್ನೆಲೆಯಿಂದ ಬಂದವರೆಂಬ ಬಗ್ಗೆ ನಮಗೆ ಶಾಸನಗಳಿಂದ ತಿಳಿದುಬರುವುದು ಅತ್ಯಲ್ಪ. ಕೆಲವವೊಂದು ವಂಶಗಳನ್ನು ಕುರಿತು ಸೂಕ್ಷ್ಮ ಸುಳಿವುಗಳು ದೊರೆತಿದ್ದರೂ, ಅದರ ಬಗ್ಗೆಯೂ ವಿದ್ವಾಂಸರಲ್ಲಿ ಒಮ್ಮತವಿಲ್ಲ. ಶಾಸನತಜ್ಞ ಡಾ. ಕೆ.ವಿ. ರಮೇಶರವರು ಹೇಳುವಂತೆ, ನಮ್ಮ ಶಾಸನಗಳಲ್ಲಿ ದೊಡ್ಡ ರಾಜವಂಶಗಳು ಮತ್ತು ಸಾಮ್ರಾಟರ ವಂಶಾವಳಿಗಳು ಹಾಗೂ ದಿಗ್ವಿಜಯಗಳಿಗೆ ಸಂಬಂಧಿಸಿದಂತೆ ಹೆಚ್ಚು ಲೋಪಗಳು ಅಥವಾ ಉತ್ಪ್ರೇಕ್ಷೆಗಳು ಸೇರಿಕೊಂಡಿವೆ.

ಬಹುತೇಕ ಪ್ರಾಚೀನ ರಾಜವಂಶಗಳ ಮೂಲ ಪುರುಷರು ಉತ್ತರ ಭಾರತದಿಂದ ಬಂದು ರಾಜ್ಯ ಸ್ಥಾಪಿಸಿದರೆಂದು ಶಾಸನಗಳು ತಿಳಿಸುತ್ತವೆ. ಜೊತೆಗೆ, ಅವರು ಉತ್ತರದ ಯಾದವ ವಂಶಕ್ಕೋ ಅಥವಾ ಅಯೋಧ್ಯೆ ಮತ್ತಿತರ ಪೌರಾಣಿಕ ಸ್ಥಳಗಳಿಗೋ ಸಂಬಂಧಿಸಿದವರಾಗಿರುತ್ತಾರೆ. ಅಲ್ಲದೆ, ಆ ರಾಜ್ಯಸ್ಥಾಪನೆಯ ಹಿಂದೆ ಯಾರಾದರೂ ಧರ್ಮಗುರುಗಳು ಅಥವಾ ಪವಾಡ ಘಟನೆಗಳ ಪಾತ್ರವಿರುತ್ತದೆ. ಹೀಗೆ ತಿಳಿಸುವ ಶಾಸನಗಳಾದರೋ ಆಯಾ ವಂಶದ ಪ್ರಾರಂಭಕಾಲದ ರಾಜರುಗಳಿಗೆ ಸೇರಿದುವಾಗದೆ, ಆ ವಂಶ ಪ್ರವರ್ಧಮಾನಕ್ಕೆ ಬಂದ ಕಾಲಕ್ಕೆ ಸೇರಿದುವಾಗಿರುವುದು ಗಮನಾರ್ಹ ಸಂಗತಿ. ನಾವು ಇಲ್ಲಿ ಊರಿಸಬಹುದಾದ ಸಂಗತಿ ಎಂದರೆ, ರಾಜ ಮಹಾರಾಜಗಳು ತಮ್ಮ ಮೂಲದ ಬಗ್ಗೆ ವಾಸ್ತವ ಸಂಗತಿಯನ್ನು ಮರೆಮಾಚುತ್ತಿದ್ದರೆಂಬುದು. ಉತ್ತರದ ಕಡೆಯಿಂದ ವಲಸೆಗಳು ನಡೆಯುತ್ತಿದ್ದುದು ನಿಜವಾದರೂ, ಪ್ರತಿ ರಾಜವಂಶ ಸ್ಥಾಪನೆಗೂ ಉತ್ತರದಿಂದ ಬಂದವರೇ ಕಾರಣರಾಗುತ್ತಿರಲಿಲ್ಲ. ಒಮ್ಮೆ ಸಾಮಾಜಿಕ ಮತ್ತು ರಾಜಕೀಯ ವ್ಯವಸ್ಥೆ ಸ್ಥಿರಗೊಂಡ ಮೇಲೆ, ಹೊರಗಿನವರು ಬಂದರೂ ಅಧೀನರಾಗಿರಬೇಕಿತ್ತೇ ಹೊರತು, ಯಜಮಾನರಾಗಲು ಸಾಧ್ಯ ವಿರಲಿಲ್ಲ. ಮತ್ತೇ, ಅವರೇನಾದರೂ ಸೈನ್ಯದೊಡಗೂಡಿ ದಂಡಯಾತ್ರೆ ಬಂದಿದ್ದರೆ. ಅಂತಹ ಯುದ್ಧಗಳು ನಡೆದುದಕ್ಕೆ ಸಾಕ್ಷಿ ಇರಬೇಕಿತ್ತು. ಇತಿಹಾಸ ಕಾಲದಲ್ಲಿ ಅಶೋಕ, ಸಮುದ್ರಗುಪ್ತ, ಹರ್ಷ, ಅಕ್ಬರ್, ಔರಂಗಜೇಬ್ ಮೊದಲಾದವರು ದಕ್ಷಿಣದ ಕಡೆ ದಂಡಯಾತ್ರೆ ಬಂದಾಗ, ದಕ್ಷಿಣದವರು ಹೇಗೆ ಪ್ರತಿಭಟಿಸಿದರು ಎಂಬುದು ನಮಗೆ ಐತಿಹಾಸಿಕ ಆಧಾರಗಳಿಂದ ತಿಳಿದೇ ಇದೆ.



ಮೂಲತಃ ರಾಜವಂಶಗಳ ಮೇಲರಿಮೆಯೇ ಈ ರೀತಿಯ ಗೋಪ್ಯಕ್ಕೆ ಕಾರಣವಾಯಿತು. ಒಮ್ಮೆ ಸಾಮಂತರೋ, ಪಾಳೆಯಗಾರರೋ ಆಗಿದ್ದ ವಂಶ ಒಂದು ದೊಡ್ಡ ರಾಜ್ಯ ಕಟ್ಟಿದ ಮೇಲೆ, ತಮ್ಮ ಬಗ್ಗೆ ಹೊಗಳುಭಟರಿಂದ ಉತ್ಪ್ರೇಕ್ಷಿತವಾಗಿ ಬರೆಸಿಕೊಳ್ಳಲು ಮತ್ತು ತಮ್ಮ ವಂಶ ಶ್ರೇಷ್ಠವೆಂದು ಜನರನ್ನು ನಂಬಿಸಲು ಬಯಸುತ್ತಿದ್ದರು. ವಾಸ್ತವವಾಗಿ, 'ಕ್ಷತ್ರಿಯ' ಎಂಬ ವರ್ಗವೊಂದು ಇರಲೇ ಇಲ್ಲ ಎನ್ನಬಹುದು. ರಾಜ್ಯ ಕಟ್ಟಿದವರೆಲ್ಲ ತರುವಾಯ ಕ್ಷತ್ರಿಯರ ಗುಂಪಿಗೆ ಸೇರುತ್ತಿದ್ದರು. ಒಂದು ಬಾರಿ ಹಾಗೆ ಸೇರಿದ ಮೇಲೆ, ಅವರು ತಮ್ಮ ಮೂಲ ಜಾತಿ ಅಥವಾ ಪಂಥದ ಸಂಬಂಧಗಳನ್ನು ಮರೆಮಾಚುತ್ತಿದ್ದರು. ಕೆಳದಿ ನಾಯಕರು, ಬೆಂಗಳೂರಿನ ಗೌಡರು, ಶಿವಾಜಿ, ಮೈಸೂರು ಒಡೆಯರು ಮೊದಲಾದವರೆಲ್ಲ ಶೂದ್ರ ಮೂಲದಿಂದ ಬಂದವರೆಂಬುದು ನಮಗೆ ಇತಿಹಾಸ ಮೂಲಗಳಿಂದ ತಿಳಿದಿದೆ. ಅದೇ ಪ್ರಾಚೀನ ವಂಶಗಳ ಬಗ್ಗೆ ಹೀಗೆ ತಿಳಿಸುವ ದಾಖಲೆಗಳ ಕೊರತೆ ನಮಗಿದೆ.

ಕದಂಬ ರಾಜ್ಯಸ್ಥಾಪಕ ವೈದಿಕನಾದ ಮಯೂರಶರ್ಮನೆಂದು ತಿಳಿದು ಬಂದರೂ, ಅವನ ನಂತರದ ರಾಜರು ತಮ್ಮ ಕುಲನಾಮಗಳನ್ನು ವರ್ಮನೆಂದು ಬದಲಾಯಿಸಿಕೊಂಡು ತಾವು ಕ್ಷತ್ರಿಯರೆಂದು ಸ್ಥಿರಪಡಿಸಿಕೊಳ್ಳುತ್ತಾರೆ. ಅವರ ಸಮಕಾಲೀನರಾದ ತಲಕಾಡಿನ ಗಂಗರ ಮೂಲದ ಬಗ್ಗೆಯೂ ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯಗಳಿವೆ.

ಲೂಯಿ ರೈಸ್, ದಿವಾನ್ ಎಲ್.ಕೆ. ಅನಂತಕೃಷ್ಣ ಐಯ್ಯರ್, ಎಂ.ವಿ. ಕೃಷ್ಣರಾವ್ ಮೊದಲಾದ ವಿದ್ವಾಂಸರು ಗಂಗರಿಗೂ, ಗಂಗಡಿಕಾರ ಒಕ್ಕಲಿಗರಿಗೂ ಸಂಬಂಧಿವಿದೆ ಎಂದೂ, ಆ ಸಮುದಾಯಕ್ಕೆ ಸೇರಿದವರೇ ಗಂಗ ವಂಶದವರಿರಬಹುದೆಂದೂ ಅಭಿಪ್ರಾಯ ತಿಳಿದಿದ್ದಾರೆ. ಇನ್ನು ಕೆಲವು ಇತ್ತೀಚಿನ ಕರ್ನಾಟಕ ಇತಿಹಾಸಕಾರರು ಈ ಬಗ್ಗೆ ಮೌನವಾಗಿದ್ದಾರೆ. ಐತಿಹಾಸಿಕ ಆಧಾರಗಳ ನೇರ ಸಾಕ್ಷ್ಯ ದೊರೆಯುವಾಗ ಪರೋಕ್ಷ ಆಧಾರಗಳನ್ನು ಬಳಸಿಕೊಂಡು ರಚನಾತ್ಮಕ ವಿವೇಚನೆಯಿಂದ ಐತಿಹಾಸಿಕ ಘಟನೆಗಳನ್ನು ನಿರೂಪಿಸಬೇಕೆಂಬುದು ಇತಿಹಾಸ ಬರವಣಿಗೆಯ ಒಂದು ಸೂತ್ರ. ಆದರೆ ಕರ್ನಾಟಕದ ಇಂದಿನ ಕೆಲವು ಇತಿಹಾಸಕಾರರಿಗೆ ಹಾಗೆ ತಮ್ಮದಲ್ಲದ ಒಂದು ಜಾತಿಗೆ ನೇರವಾಗಿ ಒಂದು ರಾಜವಂಶವನ್ನು ಸಂಬಂಧಿಸಲು ಹಿಂಜರಿಕೆ. ಹೀಗಾಗಿ, ನಮ್ಮ ಎಷ್ಟೋ ಐತಿಹಾಸಿಕ ಸತ್ಯಗಳು ಮುಚ್ಚಿಹೋಗಿವೆ. ದುರಾದೃಷ್ಟ ವಶಾತ್ ವೈದಿಕರ ಬಗ್ಗೆ, ಜೈನರ ಬಗ್ಗೆ, ವೀರಶೈವರ ಬಗ್ಗೆ ಅಥವಾ ಇತರ ಯಾವುದೇ ಸಮುದಾಯದ ಬಗ್ಗೆ ಆಳ ಅಧ್ಯಯನ ಆ ಸಮುದಾಯದಿಂದ ಬಂದವರಿಂದಲೇ ಆಗಬೇಕೆಂಬ ಪರಿಸ್ಥಿತಿ ಇದೆ. ಅಲ್ಲಿಯವರೆಗೂ ಆ ಸಂಗತಿಗಳು ಬೆಳಕಿಗೆ ಬರಲು ಕಾಯಬೇಕಾಗಬಹುದೇನೋ.

ತಲಕಾಡಿನ ಗಂಗರ ಬಗ್ಗೆ ವಿದ್ವತ್‌ಪೂರ್ಣವೂ, ಬೃಹತ್ತಾದುದೂ ಆದ ಕೃತಿಯನ್ನು[೫೮] ಡಾ.ಬಿ.ಷೇಕ್ ಆಲಿಯವರು ರಚಿಸಿದ್ದಾರೆ. ಅವರು ಗ್ರಂಥದಲ್ಲಿ ಗಂಗರ ಮೂಲದ ಬಗ್ಗೆ ವಿಶದವಾಗಿ ಚರ್ಚಿಸಿ, ಕೆಳಕಂಡ ನಿರ್ಣಯಕ್ಕೆ ಬಂದಿದ್ದಾರೆ. ''The fouders must have been the sons of the soil. They must have watched local conditions and prepared themselves carefully for striking at rhe root of the weak political authorety exidting at the time. They must have prepared the gruond previously both in respect of military force and of financial resources. Dadiga and Madhava must have belonged to the agricultural population of the state, for the territory they ruled was known as 'Gangavadi', a province of ninety-six thousand. The Gangadikaras even now form the largest section of the agricultural population in old Mysore State with their base in Bangalore, Mandya, Mysore and Hassan.''[೫೯]

ಗಂಗರ ಕಾಲದ ಶಾಸನಗಳಲ್ಲಿ ಬರುವ ಮಾರಸಿಂಘ ಗಾವುಣ್ಣ, ಕೊಂಗಣಿ ಗಾವುಣ್ಣ, ಸತ್ಯವಾಕ್ಯ ಗಾಮುಣ್ಣ, ಪೆರ್ಮಾನಡಿ ಗಾಮುಣ್ಣ ಮೊದಲಾದ ಬಿರುದುಗಳು ಔಪಚಾರಿಕವಾಗಿ ಗಂಗರಾಜರು ಕೊಟ್ಟಿರಬಹುದಾದ ಬಿರುದುಗಳಿಂದ ಹೆಚ್ಚಿನ ಸಂಪರ್ಕವನ್ನು ಸೂಚಿಸುತ್ತವೆ. ಒಕ್ಕಲಿಗರನ್ನು ಕುರಿತು ಬರೆದ ಶ್ರೀ ಮಾಕೋನಹಳ್ಳಿ ದೊಡ್ಡಪ್ಪಗೌಡರು ''ಗಂಗರಸರು ಜೈನರು, ಅಹಿಂಸಾವಾದಿಗಳು. ಗಂಗಡಿಕಾರ ಒಕ್ಕಲಿಗರು ಬಹುತೇಕ ಶೈವರು ಹಾಗೂ ವೈಷ್ಣವರು, ಮಾಂಸಾಹಾರಿಗಳು ಎಂಬ ವಿಷಯ ಗಮನಾರ್ಹವಾದ್ದದು.''[೬೦] ಎಂದು ಹೇಳುವ ಮೂಲಕ ದೊಡ್ಡ ಸಂದೇಹವನ್ನು ಮುಂದಿಟ್ಟಿದ್ದಾರೆ. ಈ ಸಂದೇಹ ಸಾಮಾನ್ಯವಾಗಿ ಯಾರಿಗಾದರೂ ಉದ್ಭವಿಸಬಹುದು. ಆದರೆ, ನಮ್ಮ ಶಾಸನಗಳು ಇದಕ್ಕೆ ಸೂಕ್ತ ಉತ್ತರ ನೀಡುತ್ತವೆ.

ವಸ್ತುಸ್ಥಿತಿಯೆಂದರೆ ಬೌದ್ಧ, ಜೈನ ಮತ್ತು ವೀರಶೈವ ಧರ್ಮಗಳು ಹಿಂದೂ ಚಾತುರ್ವರ್ಣದ ಕಟ್ಟು ಮುರಿದು ಸ್ಥಾಪಿತವಾದವು. ಮುಖ್ಯವಾಗಿ ಇತರ ಕಾರಣಗಳಿಂದ[೬೧] ಉಂಟಾದ ಜಾತಿ ವ್ಯವಸ್ಥೆಯ ಹಿಂದೂ ಸಮಾಜದಲ್ಲಿ ಇವು ಹೆಚ್ಚಾಗಿ ರಾಜಾಸ್ಥಾನಗಳ ಪ್ರೋತ್ಸಾಹವನ್ನವಲಂಬಿಸಿದವು. ಈಗಿನ ಸಮಾಜವಾದದ ಘೋಷಣೆಯಂತೆ ಆಗ ವಿವಿಧ ಧರ್ಮಗಳ ರಕ್ಷಕರೆಂದು ರಾಜರುಗಳು ಘೋಷಿಸಿಕೊಳ್ಳುತ್ತಿದ್ದುದು ಒಂದು ವಿಶೇಷವಾಗಿತ್ತು.

ರಾಜರುಗಳು ಕಾಲದ ಪ್ರವೃತ್ತಿಯನ್ನೂ, ಬಹು ಜನರ ಒಲವನ್ನೂ ಗಮನಿಸಿಕೊಂಡು ಯಾವುದಾದರೊಂದು ಧರ್ಮಕ್ಕೆ ಹೆಚ್ಚು ಆದ್ಯತೆ ನೀಡುತ್ತಿದ್ದರು. ವೈಯಕ್ತಿಕವಾಗಿ ಯಾವುದೇ ಧರ್ಮ ಅನುಸರಿಸಿದರೂ, ಇನ್ನೊಂದು ಮತವನ್ನು ಶೋಷಿಸುವ ಪ್ರವೃತ್ತಿ ಭಾರತೀಯ ರಾಜರಲ್ಲಿ ವಿರಳವೆಂದೇ ಹೇಳಬೇಕು. ಜೊತೆಗೆ ಒಂದು ಕಾಲದಲ್ಲಿ ಪ್ರಬಲವಾಗಿದ್ದ ಮತಾಚರಣೆ ಇನ್ನೊಂದು ಕಾಲಕ್ಕೆ ಕಳೆಗುಂದಿದ್ದನ್ನು ಶಾಸನಗಳೇ ತಿಳಿಸುತ್ತವೆ. ಒಂದು ಕಾಲಕ್ಕೆ ದಕ್ಷಿಣ ಭಾರತದಲ್ಲಿ ಜೈನ ಮತದ ತೌರೂರೆನಿಸಿದ್ದ ಕರ್ನಾಟಕದಲ್ಲಿ ಕೊನೆಕೊನೆಗೆ ಅದು ತೀರ ಅಲ್ಪ ಸಂಖ್ಯಾತವಾದದ್ದು ತಿಳಿದ ವಿಷಯವೇ. ಹಿಂದೆ ಜೈನರಾಗಿದ್ದವರಲ್ಲಿ ಅನೇಕರು ವೀರಶೈವರಾಗಿ, ಇಲ್ಲವೇ ವೈಶ್ಯರಾಗಿ, ಇಲ್ಲವೇ ಒಕ್ಕಲಿಗರಾಗಿ ಪರಿವರ್ತಿತರಾದ ಪ್ರಸಂಗಗಳು ಬೇಕಾದಷ್ಟಿವೆ.

ಹಾಗೆಯೇ, ಒಕ್ಕಲಿಗರು ಜೈನರಾಗಿದ್ದ ಒಂದು ಉದಾಹರಣೆಯನ್ನು ಈ ಹಿಂದೆಯೇ ನೋಡಿದೆವು. ನಂಜನಗೂಡಿನ ೧೭೧ನೇ ಶಾಸನ (ಕ್ರಿ.ಶ. ೧೩೭೧) ಮೇಘ ಚಂದ್ರದೇವನೆಂಬ ಮಹಾವಿದ್ವಾಂಸರನ್ನು ಸಕಲ ಶಾಸ್ತ್ರ ಪಾರಂಗತನೆಂದು ಶ್ಲಾಘಿಸಿ, ಅವರ ಅಂತ್ಯದ ಜ್ಞಾಪಕಾರ್ಥವಾಗಿ ನಿಶಿದಿಯ ಮಾಡಿಸಿದುದನ್ನು ತಿಳಿಸುತ್ತದೆ. ಈ ಶಾಸನ ಕಲ್ಲಿನ ಮೇಲುಗಡೆಯಲ್ಲಿರುವ ಗುರುಶಿಷ್ಯರ ಮೂರ್ತಿಗಳ ಕೆಳಗೆ "ಕೇತಗೊಂಡನ ಮಗ, ಮೇಘಚಂದ (ಮಾಣಿಕ್ಯನಂದಿ)" ಎಂದಿದೆ. ಬೇಲೂರಿನ ೧೨೪ನೇ ಶಾಸನದಲ್ಲಿನ[೩೩] ವರ್ಣನೆ ಹೀಗಿದೆ.

"ಬಸ್ತಿಹಳ್ಳಿ ಜಯತುಜಗತಿನಿತ್ಯಂ ಜೈನ ಸಂಘೋದಯಾರ್ಕ್ಕಃ ಪ್ರಭತುಜಿನ"ರಾದ

ದಾಸ ಗಾವುಂಡನು, ರಾಮಗಾವುಂಜನು ವಿಜಯ ಪಾರ್ಶ್ವ ದೇವರಿಗೆ ಭೂಮಿಯ ದಾನ ಕೊಡುತ್ತಾರೆ. ಈ ದಾನವನ್ನು ಶ್ರೀ ಮೂಲ ಸಂಘದ ಸಮುದಾಯಗಳು ಅವರ ಶಿಷ್ಯರು ಪಾಲಿಸುತ್ತಾರೆಂದು ತಿಳಿದು ಬರುತ್ತದೆ. ಇದರಿಂದ ಗಾವುಂಡರು ಜೈನ ಸಂಘದ ಪ್ರಮುಖ ಸದಸ್ಯರಾಗಿದ್ದು. ಶಿಷ್ಯ ಪರಂಪರೆಗೆ ಸೇರಿದ್ದುದು ಕಂಡು ಬರುತ್ತದೆ.

ಕ್ರಿ.ಶ. ೧೩೯೫ರ ಶಾಸನವೊಂದು (ಹರಿಹರರಾಯನ ಕಾಲದ್ದು) ರಾಮಣ್ಣನ ಪತ್ನಿ ಕಾಮಿ ಗಾವುಂಡಿಯ ಸನ್ಯಾಸನ ವ್ರತದಿಂದ ಸ್ವರ್ಗ ಸೇರಿದುದನ್ನು ತಿಳಿಸುತ್ತದೆ. ಅದೇ ಶಾಸನದಿಂದ ಅವಳು ರಾಜಗುರು ಸಿದ್ಧಾಂತಿ ಯತೀಶನ ಶಿಷ್ಯಳೆಂದೂ ತಿಳಿದುಬರುತ್ತದೆ. ಇಂತಹ ಅನೇಕ ಉದಾಹರಣೆಗಳನ್ನು ಕೊಡಬಹುದು.

ಗಂಗರ ಕಾಲದಿಂದ ವಿಜಯನಗರದ ಕಾಲದವರೆಗೂ ಒಕ್ಕಲಿಗರಲ್ಲಿ ಜೈನಮತವು ಸಾಕಷ್ಟು ಆಚರಣೆಯಲ್ಲಿದ್ದುದನ್ನು ಕಾಣಬಹುದು. ಹೊಯ್ಸಳರ ಸಾಮಂತನಾಗಿದ್ದ ಕಾಳೆಯ ಗಾವುಂಡನನ್ನು 'ಗಂಗ ಕುಳ ಕಮಳ' ಎಂದು ಶಾಸನದಲ್ಲಿ ವರ್ಣಿಸಿದೆ. ಈ ಅಂಶಗಳನ್ನು ಗಮನಿಸಿದಾಗ ಇತರ ಸಾಕ್ಷ್ಯಾಧಾರಗಳು ಸಿಗದ ಹೊರತು ಗಂಗರು, ಗಂಗಡೀಕಾರ (ಗಂಗವಾಡಿಕಾರ) ಒಕ್ಕಲಿಗರ ಮೂಲದವರಲ್ಲ ಎಂದು ತಳ್ಳಿಹಾಕುವಂತಿಲ್ಲ.

ಸಾಮಾಜಿಕ ಮೂಲದ ಬಗ್ಗೆ ಭಿನ್ನಾಭಿಪ್ರಾಯವಿರುವ ಇನ್ನೊಂದು ರಾಜವಂಶವೆಂದರೆ ಹೊಯ್ಸಳರು. ಇವರ ಬಗ್ಗೆ ವಿವಿಧ ಕಥನಗಳಿವೆ.[೩೪] ಅವೇನೇ ಇದ್ದರೂ, ವಿರಳವಾಗಿರುವ ದೃಢ ಐತಿಹಾಸಿಕ ಆಧಾರಗಳ ಮೇಲೆ ನಾವು ಇವರ ಮೂಲವನ್ನು ಗುರುತಿಸಲು ಪ್ರಯತ್ನಿಸಬಹುದು. ಕೃಷ್ಣರಾಜಪೇಟೆಯ "೭೭ನೇ ಶಾಸನದಲ್ಲಿ[೩೫] ಹೀಗಿದೆ,

"ಶ್ರೀ ವಿಷ್ಣುವರ್ಧನ ಭೂಪಾಳರ ಹೊಯ್ಸಳ ದೇವರ......

ಶ್ರೀಮತು ಪಿರಿಯರಸಿ ಪಟ್ಟಮಹಾದೇವಿ ಶಾಂತಲದೇವಿಯರ

ಮುಯ್ಯುನ ಶ್ರೀಮತು ಬಲ್ಲೆಯನಾಯಕ ಮಾಳಿಗೆಯನಾಳುತ್ತು

ಮಿರ್ಪ್ಪ ಕಾಲದೊಳು."

ಇದರಿಂದ ರಾಣಿ ಶಾಂತಲದೇವಿಯ ಮೈದುನನ ಹೆಸರು ಬಲ್ಲೆಯ ನಾಯಕನೆಂದೂ, ಅವನು ಪ್ರಾಂತಾಧಿಕಾರಿಯಾಗಿದ್ದನೆಂದೂ ತಿಳಿದು ಬರುತ್ತದೆ. ಕ್ರಿ.ಶ. ೧೧೦೧ರ ಬೇಲೂರಿನ ೧೪೧ನೇ ಶಾಸನದಿಂದ ಗೌಡನೊಬ್ಬನು, ಮಹಾಸಾಮಂತನಾಗಿದ್ದುದು ತಿಳಿದು ಬರುತ್ತದೆ.

ಹೊಯ್ಸಳರ ಅರಸ ಒಂದನೇ ನರಸಿಂಹನ ಕಾಲದಲ್ಲಿ ಅಂದರೆ ಕ್ರಿ.ಶ. ೧೧೫೯ರ ಡಿಸೆಂಬರ್ ೨೫ರಂದು ಶ್ರವಣಬೆಳಗೊಳದಲ್ಲಿ ಒಂದೇ ವಿಷಯವನ್ನು ಕುರಿತು ಎರಡು ಶಾಸನಗಳನ್ನು ಬರೆಸಲಾಗಿದೆ. ಅವುಗಳಲ್ಲಿ ಒಂದು ಕನ್ನಡದಲ್ಲೂ[೩೯] ಇನ್ನೊಂದು ಸಂಸ್ಕೃತದಲ್ಲೂ, ಇವೆ. ಕನ್ನಡ ಶಾಸನದಲ್ಲಿ ನರಸಿಂಹನ ಪ್ರತಾಪನನ್ನು ವರ್ಣಿಸುವಾಗ ಅವನ ಪಾರಂಪರ್ಯ ವೈರಿಗಳಾದ ಚೋಳ, ಚೇರ, ತುಳುವರ ಜೊತೆಗೆ 'ದಾಯಾದ ದಾವಾನಳ' ಅಂದರೆ, ದಾಯಾದಿಗಳಿಗೆ ಕಾಡ್ಗಿಚ್ಚಿನಂತಿದ್ದ ಎಂದು ಹೇಳಲಾಗಿದೆ. ಅದೇ ಶಾಸನದ ಸಂಸ್ಕೃತ ಅವತರಣಿಕೆಯಲ್ಲಿ ಮೇಲಿನ ಈ ಪದಗುಚ್ಛಕ್ಕೆ ಬದಲಾಗಿ, ದೂರದ ಸ್ಥಳದಲ್ಲಿ ಅವಿತುಕೊಂಡಿರುವ ಗೌಡನೇ, ನಿನ್ನ ಬಾಯಿಯನ್ನು ಬಟ್ಟೆಯಿಂದ ಮುಚ್ಚಿಕೋ, ಎಂಬರ್ಥ ಬರುವ ಸಂಭೋಧನೆ ಇದೆ. ಇಲ್ಲಿ ಬರುವ 'ಗೌಡ' ಪದಕ್ಕೆ ಉತ್ತರದ 'ಗೌಡ' ದೇಶವೆಂದು ಭಾವಿಸಲು ಯಾವುದೇ ಆಧಾರವಿಲ್ಲ. ಇದು ಉತ್ತರದ ಇತರ ರಾಜ್ಯಗಳಾವುವನ್ನೂ ಪ್ರಸ್ತಾಪಿಸಿಲ್ಲ. ಅಲ್ಲದೆ, ವ್ಯಕ್ತಿಯೋರ್ವನಿಗೆ ನೇರವಾಗಿ ಕುರಿತದ್ದಾಗಿದೆ.

ಹೊಯ್ಸಳ ರಾಜ್ಯವನ್ನು ಉತ್ತರದತ್ತ ವಿಸ್ತರಿಸಿದ ವಿಷ್ಣುವರ್ಧನನು ತನ್ನ ದಿಗ್ವಿಜಯಗಳಿಗೆ ಕಿರೀಟಪ್ರಾಯವೆಂಬಂತೆ ಹಾನಗಲ್ಲು ಕೋಟೆಯನ್ನು ವಶಪಡಿಸಿಕೊಳ್ಳುತ್ತಾನೆ. ಆ ಯುದ್ಧದ ಬಗ್ಗೆ ಅವನ ಕೆಲವು ಶಾಸನಗಳು ತಿಳಿಸುತ್ತವೆ. ಬೇಲೂರಿನ ೨೦೨ನೇ ಶಾಸನದ ವಿವರಣೆಯನ್ನು ಡಾ.ಚಿದಾನಂದ ಮೂರ್ತಿಯವರು ಕೆಳಗಿನಂತೆ ನಿರೂಪಿಸುತ್ತಾರೆ.

''ವಿಷ್ಣುವರ್ಧನನು ಹಾನಗಲ್ಲಿನ ಕೋಟೆಯನ್ನು ಮುತ್ತಿದಾಗ ಮಾಚಗಾವುಂಡ ಎಂಬುವನು ತನ್ನ ಮಗ ಲೆಂಕರಾಯನ ಸೇನೆಯ ಮುಂಭಾಗದಲ್ಲಿದ್ದು ಹೋರಾಡಲು ರಾಜನ ಅಪ್ಪಣೆಯನ್ನು ಕೇಳಿ ಪಡೆಯುತ್ತಾನೆ. ಲೆಂಕರಾಯನು ಅದ್ಭುತವಾಗಿ ಹೋರಾಡಿ ಮಡಿಯುತ್ತಾನೆ. ಅವನ ಹೋರಾಟವನ್ನು ರಾಜ ವಿಷ್ಣುವರ್ಧನನೂ, ಅಣ್ಣ ಕಾಳಗಾವುಂಡನೂ, ಬಹುಶಃ ತಂದೆ ಮಾಚಗಾವುಂಡನೂ, ಪ್ರಶಂಸೆಯಿಂದ ನೋಡುತ್ತಿರುತ್ತಾರೆ.''[೪೦]

ಮೇಲಿನ ಉಲ್ಲೇಖಗಳನ್ನು ಗಮನಿಸಿದಾಗ ಸ್ಥಳೀಯ ನಾಡ ಗೌಡರುಗಳು ಸಾಮಂತರಾಗಿದ್ದಾಗ ಇಟ್ಟುಕೊಂಡಿದ್ದ ಹೆಸರುಗಳನ್ನು ರಾಜಮನೆತನದವರು ರಾಜರಾದಾಗ ಬದಲಾಯಿಸುತ್ತಿದ್ದರು ಎಂದು ಭಾವಿಸಲು ಆಧಾರವಿದೆ. ಹಾಗೂ, ಹೊಯ್ಸಳರ ದಾಯಾದಿ ಅಥವಾ ರಕ್ತ ಸಂಬಂಧಿ ಗೌಡ ನಾಗಿದ್ದನೆಂದು ತಿಳಿದು ಬರುತ್ತದೆ. ಗೌಡರು ಸಾಮಂತರಾಗಿದ್ದುದೂ ಶಾಸನಗಳಲ್ಲಿ ಉಕ್ತವಾಗಿದೆ. ವಿಷ್ಣುವರ್ಧನನ ದಿಗ್ವಿಜಯಗಳಲ್ಲಿ ಗಾವುಂಡರು ಜೀವಗಳನ್ನು ಪಣವಿಟ್ಟು ಹೋರಾಡುತ್ತಿದ್ದರು ಎಂಬುದೂ ವ್ಯಕ್ತವಾಗುತ್ತದೆ. ಮೂಡಿಗೆರೆ ತಾಲ್ಲೂಕಿನ ಅಂಗಡಿ ಗ್ರಾಮದಲ್ಲಿರುವ ಗ್ರಾಮದೇವತೆ ಪದ್ಮಾವತಿ ಅಥವಾ ವಾಸಂತಿಕಾದೇವಿಯು ಇತ್ತೀಚಿನವರೆಗೂ (ಬಹುಶಃ ಈಗಲೂ) ಒಕ್ಕಲಿಗರೊಬ್ಬರ ಮೈಮೇಲೆ ಬರುತ್ತಿತ್ತು.[೪೧] ಇದು ಪ್ರಾಚೀನ ಕಾಲದಿಂದಲೂ ಈ ದೇವತೆ ಒಕ್ಕಲಿಗರ ಕುಲದೇವತೆಯಾಗಿರುವುದಕ್ಕೆ ಸಾಕ್ಷಿ. ಈ ಸುತ್ತಮುತ್ತಲ ಪ್ರಾಂತದಲ್ಲಿ ಇಂದಿಗೂ ಒಕ್ಕಲಿಗರೇ ಬಹುಸಂಖ್ಯಾತರು ಮತ್ತು ಪ್ರಭಾವಿಗಳು. ಇಲ್ಲಿನ ನಾಡಗೌಡರು, ಮೊಕ್ತೇಸರಗೌಡರೂ (ಈಗ ವೀರಶೈವರಾದರೂ) ಹಿಂದೆ ಒಕ್ಕಲಿಗರಾಗಿದ್ದವರೇ, ಈ ಹಿನ್ನೆಲೆಯನ್ನು ಗಮನಿಸಿದಾಗ ಹೊಯ್ಸಳರು ಇತರ ಯಾವುದೇ ಸಮುದಾಯಕ್ಕಿಂತಲೂ ಒಕ್ಕಲಿಗ ಸಮುದಾಯದಿಂದ

ಬಂದವರೆಂಬುದಕ್ಕೆ ಐತಿಹಾಸಿಕ ಆಧಾರಗಳಿವೆ. ಈ ನಿಟ್ಟಿನಲ್ಲಿ ಇನ್ನೂ ಹೆಚ್ಚಿನ ಅಧ್ಯಯನದ ಅಗತ್ಯವೂ ಅವಕಾಶವೂ ಇದೆ.

ಆಧುನಿಕ ಬೆಂಗಳೂರನ್ನು ಸ್ಥಾಪಿಸಿದ ಕೆಂಪೇಗೌಡನ ಪೂರ್ವಿಕರು ಯಲಹಂಕದಲ್ಲಿ ರಾಜ್ಯ ಸ್ಥಾಪಿಸಿದರು. ಅವರ ವಂಶದ ಮೂಲದ ಬಗೆಯೂ ಪವಾಡ ಕಥೆಗಳಿವೆ. ಆದರೆ ಅವರು ಇತ್ತೀಚಿನವರಾಗಿದ್ದರು. ಇತರ ದಾಖಲೆಗಳು ದೊರಕುವುದರಿಂದ ಅವರ ಮೂಲ ರಹಸ್ಯವಾಗಿಲ್ಲ. ಇವರ ಕಾಲದ ಘಟನೆಗಳ ಬಗ್ಗೆ ನೂರಾರು ಶಾಸನಗಳು ದೊರೆಯುತ್ತವೆ. ಹಾಗೆಯೇ, ಮಧುಗಿರಿ ಗೌಡರನ್ನೂ, ಹೊಸಕೋಟೆ ಗೌಡರನ್ನೂ ಕುರಿತ ಶಾಸನಗಳೂ ಇವೆ. ಇವೆಲ್ಲ ಪ್ರತ್ಯೇಕ ಅಧ್ಯಯನಕ್ಕೆ ಯೋಗ್ಯವಾದವು.

ಹೀಗೆ ಶಾಸನಗಳನ್ನು ನೋಡಿದಾಗ, ಒಕ್ಕಲಿಗರು, ಗ್ರಾಮಾಧಿಕಾರಿಗಳಾಗಿ, ನಾಡ ಪ್ರಭುಗಳಾಗಿ, ಸಾಮಂತರಾಗಿ, ರಾಜರಾಗಿ ಆಳಿದ ವಿಷಯಗಳು ತಿಳಿಯುತ್ತವೆ. ಅವರ ಜೀವನ ದೃಷ್ಟಿ, ಧರ್ಮಾಚರಣೆ, ಸ್ಥಾನಮಾನ, ತ್ಯಾಗ ಜೀವನದ ಬಗ್ಗೆಯೂ ತಿಳಿಯುತ್ತದೆ. ಈ ವಿಷಯ ಅಗಾಧವಾಗಿದ್ದು, ಶಾಸನಗಳಲ್ಲಿ ಕಂಡು ಬರುವ ಒಕ್ಕಲಿಗರ ಚಿತ್ರದ ಬಗ್ಗೆ ಆಳ ಅಧ್ಯಯನದ ಅಗತ್ಯವಿದೆ.

*******

**ಟಿಪ್ಪಣಿಗಳು**

೦೧. ಡಾ. ಚಿದಾನಂದ ಮೂರ್ತಿ, ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಮೈಸೂರು ವಿಶ್ವವಿದ್ಯಾನಿಲಯ, ಪುಟ-೪೦೭, ೧೯೬೬.

೦೨. ಹಿಂದುಳಿದ ವರ್ಗಗಳ ಆಯೋಗ ವರದಿ, ಅಧ್ಯಕ್ಷರು ಎಲ್.ಜಿ. ಹಾವನೂರ್.

೦೩. EC Vol III; Gu 56, (New Ed.) 1974.

೦೪. ಡಾ. ಕೋ.ವ್ಯಾ. ರಮೇಶ, ಕರ್ನಾಟಕ ಶಾಸನ ಸಮೀಕ್ಷೆ, ಪುಟ-೭, ಬೆಂಗಳೂರು ವಿಶ್ವವಿದ್ಯಾನಿಲಯ ೧೯೭೧.

೦೫. ಡಾ. ಎ.ವಿ. ವೆಂಕಟರತ್ನಂ, ವಿಜಯನಗರ ಸಾಮ್ರಾಜ್ಯದಲ್ಲಿ ಸ್ಥಳೀಯ ಸರ್ಕಾರ, ಪುಟ-೩೨, ಕನ್ನಡ ಅಧ್ಯಯನ ಸಂಸ್ಥೆ ೧೯೭೪.

೦೬. ಡಾ.ಚಿನ್ನಸ್ವಾಮಿ ಸೋಸಲೆ, ನಮ್ಮ ಗ್ರಾಮಗಳು; ಅಂದು ಇಂದು, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪುಟ-೮೩.

೦೭. ಅದೇ ಪುಟ-೬೯.

೦೮. ಅದೇ ಪುಟ-೧೦೬.

೦೯. ಡಾ. ಎ.ವಿ. ವೆಂಕಟರತ್ನಂ, ವಿಜಯನಗರ ಸಾಮ್ರಾಜ್ಯದಲ್ಲಿ ಸ್ಥಳೀಯ ಸರ್ಕಾರ, ಪುಟ-೩೭,೩೮.

೧೦. ಅದೇ ಪುಟ-೮೬.

೧೧. ಅದೇ ಪುಟ-೫೧.

೧೨. B.A. SALETORE: *Social and Political Life in the Vijaynagar Empire*, ಪುಟ-೩೧೬, ೧೯೩೪.

೧೩. ಕನ್ನಡ ವಿಶ್ವಕೋಶ, ಸಂಪುಟ-೬, ಪುಟ-೬೦೨

೧೪. ಸಂಕ್ಷಿಪ್ತ ಕನ್ನಡ ನಿಘಂಟು, ಕನ್ನಡ ಸಾಹಿತ್ಯ ಪರಿಷತ್ತು ಪುಟ-೧೦೫.

೧೫. E.C. Vol. III NWJ 283 (New Ed.) 1974.

೧೬. E.C. Vol. VI KRP. 66 (New Ed.) 1977.

೧೭. ಡಾ. ಚಿದಾನಂದ ಮೂರ್ತಿ, ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪುಟ-೨೮೩.

೧೮. E.C. Vol. VIII, Part II, Soraba 47 (Old Ed.).

೧೯. ಡಾ. ಚಿದಾನಂದ ಮೂರ್ತಿ, ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪುಟ-೨೩೪.

೨೦. E.C. Vol. V Part II, Arasikere 56 (Old Ed.).

೨೧. E.C. X, B.P. 54 (Old Ed.).

೨೨. E.C. XII KG. 19 (Old Ed.)

೨೩. E.C. Vol. III NWJ 332 (New Ed.) 1974.

೨೪. E.C. Vol. III HGK 91 (New Ed.) 1974.

೨೫. E.C. Vol. VI KRP 110 (New Ed.) 1977.

೨೬. E.C. VIII, SB 103 (Old Ed.).

೨೭. ಕನ್ನಡ ವಿಶ್ವಕೋಶ, ಸಂಪುಟ-೩, ಪುಟ-೬೬೧.

೨೮. Dr. Sheik Ali : *History of the Western Gangas;* ಮೈಸೂರು ವಿಶ್ವವಿದ್ಯಾಲಯ ೧೯೭೬.

೨೯. ಅದೇ ಪುಟ-೧೩.

೩೦. ಮಾಕೋನಹಳ್ಳಿ ದೊಡ್ಡಪ್ಪಗೌಡ, ಒಕ್ಕಲಿಗರು, ಪುಟ-೮, ಶ್ರೀ ಪ್ರಕಾಶನ, ಮೈಸೂರು, ೧೯೭೧

೩೧. D.S. Jayappa Gowda: Caste System a Study; Journal of Historical Studies; Depeartment of History; Mysore University.

೩೨. E.C. Vol. III NWJ 171 (New Ed.)

೩೩. E.C. Vol. V, Part II, BI 124 (Old Ed.)

೩೪. ಅದೇ ಪುಟ-೧೪೧.

೩೫. ಎಂ.ವಿ. ಕೃಷ್ಣರಾವ್‌ರಂತಹ ವಿದ್ವಾಂಸರು ಹೊಯ್ಸಳರ ಪೀಳಿಗೆ ಈಗಿನ ಹೊಯ್ಸಳ ಬ್ರಾಹ್ಮಣರೆಂಬ

ಅರ್ಥಬರುವಂತೆ ಬರೆದಿರುವುದು ವಿಷಾದಕರ. ಹೊಯ್ಸಳ ಬ್ರಾಹ್ಮಣರೆಂದರೆ ಹೊಯ್ಸಳ ರಾಜ್ಯಕ್ಕೆ ಸೇರಿದವರೆಂದಷ್ಟೇ ಅರ್ಥ. ಈ ಅಭಿಪ್ರಾಯಕ್ಕೆ ಐತಿಹಾಸಿಕ ಇನ್ನಾವ ಆಧಾರಗಳಿಲ್ಲ. ನೋಡಿ, ಎಂ.ವಿ. ಕೃಷ್ಣರಾವ್, ಕರ್ನಾಟಕದ ಇತಿಹಾಸ ದರ್ಶನ

೩೬. E.C. Vol. VI, KRP 27 (New Ed.) 1977.

೩೭. E.C. Vol. V, Part II, BI 141 (Old Ed.)

೩೮. E.C. Vol. II, No 476 (New Ed.)

೩೯. ಅದೇ ಪುಟ-೪೮೧.

೪೦. ಕನ್ನಡ ಶಾಸನಗಳ ಸಾಸ್ಕೃತಿಕ ಅಧ್ಯಯನ, ಪುಟ-೨೬೯.

೪೧. 'ಆವೇಶ ಬರುವುದರ ವೈಜ್ಞಾನಿಕ ಪ್ರಮಾಣ' ಈ ಲೇಖನದ ದೃಷ್ಟಿಯಿಂದ ಗೌಣ.

* * * * *

## ೩.೧. ಉದ್ಭವ ಮತ್ತು ವ್ಯಾಪ್ತಿ

### ೧.ಮಹದಾಶೆ

೧೯೦೬ನೆಯ ಏಪ್ರಿಲ್ ೧ನೇ ತಾರೀಖು ಒಕ್ಕಲಿಗರ ಚಿರಸ್ಮರಣೀಯ ದಿನ. ಸುವರ್ಣಭರಿತ ಶುಭದಿನ. ಏಕೆಂದರೆ ಒಕ್ಕಲಿಗರ ಸಂಘವು ಅಂದು ಬೆಂಗಳೂರಿನಲ್ಲಿ ಸ್ಥಾಪಿತವಾದ ದಿನ. ಸಂಘಸಂಸ್ಥೆಗಳ ಮಾತೇ ಹುಟ್ಟದಿದ್ದ ಆ ಕಾಲದಲ್ಲಿ ಒಕ್ಕಲಿಗರ ಸಂಘ ಉದಯಿಸಿ ಸಾಮಾಜಿಕವಾಗಿ ಕ್ರಾಂತಿದಾಯಕವಾಗಿತ್ತು.

ಬೆಂಗಳೂರು ನಿವಾಸಿಗಳಾಗಿ. ವಿದ್ಯಾವಂತರಾಗಿ. ಜ್ಞಾನ ವಂತರಾಗಿ ತೆರೆದು ನೋಡುತ್ತಿದ್ದ ಹಲವು ಮಂದಿ ಒಕ್ಕಲಿಗ ದೊಡ್ಡ ಮನುಷ್ಯರು ತಮ್ಮ ಜನರ ಹೀನ, ದೀನ ಸ್ಥಿತಿಯನ್ನು ಕಂಡು ಮನಸ್ಸಿನಲ್ಲಿ ಕೊರಗುತ್ತ ಆಲೋಚನಾಕ್ರಾಂತರಾಗಿದ್ದರು. ಇವರಿಗೆ ಆಗಾಗ್ಗೆ ನಮ್ಮ ಜನರ ಸ್ಥಿತಿ ಬಹಳ ಪರಿತಾಪಕರ ವಾಗಿರುವುದಲ್ಲ ಜನಸಂಖ್ಯೆಯಲ್ಲಿ ಅಸಂಖ್ಯಾತರಾಗಿದ್ದರೂ, ಜಮೀನು ಕಂದಾಯವೆಲ್ಲವೂ ಪ್ರಾಯಶಃ ಇವರಿಂದಲೇ ಉತ್ಪತ್ತಿ ಯಾಗುತ್ತಿದ್ದರು, ನಮ್ಮವರು ಕುರಿಗಳಂತೆ ಏನೂ ಅರಿಯದವರಾಗಿಯೂ, ರಸವನ್ನು ಬೆಳೆದು ಕಸವನ್ನು ತಿನ್ನುವರಾಗಿಯು ಇದ್ದಾರಲ್ಲಾ ಇಂತಹರನ್ನು ಏಳಿಗೆಗೆ ತರುವುದು ಆಧುನಿಕ ಕಾಲದ ಹೊಸ ರೀತಿಗಳನ್ನು ಕಂಡುಕೊಂಡಿರುವ ನಮ್ಮಂತಹ ವಿದ್ಯಾವಂತರ ಕರ್ತವ್ಯವಲ್ಲವೇ ಎಂಬ ಯೋಚನೆಯು ಹೊಳೆಯುತ್ತಲೇ ಇದ್ದಿತು. ಆದರೆ ಅದನ್ನು ಸಫಲಮಾಡಿಕೊಳ್ಳುವ ಬಗೆ ಹೇಗೆ ಎಂಬುದು ಮಾತ್ರ ತೋಚದವರಾಗಿದ್ದರು. ಅದನ್ನು ಪ್ರಾಯಶಃ ಆಚರಣೆಗೆ ತಂದುಕೊಳ್ಳುವುದಕ್ಕೆ ಸಾಕಾದಷ್ಟು ಚೈತನ್ಯವಿಲ್ಲವೆಂಬ ಭೀತಿಯಿಂದ ತಟಸ್ಥರಾಗಿದ್ದರು. ಆಗ ಬಿ.ಎ. ಪರೀಕ್ಷೆಯನ್ನು ಮಾಡಿದ್ದ ನಾಲ್ಕೈದು ಮಂದಿ ಒಕ್ಕಲಿಗರಲ್ಲಿ ಮೂವರು ಮಾತ್ರ ಸರ್ಕಾರಿ ಕೆಲಸದಲ್ಲಿ ಸೇರಿಕೊಂಡಿದ್ದರು. ಶ್ರೀ ಬಿ. ನಾಗಪ್ಪನವರು ಬ್ಯಾರಿಸ್ಟರ್ ಪರೀಕ್ಷೆಯನ್ನು ಮಾಡಿಕೊಂಡು ಆಗತಾನೇ ಇಂಗ್ಲೆಂಡಿನಿಂದ ಹಿಂತಿರುಗಿ ಬಂದು ತಮ್ಮ ವಕೀಲಿ ವೃತ್ತಿಯಲ್ಲಿ ಆಸಕ್ತರಾಗಿದ್ದರು. ಆದರೆ ತಮ್ಮ ಹೃದಯದಲ್ಲಿ ತುಂಬಿದ ಸಂಘ ಸ್ಥಾಪನೆಯ ಆಶಯವನ್ನು ಈಡೇರಿಸಲು ಅವಕಾಶಕ್ಕಾಗಿ ಕಾಯುತ್ತಿದ್ದರು.

ಅಮಲ್ದಾರರಾಗಿದ್ದ ಶ್ರೀ ಬಿ.ಎಸ್. ಚೆನ್ನಿಗಪ್ಪನವರು, ಬ್ಯಾರಿಸ್ಟರ್ ಶ್ರೀ ನಾಗಪ್ಪನವರೂ ಒಂದು ದಿನ ಇಂಗ್ಲೆಂಡ್ ಮತ್ತು ನಮ್ಮ ದೇಶದ ಜನರು ಸ್ಥಿತಿಗತಿಗಳನ್ನು ಕುರಿತು ಶ್ರೀ ನಾಗಪ್ಪನವರ ಮನೆಯಲ್ಲಿ ಮಾತನಾಡುತ್ತಿರುವಾಗ

ನಮ್ಮ ಒಕ್ಕಲಿಗರ ಉದ್ಧಾರಾರ್ಥವಾಗಿ ಒಂದು ಸಂಘವನ್ನು ಸ್ಥಾಪಿಸಬೇಕೆಂಬ ದೃಢವಾದ ಸಂಕಲ್ಪವುಂಟಾಯಿತು. ಆ ಕೂಡಲೇ ಶ್ರೀ ನಾಗಪ್ಪನವರು ತಮ್ಮ ಮಾವನವರಾದ ಶ್ರೀ ಟಿ.ಬೈಯ್ಯಣ್ಣನವರಲ್ಲಿ ಹೋಗಿ ತಮ್ಮಿರ್ವರಿಗೂ ಉಂಟಾದ ಸಂಕಲ್ಪವನ್ನು ತಿಳಿಸಿದರು. ಶ್ರೀ ಬೈಯ್ಯಣ್ಣನವರಿಗೆ ಏನಾದರೂ ಒಂದು ಪರೋಪಕಾರವನ್ನು ಮಾಡಬೇಕೆಂಬ ಅಭಿಲಾಷೆ ಇದ್ದುದರಿಂದ ಶ್ರೀ ನಾಗಪ್ಪನವರ ಸೂಚನೆಯನ್ನು ಅಂಗೀಕರಿಸಿ, ಒಕ್ಕಲಿಗ ಜನಾಂಗದಲ್ಲಿ ವಿದ್ಯೆಯು ಹರಡಿ ತನ್ಮೂಲಕ ಅವರ ಸಾಮಾಜಿಕ, ನೈತಿಕ ಮತ್ತು ಆರ್ಥಿಕ ಏಳಿಗೆಯುಂಟಾಗಲು ಸಂಘವನ್ನು ಸ್ಥಾಪಿಸುವುದಕ್ಕೆ ತಮ್ಮ ಅನುಮತಿಯನ್ನು ಕೊಟ್ಟರು. ತಮ್ಮ ಕೈಲಾದ ಸಹಾಯವನ್ನು ಮಾಡುವುದಾಗಿ ಶ್ರುತ ಪಡಿಸಿದರು. ಹೀಗೆ ಪ್ರೋತ್ಸಾಹಗೊಂಡ ಚೆನ್ನಿಗಪ್ಪನವರೂ, ನಾಗಪ್ಪನವರೂ ತಮ್ಮ ಪ್ರಯತ್ನವನ್ನು ಎಂ.ಸುಬ್ಬಯ್ಯ, ಬಿ.ಕೆಂಪಣ್ಣ, ಎಂ.ಎಲ್.ಶ್ಯಾಮಗೌಡ, ಎಸ್.ಪುಟ್ಟಣ್ಣ. ಕೆ.ಹೆಚ್.ರಾಮಯ್ಯ, ಸಿ.ಲಕ್ಷ್ಮಣಗೌಡ ಇವರುಗಳಿಗೆ ತಿಳಿಸಿದರು. ಹೀಗೆ ಒಂಬತ್ತು ಮಂದಿ ದೊಡ್ಡ ಮನುಷ್ಯರು ಲಾಲ್‌ಬಾಗ್ ರಸ್ತೆಯಲ್ಲಿ ಶ್ರೀ ಎಂ.ಸುಬ್ಬಯ್ಯನವರ ತೋಟದಲ್ಲಿ ಸೇರಿ ೧೯೦೬ನೇ ಇಸವಿ ಏಪ್ರಿಲ್ ತಿಂಗಳ ೧ನೇ ತಾರೀಖಿನ ದಿವಸ ಒಂದು ಸಭೆಯನ್ನು ನಡೆಸಿದರು. ಆ ಸಭೆಯಲ್ಲಿ ಒಕ್ಕಲಿಗರ ಸಂಘವನ್ನು ಸ್ಥಾಪಿಸಲು ಪರ್ಯಾಲೋಚನೆ ನಡೆಸಿದಾಗ ಬೆಂಗಳೂರಿನಲ್ಲಿದ್ದ ಒಕ್ಕಲಿಗರಿಗಾದ ಆನಂದನ್ನು ಅಷ್ಟಿಷ್ಟೆಂದು ವರ್ಣಿಸಲಾಗದು. ಕಣ್ಣು ಕಾಣದ ಅಂಧನಿಗೆ ಕಣ್ಣು ಬಂದರೆ ಹೇಗೋ ಹಾಗೆ ಎಲ್ಲರಿಗೂ ಒಂದು ಹೊಸ ಜೀವ ಬಂದ ಹಾಗಾಯಿತು. ಎಲ್ಲೆಲ್ಲಿಯೂ ಉತ್ಸಾಹವೂ, ಕೋಲಾಹಲವೂ ತುಂಬಿ ತುಳುಕುತ್ತಿತ್ತು.[೧]

### ೨ ಬೀಜಾಂಕುರ

ಅನಂತರ ಬೆಂಗಳೂರಿನ ಪ್ರಮುಖರಾದ ಹಲವು ಮಂದಿ ಒಕ್ಕಲಿಗರ ದೊಡ್ಡ ಮನುಷ್ಯರನ್ನು ಸೇರಿಸಿಕೊಂಡು ಬಿ.ಕೆಂಪಣ್ಣನವರ ಅಧ್ಯಕ್ಷತೆಯಲ್ಲಿ ಸಭೆ ನಡೆಯಿತು.

೧೯೦೬ನೇ ಇಸವಿ ಏಪ್ರಿಲ್ ೨೯ನೇಯ ತಾರೀಖು ಭಾನುವಾರ ಸಾಯಂಕಾಲ ೩ ಗಂಟೆಗೆ ಬೆಂಗಳೂರು ಕೋಟೆಯ ಬಾಗಿಲ ಬಳಿ ಇರುವ ಸಾಹುಕಾರ್ ಶ್ರೀ ದೊಡ್ಡಣ್ಣನವರ ಶ್ರೀ ಲಕ್ಷ್ಮೀನರಸಿಂಹಸ್ವಾಮಿ ಧರ್ಮ ಪಾಠಶಾಲೆಯಲ್ಲಿ ಸೇರಿದ್ದ ಈ ಸಭೆಗೆ ಒಕ್ಕಲಿಗ ಮಹಾಜನರನ್ನು ಬರಮಾಡಿಕೊಳ್ಳಲು ಹಂಚಿದ್ದ ಆಹ್ವಾನ ಪತ್ರಿಕೆಯಲ್ಲಿ ಒಕ್ಕಲಿಗ ಸಂಘದ ಸ್ಥಾಪನೆಗೆ ಈ ರೀತಿ ವಿಜ್ಞಾಪನೆ ಮಾಡಿತ್ತು.

''ನಮ್ಮ ದೇಶದಲ್ಲಿ ವ್ಯವಸಾಯದಿಂದಲೇ ಮುಖ್ಯವಾಗಿ ಜೀವಿಸುತ್ತಿರುವ ಒಕ್ಕಲಿಗರ ಜನಾಂಗವು ಇತರ ಜನಾಂಗದವರಿಗಿಂತಲೂ ಅಧಿಕ ಸಂಖ್ಯೆಯುಳ್ಳವರಾಗಿದ್ದರೂ ವಿದ್ಯಾಹೀನತೆಯಿಂದ ಏಳಿಗೆಗೆ ಬಾರದೆ ಇರುವುದು ತಮಗೆ ತಿಳಿದೇ ಇದೆ.

ಪ್ರಸ್ತುತ ಈ ಅವಸ್ಥೆಯನ್ನು ಹೋಗಲಾಡಿಸಿ ನಮ್ಮವರನ್ನು ಉನ್ನತ ಸ್ಥಿತಿಗೆ ತರಲು ಈ ಸಂಘವನ್ನು ಕಂಟ್ರಾಕ್ಟರಾದ ಶ್ರೀ ಟಿ.ಬೈಯಣ್ಣನವರು, ಅಮಲ್ದಾರರಾದ ಶ್ರೀ ಬಿ.ಎನ್.ಚನ್ನಿಗಪ್ಪನವರು, ಬ್ಯಾರಿಸ್ಟರಾದ ಶ್ರೀ ಬಿ.ನಾಗಪ್ಪನವರು, ಸ್ಟೇಟ್ ಫಾರಿಸ್ಟ್ ಶ್ರೀ ಎಂ.ಸುಬ್ಬಯ್ಯನವರು, ಮತ್ತು ಕಂಟ್ರಾಕ್ಟರಾದ ಶ್ರೀ ವಿ.ತಾತಪ್ಪ ಮೇಸ್ತ್ರಿಗಳು ಮೊದಲಾದವರುಗಳಿಂದ ಉದ್ದೇಶಿಸಲ್ಪಟ್ಟು ತದನುಸಾರವಾಗಿ ೧೯೦೬ನೇ ಇಸವಿ ಏಪ್ರಿಲ್ ೧ ೮ನೇ ತಾರೀಖುಗಳಲ್ಲಿ ತಮ್ಮ ಜಾತಿಯವರ ಪೈಕಿ ಬೆಂಗಳೂರಿನಲ್ಲಿರುವ ಕೆಲವರು ದೊಡ್ಡ ಮನುಷ್ಯರನ್ನು ಸೇರಿಸಿಕೊಂಡು

ಯೋಚನೆ ಮಾಡಿದ್ದರಲ್ಲಿ ಹಿರಿಯರಾದ ಶ್ರೀ ಬಿ.ಕೆಂಪಣ್ಣನವರನ್ನು ಕಾರ್ಯಾಧ್ಯಕ್ಷರನ್ನಾಗಿಯೂ, ಶ್ರೀ ಕೆ.ಎಚ್.ರಾಮಯ್ಯ ಅವರನ್ನು ಸೆಕ್ರೆಟರಿಯವರನ್ನಾಗಿಯೂ ನೇಮಿಸಿ ಒಕ್ಕಲಿಗರ ವಿದ್ಯಾಭಿವೃದ್ಧಿಯ ವಿಚಾರದಲ್ಲಿ ಸಭೆ ಏರ್ಪಡಿಸಬೇಕೆಂದು ತೀರ್ಮಾನ ಮಾಡಿದ್ದ ಪ್ರಕಾರ ೧೯೦೬ರ ಇಸವಿ ಏಪ್ರಿಲ್ ೧೫ನೇ ತಾರೀಖಿನಲ್ಲಿ ಕೋಟೆಯ ಬಾಗಿಲ ಬಳಿ ಇರುವ ಸಾಹುಕಾರ್ ಶ್ರೀ ದೊಡ್ಡಣ್ಣನವರ ಶ್ರೀ ಲಕ್ಷ್ಮೀನರಸಿಂಹಸ್ವಾಮಿ ಧರ್ಮ ಶಾಲೆಯಲ್ಲಿ ಒಂದು ಸಭೆ ಸೇರಿತ್ತು."[೨]

ಈ ಸಭೆಯಲ್ಲಿ ಸೇರಿದ್ದ ಹಿರಿಯರೆಲ್ಲರೂ ಈ ಸಂಘದ ಅವಶ್ಯಕತೆಯನ್ನು ಅನುಮೋದಿಸಿದ್ದಲ್ಲದೆ, ಇದರ ಶ್ಲಾಘನೀಯವಾದ ಉದ್ದೇಶವನ್ನು ನೆರವೇರಿಸುವ ಬಗ್ಗೆ ಈ ಕೆಳಗೆ ಉಲ್ಲೇಖಿಸಿರುವವರನ್ನು ಕಮಿಟಿ ಮೆಂಬರುಗಳನ್ನಾಗಿ ಚುನಾಯಿಸಿ, ಅವರ ಮೂಲಕ ಪುನಃ ಇದೇ ತಿಂಗಳು ೨೯ನೇ ತಾರೀಖು ಭಾನುವಾರ ಬೆಂಗಳೂರು ಮತ್ತು ಇದರ ಅಜೂ ಬಾಜು ಗ್ರಾಮಗಳಲ್ಲಿರತಕ್ಕ ಸಮಸ್ತ ಒಕ್ಕಲಿಗರ ಮಹನೀಯರನ್ನೂ ಬರಮಾಡಿಕೊಂಡು ಮತ್ತೊಂದು ಸಭೆಯನ್ನು ಸೇರಿಸಿ ಮುಂದಿನ ಏರ್ಪಾಡುಗಳನ್ನು ಮಾಡಬೇಕೆಂದು ತೀರ್ಮಾನ ಮಾಡಿದರು.

ಪ್ರಥಮ ಮುಖಂಡರ ಸಭೆಗೆ ಈ ಕೆಳಗಿನವರು ಉಪಸಮಿತಿ ಮೆಂಬರುಗಳಾಗಿದ್ದರು.

೦೧. ಶ್ರೀ ಟಿ.ಬೈಯಣ್ಣ, ಕೋಲಾರದ ಚಿನ್ನದ ಗಣಿ ಕಂಟ್ರಾಕ್ಟರ್

೦೨. ಶ್ರೀ ವಿ.ತಾತಪ್ಪ, ಮೇಸ್ತ್ರಿಗಳು ಕಂಟ್ರಾಕ್ಟರ್

೦೩. ಶ್ರೀ ಹೆಚ್.ಚನ್ನಯ್ಯ, ರಿಜಿಸ್ಟ್ರಾರ್, ರೆಸಿಡೆಂಟಲ್ ಕೋರ್ಟು

೦೪. ಶ್ರೀ ಬಿ.ನಾಗಪ್ಪ, ಬ್ಯಾರಿಸ್ಟರ್ ಅಟ್ ಲಾ

೦೫. ಶ್ರೀ ಬಿ.ಟಿ.ಕೆಂಚಪ್ಪ, ಸೂಪರ್ವೈಸರ್, ಕಂಟೋನ್ಮೆಂಟ್ ಮುನಿಸಿಪಾಲಿಟಿ.

೦೬. ಶ್ರೀ ಎಂ.ವೆಂಕಟಪ್ಪ, ಕಂಟ್ರಾಕ್ಟರ್

೦೭. ಶ್ರೀ ಎಂ.ಎಲ್.ಶಾಮಗೌಡ, ಟ್ರಾನ್ಸ್‌ಲೇಟರ್ ಛೀಫ್ ಕೋರ್ಟ್

೦೮. ಶ್ರೀ ಬಿ.ಹನುಮಂತಪ್ಪ, ಕಂಟ್ರಾಕ್ಟರ್

೦೯. ಶ್ರೀ ಸಿ.ಮುನಿಯಪ್ಪ, ಜನರಲ್ ಮರ್ಚೆಂಟ್

೧೦. ಶ್ರೀ ಎಸ್.ಪುಟ್ಟಣ್ಣ, ಪಟೇಲ್ ಮತ್ತು ಕಂಟ್ರಾಕ್ಟರ್

೧೧. ಶ್ರೀ ಬಿ.ಟಿ.ಕೆಂಪಣ್ಣ, ಜಮೇದಾರ್

೧೨. ಶ್ರೀ ಎಂ.ಎಲ್.ಶಂಕರಯ್ಯ, ಜರ್ಮೀದಾರ್

೧೩. ಶ್ರೀ ಎಂ.ಸುಬ್ಬಯ್ಯ.ಬಿ.ಎ., ಸಂಸ್ಥಾನದ ಹೂ ತೋಟಗಾರರು ಮತ್ತು ಸರ್ಕಾರಿ ಕಂಟ್ರಾಕ್ಟರ್

೧೪. ಶ್ರೀ ಮುನಿಶಾಮಪ್ಪ, ಛೀಪ್ ಗಾರ್ಡ್

೧೫. ಶ್ರೀ ಡಾ.ಸಿ.ನಂಜಪ್ಪ.ಎಂ.ಬಿ., ಅಂಡ್ ಸಿ.ಎಂ

೧೬. ಶ್ರೀ ಸಿ.ಲಕ್ಷ್ಮಣ ಗೌಡ,ಬಿ.ಎ., ಬಿ.ಎಲ್.ಅಡ್ವೊಕೇಟ್

೧೭. ಶ್ರೀ ಬಿ.ಎನ್.ಚನ್ನಿಗಪ್ಪ.ಬಿ.ಎ., ಅಮಲ್ದಾರ್

೧೮. ಶ್ರೀ ಕೊಪ್ಪದ ಪಟೇಲ್ ಪುಟ್ಟಪ್ಪನವರು, ಜಮೀನ್ದಾರ್

೧೯. ಶ್ರೀ ರೆಡ್ಡಿ ಚಿಕ್ಕಮುನಿಯಪ್ಪ, ಜಮೀನ್ದಾರ್

೨೦. ಶ್ರೀ ಹೂಡಿ ಚಿಕ್ಕಗುರುವ ರೆಡ್ಡಿ, ಜಮೀನ್ದಾರ್

೨೧. ಶ್ರೀ ಚಿಕ್ಕಣ್ಣ ಶೆಟ್ಟರು, ಪ್ಲೀಡರ್

೨೨. ಶ್ರೀ ಅಗರದ ರಾಮರೆಡ್ಡಿ, ಜಮೀನ್ದಾರ್

೨೩. ಶ್ರೀ ಟಿ.ರಾಮಯ್ಯ, ಕಂಟ್ರಾಕ್ಟರ್

೨೪. ಶ್ರೀ ಪಿ.ಮುದ್ದಯ್ಯ, ಕಂಟ್ರಾಕ್ಟರ್

೨೫. ಶ್ರೀ ಬಿ.ಎಸ್.ಮಾರಪ್ಪ, ಕಂಟ್ರಾಕ್ಟರ್

೨೬. ಶ್ರೀ ಎಸ್.ರಾಮಪ್ಪನಾಯಕ, ಗುಮಾಸ್ತರು, ಡಿಸ್ಟಿಕ್ಟ್ ಮ್ಯಾಜಿಸ್ಟ್ರೇಟ್, ಕಂಟೋನ್‌ಮೆಂಟ್

೨೭. ಶ್ರೀ ತಿಮ್ಮೇಗೌಡ, ವರ್ತಕರು

೨೮. ಶ್ರೀ ಹೂಡಿ ವೀರಪ್ಪರೆಡ್ಡಿ, ಜಮೀನ್ದಾರ್

೨೯. ಶ್ರೀ ಬೆಟ್ಟಣ್ಣ, ಗುರಿಕಾರ್

೩೦. ಶ್ರೀ ಹೆಚ್.ದಾಸಪ್ಪ, ಕ್ಲಾರ್ಕ್, ವಿದ್ಯಾಭ್ಯಾಸ ಇಲಾಖೆಯ ಇನ್‌ಸ್ಪೆಕ್ಟರ್, ಜನರಲ್ ಆಫೀಸ್.

೩೧. ಶ್ರೀ ಮುನಿವೆಂಕಟಪ್ಪ, ಹೂ ತೋಟಗಾರರು

೩೨. ಶ್ರೀ ಲಿಂಗಾರೆಡ್ಡಿ, ವರ್ತಕರ

೩೩. ಶ್ರೀ ನಂಜುಂಡಪ್ಪ, ಯಮ್ಮಲೂರು ಪಟೇಲ್ ಮತ್ತು ಕಾಂಟ್ರಾಕ್ಟರ್

೩೪. ಶ್ರೀ ತಿಮ್ಮೆಗೌಡ,ಸುಂಕದ ಕಟ್ಟೆ ಪಟೇಲ್ ಮತ್ತು ಜಮೀನ್ದಾರ

೩೫. ಶ್ರೀ ರೆಡ್ಡಿಪುರಂ ಬೈರಪ್ಪ, ಜಮೀನ್ದಾರ

೩೬. ಶ್ರೀ ಎಲೆ ಮರೀಶಪ್ಪ, ಕಂಟ್ರಾಕ್ಟರ್

೩೭. ಶ್ರೀ ಎಲೆ ಮುದ್ದಪ್ಪ, ವರ್ತಕರು

೩೮. ಶ್ರೀ ಎಸ್. ರಾಮಯ್ಯ, ಗುಮಾಸ್ತರು, ಸರ್ವೇ ಆಫೀಸರ್

೩೯. ಶ್ರೀ ಡಾ.ಟಿ. ರಂಗಸ್ವಾಮಪ್ಪ

೪೦. ಶ್ರೀ ಬಿ. ತಿಮ್ಮಪ್ಪ, ವರ್ತಕರು

೪೧. ಶ್ರೀ ಪಿಳ್ಳಪ್ಪ, ಜಮೇದಾರ್

೪೨. ಶ್ರೀ ಆಲೂರು ಬೈರಪ್ಪ, ಹನುಮಯ್ಯನವರು ವರ್ತಕರು

೪೩. ಶ್ರೀ ಬಿ.ಎಸ್. ನಾಗಪ್ಪ, ವರ್ತಕರು

೪೪. ಶ್ರೀ ಬಿ. ತಿಮ್ಮಯ್ಯ, ವರ್ತಕರು

೪೫. ಶ್ರೀ ಪುಟ್ಟಣ್ಣನವರ ತಿರಕಪ್ಪ, ಜರ್ಮೀದಾರ್

೪೬. ಶ್ರೀ ಪಟ್ಟಡಿ ತಿಮ್ಮಚಯ್ಯ, ವರ್ತಕರು

೪೭. ಶ್ರೀ ಎಂ. ಲೊಣ್ಣಪ್ಪ, ವರ್ತಕರು

೪೮. ಶ್ರೀ ಬಿ. ಹುಚ್ಚಪ್ಪ, ಕಂಟ್ರಾಕ್ಟರ್

೪೯. ಶ್ರೀ ಸುಬ್ಬರಾಯಪ್ಪ, ಕಂಟ್ರಾಕ್ಟರ್

೫೦. ಶ್ರೀ ಬಿ. ಕೆಂಪಣ್ಣ, ಪ್ಲೀಡರ್

೫೧. ಶ್ರೀ ಕೆ.ಎಚ್. ರಾಮಯ್ಯ, ಬಿ.ಎ,, ಗುಮಾಸ್ತರು, ಸೆಕ್ರೆಟೇಯರ್

**೩. ಪ್ರಚಾರ ಕಾರ್ಯ**

ನಂತರ ಕೆ. ಹೆಚ್. ರಾಮಯ್ಯನವರು ಊರು ಊರುಗಳಲ್ಲಿ ಉಪನ್ಯಾಸಗಳನ್ನು ಕೊಟ್ಟ ಒಕ್ಕಲಿಗರೆಲ್ಲರನ್ನೂ ಮಹಾಸಭೆಗೆ ಬರಹೇಳುವುದಕ್ಕೋಸ್ಕರ ಅತ್ಯಂತ ಉತ್ಸಾಹದಿಂದ ಹೊರಟರು. ಶ್ರೀ ಎಂ. ಸುಬ್ಬಯ್ಯನವರು ತಮ್ಮ ಶ್ರೀ ಚಾಮುಂಡೇಶ್ವರಿ ಮುದ್ರಣಾಲಯದಲ್ಲಿ ಸಂಘದ ಸಮಸ್ತ ಮುದ್ರಣ ಕೆಲಸವನ್ನೂ ಉಚಿತವಾಗಿ ಮಾಡಿಸಿಕೊಟ್ಟರು. ಅಲ್ಲದೆ, ಸಭೆ ನಡೆಸುವುದಕ್ಕೆ ತಮ್ಮ ಬಂಗಲೆಯಲ್ಲಿ ಸ್ಥಳಾನುಕೂಲ ಮಾಡಿಕೊಟ್ಟರು. ಶ್ರೀ ಬಿ. ನಾಗಪ್ಪನವರು ತಮ್ಮ ಕೆಲಸದ ಮೇಲೆ ಡಿಸ್ಟ್ರಿಕ್ಟುಗಳಲ್ಲಿ ಸಂಚಾರ ಮಾಡುವಾಗ ಪ್ರಮುಖರಾದ ಒಕ್ಕಲಿಗರನ್ನು ಕರೆಸಿಕೊಂಡು ಅವರಿಗೆ ಒಕ್ಕಲಿಗರ ಸಂಘವನ್ನು ಸ್ಥಾಪಿಸಬೇಕೆಂದು ಮಾಡಿಕೊಂಡಿರುವ ಸಂಕಲ್ಪವನ್ನು ತಿಳಿಸಿದರು. ತಮ್ಮ ಬಳಿಗೆ ಒಕ್ಕಲಿಗರ ಕಕ್ಷಿಗಾರರು ಬಂದರೆ ಪ್ರತಿಯೊಬ್ಬರಲ್ಲಿಯೂ ಸಂಘದ ವಿಚಾರವನ್ನು ಪ್ರಸ್ತಾಪಿಸಿ ಅವರ ಸಂಪೂರ್ಣವಾದ ಸಹಾನುಭೂತಿಯು ಸಂಘದ ಮೇಲೆ ಉಂಟಾಗುವಂತೆ ಮಾಡಿದರು. ಹೀಗೆ ಯಾರ್ಯಾರು ಯಾವ ರೀತಿಯ ಸಹಾಯ ಮಾಡಲು ಸಮರ್ಥರಾಗಿದ್ದರೋ ಅವರವರು ಆಯಾ ಸಹಾಯವನ್ನು ಮಾಡಲು ಸನದ್ಧರಾದರು. ಇದರಲ್ಲೆಲ್ಲಾ ಶ್ರೀ ಕೆ.ಎಚ್. ರಾಮಯ್ಯನವರ ಉತ್ಸಾಹವೇ ಬಹುಮುಖ್ಯವಾದದ್ದು. ಸ್ವಾಭಾವಿಕವಾಗಿ ವಾಚಾಳಿಗಳೂ, ಬುದ್ಧಿವಂತ ಪ್ರಕೃತಿಯುಳ್ಳವರೂ, ಧೈರ್ಯಶಾಲಿಗಳೂ ಮತ್ತು ಸ್ವಾರ್ಥತ್ಯಾಗಿಗಳೂ ಆಗಿದ್ದರು. ಆದುದ್ದರಿಂದ ಇವರಿಗೆ ಒಕ್ಕಲಿಗರ ಸೇವೆ ಎಂಬುದು ಮನಸ್ಸಿನಲ್ಲಿ ನಾಟಿದ ಕೂಡಲೇ ತಮ್ಮನ್ನು ತಾವೇ ಮರೆತು ಬಿಟ್ಟರು. ತಮ್ಮ ಸರ್ವಸ್ವವನ್ನೂ, ಅಂದರೆ ತಮ್ಮನ್ನೇ ಒಕ್ಕಲಿಗರ ಸಂಘದ ಸೇವೆಗೆ ಸೂರೆಗೊಡಲು ಉದ್ಯುಕ್ತರಾದರು.

ಮಹಾಸಭೆಯನ್ನು ೧೯೦೬ನೆಯ ಅಕ್ಟೋಬರ್ ತಿಂಗಳಲ್ಲಿ ಬೆಂಗಳೂರಿನಲ್ಲಿ ನಡೆಸುವುದಾಗಿಯೂ, ಆ ಮಹಾಸಭೆಗೆ ಸರ್ವರೂ ದಯಮಾಡಿಸಬೇಕೆಂತಲು, ಒಂದು ಪ್ರಕಟನಾ ಪತ್ರಿಕೆಯನ್ನು ಪ್ರತಿಯೊಂದು ಡಿಸ್ಟ್ರಿಕ್ಟು. ತಾಲ್ಲೂಕು ಮತ್ತು ಗ್ರಾಮಕ್ಕು ಅಲ್ಲಲ್ಲಿ ಗುರುತಿದ್ದ ಕೆಲವರು ದೊಡ್ಡ ಮನುಷ್ಯರಿಗೂ, ಪಟೇಲರು ಮತ್ತು ಅಮಲ್ದಾರರುಗಳಿಗೂ ಕಳುಹಿಸಿಕೊಟ್ಟರು.

ಆಗ ಪುಟ್ಟಣ್ಣ ಬಿ.ಎ. ಅವರು ಚಿತ್ರದುರ್ಗದಲ್ಲಿ ಒಂದು ಸಣ್ಣ ನೌಕರಿಯಲ್ಲಿದ್ದರು. ಈ ಪ್ರಕಟಣೆಯು ಕೈಸೇರಿದ ದಿವಸ ಇವರಿಗೆ ಏನೋ ಒಂದು ದೊಡ್ಡ ನಿಧಿ ಕೈಸೇರಿದಂತೆ ಆಯಿತು, ಅವರ ಉತ್ಸಾಹಕ್ಕೂ , ಸಂತೋಷಕ್ಕೂ ಪಾರವೇ ಇರಲಿಲ್ಲ ಈ ಸೇವೆಗೆ ಶಕ್ತಿ ಮೀರಿ ಕೆಲಸ ಮಾಡಬೇಕೆಂದು ಇವರಿಗೆ ಬೋಧೆಯಾಯಿತು.

ಕೂಡಲೆ ಚಿತ್ರದುರ್ಗ ಡಿಸ್ಟ್ರಿಕ್ಟಿನ ತಾಲೂಕುಗಳಲ್ಲಿರುವ ಒಕ್ಕಲಿಗ ದೊಡ್ಡ ಮನುಷ್ಯರುಗಳ ಪಟ್ಟಿಯನ್ನು ಮಾಡಿಸಿ ಅವರೆಲ್ಲರಿಗೂ ಈ ಪ್ರಕಟನಾ ಪತ್ರಗಳನ್ನು ತರಿಸಿ ಕಳುಹಿಸಿದರು. ಹೀಗೆಯೇ ಎಲ್ಲಾ ಡಿಸ್ಟ್ರಿಕ್ಟುಗಲ್ಲಿಯೂ, ಒಕ್ಕಲಿಗ ದೊಡ್ಡ ಮನುಷ್ಯರು ಅಂತ್ಯಂತ ಉತ್ಸಾಹಬರಿತರಾಗಿ ಕೆಲಸ ಮಾಡಿದರೆಂಬುದರಲ್ಲಿ ಸಂದೇಹವೇ ಇಲ್ಲ.

ಶ್ರೀ ಬಿ.ನಾಗಪ್ಪನವರು ಸಹ ಸಂಘದ ಕಾರ್ಯದಲ್ಲಿ ಅತ್ಯಂತ ಆಸಕ್ತಿಯನ್ನು ತೋರಿಸುತ್ತಾ ಸರ್ಕಾರಿ ಮತ್ತು ಖಾಸಗಿ ದೊಡ್ಡಮನುಷ್ಯರುಗಳ ಅಭಿಮಾನವು ಸಂಘದ ಮೇಲೆ ವ್ಯಾಪಿಸುವಂತೆ ಮಾಡಿದರು. ಅವರು ಆಗತಾನೇ ದಿವಾನರಾಗಿದ್ದ ಶ್ರೀ ವಿ.ಪಿ. ಮಾಧವರಾಯರನ್ನು ಕಂಡರು. ಸ್ನೇಹಪರರಾಗಿದ್ದ ಅವರಿಗೆ ತಾವು ಒಕ್ಕಲಿಗರ ಸಂಘವನ್ನು ಏರ್ಪಡಿಸಿಕೊಂಡಿರುವ ಸಮಾಚಾರವನ್ನು ತಿಳಿಸಿ ಅವರನ್ನು ಕಂಡಗಲೆಲ್ಲಾ ಸಂಘದ ಪ್ರಸ್ತಾಪವನ್ನು ತಿಳಿಸಿ ಸಂಘದ ಮೇಲೆ ಅವರಿಗೆ ಸಂಪೂರ್ಣವಾದ ಸಹಾನುಭೂತಿಯುಂಟಾಗುವಂತೆ ಮಾಡಿದರು. ಅಲ್ಲದೆ ಸಂಗಕ್ಕೋಸ್ಕರ ಆಗಬೇಕಾದ ಸರ್ಕಾರಿ ಸಹಾಯವನ್ನೆಲ್ಲಾ ಮಾಡಿಕೊಡುವಂತೆಯೂ ಮತ್ತು ಸಂಘದ ಕಟ್ಟಡವನ್ನು ಕಟ್ಟುವುದಕ್ಕೋಸ್ಕರ ಒಂದು ಭಾರಿ ಜಮೀನನ್ನು ಕೊಡಿಸಿಕೊಡುವಂತೆಯೂ ಅವರಿಂದ ವಾಗ್ದಾನವನ್ನು ಪಡೆದುಕೊಂಡರು. ಶ್ರೀ ರಾಮಯ್ಯನವರೂ ತಮ್ಮ ಅಸಾಧಾರಣವಾದ ಧೈರ್ಯಸ್ಥೈರ್ಯಗಳಿಂದಲೂ ಉತ್ಸಾಹ ದಿಂದಲೂ ಶ್ರೀ ಮಾಧವರಾಯರ ಅನುಗ್ರಹಗಳನ್ನು ಸಂಪಾದಿಸಿ ಅವರಿಂದ ಸಂಘಕ್ಕೆ ಮಹತ್ತರವಾದ ಸಹಾಯವನ್ನು ಪಡೆದರು.

ಶ್ರೀ ರಾಮಯ್ಯನವರು ದಿವಾನರಿಂದ ಸಂಸ್ಥಾನದ ಎಲ್ಲಾ ಅಮಲ್ದಾರರಿಗೂ ಒಂದು ಶಿಫಾರಸ್ಸು ಪತ್ರಗಳನ್ನುತೆಗೆದು ಕೊಂಡು ಮುಖ್ಯವಾದ ಡಿಸ್ಟ್ರಿಕ್ಟ್ ಮತ್ತು ತಾಲೂಕುಗಳಿಗೂ ಗ್ರಾಮಗಳಿಗೂ ಸಂಚಾರ ಹೊರಟು ಹೃದಯಂಗಮವಾಗಿ ಉಪನ್ಯಾಸ ಕೊಟ್ಟು ಒಕ್ಕಲಿಗರನ್ನೆಲ್ಲಾ ಗಾಢನಿದ್ರೆಯಿಂದ ಎಬ್ಬಿಸಿದರು. ಸರ್ಕಾರಿ ಅಧಿಕಾರಿಗಳೆಲ್ಲರೂ ಇವರಿಗೆ ಸಹಾಯಕರಾಗಿ ನಿಂತು ಆಗಬೇಕಾದ ಅನುಕೂಲಗಳನ್ನೆಲ್ಲಾ ಒದಗಿಸಿಕೊಟ್ಟಿದ್ದರು. ಸುಮಾರು ನಾಲ್ಕು ತಿಂಗಳ ಕಾಲ ಶ್ರೀ ರಾಮಯ್ಯನವರು ಊರೂರುಗಳನ್ನು ಸುತ್ತಿ, ಅನ್ನ ನೀರನ್ನು ಯೋಚಿಸದೆ ಅಸಾದೃಶ್ಯವಾದ ವಾಗ್ಝರಿಯುಳ್ಳ ಮತ್ತು ಉತ್ತೇಜನ ಕಾರಿಗಳಾದ ಉಪನ್ಯಾಸಗಳನ್ನು ಕೊಟ್ಟು, ಜನರಲ್ಲಿ ಪ್ರಜ್ಞೆಮೂಡಿಸಿದರು. ತಮ್ಮಸರ್ಕಾರಿ ಕೆಲಸದಿಂದ ನಾಲ್ಕು ತಿಂಗಳ ಕಾಲ ರಜ ತೆಗೆದುಕೊಂಡು ಈ ಸಂಚಾರಕ್ಕೆ ಹೊರಟರು. ತಮ್ಮ ಸಂಚಾರದಲ್ಲಿ ಜನರ ಹೀನ ಸ್ಥಿತಿಯನ್ನೂ ಅವರಲ್ಲಿದ್ದಂತಹ ಪ್ರಮುಖ ಉತ್ಸಾಹವನ್ನೂ ಕಂಡು ಒಕ್ಕಲಿಗ ಜನ ಸಮುದಾಯದ ಏಳಿಗೆಗೋಸ್ಕರವೇ ಜನಿಸಿರುವ ಅವತಾರ ಪುರುಷರೆಂದು ಎಲ್ಲರೂ ನಂಬುವಂತಾದರು. ಇತ್ತ ಶ್ರೀ ನಾಗಪ್ಪನವರು ಶ್ರೀ ಮಾಧವರಾಯರನ್ನು ಪದೇ ಪದೇ ಕಾಣುತ್ತಲೂ, ಸಂಘದ ಕಾರ್ಯವು ಅಭಿವೃದ್ಧಿ ಹೊಂದುತ್ತಿರುವುದನ್ನು ತಿಳಿಸುತ್ತಲೂ ರಾಜಸಭಾಭೂಷಣ ದಿವಾನ್ ಬಹದ್ದೂರ್ ಸರ್ ಕೆ. ಪಿ. ಪುಟ್ಟಣ್ಣ ಶೆಟ್ಟರ ಮೂಲಕ ಹೇಳಿಸಿ ಮಾಧವರಾಯರು ಒಕ್ಕಲಿಗರ ಸಂಘದ ಪ್ರಥಮ ಮಹಾಸಭೆ ಪ್ರಾರಂಬೋತ್ಸವವನ್ನು ನಡೆಸುವಂತೆ ಒಪ್ಪಿಸಿದರು. ಕೆ.ಎಚ್.ರಾಮಯ್ಯನವರು ಬ್ರಿಟಿಷ್ ರೆಸಿಡೆಂಟರಾಗಿದ್ದ ಮಿ. ಫ್ರೇಜರ್ ದೊರೆಗಳಿಗೂ ಪರಿಚಯವಿದ್ದುದರಿಂದ ಅವರನ್ನು ಕಂಡು ಅವರ ಸಹಾಯವು ಸಹಾನುಭೂತಿಯೂ ಸಂಘಕ್ಕೆ ಒದಗುವಂತೆ ಮಾಡಿದರು.[೩]

## ೪ ಮೊದಲನೆಯ ಮಹಾಸಭೆ

ಶ್ರೀ ರಾಮಯ್ಯ ಹಾಗೂ ಶ್ರೀ ನಾಗಪ್ಪನವರೂ ಮಾಡಿದ ಅದ್ಭುತ ಕಾರ್ಯದ ಫಲ ಒಕ್ಕಲಿಗರ ಮೊದಲನೆಯ ಮಹಾ ಸಭೆಯು ೧೯೦೬ನೆಯ ಅಕ್ಟೋಬರ್ ೪,೯ನೆಯ ತಾರೀಖುಗಳಲ್ಲಿ ಬೆಂಗಳೂರಿನಲ್ಲಿ ಸೇರಿತ್ತು. ಮೈಸೂರು ಸಂಸ್ಥಾನದ ಸಮಸ್ತ ಒಕ್ಕಲಿಗರು ಎಂದೂ ಕಂಡು ನೋಡದೇ ಇದ್ದಂತಹ ಒಕ್ಕಲಿಗ ಪ್ರಮುಖರು ಸಾವಿರಾರು ಮಂದಿ ತಂಡ ತಂಡವಾಗಿ ಬೆಂಗಳೂರಿಗೆ ಬಂದು ಸಭೆಯನ್ನಲಂಕರಿಸಿದ್ದರು. ನಾಗಮಂಗಲ, ಕುಣಿಗಲ್ ಪ್ರಾಂತ್ಯದ ಆಜಾನುಬಾಹುಗಳಾದ ಗೌಡರುಗಳೂ, ತೀರ್ಥಹಳ್ಳಿ ಮುಂತಾದ ಪ್ರಾಂತಗಳ ತುಂಬಾ ಚಟುವಟಿಕೆಯುಳ್ಳ ನಾಮಧಾರಿ ಗೌಡರುಗಳೂ, ಮಂಜರಾಬಾದು ಸೀಮೆಯ ಅಂತವಾದ ನಾಡುಗೌಡರೂ ತಂಡ ತಂಡವಾಗಿ ನೆರೆದಿದ್ದರು. ಇವರನ್ನೆಲ್ಲಾ ಮೊಟ್ಟಮೊದಲು ನೋಡಿದವರಿಗೆಲ್ಲರಿಗೂ ಒಕ್ಕಲಿಗ ಜನಾಂಗದಲ್ಲಿ ಗೌರವವೂ, ಹೆಮ್ಮೆಯೂ ಉಂಟಾದವು. ಇಂತಹ ವಿಸ್ತಾರವಾದ ಜನಸಮೂಹದ ಪ್ರತಿನಿಧಿಗಳಾಗಿ ಕೆಲಸ ಮಾಡುವುದು ಒಂದು ಪೂರ್ವಪುಣ್ಯವೆಂದು ಸಂಘದ ಮುಂದಾಳುಗಳಿಗೆ ತಿಳಿಯಿತು. ಅದುವರೆವಿಗೂ ಒಕ್ಕಲಿಗ ಎಂದೆನಿಸಿಕೊಳ್ಳುವುದು ಅವಮಾನವೆಂದು ತಿಳಿದುಕೊಂಡಿದ್ದವರಿಗೆ ಒಕ್ಕಲಿಗ ಎಂದೇ ಕರೆಯಿಸಿಕೊಳ್ಳಬೇಕೆಂಬ ಆಸೆ ಹುಟ್ಟಿತು.

ದಿವಾನ್ ವಿ.ಪಿ.ಮಾಧವರಾಯರು, ನಾಗಪ್ಪನವರ ಕುತೂಹಲವನ್ನೂ ರಾಮಯ್ಯನವರ ಉತ್ಸಾಹಗಳನ್ನೂ ತಮ್ಮ ಭಾಷಣದಲ್ಲಿ ವಿಸ್ತರಿಸಿ ಹೇಳಿದರು. ಮತ್ತು ಮಹಾಸಭೆಯನ್ನು ಉಪಕ್ರಮಿಸುವಂತೆ ಒಪ್ಪಿಕೊಂಡರು. ಮೈಸೂರು ಪ್ರಜಾಪ್ರತಿನಿಧಿ ಸಭೆಯಲ್ಲಿ ದಿವಾನರವರು ಕೊಟ್ಟ ತಮ್ಮ ಭಾಷಣಗಳಲ್ಲಿ ಒಕ್ಕಲಿಗರ ಸಂಘದ ಉದ್ಭವ ಮತ್ತು ಏಳಿಗೆಯನ್ನು ಕುರಿತು ಪ್ರಸ್ತಾಪ ಮಾಡಿ, ನಮ್ಮ ಸಂಘದ ಅಭಿವೃದ್ಧಿಯಿಂದ ಸಂಸ್ಥಾನಕ್ಕೆ ಆಗುವ ಪ್ರಯೋಜನಗಳನ್ನೂ ಹೇಳಿ, ನಮ್ಮ ಸಂಘಕ್ಕೂ ನಮ್ಮ ಜನರಿಗೂ ತುಂಬಾ ಗೌರವವನ್ನುಂಟುಮಾಡಿದರು.

ಸಂಘದ ವಿದ್ಯಾರ್ಥಿನಿಲಯವನ್ನು ಕಟ್ಟುವುದಕ್ಕೆ ವಿಸ್ತಾರವಾದ ಜಮೀನನ್ನು ಉಚಿತವಾಗಿ ತಾವೇ ಖುದ್ದಾಗಿ ಬಂದು ನಿಂತು ಕೊಡಿಸಿಕೊಟ್ಟರು. ಇಷ್ಟು ಮಹದುಪಕಾರವನ್ನು ಮಾಡಿದ ಈ ಮಹನೀಯರಿಗೆ ಒಕ್ಕಲಿಗ ಮಹಾಜನರು ಚಿರ ಕಾಲ ಕೃತಜ್ಞರಾಗಿಬೇಕಾದದು ಧರ್ಮವಾಗಿದೆ.

ಮಹಾಸಭೆಗೆ ಬಿ.ಎಸ್.ಮಾರಪ್ಪನವರು ಪ್ರೆಸಿಡೆಂಟರಾಗಿ ಚುನಾಯಿಸಲ್ಪಟ್ಟು ಬಹು ಸ್ವಾರಸ್ಯವುಳ್ಳ, ದೀರ್ಘವಾದ ಭಾಷಣವನ್ನು ಮಾಡಿದರು. ಇವರ ತಮ್ಮನವರಾದ ಬಿ.ಎಸ್.ಮುನಿಸ್ವಾಮಪ್ಪನವರೂ ಸೇರಿ ಸುಮಾರು ಇಪ್ಪತ್ತು ಸಾವಿರ ರೂಪಾಯಿಗಳಿಂದ ಮೂವತ್ತು ಸಾವಿರ ರೂಪಾಯಿಗಳವರೆಗೂ ಖರ್ಚು ಮಾಡಿ ಸಂಘದ ವಿದ್ಯಾರ್ಥಿನಿಲಯಕ್ಕೆ ಒಂದು ಅನುಕೂಲವಾದ ಕಟ್ಟಡವನ್ನು ಕಟ್ಟಿಸಿಕೊಡುವಂತೆ ಸಭೆಯಲ್ಲಿ ಹೇಳಿದರು. ಶ್ರೀ ಟಿ.ಬೈಯಣ್ಣನವರು ಹತ್ತು ಸಾವಿರ ರೂಪಾಯಿಗಳನ್ನು ಸಂಘಕ್ಕೆ ಕೊಡುವುದಾಗಿ ಹೇಳಿ ಆ ಮೊಬಲಗನ್ನು ಮಹಾಸಭೆಯಲ್ಲಿಯೇ ಸಲ್ಲಿಸಿಬಿಟ್ಟರು. ಇಷ್ಟು ವಿಜೃಂಭಣೆಯಿಂದ ನೆರವೇರಿದ ಮೊದಲನೆಯ ಮಹಾಸಭೆ ಮುಗಿದ ನಂತರ ಸಂಘವು ಕಾನೂನಿಗನುಸಾರವಾಗಿ ೧೯೦೭ನೆಯ ಸೆಪ್ಟಂಬರ್ ೯ನೆಯ ತಾರೀಖು ರಿಜಿಸ್ಟರ್ ಮಾಡಲ್ಪಟ್ಟಿತು. ಮುಂದೆ ಹೇಳುವಂತೆ ಸಂಘದ ಅಧಿಕಾರಿಗಳೂ ಮತ್ತು ಅರವತ್ತು ಮಂದಿ ದೊಡ್ಡ ಮನುಷ್ಯರೂ ಎಕ್ಸಿಕ್ಯೂಟಿವ್ ಮತ್ತು ಜನರಲ್ ಕೌನ್ಸಿಲ್‌ಗಳಿಗೆ ಚುನಾಯಿಸಲ್ಪಟ್ಟರು.

**ಎಕ್ಸಿಕ್ಯೂಟಿವ್ ಕೌನ್ಸಿಲ್**

ಪ್ರೆಸಿಡೆಂಟರು ಶ್ರೀ ಟಿ.ಬೈಯ್ಯಣ್ಣನವರು, ವೈಸ್ ಪ್ರೆಸಿಡೆಂಟರುಗಳು ಶ್ರೀ.ಬಿ.ಕೆಂಪಣ್ಣನವರು, ಶ್ರೀ ಬಿ.ನಾಗಪ್ಪನವರು, ಶ್ರೀ ಬಿ.ಎಸ್‌ಮುನಿಸ್ವಾಮಪ್ಪನವರು, ಜನರಲ್ ಸೆಕ್ರೆಟರಿ, ಶ್ರೀ ಕೆ.ಹೆಚ್.ರಾಮಯ್ಯನವರು ಅ.ಜ.ಸೆಕ್ರೆಟರಿ, ಶ್ರೀ ಬಿ.ಪುಟ್ಟಯ್ಯನವರು

**೫ ಒಕ್ಕಲಿಗರ ಪತ್ರಿಕೆ**

ಮೊದಲನೆಯ ಮಹಾಸಭೆಯು ಮುಗಿದ ಮೇಲೆ ಕೆ.ಹೆಚ್.ರಾಮಯ್ಯನವರೂ, ಬಿ.ಪುಟ್ಟಯ್ಯನವರೂ ಸಂಘದ ಏಳಿಗೆಯ ವಿಚಾರವನ್ನು ಪ್ರಸ್ತಾಪಿಸುತ್ತ ಸಂಘವನ್ನು ಉತ್ತರೋತ್ತರ ಯಾವ ರೀತಿಯಲ್ಲಿ ಅಭಿವೃದ್ಧಿ ಪಡಿಸಬೇಕೆಂದು ಯೋಚಿಸುತ್ತ ಅತ್ಯಂತ ಉತ್ತೇಜಕ ಸಂಭಾಷಣೆಗಳನ್ನು ನಡೆಸುತ್ತಿದ್ದರು. ಒಂದು ದಿನ ರಾಮಯ್ಯನವರು ಪುಟ್ಟಯ್ಯನವರನ್ನು ಕುರಿತು ''ನಾನು ಉತ್ಸವ ವಿಗ್ರಹವಾಗುವುದಕ್ಕೂ ನೀನು ಮೂಲ ವಿಗ್ರಹವಾಗಿರುವುದಕ್ಕೂ ನಮ್ಮ ನಮ್ಮ ಸ್ವಭಾವಗಳು ಒಪ್ಪುತ್ತವೆ. ಒಂದಿಲ್ಲದಿದ್ದರೆ ಮತ್ತೊಂದು ಶೋಭಿಸುವುದಿಲ್ಲ. ಸಂಘದಲ್ಲಿ ಉದ್ಧಾರವಾಗಬೇಕಾದರೆ ಎರಡೂ ಇರಬೇಕು. ನಾವು ಹೇಗಿದ್ದರೂ ಒಕ್ಕಲಿಗರ ಪತ್ರಿಕೆಯನ್ನು ಹೊರಡಿಸಬೇಕೆಂದು ಇದ್ದೇವೆ. ನೀನು ಅದನ್ನೂ ಸಂಘದ ಬರವಣಿಗೆ ಎಲ್ಲವನ್ನೂ ವಹಿಸಿಕೊಂಡುಬಿಡು. ಸರ್ಕಾರಿ ನೌಕರಿಯಲ್ಲಿ ನಿನ್ನ ಯೋಗ್ಯತೆಯು ತಕ್ಕ ಹಾಗೆ ಹೊರಬೀಳುವುದಿಲ್ಲ. ಸಂಘದಲ್ಲಿಯಾದರೂ ಇದ್ದರೆ ಮಹಾಜನರ ಸೇವೆ ಮಾಡುವುದೊಂದು ಸಂತೋಷವಾದರೂ ಉಂಟಾಗಿ ಇತಿಹಾಸದಲ್ಲಿ ಪ್ರಯೋಜನ ಆಗಬಹುದು. ಆದುದರಿಂದ ತಾತ್ಕಾಲಿಕವಾದ ಸ್ವಪ್ರಯೋಜನವನ್ನು ಮರೆತು, ಶಾಶ್ವತವಾದ ಪರೋಪಕಾರದಲ್ಲಿ ನಿರತನಾದರೆ ಒಳ್ಳೆಯದು'' ಎಂದು ಬೋಧನೆ ಮಾಡಿದರು. ಪ್ರತಿ ರಾತ್ರಿ ಈರ್ವರೂ ದೇವರನ್ನು ಕುರಿತು ''ಈ ಸಮಯದಲ್ಲಿ ನಮಗೆ ಸರಿಯಾದ ಮಾರ್ಗವನ್ನು ತೋರಿಸಿ ಕಾಪಾಡು, ಒಕ್ಕಲಿಗರ ಸಂಘದ ಅಭಿವೃದ್ಧಿಗೋಸ್ಕರ ಸ್ವಾರ್ಥವನ್ನು ತೊರೆದು ಕೆಲಸ ಮಾಡಿದರೆ ದೇವರು ಕೈಬಿಡುವುದಿಲ್ಲ. ಒಕ್ಕಲಿಗರ ಏಳಿಗೆಗೋಸ್ಕರ ತಕ್ಕ ಯೋಗ್ಯತೆಯುಳ್ಳ ನಾವುಗಳು ಈ ಕೆಲಸ ಮಾಡಬೇಕಾದುದು ಧರ್ಮವಾಗಿದೆ ಮತ್ತು ಅತ್ಯವಶ್ಯಕವಾಗಿದೆ'' ಎಂದು ಪ್ರಾರ್ಥಿಸುತ್ತಿದ್ದರು.

ಕೆಲವು ದಿವಸಗಳ ನಂತರ ಮನಸ್ಸಿಗೆ ಏನೋ ಪ್ರಸನ್ನವಾದಂತೆ ತೋರಿ ಬಿ.ಪುಟ್ಟಯ್ಯನವರು ಸರ್ಕಾರಿ ಕೆಲಸವನ್ನು ಬಿಟ್ಟು ಜೀವಮಾನವನ್ನು ಒಕ್ಕಲಿಗರ ಸಂಘಕ್ಕೆ ಮುಡಿಪುಕೊಡುವುದಾಗಿ ರಾಮಯ್ಯನವರಿಗೆ ತಿಳಿಸಿದರು. ಆ ಕೂಡಲೇ ರಾಮಯ್ಯನವರು, ದಿವಾನ್ ವಿ.ಪಿ.ಮಾಧವರಾಯರ ಬಳಿಗೆ ಹೋಗಿ ಈ ಸಂಕಲ್ಪವನ್ನು ಅವರಿಗೆ ತಿಳಿಸಿ ಪುಟ್ಟಯ್ಯನವರನ್ನು ಸದ್ಯಕ್ಕೆ ಬೆಂಗಳೂರಿಗೆ ವರ್ಗಾಯಿಸಿಕೊಡಿ ಎಂದು ಕೇಳಿಕೊಳ್ಳಲು ಅವರು ತಕ್ಷಣವೇ ಅಪ್ಪಣೆ ಕೊಡಿಸಿಕೊಟ್ಟರು. ಆ ಅಪ್ಪಣೆಯಂತೆ ೧೯೦೭ನೆಯ ಜನವರಿಯಲ್ಲಿ ಪುಟ್ಟಯ್ಯನವರು ಬೆಂಗಳೂರಿಗೆ ಬಂದು ಮೂರು ತಿಂಗಳ ಕಾಲ ಸರ್ಕಾರಿ ನೌಕರಿಯಲ್ಲಿದ್ದುಕೊಂಡು ಒಕ್ಕಲಿಗರ ಪತ್ರಿಕೆಯನ್ನು ಹೊರಡಿಸುವುದಕ್ಕೆ ಮಾಡಬೇಕಾದ ಏರ್ಪಾಡುಗಳನ್ನು ಮಾಡಿ ಎಲ್ಲವೂ ಸಂಪೂರ್ಣವಾದ ಕೂಡಲೇ ಸರ್ಕಾರಿ ನೌಕರಿಯಿಂದ ಎರಡು ವರ್ಷಗಳ ಸಂಬಳವಿಲ್ಲದ ರಜೆಯನ್ನು ಪಡೆದು ತಾವೇ ಪತ್ರಿಕೆ ನಡೆಸಲು ಉದ್ಯುಕ್ತರಾದರು. ಪತ್ರಿಯನ್ನು ಕೋಟೆಯಲ್ಲಿದ್ದ 'ಸ್ಟಾಂಡರ್ಡ್' ಮತ್ತು 'ನಡೆಗನ್ನಡಿ' ಎಂಬ ಪತ್ರಿಕೆಗಳನ್ನು ಹೊರಡಿಸುತ್ತಿದ್ದ ಎಂ.ಶ್ರೀನಿವಾಸಯ್ಯಂಗಾರ್ ಮುದ್ರಣಾಲಯದಲ್ಲಿ ಅಚ್ಚು ಹಾಕಿಸಲು ಏರ್ಪಾಡು ಮಾಡಿ ೧೯೦೭ನೆಯ ಮಾರ್ಚ್

೧೫ನೆಯ ತಾರೀಖು ಯುಗಾದಿ ಹಬ್ಬದ ದಿವಸ ಮೊದಲನೆಯ ಸಂಚಿಕೆಯನ್ನು ಹೊರಡಿಸಿದರು. ಆ ತಾರೀಖಿನಿಂದ ಒಕ್ಕಲಿಗರ ಮುದ್ರಣಾಲಯವನ್ನು ಸ್ಥಾಪಿಸುವ ವರೆವಿಗೂ, ೧೯೦೮ನೆಯ ಇಸ್ವಿ ಡಿಸೆಂಬರ್ ತಿಂಗಳವರೆವಿಗೂ ಸುಮಾರು ಒಂದೂವರೆ ವರ್ಷಕಾಲ ಪುಟ್ಟಯ್ಯನವರೇ ಪತ್ರಿಕೆಯನ್ನೆಲ್ಲಾ ತಾವೇ ಬರೆಯುವುದು. ಅಚ್ಚು ಹಾಕಿಸುವುದು. ಅದರ ಸಂಬಂಧದ ಕಾಗದ ಪತ್ರಗಳನ್ನೆಲ್ಲಾ ನೋಡಿಕೊಳ್ಳುವುದು ಮುಂತಾದ ಸಕಲ ಕಾರ್ಯಗಳನ್ನೂ ಮಾಡುತ್ತಿದ್ದರು."

ಈರೀತಿ ಪುಟ್ಟಯ್ಯನವರು ಪತ್ರಿಕೆಗೆ ಸಂಬಂಧಪಟ್ಟ ಸುಧಾರಣೆಗಳನ್ನೆಲ್ಲಾ ನೋಡಿಕೊಳ್ಳುತ್ತಿರುವಲ್ಲಿ ಪತ್ರಿಕೆಯ ಅಗ್ರಲೇಖನಗಳನ್ನು ಮಾತ್ರ ಸಿ.ಲಕ್ಷ್ಮಣಗೌಡ ಬಿ.ಎ., ಬಿ.ಎಲ್,. ಅವರು ಬರೆದುಕೊಡುತ್ತಿದ್ದರು.

**೬. ಎರಡನೆಯ ಮಹಾಸಭೆ**

೧೯೦೭ನೆಯ ಇಸವಿ ಅಕ್ಟೋಬರ್ ೧೭ರಂದು ಎರಡನೆಯ ಮಹಾ ಸಭೆಯು ಶ್ರೀಮಾನ್ ಬಿ.ನಾಗಪ್ಪನವರ ಅಧ್ಯಕ್ಷತೆಯಲ್ಲಿ ಮೈಸೂರು ನಗರದಲ್ಲಿ ನೆರವೇರಿಸಲ್ಪಟ್ಟಿತು. ನಮ್ಮ ಮೊದಲನೆಯ ಮಹಾಸಭೆಯು ಅತ್ಯಂತ ವಿಜೃಂಭಣೆಯಿಂದ ನಡೆದುದನ್ನೂ ಒಕ್ಕಲಿಗರ ಪತ್ರಿಕೆ ಪ್ರಚಾರವಾಗುತ್ತಿರುವುದನ್ನೂ, ಒಕ್ಕಲಿಗರೆಲ್ಲರೂ ಎಚ್ಚೆತ್ತುಕೊಂಡು ಉತ್ಸಾಹಶೀಲರಾಗಿರುವುದನ್ನೂ ಶ್ರೀಮನ್ ಮಹಾರಾಜ ನಾಲ್ವಡಿ ಕೃಷ್ಣರಾಜೇಂದ್ರ ಒಡೆಯರ್ ಬಹದ್ದೂರ್ ಮಹಾಸ್ವಾಮಿಯವರು ನಾಗಪ್ಪನವರ ಮೂಲಕವೂ ಮತ್ತು ಬೇರೆಯವರ ಕಡೆಯಿಂದಲೂ ಕೇಳಿ ತಿಳಿದು ಅತ್ಯಂತ ಸಂತೋಷಪಟ್ಟು, ಎರಡನೆಯ ಮಹಾಸಭೆಗೆ ದಯಮಾಡಿಸಿ ಪ್ರಾರಂಭೋತ್ಸವವನ್ನು ನೆರವೇರಿಸುವುದಾಗಿ ಅಪ್ಪಣೆ ದಯಪಾಲಿಸಿದರು. ಮಹಾಸ್ವಾಮಿಯವರು ಮಹಾಸಭೆಗೆ ದಯಮಾಡಿಸಿ ಅತ್ಯಂತ ಕೃಪಾಪೂರಿತವೂ ಹಿತಕಾರಿಯೂ ಪ್ರೋತ್ಸಾಹಕರವೂ ಆದ ಭಾಷಣವನ್ನು ಮಾಡಿದರು. ಅವರ ಭಾಷಣವು ಈ ರೀತಿ ಇತ್ತು.

ಸಭಾಸದರೇ,

ಈ ದಿವಸ ನಾವು ಇಲ್ಲಿ ಸಭೆ ಸೇರಲು ಕಾರಣವು ಸಾಧಾರಣವಾದುದಲ್ಲ. ವ್ಯವಸಾಯದಿಂದ ಜೀವಿಸತಕ್ಕವರಲ್ಲಿ ಬಹುಭಾಗವಾಗಿರುವ ಒಕ್ಕಲಿಗರ ಸಮಾರಂಭವು ಬಹಳ ಗೌರವಾರ್ಹವಾಗಿದೆಯೆಂದು ಮೈಸೂರಿನಲ್ಲಿ ಸ್ವಲ್ಪ ಕಾಲ ವಾಸಮಾಡಿದವರಿಗೂ ಕೂಡ ತಿಳಿಯದೇ ಇರಲಾರದು. ಇವರು ವಿದ್ಯಾವ್ಯಾಸಂಗದಲ್ಲಿ ಹಿಂದಾಗಿರುತ್ತಾರಲ್ಲದೆ, ಸಾಕ್ಷಾತ್ತಾಗಿ ತಮ್ಮ ಜೀವನೋಪಾಯವನ್ನು ಸಂಪಾದಿಸಿಕೊಳ್ಳುವುದರಲ್ಲಿಯೇ ತೃಪ್ತರಾಗಿರುತ್ತಾರೆ. ಇದರ ಹೊರತು ಇತರೆ ಪ್ರಾಪಂಚಿಕ ವಿಷಯಗಳಲ್ಲಿ ವಿಶೇಷ ಗಮನಕೊಡುತ್ತಿಲ್ಲ. ತಮ್ಮ ಅಪೇಕ್ಷೆಗಳನ್ನೂ ಮತ್ತು ಆಕ್ಷೇಪಗಳನ್ನೂ ಇತರರ ಮುಖಾಂತರ ತಿಳಿಯಪಡಿಸುತ್ತಿದ್ದಾರೆಯೇ ಹೊರತು, ತಾವುಗಳೆಲ್ಲರೂ ಸಂಘಟಿತರಾಗಿ ತಮ್ಮ ಇಷ್ಟಾನಿಷ್ಟಗಳನ್ನು ಐಕಮತ್ಯದಿಂದ ಇದುವರೆಗೂ ವಿಶದಪಡಿಸಿಕೊಳ್ಳುತ್ತಿರಲಿಲ್ಲ. ಒಕ್ಕಲಿಗರು ಉನ್ನತ ಸ್ಥಿತಿಗೆ ಬಂದು ವೃದ್ಧಿ ಹೊಂದಬೇಕಾದರೆ ಕ್ರಮವಾಗಿ ವ್ಯವಸ್ಥಿತವಾದ ಪ್ರಯತ್ನವು ನಡೆಯಬೇಕಾದುದು ಅವಶ್ಯಕವೆಂದು, ಈ ಸಮಾಜದಲ್ಲಿ ವೃದ್ಧಿ ಹೊಂದಿದ ಕೆಲವರು ಒಂದೆರಡು ವರ್ಷಗಳ ಕೆಳಗೆ ನಿಶ್ಚಯಿಸಿರುತ್ತಾರೆ.

ಒಕ್ಕಲಿಗ ಜನಾಂಗದ ಅಭಿವೃದ್ಧಿಗೆ ಸಹಕಾರಿಗಳಾದ ಇತರ ಜನಾಂಗದವರಲ್ಲಿ ಪ್ರಮುಖರಾದ ನಮ್ಮ ದಿವಾನರು ಶ್ರೀ ಮಾಧವರಾಯರು ಮಾಡಿದ ಸಹಾಯದಿಂದಲೂ, ಅವರು ತೋರಿಸಿದ ಮಾರ್ಗದಿಂದಲೂ ಸಂಘವೆಂಬುದು ಈಗ ಉತ್ಪನ್ನವಾಗಿದೆ. ಈ ಸಂಘದವರ ಉದ್ದೇಶಗಳು ಸರ್ವವಿಧವಾದ ಪ್ರೋತ್ಸಾಹಕ್ಕೆ ಅರ್ಹವಾದವುಗಳಾಗಿವೆ.

ಈ ನಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸುವುದಕ್ಕಾಗಿಯೇ ಈ ದಿವಸ ಈ ಸುಸಂಘಟಿತ ಒಕ್ಕಲಿಗ ಸಮಾಜದ ನಿರ್ಮಾಣವನ್ನು ಪ್ರಕಟಪಡಿಸಲು ನಾವು ಅವರ ಪ್ರಾರ್ಥನೆಯನ್ನು ಅಂಗೀಕರಿಸಿದುದಲ್ಲದೆ ಈ ಸಂಘಕ್ಕೆ ಪೋಷಕರಾಗಿರುವುದಕ್ಕೂ ಸಂತೋಷದಿಂದ ಸಮ್ಮತಿಸಿದ್ದೇವೆ.

ವಿದ್ಯಾಭ್ಯಾಸವನ್ನು ತಮ್ಮ ಜನರಲ್ಲಿ ವೃದ್ಧಿಪಡಿಸುವುದಕ್ಕೂ, ಮೈಸೂರು ದೇಶದಲ್ಲಿ ವ್ಯವಸಾಯ ಕಾರ್ಯವನ್ನು ಉತ್ತಮ ಸ್ಥಿತಿಗೆ ತರುವುದಕ್ಕೂ ಈ ಸಂಘದ ಪ್ರಯತ್ನಗಳು ಉಪಯೋಗಿಸಲ್ಪಡುತ್ತವೆಂದೂ, ಈ ಉದ್ದೇಶಗಳಿಗಾಗಿಯೇ ನೀವುಗಳು ನಮ್ಮ ಸರ್ಕಾರದ ಸಹಾಯವನ್ನು ಅಪೇಕ್ಷಿಸುವಿರೆಂದೂ ನಾವು ತಿಳಿಯುತ್ತೇವೆ. ಈ ಉಭಯ ಉದ್ದೇಶಗಳಲ್ಲಿಯೂ ಸಂಘದವರೆಗೆ ಸಹಕಾರಿಗಳಾಗಿ ಸಹಾಯ ಮಾಡುವುದಕ್ಕೆ ನಾವು ಬಹಳ ಉಲ್ಲಾಸಗೊಂಡಿದ್ದೇವೆಂದು ನಿಮಗೆ ದೃಢವಾಗಿ ಹೇಳುತ್ತೇವೆ. ಸರ್ಕಾರದವರು ಸ್ಕೂಲುಗಳನ್ನು ಏರ್ಪಡಿಸಿದ್ದಾರೆ. ಮತ್ತು ಕೆಳಗಿನ ತರಗತಿಗಳಲ್ಲಿ ಓದತಕ್ಕವರಿಗೆ ಫೀ ಇಲ್ಲದೆ ವಿದ್ಯೆ ಕಲಿಸುತ್ತಾರೆ. ಅಲ್ಲದೆ ದ್ರವ್ಯಾನುಕೂಲ ಒದಗಿದ ಹಾಗೆ ಈ ಸೌಕರ್ಯವನ್ನು ಹೆಚ್ಚಿಸಬೇಕೆಂಬ ಉದ್ದೇಶವೂ ಇದೆ. ಸರ್ಕಾರದವರು ಭೂ ವ್ಯವಸಾಯಕ್ಕೆ ಸಂಬಂಧಪಟ್ಟ ವಿಷಯಗಳಲ್ಲಿ ಕೃಷಿ ಶಾಸ್ತ್ರಾನುಸಾರವಾಗಿ ಕೆಲವು ಪರಿಶೀಲನೆ ನಡೆಸಿದ್ದಾರೆ. ಈ ಸಂಘದವರು ಮಾಡಬೇಕಾದ ಕೆಲವು ನಮ್ಮ ಹುಡುಗರನ್ನು ಸ್ಕೂಲಿಗೆ ಕಳುಹಿಸುವುದು. ಜನಗಳಿಗೆ ಕೃಷಿ ಶಾಸ್ತ್ರಭಿಜ್ಞರಾದ ಅಧಿಕಾರಿಗಳು ಶ್ರಮಪಟ್ಟು ಕಂಡು ಹಿಡಿಯುವ ನವೀನ ರೀತಿಗಳನ್ನು ತಿಳಿದುಕೊಂಡು ಅದರಂತೆ ನಡೆಯುವ, ನಮ್ಮ ಅಧಿಕಾರಿಗಳು ಮಾಡುವ ಕೃಷಿಶಾಸ್ತ್ರ ಪರಿಶೀಲನೆಯಲ್ಲಿ ತಾವೂ ಸಹಕಾರಿಗಳಾಗಿರುವುದು. ನಿಮ್ಮ ಶ್ರಮವನ್ನು ವಿನಿಯೋಗಿಸುವುದಕ್ಕೆ ಅವಕಾಶಗಳು ನಿಮ್ಮ ಹತ್ತಿರದಲ್ಲಿಯೇ ಇರುತ್ತವೆ. ನಿಮ್ಮ ಜನಾಂಗ ಬರೀ ಮಾತಿನವರಲ್ಲವೆಂದೂ ಕಾರ್ಯಾನುವರ್ತಿಗಳೆಂದೂ ಈವರೆವಿಗೂ ಖ್ಯಾತಿಗಳಿಸಿದ್ದಾರೆ. ಈ ಪುರಾತನ ಖ್ಯಾತಿಯನ್ನು ಕಾಪಾಡಿಕೊಂಡು, ಶ್ರಮಪಟ್ಟು ಕೆಲಸ ಮಾಡುತ್ತಾ ಬರೀ ಮಾತನಾಡುವ ಯಂತ್ರದಂತಾಗಲೀ, ಕೇವಲ ಸ್ವಕಾರ್ಯ ಪ್ರಕಟಣೆಯಲ್ಲಾಗಲಿ ಈ ಸಂಘದವರು ಆಸಕ್ತರಾಗಿರಲಾರರೆಂದು ನಂಬುತ್ತೇವೆ. ಸಂಘದವರು ತಮ್ಮ ತಮ್ಮ ಜನಾಂಗದವರ ಪ್ರಯೋಜನಕ್ಕಾಗಿ ಯಾವ ವಿಷಯಗಳಲ್ಲಿ ನಮಗೆ ವಿಜ್ಞಾಪನೆ ಮಾಡಿಕೊಂಡರೂ ಅಂಥವುಗಳನ್ನು ನಾವು ಮನ್ನಿಸುತ್ತೇವೆ. ಸರ್ಕಾರದವರು ಈ ವಿಷಯದಲ್ಲಿ ಯುಕ್ತವಾದ ಮತ್ತು ಶಕ್ಯವಾದ ಎಲ್ಲ ಸಹಾಯವನ್ನು ಮಾಡುವರೆಂದು ದೃಢವಾಗಿ ಹೇಳುತ್ತೇವೆ.

ರಾಜ್ಯದ ಸಮೃದ್ಧಿ ಸ್ಥಿತಿಗೆ ಭೂವ್ಯವಸಾಯ ಮಾಡತಕ್ಕ ಜನಗಳೇ ಮೂಲಾಧಾರ. ದೈವಿಕವಾಗಿ ಬರುವ ಕಷ್ಟ ಕಾಲಗಳಲ್ಲಿಯೂ ಅವರುಗಳೇ ಮುಖ್ಯವಾಗಿ ಶ್ರಮಪಡತಕ್ಕವರು. ಅವರ ಕ್ಷೇಮಾಭ್ಯುದಯಕ್ಕೋಸ್ಕರವಾಗಿ ನಡೆಯತಕ್ಕ ಪ್ರಯತ್ನಗಳೆಲ್ಲವೂ ನಮ್ಮ ಅತ್ಯಂತ ಉತ್ಸಾಹಪೂರ್ವಕವಾದ ಪೋಷಣೆಗೆ ಪಾತ್ರಗಳಾಗಿರುವುವು. ಇಂಥ ಪ್ರಯತ್ನಗಳನ್ನು ನಡೆಸಬೆಕೆಂಬುದೇ ಈಸಂಘದ ಆಶಯವೆಂದು ನಾವು ನಂಬಿ ಈ ಸಂಘದವರಿಗೆ ಉತ್ತರೋತ್ತರದಲ್ಲಿ ಶ್ರೇಯೋಭೀವೃದ್ಧಿ ಉಂಟಾಗಲೆಂದು ಕೋರುತ್ತೇವೆ.

ಈ ಪ್ರಕಾರ ಅಪ್ಪಣೆ ಕೊಡಿಸಿ ಒಕ್ಕಲಿಗರ ಕಸುಬಿನಲ್ಲಿಯೂ ಮತ್ತು ಅವರ ಏಳಿಗೆಯಲ್ಲಿಯೂ ತಮಗಿರುವ ಗೌರವವನ್ನೂ ಮತ್ತು ಆಸಕ್ತಿಯನ್ನೂ ವ್ಯಕ್ತಪಡಿಸಿದುದಲ್ಲದೆ ಸಂಘಕ್ಕೆ ಘನಪೋಷಕರಾಗಿರುವುದಕ್ಕೂ ಒಪ್ಪಿ ಅನುಜ್ಞೆಯನ್ನಿತ್ತರು. ಈ ಮಹಾಸಭೆಯಲ್ಲಿ ಮಹಾಸ್ವಾಮಿಯವರು ಕುಳಿತುಕೊಳ್ಳುವುದಕ್ಕೋಸ್ಕರ ದಿವ್ಯವಾದ

ಕುರ್ಚಿಯನ್ನು ಕಂಟ್ರಾಕ್ಟರ್ ಶ್ರೀ ಹುಚ್ಚಪ್ಪನವರು ತಮ್ಮ ಸ್ವಂತ ಖರ್ಚಿನಿಂದ ಮಾಡಿಸಿ ಮಹಾಸ್ವಾಮಿಯವರಿಗೆ ಅರ್ಪಿಸಿದರು.

**೩ ಮೂರನೆಯ ಮಹಾಸಭೆ**

ಒಕ್ಕಲಿಗ ಮಹಾಜನರ ಮೂರನೆಯ ಮಹಾಸಭೆಯು ೧೯೦೮ನೆ ಏಪ್ರಿಲ್ ೨೮ರಂದು ಬೆಂಗಳೂರಿನಲ್ಲಿ ಸೇರಿತು. ದಿವಾನ್.ವಿ.ಪಿ.ಮಾಧವರಾಯರೇ ಪುನಃ ಅಗ್ರ ಸ್ಥಾನವನ್ನು ವಹಿಸಿ ಆರಂಭೋತ್ಸವವನ್ನು ನೆರವೇರಿಸಿದರು. ಆಗ ನೀಲಗಿರಿಯಲ್ಲಿ ಭಾರಿ ತೋಟಗಾರರೂ ಮತ್ತು ಸಾಹುಕಾರರೂ ಆಗಿ ಹೆಸರುವಾಸಿಯನ್ನು ಹೊಂದಿದ್ದ ಸಿ.ರಂಗೇಗೌಡ ಅಗ್ರಸ್ಥಾನವನ್ನು ವಹಿಸಿ ಸ್ವಾರಸ್ಯವಾದ ಭಾಷಣವನ್ನು ಮಾಡಿದುದಲ್ಲದೆ, ಸಂಘಕ್ಕೆ ಹತ್ತು ಸಾವಿರ ರೂಪಾಯಿಗಳನ್ನು ಕೊಡುವುದಾಗಿ ವಾಗ್ದಾನ ಮಾಡಿದರು. ನಮ್ಮ ಸಂಘದ ಮುದ್ರಣಾಲಯಕ್ಕೆ ಅತ್ಯವಶ್ಯಕವಾಗಿ ಬೇಕಾಗಿದ್ದ ಸುಮಾರು ಮೂರು ಸಾವಿರ ರೂಪಾಯಿ ಬೆಲೆ ಬಾಳುವಷ್ಟು ಅಚ್ಚಿನ ಮೊಳೆಗಳನ್ನು ಕೊಡಿಸಿಕೊಟ್ಟರು."

೧೯೦೮ನೆಯ ಇಸವಿಯಲ್ಲಿ ಟಿ.ಬೈಯಣ್ಣನವರು ಅರಳೇಪೇಟೆಯಲ್ಲಿ ತಮ್ಮ ವಿಶಾಲವಾದ ಮನೆಗಳೆರಡನ್ನೂ ಒಕ್ಕಲಿಗರ ಸಂಘದ ಆಫೀಸು ಮತ್ತು ಮುದ್ರಣಾಲಯನ್ನು ಇಡುವುದಕ್ಕೋಸ್ಕರ ಬಿಟ್ಟುಕೊಟ್ಟರು. ಇವರು ಮೊದಲನೆಯ ಮಹಾಸಭೆಯಲ್ಲಿ ಕೊಟ್ಟ ಹತ್ತು ಸಾವಿರ ರೂಪಾಯಿಗಳಿಂದ ಮುದ್ರಣ ಯಂತ್ರ ಸಾಮಾಗ್ರಿಗಳನ್ನು ಕೊಂಡುದಾಯಿತು. ಈ ಪ್ರಕಾರ ಧಾರಾಳವಾಗಿ ದ್ರವ್ಯ ಸಹಾಯವನ್ನೂ ಮತ್ತು ಸ್ಥಳ ವಸತಿಯನ್ನೂ ಬೈಯ್ಯಣ್ಣನವರು ಮಾಡಿಕೊಡದೆ ಹೋಗಿದ್ದರೆ ಸಂಘದ ಶಾಶ್ವತ ಸ್ಥಾಪನೆ ಬಹಳ ವಿಳಂಬವಾಗುತ್ತಿದ್ದಿತು. ಬೈಯ್ಯಣ್ಣನವರು ವಿದ್ಯಾವಂತರನ್ನು ಕಂಡರೆ ಬಹಳ ಮರ್ಯಾದೆಯಿಂದ ಕಾಣುತ್ತಿದ್ದರು ಅದರಲ್ಲಿಯೂ ನಿಸ್ವಾರ್ಥತೆಯಿಂದ ಕೆಲಸ ಮಾಡುತ್ತಿರುವುದನ್ನು ಕಣ್ಣಾರೆ ನೋಡುತ್ತಿದ್ದುದರಿಂದ ಅವರ ಮನಸ್ಸಿನಲ್ಲಿ ನಮ್ಮ ಸಂಘಕ್ಕೆ ಚ್ಯುತಿ ಬರುವುದಿಲ್ಲವೆಂಬುವ ದೃಢ ನಂಬಿಕೆ ಹುಟ್ಟಿದುದಲ್ಲದೆ, ತಾವು ಕಷ್ಟಪಟ್ಟು ಸಂಪಾದಿಸಿದ ಹಣವು ಸದ್ವಿನಿಯೋಗವಾಗುವುದೆಂಬ ಭರವಸೆಯೂ ಹುಟ್ಟಿತು. ಮುದ್ರಣಾಲಯಕ್ಕೆ ಹಣವನ್ನು ವಿನಿಯೋಗಿಸಬೇಕಾಗುತ್ತದೆಂದು ತಿಳಿದೊಡನೆಯೇ ತಾವೇ ಬಹಳ ಶ್ರದ್ಧೆಯನ್ನುವಹಿಸಿ ಸರ್ಕಾರಿ ಪ್ರೆಸ್ ಸೂಪರಿಟೆಂಡೆಂಟರಾಗಿದ್ದ ಮಿ.ಏಟ್ಸ್‌ರವರ ಮನೆಗೆ ಹೋಗಿ ಅವರಿಂದ ಅನೇಕ ಸಲಹೆಗಳನ್ನು ಪಡೆದು ಯಂತ್ರ ಸಾಮಗ್ರಿಗಳನ್ನು ತರಿಸಲು ಅನುಮತಿಯನ್ನು ಕೊಟ್ಟು, ತಮ್ಮ ಹಣವು ಸದ್ವಿನಿಯೋಗವಾಗುವಂತೆ ಎಲ್ಲಾ ಎಚ್ಚರಿಕೆಯನ್ನೂ ತೆಗೆದುಕೊಂಡರು. ಈರೀತಿ ಮಹನೀಯರ ಉದಾರಾಶ್ರಯಕ್ಕೆ ಮುದ್ರಣಾಲಯದ ಸ್ಥಾಪನೆಯ ಮಹೋತ್ಸವವು ೧೯೦೮ನೆಯ ಡಿಸೆಂಬರ್ ತಿಂಗಳಲ್ಲಿ ಅತ್ಯಂತ ವಿಜೃಂಭಣೆಯಿಂದ ನೇಮಿಸಲ್ಪಟ್ಟಿತು. ದಿವಾನ್ ವಿ.ಪಿ.ಮಾಧವರಾಯರು ಅಧ್ಯಕ್ಷಸ್ಥಾನವನ್ನು ವಹಿಸಿ ಉತ್ಸವವನ್ನು ನೆರವೇರಿಸಿದರು.

ಟಿ.ಬೈಯ್ಯಣ್ಣನವರು ೧೯೦೯ರಲ್ಲಿ ದೈವಾಧೀನರಾದ ಮೇಲೆ ಇವರ ಸ್ಥಾನದಲ್ಲಿ ಬಿ.ಎಸ್.ಮಾರಪ್ಪನವರು ಸಂಘದ ಪ್ರೆಸಿಡೆಂಟ್‌ರಾಗಿ ಚುನಾಯಿಸಲ್ಪಟ್ಟರು. ಜನರಲ್ ಕೌನ್ಸಿಲ್‌ನಲ್ಲಿ ಖಾಲಿಬಿದ್ದ ಸ್ಥಾನಕ್ಕೆ ನೀಲಗಿರಿಯ ಸಾಹುಕಾರ್ ಸಿ.ರಂಗಯ್ಯಗೌಡರವರು ನೇಮಿಸಲ್ಪಟ್ಟರು. ಬಿ.ಎಸ್.ಮಾರಪ್ಪನವರೂ ಇವರ ತಮ್ಮಂದಿರೂ ಸಂಘದ ಉಪಾಧ್ಯಕ್ಷರುಗಳಲ್ಲೊಬ್ಬರಾದರು. ಬಿ.ಎಸ್.ಮುನಿಸ್ವಾಮಪ್ಪನವರೂ ಸಹ ಒಕ್ಕಲಿಗರ ಸಂಘದ ಮೇಲೆ ಅಭಿಮಾನವನ್ನು ಏಕರೀತಿಯಾಗಿಟ್ಟುಕೊಂಡು ಕಾರ್ಯಕ್ರಮಗಳನ್ನು ನಡೆಸಿಕೊಂಡು ಬಂದರು ೧೯೦೬ನೆಯ ಇಸವಿ

ನವೆಂಬರ್ ಪ್ರಥಮ ಮಹಾ ಸಭೆಯಲ್ಲಿ ತಾವು ವಾಗ್ದಾನಮಾಡಿದ್ದಂತೆ ಒಕ್ಕಲಿಗರ ಸಂಘದ ನವೆಂಬರ್ ತಿಂಗಳಲ್ಲಿ ಕಟ್ಟಡದ ಆಸ್ತಿಭಾರವು ಶ್ರೀಮಾನ್ ಯುವರಾಜರ ಹಸ್ತದಿಂದ ವಿಜೃಂಭಣೆಯಿಂದ ನೆರವೇರಿಸಲಾಯಿತು. ಆ ಕಾಲದಲ್ಲಿ ಮಹಾಸ್ವಾಮಿಯವರು ಅತ್ಯಂತ ಪ್ರೋತ್ಸಾಹಕರವಾದ ಭಾಷಣವನ್ನು ಮಾಡಿದುದೂ ಅಲ್ಲದೆ, ಸಂಘದ ಉಪಪೋಷಕರಾಗಿರಲೂ ಒಪ್ಪಿಕೊಂಡು ಎರಡು ಸಾವಿರ ರೂಪಾಯಿಗಳನ್ನು ಸಂಘದ ಶಾಶ್ವತ ಮೂಲಧನಕ್ಕೆ ದಾನಮಾಡಿ ಸಂಘವು ನಿರ್ವಿಘ್ನವಾಗಿ ನಡೆದುಕೊಂಡು ಬರುವುದಕ್ಕೆ ತಳಹದಿಯನ್ನು ಹಾಕಿಕೊಟ್ಟರು. ಈ ಪ್ರಕಾರ ಸಂಘವು ನಮ್ಮನ್ನಾಳುವ ರಾಜ ಭ್ರಾತೃಗಳ ಕೃಪಾಕಟಾಕ್ಷದಿಂದ ಉಪಕಾರ ಹೊಂದಿ ಪ್ರವರ್ಧಮಾನಕ್ಕೆ ಬಂದಿದೆ. ಶ್ರೀಗಳಾದ ಮಾರಪ್ಪ ಹಾಗೂ ಮುನಿಸ್ವಾಮಪ್ಪನವರೂ ಸಹ ಸ್ವತಃ ನಿಂತುಕೊಂಡು ಕಟ್ಟಡವನ್ನು ಕಟ್ಟಿಸಲು ಉಪಕ್ರಮಿಸಿದರು. ವಿದ್ಯಾರ್ಥಿನಿಲಯವನ್ನು ಸಂಪೂರ್ಣವಾಗಿ ಕಟ್ಟಿಸಿ ಸಭಾಭವನದ ಮುಂಭಾಗವನ್ನು ಕಲ್ಲು ಕಟ್ಟಡದಲ್ಲಿ ಮುಕ್ಕಾಲು ಪಾಲು ಕಟ್ಟಿದರು. ಕಾಪೌಂಡು ಗೋಡೆಯನ್ನು ಸಹ ಕಲ್ಲಿನಲ್ಲಿ ಅಂದವಾಗಿ ಕಟ್ಟಿಸಿದರು. ಇಷ್ಟಕ್ಕೇ ಅವರು ವಾಗ್ದಾನ ಮಾಡಿದ ಮೂವತ್ತು ಸಾವಿರ ರೂಪಾಯಿಗಳಿಗೆ ಮೇಲ್ಪಟ್ಟು ಹಣವು ವೆಚ್ಚವಾಯಿತು. ಎಂದು ದಾಖಲೆಗಳಿಂದ ತಿಳಿದು ಬರುತ್ತವೆ.

ಆ ವಿದ್ಯಾರ್ಥಿನಿಲಯ

ಒಕ್ಕಲಿಗರ ಸಂಘದ ವಿದ್ಯಾರ್ಥಿನಿಲಯವನ್ನು ಸಂಘ ಸ್ವಂತಃ ಕಟ್ಟಡದಲ್ಲಿ ನಡೆಯಲು ೧೯೨೦ರಿಂದ ಅನುಕೂಲವಾಯಿತು.

ಸಂಘದ ವಿದ್ಯಾರ್ಥಿನಿಲಯವು ಮೊಟ್ಟಮೊದಲು ಟಿ.ಬಯ್ಯಣ್ಣನವರ ಅರಳೇಪೇಟೆಯ ಮನೆಯಲ್ಲಿಯೇ ಏರ್ಪಾಡಾಯಿತು. ಎರಡನೆಯ ವರ್ಷ ವಿದ್ಯಾರ್ಥಿಗಳ ಸಂಖ್ಯೆಯು ಹೆಚ್ಚಿದುದರಿಂದ ಅದನ್ನು ಚಾಮರಾಜಪೇಟೆಯಲ್ಲಿ ಮಂಡಿ ವರ್ತಕರಾದ ಎಸ್.ಕೆ.ನರಸಿಂಹಯ್ಯನವರ ಸ್ವಗೃಹದಲ್ಲಿ ಇಟ್ಟು ನಡೆಯಿಸಲ್ಪಟ್ಟಿತು. ಈ ತರುಣದಲ್ಲಿ ಶ್ರೀ ನರಸಿಂಹಯ್ಯನವರ ಅಳಿಯಂದಿರಾದ ಎಸ್.ಕೆ.ಗೌಡರು ಎರಡು ವರ್ಷಗಳ ಕಾಲ ಮನೆಗೆ ಬಾಡಿಗೆಯನ್ನು ತೆಗೆದುಕೊಳ್ಳದೆ ಖರ್ಚಿಗೆ ತಮ್ಮ ಕೈಯಿಂದ ಹಣವನ್ನು ಕೊಟ್ಟು ಸಹಕಾರ ಮಾಡಿದರು. ಇವರು ಇಷ್ಟು ಸಹಾಯ ಮಾಡಲು ಸನ್ನದ್ಧರಾಗದೆ ಹೋಗಿದ್ದರೆ ವಿದ್ಯಾರ್ಥಿನಿಲಯವನ್ನು ಇಟ್ಟು ನಡೆಸಿಕೊಂಡು ಬರುವುದು ಅಸಾಧ್ಯವಾಗುತ್ತಿತ್ತು. ವಿದ್ಯಾರ್ಥಿನಿಲಯವನ್ನು ಸಂಘದ ಹೊಸ ಕಟ್ಟಡಕ್ಕೆ ಬದಲಾಯಿಸಿದ ಮೇಲೆ ಬೆಂಗಳೂರಿನ ಸಾಹುಕಾರ್ ಬಿ.ಕೆ.ಚಿಕ್ಕವೀರಪ್ಪನವರು ವಿದ್ಯಾರ್ಥಿಗಳು ಓದುವ ಕೊಠಡಿಗಳಿಗೂ ಮತ್ತು ವಿದ್ಯಾರ್ಥಿನಿಲಯದ ಒಳ ಹೊರ ಭಾಗಗಳಲ್ಲಿಯೂ ವಿದ್ಯುಚ್ಛಕ್ತಿಯ ದೀಪಗಳನ್ನು ತಮ್ಮ ಸ್ವಂತ ಖರ್ಚಿನಿಂದ ಇಡಿಸಿ ಉಪಕಾರಮಾಡಿರುವುದನ್ನು ಇಲ್ಲಿ ದಾಖಲಿಸಿದರೆ ತಪ್ಪಾಗಲಾರದು.

ವಿದ್ಯಾರ್ಥಿನಿಲಯವನ್ನು ಸಂಘದ ಹೊಸ ಕಟ್ಟಡಕ್ಕೆ ಬದಲಾಯಿಸಿದ ಮೇಲೆ ಬೆಂಗಳೂರಿನ ಅಕ್ಕಿಪೇಟೆಯ ನೆಶ್ಯದ ಅಂಗಡಿ ಸಾಹುಕಾರರು ಬಿ.ತಿಮ್ಮೇಗೌಡ ಅವರ ತರುವಾಯ ಬಿ.ಪುಟ್ಟಯ್ಯನವರು ನೋಡಿಕೊಳ್ಳುವುದಕ್ಕೆ ಉಪಕ್ರಮಿಸಿದರು. ಇವರ ಕಾಲದಲ್ಲಿ ವಿದ್ಯಾರ್ಥಿನಿಲಯದ ಉಪಯೋಗಕ್ಕೋಸ್ಕರ ಒಂದು ಪುಸ್ತಕ ಭಂಡಾರವೂ ವಾಚನ ಶಾಲೆಯೂ ಸ್ಥಾಪನೆಗೊಂಡವು.

ಆ ತರುವಾಯ ಬಿ.ಎಸ್.ಮಾರಪ್ಪನವರು ಮತ್ತು ಬಿ.ಎಸ್.ಮುನಿಶಾಮಪ್ಪನವರೂ ಮೇಲ್ವಿಚಾರಣೆಯನ್ನು ವಹಿಸಿದರು. ತರುವಾಯ ರಾವ್ ಸಾಹೇಬ್ ಲೋಕಸೇವಾನಿರತ ಹೆಚ್.ಚನ್ನಯ್ಯನವರು ವಹಿಸಿಕೊಂಡು

ವಿದ್ಯಾರ್ಥಿಗಳು ಸನ್ಮಾರ್ಗಾನುವರ್ತಿಗಳಾಗಿರಲು ಸಹಾಯವಾಗುವ ಅನೇಕ ಏರ್ಪಾಡುಗಳನ್ನು ಮಾಡಿದರು. ಇವರ ತರುವಾಯ ಬೆಂಗಳೂರಿನ ಕಂಟ್ರಾಕ್ಟರಾದ ಬಿ.ಹೆಚ್ ಸಂಜೀವಪ್ಪನವರು ಸುಪರಿಟೆಂಡೆಂಟರಾಗಿ ನೇಮಿಸಲ್ಪಟ್ಟು ಸುಮಾರು ಆರು ವರ್ಷಗಳ ಕಾಲ ಈ ಕಾರ್ಯವನ್ನು ದಕ್ಷತೆಯಿಂದ ನಿರ್ವಹಿಸಿದರು. ಇವರ ಕಾಲದಲ್ಲಿ ವಿದ್ಯಾರ್ಥಿಗಳ ಸಂಖೆಯು ವರ್ಷ ವರ್ಷ ಅಪರಿಮಿತವಾಗಿ ಹೆಚ್ಚಿ ನಿಲಯದ ಆಡಳಿತವು ತುಂಬಾ ಜವಾಬ್ದಾರಿಯುಳ್ಳದಾಗುತ್ತಾ ಬಂತು.

**೯. ಸಂಘದ ಸಭಾಭವನ**

ಮಾರಪ್ಪನವರ ನಂತರ ಬ್ಯಾರಿಸ್ಟರ್ ನಾಗಪ್ಪನವರ ಅಧ್ಯಕ್ಷರಾಗಿ ಚುನಾಯಿಸಲ್ಪಟ್ಟುದರಿಂದ ಸಂಘವು ಅವರ ಅಸಾಧಾರಣವಾದ ಚತುರ ಬುದ್ಧಿಶಕ್ತಿಗಳಿಂದ ಪುನರುಜ್ಜಿವನಗೊಳ್ಳುವುದೆಂಬ ಭರವಸೆ ಸ್ಥಿರವಾಯಿತು.

ನಾಗಪ್ಪನವರು ಸಂಘದ ಏಳಿಗೆಯ ವಿಷಯದಲ್ಲಿ ಅತ್ಯಂತ ಶ್ರದ್ಧೆಯನ್ನು ವಹಿಸುತ್ತಿದ್ದುದಲ್ಲದೆ, ಉಪಯುಕ್ತವಾದ ಸಲಹೆಗಳನ್ನು ಸಭೆಗಳಲ್ಲಿ ಕೊಡುವುದರ ಜತೆಗೆ ಐದು ಸಾವಿರ ರೂಪಾಯಿಗಳನ್ನು ಸಂಘಕ್ಕೆ ಸಹಾಯಕವಾಗಿ ಕೊಟ್ಟು ಉಪಕಾರವನ್ನು ಮಾಡಿದರು. ದಿವಾನ್ ಸಾರ್. ಆಲ್ಬಿಯನ್ ಬ್ಯಾನರ್ಜಿಯವರ ಸ್ನೇಹವನ್ನು ಸಂಪಾದಿಸಿ, ಅವರನ್ನು ಸಂಘಕ್ಕೆ ಉಪಪೋಷಕರನ್ನಾಗಿ ಮಾಡಿ, ಅವರ ಸಹಾಯದಿಂದ ಸಂಘದ ಸಭಾಮಂದಿರದ ಕಟ್ಟಡಕ್ಕೆ ಸಹಾಯ ಹಣ ಒದಗುವಂತೆ ಮಾಡಿದರು. ಸಂಘದವರು ಎಷ್ಟು ಹಣವನ್ನು ಚಂದಾ ಮೂಲಕ ಶೇಖರಿಸುವರೋ ಆಷ್ಟು ಹಣಕ್ಕೆ ಸಮನಾದ ಹಣವನ್ನು ಸರ್ಕಾರದವರು ಕೊಡುವಂತೆ ಮಾಡಲಾಯಿತು. ಹುಟ್ಟಸಿದ್ದ ಒಂದು ಅಂದಾಜಿನ ಪ್ರಕಾರ ಸಂಘದ ಕಟ್ಟಡವು ಪೂರೈಸುವುದಕ್ಕೆ ನಲವತ್ತು ಸಾವಿರ ರೂಪಾಯಿಗಳಿಗೆ ಮೇಲ್ಪಟ್ಟು ದ್ರವ್ಯವು ಇನ್ನೂ ಬೇಕಾಗುತ್ತದೆಂದು ಅಂದಾಜುಹಾಕಿ ಕೂಡಲೇ ಇಪ್ಪತ್ತು ಸಾವಿರ ರೂಪಾಯಿಗಳನ್ನು ಚಂದಾಮೂಲಕ ಒದಗಿಸಿಬೇಕೆಂದು ನಿಶ್ಚಯಿಸಿದರು, ರಾತ್ರಿ ಹಗಲು ಶ್ರಮಪಟ್ಟು ಬಿ.ಕೆಂಪಣ್ಣನವರು, ರಾವ್ ಸಾಹೇಬ್ ಲೋಕಸೇವಾನಿರತ ಎಚ್ ಚನ್ನಯ್ಯನವರು, ಕಾಂತರಾಜ್ ಪುರದ ಎಂ.ನಂಜಪ್ಪನವರು ಇವರುಗಳೊಡನೆ ಪ್ರತಿಯೊಬ್ಬ ಒಕ್ಕಲಿಗ ಮಹನೀಯರ ಮನೆಗೂ ಹೋಗಿ ಅವರನ್ನು ಪ್ರೋತ್ಸಾಹಿಸಿ ಒಂದು ತಿಂಗಳೊಳಗೆ ಇಪ್ಪತ್ತು ಸಾವಿರ ರೂಪಾಯಿಗಳನ್ನು ಮೈಸೂರು ಬ್ಯಾಂಕಿನಲ್ಲಿ ಶೇಖರಿಸಿ ಸರ್ ಬ್ಯಾನರ್ಜಿಯವರಿಗೆ ರಸೀತಿಯನ್ನು ತೋರಿಸಿದರು. ಅದರ ಆಧಾರದ ಮೇಲೆ ಸಂಘಕ್ಕೆ ಸರ್ಕಾರದವರು ಇಪ್ಪತ್ತು ಸಾವಿರ ರೂಪಾಯಿಗಳ ಗ್ರಾಂಟನ್ನು ಕೊಟ್ಟರು. ಈ ಹಣದ ಸಹಾಯದಿಂದ ಸಂಘದ ಕಟ್ಟಡವು ಕ್ಷಿಪ್ರದಲ್ಲಿಯೇ ಮುಗಿಯಿತು. ವಿದ್ಯಾರ್ಥಿನಿಲಯ ಅಭಿವೃದ್ಧಿಯಲ್ಲಿಯೂ ಮತ್ತು ಮುದ್ರಣಾಲಯದ ಏಳಿಗೆಯಲ್ಲಿಯೂ. ಇವರು ಅಪಾರವಾಗಿ ಶ್ರಮಿಸಿದರು. ನಾಗಪ್ಪನವರು ಹೀಗೆಯೇ ಅಪಾರವಾದ ಆಸಕ್ತಿಯನ್ನು ತೋರಿಸಿ ವಿದ್ಯಾರ್ಥಿನಿಲಯದ ಪೋಷಣೆಗೂ ಸರ್ಕಾರದಿಂದ ಹದಿನೈದು ಸಾವಿರ ರೂಪಾಯಿಗಳ ಗ್ರಾಂಟ್‌ಬರುವಂತೆ ಮಾಡಿದರು. ಮುದ್ರಣಾಲಯವನ್ನು ಅರಳಿಪೇಟೆಯಲ್ಲಿದ್ದ ಟಿ, ಬಯ್ಯಣ್ಣನವರ ಗೃಹದಿಂದ ಸಂಘದ ವಿದ್ಯಾರ್ಥಿನಿಲಯದ ಪಕ್ಕದಲ್ಲಿ ಕಟ್ಟಿರುವ ಹೊಸ ಕಟ್ಟಡಕ್ಕೆ ಸಾಗಿಸಿ. ಸಂಘದ ಕಾರ್ಯಗಳೆಲ್ಲವೂ ಒಂದೇಕಡೆ ಸಾಂಗವಾಗಿ ನೆರವೇರುವಂತೆ ಏರ್ಪಾಡುಮಾಡಿದರು. ಬಿ. ನಾಗಪ್ಪನವರು ಈರೀತಿ ಒಕ್ಕಲಿಗರ ಸಂಘಕ್ಕೆ ಶಾಶ್ವತವಾದ ಗೃಹವನ್ನು ಕಲ್ಪಿಸಿಕೊಟ್ಟು ನಿರಂತರವಾದ ಕೀರ್ತಿ ಮತ್ತು ಪುಣ್ಯಗಳನ್ನು ಪಡೆದು ಒಕ್ಕಲಿಗ ಮಹಾಜನರೆಲ್ಲರ ಕೃತಜ್ಞತೆಗೆ ಪಾತ್ರರಾದರು. ಪತ್ರಿಕೆ ಮುದ್ರಣಾಲಯದ ಕಾರ್ಯವನ್ನು ಗುತ್ತಿಗೆ ಕರಾರಿನ ಮೂಲಕ ನಡೆಸತಕ್ಕ ಪದ್ಧತಿಯು ಆಚರಣೆಗೆ ಬಂದುದು ಅವರ ಕಾಲದಲ್ಲಿಯೇ. ಆಗ ೧೯೩೨ರಲ್ಲಿ

ಒಕ್ಕಲಿಗರ ಪತ್ರಿಕೆಯ ಸಂಪಾದಕರಾಗಿದ್ದ ಡಿ.ಆರ್. ರಾಮಯ್ಯನವರು ಗುತ್ತಿಗೆ ಕರಾರಿನ ಪದ್ಧತಿಯಂತೆ ಮತ್ತು ಮುದ್ರಣಾಲಯದ ಮೊದಲನೆಯ ಗುತ್ತಿಗೆದಾರರಾಗಿ ಶ್ರದ್ಧೆಯಿಂದ ಕೆಲಸಮಾಡಿ ಒಕ್ಕಲಿಗರ ಪತ್ರಿಕೆಯ ರೂಪ ರೇಷೆಗಳನ್ನು ಬಹುಮಟ್ಟಿಗೆ ಉತ್ತಮಗೊಳಿಸಿದರು.

ಸರ್ಕಾರಿ ಹುದ್ದೆಯಲ್ಲಿರುವ. ಖಾಸಗಿ ಸಂಘಗಳ ಕಾರ್ಯ ನಿರ್ವಾಹಕ ಸಭೆಗಳಲ್ಲಿದ್ದು ಕೊಂಡು ಕೆಲಸ ಮಾಡಬಾರದೆಂದು ಸರ್ಕಾರದವರು ಒಂದು ಆಜ್ಞೆಯನ್ನು ಹೊರಡಿಸಿದರು. ಆದನ್ನನುರಿಸಿ ನಾಗಪ್ಪನವರು ತಮ್ಮ ಅಧ್ಯಕ್ಷೀಯ ಪದವಿಯನ್ನು ಬಿಡಬೇಕಾಯಿತು. ಇವರು ಸಂಘಸ್ಥಾಪಕರಲ್ಲೊಬ್ಬರಾಗಿದ್ದರು.

ಪ್ರಾರಂಭದಿಂದಲೂ ಸಂಘದ ಉಪಾಧ್ಯಕ್ಷರಲ್ಲೊಬ್ಬರಾಗಿ ಸಂಘದ ಏಳಿಗೆಗಾಗಿ ಆಸಕ್ತಿಯಿಂದ ಕೆಲಸಮಾಡುತ್ತಿದ್ದ ಬಿ.ಕಂಪಣನವರು ಅಧ್ಯಕ್ಷರಾದರು. ಸಂಘದ ಬೇರೆ ಬೇರೆ ಭಾಗಗಳ ಕಟ್ಟಡದ ಕೆಲಸ, ವಿದ್ಯಾರ್ಥಿನಿಲಯ ಆಡಳಿತ, ಮುದ್ರಣಾಲಯದ ಆಡಳಿತ, ಪತ್ರಿಕೆಯ ಆಡಳಿತ ಇವು ಪ್ರತಿಯೊಂದರಲ್ಲೂ ಗಮನವಹಿಸಿ ಆಯಾಭಾಗದಲ್ಲಿ ಕೆಲಸಮಾಡುತ್ತಿರುವವರಿಗೆ ಪ್ರತಿನಿತ್ಯವು ಸೂಚನೆಗಳನ್ನು ಕೊಡುತ್ತ ಸ್ವಯಂ ಮೇಲ್ವಿಚಾರಣೆ ನೋಡಿಕೊಂಡು, ಸಂಘದ ಕಾರ್ಯಾಡಳಿತವು ಪ್ರತಿಯೊಂದು ಭಾಗದಲ್ಲೂ ಮುಂದುವರಿಯುವಂತೆ ಕೆಲಸಮಾಡಿದರು.

**೧೦. ಹಾಸನದ ಮಹಾಸಭೆ**

ಹಾಸನದಲ್ಲಿ ಒಕ್ಕಲಿಗರ ಮಹಾಸಭೆಯನ್ನು ಸೇರಿಸಿ ಅಲ್ಲಿ ಒಂದು ವಿದ್ಯಾರ್ಥಿನಿಲವನ್ನು ಕಟ್ಟಲು ತೀರ್ಮಾನಮಾಡಲಾಯಿತು.

ಅರಸಿಕರೆ ಸಾಹುಕಾರ್‌ಚೌಡಯ್ಯನವರ ಮೊಮ್ಮಕ್ಕಳಾದ ಮ ರಾ ಪುಟ್ಟಸ್ವಾಮಯ್ಯನವರು ೨,೫೦೦ ರೂಪಾಯಿಗಳನ್ನು, ಕಾಂತರಾಜಪುರದ ನಂಜಪ್ಪನವರು ಒಂದು ಸಾವಿರ ರೂಪಾಯಿಗಳನ್ನೂ, ಇನ್ನು ಇತರ ದಾನಿಗಳ ಸಹಾಯದಿಂದ ಪಡೆಯಲಾಯಿತು. ಈ ಮಹಾಸಭೆಯಲ್ಲಿ ಹಾಗೂ ಪ್ರಜಾಪ್ರತಿನಿಧಿ ಸಭೆಯಲ್ಲಿಯೂ ಮೆಂಬರಾಗಿಯೂ ಗಣ್ಯರಾಗಿಯೂ ಇದ್ದ ಎಚ್.ಬಿ.ಗುಂಡಪ್ಪಗೌಡರು ಬಿ.ಎ.ಬಿ.ಎಲ್. ಅವರು ಹಾಸನದಲ್ಲಿ ಒಕ್ಕಲಿಗರ ಸಂಘ ಸ್ಥಾಪನೆಗೆ ಸಹಕರಿಸಿದರು.

**ಧನಾಭಾವ**

ಒಕ್ಕಲಿಗರ ಸಂಘಕ್ಕೆ ಧನಾಭಾವವುಂಟಾದುದರಿಂದ, ಅದರಲ್ಲೂ ಮೈಸೂರುರಾಜ್ಯದ ಹಲವು ಪ್ರದೇಶದಲ್ಲಿ ಉಪಸಂಘಗಳು ಸ್ಥಾಪನೆಯಾದ ಮೇಲೆ ಮಾತೃಸಂಘಕ್ಕೆ ಹಣವು ಬರದೇ ಅಲ್ಲಿಯೇ ಶೇಖರಿಸಲ್ಪಡುತ್ತಿತ್ತು. ಇದರಿಂದ ಮಾತೃಸಂಘದ ಆಡಳಿತಕ್ಕಾಗಿ ಬೇಕಾದ ಹಣವನ್ನು ಒದಗಿಸುವುದಕ್ಕಾಗಿ ಒಕ್ಕಲಿಗ ಸಂಘದ ಪ್ರೆಸ್ಸನ್ನು ತಿಂಗಳೊಂದಕ್ಕೆ ೧೨೦ ರೂಪಾಯಿಗಳಂತೆ ಗುತ್ತಿಗೆಗೆ ಕೊಟ್ಟದಾಯಿತು. ಮೈಸೂರು ಸರ್ಕಾರದ ಪ್ರಿನ್ಸಿಪಲ್ ಇನ್‌ಫರ್ ಮೇಷನ್ ಆಫೀಸರ್‌ರಾಗಿದ್ದ ಡಿ. ಆರ್. ರಾಮಯ್ಯನವರು ಮೊದಲನೇ ಗುತ್ತಿಗೆದಾರರಾಗಿದ್ದರು. ಒಕ್ಕಲಿಗರ ಸಂಘದ ಮುಂಭಾಗದ ಮೇಲ್ಮಹಡಿಯನ್ನು ಕೆಲವು ಕಾಲ ಬೆಂಗಳೂರು ಡಿಸ್ಟ್ರಿಕ್ಟ್ ಬೋರ್ಡಿಗೆ ಬಾಡಿಗೆಗೆ ಕೊಡಬೇಕಾಯಿತು. ಆ ತರುವಾಯ ಸರ್ಕಾರದ ಆಹಾರ ಸಾಮಾಗ್ರಿಗಳ ಉಗ್ರಾಣಕ್ಕಾಗಿ ಇದೇ ಕಟ್ಟಡವನ್ನೇ ಬಾಡಿಗೆಯಾಗಿ ಕೊಡಲಾಗಿತ್ತು. ಆ ತರುವಾಯ ಶಾರದಾ ಟಾಕೀಸ್ ಸಿನಿಮಾ ಮಂದಿರಕ್ಕಾಗಿ ಬಾಡಿಗೆಗೆ ಕೊಡ ಬೇಕಾಯಿತು. ಈಗ ಮೈಸೂರು ಸಂಸ್ಥಾನದ ಖಾದಿ ಮತ್ತು ಗ್ರಾಮ ಕೈಗಾರಿಕೆ ಬೋರ್ಡಿನವರಿಗೆ ಬಾಡಿಗೆಗೆ ಕೊಡಲಾಗಿದೆ.

## ಒಕ್ಕಲಿಗ ವಿದ್ಯಾರ್ಥಿನಿಲಯುಗಳ ಸ್ಥಾಪನೆ

ಒಕ್ಕಲಿಗರ ಸಂಘವು ಇದುವರೆಗೂ ನಡೆಯಿಸಿದ ಕಾರ್ಯದ ಫಲ ರೂಪವಾಗಿ ಹಿಂದಿನ ಮೈಸೂರು ಸಂಸ್ಥಾನದ ೯ ಜಿಲ್ಲೆಗಳಲ್ಲಿಯೂ ಮತ್ತು ಇತರ ಊರುಗಳಲ್ಲಿಯೂ ಸ್ಥಳೀಯ ದಾನಿಗಳ ಸಹಾಯದಿಂದ ಒಕ್ಕಲಿಗರ ವಿದ್ಯಾರ್ಥಿನಿಲಯಗಳು ಏರ್ಪಾಡಾದವು. ಮೈಸೂರಿನಲ್ಲಿ ಶ್ರೀ ದಾಸಪ್ಪನವರ ಮೇಲ್ವಿಚಾರಣೆಯಲ್ಲಿ ನಿಲಯವು ಏರ್ಪಾಡಾಯಿತು. ಮದ್ದೂರಿನಲ್ಲಿ ಶ್ರೀ ಎಂ.ಸಿ. ಲಿಂಗೇಗೌಡರು, ಶ್ರೀ ಎಸ್.ಸಿ. ಮಲ್ಲಯ್ಯನವರು ಮುಂತಾದವರ ಪ್ರಯತ್ನದಿಂದ ಒಂದು ನಿಲಯವು ಸ್ಥಾಪಿತವಾಯಿತು. ಕಡಬದ ಶ್ರೀ ಹುಚ್ಚುವೀರೇಗೌಡರವರು ಸಂಘಕ್ಕೆ ಸಾವಿರಾರು ರೂಪಾಯಿಗಳನ್ನು ದಾನಮಾಡಿ ತುಮಕೂರಿನಲ್ಲಿ ಒಂದು ವಿದ್ಯಾರ್ಥಿನಿಲಯವನ್ನು ಸ್ಥಾಪಿಸಿದರು. ಕಾಂತರಾಜಪುರದ ಸಾಹುಕರ್ ಶ್ರೀ ನಂಜಪ್ಪನವರು ಕಾಂತರಾಜಪುರದಲ್ಲಿ ತಮ್ಮ ಸ್ವಂತ ಕರ್ಚಿನಿಂದ ಒಂದು ದೊಡ್ಡ ಸ್ಕೂಲನ್ನು ವಿದ್ಯಾರ್ಥಿನಿಲಯವನ್ನೂ ಕಟ್ಟಿಸಿದರು ಇದೇ ರೀತಿ ಕೃಷ್ಣ ರಾಜಪೇಟೆಯಲ್ಲಿ ಶ್ರೀ ಶೀಳನೆರೆ ಸಾಹುಕಾರ್ ತಿಮ್ಮಯ್ಯ ಗೌಡರೂ, ಅಕ್ಕಿ ಹೆಬ್ಬಾಳು ಪಟೇಲ್ ಶ್ರೀ ಲಿಂಗೇಗೌಡರು, ಮಡಕೋಡಿ ಶ್ರೀ ಕೆ.ಎಸ್. ಶಿದ್ದೇಗೌಡರು ಒಂದು ವಿದ್ಯಾರ್ಥಿ ನಿಲಯವನ್ನು ಸ್ಥಾಪಿಸಿದರು. ಚಿಕ್ಕಬಳ್ಳಾಪುರದಲ್ಲಿ ಶ್ರಿ ನಂದಿ ಒಂದು ವಿದ್ಯಾರ್ಥಿನಿಲಯವನ್ನು ಸ್ಥಾಪಿಸಿದರು. ಅನೇಕ ತಾಲ್ಲೂಕು ಆಡಳಿತ ಕೇಂದ್ರಗಳಲ್ಲಿ ಇಂದು ಒಕ್ಕಲಿಗರ ವಿಧ್ಯಾರ್ಥಿ ನಿಲಯಗಳು ಸರಕಾರ ಹಾಗೂ ಸ್ಥಳೀಯ ದಾನಿಗಳಿಂದ ಸ್ಥಾಪಿತವಾಗಿವೆ.

## ಸರ್ಕಾರದಿಂದ ಸಹಾಯ

ಸರ್ಕಾರದವರು ಒಕ್ಕಲಿಗರ ಸಂಘಕ್ಕಾಗಿ ೧೯೦೬ರಲ್ಲಿ ೧೨ಎಕರೆ, ೧೩ಗುಂಟೆ ವಿಸ್ತೀರ್ಣವುಳ್ಳ ಜಮೀನನ್ನು ಉಚಿತವಾಗಿ ಕೊಟ್ಟರಷ್ಟೇ. ಈ ಪೈಕಿ ೧೯೩೫ರಲ್ಲಿ ಒಂದು ಎಕರೆಗೂ ಸ್ವಲ್ಪ ಹೆಚ್ಚಾದ ಭಾಗವನ್ನು ಪಶ್ಚಿಮ ಲಾಲ್‌ಬಾಗ್ ತೋಟಕ್ಕಾಗಿ ಸ್ವೀಕರಿಸಿ ಅದಕ್ಕೆ ಬದಲಾಗಿ ಉತ್ತರದಲ್ಲಿ ಹೊಸ ಜಮಿನನ್ನು ಸ್ಕೌಟ್ ಕಛೇರಿಯ ಮುಂಭಾಗದಲ್ಲಿ ದಯಪಾಲಿಸಿದ್ದಾರೆ. ಇದಲ್ಲದೆ ಒಕ್ಕಲಿಗರ ಸಂಘದ ಮಹಾಮಂದಿರಕ್ಕೆ ೨೦,೦೦೦ ರೂಪಾಯಿಗಳನ್ನೂ ಹಾಸ್ಟೆಲಿಗಾಗಿ ೧೫,೦೦೦ರೂಪಾಯಿಗಳನ್ನೂ ಕೊಟ್ಟಿದ್ದಾರೆ. ದಿವಾನ್ ಮಾಧವರಾಯರು ಶಂಕುಸ್ಥಾಪನೆ ಮಾಡಿದ ಕಾಲದಲ್ಲಿ ೨೦೦೦ ರೂಪಾಯಿ ಮೂಲಧನವನ್ನು ಕೊಟ್ಟರು. ಈ ಮೊಬಲಗು ವಿದ್ಯಾರ್ಥಿವೇತನದ ಹಣವಾಗಿ ಸರ್ಕಾರದಲ್ಲಿ ಠೇವಣಿಯಾಗಿದೆ.

ಇಂದು ನಮ್ಮ ಜನಾಂಗದಲ್ಲಿ ವಿದ್ಯಾವಂತರಿದ್ದಾರೆಂದರೆ ಅದು ಹಿರಿಯರು ಹಾಕಿದ ಅಸ್ಥಿಭಾರ. ಇಂದು ಸುವರ್ಣ ಮಹೋತ್ಸವವೂ, ದಕ್ಷಿಣ ಭಾರತ ಒಕ್ಕಲಿಗ ಮಹಾಜನರ ಸಮ್ಮೇಳನವೂ ಇಷ್ಟು ಪ್ರಾಮುಖ್ಯವಾಗಿ ನೆರೆದಿದೆಯೆಂದರೆ, ಅದು ಹಿಂದೆ ಒಕ್ಕಲಿಗ ಮುಖಂಡರು ತೋರಿಧ ಸನ್ಮಾರ್ಗ. ಹೀಗೆ ಒಂದು ಕಡೆ ಸರ್ಕಾರದವರ ಪ್ರೋತ್ಸಾಹ, ಇನ್ನೊಂದುಕಡೆ ಹಿರಿಯರ ಉತ್ಸಾಹ ಇವುಗಳ ಜತೆಗೆ ಮುಂದಿನ ಯುವ ಜನರ ಪ್ರಯತ್ನವೂ ಸೇರಿದರೆ ಒಕ್ಕಲಿಗರ ಸಂಘದ ಪುರೋಭಿವೃದ್ಧಿಯ ನಿರಾತಂಕವಾಗಿ ನಡೆಯಲು ಅಡ್ಡಿಯೇನೂ ಇಲ್ಲ. ಅಸಹಾಯಶೂರರೂ ಉತ್ಸಾಹಶೀಲರೂ ಆದ ಹಿರಿಯರು ಒಬ್ಬೊಬ್ಬರಾಗಿ ದಿವಂಗತರಾಗಿ ನಮ್ಮ ಜನಾಂಗವನ್ನು ಶೋಕಕ್ಕೆ ಗುರಿಮಾಡಿದ್ದಲ್ಲದೆ ಅವರು ನಡೆಸುತ್ತಿದ್ದ ಕಾರ್ಯಕಲಾಪಗಳು ಅಲ್ಲಲ್ಲಿಗೇ ನಿಂತವು. ಹೊಸ ಹೊಸ ಸಮಸ್ಯೆಗಳು ತಲೆದೋರಿ, ಒಕ್ಕಲಿಗ ಸಂಘದ ಅಭಿವೃದ್ಧಿಯು ನಿರಾತಂಕವಾಗಿ ನಡೆಯಲಾಗಲಿಲ್ಲ.

ಹೀಗೆ ಒಕ್ಕಲಿಗರ ಸಂಘವು ಒಕ್ಕಲಿಗ ಮುಖಂಡರುಗಳ ಸಹಾಯ ಸಂಪತ್ತನ್ನು ಪಡೆದು ೧೯೦೬ರಲ್ಲಿ ಉದ್ಭವಿಸಿ ಬಾಲ್ಯವನ್ನು ದಾಟಿ, ಈಗ ೧೦೦ವರ್ಷಗಳ ವಯಸ್ಸಿನ ಸುವರ್ಣದ ಶ್ರೇಯಸ್ಸನ್ನು ಹೊಂದಿದೆ. ಆದರೆ, ಒಕ್ಕಲಿಗರ ಸಂಘಕ್ಕಾಗಿ ಅನವರತವೂ ದುಡಿಯುತ್ತಿದ್ದ ಮುಖಂಡರ ಶ್ರಮಕ್ಕೆ ಪಾರವೇ ಇಲ್ಲದಂತಾಗಿ ಅರಿತು ನುರಿತ ಮುಂದಾಳುಗಳು ಒಕ್ಕಲಿಗ ಸಂಘದ ಏಳಿಗೆಗಾಗಿ ಮುಂದೆ ಬರಬೇಕಾಗಿದೆ. ಹಿಂದೆ ಒಕ್ಕಲಿಗ ಸಂಘದ ಉದ್ಧಾರಕ್ಕಾಗಿ ಹೇಗೆ ಮುಖಂಡರು ಶ್ರಮಪಟ್ಟಿರುವರೆಂಬ ಅಂಶವನ್ನು ನಾವು ಸಂಕ್ಷೇಪವಾಗಿ ವಿವರಿಸಿರುವುದನ್ನು ಒಕ್ಕಲಿಗರು ಓದಿದರೆ, ಅವರಿಗೆ ತುಂಬಾ ಉತ್ಸಾಹವೂ ಉತ್ತೇಜನವೂ ಉಂಟಾಗಿ, ಅವರ ಮೇಲ್ಪಂಕ್ತಿಯನ್ನು ತಾವೂ ಅನುಸರಿಸಿ ಕೆಲಸಮಾಡಿ ಸಂಘವನ್ನು ಇನ್ನು ಉಚ್ಛ್ರಾಯಸ್ಥಿತಿಗೆ ತರಬೇಕೆಂಬುವ ಆಸಕ್ತಿ ಅವರಿಗೆ ಹುಟ್ಟುವುದೆಂಬ ನಂಬಿಕೆಮೂಡಬೇಕಾಗಿದೆ. ಹೀಗೆ ಕಷ್ಟಪಟ್ಟು ಸಂಘವನ್ನು ಸ್ಥಾಪಿಸಿ ಬೆಳೆಯಿಸಿದಂತಹ ಮಹನೀಯರ ಹಾಗೆ ಮುಂದೆಯೂ ಅದನ್ನು ಸಾಕಿ ಸಲಹಿ ಪೋಷಿಸುವಂತಹ ಮಹಾನುಭಾವರು ಹುಟ್ಟಿಕೊಂಡು ಮುಂದಾಳುಗಳಾಗಿ ಬಂದು ನಿಂತು ಕಾರ್ಯನಿರ್ವಾಹಮಾಡಬೇಕೆಂಬುದೇ ಆಶಯವಾಗಿದೆ.

### ೩.೨. ಒಕ್ಕಲಿಗರ ಸಂಘದ ಅಭಿವೃದ್ಧಿ ಯೋಜನೆಗಳು

ಒಂದು ಜನಾಂಗದ ಲೌಕಿಕ, ಸಾಮಾಜಿಕ ಮತ್ತು ಧಾರ್ಮಿಕ ತೇಜಸ್ಸು ತನ್ನದೇ ಆದ ವಾತಾವರಣದಲ್ಲಿ ನೆರವೇರಬೇಕು. ಈ ಪ್ರಯತ್ನದಲ್ಲಿ ಆಯಾ ಜನಾಂಗದ ಸಂಘ ಸಂಸ್ಥೆಗಳ ಸಾಮರ್ಥ್ಯ, ಗುರುಮಠಗಳ ಸಹಕಾರ ವಿವಿಧ ಒಳಪಂಗಡಗಳ ಐಕಮತ್ಯ ಮತ್ತು ಏಕಧರ್ಮ ಇವುಗಳು ಒಂದುಗೂಡಬೇಕು.

ಇದು ಯೋಜನೆಗಳ ಯುಗ. ಪಂಚವಾರ್ಷಿಕ ಯೋಜನೆ ಎಂಬ ಹೆಸರಿನಲ್ಲಿ ಸರ್ಕಾರದವರು ಕೈಗೊಳ್ಳುವ ವಿವಿಧ ಯೋಜನೆಗಳ ಸ್ವರೂಪ ಒಂದು ಕಡೆ. ಆಯಾ ಕೋಮುವಾರು ಮಹನೀಯರು ತಮ್ಮ ತಮ್ಮ ಜನವರ್ಗದ ಸೌಕರ್ಯಕ್ಕಾಗಿ ತಾವಾಗಿಯೇ ಸಾಧಿಸಬೇಕಾಗಿರುವ ಯೋಜನೆಗಳು ಇನ್ನೊಂದು ಕಡೆ. ಇದರ ಜೊತೆಗೆ ವಿವಿಧ ಕೋಮುವಾರು ಸಂಘಗಳು ತಮ್ಮ ತಮ್ಮ ಅಸ್ತಿತ್ವವನ್ನು ಉಳಿಸಿಕೊಂಡು ಮುಂದುವರೆಯುವುದಕ್ಕೆ ಸರ್ಕಾರದ ಚೌಕಟ್ಟಿನಲ್ಲಿ ನಡಸಲೇಬೇಕಾದ ತ್ವರಿತ ಕಾರ್ಯಗಳು ಮತ್ತೊಂದು ಕಡೆ. ಏನೇ ಆಗಲಿ, ಯೋಜನೆಗಳು ಇರಬೇಕು. ಏಕೆಂದರೆ, ಇವು ಗುರಿಮುಟ್ಟಲು ಅವಲಂಬಿಸಬೇಕಾದ ಪ್ರಮುಖ ಮಾರ್ಗಸೂಚಿಗಳು. ಆದರೆ, ಯಾವುದೇ ಯೋಜನೆಯಾಗಲಿ ಹಣಕಾಸಿನ ಬೆಂಬಲವಿಲ್ಲದೆ ಮುಂದುವರಿಯುವಂತಿಲ್ಲ. ಮನೆಯಲ್ಲಾಗಲಿ, ಮಠದಲ್ಲಾಗಲಿ, ರಾಜ್ಯದಲ್ಲಾಗಲಿ ಇದು ಒಂದೇ ಪ್ರಕಾರವಾಗಿರುತ್ತದೆ. ಒಟ್ಟಿನಲ್ಲಿ ಒಂದು ಜನಾಂಗದ ಲೌಕಿಕ, ಸಾಮಾಜಿಕ, ಹಾಗೂ ಧಾರ್ಮಿಕ ತೇಜಸ್ಸು ತನ್ನದೇ ಆದ ವಾತಾವರಣದಲ್ಲಿ ನೆರವೇರಲೇಬೇಕು ಇದರಲ್ಲಿ ಆಯತಾ ಕೋಮುವಾದ ಸಂಘಗಳ ಸಾಮರ್ಥ್ಯ, ಗುರುಮಠಗಳ ಸಹಕಾರ ಹಾಗೂ ಜನಾಂಗದ ವಿವಿಧ ಒಳಪಂಗಡಗಳ ಐಕ್ಯಮತ್ಯ ಮತ್ತು ಏಕಧರ್ಮ ಇವುಗಳು ಒಂದುಗೂಡಬೇಕು.

ಒಕ್ಕಲಿಗ ಸಂಘ ತಮ್ಮ ಜನಾಂಗದ ಸರ್ವತೋಮುಖ ಅಭಿವೃದ್ಧಿಗಾಗಿ ೧೯೦೬ ರಲ್ಲಿ ರೂಪುಗೊಂಡು, ತನ್ನದೇ ಆದ ರೀತಿಯಲ್ಲಿ ೧೦೦ ವರ್ಷ ತಕ್ಕಮಟ್ಟಿಗೆ ಅನೇಕ ಎಡರುಗಳನ್ನು ದಾಟಿ ಬಂದಿದೆ. ಈ ೧೦೦ ವರ್ಷಗಳಲ್ಲಿ ಸ್ಥಾಪಕರ ಉದ್ದೇಶಗಳನ್ನು ಸಂಧರ್ಭಕ್ಕೆ ತಕ್ಕಂತೆ ಸಾಧಿಸುತ್ತ ಬಂದಿದೆ. ಈ ಪ್ರಯತ್ನದಲ್ಲಿ ಅಲ್ಲಲ್ಲಿ ಕೆಲವು ಲೋಪ ದೋಷಗಳು ಕಂಡುಬಂದರೂ, ಉತ್ತಮ ಸಾಧನೆಯಂತೂ ನಡೆದಿದೆ ಎನ್ನಬಹುದು.

**ಉಪಕೇಂದ್ರಗಳ ಸ್ಥಾಪನೆ**

ಬೆಂಗಳೂರು ಕೇಂದ್ರದಲ್ಲಿ ಸಾಧಿಸಿರುವಂತೆಯೇ ಎಲ್ಲಾ ಜಿಲ್ಲಾ ಹಾಗೂ ತಾಲ್ಲೂಕು ಕೇಂದ್ರಗಳಲ್ಲಿಯೂ ಅನುಗುಣವಾದ ಉಪಕೇಂದ್ರಗಳನ್ನು ಸ್ಥಾಪಿಸಬೇಕಾದ ಅವಶ್ಯಕತೆ ನಮ್ಮ ಮುಂದಿದೆ ಈಭಾಗದ ಒಕ್ಕಲಿಗರ ಶೈಕ್ಷಣಿಕ ಹಾಗೂ ಕಾಲಿಯ ಅಭಿವೃದ್ಧಿಗಾಗಿ ಈ ಅವಶ್ಯಕತೆ ಹೆಚ್ಚಾಗಿದೆ. ಧಾರ್ಮಿಕ ಮಹನೀಯರು ಸಲ್ಲಿಸತಕ್ಕ ಧನ ಸಹಾಯದಲ್ಲಿ ಹೆಚ್ಚಿನ ಭಾಗವನ್ನು ಅವರ ಸಂಘಗಳಿಗೆ ಅವರವರ ಪ್ರದೇಶಗಳಲ್ಲಿಯೇ ಅಭಿವೃದ್ಧಿ ಕಾರ್ಯಗಳಿಗೆ ವಿನಿಯೋಗಿಸಬೇಕಾಗಿದ ಮನಸ್ಥಿತಿಇದೆ.

**ವಿದ್ಯಾ ಸೌಲಭ್ಯಗಳು**

ಒಕ್ಕಲಿಗ ಜನತೆಗೆ ವಿದ್ಯಾ ಸೌಲಭ್ಯಗಳಿಲ್ಲದಿದ್ದ ಕಡೆಗಳಲ್ಲೆಲ್ಲ ವಸತಿ ಶಾಲೆಗಳು ಮತ್ತು ವಿದ್ಯಾರ್ಥಿ ನಿಲಯಗಳನ್ನು ಕಟ್ಟಿ ನಡೆಸುವ ಅಗತ್ಯವನ್ನು ಒತ್ತಿ ಹೇಳಬೇಕಾಗಿಲ್ಲ. ಒಕ್ಕಲಿಗರಿಗೆ ಭೂಮಿ, ಹಣ ಮತ್ತು ಭವನಗಳನ್ನು ದಾನವಾಗಿ ಸ್ವೀಕರಿಸಿ ಈ ಮಹಾ ಕಾರ್ಯವನ್ನು ನೆರವೇರಿಸಬೇಕು.

**ಮಹಾಮಂದಿರದ ಸ್ಥಾಪನೆ**

ಒಕ್ಕಲಿಗರ ಸೇವೆಯಲ್ಲಿ ತನು ಮನ ಧನಗಳನ್ನು ತೆತ್ತು ದುಡಿದಿರುವ ಕುಲಮಹನೀಯರ ಜ್ಞಾಪಕಾರ್ಥವಾಗಿ ಒಕ್ಕಲಿಗರ ಮಹಾಮಂದಿರವನ್ನು ಸ್ಥಾಪಿಸಿ, ಅಲ್ಲಿ ಇಂತಹ ಕುಲ ಸೇವಕರ ಭಾವಚಿತ್ರಗಳನ್ನು ಪ್ರದರ್ಶಿಸಿ ಅವರ ಸಂಕ್ಷಿಪ್ತ ವಿವರಗಳನ್ನು ಪ್ರಕಟಿಸುವುದರಿಂದ ಮುಂದಿನ ಜನಾಂಗಕ್ಕೆ ಇದು ಮಾರ್ಗಸೂಚಕವಾಗಿದೆ. ಅಲ್ಲದೆ, ಇಲ್ಲಿ ಒಕ್ಕಲಿಗರ ಮಹಾಸಭೆಯನ್ನು ನಡೆಸುವುದಕ್ಕೂ ಅವಕಾಶವಿರುತ್ತದೆ ಎಂಬ ಉದ್ದೇಶದಿಂದ ಇವನ್ನು ಸ್ಥಾಪಿಸಲಾಯಿತು.

**ವಸತಿ ಗೃಹ**

ಬೆಂಗಳೂರು ನಗರಕ್ಕೆ ಕಾರ್ಯನಿಮಿತ್ತ ಬರುವ ನಮ್ಮ ಜನರಿಗೆ ಸರಿಯಾದ ವಸತಿ ದೊರೆಯುತ್ತಿಲ್ಲ. ಆದ್ದರಿಂದ ಅವರು ತೊಂದರೆಗೊಳಗಾಗುತ್ತಿದ್ದಾರೆ. ಇದನ್ನು ನಿವಾರಿಸಲು ವಿಶಾಲವಾದ ಹಲವು ಕೊಠಡಿಗಳುಳ್ಳ ವಸತಿ ಗೃಹವನ್ನು ಕಟ್ಟಿಸಿ, ಅದನ್ನು ಅಪೇಕ್ಷೆಪಟ್ಟವರಿಗೆ ಒಂದೆರಡು ದಿನಗಳು ಮಟ್ಟಿಗೆ ಒದಗಿಸಬೇಕೆಂಬ ಉದ್ದೇಶದಿಂದ ಈ ಅತಿಥಿಗೃಹವನ್ನ ನಿರ್ಮಿಸಲಾಗಿದೆ. ದಾನಿಗಳ ಸಹಕಾರ ಇಲ್ಲಿ ಅತ್ಯಂತ ಹೆಚ್ಚಿನ ಸಹಕಾರವಾಗಿದೆ.

**ಜಿಲ್ಲೆ, ತಾಲ್ಲೂಕು, ಹೋಬಳಿ ಮತ್ತು ಹಳ್ಳಿಗಳಲ್ಲಿ ಶಾಲೆಗಳ ಸ್ಥಾಪನೆ**

ಒಕ್ಕಲಿಗರ ಸಂಘವು ಬೆಂಗಳೂರಿನಲ್ಲಿ ಸ್ಥಾಪಿತವಾಯಿತು. ಆದರೆ ಇದರ ಶಾಲೆಗಳು ಜಿಲ್ಲೆ, ತಾಲ್ಲೂಕು, ಹೋಬಳಿ ಮತ್ತು ಹಳ್ಳಿಗಳಲ್ಲಿ ಸಾಕಷ್ಟು ಸ್ಥಾಪಿತವಾಗಿಲ್ಲ. ಜಿಲ್ಲಾ ಹಾಗೂ ತಾಲ್ಲೂಕು ಮಟ್ಟದಲ್ಲಿರುವ ವಿದ್ಯಾರ್ಥಿನಿಲಯಗಳು ಮತ್ತು ಸಂಘಗಳು ಕೆಲವು ಕಡೆಗಳಲ್ಲಿ ಸಮರ್ಪಕವಾಗಿ ಕೆಲಸಮಾಡದದೆ ಕೆಲವು ವಿದ್ಯಾರ್ಥಿ ನಿಲಯವನ್ನು ಮುಚ್ಚಲಾಗಿದೆ. ಈ ನಿಲಯಗಳಿಗೆ ಸೇರಿದ ಆಸ್ತಿಗಳನ್ನು ಸಹ ಸರಿಯಾಗಿ ನೋಡಿಕೊಳ್ಳಲಾಗುತ್ತಿಲ್ಲ. ಅವಶ್ಯಕವಿದ್ದ ಕಡೆಗಳಲ್ಲಿ ಶಾಖೆಗಳನ್ನು ಪ್ರಾರಂಭಿಸಿ ಬೆಂಗಳೂರಿನಲ್ಲಿರುವ ಸಂಘವನ್ನು ಕೇಂದ್ರ ಸಂಘವನ್ನಾಗಿ ಮಾಡಿಕೊಂಡು ಯೋಜನೆಗಳನ್ನು ರೂಪಿಸಿಕೊಂಡು ಜನಾಂಗದವರ ಹೆಚ್ಚು ಪ್ರಗತಿಗೆ ಸಾಧ್ಯ, ಆದುದರಿಂದ ಇಂತಹ ಶಾಖೆಗಳನ್ನು ಎಲ್ಲಾ ಕಡೆಯೂ ಪ್ರಾರಂಭಿಸುವ ಕಾರ್ಯವನ್ನು ತ್ವರಿತಗೊಳಿಸಬೇಕಾಗಿದೆ.

**ಕಲ್ಯಾಣ ಮಂಟಪಗಳ ಸ್ಥಾಪನೆ**

ಸಂಘದವರು ಸಂಘದ ಆವರಣದಲ್ಲಿ ಕಲ್ಯಾಣ ಮಂಟಪವನ್ನು ಸ್ಥಾಪಿಸಲು ಹಿಂದೆಯೇ ಏರ್ಪಾಡು ಮಾಡಿದ್ದರು. ಆದರೆ, ಕಾರಣಾಂತರದಿಂದ ಕಾರ್ಯಗತವಾಗಲಿಲ್ಲ. ಈಗಲೂ ಸಹ ಸಂಘದ ವತಿಯಿಂದ ಒಂದು ಸೂಕ್ತ ಸ್ಥಳವನ್ನು ಆರಿಸಿ ಕಲ್ಯಾಣ ಮಂಟಪವನ್ನು ಸ್ಥಾಪಿಸಿ, ಕೋಮಿನವರು ಮತ್ತು ಇತರರು ಮುಂದೆ ಮದುವೆಗಳನ್ನೂ ಹಾಗೂ ಇತರ ಸಮಾರಂಭಗಳನ್ನೂ ನಡೆಸಲು ಅನುಕೂಲ ಮಾಡಿಕೊಡಬೇಕಾಗಿದೆ. ಹೀಗೆಯೇ ಜಿಲ್ಲಾ ಕೇಂದ್ರಗಳಲ್ಲೂ ಸಹ ಶಾಖೆಗಳ ಮುಖಾಂತರ ಕಲ್ಯಾಣ ಮಂಟಪಗಳನ್ನು ಸ್ಥಾಪಿಡಿಸಿ, ನಮ್ಮ ಕೋಮಿನವರಿಗೆ ಮತ್ತು ಇತರರಿಗೆ ಮದುವೆ ಮತ್ತು ಇತರ ಶುಭಕಾರ್ಯಗಳನ್ನು ಮಾಡಲು ಯೋಜನೆಗಳನ್ನು ರೂಪಿಸಿಕೊಂಡು ಆದಷ್ಟು ಜಾಗ್ರತೆ ಸಹಾಯ ಸೌಲಭ್ಯಗಳನ್ನು ನೀಡಬೇಕಾಗಿದೆ.

**ಸಮಾಜ ಸುಧಾರಣೆ ಹಾಗೂ ಹಳ್ಳಿಗಾಡಿನವರು ಮದುವೆಗಳನ್ನು ಮಾಡಿ ಸಾಲಗಾರರಾಗುತ್ತಿದ್ದಾರೆ.**

ಮದುವೆ ಖರ್ಚನ್ನು ಕಡಿಮೆ ಮಾಡಲು ಸಂಘದವರು ಮುಖ್ಯ ಪಾತ್ರವಹಿಸಬೇಕಾಗಿದೆ. ಇದಕ್ಕಾಗಿ ಮೊದಲನೆ ಹಂತದಲ್ಲಿ ಸಂಘದ ವತಿಯಿಂದ ಸಾಮೂಹಿಕ ಮದುವೆ ಮಾಡಿಸುವುದರಿಂದ ಖರ್ಚಿನ ಹಣದ ಬಾಧೆ ಬಹಳ ಮಟ್ಟಿಗೆ ಕಡಿಮೆ ಮಾಡಬಹುದು.ಇತ್ತೀಚೆಗೆ ಬೇರೆ ಕೋಮಿನವರು ಹಾಗೂ ಕೆಲವು ಸಂಘ ಸಂಸ್ಥೆಗಳು ಈ ರೀತಿ ಸಾಮೂಹಿಕ ವಿವಾಹಗಳನ್ನು ಏರ್ಪಾಡು ಮಾಡುತ್ತಿದ್ದಾರೆ.

ವರದಕ್ಷಿಣೆ ಕಾಟವೂ ಸಹ ಕೋಮಿನಲ್ಲಿಯೂ ಹೆಚ್ಚಾಗುತ್ತಿದೆ. ಇದರಿಂದ ಕೋಮಿನವರ ಪ್ರಗತಿಗೆ ದೊಡ್ಡ ಆತಂಕವಾಗಿ ಸಮಸ್ಯೆಗಳು ಉದ್ಭವವಾಗುತ್ತಿವೆ. ಈ ಸಮಸ್ಯೆಗಳನ್ನು ಬಗೆಹರಿಸಲು ನಮ್ಮ ಸಂಘದವರು ಹೆಚ್ಚು ಗಮನ ಕೊಡಬೇಕಾಗಿದೆ. ಈ ವಿಷಯವನ್ನು ಸಂಘದವರು ಚರ್ಚಿಸಿ ವಧೂವರರ ವಿವರ ವಿಳಾಸಗಳನ್ನು ಪಡೆದು ಒಂದು ಕಾರ್ಯಕ್ರಮ ರೂಪಿಸಿಕೊಂಡು ವಧುವಿಗೆ ಸರಿಯಾದ ವರ, ವರನಿಗೆ ಸರಿಯಾದ ವಧು ಸಿಕ್ಕುವಂತೆ ಮಾಡಿ ವರದಕ್ಷಿಣೆಯ ಹಾವಳಿಯನ್ನು ತಪ್ಪಿಸಲು ಸೂಕ್ತ ಯೋಜನೆಯನ್ನು ಹಾಕಿಕೊಂಡು ಕಾರ್ಯಗತ ಮಾಡಬೇಕಾಗಿದೆ.

**ಮುದ್ರಣಾಲಯ ಮತ್ತು ಪತ್ರಿಕೆಯ ಪುನರಾರಂಭ**

ನಮ್ಮ ಸಂಘದವರು ಬಹಳ ಹಿಂದೆಯೇ, ಅಂದರೆ ೧೫.೩.೧೯೦೭ ರಲ್ಲಿ ಒಕ್ಕಲಿಗರ ಮುದ್ರಣಾಲಯವನ್ನು ಸ್ಥಾಪಿಸಿ ಒಕ್ಕಲಿಗರ ಪತ್ರಿಕೆಯನ್ನು ಅಚ್ಚು ಹಾಕಿಸಿ ಆಜೀವ ಸದಸ್ಯರಿಗೆ ಹಂಚುತ್ತಿದ್ದರು, ಹಾಗೂ ಇತರರಿಗೂ ಪತ್ರಿಕೆಯು ದೊರಕುತ್ತಿತ್ತು.ಆದರೆ ಪತ್ರಿಕೆ ಮುದ್ರಣದಿಂದ ನಷ್ಟವುಂಟಾಗಿ ೧೯೭೨ ಫೆಬ್ರುವರಿ ೬ ರಂದು ನಡೆದ ಸರ್ವ ಸದಸ್ಯರ ಸಭೆಯಲ್ಲಿ ಮುದ್ರಣಾಲಯದ ಕೆಲಸವನ್ನು ತಾತ್ಕಾಲಿಕವಾಗಿ ನಿಲ್ಲಿಸಬೇಕೆಂದು ನಿರ್ಣಯಿಸಿದ್ದರಿಂದ ಅಂದಿನಿಂದ ಸುಮಾರು ೯ ವರ್ಷಗಳ ಕಾಲ, ಈ ಅಚ್ಚುಕೂಟದ ಸ್ಥಗಿತಗೊಂಡಿತ್ತು. ಹಳೆಯ ಮುದ್ರಣ ಯಂತ್ರಗಳನ್ನು ಸಹ ಕಾರ್ಯಕಾರಿ ಸಮಿತಿಯ ನಿರ್ಣಯದ ಪ್ರಕಾರ ಕುವೆಂಪು ಟ್ರಸ್ಟ್‌ನವರಿಗೆ ಮಾರಲಾಗಿದೆ.

ಪ್ರಚಾರಕ್ಕೆ ಪತ್ರಿಕೆಯೇ ಮೂಲಾಧಾರ, ಆದ್ದರಿಂದ ಒಕ್ಕಲಿಗರ ಪತ್ರಿಕೆಯನ್ನು ಕೂಡಲೆ ಪುನರ್ ಸ್ಥಾಪಿಸಬೇಕಾದುದು ಅನಿವಾರ್ಯ. ಇದರಿಂದ ನಮ್ಮ ವಿದ್ಯಾಲಯಗಳು, ಪ್ರೌಢಶಾಲೆ, ನಿಲಯಗಳು ಮತ್ತು ಇತರ ವಿದ್ಯಾಲಯಗಳಿಗೆ ಬೇಕಾದ ಪ್ರಕಟಣೆಗಳನ್ನು ಹಾಗೂ ಇತರ ಅಚ್ಚು ಹಾಕಬೇಕಾದ ಕೆಲಸವನ್ನು ವಹಿಸಿಕೊಂಡು, ಮುದ್ರಣಾಲಯವನ್ನು ಲಾಭದಾಯಕವಾಗಿ ನಡೆಸಲು ಸಾಧ್ಯ ಎಂಬ ದೃಷ್ಟಿಯಿಂದ ಮತ್ತೆ ಪ್ರಾರಂಭಿಸಲಾಯಿತು. ಇಂದಿಗೂ ನಡೆದುಕೊಂಡು ಬಂದಿದೆ.

**ರೆಸಿಡೆನ್ಸಿಯಲ್ ಕಾಲೇಜು ಸ್ಥಾಪನೆ**

ಸಂಘಕ್ಕೆ ಶ್ರೀಗಂಧದ ಕಾವಲಿನಲ್ಲಿ ಇರುವ ವಿಸ್ತಾರವಾದ ಒಳ್ಳೆಯ ಹವಾಗುಣದಿಂದ ಕೂಡಿದ ವೃಕ್ಷಗಳ ನೆಲೆಯಾದ ಆವರಣದಲ್ಲಿ ಸಧ್ಯಕ್ಕೆ ಪ್ರೌಢಶಾಲೆ ಹಾಗೂ ಮಾಧ್ಯಮಿಕ ಶಾಲೆಗಳು ಹಾಗೂ ಪ್ರಥಮ ದರ್ಜೆ ಕಾಲೇಜುಗಳು ನಡೆಯುತ್ತಿವೆ. ಈ ಆವರಣವು ಬೆಂಗಳೂರು ವಿಶ್ವವಿದ್ಯಾನಿಲಯಕ್ಕೆ ಅತಿ ಸಮೀಪದಲ್ಲಿ ಇರುವುದರಿಂದಲೂ ಮತ್ತು ಹಳ್ಳಿಯವರಗೆ ಹೆಚ್ಚು ಅನುಕೂಲವಾಗುವುದರಿಂದಲೂ ಇಲ್ಲಿ ಒಂದು ರೆಸಿಡೆನ್ಸಿಯಲ್ ಕಾಲೇಜನ್ನು ಸ್ಥಾಪನೆ ಮಾಡುವುದು ಅಗತ್ಯವಾಗಿದೆ.

**ವೃತ್ತಿ ಶಿಕ್ಷಣ ಕೇಂದ್ರ**

ಕೋಮಿನವರು ವೃತ್ತಿ ಶಿಕ್ಷಣ ಪಡೆದು ಸುಲಭವಾಗಿ ವೃತ್ತಿ ಸಿಗುವಂತಾಗಲು ಈ ಕಾಲೇಜಿನಲ್ಲಿ ಒಂದು ವೃತ್ತಿ ಶಿಕ್ಷಣ ಕೇಂದ್ರವನ್ನು ಸ್ಥಾಪಿಸಿ, ಕಾರ್ಯಾಗಾರವನ್ನು ಪ್ರಾರಂಭಿಸಿ, ರೈತರ ಮಕ್ಕಳಿಗೆ ವೃತ್ತಿ ಸಿಗುವಂತೆ ಅವಕಾಶ ಕಲ್ಪಿಸಿಕೊಡುವ ಏರ್ಪಾಡು ಸಹ ಇದೆ.

**ಒಕ್ಕಲಿಗರ ಬ್ಯಾಂಕ್ ಸ್ಥಾಪನೆ**

ಸಂಘವು ಕೆಲವು ವರ್ಷಗಳಿಂದೀಚೆಗೆ ಹೆಚ್ಚಿನ ಕಾರ್ಯಗಳಲ್ಲಿ ತೊಡಗಿರುವುದರಿಂದ ಹಣಕಾಸಿನ ವ್ಯವಹಾರಕ್ಕಾಗಿ ತಾಲ್ಲೂಕು, ಹೋಬಳಿಗಳಲ್ಲೂ ಸಹ ಅಭಿವೃದ್ಧಿ ಕಾರ್ಯಗಳನ್ನು ಶಾಖೆಗಳ ಮುಖಾಂತರ ಪ್ರಾರಂಭಿಸಲು ಏರ್ಪಾಡು ನಡೆಸಿತ್ತು. ಹೀಗಾಗಿ ಸಂಘದ ಚಟುವಟಿಕೆಗಳನ್ನು ಕೋಮಿನವರ ಪ್ರಗತಿಗಾಗಿ ದೇಶದ ಮೂಲೆಮೂಲೆಗೂ ಹರಡುವ ಸಂಭವವಿದೆ. ಆದುದರಿಂದ ಸಂಘದ ವತಿಯಿಂದ ಒಂದು ಬ್ಯಾಂಕ್‌ನ್ನು ಬೆಂಗಳೂರಿನಲ್ಲಿ ಪ್ರಾರಂಭಿಸಿ, ಶಾಖೆಗಳನ್ನು ಅವಶ್ಯಕವಿರುವ ಜಿಲ್ಲಾ ಮತ್ತು ತಾಲ್ಲೂಕುಗಳಲ್ಲಿ ಪ್ರಾರಂಭಿಸಿದರೆ, ಇತರ ಕೋಮಿನವರು ಬ್ಯಾಂಕುಗಳನ್ನು ಸ್ಥಾಪಿಸಿ ಪ್ರಗತಿ ಸಾಧಿಸಿರುವಂತೆಯೇ ನಾವೂ ಸಹ ಪ್ರಗತಿ ಸಾಧಿಸಿ ಅವರ ವ್ಯವಸಾಯ, ಉದ್ಯೋಗ ಹಾಗೂ ಇನ್ನಿತರ ಕಾರ್ಯಗಳ ಅಭಿವೃದ್ಧಿಗೆ ನೆರವಾಗಬಹುದು.

**ರೈತರ ದುಃಸ್ಥಿತಿಗೆ ಪರಿಹಾರ**

ವ್ಯವಸಾಯದಲ್ಲೇ ನಿರತರಾದ ನಮ್ಮ ಜನರ ಸ್ಥಿತಿ ತುಂಬ ಕ್ಷೀಣಿಸುತ್ತಿದೆ. ವರ್ಷವಿಡೀ ದುಡಿದು ಬೆಳೆದ ಬೆಳೆಗೆ ನ್ಯಾಯ ಬೆಲೆ ದೊರೆಯುತ್ತಿಲ್ಲ. ಎಲ್ಲ ರೀತಿಯ ಶೋಷಣೆಯೂ ಹೆಚ್ಚುತ್ತದೆ ಸರ್ಕಾರದಿಂದಲೇ ಎಲ್ಲಾ ಸಮಸ್ಯೆಗಳ ಪರಿಹಾರವಾಗಬೇಕೆಂಬ ನಿಲುವು ಸಮಾಜಕ್ಕೆ ಕಂಟಕವಾಗುವುದರಲ್ಲಿ ಯಾವ ಅನುಮಾನವೂ ಇಲ್ಲ. ಘನ ಸರ್ಕಾರದ ಅನೇಕ ಯೋಜನೆಗಳ ಉಪಯೋಗವನ್ನು ಪಡೆದುಕೊಳ್ಳಲು ಸಾಧ್ಯವಾಗದಿರುವುದಕ್ಕೆ ಮುಖ್ಯ ಕಾರಣ ಬಹು ಪಾಲು ಜನರ ನಿರಕ್ಷರತೆ ಮತ್ತು ಅಜ್ಞಾನ, ಈ ದೈತ್ಯ ಪರಿಸ್ಥಿತಿಯ ವಿರುದ್ಧ ನಮ್ಮ ಸಂಘ ಸಮರ ಹೂಡಿದೆ. ಈ ಸಮರದಲ್ಲಿ ಉತ್ಸಾಹದಿಂದ ಭಾಗಿಗಳಾಗಿರಿ ಎಂದು ಆಶಿಸಬಹುದು.

ಈಚಿನ ವರ್ಷಗಳಲ್ಲಿ ಸಂಘವು ವಿದ್ಯಾಕ್ಷೇತ್ರದಲ್ಲಿ ಸಾಧಿಸಿರುವ ಪ್ರಗತಿಯನ್ನು ಸಲ್ಲಿಸಿರುವ ಸೇವೆಗೆ ಅರ್ಪಿಸಬೇಕಾಗಿದೆ. ಬೆಂಗಳೂರಿನ ದಂಡಿನ ಲಕ್ಷ್ಮಣಸ್ವಾಮಿಯವರು ಪೂರ್ವಿಕರಿಂದ ಬಂದ ಆಸ್ತಿಯನ್ನು ವಿದ್ಯಾರ್ಜನೆಗೆಂದು ಉಳಿಸಿಕೊಂಡಿದ್ದ ಮಾಗಡಿ ರಸ್ತೆಯ ಬಳಿ ಕಾಮಾಕ್ಷಿ ಪಾಳ್ಯದ ಹತ್ತಿರವಿರುವ ಸುಮಾರು ನೂರು ಎಕರೆ ೯೮.೩೬ ಭೂಮಿಯನ್ನು ಶ್ರೀಮತಿ ರಂಗಮ್ಮ ಕೃಷ್ಣಪ್ಪ ಟ್ರಸ್ಟ್ ಎಂಬ ಹೆಸರಿನಲ್ಲಿ ವಿದ್ಯಾಭಿವೃದ್ಧಿಗಾಗಿ

ಉಪಯೋಗಿಸಬೇಕೆಂದಿದ್ದಾರೆ. ಇದೇ ರೀತಿ ತಣಿಸಂದ್ರದ ನಾರಾಯಣಗೌಡರು ಸಂಘಕೆ ಬರೆದುಕೊಟ್ಟು ಮಹದುಪಕಾರ ಮಾಡಿದ್ದಾರೆ. ಭೂ ಕಾನೂನಿನ ಅನ್ವಯದಲ್ಲಿ ಇರುವ ಮಹೋತ್ಸವದ ಈ ವರ್ಷದಲ್ಲಿ ಇಂತಹ ಮಹನೀಯರ ಔದಾರ್ಯವನ್ನು ನೆನೆಯುವುದು ತನ್ನ ಆದ್ಯ ಕರ್ತವ್ಯವೆಂದು ಸಂಘ ಭಾವಿಸುತ್ತದೆ ಇದೇ ಎಂಬ ಕೃತಜ್ಞತೆಯನ್ನು ಸಂಘವು ಸಲ್ಲಿಸುತ್ತದೆ.

**ಟಿಪ್ಪಣಿಗಳು**

೦೧. ಒಕ್ಕಲಿಗರ ಪತ್ರಿಕೆ. ಸಂಪುಟ ೧, ೨

೦೨. ಅದೇ ಪು.೧೮

೦೩. ನಾಲ್ವಡಿ ಕೃಷ್ಣನ ಮೈಸೂರು, ಡಾ.ಎನ್.ಚಿನ್ನಸ್ವಾಮಿ ಸೋಸಲೆ, ಪು.೧೮

೦೪. ಅದೇ ಪು.೧೮

೦೫. ಅದೇ ಪು.೩೩

೦೬. ಸುವರ್ಣ ಮಹೋತ್ಸವ ಸಂಚಿಕೆ, ಒಕ್ಕಲಿಗರ ಸಂಘ, ಬೆಂಗಳೂರು, ಪು.೮೬

* * * * *

## ಅಧ್ಯಾಯ -೪

# ಕರ್ನಾಟಕದಲ್ಲಿ ಒಕ್ಕಲಿಗರು ಹಾಗೂ ಅವರ ಕೊಡುಗೆ

೪.೧. ಕನ್ನಡ ಸಾಹಿತ್ಯಕ್ಕೆ ಒಕ್ಕಲಿಗರ ಕೊಡುಗೆ

೪.೨. ಶಿಕ್ಷಣ ಕ್ಷೇತ್ರಕ್ಕೆ ಒಕ್ಕಲಿಗರ ಕೊಡುಗೆ

೪.೩. ಪತ್ರಿಕಾ ಕ್ಷೇತ್ರಕ್ಕೆ ಒಕ್ಕಲಿಗರ ಕೊಡುಗೆ

೪.೪. ಕ್ರೀಡಾ ಕ್ಷೇತ್ರಕ್ಕೆ ಒಕ್ಕಲಿಗರ ಕೊಡುಗೆ

೪.೫. ರಾಜಕೀಯ ಕ್ಷೇತ್ರದಲ್ಲಿ ಒಕ್ಕಲಿಗರು

**೪.೧ ಕನ್ನಡ ಸಾಹಿತ್ಯಕ್ಕೆ ಒಕ್ಕಲಿಗರ ಕೊಡುಗೆ**

ಸಾವಿರ ವರ್ಷಗಳ ಅವಧಿಯಲ್ಲಿ ಕನ್ನಡ ಸಾಹಿತ್ಯ ಪಡೆಯದಿದ್ದ ಪುಷ್ಟಿ, ಪ್ರಭೇಗಳನ್ನು ಒಂದು ಶತಮಾನದ ಅವಧಿಯಲ್ಲಿ ಒಕ್ಕಲಿಗರು ಅದಕ್ಕೆ ತಂದುಕೊಟ್ಟಿದ್ದಾರೆಂದರೆ ಉತ್ಪ್ರೇಕ್ಷೆಯಲ್ಲ. ಕನ್ನಡ ಸಾಹಿತ್ಯಕ್ಕೆ ಹೊಸ ಆಯಾಮಗಳನ್ನು ಅವರು ನೀಡಿದ್ದಾರೆ. ಅದರ ಕ್ಷಿತಿಜವನ್ನು ವಿಸ್ತರಿಸಿದ್ದಾರೆ. ಅನುಭವ, ಅಭಿವ್ಯಕ್ತಿಗಳಲ್ಲಿ ನವೀನ ಮಾದರಿಯನ್ನು ಸೃಷ್ಟಿಸಿದ್ದಾರೆ.

ಕನ್ನಡ ಸಾಹಿತ್ಯಕ್ಕೆ ಒಕ್ಕಲಿಗರ ಕೊಡುಗೆಯೇನಿದ್ದರೂ ಈ ಶತಮಾನದ್ದು. ಅದರಲ್ಲಿಯೂ ಬ್ರಿಟಿಷ್ ಪ್ರಭುತ್ವ ಮತ್ತು ಅದು ಜಾರಿಗೆ ತಂದ ಸಾರ್ವತ್ರಿಕ ಶಿಕ್ಷಣ ಪದ್ಧತಿಯಿಂದ ಸಾಧ್ಯವಾದದ್ದು. ವಿದ್ಯಾಭ್ಯಾಸದ ಅವಕಾಶವಿಲ್ಲದೆ ಓದು ಬರಹಗಳಿಗೆ ಎರವಾಗಿ, ಅಜ್ಞಾತವಾಗಿ ಬದುಕು ಸಾಗಿಸುತ್ತಿದ್ದ ಶೂದ್ರವರ್ಗ ಹಿಂದೆ ಸಾಹಿತ್ಯ ನಿರ್ಮಾಣ ಮಾಡುವುದು ಕನಸಿನ ಮಾತಾಗಿತ್ತು, ಅದರ ಸೃಜನಶೀಲತೆ ಜನಪದ ಸಾಹಿತ್ಯಕ್ಕಷ್ಟೆ ಸೀಮಿವಾಗಿದ್ದಿತ್ತು. ಕಳೆದ ಶತಮಾನದ ಅಂತ್ಯಭಾಗದಿಂದ ಮುಂದಕ್ಕೆ ಪಾಶ್ಚಾತ್ಯ ಶಿಕ್ಷಣ ಪಡೆದ ಒಕ್ಕಲಿಗರು ಕನ್ನಡ ಸಾಹಿತ್ಯದಲ್ಲಿ ಸಕ್ರಿಯವಾಗಿ ಪಾಲ್ಗೊಳ್ಳುವುದನ್ನು ನೋಡುತ್ತೇವೆ. ಹತ್ತಿರ ಹತ್ತಿರ ನೂರು ವರ್ಷಗಳ ಚರಿತ್ರೆಯಷ್ಟೇ ಒಕ್ಕಲಿಗರ ವಾಙ್ಮಯಕೃಷಿಗಿರತಕ್ಕದ್ದು. ಕನ್ನಡ ಸಾಹಿತ್ಯಕ್ಕೆ ಹಲವು ಹೊಸ ಆಯಾಮಗಳನ್ನು ಅವರು ನೀಡಿದ್ದಾರೆ. ಅದರ ವ್ಯಾಪ್ತಿಗಳನ್ನು ವಿಸ್ತರಿಸಿದ್ದಾರೆ. ಅನುಭವ, ಅಭಿವ್ಯಕ್ತಿಗಳಲ್ಲಿ ನವೀನ ಧಾತು, ದ್ರವ್ಯಗಳನ್ನೆರೆದಿದ್ದಾರೆ. ಅದುವರೆಗೆ ಕನ್ನಡ ಸಾಹಿತ್ಯಕ್ಕೆ ಅಪರಿಚಿತವಾಗಿದ್ದ ಸಂಸ್ಕೃತಿ ಲೋಕವೊಂದನ್ನು-ಪ್ರಕೃತಿಲೋಕವನ್ನು-ಕೂಡ ಅವರು ತೆರೆದು ತೋರಿದ್ದಾರೆ. ಮಾತಿನಲ್ಲಿ ಹೇಳಬೇಕೆಂದರೆ, ಜಾನಪದ ಸತ್ವದಲ್ಲಿ ಒಕ್ಕಲಿಗರ ಮುಖ್ಯವಾದ ಕೊಡುಗೆಯಿದೆ. (ಪಂಪ, ಕುಮಾರವ್ಯಾಸ, ವಚನಾಕಾರರಲ್ಲೂ ಈ ಸತ್ವ ಕಾಣುವುದಾದರು ಅದು ಪರಿಮಿತವಾದದ್ದು. 'ಮಣ್ಣಿನ ವಾಸನೆ'ಯನ್ನು ಅದರ ಅಕ್ಷರಾರ್ಥದಲ್ಲಿ ಕೂಡ ಒಕ್ಕಲಿಗ ಬರಹಗಾರರಲ್ಲಲ್ಲದೆ ಮತ್ತಾರಲ್ಲಿ ನಿರೀಕ್ಷಿಸಬಹುದು ಅವರಿಂದ ಕನ್ನಡ ಸಾಹಿತ್ಯದ ಘನತೆಗೆ ಮತ್ತು ಪೂರ್ಣತೆಗೆ ಸಾಕಷ್ಟು ನೆರವು ಸಂದಿದೆ.

### ೨.ವ್ಯಕ್ತಿ ವೈಶಿಷ್ಟ್ಯ

ಆಧುನಿಕ ಕನ್ನಡ ಸಾಹಿತ್ಯದಲ್ಲಿ ಒಕ್ಕಲಿಗರು ವಹಿಸಿರುವ ಪಾತ್ರ ವೈವಿಧ್ಯದ ಒಂದು ಅತ್ಯಂತ ಸ್ಥೂಲ ಚಿತ್ರ ಈ ಅಧ್ಯಾಯನದಲ್ಲೂ ಉದ್ದಿಷ್ಟವಾಗಿದೆ. ಮೊದಲು ಪ್ರಮುಖ ಒಕ್ಕಲಿಗ ಸಾಹಿತಿಗಳನ್ನು ದೃಷ್ಟಿಯಲ್ಲಿರಿಸಿಕೊಂಡು ಚಿಂತಿಸುವುದಾದರೆ

### ೧.ಎಂ.ಎಲ್. ಶ್ರೀಕಂಠೇಶಗೌಡ

ಒಕ್ಕಲಿಗ ಜನಾಂಗದವರು ವಾಙ್ಮಯ ವ್ಯವಸಾಯದಲ್ಲಿ ಪ್ರಾಯಶಃ ಎಂ.ಎಲ್. ಶ್ರೀಕಂಠೇಶಗೌಡರು (೧೮೫೨-೧೯೨೬) ಮೊದಲಿಗರಾಗುತ್ತಾರೆ. ಕನ್ನಡ ನಾಟಕ ಪ್ರಕಾರಕ್ಕೆ ತಳಹದಿ ಹಾಕಿದ ಮಹನೀಯರಲ್ಲಿ ಗೌಡರೊಬ್ಬರು. ಅವರ ಮಹತ್ವದ ಕೃತಿ 'ಪ್ರತಾಪ ರುದ್ರದೇವ' (೧೮೯೫); ಅದು ಷೇಕ್ಸ್‌ಪಿಯರನ 'ಮ್ಯಾಕ್‌ಬೆತ್' ನಾಟಕದ ಅಳವಡಿಕೆ ಅಂತೆಯೇ ಷೇಕ್ಸ್‌ಪಿಯರನ 'ಎ ಮಿಡ್‌ಸಮ್ಮರ್ ನೈಟ್ಸ್ ಡ್ರೀಮ್ಸ್' ನಾಟಕವನ್ನೂ ಗೌಡರು 'ಪ್ರಮೀಳಾರ್ಜುನೀಯಂ' (೧೮೯೦) ಎಂಬುದಾಗಿ ಕನ್ನಡಕ್ಕೆ ತಂದಿದ್ದಾರೆ. ಶ್ರೀಕಂಠೇಶ ಗೌಡರನ್ನು ಕುರಿತು ಮುಂದಿನ ಕೆಲವು ಹೇಳಿಕೆಗಳು ಅವರ ಕಾವ್ಯದ ಬೆಲೆಯನ್ನು ಸ್ಪಷ್ಟಪಡಿಸುತ್ತದೆ. ಡಿ.ವಿ.ಜಿ.: ''ಎಪ್ಪತ್ತು-ಎಂಬತ್ತು ವರ್ಷಗಳ ಹಿಂದೆಯೇ ಅವರು ಕನ್ನಡಕ್ಕಾಗಿ ಶ್ರದ್ದೆ ಸಾಮರ್ಥ್ಯಗಳಿಂದ ಕೆಲಸಮಾಡಿದ್ದರು. ನನಗೆ ತಿಳಿದಮಟ್ಟಿಗೆ ಒಕ್ಕಲಿಗ ಜನಾಂಗದಲ್ಲಿ ಪ್ರಸಿದ್ಧರಾದ ಸಾಹಿತಿಗಳಲ್ಲಿ ಶ್ರೀಕಂಠೇಶಗೌಡರು ಪ್ರಪ್ರಥಮರು,... ಆಗಿ ನವರ ಪ್ರಯತ್ನ ಕನ್ನಡಕ್ಕೆ ಒಂದು ಹೊಸ ವಸ್ತುವನ್ನೂ ಒಂದು ಹೊಸ ಪರಿಪಾಟಿಯನ್ನೂ ತಂದು ಕೊಡಬೇಕೆಂಬುವುದು. ಅದು ಹೊಸ ಪ್ರಯತ್ನ, ಅಪೂರ್ವವಾದ ಪ್ರಯತ್ನ, ಮೇಲ್ಪಂಕ್ತಿಯಿಲ್ಲದಿದ್ದ ಪ್ರಯತ್ನ,... ಈ ದೃಷ್ಟಿಯಿಂದ ಶ್ರೀಕಂಠೇಶಗೌಡರ ಪ್ರಯತ್ನ ಸ್ತೋತ್ರಾರ್ಹವಾದದ್ದು.'' ತ.ಸು. ಶಾಮರಾಯ ''ಇಂಗ್ಲಿಷ್ ನಾಟಕಗಳನ್ನು ಕನ್ನಡಕ್ಕೆ ಭಾಷಾಂತರ ಮಾಡಹೊರಟವರಲ್ಲಿ ಶ್ರೀಕಂಠೇಶಗೌಡರ ಹೆಸರು ಅಗ್ರಗಣ್ಯವಾದುದು.'' ಶ್ರೀನಿವಾಸ್ ಹಾವನೂರು ''ಇಂಗ್ಲಿಷ್ ಕೃತಿಗಳಿಂದ ಕನ್ನಡ ವಾಙ್ಮಯವನ್ನು ಪುಷ್ಟಿಗೊಳಿಸಬೇಕೆಂಬ ಪ್ರಜ್ಞೆಯಿದ್ದ ಆರಂಭದಲ್ಲಿ ಶ್ರೀಕಂಠೇಶಗೌಡರು ಪ್ರಮುಖರೆನ್ನಬಹುದು.'' 'ಚಾಮನೃಪ ಚಂದ್ರಪ್ರಭೆ' ಎಂಬ ಸಾಂಪ್ರದಾಯಕ ಕಾವ್ಯವನ್ನೂ, 'ಸೀತಾಸ್ವಯಂವರ' ಎಂಬ ನಾಟಕವನ್ನೂ, 'ಚಿಕ್ಕ ಬಣಜಿಗರ', 'ಕನ್ಯಾವಿತಂತು', 'ಭವಾನಿ ಬಾಳು' ಮುಂತಾದ ಕೃತಿಗಳನ್ನೂ ರಚಿಸಿದ್ದಾರೆ ಗೌಡರು. 'ಸುರಭಿ' ಎಂಬ ಪತ್ರಿಕೆಯನ್ನೂ ಅವರು ಹೊರಡಿಸುತ್ತಿದ್ದರು. ಹೊಸಗನ್ನಡ ಸಾಹಿತ್ಯದಲ್ಲಿ ಶ್ರೀಕಂಠೇಶಗೌಡರಿಗೊಂದು ಭದ್ರವಾದ ಚಾರಿತ್ರಿಕ ಸ್ಥಾನವಿದೆ. ಗೌಡರು ಕಾವ್ಯರಚನೆಯ ಬಗ್ಗೆ ಅಂದಿನ ಪಂಡಿತ ಮಾನ್ಯರೊಬ್ಬರು, ''ಗೌಡರು ಕಾವ್ಯ ಬರೆಯುವುದು ಸೋಜಿಗ!'' ಉದ್ಗರಿಸಿದರಂತೆ. ಅವರ ಮಾತಿನ ವ್ಯಂಗ್ಯವನ್ನು ತಳ್ಳಿಹಾಕಿ ಹೇಳುವುದಾದರೆ ಮುಂದೆ ಇಂಥ ಸೋಜಿಗದ ಪರಂಪರೆಯನ್ನೇ ಒಕ್ಕಲಿಗ ಸಾಹಿತಿಗಳು ನಾಡಿಗೆ ತೋರಿದ್ದಾರೆ.

### ೨.ಕುವೆಂಪು

ಒಕ್ಕಲಿಗ ಲೇಖಕರಲ್ಲಿ ಕುವೆಂಪು ಅಗ್ರಗಣ್ಯರು; ಮಾತ್ರವಲ್ಲ, ಹೊಸಗನ್ನಡ ಸಾಹಿತ್ಯದಲ್ಲೇ ಅವರದು ಅನನ್ಯವಾದ ಸ್ಥಾನ. ಅವರು ಏರಿದ ಎತ್ತರ ಇಳಿದ ಆಳ ಬೇರಾರಿಗೂ ನಿಲುಕದವು. ಮಹಾಕಾವ್ಯದ ಆವಿರ್ಭಾವಕ್ಕೆ ಆಧುನಿಕ ಯುಗ ಅನುಕೂಲವಲ್ಲ ಎಂಬ ವಾದ ಹುಸಿಯಾಗುವಂತೆ 'ಶ್ರೀರಾಮಾಯಣ ದರ್ಶನಂ'

ಮಹಾಕಾವ್ಯವನ್ನು ಸೃಷ್ಟಿಸಿದ ಮಹಾಕವಿ ಕುವೆಂಪು. ಹೊಸಗನ್ನಡದ ಈ ಕೃತಿ ಕುವೆಂಪು ಅವರ 'ನೆನಪಿನದೋಣಿಯಲ್ಲಿ' ಆತ್ಮ ಕಥೆಯನ್ನು 'ಶ್ರೀರಾಮಾಯಣ ದರ್ಶನ'ಕ್ಕೆ ಪೂರಕವಾಗಿ ಪರಿಭಾವಿಸಬೇಕು, ಅದರಲ್ಲಿರುವ ಕೆಲವು ಲೋಕೋತ್ತರ ಅನುಭವಗಳ ದೃಷ್ಟಿಯಿಂದ. (ಬಾಹ್ಯ ಚರಿತ್ರೆಯೂ 'ನೆನಪಿನ ದೋಣಿ'ಯಲ್ಲಿ ತುಂಬಿದೆ). ಈ ಕೃತಿದ್ವಯವನ್ನು ವಿಶೇಷಿಸಲು 'ಅದ್ಭುತ'ಕ್ಕಿಂತ ಬೇರೆ ಶಬ್ದವಿಲ್ಲ.

ಕುವೆಂಪು ಅವರ ಸಾಹಿತ್ಯಸೃಷ್ಟಿ ಬಹುಮುಖವಾದುದು, ಎಲ್ಲ ಮುಖಗಳಲ್ಲೂ ಅಸಾಧಾರಣ ಸಿದ್ಧಿಯನ್ನು ಆರ್ಜಿಸಿದ್ದು. ಕಾವ್ಯ, ನಾಟಕ, ಕಥೆ, ಕಾದಂಬರಿ, ಜೀವನಚರಿತ್ರೆ, ವಿಮರ್ಶೆ, ಶಿಶು ಸಾಹಿತ್ಯ ಮುಂತಾದ ಸರ್ವಪ್ರಕಾರಗಳಲ್ಲೂ ಅವರ ಲೇಖನಿ ಧೀರವಿಹಾರವೆಸಗಿದೆ. ಕುವೆಂಪು ಅವರ ಭಾವ ಗೀತೆಗಳು 'ಅಗ್ನಿಹಂಸ', 'ಪಕ್ಷಿಕಾಶಿ', 'ಪಾಂಚಜನ್ಯ' 'ಜೇನುಗುವಾ', 'ನವಿಲು', 'ಪ್ರೇತ ಕ್ಯೂ' ಮುಂತಾದ ಸುಮಾರು ಇಪ್ಪತ್ತು ಸಂಕಲನಗಳಲ್ಲಿ ಸೇರಿವೆ. ಇವುಗಳಲ್ಲಿ 'ಕೋಗಿಲೆ ಮತ್ತು ಸೋವಿಯತ್ ರಷ್ಯಾ' ಬಹು ವಿಶಿಷ್ಟವಾದುದು; ಅದರ ಒಂದೊಂದು ಕವನದಲ್ಲೂ ಪ್ರಗತಿ ಕ್ರಾಂತಿಗಳ ಕಾಣ್ಕೆಯಿದೆ. 'ಕಥನ ಕವನಗಳು', 'ಚಿತ್ರಾಂಗದ' ಕೂಡ ಉಲ್ಲೇಖನೀಯ.

ತಮ್ಮ ಕವಿತೆಯಲ್ಲಿನ ಕೊರತೆಯನ್ನು ಕುವೆಂಪು ತಮ್ಮ ಕಾದಂಬರಿಗಳಲ್ಲಿ ತುಂಬಿಕೊಟ್ಟರೂ. 'ಕಾನೂರು ಹೆಗ್ಗಡಿತಿ' ಮತ್ತು 'ಮಲೆಗಳಲ್ಲಿ ಮದುಮಗಳು' ಮಲೆನಾಡಿನ ಸಮಗ್ರ ಜನಜೀವನದ ಯಥಾವತ್ತಾದ-ಅಂದರೆ ಕಲಾತ್ಮಕವಾದ ದಾಖಲೆಗಳು. (ಅಂದಹಾಗೆ, ಮಲೆನಾಡನ್ನು ಕನ್ನಡ ಸಾಹಿತ್ಯಕ್ಕೆ ಪ್ರವೇಶಗೊಳಿಸಿದವರೇ ಕುವೆಂಪು.) 'ಮಲೆನಾಡಿನ ಚಿತ್ರಗಳು', 'ನನ್ನ ದೇವರು ಮತ್ತು ಇತರ ಕಥೆಗಳು', 'ಸನ್ಯಾಸಿ ಮತ್ತು ಇತರ ಕಥೆಗಳು', ಕುವೆಂಪು ಅವರ ಪ್ರಬಂಧ ಹಾಗೂ ಕತೆಗಳ ಸಂಗ್ರಹಗಳು.

ಅವರ ಪ್ರಧಾನ ನಾಟಕಗಳು 'ಶ್ಮಶಾನ ಕುರುಕ್ಷೇತ್ರ', 'ಬೆರಳ್‌ಗೆ ಕೊರಳ್', 'ಜಲಗಾರ', 'ಶೂದ್ರ ತಪಸ್ವಿ' ಮತ್ತು 'ರಕ್ತಾಕ್ಷಿ', ಇವುಗಳಲ್ಲಿ ಮೊದಲಿನವೆರಡು ಶ್ರೇಷ್ಠತಮ ನಾಟಕಗಳು 'ಶ್ರೀರಾಮಕೃಷ್ಣ ಪರಮಹಂಸ' ಮತ್ತು 'ಸ್ವಾಮಿ ವಿವೇಕಾನಂದ' ದಿವ್ಯೋಜ್ವಲ ಎನ್ನಬಹುದಾದ ಜೀವನ ಚರಿತ್ರೆಗಳು.

ವಿಮರ್ಶೆಗೆ ಕುವೆಂಪು ಕೊಡುಗೆ ಅಮೂಲ್ಯವಾದುದು. ಪ್ರಾಚ್ಯ-ಪಾಶ್ಚಾತ್ಯ ವಿಚಾರಧಾರೆಗಳ ಸಾಮರಸ್ಯದಿಂದ ಒಂದು ನೂತನ ಕಾವ್ಯಮೀಮಾಂಸೆಯನ್ನು ಅವರು ರೂಪಿಸಿದ್ದಾರೆ; ಅದರ ಬೆಳಕಿನಲ್ಲಿ ಕೆಲವು ಪ್ರಾಚೀನ ಕೃತಿಗಳನ್ನು ವಿಮರ್ಶಿಸಿದ್ದಾರೆ. 'ತಪೋನಂದನ', 'ದ್ರೌಪದಿಯ ಶ್ರೀ ಮುಡಿ' ಮತ್ತು 'ರಸೋವೈಸ' 'ಕುವೆಂಪು' ಅವರ ಸ್ವೋಪಜ್ಞ ವಿಮರ್ಶೆಗೆ ದ್ಯೋತಕ. ಅವರ ಪ್ರಖರವೂ ಸ್ವಸ್ಥವೂಆದ ವೈಚಾರಿಕ ದೃಷ್ಟಿಗೆ, ಉಪಾಧಿ ರಹತವೂ ಉದಾರವೂಆದ ನಿಲುವಿಗೆ 'ನಿಕುಂಶಮತಿಗಳಾಗಿ', (ಷಷ್ಠಿನಮನ), 'ಮನುಜ ಮತ ವಿಶ್ವಪಥ', 'ವಿಚಾರ ಕ್ರಾಂತಿಗೆ ಆಹ್ವಾನ'ಗಳು ಸಾಕ್ಷಿಯಾಗಿವೆ. ಇವು ಬಾಷಣ ಸಂಕಲನಗಳು. ಇವು ಲೋಕೋಪಯೋಗಿ ಯಾಗಿದ್ದ, ಯುವಜನಾಂಗವನ್ನು ಎಚ್ಚರಿಸಿ, ಸರ್ವೋದಯವನ್ನು ಸಾಧಿಸಬಲ್ಲವು.

ಉದಾತ್ತವೂ, ಗಂಭೀರವೂ ದೀಪ್ತವೂ ಆದ ಶೈಲಿಯೊಂದರ ನಿರ್ಮಾಣ ಕುವೆಂಪು ಅವರ ಹೆಗ್ಗಳಿಕೆಗಳಲ್ಲೊಂದು ಅದು ಸಂಸ್ಕೃತ ಭೂಯಿಷ್ಠವೆಂದು ದೂರುವವರುಂಟು. ಆದರೆ ಸಂಸ್ಕೃತಮಯವಾಗಿ ಬರೆಯುವವರೆಲ್ಲ ಕುವೆಂಪು ಆಗಲಾರರು.

ಕುವೆಂಪು ಅವರ ಸಾಹಿತ್ಯಸಾಮರ್ಥ್ಯದಲ್ಲೂ ನಿರ್ದಿಷ್ಟ ದರ್ಶನವೊಂದು ಅನುಭವಕ್ಕೆ ಬರುತ್ತದೆ, ಅದು ಕಲೆಗೆ, ವಾಸ್ತವಿಕತೆಗೆ ವಿರುದ್ಧವಾದುದಲ್ಲ. ಪರಂಪರೆಗೆ ನಿಷ್ಠರಾದವರು ಕುವೆಂಪು. ಆದರೆ ಈ ನಿಷ್ಠೆಯ ಹಿಂದೆ ಭೂತ ಶೋಧನವಿರುವುದರಿಂದ ಅದು ಶ್ರೇಯಸ್ಕರವಾದುದು.

ಕುವೆಂಪು ಕೃತಿಗಳಸತ್ತ್ವದಂತೆ ಸಂಖ್ಯೆಯೂ ದೊಡ್ಡದು, ಅವೆಲ್ಲಕ್ಕಿಂತ ಉದಾತ್ತವಾದುದು ಅವರ ಜೀವನ. ಅದರ ಪೂರ್ಣ ಕಥೆಯೇ ನೆನಪಿನ ದೋಣಿಯಲ್ಲಿ ನಿರೂಪಿತವಾಗಿರತಕ್ಕದು. ಈ ರಾಷ್ಟ್ರಕಂಡ ಮಹಾಕವಿಗಳಲ್ಲಿ ಕುವೆಂಪು ಒಬ್ಬರು.

**೩.ಡಿ.ಆರ್. ರಾಮಯ್ಯ**

ಹಿರಿಯ ಒಕ್ಕಲಿಗ ಸಾಹಿತಿಗಳಲ್ಲಿ ಡಿ.ಆರ್. ರಾಮಯ್ಯರೊಬ್ಬರು ಪ್ರಮುಖರಾಗಿದ್ದಾರೆ. ಎಂಟು ಪದ್ಯಕೃತಿಗಳು, ಏಳು ಗದ್ಯಕೃತಿಗಳು, ಅನೇಕ ಭಾಷಣ ಸಂಪಾದನೆಗಳು ಇವುಗಳ ಮೂಲಕ ಅವರು ಸಾಹಿತ್ಯಕ್ಕೆ ಶ್ಲಾಘ್ಯವಾದ ಸೇವೆ ಸಲ್ಲಿಸಿದ್ದಾರೆ. 'ಕೋಗಿಲೆ', 'ಇಂಗ್ಲಿಷ್', 'ಕವಿಕಾಣಿಕೆ' ಮುಂತಾದವು ರಾಮಯ್ಯನವರ ಕವನ ಸಂಕಲನಗಳು.ಇವುಗಳಲ್ಲಿ 'ಇಂಗ್ಲಿಷ್' ಆಂಗ್ಲ ಕವಿಗಳಾದ ಟೆನಿಸನ್, ಗ್ರೇ ಮೊದಲಾದವರ ಕವನಗಳ ಭಾಷಾಂತರನ್ನೊಳಗೊಂಡು, ಶ್ರೀ ಯವರ ಇಂಗ್ಲಿಷ್‌ಗೀತೆಗಳಂತೆ ಮಹತ್ವವುಳ್ಳದ್ದಾಗಿದೆ. ಜಗದೀಶ್ ಚಂದ್ರ ಬೋಸ್, ಪಿ.ಸಿ.ರೇ ಮುಂತಾದ ಜೀವನಚರಿತ್ರೆಗಳನ್ನು ರಾಮಯ್ಯನವರು ರಚಿಸಿದ್ದಾರೆ. ಅಲ್ಲದೆ, ಅನೇಕ ಮಹಾಪುರುಷರ ಮತ್ತು ಮಹಿಳೆಯರ ಜೀವನ ಚರಿತ್ರೆಗಳನ್ನು ಹಿತಸಾಧಕರ ಕಥೆಗಳು, ನಮ್ಮ ಹಿರಿಯರು ಮುಂತಾದ ಪುಸ್ತಕಗಳಲ್ಲಿ ಕೊಟ್ಟಿದ್ದಾರೆ. 'ಕರ್ತವ್ಯ' ಎಂಬ ಐತಿಹಾಸಿಕ ಕಾದಂಬರಿಯೂ ಅವರಿಂದ ರಚಿತವಾಗಿದೆ. ಮಿರ್ಜಾ ಇಸ್ಮಾಯಿಲ್, ನಾಲ್ವಡಿ ಕೃಷ್ಣರಾಜ ಒಡೆಯರು ಮುಂತಾದವರು ಭಾಷಣಗಳನ್ನು ಅವರು ಸಂಕಲಿಸಿದ್ದಾರೆ.

ಡಿ.ಆರ್. ರಾಮಯ್ಯನವರ ಸಾಹಿತ್ಯದ ಸವಿವರ ಅಧ್ಯಯನ ನಡೆಯಬೇಕಾಗಿದೆ.

**೪.ದೇ. ಜವರೇಗೌಡ**

ಕನ್ನಡದ ವಿದ್ವಾಂಸರಲ್ಲಿ, ವಿಮರ್ಶಕರಲ್ಲಿ ದೇಜಗೌ ಒಬ್ಬರು. ಗದ್ಯಕ್ಷೇತ್ರದಲ್ಲಿ ಅವರ ಸಾಧನೆ ಅತಿಶಯವಾದುದು. ಅವರ ಕೃತಿಸಂಖ್ಯೆಯೂ ವಿಪುಲ. ವಿಮರ್ಶೆ, ಗ್ರಥಸಂಪಾಧನೆ, ಜೀವನ ಚರಿತ್ರೆ, ಅನುವಾದ ಬಾಷಣ ಮುಂತಾದ ಹಲವು ಪ್ರಕಾರಗಳಲ್ಲಿ ಅವರು ಅನಾಯಾಸವಾಗಿ ಬೇಸಾಯ ಮಾಡಿದ್ದಾರೆ.

ಜವರೇಗೌಡರು ರಾಷ್ಟ್ರಕವಿ ಕುವೆಂಪು ರವರನ್ನು ಹಾಗೂ ಅವರ ಸಾಹಿತ್ಯ ಕುರಿತಂತಾ ಅನೇಕ ಸಂಶೋಧನಾತ್ಮಾಕ ಪರಭಾವಗಳನ್ನು ಬರೆದಿದ್ದಾರೆ. ನೆಹರು, ಅಂಬೇಡ್ಕರ್ ಮುಂತಾದವರ ಜೀವನ ವೃತ್ತಾಂತಗಳನ್ನೂ ಸಹ ಬರೆದಿದ್ದಾರೆ. ಲೀಲಾವತಿ, ಕಬ್ಬಿಗರ ಕಾವ್ಯ ಪುಣ್ಯಾಶ್ರವ ಮುಂತಾದ ಪ್ರಾಚೀನ ಕಾವ್ಯಗಳನ್ನು ಅವರು ಶಾಸ್ತ್ರೀಯವಾಗಿ, ಬಹು ಬೆಲೆಯುಳ್ಳ ಪೀಠಿಕೆಗಳನ್ನು ಬರೆದು ಸಂಪಾದಿಸಿಕೊಟ್ಟಿದ್ದಾರೆ. ಅವರ ನಂಜುಂಡಿ ಕವಿ ಕುರಿತು ರಚಿಸಿರುವ ತಲಸ್ಪರ್ಶಿಯಾದ ವಿಮರ್ಶೆಯಕೃತಿಗಳು ಕನ್ನಡದಲ್ಲಿ ಬಹಳವಿಲ್ಲ. 'ಸಾಹಿತಿಗಳ ಸಂಗದಲ್ಲಿ', 'ಕುವೆಂಪು ಸಾಹಿತ್ಯ' ಕೆಲವು ಅಧ್ಯಯನಗಳು, 'ನೂರೆಂಟು ಪುಸ್ತಕಗಳು' ಮುಂತಾದ ಗ್ರಂಥಗಳಲ್ಲಿ ದೇಜಗೌ ಅವರ ಅರ್ವಾಚಿನ ಸಾಹಿತ್ಯ ವಿಮರ್ಶೆ ಕಂಡುಬರುತ್ತದೆ. ಗದ್ಯ ಮೀಮಾಂಸೆಗೆ ಸಂಭಂಧಿಸಿದ ಅವರ 'ಗದ್ಯಶೈಲಿ'ಯೊಂದು ಅಪರೂಪದ ಕೃತಿ. 'ವಿದೇಶದಲ್ಲಿ ನಾಲ್ಕು ವಾರ', 'ಆಫ್ರಿಕಾ ಯಾತ್ರೆ', ಮೊದಲಾದುವು ದೇಜಗೌ ಅವರ ಪ್ರವಾಸ ಪುಸ್ತಕಗಳು.

ಅವರ ವೈಚಾರಿಕತೆಗೆ ಒಳ್ಳೆಯ ಸಾಕ್ಷಿಗಳು ಅವರ ಕುಲಪತಿಯ ಭಾಷಣಗಳ ಆರು ಸಂಪುಟಗಳು. 'ಕೆನೆ' ಅವರ ಚಿಂತನ ಪ್ರಬಂಧಗಳ ಸಂಚಯ. ಹೋರಾಟದ ಬದುಕು ಅವರ ಆತ್ಮವೃತ್ತ.

ದೇಜಗೌ ಅತ್ಯುತ್ತಮ ಭಾಷಾಂತರಕಾರರು, ಇದಕ್ಕೆ ನಿದರ್ಶನ ಅವರ ಪುನರುತ್ಥಾನ, ಹಮ್ಮು ಬಿಮ್ಮು ಮೊದಲಾದ ಅನುವಾದ ಕೃತಿಗಳು.

**೫.ಎಚ್.ಎಲ್. ನಾಗೇಗೌಡ**

ಎಚ್.ಎಲ್. ನಾಗೇಗೌಡರು ಸಾಹಿತ್ಯಸಾಧನೆಯಲ್ಲಿ ಮೊದಲು ಪರಿಗಣಿಸಬೇಕಾದ ಅವರ ಪ್ರವಾಸಿ ಕಂಡ ಇಂಡಿಯಾದ ಸಂಪುಟಗಳನ್ನು. ಇತಿಹಾಸ ರಚನೆಗೆ ಇಂದಿಗೂ ಉತ್ತಮ ಆಕಾರಗ್ರಂಥಗಳಾಗಿವೆ. ಪ್ರಾಯಃ ಮತ್ತಾವ ಭಾರತಿಯ ಭಾಷೆಯಲ್ಲೂ ಇಂಥ ಸಾಮಗ್ರಿಯಿಲ್ಲ. ಮಾರ್ಕೋ ಪೋಲೋ ಪ್ರವಾಸ ಕಥನ ಈ ವರ್ಗದ ರಚನೆಯೇ.

ನಾಗೇಗೌಡರು ಕವಿಯೂ ಹೌದು, 'ನಾನಾಗುವೆ ಗೀಜಗನ ಹಕ್ಕಿ' ಮತ್ತು 'ಕಥೆ ವ್ಯಥೆ' ಅವರ ಕವನ ಸಂಕಲನಗಳು ಆದರೆ ಪದ್ಯಕ್ಕಿಂತ ಗದ್ಯದಲ್ಲೇ ನಾಗೇಗೌಡರು ವಿಕ್ರಮರು. ಮುಖ್ಯವಾಗಿ ಇವರು ಸೃಜನಶೀಲ ಬರಹಗಾರರು. ಅವರ 'ನನ್ನೂರು' ಗ್ರಾಮಜೀವನದ ವಿಶಿಷ್ಟ ಚಿತ್ರಮಾಲೆ. 'ದೊಡ್ಡಮನೆ', 'ಭೂಮಿಗೆ ಬಂದ ಗಂಧರ್ವ', 'ಸೊನ್ನೆಯಿಂದ ಸೊನ್ನೆಗೆ' ಇವು ಕಾದಂಬರಿಗಳು. ಇವುಗಳಲ್ಲಿ ದೊಡ್ಡಮನೆ ಕನ್ನಡದ ವರಿಷ್ಠ ಕಾದಂಬರಿಗಳಲ್ಲೊಂದು. ಕಂಡು ಕೇಳಿದ ಕಥೆಗಳು. ಬೆಟ್ಟದಿಂದ ಬಟ್ಟಲಿಗೆ ಮುಂತಾದ ಕೃತಿಗಳನ್ನೂ ನಾಗೇಗೌಡರು ರಚಿಸಿದ್ದಾರೆ. ವಾಲ್ಟರ್ ಸ್ಕಾಟ್‌ನ ಕೆನಿಲ್‌ವರ್ತ್ ಹಾಗೂ ವೆರಿಯರ್ ಹಾಗೂ ಎಲ್ವಿನ್ನರ ಆತ್ಮಕಥೆಯನ್ನು ಸೊಗಸಾಗಿ ಕನ್ನಡಿಸಿದ್ದಾರೆ.

**೬. ಹಾ.ಮಾ. ನಾಯಕ**

ಹಾ.ಮಾ. ನಾಯಕರು ಕನ್ನಡ ಶ್ರೇಷ್ಠ ವಿಮರ್ಶಕರು. ಅವರ ವಿಮರ್ಶೆಯ ಪ್ರಕಾರವು ಸಮೀಕ್ಷೆ, ಸಂವಾದ, ಸಂಶಯ, ಸಂಗ್ರಹ, ಸಂಪುಟ ಮುಂತಾದ ಕೃತಿಗಳಲ್ಲಿ ಪ್ರದರ್ಶಿಸುತ್ತವೆ. ಅವರ ಸಾಹಿತ್ಯ ಸಂಕೀರ್ಣ ಸ್ವರೂಪದ ಕೃತಿಗಳಲ್ಲಿ ವ್ಯಕ್ತಿಚಿತ್ರಗಳಿವೆ. ವಿಮರ್ಶೆಯಿಂದ, ವ್ಯುತ್ಪತ್ತಿಯಿದೆ. ಮೇಲಾಗಿ ಕಾವ್ಯಗುಣವಿದೆ. 'ಸಂದರ್ಭ' ಅವರ ಭಾಷಣಗಳು ಸಂಕಲನ. ಖಚಿತತೆ, ವಸ್ತುನಿಷ್ಠತೆ, ಸಮತೋಲನ ನಾಯಕರ ಬರವಣಿಗೆಯ ವೈಶಿಷ್ಟ್ಯಗಳು, ನಿರಾಡಂಬರವೂ ಹೃದ್ಯವೂ ಆದ ಶೈಲಿ ಅವರದು. ಕನ್ನಡ ನಾಡು, ನುಡಿ, ಸಂಸ್ಕೃತಿಗಳನ್ನು ಕುರಿತ ಕಳಕಳಿ ಅವರ ಎಲ್ಲ ಬರಹಗಳಲ್ಲೂ ಕಂಡುಬರುತ್ತದೆ.

ಪ್ರಬಂಧ ಪ್ರಕಾರಕ್ಕೆ ನಾಯಕರು ಕೊಡುಗೆ ಗಮನಾರ್ಹ, 'ನಮ್ಮ ಮನೆಯ ದೀಪ' ಉತ್ಕೃಷ್ಟ ಪ್ರಬಂದ ಸಂಕಲನ. ಅವರ 'ರವೀಂದ್ರನಾಥ ಠ್ಯಾಗೂರ್' ಒಂದು ಒಳ್ಳೆಯ ಜೀವನಚರಿತ್ರೆ. 'ಸೂಲಂಗಿ' ಚಿಂತನ ಪ್ರಬಂದಗಳನ್ನೊಳಗೊಂಡದ್ದು. ಹಾವು ಮತ್ತು ಹೆಣ್ಣು ಸ್ವಂತ ಮತ್ತು ಅನುವಾದಿತ ಕಥೆಗಳ ಸಂಗ್ರಹ. ದೇಜಗೌ ವ್ಯಕ್ತಿ ಮತ್ತು ಸಾಹಿತ್ಯ, ವಿನಾಯಕ ವಾಙ್ಮಯ. ಗೊರೂರು ಗೌರವು ಗ್ರಂಥ ಮೊದಲಾದ ನಾಯಕರು ಅಭಿನಂದನ ಗ್ರಂಥಗಳನ್ನೂ, ಬೇರೆ ಬಗೆಯ ಗ್ರಂಥಗಳನ್ನು ನಾಯಕರು ಸಂಪಾದಿಸಿದ್ದಾರೆ. ಕೆಲವು ಮಕ್ಕಳು ಪುಸ್ತಕಗಳನ್ನೂ ಬರೆದಿದ್ದಾರೆ.

೭.ಸಿ.ಪಿ.ಕೆ.

ಸಿ.ಪಿ. ಕೃಷ್ಣಕುಮಾರ್ ಅವರು ಸುಮಾರು ನೂರು ಪುಸ್ತಕಗಳನ್ನು ಹೊರತಂದಿದ್ದಾರೆ. ಕಾವ್ಯ, ವಿಮರ್ಶೆ, ಸಂಶೋಧನೆ, ಪ್ರಭಂದ, ಅನುವಾದ, ಸಂಪಾದನೆ, ಮುಂತಾದ ಪ್ರಕಾರಗಳಲ್ಲಿ ಇವು ಅಳವಡುತ್ತವೆ. ಪ್ರಕೃತಿ, 'ವರ್ತಮಾನ' ಮುಂತಾದುವು ಸಿ.ಪಿ.ಕೆ.ಯವರ ಕವನ ಸಂಕಲನಗಳು, 'ಅಂತರತಮ' ವಚನ ಸಂಕಲನ. ಅಧ್ಯಯನ, ಆಲೋಸನ, ಸಾಹಿತ್ಯಮನನ, ಕರ್ಣಾಟಕ ಕಾದಂಬರಿ ಇತ್ಯಾದಿ ಸುಮಾರು ಮೂವತ್ತು ವಿಮರ್ಶಾತ್ಮಕ ಹಾಗೂ ಸಂಶೋಧನಾತ್ಮಕ ಗ್ರಂಥಗಳನ್ನು, ವಿಚಾರ ನಿಮಿಷ, ಮೆಲುಕು ಎಂಬ ಚಿಂತನ ಪ್ರಬಂಧ ಸಂಗ್ರಹ ಪಾಶ್ಚಾತ್ಯ ಕಾವ್ಯಚಿಂತನ, ಕಲೆಯೆಂಂದರೇನು, ಮಹಾತ್ಮಾವ್ಯ ಕಲ್ಪನೆ ಮುಂತಾದ ಕಾವ್ಯಮೀಮಾಂಸೆಯ ಪುಸ್ತಕಗಳನ್ನು ಇಂಗ್ಲೀಷಿನಿಂದಲೂ, ನಾಗಾನಂದ, ಯಶೋದರ ಚರಿತ, ವೇಣೀಸಂಹಾರ, ಸೌಂದರ್ಯಲಹರಿ. ಮುಂತಾದ ಕೃತಿಗಳನ್ನು ಸಂಸ್ಕೃತದಿಂದಲೂ ಭಾಷಾಂತರಿಸಿದ್ದಾರೆ. ಅರಣ್ಯಪರ್ವ, ಹರಿಶ್ಚಂದ್ರ ಸಾಂಗತ್ಯ, ಕನ್ನಡ ಛಂದಸ್ಸಿನ ಚರಿತ್ರೆ ಮುಂತಾದುವು ಅವರು ಸಂಪಾದಿತ ಕೃತಿಗಳು. ನಮ್ಮ ಅತ್ಯಂತ ಸಮರ್ಥತರುಣ ಲೇಖಕರಲ್ಲಿ ಒಬ್ಬರು

**೩.ಸಾಹಿತ್ಯ ಪ್ರಕಾರಗಳ ದೃಷ್ಟಿಯಲ್ಲಿ**

**೧. ಕಾವ್ಯ**

ಕಯ್ಯಾರ ಕಿಞ್ಞಣ್ಣ ರೈ ಅವರು ಹಿರಿಯ ತಲೆಮಾರಿನ ಖ್ಯಾತ ಕವಿಗಳಲ್ಲೊಬ್ಬರು, 'ಐಕ್ಯಗಾನ', 'ಪುನರ್ನವ', 'ಚೇತನ' ಮಂತಾದುವು ಅವರ ಕವನ ಸಂಕಲನಗಳು. ದಿ. ಕೊಳಂಬೆ ಪುಟ್ಟಣ್ಣ ಗೌಡರು ಕಾಲೂರ ಚೆಲುವೆ ಯ ಅಚ್ಚಗನ್ನಡ ಪ್ರಯೋಗ ಕುತೂಹಲಕಾರಿ.ಪೂರ್ಣ ಚಂದ್ರ ತೇಜಸ್ವಿಯವರ 'ಸೋಮುವಿನ ಸ್ವಗತಲಹರಿ', ಶ್ರೀಕೃಷ್ಣ ಆಲನಹಳ್ಳಿಯವರು 'ಮಣ್ಣಿನ ಹಾಡು', ಕಾಳೇಗೌಡ ನಾಗವಾರರ 'ಕರಾವಳಿಯಲ್ಲಿ ಗಂಗಾಲಗ್ನ', ಮು.ಶಿವನಂಜಯ್ಯನವರ 'ದಾರಿ ಮಗ್ಗುಲ ಹಾಡು', ಜಯಣ್ಣ ನವರ 'ನಡೆದಾಡುವ ಗುಲಾಬಿಗಳು' ಗಮನಾರ್ಹವಾದ ಕವನ ಸಂಕಲನಗಳು. ಕೆ.ಚಿದಾನಂದ ಅವರ 'ಎಂಜಿನಿಯರಿಂಗ್ ಗೀತೆಗಳು' ವಸ್ತುವಿನ ದೃಷ್ಟಿಯಿಂದ ಕನ್ನಡ ಕಾವ್ಯಕ್ಕೆ ಹೊರ ಆಯಾಮ ಕಲ್ಪಿಸುವ ಪ್ರಯತ್ನ. ಇತರ ಕವಿಗಳೆಂದರೆ ಜೀ. ಶಂ. ಪರಮಶಿವಯ್ಯ, ರಾಗೌ, ಬಿ.ರಾಜಣ್ಣ, ದೊಡ್ಡರಂಗೇಗೌಡ.ಕೆ.ಎಸ್.ಶಿವಪ್ಪ, ಮಳಲಿ ವಸಂತ ಕುಮಾರ್, ಜೆ.ಆರ್. ನಂಜುಂಡೇಗೌಡ, ಪಿ.ಕೆ.ರಾಜಶೇಖರ್, ಸದಾಶಿವ ಎಣ್ಣೆಹೊಳೆ, ಹನಸೋಗೆಮಹಾದೇವಯ್ಯ, ಎಂ. ರಾಮಕೃಷ್ಣ, ಜಿ.ವಿ.ದಾಸೇಗೌಡ, ಚಂದ್ರು, ಸಿದ್ದರಾಮಯ್ಯ, ಎ.ಕೆ. ಪ್ರಕಾಶ ಮುಂತಾದವರು. ಕವಯಿತ್ರಿಯಾಗಿ ಸರಸ್ವತೀಗೌಡ, ಅವರು ಮುಂಗಾರು ಸಂಕಲನದಿಂದ ಬೆಳಕಿಗೆ ಬಂದಿದ್ದಾರೆ.

ಕುವೆಂಪು ಅವರ ಭಾವಗೀತೆಗಳನ್ನೂ, ಶ್ರೀರಾಮಾಯಣದರ್ಶನವನ್ನು ಸಂಸ್ಕೃತಕ್ಕೆ ಭಾಷಾಂತರಿಸಿರುವ ಸಿ.ಜಿ. ಪುರುಷೋತ್ತಮ ಅವರ ಸಾಧನೆ ಆಶ್ಚರ್ಯಕರವಾದುದು.

**೨.ನಾಟಕ**

ಈ ಕ್ಷೇತ್ರದಲ್ಲಿ ಕೆ. ಗುಂಡಣ್ಣ, ಕೆ.ಸಿ. ಚೌಡಪ್ಪ ರೆಡ್ಡಿ, ಭರತೇಶ, ಎಂ. ರಾಮಕೃಷ್ಣ, ರಮೇಶ ಹುಲ್ಲುಕೆರೆ, ಸಿ.ಪಿ. ನಾಗರಾಜ್, ಡಿ. ಲಿಂಗಯ್ಯ, ತೇಜಸ್ವಿ, ಕೋಣಂದೂರು ಲಿಂಗಪ್ಪ, ಎಚ್.ಎ. ರಾಮಕೃಷ್ಣ, ಜವರಹಳ್ಳಿ ಸಿದ್ದಪ್ಪ, ಡಿ.ಸಿ. ಅನಂತಸ್ವಾಮಿ ಮುಂತಾದವರು ಕಂಡುಬರುತ್ತಾರೆ. ಕೆ.ಗುಂಡಣ್ಣನವರು ಪಂಚಭೂತ ಮುಂತಾದ

ಹಲವಾರು ನಾಟಕಗಳನ್ನು ಜನತೆಯನ್ನು ನಗಿಸಿ ನಲಿಸಿವೆ. ತೇಜಸ್ವಿಯವರ ಯಮಳ ಪ್ರಶ್ನೆ, ಭರತೇಶರ ಮಹಾಸನ್ನಿಧಾನ, ಸಿ.ಪಿ. ನಾಗರಾಜ ಅವರು ಹಾವು ಜವರಹಳ್ಳಿ ಸಿದ್ದಪ್ಪ ನವರು ಕಲ್ಲು ಹಿಡಿದವರು ಗಮನಸೆಳೆಯುವ ನಾಟಕಗಳು. ಕೆ.ವಿ. ಶಂಕರಗೌಡ ಪಾದುಕೂ ಕಿರೀಟ ಮತ್ತು ಶಿಷ್ಟಾಚಾರಗಳನ್ನು ವಿಶೇಷವಾಗಿ ಉಲ್ಲೇಖಿಸಬೇಕು.

೩. ಸಣ್ಣ ಕಥೆ

ಒಕ್ಕಲಿಗ ಜನಾಂಗದ ಕೆಲವು ಲೇಖಕರು ಈ ಕ್ಷೇತ್ರದಲ್ಲಿ ಒಳ್ಳೆಯ ಫಸಲು ತೆಗೆದಿದ್ದಾರೆ. ಜೀ.ಶಂ. ಪರಮಶಿವಯ್ಯ, ಬೆಸಗರಹಳ್ಳಿ ರಾಮಣ್ಣ, ಎಂ. ರಾಮಕೃಷ್ಣ, ಡಿ. ಕೃಷ್ಣಪ್ಪಗೌಡ, ಜಿ.ವಿ. ದಾಸೇಗೌಡ, ಕ್ಯಾತನಹಳ್ಳಿ ರಾಮಣ್ಣ, ಜವರನಹಳ್ಳಿ ಸಿದ್ದಪ್ಪ, ಡಿ. ಲಿಂಗಯಯ್ಯ, ರಮೇಶ ಹುಲ್ಲುಕೆರೆ ಡಾ.ಕರೀಗೌಡ ಬೀಚನಹಳ್ಳಿ ಮೊದಲಾದವರು. ಪರಮಸಿವಯ್ಯನವರ 'ಮಬ್ಬು ಜಾರಿದ ಕಣಿವೆಯಲ್ಲಿ ಮತ್ತು ಇತರ ಕತೆಗಳು', ಬೆಸಗರಹಳ್ಳಿ ರಾಮಣ್ಣನವರ 'ನೆಲದ ಒಡಲು' ಮತ್ತು 'ಒಂದು ಹುಡುಗನಿಗೆ ಬಿದ್ದ ಕನಸು', ಎಂ. ರಾಮಕೃಷ್ಣ ಅವರ 'ತೇರು ಬಂತು ತೌರಿಗೆ', ಜವರನಹಳ್ಳಿ ಸಿದ್ದಪ್ಪನವರ 'ಬೀಜಧಂಥ ಗಿಡಗಳು' ಸಂಕಲನಗಳು ಉಖ್ಯವಾದವು, ಇವುಗಳಲ್ಲಿ ಪ್ರಾದೇಶಿಕತೆಯ ಸೊಗಡು, ಸತ್ತ್ವಗಲನ್ನು ಕಾಣಬಹುದು. ಬೆಸಗರಹಳ್ಳಿ ರಾಮಣ್ಣನವರದು ಬಂಡಾಯ ಧೋರಣೆ, 'ಬೆಟ್ಟೆಸಾಲು' ಮಳೆ ಸಂಕಲನದ ಕಾಳೇಗೌಡ ನಾಗವಾರ ಅವರದು ಅದೇ ಪಂಥ. ತೇಜಸ್ವಿಯವರ' ಹುಲಿಯೂರಿನ ಸರಹದ್ದು ಹಾಗೂ 'ಅಬಚೂರಿನ ಪೋಸ್ಟಾಫೀಸು' ಕನ್ನಡ ಸಣ್ಣ ಕಥೆಯ ರಂಗದಲ್ಲಿ ಹೊಸ ಮೈಲುಗಲ್ಲುಗಳಾದುವು. ಶ್ರೀಕೃಷ್ಣ ಆಲನಹಳ್ಳಿಯವರು 'ತಪ್ತ' ಮತ್ತು 'ಫೀನಿಕ್ಸ್', ಸಿ.ಬಿ. ಸಣ್ಣಪ್ಪನವರು ತೇಪೆ, ಶ್ರೀಕಂಠ ಕೂಡಿಗೆಯವರ 'ನಮ್ಮಿಬ್ಬರ ನಡುವೆ' ಡಾ.ಕರೀಗೌಡ ಬೀಚನಹಳ್ಳಿಯವರ ಸೃಜನಶೀಲ ಕಥೆಗಳನ್ನು ಹೆಸರಿಸಬೇಕು. ಬಿ. ರಾಜಣ್ಣ, ಮಳಲಿ ವಸಂತ ಕುಮಾರ್ ಮುತಾದವರು ಇತರ ಕತೆಗಾರರು. ಡಿ.ಹೆಚ್. ಹನುಮರವರ 'ಗೌಡರು ಮಗಳು' ಎಲ್.ಸಿ. ಅಣ್ಣಯ್ಯನವರು 'ಗುಡಿಸಲಗುರು' ಇವು ಗಣನೀಯ. ಈ ದೃಷ್ಟಿಯಲ್ಲಿ ಪ್ರೊ.ಕರೀಗೌಡ ಬೀಚನಹಳ್ಳಿಯವರ ಶ್ರೀಮತಿಯವರಾದ ಕುಸುಮರವರು ಹೆಚ್ಚು ತೊಡಗಿಕೊಂಡಿದ್ದಾರೆ.

೪.ಕಾದಂಬರಿ

ತೇಜಸ್ವಿಯವರ 'ಕರ್ವಾಲೋ', ತೀರ ಸ್ವೋಪಜ್ಞ ವಾದ ಕಾದಂಬರಿ. ಶ್ರೀಕೃಷ್ಣ ಆಲನಹಳ್ಳಿಯವರ 'ಕಾಡು', ಹಾಗೂ 'ಪರಸಂಗದ ಗೆಂಡೆತಿಮ್ಮ' ಸಾಕಷ್ಟು ಪ್ರಸಿದ್ದವಾಗಿವೆ. ಮು. ಶಿವನಂಜಯ್ಯನವರು ಜವನೂರಿನ ವೃತ್ತಾಂತ ಮತ್ತು ಸಿವರಾಮೇಗೌಡ ನಾಗವಾರರ ಹೆಪ್ಪು ಹೆಪ್ಪು ತುಂಬಾಬರವಸೆ ಕಾದಂಬರಿಗಳು. ಹನಯೋಗೆ ಮಹಾದೇವಯ್ಯ, ಕಚ್ಚಿಗೆರೆ ಸಿದ್ದೇಗೌಡ ಎಂ. ರಾಮಕೃಷ್ಣ, ಅರ್ಜನಪುರಿ ಅಪ್ಪಾಜಿಗೌಡ, ಕಡಿದಾಳ್ ಮಂಜಪ್ಪ, ಮಲ್ಲಿಕಾ, ಸುಶೀಲ ಹೊನ್ನೇಗೌಡ, ದುರ್ಗದ ರಾಜೆಗೌಡ ಮುಂತಾದವರು ಕಾದಂಬರಿ ಪ್ರಕಾರಕ್ಕೆ ತಮ್ಮ ಕೊಡುಗೆ ಸಲ್ಲಿಸಿದ್ದಾರೆ. ಇವರಲ್ಲಿ ಮಲ್ಲಿಕಾ ಅವರು ಹಲವಾರು ಕಾದಂಬರಿಗಳ ಕರ್ತೃ, ಕಡಿದಾಳರ ಪಂಜರವಲ್ಲಿಯ ಪಂಜನ್ನು ಕ್ರಾಂತಿಧ್ಯೇಯದ ಕಾದಂಬರಿಯಾಗಿ ಉಲ್ಲೇಖನೀಯ.

೫. ವಿಮರ್ಶೆ

ಎನ್. ಬೋರಲಿಂಗಯ್ಯ, ಕೆ.ಎಸ್. ಭಗವಾನ್, ರಾಗೌ, ಮಳಲಿ ವಸಂತಕುಮಾರ್, ಶಿವರಾಮ ಕಾಡಕುಪ್ಪೆ, ಎಂ.ಶಿವನಂಜಯ್ಯ ಮೊದಲಾದವರು ಈ ಪ್ರಕಾರದ ಸಮರ್ಥ ಲೇಖಕರು. ಬೋರಲಿಂಗಯ್ಯನವರ 'ಸಂಕರ್ಷ',

ಭಗವಾನ್ ಅವರ 'ಅಂತರ್ಯ', ರಾಗೌ ಅವರ 'ಕುವೆಂಪು ಸಾಹಿತ್ಯ ವಿಮರ್ಶನ', ವಸಂತಕುಮಾರ್ ಅವರ 'ಕದಂಬ', ಕಾಡನಕುಪ್ಪೆಯವರ 'ಸಂವಹನ', ಶಿವನಂಜಯ್ಯನವರು 'ಬಿಚ್ಚು ಮನಸ್ಸು' ಉತ್ತಮ ಸಂಕಲನಗಳು. ಜೆ.ಆರ್. ನಂಜುಂಡೇಗೌಡ, ಡಿ.ಕೆ.ರಾಜೇಂದ್ರ, ಹ.ಕ. ಗಾಜೇಗೌಡ, ಎಂ. ರಾಮಕೃಷ್ಣ, ಅರ್ಜುನಪುರಿ ಅಪ್ಪಾಜಿಗೌಡ, ಸರಸ್ವತಿ ಬೋರಲಿಂಗಯ್ಯ, ಸ.ನ. ಗಾಯಿತ್ರಿ, ಎಸ್.ಬಿ. ಯಶೋಧರಾ ಮೊದಲಾದವರೂ ವಿಮರ್ಶಾತ್ಮಕ ಹೊತ್ತಗೆಗಳನ್ನು ಪ್ರಕಟಿಸಿದ್ದಾರೆ. ತೇಜಸ್ವಿಯವರ ಲೇಖನಗಳೂ ಗಮನಾರ್ಹ.

೬.ಭಾಷಾಂತರ

ಬಿ.ಕೆ. ತಿಮ್ಮಪ್ಪನವರ ಹೆಸರು ಈ ದಿಶೆಯಲ್ಲಿ ಎದ್ದು ಕಾಣುವಂಥದು. ಅವರು ಮಲೆಯಾಳದಿಂದ ಯಶಸ್ವಿಯಾಗಿ ಅನುವಾದ ಮಾಡಿದ್ದಾರೆ. ಕೆ.ಎಸ್. ಭಗವಾನ್ 'ಜೂಲಿಯಸ್ ಸೀಸರ್' ನಾಟಕವನ್ನು ಸ್ತುತ್ಯವಾಗಿ ಅನುವಾದಿಸಿದ್ದಾರೆ. ಎಚ್.ಎಚ್. ಅಣ್ಣಯ್ಯನವರ 'ಮೃಗಪ್ರಭುತ್ವ' ಮತ್ತು 'ಮಿಲಿಂಟನ್ ಸಿಂಗ್‌ನ ನಾಟಕಗಳು' ಭಾಷಾಂತರ ವಲಯಕ್ಕೆ ಒಳ್ಳೆಯ ಕೊಡುಗೆ, ಸೋ.ಕೆಂ. ರಾಮಣ್ಣನವರ 'ಒಬತ್ತು ನರಭಕ್ಷಕಗಳು ಮತ್ತು ಒಂದು ಪುಂಡು ಆನೆ' ಎಂಬ ಅನುವಾದ ಕೃತಿ ಸ್ವಾರಸ್ಯಪೂರ್ಣವಾಗಿದೆ. ಜಿ.ಎ.ರೆಡ್ಡಿಯವರು 'ಒಡಿಸ್ಸಿ'ಯನ್ನು ಕನ್ನಡಿಸಿದ್ದಾರೆ. ಕೆ.ವಿ.ಶಂಕರಗೌಡ 'ಪ್ಯಾರೇಲಾಲರು' 'ಮಹಾತ್ಮಗಾಂಧಿ ಲಾಸ್ಟ್ ಫೇಸ್' ಎಂಬ ಬೃಹದ್ಗ್ರಂಥದ ಪ್ರಥಮ ಸಂಪುಟವನ್ನು ಮಹಾತ್ಮ ಗಾಂಧಿ ಅಂತಿಮ ಹಂತ ಎಂಬ ಹೆಸರಿನಿಂದ ಅನುವಾದಿಸಿ, ಅತ್ಯಂತ ಸ್ಮರಣೀಯವಾದ ಕೆಲಸಮಾಡಿದ್ದಾರೆ.

೭.ಸಂಕೀರ್ಣ

ಪ್ರಬಂಧ, ಜೀ.ಶಂ. ಪರಮಶಿವಯ್ಯನವರು 'ಮೇದರ ಕಲ್ಲು ಮತ್ತು ಇತರ ಪ್ರಬಂಧಗಳು' ಜಿ.ಎ. ರೆಡ್ಡಿಯವರ 'ಮಾತಿನ ಬಳ್ಳಿ', ಮಿರ್ಲೆ ಕಾಂತರಾಜು ಅವರ 'ಪ್ರೇಮ ದರ್ಶನ',ಡಿ.ಆರ್. ಚನ್ನೇಗೌಡರ 'ದಿನಚರಿಧಾನ್ಯ' ಮೊದಲಾದವು ಪ್ರಬಂಧಕ್ಷೇತ್ರಕ್ಕೆಸಂದ ಕೊಡುಗೆಗಳು,

ಹಾಸ್ಯ ಕನ್ನಡದಲ್ಲಿ ವಿರಳವಾದ ಹಾಸ್ಯದ ಬರವಣಿಗೆಗೆ ಎಸ್.ಎಲ್. ಕೇಶವಮೂರ್ತಿಯವರದು ವೈಶಿಷ್ಟ್ಯ ಪೂರ್ಣವಾದ ಕೊಡುಗೆ. ಅವರ ಮಾನಸಪುತ್ರನಾದ 'ಕ್ಯಾತ' ಎಲ್ಲರಿಗೂ ಸುಪರಿಚಿತ. ಸದಾಶಿವ ಎಣ್ಣೆಹೊಲೆಯವರ ಸನ್ಮಾನದಲ್ಲೂ ಹಾಸ್ಯ ಲೇಖನಗಳಿವೆ.

ಪ್ರವಾಸ ಸಾಹಿತ್ಯ, ಹೊ. ಶ್ರೀನಿವಾಸಯ್ಯನವರ 'ನಾಕಂಡ ಜರ್ಮನಿ' ಈ ದಿಸೆಯಲ್ಲಿ ಉಲ್ಲೇಖಯೋಗ್ಯ. ಕಚ್ಚಿಗೆರೆ ಸಿದ್ದೇಗೌಡರು 'ಕಲಾಕಲಿಗಳ ಬೀಡು' ಎಂಬ ಪುಸ್ತಕ ಬರೆದಿದ್ದಾರೆ.

ಜೀವನ ಚರಿತ್ರೆ, ಹಿರಿಯ ಬರಹಗಾರರಲ್ಲಿ ಒಬ್ಬರಾದ ಡಿ.ಆರ್. ಚನ್ನೇಗೌಡರು ಅಶೋಕ, ಶ್ರೀರಾಮಕೃಷ್ಣ ಪರಮಹಂಸ ಮೊದಲಾದವರ ಜೀವನ ಚರಿತ್ರೆಗಳನ್ನು ಕೊಟ್ಟಿದ್ದಾರೆ. ಅಂತೆಯೇ ನ. ಭದ್ರಯ್ಯನವರು 'ಗಾಂಧೀಜಿಯ ಜೀವನ ಚರಿತ್ರೆ'ಯನ್ನುರಚಿಸಿದ್ದಾರೆ. ಸಿ.ಸಿಂಗ್ರಿಗೌಡರು 'ಚಾಮರಾಜೇಂದ್ರ ಒಡೆಯರ್' ಜೀವನ ಚರಿತ್ರೆಯನ್ನು ಬರೆದಿದ್ದಾರೆ.

ಆತ್ಮಕತೆ, ಎಚ್.ಕೆ. ವೀರಣ್ಣಗೌಡರ 'ಬದುಕು-ಮೆಲುಕು' ಈ ಪ್ರಕಾರಕ್ಕೊಂದು ಗಣನೀಯವಾದ ಕಾಣಿಕೆ. ಗ್ರಂಥ ಸಂಪಾದನೆ, ಈ ರಂಗದಲ್ಲಿ ಬಿ.ಎಸ್. ಸಣ್ಣಯ್ಯ ನವರು ದೊಡ್ಡ ಕೆಲಸಮಾಡಿದ್ದಾರೆ. ಅವರು ಸಂಪಾಧಿಸಿರುವ

ಪ್ರಾಚೀನ ಗ್ರಂಥಗಳು ಹಲವಾರು, ಅನುಪಲಬ್ಧವಾಗಿವೆ, ಇಮ್ಮುಡಿ ನಾಗಮ್ಮನ 'ವರ್ಧಮಾನ ಪುರಾಣ'ವನ್ನು ಬೆಳಕಿಗೆ ತಂದ ಕೀರ್ತಿ ಅವರದು. ಎಚ್.ಕೆ. ನರಸಿಂಹೇಗೌಡರು ರಸ ರತ್ನಾಕರ ವನ್ನು ಸಂಪಾದಿಸಿದ್ದಾರೆ. ವೈ. ಸಿ. ಬಾನುಮತಿ ಮತ್ತು ಹ.ಕ. ರಾಜೇಗೌಡರು ಕೆಲವು ಕೃತಿಗಳ ಸಂಪಾದಕರು.

**೪.ಇತರ ಹಿರಿಯ ಕಿರಿಯ ಲೇಖಕರು**

ಇದುವರೆಗೆ ಪ್ರಕಾರಾನುಗುಣವಾಗಿ ವರ್ಗೀಕರಿಸಿ ಹೆಸರಿಸಿದ ಲೇಖಕರಲ್ಲದೆ, ಇನ್ನೂ ಅನೇಕ ಮಂದಿ ಹಿರಿಯ, ಕಿರಿಯ ಒಕ್ಕಲಿಗ ಲೇಖಕರು ನಮ್ಮ ಗಮನ ಸೆಳೆಯುತ್ತಾರೆ. ಮಾನಪ್ಪ, ಜತ್ತಪ್ಪ ರೈ, ಏರ್ಯ ಲಕ್ಷ್ಮೀ ನಾರಾಯಣ ಆಳ್ವ, ದೇವಂಗಿ ಚಂದ್ರಶೇಖರ್, ಪಿ.ಎನ್.ಜವರಪ್ಪಗೌಡ, ಅನಸೂಯಾ ರಾಮರೆಡ್ಡಿ, ಎಚ್. ನಂಜೆಗೌಡ, ಹು.ಕಾ.ಜಯದೇವ, ಎ.ಟಿ. ದಾಸೇಗೌಡ, ಕೆ.ಟಿ. ವೀರಪ್ಪ, ಎಚ್. ನರಸಣ್ಣ, ದೊ.ನಾ. ರಾಮೇಶಗೌಡ, ರಾಮಲಿಂಗಯ್ಯ ಉಪ್ಪಿನಕೆರೆ, ಶು.ತ.ರಾಮೇಶಗೌಡ ಇತ್ಯಾದಿ ಸಂಶೋಧನಾ ಕ್ಷೇತ್ರದಲ್ಲಿ ಪ್ರೊ.ಹಿ.ಚಿ.ಬೋರಲಿಂಗಯ್ಯ, ಪ್ರೊ.ಸ.ಚಿ.ರಮೇಶ, ಪ್ರೊ.ದೇವರಕೊಂಡಾರೆಡ್ಡಿ, ಡಾ.ಮೋಹನ ಕೃಷ್ಣ ರೈಡಾ.ಎಚ್.ಡಿ.ಪ್ರಶಾಂತ್, ಡಾ.ಸುಬ್ಬಣ್ಣ ರೈ ಮೊದಲಾದವರ ಹೆಸರುಗಳನ್ನು ಗಮನಾರ್ಹವಾಗಿ ಕಂಡುಬರುತ್ತವೆ.

ಜತ್ತಪ್ಪ ರೈ ಅವರ 'ಬೇಟೆಯ ನೆನಪುಗಳು' ಮತ್ತು 'ಈಡೊಂದು ಹುಲಿಎರಡು' ಎಂಬ ಕೃತಿಗಳು ಪ್ರತ್ಯೇಕ ಉಲ್ಲೇಖಕ್ಕೆ ಅರ್ಹವಾಗಿವೆ. ತಮ್ಮ ಬರವಣಿಗೆ ಕಲೆಯಾಗಬೇಕೆಂದು ಲೇಖಕರು ಉದ್ದೇಶಿಸದಿದ್ದರೂ, ವಸ್ತುಮೌಲ್ಯದಿಂದಲೆ ಅವರ ರಚನೆಗಳು ಕನ್ನಡ ಸಾಹಿತ್ಯಕ್ಕೆ ಬೆಲೆಬಾಳುವ ಕೊಡುಗೆಗಳಾಗಿವೆ.

**೫.ಜಾನಪದ ಭೂಮಿಕೆ**

ಜಾನಪದ ಭೂಮಿಕೆಯಲ್ಲಿ ಒಕ್ಕಲಿಗರದೇ ಸಹಜವಾಗಿ ಸಿಂಹಪಾಲು, ಜನಪದಸಾಹಿತ್ಯದ ಸಂಗ್ರಹ, ಸಂಪಾದನೆಗಳನ್ನು ಮಾತ್ರವಲ್ಲದೆ ಜಾನಪದ ಸಂಬಂದವಾದ ಸಂಶೋಧನೆ, ಅಧ್ಯಯನಗಳನ್ನು ಅವರು ಬೇಕಾದಷ್ಟು ಮಾಡಿದ್ದಾರೆ. ಇಲ್ಲಿ ಅಂಥವರ ಒಂದು ಪಟ್ಟಿಯನ್ನು ನೀಡಬಹುದಾಗಿದೆ. ಕ.ರಾ.ಕೃ., ಎಚ್.ಎಲ್.ನಾಗೇಗೌಡ, ದೇಜಗೌ, ಹಾ.ಮಾ. ನಾಯಕ, ಜೀ.ಶಂ. ಪರಮಶಿವಯ್ಯ, ಡಿ.ಕೆ. ರಾಜೇಂದ್ರ, ಸಿ.ಪಿ.ಕೆ. ಸ್ವಾಮಿಗೌಡ, ಮಳಲಿ ವಸಂತ ಕುಮಾರ್, ಕಾಳೇಗೌಡ ನಾಗವಾರ, ರಾಗೌ, ಪಿ.ಕೆ. ರಾಜಶೇಖರ, ಡಿ.ಕೆ.ಈರೇಗೌಡ, ನಂ,ತಪಸ್ವಿಕುಮಾರ್, ಶ್ರೀಕಂಠ ಕೂಡಿಗೆ, ಸಂಧ್ಯಾರೆಡ್ಡಿ, ಸುಶೀಲ ಹೊನ್ನೆಗೌಡ, ಹ.ಕ.ರಾಜೇಗೌಡ, ಹಾ.ತಿ. ಕೃಷ್ಣೇಗೌಡ, ಎಚ್.ಎಸ್. ರಾಮಚಂದ್ರಗೌಡ, ನಾಗರತ್ನ ಕುಮಾರಿ, ಚಕ್ಕೆರೆಶಿವಶಂಕರ, ದೊ.ನಾ. ರಾಮೇಗೌಡ, ಎ.ಹಿರಿಯಣ್ಣ, ನಂ. ನಾರಾಯಣ ಗೌಡ, ನಗುವನ ಹಳ್ಳಿ ರತ್ನ, ತ.ಚಿ. ಚಲುವೇಗೌಡ, ಚೌಡೇಗೌಡ ಬೀತನಹಳ್ಳಿ, ಚಿಕ್ಕಲೂರು ಚನ್ನಪ್ಪ, ಬೋರೇಗೌಡ ಬಳದರೆ, ಎನ್.ಆರ್. ಚಂದ್ರಪ್ಪಕಾಳೇನಹಳ್ಳಿ, ನೀ. ಗಿರೀಗೌಡ ಪ್ರೊ.ಹಿ.ಚಿ.ಬೋರಲಿಂಗಯ್ಯ ಇತ್ಯಾದಿ.

ಕನ್ನಡ ಸಾಹಿತ್ಯಕ್ಕೆ ಒಕ್ಕಲಿಗ ಜನಾಂಗದ ಕೊಡುಗೆ ಗಾತ್ರದಲ್ಲಾಗಲಿ ಗುಣದಲ್ಲಾಗಲಿ ಕಡಮೆಯಲ್ಲವೆಂಬುವುದು ಇದುವರೆಗಿನ ಮೇಲುನೋಟದಿಂದಲೇ ವಿದಿತವಾಗುತ್ತದೆ. ಒಬ್ಬೊಬ್ಬ ಲೇಖಕರನ್ನೂ ಕುರಿತು ವಿಸ್ತೃತವಾದ ವ್ಯಾಸಂಗಕ್ಕೆ ಅವಕಾಶವಿದೆ. ಇಲ್ಲಿ ಅದು ಅನುದಿಷ್ಟ ಮತ್ತು ಅಸಾಧ್ಯ. ಈ ಬರಹದಲ್ಲಿ ಯಾರು ಹೆಸರಾದರೂ ಬಿಟ್ಟು ಹೋಗಿದ್ದರೆ ಅದಕ್ಕೆ ಕಾರಣ ನನ್ನ ಅಜ್ಞಾನ ಅಥವಾ ಮರವೆಯೇ ಹೊರತು ಅವಜ್ಞೆಯಲ್ಲ. ಶಾಸ್ತ್ರಗ್ರಂಥಕಾರರನ್ನು ಇಲ್ಲಿ ಗಣನೆಗೆ ತೆಗೆದುಕೊಂಡಿಲ್ಲವೆಂಬುದನ್ನು ಸೇರಿಸಬೇಕು.

## ೪.೨ ಶಿಕ್ಷಣ ಕ್ಷೇತ್ರಕ್ಕೆ ಒಕ್ಕಲಿಗರ ಕೊಡುಗೆ

ಪ್ರಾಚೀನ ಭಾರತೀಯ ಸಾಮಾಜಿಕ ವ್ಯವಸ್ಥೆಯಲ್ಲಿ ಶಿಕ್ಷಣ ಕ್ಷತ್ರಿಯರಿಗೆ ವೈಶ್ಯರಿಗೆ ಹಾಗೂ ಬ್ರಾಹ್ಮಣರಿಗೆ ಮಾತ್ರ ಎಂಬ ಒಂದು ನಿರ್ದಿಷ್ಟವಾದ ಸಾಮಾಜಿಕ ವ್ಯವಸ್ಥೆ ನಿರ್ಮಾಣವಾಗಿತ್ತು. ರಾಜ ಗುರುಗಳು ವಿದ್ಯಾಧಾನ ಸರ್ವಶ್ರೇಷ್ಠವಾದ ದಾನವೆಂದು ತಿಳಿದು ಅದರ ಬೆಳವಣಿಗೆಗೆ ಸಾಕಷ್ಟು ಉದಾರವಾದ ಪ್ರೋತ್ಸಾಹ, ಪೋಷಣೆ ನೀಡುತ್ತಿದ್ದರು. ಆಗ ಬಹುಮಟ್ಟಿಗೆ ಆ ರಾಜರ ಪೋಷಣೆಯ ಮುಂಚೂಣೆಯಲ್ಲಿ ವೈದೀಕರೇ ಇರುತ್ತಿದ್ದುರಿಂದ, ವಿದ್ಯಾಪ್ರಸಾರ ಕೆಲವೇ ಜಾತಿಗಳಿಗೆ ಮಾತ್ರ ಸೀಮಿತವಾಗಿತ್ತು. ಇದು ಪ್ರಾಚೀನ ಕರ್ನಾಟಕ ಶೈಕ್ಷಣಿಕ ಪದ್ಧತಿಯ ಚಿತ್ರವೂ ಹೌದು.

ಇಪ್ಪತ್ತನೆಯ ಶತಮಾನದ ಎಂಬತ್ತರ ದಶಕದಲ್ಲಿರುವ ನಾವು ಶಿಕ್ಷಣ ಕ್ಷೇತ್ರಕ್ಕೆ ಒಕ್ಕಲಿಗ ಜನಾಂಗದ ಕೊಡುಗೆ ಏನೆಂಬುದನ್ನು ಅವಲೋಕಿಸುವ ಮೊದಲು, ಪ್ರಾಚೀನ ಕಾಲದಲ್ಲಿ ಶಿಕ್ಷಣ ಪದ್ಧತಿ ಮತ್ತು ಕ್ಷೇತ್ರ ಹೇಗಿತ್ತು ಎಂಬುದನ್ನು ಇಲ್ಲಿ ಸಂಕ್ಷಿಪ್ತವಾಗಿ ಪ್ರಸ್ತಾಪಿಸುವುದು ಸೂಕ್ತವೆಂದು ತಿಳಿಯುತ್ತೇನೆ. ಪ್ರಾಚೀನ ಹಾಗೂ ಮಧ್ಯಕಾಲಿನ ಕರ್ನಾಟಕದಲ್ಲಿ ಶಿಕ್ಷಣವು ಕೆಲವು ನಿರ್ದಿಷ್ಟವಾದ ಕ್ರಮ, ಗುರಿ ಹಾಗೂ ನೀತಿಯನ್ನು ಹೊಂದಿತ್ತು. ಅಗ್ರಹಾರಗಳು, ಮಠಗಳು, ದೇವಸ್ಥಾನಗಳು, ಬ್ರಹ್ಮಪುರಿಗಳು ಮತ್ತು ಘಟಿಕಾಸ್ಥಾನಗಳು, ವಿದ್ಯಾಕೇಂದ್ರಗಳಾಗಿದ್ದುವೆಂದು ಕರ್ನಾಟಕದ ಸಾಂಸ್ಕೃತಿಕ ಚರಿತ್ರೆಯಿಂದ ತಿಳಿದುಬರುವ ಬಹುಮುಖ್ಯ ಸಂಗತಿಯಾಗಿದೆ. ಪ್ರಾಚೀನ ಕಾಲದಲ್ಲಿ ಶಿಕ್ಷಣ ಪದ್ಧತಿ ತುಂಬಾ ಕಠಿಣ ಮಯವಾಗಿತ್ತು. ಮಕ್ಕಳು ಮಣ್ಣಿನ ಅಥವಾ ಮರಳಿನ ಮೇಲೆ ಅಕ್ಷರಭ್ಯಾಸ ಮಾಡುತ್ತಿದ್ದರು. ಪ್ರಾಥಮಿಕ ಶಿಕ್ಷಣಹಂತದಲ್ಲಿಮಕ್ಕಳಿಗೆ ಬಾಲಭೋಧ ಎಂಬ ಶಿಕ್ಷಣಪದ್ಧತಿಯೊಂದು ಪ್ರಚಲಿವಾಗಿತ್ತೆಂದು ತಿಳಿದು ಬರುತ್ತದೆ. ಧೂಳಿನ ಮೇಲೆ ಅಕ್ಷರ ತಿದ್ದುವ, ಕಲಿಯುವ ಅಭ್ಯಾಸನಡೆಸಿ ಮುಂದೆ ಕಾಗದದ ಮೇಲೆ ಬರೆಯುವ ಪದ್ಧತಿಯಾಗಿರೂಪುಗೊಂಡಿತು. ಆಗ ಶಿಕ್ಷಣದಲ್ಲಿ ಅಭ್ಯಾಸಮಾಡುವುದೆಂದರೆ, ಜೈಮಿನಿ ಭಾರತ, ವಿದುರ ಲೀತಿ, ಅಮರ ಕೋಶ, ಪಂಚತಂತ್ರ, ಸೋಮೇಶ್ವರ ಶತಕ, ರಾಜಶೇಖರ ವಿಳಾಸ ಮುಂತಾದ ಗ್ರಂಥಗಳನ್ನು ಓದುವುದನ್ನು ಕಲಿಸುವುದು ಎಂಬ ಅರ್ಥವಿತ್ತು. ಅಂದು ನೀತಿಯೇ ಶಿಕ್ಷಣದಲ್ಲಿ ಪ್ರಧಾನವಾದ ತತ್ವವಾಗಿತ್ತು. ಸಂವತ್ಸರವನ್ನು, ನಕ್ಷತ್ರಗಳನ್ನು, ದಿಕ್ಸೂಚಿ ವಿವರಗಳನ್ನು, ದೇವರ ಮಹಿಮಾ ವಿಶೇಷಗಳನ್ನೂ ಸುತ್ತಿಸುವುದು, ಹಲವು ಬಗೆಯ ದೇವರ ಮೇಲೆ ಕಟ್ಟಿದ ಹಾಡಗಳನ್ನು ಬಾಯಿಪಾಠ ಮಾಡಿಸುವುದು ಇವು ಅಂದಿನ ಶಿಕ್ಷಣ ಕ್ರಮವಾಗಿತ್ತು. ಅಧ್ಯಾತ್ಮಿಕ ಶಿಕ್ಷಣ ಅಂದು ಬಹುಮಟ್ಟಿಗೆ ಪ್ರಧಾನ ಪಾತ್ರ ವಹಿಸಿತ್ತೆಂದು ತಿಳಿದುಬರುತ್ತದೆ.

ಅಂದು ಸೀಮಿತವಾದ ಜನಕ್ಕೆ ಮಾತ್ರ ಮೀಸಲಾಗಿದ್ದ ವಿದ್ಯಾಭ್ಯಾಸ ರಾಜ ಗುರುಗಳ ಆಸ್ಥಾನದಲ್ಲಿ, ಬ್ರಾಹ್ಮಣರ ಆಗ್ರಹಾರಗಳಲ್ಲಿ ಮಾತ್ರ ಕೇಂದ್ರಿಕೃತವಾಗುತ್ತದೆ. ಶ್ರೀ ಸಾಮಾನ್ಯ ಅಂದು ಶಿಕ್ಷಣದಿಂದ, ವಿದ್ಯೆಯಿಂದ, ವಂಚಿತನಾಗಿದ್ದ. ಶೂದ್ರರಾಗಲಿ, ಅಸ್ಪೃಶ್ಯರಾಗಲಿ, ಆರ್ಶೇಯ ಗ್ರಂಥಗಳನ್ನು ಓದುವುದಿರಲಿ ಹೆಸರುಗಳನ್ನು ಹೇಳುವಂತೆಯೂ ಇರಲಿಲ್ಲ. ಹೇಳಿದರೆ ಅವರಿಗೆ ಕಠಿಣ ಶಿಕ್ಷೆಯಾಗುತ್ತದೆ. ಸ್ತ್ರೀಯರಂತೂ ವಿಧ್ಯೆಯಿಂದ ಸಂಪೂರ್ಣವಾಗಿ ತಿರಸ್ಕರಿಸಲ್ಪಟ್ಟಿದ್ದರು. ಆಕೆ ಹುಟ್ಟಿನಿಂದ ವೈದಿಕಳಾಗಿದ್ದರೂ ಸ್ವಾತಂತ್ರ್ಯ, ಸಮಾನತೆ ವಿದ್ಯೆಯಿಂದ ಶೂದ್ರರಿಗೆ ಸಮಾನವಾಗಿ ಬದುಕುತ್ತಿದ್ದಳು. ಶಿಕ್ಷಣ ಕ್ಷತ್ರಿಯರಿಗೆ, ವೈಶ್ಯರಿಗೆ, ಬ್ರಾಹ್ಮಣ ಪುರುಷರಿಗೆ ಮಾತ್ರ ಎಂಬ ಒಂದು ನಿರ್ದಿಷ್ಟವಾದ ಸಾಮಾಜಿಕ ವ್ಯವಸ್ಥೆ ನಿರ್ಮಾಣವಾಗಿತ್ತು. ರಾಜ ಗುರುಗಳು ವಿದ್ಯಾಧಾನ ಸರ್ವ

ಶ್ರೇಷ್ಠವಾದ ದಾನವೆಂದು ತಿಳಿದು ಅದರ ಬೆಳವಣಿಗೆಗೆ ಸಾಕಷ್ಟು ಉದಾರವಾದ ಪ್ರೋತ್ಸಾಹ ಪೋಷಣೆ ನೀಡುತ್ತಿದ್ದರು. ಆಗ ಬಹುಮಟ್ಟಿಗೆ ಆ ರಾಜರ ಪೋಷಣೆಯ ಮುಂಚೂಣಿಯಲ್ಲಿ ವೈದಿಕರೆ ಇರುತ್ತಿದ್ದುದರಿಂದ ವಿದ್ಯಾಪ್ರಸಾರ ಕೆಲವೇ ಜಾತಿಗಳಿಗೆ ಮಾತ್ರ ಸೀಮಿತವಾಗಿತ್ತು. ಇದು ಪ್ರಾಚೀನ ಕರ್ನಾಟಕದ ಶೈಕ್ಷಣಿಕ ಪದ್ಧತಿಯ ಚಿತ್ರವೂ ಹೌದು. ಒಂದರ್ಥದಲ್ಲಿ ಇಂದಿನ ಶಿಕ್ಷಣ ಪದ್ಧತಿಯೂ ಹೌದು.

**೨.ವಿಕೇಂದ್ರೀಕರಣ**

ಮೇಲಿನ ಇಂಥ ವ್ಯವಸ್ಥೆ ಇಪ್ಪತ್ತನೆಯ ಶತಮಾನದ ಅರ್ಧಭಾಗದವರಿಗೆ ಬಹುಮಟ್ಟಿಗೆ ನಡೆದು ಬಂದುದು ನಮ್ಮ ಇತಿಹಾಸ ದುರಂತಗಳಲ್ಲಿ ಒಂದು. ಇಂಥ ವ್ಯವಸ್ಥೆಯ ವಿರುದ್ಧ ಕರ್ನಾಟಕ ಸಾಂಸ್ಕೃತಿಕ ಇತಿಹಾಸದಲ್ಲಿ ಪ್ರತಿಭಟನಾರೂಪವಾದ ಶಕ್ತಿಯೊಂದು ಅಂತರ್ಗಾಮಿಯಾಗಿ ಹರಿದು ಬಂದಿರುವುದು ಅಷ್ಟೇ ಕರಾಳ ಸತ್ಯ. ಆದರೆ ಇಂಥಹ ಶಿಕ್ಷಣ ಪದ್ಧತಿ ಈ ಶತಮಾನದ ಆರಂಭದಿಂದಾಚೆಗೆ ವಿಕೇಂದ್ರಿಕರಣ ವ್ಯವಸ್ಥೆಯತ್ತ ಬೆಳೆದದ್ದು, ಅದರ ಉತ್ತಮ ಬೆಳವಣಿಗೆಯಲ್ಲಿ ಒಂದು ಎಂದು ಹೇಳಬಹುದು. ಇತಿಹಾಸದಲ್ಲಿ ಶೂದ್ರನೊಬ್ಬ ವಿದ್ಯೆ ಕಲಿಯುವುದಕ್ಕೆ ಸಾಧ್ಯವಾದುದು ಬಸವಣ್ಣನವರ ಸಮಾಜದಲ್ಲಿ ಮತ್ತು ಶಿಕ್ಷಣದ ಎಲ್ಲಾ ಸವಲತ್ತಗಳೂ, ಸೌಲಭ್ಯಗಳು, ಎಲ್ಲಾ ಜನಾಂಗಕ್ಕು ದೊರಯುವಂತಾದುದು ಈ ಶತಮಾನದಲ್ಲಿ. ಪ್ರಾಚೀನ ಕಾಲದಲ್ಲಿ ವಿಧಿನಿಷೇದಗಳು ಸಡಿಲವಾಗಿ, ಶಿಕ್ಷಣ ವೈಚಾರಿಕತೆಯತ್ತ ಸಾಗಿದ್ದು ಈ ಶತಮಾನದಲ್ಲಿಯೇ, ಇಪ್ಪತ್ತನೆಯ ಶತಮಾನದ ಶಿಕ್ಷಣ ಪದ್ಧತಿಯ ಬಗ್ಗೆ ಅವಲೋಕಿಸುವುದಕ್ಕೆ ಮುಂಚೆ ಬುದ್ಧ ಮತ್ತು ಬಸವಣ್ಣನವರ ಶಿಕ್ಷಣ ಪದ್ಧತಿಯ ಸ್ವರೂಪವನ್ನು ಇಲ್ಲಿ ಸಂಕ್ಷಿಪ್ತವಾಗಿ ಪ್ರಸ್ತಾಪಿಸಿದರೆ, ಪ್ರಸ್ತುತ ಪ್ರಭಂದದಿಂದ ಹೊರತಾಗುವುದಿಲ್ಲವೆಂದು ಭಾವಿಸುತ್ತೇನೆ.

**೩. ಬುದ್ಧ ಮತ್ತು ಬಸವಣ್ಣನವರ ಕಾಲದಲ್ಲಿ**

ಬುದ್ಧ ಮತ್ತು ಬಸವಣ್ಣನವರ ಕಾಲದಲ್ಲಿ ಶಿಕ್ಷಣ ಪದ್ಧತಿ ಪ್ರಾಚೀನ ಪರಂಪರೆಗಿಂತ ಬಹುಮಟ್ಟಿಗೆಭಿನ್ನವಾಗಿತ್ತು ಬೌದ್ಧರ ಕಾಲದಲ್ಲಿ ಬೌದ್ಧವಿಹಾರ ಅಥವಾ ಮಠಗಳು ಶಿಕ್ಷಣಕೇಂದ್ರಗಳಾಗಿದ್ದವು. ಬೌದ್ಧ ಧರ್ಮವು ಸಮಾನತೆಯನ್ನು ಮತ್ತು ಸ್ವತಂತ್ರ್ಯವನ್ನು ಬೋದಿಸುವುದರ ಮೂಲಕ ಶ್ರೀಸಾಮಾನ್ಯರಲ್ಲಿ ಪ್ರಜ್ಞೆಯನ್ನು ಮೂಡಿಸಿದ ಧರ್ಮ. ಬೌದ್ಧ ವಿಹಾರಗಳಲ್ಲಿ ಮಕ್ಕಳಿಗೆ ಏಳು ವರ್ಷವಾಗುತ್ತಲೆ ಮುಖ್ಯವಾಗಿ ಐದು ಗುಣಗಳು , ವಿಜ್ಞಾನ ವ್ಯಾಕರಣ, ಕುಶಲ ವೃತ್ತಿಗಳು, ಜೋತಿಷ್ಯ ಮತ್ತು ವೈದ್ಯಕೀಯ ಶಿಕ್ಷಣ ಪದ್ಧತಿಯನ್ನು ಬೋದಿಸಲಾಗುತ್ತಿತ್ತು. ಸತ್ಯ ಮತ್ತು ಮಿಥ್ಯೆಗಳ ಪೂರ್ಣವಾದ ಚರ್ಚೆಗೆ ಬೌದ್ಧ ವಿಹಾರಗಳು ಪೂರ್ಣ ಬೆಂಬಲ ಕೊಟ್ಟಿದ್ದುವೆಂದು ತಿಳಿದು ಬರುತ್ತದೆ. ಇದು ಈ ಧರ್ಮದ ಮುಖ್ಯ ಸಂಗತಿಗಳಲ್ಲಿ ಒಂದಾಗಿತ್ತು. ಈ ಶತಮಾನದ ಭಾರತದ ಸಂವಿಧಾನದ ನೇತಾರರಲ್ಲೊಬ್ಬರಾದ ಭಾರತರತ್ನ ಡಾ.ಬಿ.ಆರ್.ಅಂಬೇಡ್ಕರ್ ಅವರು ಬೌದ್ಧ ಧರ್ಮಕ್ಕೆ ಮತಾಂತರವಾದುದರಿಂದಲೇ ಬೌದ್ಧಧರ್ಮದಲ್ಲಿನ ಸಮಾನತೆಯನ್ನು, ಅದರ ವಿಶಿಷ್ಟತೆಯನ್ನೂ ಅರಿಯ ಬಹುದಾಗಿದೆ. ಈ ಹಂತದಲ್ಲಿ ಅವರು ಈ ಶತಮಾನದ ಸಮಾನತೆಗಾಗಿ ಹೋರಾಡಿದ ಹರಿಕಾರರಾಗಿದ್ದಾರೆ.

ಸಮಾಜ ಸುಧಾರಕ ಬಸವಣ್ಣನವರ ಕಾಲದಲ್ಲಿ ಶಿಕ್ಷಣದ ಅನುಕೂಲತೆಗಳು ಇನ್ನೂ ಅತ್ಯಂತ ಕೆಳಜಾತಿಯ, ಕೆಳ ವರ್ಗದ ಜನರವರೆಗೂ ತಲುಪುವಂತಾಯಿತು. ಕರ್ನಾಟಕದ ಸಾಂಸ್ಕೃತಿಕ ಇತಿಹಾಸದಲ್ಲಿ ಈ ಹನ್ನೆರಡನೆಯ ಶತಮಾನ ಅತ್ಯಂತ ವಿಶಿಷ್ಟವಾದುದು. ಸಾಮಾಜಿಕ, ಆರ್ಥಿಕ, ಧಾರ್ಮಿಕವಾಗಿ ಆದ ಕೆಲವು ಪ್ರಮುಖ ಬದಲಾವಣೆಗಳನ್ನು ಈ ಯುಗದಲ್ಲಿ ಕಾಣಬಹುದು. ಈ ಆಂದೋಲನ ಮುಂಚೂಣೆಯಲ್ಲಿದ್ದವರು ಬಸವಣ್ಣ

ಎನ್ನುವುದಕ್ಕಿಂತ ಮುಖ್ಯವಾಗಿ ಶ್ರೀಸಾಮಾನ್ಯರು ಎನ್ನಬಹುದು. ಈ ಶತಮಾನದಲ್ಲಿ ಅನೇಕ ಮತಗಳು ಹುಟ್ಟಿ ಸಮಾಜದಲ್ಲಿನ ಅಜ್ಞಾನ, ಅನಕ್ಷರತೆಯ ಸುಧಾರಣೆಗೆ ಹೆಚ್ಚು ಹೋರಾಡಿದರು. ಶ್ರೀಸಾಮಾನ್ಯರು ಎಚ್ಚೆತ್ತುಕೊಂಡರು. ದಲಿತರು, ಚಮ್ಮಾರರು, ಕಮ್ಮಾರರು, ಸ್ತ್ರೀಯರು ಅಕ್ಷರಕಲಿಯುವುದನ್ನು, ಅನ್ಯಾಯಗಳ ವಿರುದ್ಧ ಪ್ರತಿಭಟಿಸುವುದನ್ನೂ, ಉಚ್ಚ ವರ್ಗದ ಜನರ ವಿರುದ್ಧ ಪ್ರಭುತ್ವವನ್ನು ಧಿಕ್ಕರಿಸುವುದನ್ನೂ ಕಲಿತರು. ಅಂತರ್‌ಜಾತಿವಿವಾಹಗಳು ಜರುಗಿದವು. ಕನ್ನಡ ಭಾಷೆಗೆ ಇಲ್ಲಿ ಅತ್ಯಂತ ಮುಖ್ಯಸ್ಥಾನ ಸಿಕ್ಕಿತು. ಜಾತಿ, ಲಿಂಗ ಭೇದವಿಲ್ಲದೆ ಎಲ್ಲರಿಗೂ ಶಿಕ್ಷಣ ದಕ್ಕಿತು. ಜನಗಳಲ್ಲಿ ಸಾಕ್ಷರತೆ ಮೂಡಿಸಲು ಹಾಗೂ ಓದಿಸಲು ಮಠ, ತಾಳೆ ಮರವಗರಿ, ಹೀಗೆ ವಿದ್ಯಾಕೇಂದ್ರಗಳು ಹುಟ್ಟಿಕೊಂಡವು. ವೃತ್ತಿ ಶಿಕ್ಷಣಕ್ಕೆ ಹೆಚ್ಚು ಮಹತ್ವ ನೀಡಲಾಯಿತು. ನೂಲುವುದು, ನೇಯುವುದು, ವೈದ್ಯಕೀಯ ಹಾಗೂ ವ್ಯವಸಾಯ ಶಾಸ್ತ್ರ ಬೋಧಿಸುವುದು ಇವೆಲ್ಲಾ ಶಿಕ್ಷಣದ ಬೇರೆ ಬೇರೆ ಅಂಗಗಳಾಗಿದ್ದವು. ಸಾಮಾಜಿಕ ಸುಧಾರಣೆಗೆ ಎಲ್ಲಾ ಜನರಿಗೂ ಶಿಕ್ಷಣದ ಅವಶ್ಯಕತೆ ಬಹುಮುಖ್ಯ ಎಂಬ ತಿಳಿವಳಿಕೆ ಸಮಾಜದಲ್ಲಿ ಮೂಡಿದುದು ಈ ಶತಮಾನದ ಹೆಚ್ಚಳಗಳಲ್ಲಿ ಬಹುಮುಖ್ಯ ಅಂಶ.

**೪. ಮಧ್ಯಕಾಲಿನ ಕರ್ನಾಟಕ**

ಮಧ್ಯಕಾಲಿನ ಕರ್ನಾಟಕದಲ್ಲಿ ಅಧಿಕಾರವು ಬಹುಮಟ್ಟಿಗೆ ವಿಕೇಂದ್ರಿಕೃತವಾಗಿತ್ತು. ಅದರ ಫಲವಾಗಿ ಅಲ್ಲಲ್ಲಿ ಸಣ್ಣ ಪುಟ್ಟ ರಾಜ್ಯಗಳು ಕರ್ನಾಟಕದಲ್ಲಿ ಅಸ್ತಿತ್ವದಲ್ಲಿದ್ದುವು. ಅವುಗಳಲ್ಲಿ ಕೆಲವು ಸಾರ್ವಭೌಮತ್ತ್ವವನ್ನು ಪಡೆದಿದ್ದರೆ, ಮತ್ತೆಕೆಲವು ವಿಜಯನಗರದ ಅಥವಾ ಇತರ ಅರಸರು ಆಧೀನತೆಗೆ ಒಳಗಾಗಿದ್ದವು. ಹೀಗೆಯೇ ವಿಜಯನಗರದ ಅಧೀನದಲ್ಲಿ ಬೆಳೆದುಬಂದದ್ದು ಯಲಹಂಕ ನಾಡು ಪ್ರಭುಗಳ ಪ್ರಭುತ್ವ. ಕರ್ನಾಟಕದ ಇತಿಹಾಸದಲ್ಲಿ ಈ ಪ್ರಭುಗಳ ಆಳ್ವಿಕೆಯಲ್ಲಿ ಮುಮ್ಮಡಿ ಕೆಂಪೇಗೌಡ ಗಮನಾರ್ಹ ವ್ಯಕ್ತಿಯಾಗಿದ್ದಾನೆ. ಈ ಮನೆತನದ ಆಳ್ವಿಕೆಯು ಮೂರು ಶತಮಾನಗಳವರೆಗೆ ಕರ್ನಾಟಕ ಇತಿಹಾಸದಲ್ಲಿ ಜೀವಂತವಾಗಿದ್ದ, ನಂತರ ಕ್ರಿ. ಶ. ೧೭೨೮ ರಲ್ಲಿ ಮೈಸೂರಿನ ದೊಡ್ಡ ದೇವರಾಜ ಒಡೆಯರಿಗೆ ಸೋಲುವುದರ ಮೂಲಕ ತನ್ನ ಆಳ್ವಿಕೆಯನ್ನು ಕೊನೆಗಾರಿಸಿಕೊಂಡಿತು. ಈ ನಾಡ ಪ್ರಭುಗಳ ಅಧ್ಯಯನ ಕುತೂಹಲವೂ, ರೋಮಾಂಚಕವು ಆಗಿದೆ. ಬೆಂಗಳೂರಿನ ಉತ್ತರ ದಿಕ್ಕಿಗೆ ಎಂಟು ಮೈಲಿ ದೂರದಲ್ಲಿ ಯಲಹಂಕ ನಾಡಿನಲ್ಲಿ ಈ ಮನೆತನ ನೆಲೆಸಿದ್ದು, ಕ್ರಮೇಣ ಅಧಿಕಾರಕ್ಕೆ ಬಂದ ಈ ಅರಸರು ಉದಾರಿಗಳು, ಭಕ್ತ ಪ್ರಿಯಾರು ಆಗಿದ್ದರು. ಬೆಂಗಳೂರು, ಮಾಗಡಿ, ಹುಲಿಯೂರುದುರ್ಗ, ಉತ್ರಿದುರ್ಗ, ಭೈರನದುರ್ಗ, ಕುಣಿಗಲ್ಲು, ಉಳಿಯಾರು ಮುಂತಾದ ಕಡೆ ಇವರ ಅಂತಸತ್ವ ಹಾಗೂ ಪರಾಕ್ರಮಗಳಿಗೆ ಅನೇಕ ದೇವಾಲಯಗಳು ಆಗ್ರಹಾರಗಳು ಕೋಟೆ ಕೊತ್ತಲಗಳು, ಕೊಳಗಳೂ ನಿರ್ಮಾಣವಾಗಿರುವುದು ಚಿರಸಾಕ್ಷಿಗಳಾಗಿವೆ. ಚಾರಿತ್ರಿಕವಾಗಿ ಕರ್ನಾಟಕ ಪರಂಪರೆಯಲ್ಲಿ ಈ ರೈತ ಜನಾಂಗದವರಿಂದ ಸ್ಥಾಪಿಸಲ್ಪಟ್ಟ ಪ್ರಭುತ್ವಕ್ಕೆ ಒಂದು ಬಹುಮುಖ್ಯವಾದ ಸ್ಥಾನವನ್ನು ನೀಡಲಾಗಿದೆ. ಚಾರಿತ್ರಿಕ ದಾಖಲೆಗಳಿಂದ ಈ ಅರಸರು ಶಿಕ್ಷಣಕ್ಕೆ ಹೆಚ್ಚು ಪ್ರೋತ್ಸಾಹವನ್ನಾಗಲಿ, ಪ್ರಾಶಸ್ತ್ಯವನ್ನಾಗಲಿ ಕೊಟ್ಟಂತೆ ತಿಳಿದುಬರದೆ ಇದ್ದರೂ, ಸಾಂಸ್ಕೃತಿಕವಾಗಿ ಜನಜೀವನಕ್ಕೆ ಹೆಚ್ಚಿನ ಪ್ರಗತಿಯನ್ನು ಉಂಟುಮಾಡಿದ ಕೀರ್ತಿ ಈ ಅರಸರ ಪಾಲಿಗೆ ಸಲ್ಲುತ್ತದೆ.

**೫. ಇಪ್ಪತ್ತನೆಯ ಶತಮಾನದಲ್ಲಿ**

ಶಿಕ್ಷಣ ಕ್ಷೇತ್ರ ಇಪ್ಪತ್ತನೆಯ ಶತಮಾನದಲ್ಲಿ ಮತ್ತಷ್ಟು ವಿಸ್ತಾರವೂ ವೈವಿಧ್ಯಮಯವೂ ಆಗಿ ಬೆಳೆಯಿತು. ರವಿಂದ್ರನಾಥ ಟಾಗೂರ್ ಮತ್ತು ಮಹಾತ್ಮ ಗಾಂಧೀಜಿಯವರು ಶಿಕ್ಷಣ ಕ್ಷೇತ್ರಕ್ಕೆ ಹೆಚ್ಚು ಮಹತ್ವವನ್ನು ಕೊಟ್ಟ

ಮಹಾಪುರುಷರು. ಮಹಾಕವಿ ಟಾಗೂರರು ಪ್ರಾಚೀನಕಾಲದ ಶಿಕ್ಷಣ ಪದ್ಧತಿಗೆ ಹೆಚ್ಚು ಪ್ರಾಮುಖ್ಯತೆಗೆ ಕೊಟ್ಟರು. ಗಾಂಧೀಜಿಯವರು ವೃತ್ತಿಪರ ಶಿಕ್ಷಣಕ್ಕೆ ಪ್ರಾಮುಖ್ಯತೆ ಕೊಟ್ಟರು. ಗಾಂಧೀಜಿಯವರ ಗ್ರಾಂಮಾತರ ಶಿಕ್ಷಣದ ವಿಧಾನ ಮತ್ತು ಜಾತ್ಯಾತೀತ, ಅಂಶಗಳು ಹಾಗೂ ಸರ್ವಸಮಾನ ಶಿಕ್ಷಣ ಕ್ರಮ ಅತ್ಯಂತ ಆಧುನಿಕ ಅಂಶಗಳಿಂದ ಕೂಡಿದೆ.

ಹಿಂದೆ ಪ್ರೌಢ ಹಾಗೂ ಧಾರ್ಮಿಕ ವಿಧ್ಯಾಭ್ಯಾಸವು ವಿಶೇಷವಾಗಿ ವೈಧಿಕರಲ್ಲಿ, ಜೈನರಲ್ಲಿ ಮತ್ತು ಕ್ರೈಸ್ತ ಪುರೋಹಿತಶಾಹಿ ವರ್ಗಗಳ ಕೈಯಲ್ಲಿತ್ತು. ನಂತರ ಇಪ್ಪತ್ತನೆಯ ಶತಮಾನದಲ್ಲಿ ಈ ಸ್ಥಿತಿ ಬದಲಾವಣೆಯಾದದನ್ನು ಕಾಣಬಹುದು. ಆಂಗ್ಲರ ಆಗಮನದಿಂದ ಇಂಡಿಯಾಕ್ಕೆ ಅನೇಕ ರೀತಿಯ ಅನ್ಯಾಯಗಳು ಆದವೆಂದರೂ ಸಹ ಅವರ ಇಂಗ್ಲಿಷ್ ಶಿಕ್ಷಣ ಪದ್ಧತಿಯು ಭಾರತ ಜನತೆಯಲ್ಲಿ ಒಂದು ಹೊಸ ಚೈತನ್ಯ, ಹೊಸಜಾಗೃತಿಮೂಡಿಸಿದ್ದು ಐತಿಹಾಸಿಕ ಸತ್ಯ.

ಇಂಗ್ಲಿಷಿನ ಪ್ರಭಾವದಿಂದ ಕರ್ನಾಟಕವೂ ಹೊರತಲ್ಲ, ೧೮೩೩ ರಲ್ಲಿ ಮುಮ್ಮಡಿ ಕೃಷ್ಣರಾಜ ಒಡೆಯರು ಮೈಸೂರಿನಲ್ಲಿ ತೆರೆದ ಇಂಗ್ಲಿಷ್ ಶಾಲೆಯಿಂದ ಅನೇಕ ಕ್ರೈಸ್ತ ಮಿಷನರಿಗಳು ಹುಟ್ಟಿಕೊಂಡವು. ಅದಕ್ಕೆ ಸರ್ಕಾರದ ನೆರವೂ ಸಿಕ್ಕಿತು. ಅನಂತರ ಸರ್ಕಾರವೇ ತುಮಕೂರು. ಶಿವಮೊಗ್ಗ, ಹಾಸನ, ಮೈಸೂರು ಮುಂತಾದ ಕಡೆಗಳಲ್ಲಿ ಇಂಗ್ಲಿಷ್ ಶಾಲೆಯನ್ನು ತೆರೆಯಿತು. ಆಗ ೧೮೬೮ ರಲ್ಲಿ ಶಿಕ್ಷಣ ಇಲಾಖೆಯ ಮುಖ್ಯಧಿಕಾರಿಯಾಗಿದ್ದ ಬಿ.ಎಲ್.ರೈಸ್‌ರವರ ಹೊಸ ಯೋಜನೆಯಂತೆ ಪ್ರತಿಯೊಂದು ಹೋಬಳಿ ಕೇಂದ್ರದಲ್ಲಿಯೂ ಶಾಲೆಗಳು ಆರಂಭವಾದವು. ೧೮೭೧-೭೨ರಲ್ಲಿ ಪ್ರತಿಯೊಂದು ತಾಲೂಕಿನಲ್ಲೂ ಇಂಗ್ಲಿಷ್ ಭಾಷೆಯ ಒಂದು ಉನ್ನತ ಶಾಲೆ ಇತ್ತು. ಮೆಟ್ರಿಕ್ಯುಲೇಷನ್‌ವರಿಗೆ ಬೋಧಿಸುತ್ತಿದ್ದ ಹನ್ನೊಂದು ಶಾಲೆಗಳೂ, ಪದವಿ ಮಟ್ಟದವರಿಗೆ ಬೋಧಿಸುತ್ತಿದ್ದ ಐದು ಕಾಲೇಜುಗಳು ಇದ್ದವು.

೧೮೫೭ರಲ್ಲಿ ನ್ಯಾಯಾಂಗ ಕಮೀಷನರ್ ಆಗಿದ್ದ ಡೆವರೋ ಅವರು ಮೈಸೂರು ಮತ್ತು ಕೊಡಗಿನ ವಿದ್ಯಾಭ್ಯಾಸದ ವಿಸ್ತರಣೆಗೆ ಸಿದ್ಧಗೊಳಿಸಿದ ಒಂದು ಯೋಜನೆಗೆ ಅನುಗುಣವವಾಗಿ, ೧೮೫೮ರಲ್ಲಿ ಬೆಂಗಳೂರಿನಲ್ಲಿ ಸರ್ಕಾರವು ಸ್ಥಾಪಿಸಿದ ಸರ್ಕಾರಿ ಪ್ರೌಢಶಾಲೆಯು ೧೮೭೫ರಲ್ಲಿ ಸೆಂಟ್ರಲ್ ಕಾಲೇಜು ಎಂದು ಪರಿವರ್ತನೆಯಾಗಿ ಮದ್ರಾಸ್ ವಿಶ್ವವಿದ್ಯಾನಿಲಯದಿಂದ ಮನ್ನಣೆ ಪಡೆಯಿತು. ಅಲ್ಲಿ ಪದವಿ ಮಟ್ಟದವರೆಗೆ ಮಾತ್ರ ಭೋಧನೆನಡೆಯುತ್ತಿತ್ತು. ನಂತರ ೧೯೧೬ ರಲ್ಲಿ ಮೈಸೂರು ವಿಶ್ವವಿದ್ಯಾನಿಲಯವು ಪ್ರಾರಂಭವಾಯಿತು. ೧೯೧೩ ರಲ್ಲಿ ಹೆಬ್ಬಾಳದ ವ್ಯವಸಾಯ ಶಾಲೆ ಆರಂಭವಾಗಿ, ೧೯೪೬ರಲ್ಲಿ ವ್ಯವಸಾಯ ಕಾಲೇಜಾಗಿ ಪರಿವರ್ತನೆಯಾಯಿತು. ೧೯೪೯ ರಲ್ಲಿ ಕರ್ನಾಟಕ ವಿಶ್ವವಿದ್ಯಾನಿಲಯವು, ೧೯೬೪ ರಲ್ಲಿ ಬೆಂಗಳೂರು ವಿಶ್ವವಿದ್ಯಾನಿಲಯವು ಸ್ಥಾಪಿತವಾದುವು. ೧೮೫೭ ರಲ್ಲಿ ಆರಂಭವಾಗಿದ್ದ ಮುಂಬೈ ವಿಶ್ವವಿದ್ಯಾಲಯವು, ಬೇರೆ ಬೇರೆ ಪ್ರಾದೇಶಿಕ ವಿಶ್ವವಿದ್ಯಾನಿಲಯಗಳು ಆರಂಭವಾಗುವವರೆಗೆ ವಿದ್ಯಾಭ್ಯಾಸಕ್ಕೆ ಅನುಕೂಲತೆಯನ್ನು ಕಲ್ಪಿಸುತ್ತಾ ಬಂದಿದ್ದು. ೧೮೮೧ ರಲ್ಲಿ ಕರ್ನಾಟಕದಲ್ಲಿದ್ದ ಶಾಲೆಗಳ ಮತ್ತು ವಿದ್ಯಾರ್ಥಿಗಳ ಒಂದು ಅಂದಾಜು ಅಂಕಿ ಅಂಶ ಈ ರೀತಿ ಇದೆ.

ಸರ್ಕಾರಿ ಶಾಲೆಗಳ ಸಂಖ್ಯೆ ೪೯೯, ಇಲ್ಲಿ ಓದುತ್ತದ್ದ ವಿದ್ಯಾರ್ಥಿಗಳ ಸಂಖ್ಯೆ ೩೩,೨೮೭, ಸರ್ಕಾರದ ನೆರವಿನ ಶಾಲೆಗಳ ಸಂಖ್ಯೆ ೯,೩೭೦, ಸರ್ಕಾರದ ನೆರವಿಲ್ಲದ ಶಾಲೆಗಳು ೧,೦೦೦ ಇಲ್ಲಿ ಓದುತ್ತಿದ್ದ ವಿದ್ಯಾರ್ಥಿಗಳ ಸಂಖ್ಯೆ ೧೫,೦೦೦.

ಒಟ್ಟಾರೆಯಾಗಿ ಮೇಲಿನ ಅಂಕಿ ಅಂಶದ ಪ್ರಕಾರ

ಸುಮಾರು ೨,೦೮೭ ಶಾಲೆಗಳೂ ೫೭,೬೫೭ ವಿದ್ಯಾರ್ಥಿಗಳು ಇದ್ದರೆಂದು ತಿಳಿದುಬರುತ್ತದೆ. ಇಷ್ಟೆಲ್ಲಾ ವಿವರಪೂರ್ಣವಾದ ಅಂಕಿ ಅಂಶಗಳನ್ನು ಇಲ್ಲಿ ಪ್ರಸ್ತಾಪಿಸಿದ ಕಾರಣವೆಂದರೆ, ಇಲ್ಲಿಗೆ ಸುಮಾರು ೧೦೦ ವರ್ಷಗಳ ಹಿಂದೆ ಶಿಕ್ಷಣ ಕ್ಷೇತ್ರದ ಸ್ಥಿತಿಗತಿ ಹೇಗಿತ್ತು ಎಂಬುವುದರ ಅವಲೋಕನಕ್ಕಾಗಿ ಅಷ್ಟೆ. ನೂರು ವರ್ಷಗಳಿಂದೀಚೆಗೆ ಬೆಳೆದಿರುವ ಕರ್ನಾಟಕದಲ್ಲಿನ ಶಿಕ್ಷಣ ಪದ್ದತಿ ಹಾಗೂ ಸಂಸ್ಥೆಗಳ ಅಧ್ಯಯನ ತುಂಬಾ ಕುತೂಹಲಕರ. ಆಗ ಸರ್ಕಾರಿ ನೆರವಿಲ್ಲದ ಪ್ರಾಥಮಿಕ ಮಟ್ಟದ ಬಹುಪಾಲು ಶಾಲೆಗಳನ್ನು ಬಿಟ್ಟರೆ, ಉಳಿದವುಗಳಲ್ಲಿ ನಾಲ್ಕು ವಿಶ್ವವಿದ್ಯಾನಿಲಯದ ಮಟ್ಟದವು. ೧೬೬ ಮಾಧ್ಯಮಿಕ, ೮೦ ಪ್ರಾಥಮಿಕ ಮತ್ತು ೧೦ ಇತರ ವಿಶೇಷ ಶಾಲೆಗಳು ಎಂದು ವರ್ಗೀಕರಣ ಮಾಡಲಾಗಿತ್ತೆಂದು ತಿಳಿದುಬರುತ್ತದೆ.

**೬. ಹಿಂದಿನ ಮೈಸೂರು ರಾಜ್ಯ**

೧೮೮೧ರಲ್ಲಿ ಮೈಸೂರು ರಾಜ್ಯವನ್ನು, ಅಂದರೆ ಇಲ್ಲಿಗೆ ೧೨೫ ವರ್ಷಗಳ ಹಿಂದೆ ಮಹಾರಾಜರಿಗೆ ವಹಿಸಿಕೊಟ್ಟಾಗ ರಂಗಚಾರ್ಲು ದಿವಾನರಾಗಿದ್ದರು. ಆಗ ಬ್ರಿಟೀಷ್ ಕಮಿಷನ್‌ರಿಂದ ಆರಂಭವಾಗಿದ್ದ ಉತ್ತಮ ಕಲಸ ಕಾರ್ಯಗಳು ಮತ್ತೆ ಮುಂದುವರೆದಿದ್ದವು. ದಕ್ಷ ಆಡಳಿತಗಾರರೆಂದು ಖ್ಯಾತಿ ಪಡೆದಿದ್ದ ಸರ್.ಕೆ. ಶೇಷಾದ್ರಿ ಅಯ್ಯರ್‌ಅವರು ರಾಜ್ಯದಲ್ಲಿದ್ದ ಸಾಮಾನ್ಯ ವಿದ್ಯಾಭ್ಯಾಸ ನೀತಿಯನ್ನು ಕುರಿತು ಈ ರೀತಿ ಹೇಳಿದ್ದಾರೆ.

''ಪ್ರಾಥಮಿಕ ಮತ್ತು ಮಾಧ್ಯಮಿಕ ವಿದ್ಯಾಭ್ಯಾಸದ ಎಲ್ಲಾ ಸಾಧನಗಳನ್ನು ಬಳಸಿಕೊಂಡು ಸಮರ್ಥವಾಗಿ ಪೂರ್ಣ ದಕ್ಷತೆಯಿಂದ ಅದನ್ನು ನಡೆಸಿಕೊಂಡು ಬರಬೇಕು. ಸರ್ಕಾರಿ ಮತ್ತು ಖಾಸಗೀ ಸಂಸ್ಥೆಗಳು ವಿದ್ಯಾಭ್ಯಾಸವನ್ನು ಜನಸಾಮಾನ್ಯರಿಗೂ ಎಟಕುವಂತೆ ಮಾಡಬೇಕು. ದೇಶೀಯ ಮತ್ತು ಪ್ರಾಚೀನ ಬಾಷೆಗಳಪ್ರೌಢವ್ಯಾಸಂಗಕ್ಕೆ ಉತ್ತೇಜವನ್ನು ಕೊಡಬೇಕು. ಸ್ತ್ರೀಯರ ವಿಧ್ಯಾಬ್ಯಾಸ ಮಟ್ಟವನ್ನುಹೆಚ್ಚಿಸಿ, ವಿಸ್ತರಿಸಿ, ರಾಷ್ಟ್ರಮಟ್ಟದಲ್ಲಿಅದನ್ನು ನಡೆಸಿ, ಜನತೆಯ ಅಭಿಮಾನಕ್ಕೆ ಒಳಪಡಿಸಬೇಕು. ಉನ್ನತ ವಿಧ್ಯಾಬ್ಯಾಸಕ್ಕೆ ಪ್ರೋತ್ಸಾಹ ನೀಡಿ ತರುಣರನ್ನು ವೈದ್ಯಕೀಯ ಮತ್ತು ಇಂಜಿನಿಯರಿಂಗ್‌ಮೊದಲಾದ ವೃತ್ತಿಗಳಿಗೆ ತಯಾರು ಮಾಡಬೇಕು.

ಅಂದು ಶೇಷಾದ್ರಿ ಅಯ್ಯರ್ ಅವರು ಕಂಡಿದ್ದ ಕನಸು ಇಂದು ನನಸಾಗಿ ಬಂದಿದೆ. ಅನಂತರ ಹಲವಾರು ಯೋಜನೆಗಳು ಜಾರಿಗೆ ಬಂದಿವೆ. ಶಿಕ್ಷಣದ ಪ್ರಗತಿಯ ಬಗ್ಗೆ ಸರ್ಕಾರ ಮತ್ತು ಖಾಸಗೀ ಸಂಸ್ಥೆಗಳು ಸಾಕಷ್ಟು ದುಡಿದಿದೆ. ಹಿಂದುಳಿದವರ ಅಭ್ಯುದಯಕ್ಕಾಗಿ ಇತ್ತೀಚೆಗೆ ಶಿಕ್ಷಣ ಕ್ಷೇತ್ರ ಬಹುವಾಗಿ ನೆರವು ನೀಡಿದೆ. ಇತ್ತೀಚೆಗೆ ಶಿಕ್ಷಣ ಕ್ಷೇತ್ರದಲ್ಲಿ ಖಾಸಗಿಯವರ ಪ್ರಯತ್ನದಿಂದ ಸರ್ಕಾರದ ಸಹಾಯ ಪಡೆದು ಅನೇಕ ಶಾಲೆಗಳು, ಕಾಲೇಜುಗಳು ಪ್ರಾರಂಭವಾಗಿವೆ. ತಮ್ಮ ತಮ್ಮ ಜನಾಂಗದ ಏಳಿಗೆಗಾಗಿ ಅವರ ವಿದ್ಯಾಭ್ಯಾಸದ ಪ್ರಗತಿಗಾಗಿ ಖಾಸಗಿ ಸಂಸ್ಥೆಗಳು ಶ್ರಮಿಸುತ್ತಿವೆ. ಎಲ್ಲಾ ಬಡಜನತೆಯಲ್ಲೂ ಶಿಕ್ಷಣವನ್ನು ವೃದ್ದಿಸುವುದು ಈ ಸಂಸ್ಥೆಗಳ ಗುರಿಯಾಗಿದೆ. ಇವು ಸರ್ಕಾರ ಹಾಗೂ ವಿದ್ಯಾಭ್ಯಾಸದ ಇಲಾಖೆಯ ಮುಖ್ಯ ಚಟುವಟಿಕೆಗಳಿಗೆ ಪೂರಕವಾಗಿ ದುಡಿಯುತ್ತಿವೆ. ಈ ರೀತಿಯಲ್ಲಿ ರೈತ ಜನಾಂಗದವರ ಖಾಸಗಿ ಶಾಲೆಗಳೂ, ಕಾಲೇಜುಗಳು ವಿದ್ಯಾರ್ಥಿನಿಲಯಗಳೂ ದುಡಿದಿವೆ ಮತ್ತು ದುಡಿಯುತ್ತಿವೆ.

**೪.೨. ಶಿಕ್ಷಣ ಕ್ಷೇತ್ರಕ್ಕೆ ಒಕ್ಕಲಿಗರ ಕೊಡುಗೆ**

ಮೇಲಿನ ಹಿನ್ನೆಲೆಯಲ್ಲಿ ಅವಲೋಕಿಸಿದಾಗ ಕರ್ನಾಟಕದ ಶಿಕ್ಷಣಕ್ಷೇತ್ರಕ್ಕೆ ಈ ಜನಾಂಗದ ಗಣ್ಯರು, ದಾನಿಗಳು, ಶಿಕ್ಷಣ ತಜ್ಞರು ತಮ್ಮ ಜೀವಮಾನ ದುಡಿದು ಮಡಿದಿರುವುದುಂಟು. ಇನ್ನೂ ಕೆಲವಾರು ಗಣ್ಯರು ಈ ಕ್ಷೇತ್ರದಲ್ಲಿ ನಿರಂತರವಾಗಿ ತಮ್ಮ ಸೇವೆಯನ್ನು ಸಲ್ಲಿಸುತ್ತಲಿರುವುದುಂಟು. ಕೆಲವರು ಭೋದನಾ ಪದ್ಧತಿಯಲ್ಲಿ ತಮ್ಮನ್ನು ಅರ್ಪಿಸಿಕೊಂಡಿದ್ದಾರೆ. ಮತ್ತೆ ಕೆಲವರು ಶಿಕ್ಷಣ ಸಂಸ್ಥೆ ಹಾಗೂ ವಿದ್ಯಾರ್ಥಿನಿಲಯಗಳನ್ನು ಕಟ್ಟಿ ತಮ್ಮ ಸೇವೆಯನ್ನು ಸಲ್ಲಿಸುತ್ತಾ ಬಂದಿದ್ದಾರೆ.

ಶಿಕ್ಷಣಕ್ಷೇತ್ರಕ್ಕೆ ದುಡಿದ ಬಹುಪಾಲು ರೈತ ಜನಾಂಗದ ಗಣ್ಯವ್ಯಕ್ತಿಗಳು ಇವತ್ತು ನಮ್ಮ ಕಣ್ಮುಂದೆ ಇಲ್ಲ. ಆದರೆ ಅಂಥ ಗಣ್ಯರು ಹಾಕಿಕೊಟ್ಟ ಹಾದಿಯಲ್ಲಿಯೇ ಅವರ ಮಕ್ಕಳೋ, ಮಿತ್ರರೋ ಅಥವಾ ಜನಾಂಗದ ಇತರರೋ, ಈ ಜನಾಂಗದವರಿಂದ ಸ್ಥಾಪಿಸಲಾದ ವಿದ್ಯಾರ್ಥಿನಿಲಯಗಳನ್ನೂ, ಶಾಲಾಕಾಲೇಜುಗಳನ್ನೂ ನಡೆಸಿಕೊಂಡು ಹೋಗುತ್ತಿರುವುದು ಹೆಮ್ಮೆಯ ವಿಷಯವಾಗಿದೆ.

**೧. ಚನ್ನಪಟ್ಟಣ**

ಈ ಶತಮಾನದ ಪ್ರಾರಂಭದ ದಶಕಗಳಲ್ಲಿ ರೈತ ಜನಾಂಗದ ವಿಧ್ಯಾಬ್ಯಾಸದ ಏಳಿಗೆಗಾಗಿ ಪ್ರೋತ್ಸಾಹ, ಸಂಘಟನೆ ಮುಂತಾದ ಚಟುವಟಿಕೆಗಳು ಆರಂಭವಾದದ್ದು ಚನ್ನಪಟ್ಟಣದಲ್ಲಿ. ಆ ಕಾಲದಲ್ಲಿ ಚನ್ನಪಟ್ಟಣವು ಸುತ್ತ ಮುತ್ತಲಿನ ನೂರಾರು ಮೈಲಿಗಳದೂರದ ಹಳ್ಳಿಗಳಿಂದ ಪ್ರೌಢಶಾಲೆಯಲ್ಲಿನ ವಿದ್ಯಾಭ್ಯಾಸಕ್ಕಾಗಿ ಬರುತ್ತಿದ್ದ ವಿದ್ಯಾರ್ಥಿಗಳಿಗೆ ಪ್ರಮುಖವಿದ್ಯಾಕೇಂದ್ರವೂ ವಿದ್ಯಾರ್ಥಿಗಳಾಶ್ರಯದಸ್ಥಾನವೂ ಆಗಿದ್ದುದ್ದು ಹೆಮ್ಮೆಯ ವಿಷಯ . ರೈತ ಜನಾಂಗದ ಮೊಟ್ಟ ಮೊದಲ ವಿದ್ಯಾರ್ಥಿನಿಲಯ ಪ್ರಾರಂಭವಾದದ್ದು ಇಲ್ಲಿ. ರೈತ ಜನಾಂಗದ ಪ್ರಮುಖ ರಾಜಕಾರಣಿಗಳೂ, ಸಾಹಿತಿಗಳೂ, ಶಿಕ್ಷಣತಜ್ಞರು ಇಲ್ಲಿನ ಶಾಲೆಗಳಲ್ಲಿಯೇ ತಮ್ಮ ವಿದ್ಯಾಭ್ಯಾಸವನ್ನು ಮಾಡಿರುವುದು ಕಂಡುಬರುತ್ತದೆ. ಈ ಪ್ರೌಢಶಾಲೆಯಲ್ಲಿ ಗ್ರಾಮಾಂತರ ಪ್ರದೇಶಗಳಿಂದ ಬರುತ್ತಿದ್ದ ವಿದ್ಯಾರ್ಥಿಗಳು ಸೌಹಾರ್ದತೆಯಿಂದ ಕೂಡಿ, ತಮ್ಮ ತಮ್ಮ ಜನಾಂಗದ ಏಳಿಗೆಗಾಗಿ ವಿಶಿಷ್ಟ ಭವಿಷ್ಯವನ್ನೂ ಚಟುವಟಿಕೆಗಳನ್ನು ರೂಪಿಸಿಕೊಳ್ಳುತ್ತಿದ್ದ ಕಾಲ ಅದು. ಅಲ್ಲಿಗೆ ಬರುತ್ತಿದ್ದ ಶ್ರೀಮಂತ ರೈತ ಕುಟುಂಬದ ಹುಡುಗರು ಉದಾರವಾದ ಮನೋಭಾವದಿಂದ ಬಡ ಜನಾಂಗದ ವಿದ್ಯಾರ್ಥಿಗಳ ಕಷ್ಟ ಸುಖಗಳಲ್ಲಿ ಪಾಲ್ಗೊಂಡು, ಅವರ ಊಟ ವಸತಿ ಹಣದ ಮುಗ್ಗಟ್ಟು ಇತ್ಯಾದಿ ವಿಷಯಗಳ ಬಗ್ಗೆ ನೆರವಾಗುವುದರ ಮೂಲಕ ಅವರ ಏಳಿಗೆಗಾಗಿ ಶ್ರಮಿಸುತ್ತಿದ್ದ ಸಂಗತಿ ನಿಜಕ್ಕೂ ಕುತೂಹಲಕರವಾದ ಮಾನವೀಯ ಸಂಗತಿಯಾಗಿದೆ.

ಈ ದಿಕ್ಕಿನಲ್ಲಿ ಇಲ್ಲಿ ಬಹುಮುಖ್ಯವಾಗಿ ಹೆಸರಿಸಬೇಕಾದ ಇಬ್ಬರು ಮಹಾವ್ಯಕ್ತಿಗಳೆಂದರೆ, ದಿ.ಶ್ರೀ. ಎಚ್.ಕೆ.ವೀರಣ್ಣಗೌಡರು ಹಾಗೂ ದಿ.ಶ್ರೀ.ವಿ.ವೆಂಕಟಪ್ಪನವರು ಇವರುಗಳು ತಮ್ಮ ವಿದ್ಯಾರ್ಥಿ ಜೀವನದಲ್ಲಿಯೇ ಪ್ರೌಡಶಾಲೆಯಲ್ಲಿ ರೈತ ಜನಾಂಗದ ಏಳಿಗೆಗಾಗಿ, ಅವರ ಶಿಕ್ಷಣದ ಪ್ರಗತಿಗಾಗಿ ಶ್ರಮಿಸಲು ಆರಂಬಿಸಿದರು. ಅವರ ಶ್ರಮದ ಫಲ ಶಿಕ್ಷಣ ಕ್ಷೇತ್ರವು ವಿಸ್ತಾರವಾಗಿ ಬೆಳೆದು ಪರಿಣಾಮಕಾರಿಯಾದ, ಫಲವತ್ತಾದ ಫಲಿತಾಂಶ ನೀಡುವಂತೆ ಮಾಡಿದರು. ವಿ. ವೆಂಕಟಪ್ಪನವರು ಕರ್ನಾಟಕದ ವಿದ್ಯಾಮಂತ್ರಿಗಳಾಗಿದ್ದಾಗ ಶಿಕ್ಷಣ ಕ್ಷೇತ್ರಕ್ಕೆ ಸಾಕಷ್ಟು ದುಡಿದರು. ಚನ್ನಪಟ್ಟಣದ ಒಕ್ಕಲಿಗರ ಸಾರ್ವಜನಿಕ ವಿದ್ಯಾರ್ಥಿನಿಲಯ ಹಾಗೂ ಪ್ರೌಢಶಾಲೆಗೆ ಒಂದು

ಸುದೀರ್ಘವಾದ, ಸಾಂಸ್ಕೃತಿಕವಾದ, ಶೈಕ್ಷಣಿಕವಾದ ಇತಿಹಾಸವೇ ಇದೆ. ಈಗ ಈ ಸ್ಥಳದಲ್ಲಿ ಕುವೆಂಪು ಮಹಾವಿದ್ಯಾಲಯ ಬೆಳೆದು ನಿಂತಿರುವುದು ಈ ಜನಾಂಗದ ಸಂಘಟನೆಗೆ, ಸೇವೆಗೆ, ಸಂಸ್ಕೃತಿಗೆ ದ್ಯೋತಕವಾಗಿದೆ.

ವಿ. ವೆಂಕಟಪ್ಪನವರ ಸಮಕಾಲೀನ ವ್ಯಕ್ತಿಯಾಗಿ ಈ ಪ್ರೌಢಶಾಲೆಯಲ್ಲಿಯೇ ವಿದ್ಯಾಭ್ಯಾಸ ಮಾಡಿದ ಎಚ್. ಕೆ. ವೀರಣ್ಣಗೌಡರ ಕೊಡುಗೆ ಶಿಕ್ಷಣ ಕ್ಷೇತ್ರಕ್ಕೆ ಅಪಾರ. ಕರ್ನಾಟಕದ ರಾಜಕೀಯ ಹಾಗೂ ಶೈಕ್ಷಣಿಕ ಇತಿಹಾಸದಲ್ಲಿ ಇವರ ಹೆಸರು ವಿಶಿಷ್ಟವಾದದ್ದು. ಕರ್ನಾಟಕ ಪರಂಪರೆಯಲ್ಲಿ ಶಾಂತವೇರಿ ಗೋಪಾಲಗೌಡ ಮತ್ತು ಎಚ್. ಕೆ. ವೀರಣ್ಣಗೌಡರ ವ್ಯಕ್ತಿತ್ವಗಳು ಕುತೂಹಲಮಯವಾದವುಗಳು. ವೀರಣ್ಣನವರು ಚನ್ನಪಟ್ಟಣದ ಪ್ರೌಢಶಾಲೆಯಲ್ಲಿ ವ್ಯಾಸಂಗ ಮಾಡುತ್ತಿದ್ದಾಗಲೇ ಸಮಾನ ಮನೋಭಾವ ಸ್ನೇಹಿತರನ್ನು ಒಗ್ಗೂಡಿಸಿ ಒಕ್ಕಲಿಗ ವಿದ್ಯಾರ್ಥಿನಿಲಯವನ್ನು ಪ್ರಾರಂಭಿಸಿದ ಹಿರಿಯ ಜೀವ. ಅವರು ತುಂಬಿದ ಚೈತನ್ಯ ಶಿಕ್ಷಣ ಕ್ಷೇತ್ರದಲ್ಲಿ ಮುಂದೆ ಅಗಾಧವಾಗಿ ಬೆಳೆಯಿತು. ಈಗ ಮದ್ದೂರಿನ ಬಳಿ ಇರುವ ಅರ್ಜುನಪುರಿಯಲ್ಲಿನ ಜೂನಿಯರ್ ಕಾಲೇಜು, ಶಿಶುವಿಹಾರ, ಅಪ್ಪರ್ ಪ್ರೈಮರಿ ಶಾಲೆ, ಮಹಿಳಾ ಶಾಲೆ, ಹೆಣ್ಣುಮಕ್ಕಳಿಗಾಗಿ ಕಮಲಾನೆಹರು ಪ್ರೌಢಶಾಲೆ, ಗಂಡುಮಕ್ಕಳಿಗಾಗಿ ಜವಹರಲಾಲ್ ಪ್ರೌಢಶಾಲೆ ಇವುಗಳು ವೀರಣ್ಣಗೌಡರ ಶಿಕ್ಷಣ ಕ್ಷೇತ್ರದ ಸೇವೆಗೆ ಜೀವಂತ ಸಾಕ್ಷಿಗಳಾಗಿವೆ. ಬೆಂಗಳೂರಿನ ಒಕ್ಕಲಿಗರ ಸಂಘದ ವತಿಯಿಂದ ಶಾಲಾ ಕಾಲೇಜುಗಳ ಸ್ಥಾಪನೆಯಲ್ಲಿ ಶ್ರೀಯುತ ವೀರಣ್ಣಗೌಡರ ಕೊಡುಗೆ ಬಹುಮುಖ್ಯವಾದುದಾಗಿದೆ. ಶಿಕ್ಷಣ ಕ್ಷೇತ್ರದಲ್ಲಿ ಶಿಕ್ಷಕರಾಗಿ, ದಕ್ಷರಾಗಿ ಅವರು ಸಲ್ಲಿಸಿರುವ ಸೇವೆಯ ಬಗ್ಗೆ ಎರಡು ಮಾತಿಲ್ಲ. ಅವರ ಬದುಕು ಹೋರಾಟಮಯವಾಗಿತ್ತು.ಯುವಕರಿಗೆ ಚೈತನ್ಯದ ಚಿಲುಮೆಯಾಗಿತ್ತು. ಒಕ್ಕಲಿಗರ ಸಂಘದ ಅಧ್ಯಕ್ಷರಾಗಿಯೂ, ಒಕ್ಕಲಿಗ ಪತ್ರಿಕೆಯ ಸಂಪಾದಕರಾಗಿಯೂ, ಒಕ್ಕಲಿಗ ಜನಾಂಗದ ಶಿಕ್ಷಣದ ಏಳಿಗೆಗಾಗಿ ನಿರಂತರವಾಗಿ ಶ್ರಮಿಸಿದ ವ್ಯಕ್ತಿಯು ಆಗಿದ್ದ ಅವರ ಜೀವನ ಮುಂದಿನ ಪೀಳಿಗೆಗೆ ಆದರ್ಶವಾಗಿದೆ.

೨. ಮಂಡ್ಯದಲ್ಲಿ

ಶಿಕ್ಷಣಕ್ಕೆ ಕ್ಷೇತ್ರಕ್ಕೆ ಅಪಾರಸೇವೆ ಸಲ್ಲಿಸಿದ ರೈತ ಜನಾಂಗದ ಮತ್ತೊಬ್ಬ ಗಣ್ಯವ್ಯಕ್ತಿ ಶ್ರೀ.ದಿ.ಕೆ.ವಿ.ಶಂಕರಗೌಡ ಅವರು. ಮಂಡ್ಯ ಜಿಲ್ಲೆಯ ಕೀಲಾರ ಎಂಬ ಹಳ್ಳಿಯಲ್ಲಿ ಜನಿಸಿದ ಇವರು ಚನ್ನಪಟ್ಟಣದ ಪ್ರೌಢ ಶಾಲೆಯಲ್ಲಿಯೇ ಓದಿದ್ದು. ಮುಂದೆ ತಮ್ಮ ಜೀವನದಲ್ಲಿ ವಿಶಿಷ್ಟತೆಯನ್ನು ಗಳಿಸಿಕೊಂಡು ಶ್ರೇಷ್ಠ ರಾಜಕಾರಣಿಯೂ, ಶಿಕ್ಷಣ ತಜ್ಞರೂ, ಕಲಾವಿದರೂ, ಸಾಹಿತಿಗಳೂ, ಗಾಂಧೀವಾದಿಗಳು, ಕನ್ನಡ ಭಾಷಾ ಸಂಸ್ಕೃತಿಗಳ ಸಂಸ್ಥಾಪಕರು ಆದವರು. ಮಂಡ್ಯದಲ್ಲಿ ಸ್ಥಾಪಿತವಾಗಿರುವ ಪೀಪಲ್ಸ್ ಎಂಜುಕೇಷನ್ ಸೊಸೈಟಿಯ (PES Colleg) ಇಂಜಿನಿಯರಿಂಗ್ ಕಾಲೇಜು, ವಿಜ್ಞಾನ ಮತ್ತು ಕಲಾ ಕಾಲೇಜುಗಳು ಇವರ ಮುಖಂಡತ್ವದಲ್ಲಿ ಸ್ಥಾಪಿತವಾದ ಮಹಾ ಸಂಸ್ಥೆಗಳು. ಸಾರ್ವಜನಿಕ ಕ್ಷೇತ್ರದಲ್ಲಿ ದುಡಿದು ನಡೆಸಿರುವ ಇವರ ಈ ಮಹಾ ಕಾರ್ಯಗಳು ಅವರ ಮುತ್ಸದ್ದಿತನಕ್ಕೆ ಸಾಕ್ಷಿಯಾಗಿವೆ. ಅವರ ಸಾಧನೆಗಳು. ಕೀರ್ತಿಗಳು, ಮಂಡ್ಯ ಜಿಲ್ಲೆಯಿಂದ ಆಚೆಗೂ ಶಾಶ್ವತವಾಗಿ ನಿಲ್ಲುವಂತಾಗಿದೆ. ಕರ್ನಾಟಕದಲ್ಲಿ ವಿದ್ಯಾ ಮಂತ್ರಿಗಳಾಗಿದ್ದಾಗ ಕನ್ನಡ ಬಾಷೆಗೆ, ಕನ್ನಡ ಜನಕ್ಕೆ, ಇವರು ಕೊಟ್ಟ ಪ್ರೋತ್ಸಾಹ ಅತ್ಯಂತ ಮಹತ್ವದ್ದಾಗಿದೆ. ಶಿಕ್ಷಣದ ಪ್ರಗತಿ ಇವರು ವಿದ್ಯಾಮಂತ್ರಿಯಾಗಿದ್ದ ಕಾಲದಲ್ಲಿ ಒಂದು ಹೆಜ್ಜೆ ಮುಂದುಹೋಯಿತೆಂದರೆ ಆಶ್ಚರ್ಯವೇನಲ್ಲ.

### ೩. ಬೆಂಗಳೂರಿನಲ್ಲಿ

ಕರ್ನಾಟಕದ ಇತಿಹಾಸದಲ್ಲಿ ಹಲವಾರು ದೃಷ್ಟಿಗಳಿಂದ ದಿ.ಕೆ.ಎಚ್.ರಾಮಯ್ಯನವರ ಹೆಸರು ಚಿರಸ್ಮರಣೀಯವಾದುದು. ಬೆಂಗಳೂರಿನಲ್ಲಿ ಒಕ್ಕಲಿಗ ಸಂಘ ಹಾಗೂ ವಿದ್ಯಾರ್ಥಿನಿಲಯದ ಸ್ಥಾಪಕರಲ್ಲಿ ಪ್ರಮುಖರು ಇವರು. ನೂರಾರು ಮೈಲಿಗಳ ದೂರದಿಂದ ವಿದ್ಯಾರ್ಜನೆಗಾಗಿ ಬೆಂಗಳೂರಿಗೆ ಬರುತ್ತಿದ್ದ ಬಡ ಒಕ್ಕಲಿಗ ವಿದ್ಯಾರ್ಥಿಗಳಿಗೆ ಊಟ ವಸತಿಯ ಆಸರೆಯನ್ನು ನಿರ್ಮಾಣ ಮಾಡಿದ ಶ್ರೇಯಸ್ಸು ಇವರಿಗೆ ಸಲ್ಲುತ್ತದೆ. ಮೈಸೂರಿನಲ್ಲಿ ಇವರ ಮುಖಂಡತ್ವದಲ್ಲಿ ಅನೇಕ ವ್ಯಕ್ತಿಗಳು ಸೇರಿ ಸ್ಥಾಪಿಸಿದ ಉಚಿತ ವಿದ್ಯಾರ್ಥಿನಿಲಯ, ಅನೇಕ ಸಾರ್ವಜನಿಕ ಸಂಸ್ಥೆಗಳು ಇವರ ಸೇವಾನಿಷ್ಠತೆಗೆ, ಇವರ ಮನೋಭಾವಕ್ಕೆ, ಸಮಾಜ ಏಳಿಗೆಗೆ, ತಮ್ಮ ಜನಾಂಗದ ಭವಿಷ್ಯಕ್ಕೆ ರೂಪಿಸಿದ ಪ್ರತಿಮೆಗಳಾಗಿವೆ. ರೈತ ಜನಾಂಗದಲ್ಲಿ ಒಂದು ವಿಶಿಷ್ಟ ತಲೆಮಾರನ್ನೇ ನಿರ್ಮಾಣ ಮಾಡಿಹೋದ ಮಹಾನ್ವಿತರು ಇವರು. ಆದಿಚುಂಚನಗಿರಿ ಮಠ ಪ್ರವರ್ಧಮಾನಕ್ಕೆ ಬರಲು ಬಹುವಾಗಿ ಶ್ರಮಿಸಿದ ಈ ಜನಾಂಗದ ನಾಯಕರಲ್ಲಿ ಕೆ.ಎಚ್.ರಾಮಯ್ಯನವರ ಶ್ರಮ ಚಿರಸ್ಮರಣೀಯವಾದದ್ದು. ಈ ಮಠಕ್ಕೆ ದೀರ್ಘವಾದ ಇತಿಹಾಸವೇ ಇದೆ.

ಇನ್ನೊಬ್ಬ ಪ್ರಮುಖ ವ್ಯಕ್ತಿ ದಿವಂಗತ ಹೆಚ್. ಹೋಂಬೆಗೌಡರು ಹೆಸರನ್ನು ಇಲ್ಲಿ ಸ್ಮರಿಸಬಹುದು. ಶಿಕ್ಷಣ ಕ್ಷೇತ್ರಕ್ಕೆ ಇವರ ಕೊಡುಗೆ ಕೂಡಾ ಸ್ತುತ್ಯಾರ್ಹವಾದದ್ದು.ಕರ್ನಾಟಕ ರಾಜ್ಯದ ಶ್ರೇಷ್ಠ ನ್ಯಾಯಾಲಯದ ಮುಖ್ಯನ್ಯಾಯದೀಶರಾಗಿದ್ದ ಇವರ ಸೇವೆ ಕೇವಲ ಕಾನೂನು ಕ್ಷೇತ್ರಕ್ಕೆ ಮಾತ್ರ ಸೀಮಿತವಾಗಿರಲಿಲ್ಲ.ಇವರ ಉದರವಾದ ಮನೋಭಾವದಿಂದಾಗಿ ಹಲವಾರು ಶೈಕ್ಷಣಿಕ ಸಂಸ್ಥೆಗಳು ಬೆಂಗಳೂರು ನಗರ ಮತ್ತು ಇತರ ಕಡೆಗಳಲ್ಲಿ ಸ್ಥಾಪಿತವಾಗಿದೆ.

ಡಿ.ಆರ್ ರಾಮಯ್ಯನವರು ೧೯೬೦ ರಲ್ಲಿ ವಾರ್ತಾ ಇಲಾಖೆಯ ಮುಖ್ಯಾಧಿಕಾರಿಗಳಾಗಿ ನಿವೃತ್ತವಾದ ತರುವಾಯ ೧೯೬೨ರಲ್ಲಿ ಲಲಿತವಾಣಿ ವಿದ್ಯಾಲಯ ಎಂಬ ಹೆಸರಿನಲ್ಲಿ ನರ್ಸರಿ ಮತ್ತು ಪ್ರೈಮರಿ ಪಾಠಶಾಲೆಯನ್ನು ಬಸವನಗುಡಿಯ ಗೋವಿಂದಪ್ಪ ರಸ್ತೆಯಲ್ಲಿ ಸ್ಥಾಪಿಸಿ, ೧೯೭೧ ರವರೆಗೆ ನಡೆಸಿ ನೂರಾರು ಮಕ್ಕಳಿಗೆ ವಿದ್ಯಾದಾನ ಮಾಡಿದ್ದಾರೆ. ಅಲ್ಲದೆ, ೧೯೪೦ ರಿಂದ ೧೯೫೦ರ ವರೆಗಿನ ೧೦ ವರ್ಷಗಳಲ್ಲಿ ಮಹಾರಾಷ್ಟ್ರ ಮಹಿಳಾ ವಿದ್ಯಾಲಯದ ವಾಸವಿ ವಿದ್ಯಾನಿಕೇತನದ ಬೆಳವಣಿಗೆಯಲ್ಲಿ ಸ್ಥಾಪಕರಾದ ಶ್ರೀ ಪಿ.ಕೃಷ್ಣರಾವ್ ಪೋಳ್‌ಅವರಿಗೆ ಬಹಳ ಮಟ್ಟಿಗೆ ಮಾರ್ಗದರ್ಶನನೀಡಿದರು. ಈ ಅವಧಿಯಲ್ಲಿ ಇವರ ಧರ್ಮಪತ್ನಿ ದಿವಂಗತ ಆರ್.ಕಾಮಾಕ್ಷಮ್ಮನವರು ವಿದ್ಯಾಲಯದ ಮುಖ್ಯೋಪಾದ್ಯಾಯನಿಯಾಗಿ ಸೇವೆ ಸಲ್ಲಿಸಿದರು.

### ೪. ಮೈಸೂರಿನಲ್ಲಿ

ಮೈಸೂರಿನಲ್ಲಿ ಹೆಸರಾಂತ ವಕೀಲರಾಗಿದ್ದ ರಾಜ್ಯ ಮತ್ತು ರಾಷ್ಟ್ರ ಮಟ್ಟದಲ್ಲೂ ಉನ್ನತಮಟ್ಟದ ರಾಜಕಾರಣಿಗಳಾಗಿದ್ದ ದಿವಂಗತ ಹೆಚ್. ಸಿ. ದಾಸಪ್ಪನವರ ಸೇವೆ ಶಿಕ್ಷಣ ಕ್ಷೇತ್ರಕ್ಕೆ ಅಮೋಘವಾದುದು. ಮೈಸೂರಿನ ಒಕ್ಕಲಿಗರ ಹಾಸ್ಟಲಿನ ಮೇಲ್ವಿಚಾರಕ್ಕಾಗಿ ದುಡಿದ ವ್ಯಕ್ತಿ, ಈ ಭಾಗದಲ್ಲಿ ಜನಾಂಗದ ವಿದ್ಯಾರ್ಥಿಗಳ ಯೋಗ ಕ್ಷೇಮಕ್ಕಾಗಿ ತುಂಬಾ ಶ್ರಮಿಸಿದ ವ್ಯಕ್ತಿತ್ವ ಅವರದು.

ಒಕ್ಕಲಿಗ ವಿದ್ಯಾರ್ಥಿಗಳ ಭವಿಷ್ಯಕ್ಕಾಗಿ ಹೋರಾಡಿದ ಮತ್ತೊಬ್ಬ ವ್ಯಕ್ತಿಯೆಂದರೆ ಎನ್.ಜಿ.ಗುಜ್ಜೇಗೌಡರು. ಸಹ ಪ್ರಮುಖರಾಗಿದ್ದಾರೆ. ಮೈಸೂರಿಗೆ ಒಕ್ಕಲಿಗರ ವಿದ್ಯಾರ್ಥಿನಿಲಯದ ಪೋಷಕರಾಗಿದ್ದವರು. ತಮ್ಮ

ಚಾಕಚಕ್ಯತೆಯಿಂದ ಹಾಗೂ ತಮ್ಮ ದಕ್ಷ ಮುಂದಾಲೋಚನೆಯಿಂದ, ಒಕ್ಕಲಿಗ ವಿದ್ಯಾರ್ಥಿಗಳ ಬದುಕನ್ನು ಹಸನು ಮಾಡುವಲ್ಲಿ ಬಹುವಾಗಿ ಯಶಸ್ವಿಯಾದ ವ್ಯಕ್ತಿ ಇವರು. ಶಿಕ್ಷಣ ಕ್ಷೇತ್ರಕ್ಕೆ ವಿಶಿಷ್ಟವಾದ ಒಂದು ಕೊಡುಗೆಯನ್ನು ಕೊಟ್ಟುಹೋಗಿರುವ ಈ ಜನಾಂಗದ ಮತ್ತೊಬ್ಬ ವ್ಯಕ್ತಿ ದಿವಂಗತ ಡಿ. ಬನುಮಯ್ಯನವರು. ಮೈಸೂರಿನಲ್ಲಿ ಇವರು ಸ್ಥಾಪಿಸಿರುವ ಬನುಮಯ್ಯ ಕಾಲೇಜು ಒಂದು ಉತ್ತಮ ಶೈಕ್ಷಣಿಕ ಸಂಸ್ಥೆಗಳಲ್ಲಿ ಒಂದಾಗಿ. ತನ್ನದೇ ಆದ ಚರಿತ್ರೆಯನ್ನು ಹೊಂದಿದೆ.

**೫. ಕಾನಕಾನಹಳ್ಳಿಯಲ್ಲಿ**

ಶಿಕ್ಷಣ ಕ್ಷೇತ್ರಕ್ಕೆ ತಮ್ಮ ಇಡೀ ಜೀವಮಾನವನ್ನೇ ಅರ್ಪಿಸಿ ದುಡಿದು ಹೋದ ರೈತ ಜನಾಂಗದ ಮತ್ತೊಬ್ಬ ಮಹಾನ್ವಿತರು ಕಾನಕಾನಹಳ್ಳಿ ಎಸ್.ಕರಿಯಪ್ಪನವರು. ಇವರು ತಮ್ಮ ಬದುಕಿನ ಉದ್ದಕ್ಕೂ ಕರ್ನಾಟಕದ ಗಾಂಧಿಯಾಗಿ ಬದುಕಿ ಬಾಳಿ ಹೋದ ವ್ಯಕ್ತಿ. ಗಾಂಧೀಜಿಯವರು ಶಿಕ್ಷಣದ ಬಗ್ಗೆ ಇಟ್ಟುಕೊಂಡಿದ್ದ ಪರಿಕಲ್ಪನೆಯೊಡನೆ ಆರಂಭಿಸಿದ ಕನಕಪುರದ ಮೊದಲ ಎಜುಕೇಷನ್ ಸೊಸೈಟಿಯ ಸಂಸ್ಥಾಪಕರು ಇವರು. ಇವರು ಇತ್ತೀಚಿಗೆ ತೀರಿ ಕೊಂಡದ್ದರಿಂದ ಶಿಕ್ಷಣ ಕ್ಷೇತ್ರಕ್ಕೆ ಅಪಾರವಾದ ನಷ್ಟವಾದಂತಾಗಿದೆ. ಗ್ರಾಮಾಂತರ ಪ್ರದೇಶಗಳಲ್ಲಿ ಈ ಸಂಸ್ಥೆ ಬಹು ದೊಡ್ಡ ಹೆಸರು ಗಳಿಸಿದೆ. ಒಂದು ಸಣ್ಣ ಗುಡಿಸಿಲಿನಿಂದ ಆರಂಭವಾದ ಈ ಸಂಸ್ಥೆ ಇಂದು ಶಿಶುವಿಹಾರದಿಂದ ಮೊದಲುಗೊಂಡು ಪ್ರಥಮ ದರ್ಜೆ ಕಾಲೇಜಿನವರಿಗೆ ಬೆಳೆದಿರುವುದು ಅದ್ಭುತವಾಗಿದೆ. ಈ ಅದ್ಭುತಕ್ಕೆ ಕರಿಯಪ್ಪನವರ ತ್ಯಾಗಜೀವನವೇ ಅಡಿಗಲ್ಲಾಗಿದೆ.

ಕರಿಯಪ್ಪನವರು ಅಧಿಕಾರದಿಂದ ಸದಾ ದೂರವಿದ್ದವರು. ಭ್ರಷ್ಟತೆ ಅವರ ಬಳಿ ಸುಳಿಯುತ್ತಿರಲಿಲ್ಲ. ಉತ್ತಮ ಶಿಕ್ಷಣತಜ್ಞರಾಗಿ, ಸುಧಾರಕರಾಗಿ, ಸ್ವಾತಂತ್ರ್ಯ ಹೋರಾಟ, ಸತ್ಯಾಗ್ರಹಿಯಾಗಿ, ಸಮಾನತೆಗಾಗಿ ದುಡಿದ ಮಹಾನ್ವಿತರು ಇವರು. ಗಾಂಧೀಜಿಯವರಂತೆ ಇವರು ಗ್ರಾಮಾಂತರ ಪ್ರದೇಶದಲ್ಲಿ ಸೇವೆಸಲ್ಲಿಸಲು ಮುಂದಾದರು. ಈ ಸಂಸ್ಥೆಯ ಮುಂದೆ ನಿಲ್ಲಿಸಿರುವ ಗಾಂಧಿಜಿಯವರ ಅಭೂತ ಪೂರ್ವ ಪ್ರತಿಮೆ ಇದಕ್ಕೆ ಸಾಕ್ಷಿಯಾಗಿವೆ. ಒಟ್ಟಾರೆ ಇಲ್ಲಿ ಒಂದನ್ನು ಗಮನಿಸಬಹುದು ಅದೆಂದರೆ ಗಾಂಧೀಜಿಯವರು ಬಿಟ್ಟದನ್ನೂ, ಕರಿಯಪ್ಪನವರು ಬಿಟ್ಟದನ್ನೂ ತುಂಬಿಕೊಂಡು ಪೂರ್ಣವಾಗಿ ಈ ಕ್ಷೇತ್ರ ಬೆಳೆಯುತ್ತದೆಂದು ಅಶಿಸೋಣ: ಒಟ್ಟಾರೆ, ಕರ್ನಾಟಕ ಸಂಸ್ಕೃತಿಗೆ, ಶೈಕ್ಷಣಿಕ ಆವರಣಕ್ಕೆ ಕರಿಯಪ್ಪನವರು ಬಿಟ್ಟುಹೋಗಿರುವ ಆಸ್ತಿ ಅನನ್ಯವಾದುದು.

**೬. ಆದಿಚುಂಚನಗಿರಿ ಕ್ಷೇತ್ರ**

ಒಕ್ಕಲಿಗ ಜನಾಂಗದ ಭಾವೈಕ್ಯತೆಗೆ ಶ್ರೀಮಠವು ಪ್ರತಿಬಿಂಬವಾಗಿದೆ. ಶಿಕ್ಷಣ ಕ್ಷೇತ್ರದಲ್ಲಿ ಮತ್ತು ಅದ್ಯಾತ್ಮಿಕ ಕ್ಷೇತ್ರದಲ್ಲಿ ಸಲ್ಲಿಸುತ್ತಿರುವ ಸೇವೆಯಲ್ಲಿ ಶ್ರೀಮಠದ ಪಾತ್ರ ಸಕ್ರಿಯವಾದುದು, ಜೀವಂತವಾದುದು ಆಗಿದೆ. ಆದಿಚುಂಚನಗಿರಿ ಮಠದ ಸ್ವಾಮಿಗಳು ಈ ಜನಾಂಗದ ಪ್ರಗತಿಯನ್ನೂ ಭವಿಷ್ಯವನ್ನೂ ಸನ್ಮಾರ್ಗದಲ್ಲಿ, ಸನ್ನಡತೆಯಲ್ಲಿ, ಸತ್ಯದರ್ಶನದಲ್ಲಿ ಕೊಂಡೊಯ್ಯುವುದಕ್ಕೆ ಸತತವಾಗಿ ಶ್ರಮಿಸುತ್ತಿದ್ದಾರೆ. ಈ ಮಠ ಯಾವಾಗಲೂ ಸಾಮಾನ್ಯ ಜನರ ಏಳಿಗೆಗೆ, ಉನ್ನತಿಗೆ, ಅವರ ಆಶೋತ್ತರಗಳನ್ನು ನೆರವೇರಿಸುವುದಕ್ಕೆ ದ್ಯೋತಕವಾಗಿದೆ. ಈ ಮಠದ ಆಶ್ರಯದಲ್ಲಿ ಆದಿ ಚುಂಚನಗಿರಿಯಲ್ಲಿ ನಿರ್ಮಾಣಗೊಂಡು ನಡೆಯುತ್ತಿರುವ ಕಾಲೇಜು, ವಿದ್ಯಾರ್ಥಿನಿಲಯ ಇವು ಸುತ್ತಲಿನಗ್ರಾಮಾಂತರ ಪ್ರದೇಶಗಳಲ್ಲಿನ ಜನತೆಗೆ ಅನುಕೂಲಕರವಾದ ಸೌಲಭ್ಯಗಳನ್ನೂ, ವಾತಾವರಣಗಳನ್ನು, ರೂಪಿಸುತ್ತಾ ಬಂದಿದೆ. ಈಚೆಗೆ ಸಂಸ್ಕೃತ ವಿದ್ಯಾಪೀಠವೊಂದು ಇಲ್ಲಿ ಸ್ಥಾಪಿತವಾಗಿರುವುದಂತು ಈ ಜನಾಂಗದ

ವಿದ್ಯಾಪ್ರಿಯತೆಗೆ, ಭಾರತೀಯ ಸಂಸ್ಕೃತಿಯ ನಿರಂತರ ಜ್ಞಾನದ ವಾಹಿನಿಗೆಸಂಕೇತವಾಗಿದೆ. ಈ ಮಠದ ಅಂಗವಾಗಿ ಬೆಂಗಳೂರಿನ ವಿಜಯನಗರದ ಬಡಾವಣೆಯಲ್ಲಿ ರೂಪಿತವಾಗಿರುವ ವಿದ್ಯಾರ್ಥಿನಿಲಯ ಅನೇಕ ಬಡ ವಿದ್ಯಾರ್ಥಿಗಳ ಭವಿಷ್ಯವನ್ನು ರೂಪಿಸುವ ಸಂಸ್ಥೆಯಾಗಿದೆ. ಈ ಸಂಸ್ಥೆಯನ್ನು ವಿಶಿಷ್ಟ ಮಾರ್ಗದಲ್ಲಿ ಕೊಂಡೊಯ್ಯುತ್ತಿರುವಲ್ಲಿ ಈ ಜನಾಂಗದ ಹಲವಾರು ಶಕ್ತಿಗಳು ಸಕ್ರಿಯವಾಗಿ ಶ್ರಮಿಸುತ್ತಿರುವುದು ಸ್ತುತ್ಯಾರ್ಹವಾದುದು. ಶ್ರೀಮಠದ ಪೀಠಾಧ್ಯಾಕ್ಷರಾದ ಶ್ರೀ ಶ್ರೀ ಶ್ರೀ ಬಾಲಗಂಗಾಧರನಾಥ ಸ್ವಾಮಿಯವರು ಪಂಡಿತರೂ, ವಿದ್ಯಾವಂತರೂ ಆಗಿರುವುದರ ಜೊತೆಗೆ, ರೈತ ಜನಾಂಗದ ಹಿಂದುಳಿದ ವರ್ಗಗಳ ಶೈಕ್ಷಣಿಕ ಅಭಿವೃದ್ಧಿಯಲ್ಲಿ ಆಗಾಧವಾದ ಆಸಕ್ತಿಯನ್ನು ಹೊಂದಿದ್ದಾರೆ. ಮತ್ತು ಜನಾಂಗದ ಪ್ರಗತಿಗಾಗಿ ದುಡಿಯುತ್ತಿದ್ದಾರೆ. ಪರಂಪರಾನುಗತವಾಗಿ ಬಂದಿರುವ ಕೆಲವು ವೈಜ್ಞಾನಿಕ ಸಾಂಪ್ರದಾಯಕ ಕಾರ್ಯಗಳನ್ನು ಬದಿಗೊತ್ತಿ, ಜನಸಾಮಾನ್ಯರ ಪ್ರಗತಿಗೆ ಆಧುನಿಕ ವಿಧಾನಗಳನ್ನನುಸರಿಸುತ್ತಾ ಅಮೋಘ ಸೇವೆ ಸಲ್ಲಿಸುವ ಸನ್ನಿವೇಶ ಶ್ರೀ ಮಠಕ್ಕೆ ಇಂದು ವಿಫುಲವಾಗಿ ಒದಗಿದೆ. ಇದರ ಸದುಪಯೋಗವನ್ನು ಮಠಾಧ್ಯಕ್ಷರು ಮಾಡಿಕೊಳ್ಳುತ್ತಾರೆ ಎಂದು ಭಕ್ತರು ಆಶಿಸುತ್ತಾರೆ.

**೭. ಕೆಲವು ಗಣ್ಯ ವ್ಯಕ್ತಿಗಳು**

ಶಿಕ್ಷಣ ಕ್ಷೇತ್ರದಲ್ಲಿ ರೈತ ಜನಾಂಗದ ಹಲವಾರು ವ್ಯಕ್ತಿಗಳು ಪ್ರತ್ಯಕ್ಷವಾಗಿಯು, ಪರೋಕ್ಷವಾಗಿಯೂ ಶ್ರಮಿಸಿದ್ದಾರೆ. ಇಲ್ಲಿ ಅಂತಹ ಕೆಲವು ಗಣ್ಯವ್ಯಕ್ತಿಗಳ ಹೆಸರುಗಳನ್ನು ಹೆಸರಿಸಬಹುದು. ದಿ.ಎಚ್.ಬಿ. ಗುಂಡಪ್ಪಗೌಡ, ದಿ, ಸಾಹುಕಾರ್ ಎಸ್. ಚೆನ್ನಯ್ಯ, ದಿ. ಕೆ. ಆರ್. ಮರುದೇವೇಗೌಡ, ಹಾಸನದ ಕರಿಯಪ್ಪಗೌಡ, ಹಾಸನದ ಚನ್ನೇಗೌಡ, ಕೆ. ಎಚ್. ಪಾಟೀಲ, ಡಬ್ಲ್ಯೂ, ಹೆಚ್. ಹನುಮಂತಪ್ಪ, ಮಾಲಿ ಮಾರೆಪ್ಪ, ಜೆ.ಪ್ಪಾಜಿಗೌಡ, ಪಿ.ಎನ್.ಜವರಪ್ಪಗೌಡ, ಎಂ.ಸಿ.ಲಿಂಗೇಗೌಡ, ಎಂ.ಎಚ್.ಮರಿಗೌಡ, ಆರ್.ದಯಾನಂದಸಾಗರ್, ಎಲ್.ಎಸ್.ರಾಮಲಿಂಗಯ್ಯ ಮುಂತಾದವರು ಶಿಕ್ಷಣ ಕ್ಷೇತ್ರಕ್ಕೆ ಪ್ರೊ.ವೆಂಕಟಗಿರಿಗೌಡ ಖ್ಯಾತ ಅರ್ಥಶಾಸ್ತ್ರಜ್ಞ ಸೇವೆಸಲ್ಲಿಸಿದ ಮಹಾನಿಯರು. ಈ ಜನಾಂಗದ ಉದಾರವಾದ ಹಾಗೂ ವಿಶಾಲವಾದ ಮನೋಭಾವದ ಶ್ರಮದಿಂದ ಕರ್ನಾಟಕದ ಹಲವಾರು ಕಡೆ ಇನ್ನೂ ಹಲವಾರು ವಿದ್ಯಾರ್ಥಿನಿಲಯಗಳೂ, ವಿದ್ಯಾಲಯಗಳು, ಶೈಕ್ಷಣಿಕ ಕ್ಷೇತ್ರದ ವಿಕಾಸಕ್ಕೆ ಪೂರಕವಾಗಿ ಶ್ರಮಿಸುತ್ತಿವೆ. ಮೈಸೂರಿನ ಒಡೆಯರ ಕಾಲದಲ್ಲೇ ಸ್ಥಾಪಿತವಾದ ಹಾಲಮ್ಮನವರ ವಿದ್ಯಾರ್ಥಿನಿಲಯ ಶೈಕ್ಷಣಿಕ ಕ್ಷೇತ್ರದಲ್ಲಿನ ಈ ಜನಾಂಗದ ಮಹಿಳೆಯೊಬ್ಬರ ದೂರ ದೃಷ್ಟಿಗೆ, ತ್ಯಾಗಕ್ಕೆ, ಸಾಕ್ಷಿಯಾಗಿದೆ. ಈ ದಿಕ್ಕಿನಲ್ಲಿ ಇನ್ನೂ ಅನೇಕ ಸಂಸ್ಥೆಗಳೂ, ನಿಲಯಗಳೂ ಶಿಕ್ಷಣ ಕ್ಷೇತ್ರಕ್ಕೆ ತಮ್ಮ ಅಮೋಘ ಸೇವೆಯನ್ನು ಸಲ್ಲಿಸುತ್ತಿವೆ. ಕರ್ನಾಟಕದ ಪರಂಪರೆಯಲ್ಲಿ ಇವು ಶೈಕ್ಷಣಿಕವಾದ ಹಾಗೂ ಸಾಂಸ್ಕೃತಿಕವಾದ ವಾತಾವರಣವನ್ನು ನಿರ್ಮಾಣಮಾಡುವ ತಮ್ಮ ಕಾರ್ಯವನ್ನು ನಿರ್ವಹಿಸುತ್ತಿವೆ.

**೮. ಜಾತೀಯತೆ ಇಲ್ಲ**

ಒಕ್ಕಲಿಗ ಜನಾಂಗದವರು ಸ್ಥಾಪಿಸಿರುವ ಯಾವ ಶೈಕ್ಷಣಿಕ ಸಂಸ್ಥೆಗಳಲ್ಲೂ ಜಾತೀಯತೆಯಾಗಲಿ, ಅಸಮಾನತೆಯಾಗಲಿ ಇಲ್ಲ. ಇದು ಈ ಜನಾಂಗದವರು ಈ ಶೈಕ್ಷಣಿಕ ಸಂಸ್ಥೆಗಳಲ್ಲಿ ನಿರ್ಮಾಣಮಾಡಿರುವ ಉನ್ನತ ವಾತಾವರಣಗಳಲ್ಲೊಂದು. ವಿದ್ಯಾರ್ಥಿನಿಲಯಗಳಲ್ಲಿ ರೈತ ಜನಾಂಗದ ವಿದ್ಯಾರ್ಥಿಗಳೇ ಹೆಚ್ಚು ಇದ್ದಾಗ್ಯೂ, ಬಣಜಿಗ ಜನಾಂಗದವರು, ಕುರುಬ ಜನಾಂಗದವರು ಮತ್ತು ಇತರೇ ಅನೇಕ ಜನಾಂಗದ ವಿದ್ಯಾರ್ಥಿಗಳು ಇಲ್ಲಿ ಇರುವುದುಂಟು. ಆದರೆ ಬ್ರಾಹ್ಮಣರಾಗಲಿ, ಲಿಂಗಾಯಿತರಾಗಲಿ, ಈ ನಿಲಯಗಳಿಗೆ ಅವರಾಗಿ ಬಂದು

ಅನುಕೂಲತೆಗಳನ್ನೂ ಪಡೆದುದು ಕಂಡುಬರುತ್ತಿಲ್ಲ. ಹರಿಜನರು ಕೂಡಾ ಅಷ್ಟೇ. ಆದಾಗ್ಯೂ ಈ ಜನಾಂಗದವರಿಂದ ಸ್ಥಾಪಿತವಾಗಿರುವ ಶಾಲಾ ಕಾಲೇಜುಗಳಲ್ಲಿ ಎಲ್ಲಾ ಜನಾಂಗದವರು ವ್ಯಾಸಂಗ ಮಾಡುತ್ತಿದ್ದಾರೆ.

ಶಿಕ್ಷಣ ಕ್ಷೇತ್ರಕ್ಕೆ ರೈತ ಜನಾಂಗದ ಪ್ರಮುಖ ಕೊಡುಗೆಗಳ ಒಂದು ಮುಖ ಇದು. ಇದು ಶಿಕ್ಷಣ ಕ್ಷೇತ್ರದಲ್ಲೇ ನಿರಂತರವಾಗಿ ಬೋಧನೆಯಲ್ಲಿ ತೊಡಗಿದ್ದ ಹಾಗೂ ಅನೇಕ ಖ್ಯಾತ ವಿದ್ವಾಂಸರುಗಳು ಇದ್ದಾರೆ. ಶಿಕ್ಷಣ ಕ್ಷೇತ್ರದ ಅವಿಭಾಜ್ಯ ಅಂಗಗಳಾದ ಕಲೆ, ಸಾಹಿತ್ಯ, ಸಂಸ್ಕೃತಿ ಇತ್ಯಾದಿಗಳ ಬಗ್ಗೆ ಜನಾಂಗದ ಕೊಡುಗೆಗಳ ಅಧ್ಯಯನ ಬೇರೆ ಲೇಖನಕ್ಕೆ ಕುತೂಹಲವೂ, ವಿಶಿಷ್ಟವೂ ಆದ ವಸ್ತುವಾಗಬಲ್ಲುದಾಗಿದೆ.

**೯. ಒಕ್ಕಲಿಗರಲ್ಲಿ ಹೆಸರಾಂತ ಶಿಕ್ಷಣ ತಜ್ಞರು**

ಶ್ರೀ ಕುವೆಂಪು ಅವರು, ಶ್ರೀ ದೇಜಗೌ ಅವರು ಮತ್ತು ಶ್ರೀ ಎಸ್. ಮಂಚಯ್ಯನವರು ಶಿಕ್ಷಣ ಕ್ಷೇತ್ರಕ್ಕೆ ಸಲ್ಲಿಸಿರುವ ಮತ್ತು ಇನ್ನೂ ಸಲ್ಲಿಸಿರುವ ಸೇವೆಯ ಬಗ್ಗೆ ಇಲ್ಲಿ ಸ್ಥೂಲವಾಗಿ ಪ್ರಸ್ತಾಪಿಸಬಹುದಾಗಿದೆ.

ಶಿಕ್ಷಣ ಕ್ಷೇತ್ರದಲ್ಲಿ ಹೆಸರಾಂತ ಶಿಕ್ಷಣ ತಜ್ಞರಾದ ಎಸ್. ಮಂಚಯ್ಯನವರ ಸೇವೆ ಶಿಕ್ಷಣ ಕ್ಷೇತ್ರಕ್ಕೆ ಅತ್ಯಮೂಲ್ಯವಾದುದಾಗಿದೆ. ಒಕ್ಕಲಿಗ ಜನಾಂಗದಲ್ಲಿ ಉತ್ತಮ ತಜ್ಞರು ಇವರು. ಶಿಕ್ಷಣ ಇಲಾಖೆಯಲ್ಲಿ ಸೇವೆ ಸಲ್ಲಿಸುತ್ತಾ ವಿಶಾಲವಾದ ಅನುಭವ ಪಡೆದಿದ್ದ ವ್ಯಕ್ತಿ. ಜೊತೆಗೆ ತುಂಬಾ ಜನಪ್ರಿಯ ಅಧಿಕಾರಿ. ಶಿಕ್ಷಣ ಕ್ರಮದ ವಿನ್ಯಾಸಗಳನ್ನು, ಸ್ವರೂಪಗಳನ್ನು ಬಹು ಸೂಕ್ಷ್ಮವಾಗಿ ಅವಲೋಕಿಸಿ, ಅದಕ್ಕೆ ಬೇಕಾದ ಶಿಕ್ಷಣ ಪದ್ಧತಿಗಳನ್ನೂ, ವಿಧಾನಗಳನ್ನು ರೂಪಿಸುತ್ತಾ ಬಂದಿರುವ ಶಿಕ್ಷಣ ತಜ್ಞರು ಇವರು. ಶಿಕ್ಷಣವೆಂದರೆ ಬೆಳವಣಿಗೆಯ ಪ್ರಗತಿ. ಸಮಾಜದ ಒಲವು ನಿಲವುಗಳಿಗೆ ಹೊಂದಿಕೊಂಡು ಶಿಕ್ಷಣ ಪದ್ಧತಿ ಬದಲಾವಣೆ ಹೊಂದುತ್ತಿರುತ್ತದೆ. ಸರ್ವಕಾಲಿಕವಾಗಿ ಸರ್ವದೇಶಗಳಿಗೂ ಸರಿಹೊಂದುವ ಶಿಕ್ಷಣ ಪದ್ಧತಿಯನ್ನು ರೂಪಿಸಲಾಗುವುದಿಲ್ಲ. ಶಿಕ್ಷಣ ಪದ್ಧತಿ ಅಧ್ಯಾತ್ಮಿಕ ಮೌಲ್ಯ, ಜೀವನ ಮೌಲ್ಯ, ಆರ್ಥಿಕ ಮತ್ತು ಸಾಮಾಜಿಕ ರಚನೆ, ರಾಜಕೀಯ ಧೋರಣೆ ಇವುಗಳ ಆಧಾರದ ಮೇಲೆ ರೂಪಿತವಾಗುತ್ತದೆ ಎಂಬ ಹಿನ್ನೆಲೆಯಲ್ಲಿ ಶಿಕ್ಷಣಪದ್ಧತಿಯನ್ನು ರೂಪಿಸುತ್ತಾ ಬಂದವರು. ಎಸ್.ಮಂಚಯ್ಯನವರ ಪ್ರತಿಭೆ ಶಿಕ್ಷಣ ಕ್ಷೇತ್ರಕ್ಕೆ ಅಸಾಧಾರಣವಾದುದಾಗಿದೆ.

ಶಿಕ್ಷಣ ಕ್ಷೇತ್ರಕ್ಕೆ ಕುವೆಂಪು ಅವರ ಶಿಕ್ಷಣ ತತ್ವ ವಿಚಾರಗಳು ಅತ್ಯಂತ ಮೌಲಿಕವೂ, ಮಹತ್ವವೂ ಆದುವುಗಳಾಗಿವೆ. ಮೈಸೂರು ವಿಶ್ವವಿದ್ಯಾನಿಲಯದ ಮಾನಸಗಂಗೋತ್ರಿಯಂಥ ವಿದ್ಯಾ ಕೇಂದ್ರವನ್ನು ಕಟ್ಟಿದ ಸಾಹಸಮಯವಾದ ಚೈತನ್ಯ ಇವರದು. ಶಿಕ್ಷಣ ಕ್ಷೇತ್ರದಲ್ಲಿ ಅಧ್ಯಾಪಕರಾಗಿ, ಪ್ರಾಧ್ಯಾಪಕರಾಗಿ, ಉಪಕುಲಪತಿಗಳಾಗಿ ಶ್ರಮಮಿಸಿ ನಿವೃತ್ತರಾಗಿರುವ ಅವರು ಶಿಕ್ಷಣಕ್ಷೇತ್ರಕ್ಕೆ ಆಗಾಧವಾದ ಸೇವೆಯನ್ನು ಸಲ್ಲಿಸಿದ್ದಲ್ಲದೆ, ಸಾಹಿತಿಯಾಗಿ ತತ್ವಜ್ಞಾನಿಯಾಗಿ, ಶಿಕ್ಷಣತಜ್ಞರಾಗಿ ಹೀಗೆ ಅವರು ಪ್ರತಿಭೆ ವೈವಿಧ್ಯಮಯವಾಗಿ, ವಿಸ್ತಾರವಾಗಿದೆ . ಶಿಕ್ಷಣಕ್ಷೇತ್ರಕ್ಕೆ ಅವರ ಚಿಂತನೆಗಳನ್ನು ಅಳವಡಿಸಿದ್ದೇ ಆದರೆ ಶಿಕ್ಷಣ ಪದ್ಧತಿಯನ್ನು ಹೊಸ ಆಯಾಮ ಪಡೆಯಬಹುದಾಗಿದೆ. ಗಾಂಧೀಜಿಯವರ ಶಿಕ್ಷಣ ಕ್ರಮದ ಆಲೋಚನೆಗಳನ್ನೂ ಒಳಗೊಂಡು, ಕುವೆಂಪು ಶಿಕ್ಷಣತತ್ವ ವಿಚಾರಗಳು ವಿಶಿಷ್ಟ ವಾಗಿದೆ. ವಯಸ್ಕರ ಶಿಕ್ಷಣ, ಶಿಕ್ಷಣದಲ್ಲಿ ಬಾಷಾ ಸಮಸ್ಯೆ, ಪಠ್ಯ ಪುಸ್ತಕಗಳಲ್ಲಿ ಮೂಢ ನಂಬಿಕೆಗಳು ನುಸುಳದಂತೆ ವಹಿಸಬೇಕಾದ ಎಚ್ಚರದ ಬಗ್ಗೆ, ಅನಕ್ಷರತೆ ಮತ್ತು ಅಜ್ಞಾನವನ್ನು ತೊಡೆದುಹಾಕಲು ತೆಗೆದುಕೊಳ್ಳಬೇಕಾದ ಕ್ರಮುಗಳ ಬಗ್ಗೆ, ವೈಜ್ಞಾನಿಕವಾದ ಹಾಗೂ ವೈಚಾರಿಕವಾದ ಎಚ್ಚರಿಕೆಗಳನ್ನು,

ಜವಾಬ್ದಾರಿಗಳನ್ನು, ಶ್ರೀ ಕುವೆಂಪು ಅವರು ಪ್ರತಿಪಾದಿಸಿದ್ದಾರೆ. ಕುವೆಂಪು ಅವರ ಶಿಕ್ಷಣ ತತ್ವಗಳು ವೈಚಾರಿಕವಾದ ಮಾನವೀಯವಾದ ನೆಲೆಗಟ್ಟಿನ ಮೇಲೆ ರೂಪುಗೊಂಡು ನಿಂತಿವೆ. ವಿಶ್ವವಿದ್ಯಾಲಯದಿಂದ ವಿಶ್ವಪ್ರಜೆ, ಆದ್ದರಿಂದ ವಿಶ್ವಮೈತ್ರಿ. ಅಂಥ ವಿಶ್ವಮೈತ್ರಿಯನ್ನು ಪಡೆದ ಮಾನವ ವಿಶ್ವಮಾನವ, ಇಂಥ ವಿಶ್ವಮಾನವನನ್ನು ಸೃಷ್ಟಿಸುವ ನಿಲಯಗಳೇ ವಿಶ್ವವಿದ್ಯಾನಿಲಯಗಳಾಗಬೇಕು ಎಂಬ ವಿಶ್ವಮಾನವತತ್ವವನ್ನು ಶಿಕ್ಷಣಕ್ಷೇತ್ರಕ್ಕೆ ಅಳವಡಿಸಲು ಸೂಚಿಸಿದ್ದಾರೆ. ಇದು ಎಲ್ಲಾ ಜನಾಂಗಗಳೂ ನೆನಪಿನಲ್ಲಿಟ್ಟು ಕೊಳ್ಳಬೇಕಾದ ಶಿಕ್ಷಣದ ಸೂತ್ರವೆನ್ನಬಹುದು.

ಶ್ರೀ ಕುವೆಂಪು ಅವರ ಸಾಧನೆಯ ದಿಕ್ಕಿನಲ್ಲಿಯೇ ಮುಂದುವರೆದ ಅವರ ಶಿಷ್ಯರಲ್ಲಿ ಒಬ್ಬರಾದ ಶ್ರೀ ದೇಜಗೌ ಅವರು ಶಿಕ್ಷಣ ಕ್ಷೇತ್ರಕ್ಕೆ ಸಲ್ಲಿಸಿರುವ ಸೇವೆ ಪ್ರಶಂಸನೀಯವಾದದ್ದು. ಇವರು ಶಿಕ್ಷಣಕ್ಷೇತ್ರದಲ್ಲಿ ಶ್ರೀ ಕುವೆಂಪು ಅವರ ಹಾಗೆಯೇ ಅಧ್ಯಾಪಕರಾಗಿ, ಪ್ರಾಧ್ಯಾಪಕರಾಗಿ, ಕೊನೆಗೆ ಉಪಕುಲಪತಿಗಳಾಗಿ ನಿವೃತ್ತಿಹೊಂದಿದವರು. ನಿವೃತ್ತಿಹೊಂದಿದ ಮೇಲೆ ಕೇವಲ ವಿಶ್ರಾಂತ ಜೀವನದಲ್ಲಿ ಮಾತ್ರ ಅವರು ಮುಳುಗಿಲ್ಲ. ಶಿಕ್ಷಣಕ್ಷೇತ್ರದಲ್ಲಿ ಕನ್ನಡ ಭಾಷೆಗೆ, ಕನ್ನಡ ಸಂಸ್ಕೃತಿಗೆ ಸಲ್ಲಬೇಕಾದ ಮಹತ್ವದ ಬಗ್ಗೆ ನಿರಂತರವಾಗಿ ಹೋರಾಟ ನಡೆಸುತ್ತಲೇ ಇದ್ದಾರೆ. ಅವರ ಬದುಕೆ ಹೋರಾಟದ ಬದುಕು. ಚೆನ್ನಪಟ್ಟಣದ ಹತ್ತಿರದ ಒಂದು ಸಣ್ಣ ಹಳ್ಳಿಯಲ್ಲಿ ಜನಿಸಿದ ಇವರು ಕನ್ನಡ ಸಾಹಿತ್ಯ ಲೋಕಕ್ಕೆ ಸಲ್ಲಿಸುತ್ತಿರುವ ಸೇವೆ ಅಪಾರವಾದ್ದಾಗಿದೆ. ಕುವೆಂಪು ಅವರು ಶಿಕ್ಷಣ ಕ್ಷೇತ್ರದಲ್ಲಿ ಮಾಡದೆ ಉಳಿದಿದ್ದ ಕಾರ್ಯಗಳನ್ನೆಲ್ಲಾ ಇವರು ನೆರವೇರಿಸುತ್ತಾ ಬಂದಿದ್ದಾರೆ ಎಂದರೆ ಅತ್ಯುಕ್ತಿಯಲ್ಲ.

ಮೈಸೂರಿನಲ್ಲಿ ಕುವೆಂಪು ಟ್ರಸ್ಟ್ ಆಶ್ರಯದಲ್ಲಿ ಬೃಂದಾವನ ಪ್ರೌಢಶಾಲೆಯನ್ನು ಸ್ಥಾಪಿಸಿ, ಉಚಿತ ವಸತಿ ಸೌಲಭ್ಯವನ್ನು ವಿದ್ಯಾರ್ಥಿಗಳಿಗೆ ಒದಗಿಸಿದ್ದಾರೆ. ತಮ್ಮ ಸೇವೆಯನ್ನು ಶಿಕ್ಷಣದ ಜೊತೆಗೆ, ಸಾಹಿತ್ಯ ಕೃತಿಗಳ ಪ್ರಕಟಣೆ, ಸಂಶೋಧನೆ, ಮೊದಲಾದ ಹತ್ತಾರು ವಿಶಿಷ್ಟ ಚಟುವಟಿಕೆಗಳಲ್ಲಿ ತಮ್ಮನ್ನು ತೊಡಗಿಸಿಕೊಂಡು ಶ್ರಮಿಸುತ್ತಿದ್ದಾರೆ.

೧೦. ನಮ್ಮ ಕರ್ತವ್ಯ

ಭಾರತದ ಬಹುಮಟ್ಟಿಗೆ ಬಡವರೇ ಅಧಿಕ. ಇದು ಬಡವರ ದೇಶ; ಸುಮಾರು ನೂರರಲ್ಲಿ ಎಪ್ಪತ್ತು ಜನ ಹಳ್ಳಿಗಳಲ್ಲಿ ವಾಸಮಾಡುತ್ತಿದ್ದಾರೆ. ಅಂದರೆ ಇದು ಹಳ್ಳಿಗಳ ದೇಶ. ಇಲ್ಲಿ ಶೇಕಡಾ ಎಪ್ಪತ್ತು ಭಾಗದಷ್ಟು ಜನ ದಾರಿದ್ರ್ಯ ರೇಖೆಯ ಕೆಳಗೆ ಬದುಕುತ್ತಿದ್ದಾರೆ. ಅಜ್ಞಾನ ಮತ್ತು ಅನಕ್ಷರತೆ ಇವರನ್ನು ಕಿತ್ತುತ್ತಿನ್ನುತ್ತಿರುವುದು ವಾಸ್ತವ ಸಂಗತಿ. ಇದು ಸಾಮಾಜಿಕವಾಗಿ ಆರ್ಥಿಕವಾಗಿ ಎರಡರಲ್ಲಿಯೂ ತೊಳಲುತ್ತಿರುವ ಸ್ಥಿತಿ. ಇಂತಹ ಸನ್ನಿವೇಶದಲ್ಲಿ ಶಿಕ್ಷಣದ ಅವಶ್ಯಕತೆಯ ಬಗ್ಗೆ ಒತ್ತಿ ಹೇಳಬೇಕಾಗಿಲ್ಲ. ಆದರೆ ಇಂತಹ ಪರಿಸರದಲ್ಲಿ ವಿದ್ಯಾಭ್ಯಾಸಕ್ಕೆ ತಕ್ಕ ವಾತಾವರಣ, ತಕ್ಕ ಸೌಲಭ್ಯಗಳು, ತಕ್ಕ ಸವಲತ್ತುಗಳು ದೊರಕದೆ ಹತಾಶರಾಗಿರುವ ಮಕ್ಕಳೇ ಹೆಚ್ಚು. ಅನಕ್ಷರತೆಯನ್ನೇ ತಿಂದುಂಡು ಬದುಕುತ್ತಿರುವ ಈ ಮಕ್ಕಳ ಭವಿಷ್ಯವನ್ನು ರೂಪಿಸುವ ಹೊಣೆಗಾರಿಕೆ ಇಂದಿನ ಶಿಕ್ಷಣದ ಪ್ರತಿಯೊಂದು ಜನಾಂಗದ ಬಹುಮುಖ್ಯ ಜವಾಬ್ದಾರಿಯ ಕೆಲಸ. ಇದು ಕರ್ತವ್ಯವಾಗಬೇಕು. ಮಾನವೀಯತೆಯನ್ನು ಹಮ್ಮಿಕೊಂಡು ಬೆಳೆಯಬೇಕು.

ಕೇವಲ ವಿಶ್ವವಿದ್ಯಾಲಯಗಳು ಅಧಿಕ ಸಂಖ್ಯೆಯಲ್ಲಿ ಹುಟ್ಟಿಕೊಂಡರೆ ಸಾಲದು. ಅವು ಜ್ಞಾನದ ಕೇಂದ್ರಗಳಾಗಿ ಬೌದ್ಧಿಕ ಕೇಂದ್ರಗಳಾಗಬೇಕು ಅವುಗಳನ್ನು ಸರಿಯಾದ ಮಾರ್ಗದಲ್ಲಿ ಕೊಂಡೊಯ್ಯುವ ದಕ್ಷ ಆಡಳಿತ ವ್ಯವಸ್ಥೆ ರೂಪುಗೊಳ್ಳಬೇಕು. ಜ್ಞಾನಾರ್ಜನೆಗಾಗಿ ಉತ್ತಮವಾದ ಗ್ರಂಥಭಂಡಾರ ನಿರ್ಮಾಣವಾಗಬೇಕು. ಸಂಶೋಧನೆಗಾಗಿ

ಬೋಧನೆಗಾಗಿ, ಉತ್ತಮ ವಿದ್ಯಾವಂತರ ವರ್ಗಸೃಷ್ಟಿಗೊಳ್ಳಬೇಕು. ಪ್ರಸಾರಾಂಗ ಜ್ಞಾನದ ಪ್ರಕಟಣೆಗಳಲ್ಲಿ ಪ್ರಮುಖ ಕೇಂದ್ರವಾಗಬೇಕು. ಇವೆಲ್ಲಾ ಒಂದಕ್ಕೊಂದು ಪೂರಕವಾಗಿ, ಪೋಷಕವಾಗಿ ದುಡಿದರೆ ಶಿಕ್ಷಣ ಕ್ಷೇತ್ರವೂ ಸಮೃದ್ಧವಾದೀತು. ದೇಶವೂ ಧನಿಕವಾದೀತು. ಈ ದಿಕ್ಕಿನಲ್ಲಿ ಪ್ರತಿಯೊಂದು ಜನಾಂಗವೂ ಸರ್ವೋದಯದ ದೃಷ್ಟಿಯಿಂದ, ಸಮನ್ವಯವಾದ ದೃಷ್ಟಿಯಿಂದ, ಪೂರ್ಣ ದೃಷ್ಟಿಯಿಂದ ಶಿಕ್ಷಣ ಕ್ಷೇತ್ರದಲ್ಲಿ ದುಡಿದರೆ, ಶಿಕ್ಷಣ ಕ್ಷೇತ್ರ ಫಲವತ್ತಾದ ಕ್ಷೇತ್ರವಾದೀತು; ಮಾನವೀಯತೆ ಸೃಜಿಸೀತು.

**೪.೩. ಪತ್ರಿಕಾ ಕ್ಷೇತ್ರಕ್ಕೆ ಒಕ್ಕಲಿಗರ ಕೊಡುಗೆ**

ಹಿಂದೆ ಮೈಸೂರು ರಾಜ್ಯದಲ್ಲಿ ಕ್ರೈಸ್ತ ಸಮಾಜದಿಂದ 'ವೃತ್ತಾಂತ ಪತ್ರಿಕೆಯೂ', ಬ್ರಾಹ್ಮಣ ಸಮಾಜದಿಂದ 'ಸಾಧ್ವಿ' 'ಸಂಪದಭ್ಯುಯ' ಪತ್ರಿಕೆಗಳೂ, ಒಕ್ಕಲಿಗರ ಸಂಘದಿಂದ 'ಒಕ್ಕಲಿಗರ ಪತ್ರಿಕೆ' ವೀರಶೈವ ಸಮಾಜದಿಂದ 'ಮೈಸೂರು ಸ್ಟಾರ್' ಪತ್ರಿಕೆಯೂ ಕನ್ನಡ ಭಾಷೆಯಲ್ಲಿ ಪ್ರಕಟವಾಗಿ, ಆಯಾ ಜನಾಂಗಗಳ ಹಾಗೂ ರಾಜ್ಯದ ಇತಿಮಿತಿಗಳನ್ನು ಶ್ರೀಸಾಮಾನ್ಯರ ಮುಂದಿಟ್ಟು ಬೆಳೆದುವು.

ಜನಜೀವನ ಯೋಗಕ್ಷೇಮ ಸಾಧನೆಗಾಗಿ ಮಾನವ ನಿರ್ಮಿತ ವ್ಯವಹಾರ ವಾಹಿನಿಗಳು ಮೂರು ೧. ಆಡಳಿತ ಕ್ಷೇತ್ರ. ೨. ಸಾಹಿತ್ಯ ಕ್ಷೇತ್ರ ೩. ಧಾರ್ಮಿಕ ಕ್ಷೇತ್ರ. ಈ ಮೂರರಲ್ಲಿ ಪತ್ರಿಕಾ ಕ್ಷೇತ್ರ ಸಾಹಿತ್ಯದ ಗುಂಪಿಗೆ ಸೇರುತ್ತದೆ. ಸಾಹಿತ್ಯದ ನಾಲ್ಕು ಪ್ರಕಾರಗಳಾದ ನಾಟಕ, ಕಥೆ, ಪ್ರಬಂಧ ಹಾಗೂ ಕಾವ್ಯ ಇವು ಕ್ರಮಬದ್ಧವಾಗಿ ಬೆಳೆದು ಬಂದಿವೆ. ಇವುಗಳಲ್ಲಿ ಪ್ರಬಂಧ ಸಾಹಿತ್ಯವು ಪತ್ರಿಕಾ ಪ್ರಪಂಚದ ಮುಖ್ಯ ಸಾಧನ. ಇದು ಶುದ್ಧ ಪ್ರಬಂಧವಾಗಿರಬಹುದು ಅಥವಾ ಸುದ್ದಿ ವಿತರಣೆಯಾಗಿರಬಹುದು. ಆದುದರಿಂದ ಪತ್ರಿಕಾ ಕ್ಷೇತ್ರಕ್ಕೆ (ಜರ್ನಲಿಸಂ) ಕಾಲಿಡುವ ಬರಹಗಾರ ಸೂಕ್ಷ್ಮಮತಿಯಾಗಿ, ಮಾನವನ ಅಂತರಂಗ ಹಾಗೂ ಬಹಿರಂಗ ಚೇತನವನ್ನು ವೈಚಾರಿಕವಾಗಿ ಆಳವಾಗಿ ಅರಿತವನಾಗಿರಬೇಕು' ಮಾರ್ಗದರ್ಶನ ನೀಡುವಂತಿರಬೇಕು.

ಭರತಖಂಡಕ್ಕೆ ಆಂಗ್ಲರ ಪ್ರದೇಶವುಂಟಾದಂದಿನಿಂದ ವರ್ತಮಾನ ಪತ್ರಿಕೆಗಳ ಛಾಯೆ ಮೂಡಿಬಂತು. ಇಂಗ್ಲೆಂಡಿನ ಲಂಡನ್ ಟೈಮ್ಸ್ ಪತ್ರಿಕೆ ಅತ್ಯಂತ ಪುರಾತನವಾದುದು. ಇದು ಮೊಟ್ಟಮೊದಲಿಗೆ ವಾರ ಪತ್ರಿಕೆಯಾಗಿ (ವೀಕ್ಲಿ ನ್ಯೂಸ್ ಲೆಟರ್ ಮಾದರಿಯಲ್ಲಿ) ಪ್ರಕಟವಾಗುತ್ತಿತ್ತು. ಈಗಿನ 'ರೀಡರ್ಸ್ ಡೈಜಸ್ಟ್' ಮಾದರಿಯಲ್ಲಿ. ಎಂದಮೇಲೆ ಕನ್ನಡ ರಾಜ್ಯದಲ್ಲಿ ಪತ್ರಿಕಾ ಕ್ಷೇತ್ರ ಒಂದು ಶತಮಾನದಿಂದೀಚೆಗೆ ಅಸ್ತಿತ್ವಕ್ಕೆ ಬಂದಿದೆ. ಮೈಸೂರು ರಾಜ್ಯದಲ್ಲಿ ಕ್ರೈಸ್ತ ಸಮಾಜದಿಂದ 'ವೃತ್ತಾಂತ ಪತ್ರಿಕೆ' ಯೂ, ಬ್ರಾಹ್ಮಣ ಸಮಾಜದಿಂದ 'ಸಾಧ್ವಿ' ಮತ್ತು 'ಸಂಪದಭ್ಯುದಯ' ಪತ್ರಿಕೆಗಳೂ, ಒಕ್ಕಲಿಗ ಸಂಘದಿಂದ 'ಒಕ್ಕಲಿಗರ ಪತ್ರಿಕೆ' ಯೂ ವೀರಶೈವ ಸಮಾಜದಿಂದ 'ಮೈಸೂರು ಸ್ಟಾರ್' ಪತ್ರಿಕೆಯೂ ಕನ್ನಡ ಭಾಷೆಯಲ್ಲಿ ಪ್ರಕಟವಾಗಿ, ಆಯಾ ಜನಾಂಗಗಳ ಹಾಗೂ ರಾಜ್ಯದ ಇತಿಮಿತಿಗಳನ್ನು ಶ್ರೀಸಾಮಾನ್ಯರ ಮುಂದಿಟ್ಟು ಬೆಳೆದವು. ಅದರಲ್ಲೂ ಭರತಖಂಡದ ಸ್ವಾತಂತ್ರ್ಯ ಸಂಗ್ರಾಮದಲ್ಲಿ, ಆ ತರುವಾಯ ಭಾರತಕ್ಕೆ ಸ್ವರಾಜ್ಯ ದೊರೆತಮೇಲೆ ಪತ್ರಿಕಾ ಕ್ಷೇತ್ರ ಇತೋಪ್ಯತಿಶಯವಾಗಿ ಬೆಳೆದುಬಂದಿದೆ. ಪ್ರತಿ ಪ್ರಾತಃಕಾಲ ಪತ್ರಿಕೆ ಓದಿ, ವಿಚಾರ ವಿನಿಮಯ ಮಾಡಿಕೊಳ್ಳಬೇಕೆನ್ನುವಷ್ಟು ಪ್ರಭಾವ ಬೀರಿದೆ ಪತ್ರಿಕಾ ಕ್ಷೇತ್ರ. ಒಳ್ಳೆಯ ಪತ್ರಿಕೆ ನೇತ್ರಾಂಜನವಿದ್ದಂತೆ, ವಿಚಾರವಾಹಿನಿ ಇದ್ದಂತೆ. ದೇಶ ವಿದೇಶಗಳ ನಿಜ ಸ್ವರೂಪ ಕಾಣುವುದು ಪತ್ರಿಕೆ ಮೂಲಕವೇ

ಇಂತಹ ಸನ್ನಿವೇಶದಲ್ಲಿ ಪತ್ರಿಕಾ ಕ್ಷೇತ್ರದಲ್ಲಿ ಒಕ್ಕಲಿಗರ ಕೊಡುಗೆ ಏನೆಂಬುದನ್ನೂ, ಎಷ್ಟೆಂಬುದನ್ನೂ ನಾವು ಅರಿತಿರಬೇಕಾದುದು ಅತ್ಯಗತ್ಯ. ಆದುದರಿಂದ ಪತ್ರಿಕಾ ಕ್ಷೇತ್ರದಲ್ಲಿ ದುಡಿದು ಲೋಕೋತ್ತರ ಸೇವೆ ಸಲ್ಲಿಸಿರುವ ಒಕ್ಕಲಿಗ ಮಹನೀಯರ ಸ್ಪಷ್ಟ ಚಿತ್ರಣವನ್ನು ನನಗೆ ತಿಳಿದ ಮಟ್ಟಿಗೆ ಇಲ್ಲಿ ಚರ್ಚಿಸಲಾಗಿದೆ. ಇದರಲ್ಲಿ ಮೊಟ್ಟ ಮೊದಲು ದಿನಾಂಕ ೧೫.೩.೧೯೦೭ ರಿಂದ ೬.೨.೧೯೭೨ರ ವರೆಗಿನ ೬೫ ವರ್ಷಗಳಲ್ಲಿ ಒಕ್ಕಲಿಗರ ಪತ್ರಿಕೆಗಾಗಿ ಒಕ್ಕಲಿಗರ ಸಂಘದ ಆಶ್ರಯದಲ್ಲಿ ದೃಢ ಸಂಕಲ್ಪದಿಂದ ಸಂಪಾದಕರಾಗಿ ದುಡಿದ ಹದಿನೈದು ಮಂದಿ ಹಿರಿಯರನ್ನು ನಾವು ಸ್ಮರಿಸಬೇಕು. ಸಿ.ಲಕ್ಷ್ಮಣಗೌಡ ಬಿ.ಎ., ಬಿ.ಎಲ್., ಬಿ.ಪುಟ್ಟಯ್ಯ ಬಿ.ಎ., ಎಸ್.ವಿ.ವೆಂಕಟರಾಮಯ್ಯ, ಪಿಎಚ್.ಡಿ., ಜಿ.ಎಚ್. ಗಿರಿಯಪ್ಪಗೌಡ ಬಿ.ಎ., ಎಂ. ಸುಬ್ಬಯ್ಯ ಬಿ.ಎ., ಎಂ ಎಲ್.ಸಿ., ಬಿ. ಪುಟ್ಟಸ್ವಾಮಯ್ಯ, ಬಿ.ಆರ್. ನರಸಿಂಹಯ್ಯ, ಡಿ.ಆರ್.ರಾಮಯ್ಯ ಬಿ.ಎ., ಬಿಂ.ಸಿ.ಹನುಮಯ್ಯ, ಸಿ.ಆರ್.ಕಾಮತ್ ಬಿ.ಎ., ಕೆ.ಪಿ.ಮಿದ್ದಪ್ಪ ಬಿ.ಎ., ಎಲ್ ಎಲ್.ಬಿ., ಎಂ.ಶಂಕರಲಿಂಗೇಗೌಡ ಬಿ.ಎ., ಎನ್.ಸಿ.ಅಣ್ಣಯ್ಯ ಬಿ.ಎ., ಬಿ.ಟಿ. ಇವರುಗಳು ಪ್ರಮುಖರಾದವರಾಗಿದ್ದಾರೆ.

## ೩. ವ್ಯಕ್ತಿ ವೈಶಿಷ್ಟ್ಯ

### ೧. ಎಂ.ಎಲ್. ಶ್ರೀಕಂಠೇಶಗೌಡ (೧೮೫೨-೧೯೨೬) ಬೆಂಗಳೂರು

ಪತ್ರಿಕೋದ್ಯಮಕ್ಕೆ ಬಹಳ ಹಿಂದೆ ಸೇವೆ ಸಲ್ಲಿಸಿದ ಒಕ್ಕಲಿಗ ಮಹನೀಯರಲ್ಲಿ ಶ್ರೀಕಂಠೇಶಗೌಡರು ಅಗ್ರಗಣ್ಯರು. ಇವರ ಸಾಹಿತ್ಯ ಚಟುವಟಿಕೆಗಳ ಮಧ್ಯೆ "ಸುರಭಿ" ಮಾಸಪತ್ರಿಕೆಯನ್ನು ನಡೆಸಿಕೊಂಡು ಬಂದರು. ಇದರ ಪ್ರಾರಂಭ ೧೮೯೬. ಪತ್ರಿಕೆಯ ಪ್ರಮುಖ ವಿಷಯ ಸಾಹಿತ್ಯ ಇತ್ಯಾದಿ. ಇದರ ಜೊತೆಗೆ 'ವಿದ್ಯಾದಾಯಿನಿ' ಎಂಬ ಮಾಸಪತ್ರಿಕೆಯನ್ನು ನಡೆಸುತ್ತಿದ್ದರೆಂದು ತಿಳಿದುಬರುತ್ತದೆ. ಇವರು ೧೮೯೬-೯೭ ರಲ್ಲಿ 'ಸುರಭಿ' ಮತ್ತು 'ವಿದ್ಯಾದಾಯಿನಿ' ಪತ್ರಿಕೆಗಳಲ್ಲಿ ಬರೆದ ಕೆಲವು ಲೇಖನಗಳ ಪಟ್ಟಿ "ಶ್ರೀಕಂಠೇಶಗೌಡರ ಕೃತಿಗಳು" ಎಂಬ ಗ್ರಂಥದ ಕೊನೆಯಲ್ಲಿ ಕೊಟ್ಟಿದೆ.

### ೨. ಎಚ್.ಕೆ. ವೀರಣ್ಣಗೌಡ (೧೮೯೯-೧೯೭೬) ಬೆಂಗಳೂರು

ವೀರಣ್ಣಗೌಡರ ವೈವಿಧ್ಯಮಯ ಜೀವನದಲ್ಲಿ ಪತ್ರಿಕೋದ್ಯಮವೂ ಒಂದಾಗಿತ್ತು. "ಕರ್ನಾಟಕ ವಿದ್ಯಾರ್ಥಿ" ಎಂಬ ದ್ವೈಮಾಸಿಕ ಸಂಪಾದನೆಯೊಂದಿಗೆ ಇವರ ಪತ್ರಿಕೋದ್ಯಮದ ನಂಟು ಪ್ರಾರಂಭವಾಯಿತೆನ್ನಬಹುದು. ಬೆಂಗಳೂರಿನಿಂದ ಪ್ರಕಟವಾಗುತ್ತಿದ್ದ "ಒಕ್ಕಲಿಗರ ಪತ್ರಿಕೆ"ಗೆ ಸಂಪಾದಕರಾಗಿ ೧೯೨೮ರಲ್ಲಿ ಪ್ರಥಮವಾಗಿ ವಿಶೇಷ ಸಂಚಿಕೆ ಪ್ರಕಟಪಡಿಸಿದರು. ಆ ತರುವಾಯ ಪ್ರಸಿದ್ಧವಾದ 'ಚಿತ್ರಗುಪ್ತ' ಪತ್ರಿಕೆಯನ್ನು ಡಿಸೆಂಬರ್ ೧೯೨೮ ರಲ್ಲಿ ಪ್ರಾರಂಭಿಸಿ ಅದನ್ನು ಬೆಂಗಳೂರಿನ ತಮ್ಮ ಗ್ರಾಮಸೇವಾ ಪ್ರೆಸ್‌ನಲ್ಲಿ ಸಂಪಾದಿಸಿ ಮುದ್ರಿಸುತ್ತಿದ್ದರು. ರಾಜಕೀಯ, ಆರ್ಥಿಕ ಮುಂತಾದ ನಾನಾ ಕಾರಣಗಳಿಂದ ಈ ಪತ್ರಿಕೆ ೧೯೩೧ನೆಯ ಇಸವಿ ಅಂತ್ಯದಲ್ಲಿ ನಿಂತಿತು. ಮುಂದೆ 'ವಾರ್ತಾ' ಎಂಬ ದಿನಪತ್ರಿಕೆಯನ್ನು ಬೆಂಗಳೂರಿನಿಂದ ಎಂ. ರಾಮಮೂರ್ತಿಯವರೊಡನೆ ನಡೆಸುತ್ತಿದ್ದರು. ಈ ಪತ್ರಿಕೆಯ ಕಾಲ ೧೯೪೨-೪೩. ವೀರಣ್ಣಗೌಡರು ಮತ್ತೆ ೧೯೪೭ ರಲ್ಲಿ ಸ್ವಾತಂತ್ರ್ಯ ಬಂದನಂತರ 'ಚಿತ್ರಗುಪ್ತ'ವನ್ನು ಪ್ರಕಟಿಸಲಾರಂಭಿಸಿದರು. ಪತ್ರಿಕೆ ಸುಮಾರು ಒಂದು ವರ್ಷಕಾಲ ನಡೆದು ನಿಂತಿತು. ಮುಂದೆ ಆರು ತಿಂಗಳು ಮಾತ್ರ ಭಾರದ್ವಾಜರು 'ಚಿತ್ರಗುಪ್ತ'ವನ್ನು ನಡೆಸಿಕೊಂಡು ಬರುವ ಧೈರ್ಯಮಾಡಿ ಕೊನೆಗೆ ನಿಲ್ಲಿಸಬೇಕಾಯಿತು.

**೩. ಡಿ.ಆರ್. ರಾಮಯ್ಯ, ಬೆಂಗಳೂರು**

೧೯೩೩ರಲ್ಲಿ ಒಕ್ಕಲಿಗರ ಪತ್ರಿಕೆಯನ್ನು ನಡೆಸಿಕೊಟ್ಟು ಸೇವೆ ಸಲ್ಲಿಸಿದ್ದಾರೆ. ಒಕ್ಕಲಿಗರ ಸಂಘವು ೧೯೩೩ರಲ್ಲಿ ಒಕ್ಕಲಿಗರ ಪತ್ರಿಕೆಯನ್ನು ಒಂದು ವರ್ಷ ಇವರಿಗೆ ಗುತ್ತಿಗೆ (ಲೀಸ್)ವಹಿಸಿತ್ತು. ಇವರ ಸ್ವಂತಗಾರಿಕೆಯಲ್ಲಿ ಪತ್ರಿಕೆಯ ಪುಟಗಳು ೪ ರಿಂದ ೧೨ಕ್ಕೆ ಹೆಚ್ಚಿದುವು. ಮುಖಪುಟದ "ಮೇಲ್ಪಂಗ್ತಿ" ಚಿಂತನಮಾಲೆ ಪ್ರಭಾವ ಬೀರಿತ್ತು.

**೪. ಎ. ರಾಮಣ್ಣ, ಮೈಸೂರು**

ಮೈಸೂರಿನ 'ವಿಜಯ' ಪತ್ರಿಕೆ ಬಹು ಜನರಿಗೆ ಪರಿಚಿತವಾದದ್ದು. ಇದರ ಸಂಪಾದಕರು ಎ.ರಾಮಣ್ಣನವರು ಮೈಸೂರಿನ ಸಂಜೆ ದಿನಪತ್ರಿಕೆಯಾದ 'ವಿಜಯ'ದ ಪ್ರಾರಂಭ ೧೫.೦೮.೧೯೪೭ರಲ್ಲಿ ಪ್ರಚಲಿತ ರಾಜಕೀಯ ಹಾಗೂ ಸುದ್ದಿ ಸಮಾಚಾರಗಳಿಗೆ ಹೆಸರಾಗಿ ಇಂದಿಗೂ ನಡೆದುಬರುತ್ತಿದೆ. ನಿರ್ದಾಕ್ಷಿಣ್ಯ ಬರವಣಿಗೆ ಹಾಗೂ ಸಮಾಜವನ್ನು ಎಚ್ಚರಗೊಳಿಸಿ ಅವರಿಗೆ ದೊರಕಬೇಕಾದ ನ್ಯಾಯಕ್ಕಾಗಿ ಹೋರಾಡಲು ಪಣ ತೊಟ್ಟಂತಿದೆ. ಇವರ ಅನೇಕ ಸಂಪಾದಕೀಯ ಬರವಣಿಗೆಗಳು ಯಾರನ್ನೇ ಆಗಲಿ ತಮ್ಮ ಹರಿತವಾದ ಲೇಖನಿಯಿಂದ ಎಚ್ಚರಿಸಬಲ್ಲವು.

**೫. ಜಿ.ನಾರಾಯಣ, ಬೆಂಗಳೂರು.**

'ವಿನೋದ' ಮಾಸಪತ್ರಿಕೆ. ಜಿ.ನಾರಾಯಣ ಅವರ ಸಂಪಾದಕತ್ವದಲ್ಲಿ ಬೆಂಗಳೂರಿನಿಂದ ಪ್ರಕಟವಾಗುತ್ತಿದೆ. ಇದರ ಪ್ರಾರಂಭ ೧೯೫೧ ಫೆಬ್ರವರಿಯಲ್ಲಿ. ಪ್ರತಿ ವರ್ಷ ಆಗಸ್ಟ್‌ನಲ್ಲಿ ವಿಶೇಷ ಸಂಚಿಕೆಯೊಂದನ್ನು ಪ್ರಕಟಿಸುತ್ತಾರೆ. ಸಂಚಿಕೆಯ ಬೆಳ್ಳಿ ಹಬ್ಬವನ್ನು ನೆರವೇರಿಸಿದ ಸಂದರ್ಭದಲ್ಲಿ ಒಂದು ವಿಶೇಷ ಸಂಗ್ರಹವನ್ನು ಹೊರತರಲಾಯಿತು. ಬಹಳ ಉಪಯುಕ್ತ ಹಾಸ್ಯ ಬರಹ ಸಂಗ್ರಹದಲ್ಲಿ ಇದೂ ಒಂದು.

**೬. ಕೆ.ವಿ.ಶಂಕರಗೌಡ, ಮಂಡ್ಯ**

ಶುದ್ಧ ರಾಜಕೀಯ ಜೀವನಕ್ಕೆ ಹೆಸರಾದ ಶಂಕರಗೌಡರು ವಿದ್ಯಾಮಂತ್ರಿಗಳಾಗಿದ್ದಾಗ ಕನ್ನಡಕ್ಕೆ ಅಡಿಪಾಯವಾಗಬಲ್ಲಂತಹ ಅನೇಕ ಕೆಲಸಗಳನ್ನು ಮಾಡಿದರು. ಇವರ ಸಂಪಾಕತ್ವದಲ್ಲಿ 'ಜನಮನ' ಪತ್ರಿಕೆ ಮಂಡ್ಯದಿಂದ ಹೊರಡುತ್ತಿತ್ತು. ಇದು ೧೯೫೭ ಅಕ್ಟೋಬರ್‌ನಿಂದ ಪ್ರಾರಂಭವಾಗಿ ಒಂದು ವರ್ಷ ಕಾಲ ನಡೆದು ನಿಂತಿತು. ಪ್ರಚಲಿತ ರಾಜಕೀಯ, ಸಾಮಾಜಿಕ ಮತ್ತು ಸಾಹಿತ್ಯಕ ವಿಷಯಗಳಿಗೆ ಪತ್ರಿಕೆ ಹೆಸರಾಗಿತ್ತು. ಕನ್ನಡ ನಾಡಿನ ಅನೇಕ ಹೆಸರಾಂತ ಲೇಖಕರ ಲೇಖನಗಳು ಈ ಪತ್ರಿಕೆಯಲ್ಲಿ ಪ್ರಕಟಗೊಂಡಿವೆ.

**೭. ಪೂರ್ಣಚಂದ್ರತೇಜಸ್ವಿ, ಮೂಡಿಗೆರೆ**

'ಲಹರಿ' (೧೯೬೧) ಎಂಬ ಪತ್ರಿಕೆಯನ್ನು ಪ್ರಕಟಿಸುತ್ತಿದ್ದರು. ಸುಮಾರು ಆರು ವರ್ಷಗಳ ಕಾಲ ಇದು ಪ್ರಕಟವಾಗುತ್ತಿತ್ತು. ಈಗ ಅದರ ಪ್ರಕಟಣೆ ನಿಂತಿದೆ. ಇದು ಸಾಹಿತ್ಯ ವಾರ್ಷಿಕ ಸಂಚಿಕೆಯ ರೀತಿಯಲ್ಲಿ ಬೆಳಕು ಕಾಣುತ್ತಿತ್ತು. ಇದು ವಿಮರ್ಶ ಲೇಖನಗಳನ್ನೊಳಗೊಂಡ ಪತ್ರಿಕೆ.

**೮. ಎಂ.ನಾರಾಯಣಗೌಡ, ಬೆಂಗಳೂರು**

ಇವರ 'ರೈತಬಂಧು' ೧೯೬೩ರಿಂದ ಬೆಂಗಳೂರಿನಲ್ಲಿ ಪ್ರಕಟಗೊಂಡು ನಡೆದುಬರುತ್ತಿರುವ ವಾರಪತ್ರಿಕೆ. ಈ ಪತ್ರಿಕೆಯಲ್ಲಿ ಕೃಷಿ ಮತ್ತು ಗ್ರಾಮೀಣ ಸುದ್ದಿ ಸಮಾಚಾರಗಳಿಗೆ ಹೆಚ್ಚು ಪ್ರಾಧಾನ್ಯತೆ. ರಾಜಕೀಯ ವಿಷಯಗಳಿಗೂ ವಿಶೇಷ ಸ್ಥಾನ ಉಂಟು.

೯. ಎಚ್.ವಿ.ವೀರೇಗೌಡ, ಮಂಡ್ಯ

ಇವರ ಸಂಪಾದಕತ್ವದಲ್ಲಿ ಮಂಡ್ಯದಿಂದ ಹೊರಡುತ್ತಿರುವ 'ಸಹಕಾರ ಜ್ಯೋತಿ' ಮಾಸಪತ್ರಿಕೆ ೧೯೬೩ ಫೆಬ್ರವರಿಯಂದು ಪ್ರಾರಂಭವಾಯಿತು. ಸಹಕಾರ, ಗ್ರಾಮೀಣ ವಿಷಯ ಇದರ ಪ್ರಮುಖ ವಿಷಯ ಸುದ್ದಿಯಾಗಿತ್ತು.

೧೦. ಪಿ.ಎನ್.ಜವರಪ್ಪಗೌಡ, ಮಂಡ್ಯ

ಇವರ 'ವಿಶ್ವಾಮಿತ್ರ' ಪತ್ರಿಕೆ ಬೆಂಗಳೂರಿನಿಂದ ೧೯೬೫ರಿಂದ ಪ್ರಕಟವಾಗುತ್ತಿತ್ತು. 'ಜನವಾಣಿ' ಮತ್ತು 'ಸಂಯುಕ್ತ ಕರ್ನಾಟಕ' ಪತ್ರಿಕೆಗಳ ಮಂಡ್ಯ ಜಿಲ್ಲೆಯ ಪ್ರತಿನಿಧಿಯಾಗಿ ರಾಜಕಾರಣಿಯಾಗಿ ಸೇವೆ ಸಲ್ಲಿಸುತ್ತಿರುವ ಇವರ ಬರಹಗಳು ತುಂಬಾ ಮೊನಚಾಗಿದ್ದು ಜನಮನವನ್ನು ಜಾಗೃತಗೊಳಿಸುತ್ತಿದ್ದುವು. ಈಗ 'ವಿಶ್ವಾಮಿತ್ರ' ಪತ್ರಿಕೆ ನಿಂತುಹೋಗಿದೆ.

೧೧. ಹುಲ್ಲೇಕೆರೆ ರಮೇಶ, ಮಂಡ್ಯ

ಇವರು ಮಂಡ್ಯದಿಂದ ಸಂಪಾದಿಸಿ ಪ್ರಕಟಿಸುತ್ತಿರುವ ವಿಕ್ಷಕ ವಾರಪತ್ರಿಕೆ ಮಂಡ್ಯದ ಹೊರಗೂ ಹೆಸರುಮಾಡಿದೆ. ಇದರ ಪ್ರಾರಂಭ ೨೭.೦೫.೧೯೭೩ರಂದು ವೈಚಾರಿಕತೆ ಸುದ್ದಿ, ಸಮಾಚಾರ, ಕವನ, ಕಥೆ ಮುಂತಾದುವಕ್ಕೆ ಈ ಪತ್ರಿಕೆ ಹೆಸರಾಗಿದೆ. ಸ್ಥಳೀಯ ಸುದ್ದಿಗಳಿಗೆ ವಿಶೇಷ ಮಹತ್ವವಿರುವ ಈ ಪತ್ರಿಕೆ ಮೈಸೂರು ಮತ್ತು ಮಂಡ್ಯ ಜಿಲ್ಲೆಗಳೆರಡರಲ್ಲೂ ತನ್ನ ಪ್ರಸಾರವನ್ನು ಹೊಂದಿದೆ.

೧೨. ಶ್ರೀ ಕೌಡ್ಲೆ ಚೆನ್ನಪ್ಪ, ಮಂಡ್ಯ

ಅವರ ಸಂಪಾದಕತ್ವದಲ್ಲಿ ಮಂಡ್ಯದಿಂದ ಪ್ರಕಟವಾಗುತ್ತಿರುವ 'ದೇಹಿತ' ೧೯೭೩ರಲ್ಲಿ ಪ್ರಾರಂಭವಾಯಿತು. ಸ್ಥಳೀಯ ಸುದ್ದಿ ಸಮಾಚಾರ ಇತ್ಯಾದಿಗಳ ಈ ಪತ್ರಿಕೆ ದಿನಪತ್ರಿಕೆಯಾಗಿದ್ದು ಈಗ ವಾರಪತ್ರಿಕೆಯಾಗಿದೆ.

೧೩. ಶ್ರೀ ರಾಮಲಿಂಗಯ್ಯ ಉಪ್ಪಿನಕೆರೆ, ಮೈಸೂರು.

ಇವರ ಸಂಪಾದಕತ್ವದಲ್ಲಿ 'ಆರೋಗ್ಯ ನಿಧಿ' ವಿಜ್ಞಾನ ಮಾಸಪತ್ರಿಕೆ ಮೈಸೂರಿನಿಂದ ಪ್ರಕಟವಾಗುತ್ತಿದೆ. ಇದರ ಪ್ರಾರಂಭ ೧೯೭೫. ನಾಡ ವೈದ್ಯ ಮತ್ತು ಅದರ ಆಗುಹೋಗುಗಳನ್ನು ಸಾಮಾನ್ಯ ಜನರಿಗೆ ಪರಿಚಯ ಮಾಡಿಕೊಡುವಲ್ಲಿ ಈ ಮಾಸಪತ್ರಿಕೆ ಯಶಸ್ವಿಯಾಗಿದೆ. ಅನೇಕ ಮೂಢನಂಬಿಕೆಗಳು ವೈದ್ಯಕೀಯದಲ್ಲೂ ನುಸುಳುತ್ತವೆಂಬುದನ್ನು ಇದರಲ್ಲಿ ಕಾಣಬಹುದು.

೧೪. ಎಂ.ಲಿಂಗಯ್ಯ, ಮಂಡ್ಯ

ಅವರ ಸಂಪಾದಕತ್ವದಲ್ಲಿ ಮಂಡ್ಯದಿಂದ ಹೊರಡುತ್ತಿದ್ದ 'ಉದಯರವಿ' ವಾರಪತ್ರಿಕೆ ೧೯೭೬ರಲ್ಲಿ ಆರಂಭವಾಯಿತು. ತನ್ನ ಪ್ರಕಟಣೆಯನ್ನು ೧೯೮೧ರಿಂದ ನಿಲ್ಲಿಸಿದೆ. ರಾಜಕೀಯ ಪ್ರಾದೇಶಿಕ ವಿಷಯಗಳಿಗೆ ಈ ಪತ್ರಿಕೆ ಮೀಸಲಾಗಿತ್ತು.

೧೫ ಎಲ್.ಎಸ್.ರಾಮಲಿಂಗಯ್ಯ, ಬೆಂಗಳೂರು

ಭಾರತದ ಸ್ವಾತಂತ್ರ್ಯ ಚಳುವಳಿಯ ಕಾಲದಲ್ಲಿ ಕೆಲವು ವರ್ಷ ''ಪ್ರಜಾರಾಜ್ಯ'' ಪತ್ರಿಕೆ ನಡೆಸಿ ಪತ್ರಿಕೋದ್ಯಮಿಯಾಗಿ ಸೇವೆ ಸಲ್ಲಿಸಿದ್ದಾರೆ.

೧೬. ಎ.ಎಲ್.ಬಸವೇಗೌಡ, ಮಂಡ್ಯ

ಇವರ 'ನುಡಿಭಾರತಿ' ಕನ್ನಡ ವಾರಪತ್ರಿಕೆ ಮಂಡ್ಯದಿಂದ ತನ್ನ ಪ್ರಕಟಣೆಯನ್ನು ೧೯೭೭ರಲ್ಲಿ ಪ್ರಾರಂಭಿಸಿತು. ಮುಂದೆ ದಿನಪತ್ರಿಕೆಯೂ ಆಯಿತು, ಯುವಜನರ ಮತ್ತು ಮಾನವಿಕ ವಿಷಯಗಳಿಗ ಪ್ರಾಧಾನ್ಯತೆ ಕೊಡುತ್ತಿದೆ.

೧೭. ಸು. ತ. ರಾಮೇಗೌಡ, ಚನ್ನಪಟ್ಟಣ

'ಬಯಲುಸೀಮೆ' ಚನ್ನಪಟ್ಟಣದಿಂದ ಪ್ರಕಟವಾಗುತ್ತಿರುವ ಈ ವಾರಪತ್ರಿಕೆ ಕಳೆದ ಎರಡು ವರ್ಷಗಳಿಂದ ಪ್ರಾದೇಶಿಕ ವಿಚಾರಗಳಿಗೆ ಮೀಸಲಾಗಿ ಇಂದೂ ಪ್ರಕಟವಾಗುತ್ತಿದೆ.

೧೮. ಎಚ್.ಎಲ್.ನಾಗೇಗೌಡ, ಬೆಂಗಳೂರು

ಅವರ ಪ್ರಧಾನ ಸಂಪಾದಕತ್ವದಲ್ಲಿ ಬೆಂಗಳೂರಿನ ಜಾನಪದ ಟ್ರಸ್ಟಿನ ಮುಖವಾಣಿಯಾಗಿ 'ಜಾನಪದ ಜಗತ್ತು' ಪ್ರಕಟವಾಗುತ್ತಿದೆ. ಇದು ಜಾನಪದ ಸಾಹಿತ್ಯ. ಜೀವನ ಕಲೆ ಸಂಸ್ಕೃತಿಗಳನ್ನು ಪರಿಯಿಸುವ ಮತ್ತು ಜಾನಪದ ಕಲಾವಿದರನ್ನು ಬೆಳಕಿಗೆ ತಂದ ಕೀರ್ತಿಯೂ ಇದಕ್ಕೆ ಸಲ್ಲಬೇಕು.

ಇದೀಗ ಒಕ್ಕಲಿಗರು ಪತ್ರಿಕಾ ಕ್ಷೇತ್ರಕ್ಕೆ ಇತ್ತಿರುವ ಕೊಡುಗೆಯ ಸೂಕ್ಷ್ಮ ಪರಿಚಯ, ಮುಂದೆ ಒಕ್ಕಲಿಗರು ಈ ಕ್ಷೇತ್ರದಲ್ಲಿ ಸಾಹಸವಂತರಾಗಿ ಮೆರೆಯಬೇಕಾದ ಕಾಲ ಬಂದಿದೆ. ಒಕ್ಕಲಿಗರ ಪತ್ರಿಕಾ ವ್ಯವಸಾಯ ಎಲ್ಲಾ ವ್ಯವಸಾಯಗಳಂತೆಯೇ ದಿಗಂತವಿಶ್ರಾಂತವಾಗಿ ಬೆಳಗಬೇಕಾಗಿದೆ.

೪.೪. ಕ್ರೀಡಾ ಕ್ಷೇತ್ರದಲ್ಲಿ ಒಕ್ಕಲಿಗರ ಸಾಧನೆ

೧೯೬೦ ಅನಂತರ ಸರ್ಕಾರ ಗ್ರಾಮಾಂತರ ಪ್ರದೇಶಗಳಲ್ಲಿ ಶೈಕ್ಷಣಿಕ ಸಂಸ್ಥೆಗಳನ್ನು ಪ್ರಾರಂಭಿಸಿದ್ದಲ್ಲದೆ, ಹೆಚ್ಚಿನ ನೆರವು ನೀಡುವ ಮೂಲಕ ಗ್ರಾಮಾಂತರ ಪ್ರದೇಶದ ಕ್ರೀಡಾ ಚಟುವಟಿಕೆಗಳಿಗೆ ಹೆಚ್ಚಿನ ಸೌಲಭ್ಯಗಳನ್ನೂ ಒದಗಿಸತೊಡಗಿತು. ಇದರಿಂದಾಗಿ ಕ್ರೀಡೆಗಳಲ್ಲಿ ಒಕ್ಕಲಿಗರು ಹೆಚ್ಚು ಹೆಚ್ಚಾಗಿ ಭಾಗವಹಿಸತೊಡಗಿದರು. ಬಹುತೇಕ ಒಕ್ಕಲಿಗರು ಕೆಳ ಮತ್ತು ಮಧ್ಯಮ ವರ್ಗದ ಕುಟುಂಬಗಳಿಗೆ ಸೇರಿದವರಾದ್ದರಿಂದ ಶ್ರೀಮಂತ ಕ್ರೀಡೆಗಳಾದ ಕ್ರಿಕೆಟ್, ಟೆನ್ನಿಸ್, ಬ್ಯಾಡ್‌ಮಿಟನ್ ಮೊದಲಾದ ಕ್ರೀಡೆಗಳಲ್ಲಿ ಇವರ ಪಾತ್ರ ಗಣನೀಯವಾಗಿಲ್ಲ. ಅಥ್ಲೆಟಿಕ್ಸ್, ಪುಟ್‌ಬಾಲ್, ವಾಲಿಬಾಲ್, ಕಬ್ಬಡಿ, ಖೋಖೋ ಮೊದಲಾದ ಕಡಿಮೆ ವೆಚ್ಚದ ಪಂದ್ಯಗಳಲ್ಲಿ ಅವರು ಭಾಗವಹಿಸುತ್ತಿರುವುದು ಪ್ರೋತ್ಸಾಹದಾಯಕವಾಗಿದೆ. ಅನೇಕ ಒಕ್ಕಲಿಗ ಯುವ ಕ್ರೀಡಾಪಟುಗಳು ತಮ್ಮ ಸಾಧನೆಯಿಂದ ರಾಷ್ಟ್ರೀಯ ಹಾಗೂ ಅಂತರ್‌ರಾಷ್ಟ್ರೀಯ ಪ್ರಖ್ಯಾತಿ ಪಡೆದಿದ್ದಾರೆ. ಅನೇಕ ನಿವೃತ್ತಿ ಒಕ್ಕಲಿಗ ಕ್ರೀಡಾಪಟುಗಳು ವ್ಯವಸ್ಥಾಪಕರಾಗಿದ್ದುಕೊಂಡು ಅನೇಕ ಕ್ರೀಡಾ ಸಂಸ್ಥೆಗಳಲ್ಲಿ ಕೆಲಸಮಾಡುತ್ತಿದ್ದಾರೆ.

ಮಾನವನು ದೈಹಿಕ ಹಾಗೂ ಮಾನಸಿಕ ಆರೋಗ್ಯದ ಸಮತೋಲನವನ್ನು ಕಾಯ್ದುಕೊಳ್ಳಲು ಕ್ರೀಡೆಗಳು ನೆರವಾಗುತ್ತವೆ. ಒಲಂಪಿಕ್ ಕ್ರೀಡೆಗಳು ಮಾನವ ನಾಗರೀಕತೆಗೆ ಗ್ರೀಕರು ನೀಡಿದ ಮಹತ್ತರ ಕೊಡಗೆ. ಕ್ರಿ.ಪೂ.೭೭೬ರಲ್ಲಿ ಈ ಕ್ರೀಡೆಗಳು ಆರಂಭವಾದವೆಂದು ತಿಳಿದುಬರುತ್ತದೆ. ತಮ್ಮ ಸೈನ್ಯ ಯುದ್ಧದಲ್ಲಿ ನಿರತರಾಗಿದಿದ್ದಾಗಲೂ ಸೈನಿಕರು ದೈಹಿಕವಾಗಿ ಯುದ್ಧಸನ್ನದ್ಧರಾಗಿರಬೇಕೆಂಬ ಉದ್ದೇಶದಿಂದ ಕ್ರೀಡೆಗಳನ್ನು ಬಳಸಿಕೊಳ್ಳುತ್ತಿದ್ದರು. ಆಗ ಹೆಚ್ಚಾಗಿದ್ದುದು ಆಯುಧಗಳನ್ನು ಬಳಸುವಲ್ಲಿ ಸೈನಿಕರ ಪರಿಣಿತಿಯನ್ನು ಪ್ರದರ್ಶಿಸುವ

ದೃಷ್ಟಿಯಿಂದ ನಿಯೋಜಿಸಲಾಗಿದ್ದ ಕ್ರೀಡೆಗಳು, ಕಾಲ ಕಳೆದಂತೆ ಇಂಥ ಕ್ರಿಡೆಗಳ ಜೊತೆಗೆ ಇತರ ಪಂದ್ಯಗಳನ್ನೂ ಸೇರಿಸಲಾಯಿತು. ಈ ಪಂದ್ಯಗಳು ಪ್ರಧಾನವಾಗಿ ಐರೋಪ್ಯರ, ಅದರಲ್ಲೂ ಬ್ರಿಟೀಷರ ಕಾಣಿಕೆ.

ಭಾರತದಲ್ಲಿ ಕ್ರೀಡಾ ಪಂದ್ಯಗಳನ್ನು ಮೊದಲಿಗೆ ಪ್ರಾರಂಭಿಸಿದ್ದು ಬ್ರಿಟಿಷ್ ಸೇನಾವ್ಯವಸ್ಥೆ. ಇದು ಯೋಧರಲ್ಲಿ ದೈಹಿಕ ಬಲವನ್ನು ಜಾಗೃತವಾಗಿರಿಸುವ ದೃಷ್ಟಿಯಿಂದ ಕ್ರೀಡೆಗಳನ್ನು ಮತ್ತು ಪಂದ್ಯಗಳನ್ನು ಜನ ಪ್ರಿಯಗೊಳಿಸಿತು. ಬ್ರಿಟಿಷರ ಕಾಲದಲ್ಲಿ ಭಾರತೀಯ ಸೇನೆಗೆ ಯುದ್ಧೋತ್ಸಾಹಿ ಜನಾಂಗಗಳೆಂದು ಹೆಸರಾಗಿದ್ದ ಯೋಧರನ್ನು ಆಯ್ಕೆ ಮಾಡುತ್ತಿದ್ದರು. ಭಾರತಕ್ಕೆ ಇಂಗ್ಲಿಷ್ ಶಿಕ್ಷಣ ಬಂದ ಮೇಲೆ ಕ್ರೈಸ್ತ ಮಿಷನರಿ ಶಾಲೆಗಳು ಹುಟ್ಟಿಕೊಂಡವು. ಇಂಥ ಶಾಲೆಗಳು ಕ್ರೀಡೆಗಳನ್ನು ಮತ್ತು ಪಂದ್ಯಗಳನ್ನು ದೈಹಿಕ ಶಿಕ್ಷಣದ ಅಂಗವಾಗಿ ಜನಪ್ರಿಯಗೊಳಿಸಿದವು. ಹೀಗಾಗಿ ಸೈನ್ಯದೊಂದಿಗೆ ಸಂಪರ್ಕ ಹೊಂದಿದ್ದ ಅಥವಾ ಕ್ರೈಸ್ತ ಮಿಷನರಿ ಶಾಲೆಗಳಲ್ಲಿ ಓದುವ ಅವಕಾಶ ಪಡೆದಿದ್ದ ಯುವಕರು ಕ್ರೀಡೆಗಳಲ್ಲಿ ತರಬೇತಿ ಪಡೆದರು.

**೨. ಸ್ವಾತಂತ್ರ್ಯಪೂರ್ವದಲ್ಲಿ**

ಒಕ್ಕಲಿಗರು ವ್ಯವಸಾಯಗಾರರಾಗಿರುವುದರಿಂದ ಒಕ್ಕಲಿಗ ಸಮುದಾಯದ ಬಹುತೇಕ ಮಂದಿ ಹಳ್ಳಿಗಳಲ್ಲಿ ವಾಸವಾಗಿದ್ದಾರೆ. ಈ ವರ್ಗದ ಜನಕ್ಕೆ ಸೈನ್ಯದಲ್ಲಿ ಸೇರಲಾಗಲಿ, ನಗರ ಪರಿಸರಗಳಲ್ಲೇ ಬಹುಮಟ್ಟಿಗೆ ಕೇಂದ್ರೀಕೃತವಾಗಿದ್ದ ಮಿಷನರಿ ಶಾಲೆಗಳಲ್ಲಿ ಅವಕಾಶವಿದ್ದದ್ದಾಗಲಿ ಬಹುಕಡಿಮೆ. ಸೈನ್ಯದೊಂದಿಗೆ ಸಂಪರ್ಕವಿರಿಸಿಕೊಂಡವರು ಮಿಷನರಿ ಶಾಲೆಗಳಲ್ಲಿ ವ್ಯಾಸಂಗಮಾಡಿದವರು ಮತ್ತು ರಾಜ ಮಹಾರಾಜರ ಆಶ್ರಯದಲ್ಲಿದ್ದವರು ಮಾತ್ರ ಕ್ರೀಡೆಗಳಲ್ಲಿ ಭಾಗವಹಿಸಲು ಶಕ್ಯವಾಯಿತು. ಆದ್ದರಿಂದ ಸ್ವಾತಂತ್ರ್ಯ ಪೂರ್ವ ಕಾಲದಲ್ಲಿ ಒಕ್ಕಲಿಗರು ಕ್ರೀಡಾಕ್ಷೇತ್ರದಲ್ಲಿ ಪಡೆದ ಸಾಧನೆ ವಾಸ್ತವವಾಗಿ ಅತ್ಯಲ್ಪ. ಅಲ್ಲೊಬ್ಬರ ಇಲ್ಲೊಬ್ಬರ ಹೆಸರು ಮಾತ್ರ ಈ ಕಾಲದಲ್ಲಿ ಕೇಳಿಬರುತ್ತದೆ.

**ಕುಸ್ತಿ:** ಕರ್ನಾಟಕ ಬಹು ಹಿಂದಿನಿಂದಲೂ ಕುಸ್ತಿ ಕಲೆಗೆ ಪ್ರಸಿದ್ಧವಾದುದು. ಮೈಸೂರು ಕುಸ್ತಿಯ ತವರು. ಮೈಸೂರೊಡೆಯರ ಕಾಲದಲ್ಲಿ ಕುಸ್ತಿ ಕಲೆಗೆ ಪ್ರಾಮುಖ್ಯದೊರಕಿತ್ತು. ಅರಮನೆ ಇಂಥ ಅನೇಕ ಕುಸ್ತಿ ಪಟುಗಳನ್ನು ಪೋಷಿಸಿತ್ತು. ಮೈಸೂರಿನ ಕನ್ನೇಗೌಡನ ಕೊಪ್ಪಲಿನ ಶ್ರೀ ಬಸವಯ್ಯನವರು ಭಾರತೀಯ ಮಾದರಿಯ ಕುಸ್ತಿಯಲ್ಲಿ ಪ್ರಸಿದ್ಧರಾಗಿದ್ದರು.

**ಫುಟ್‌ಬಾಲ್:** ಶ್ರೀ ರಾಮಣ್ಣನವರು 'ಬೆಂಗಳೂರು ಬ್ಲೂಸ್' ಪರವಾಗಿ ಆಡುತ್ತಿದ್ದರು. ಶ್ರೀ.ಎಂ.ಎನ್.ನಂಜುಂಡಯ್ಯ, ಎಂ.ಎನ್.ತಿಮ್ಮಯ್ಯ (ಮಾಜಿ ಪುರಸಭಾ ಸದಸ್ಯರು, ಮೈಸೂರು ನಗರ) ಮೈಸೂರು ಬ್ಲೂಸ್ ಪರವಾಗಿ ಆಡುತ್ತಿದ್ದರು. ಶ್ರೀ ವರದರಾಜುರವರು ಅವರು ಮೈಸೂರು ರೋವರ್ಸ್ ಪರವಾಗಿ ಆಡುತ್ತಿದ್ದರು. ೧೯೪೮ರಲ್ಲಿ ನಡೆದ ವಿಶ್ವ ಒಲಂಪಿಕ್ ಕ್ರೀಡೆಗಳಲ್ಲಿ ಫುಟ್‌ಬಾಲ್ ಪಂದ್ಯದ 'ಗೋಲ್ ಕೀಪರ್' ಆಗಿ ಪ್ರತಿನಿಧಿಸಿದ್ದರು.

**ಕ್ರಿಕೆಟ್:** ಶ್ರೀ ಸಿ.ಜೆ.ರಾಮದೇವ್ ಅವರು ಮೈಸೂರು ಸೈನ್ಯದಲ್ಲಿ ಕ್ಯಾಪ್ಟನ್ ಆಗಿದ್ದು, ಕ್ರಿಕೆಟ್‌ನಲ್ಲಿ ಹೆಸರು ಮಾಡಿದ್ದರು. ಶ್ರೀ ದೊಡ್ಡಗಣೇಶ್‌ರವರು ಅಂತರರಾಷ್ಟ್ರೀಯ ಕ್ರಿಕೆಟ್‌ನಲ್ಲಿ ಭಾರತವನ್ನು ಪ್ರತಿನಿಧಿಸಿದವರಾಗಿದ್ದಾರೆ.

೩. ಸ್ವಾತಂತ್ರ್ಯಾನಂತರ

ಸ್ವಾತಂತ್ರ್ಯಾನಂತರ ಒಕ್ಕಲಿಗರು ಉನ್ನತ ಶಿಕ್ಷಣವನ್ನರಸಿ ನಗರಗಳಿಗೆ ವಲಸೆ ಬರತೊಡಗಿದರು. ಹೀಗೆ ಬಂದವರಲ್ಲಿ ಬಹುಸಂಖ್ಯಾತರು ಕ್ರೀಡೆಗಿಂತಲೂ ವ್ಯಾಸಂಗದಲ್ಲಿ ಹೆಚ್ಚು ಆಸಕ್ತರಾಗಿದ್ದರು. ಅವರು ಕ್ರೀಡೆಗಳಲ್ಲಿ ಭಾಗವಹಿವುದು ಅಧ್ಯಯನಕ್ಕೆ ತೊಡಕೆಂದು ಭಾವಿಸಿದರು. ಪ್ರತಿಷ್ಠಿತವೆಂದು ಭಾವಿಸಲಾಗಿದ್ದ ಸರ್ಕಾರಿ ನೌಕರಿಗಳನ್ನು ಪಡೆಯಲು ಪದವಿಗಳ ಗಳಿಕೆ ಅಗತ್ಯವಾದುದರಿಂದ ಅವರು ಆ ಕಡೆಗೆ ಹೆಚ್ಚು ಆಸಕ್ತರಾಗಿದ್ದರು. ಕ್ರೀಡೆಗಳಲ್ಲಿ ಆಸಕ್ತರಾಗಿದ್ದವರು ಅವುಗಳಲ್ಲಿ ಕಾಲಕಳೆಯುವ ದೃಷ್ಟಿಯಿಂದ ಮಾತ್ರ ಭಾಗವಹಿಸಿದರು. ಈ ಪ್ರವೃತ್ತಿ ೧೯೬೦ರ ವರೆಗೂ ಮುಂದುವರೆಯಿತು. ಈ ಅವಧಿಯಲ್ಲಿ ಈ ಕೆಳಕಂಡ ವ್ಯಕ್ತಿಗಳು ವಿವಿಧ ಕ್ರೀಡೆಗಳಲ್ಲಿ ಪ್ರಸಿದ್ಧಿ ಪಡೆದರು.

**ಅಥ್ಲೆಟಿಕ್ಸ್:** ೧. ಪ್ರೊ.ಎಸ್.ಟಿ.ನಾಗರಾಜ (ಪ್ರಿನ್ಸಿಪಾಲ್, ಆದಿಚುಂಚನಗಿರಿ ತಾಂತ್ರಿಕ ವಿದ್ಯಾಸಂಸ್ಥೆ, ಚಿಕ್ಕಮಗಳೂರು), ಇವರು ೧೯೫೨ರಲ್ಲಿ ಮದ್ರಾಸಿನಲ್ಲಿ ನಡೆದ ಅಖಿಲಭಾರತ ಒಲಂಪಿಕ್ ಮೇಳದಲ್ಲಿ ಅಥ್ಲೆಟಿಕ್ಸ್‌ನಲ್ಲಿ ಮೈಸೂರು ರಾಜ್ಯವನ್ನು ಪ್ರತಿನಿಧಿಸಿ, ೧೦,೦೦೦ ಮೀ. ನಡಿಗೆ ಸ್ಪರ್ಧೆಯಲ್ಲಿ ೨ನೆಯ ಸ್ಥಾನ ಪಡೆದರು. ೧೯೫೫ರಲ್ಲಿ ಕಲ್ಕತ್ತದಲ್ಲಿ ನಡೆದ ಅಖಿಲಭಾರತ ಒಲಂಪಿಕ್ಸ್‌ನಲ್ಲಿ ೫೦,೦೦೦ಮೀ.ನಡಿಗೆ ಸ್ಪರ್ಧೆಯಲ್ಲಿ ಎರಡನೆಯ ಸ್ಥಾನ ಪಡೆದರು. ೧೯೫೬ರಲ್ಲಿ ಇವರು ರಾಜ್ಯತಂಡದ ನೇತೃತ್ವ ವಹಿಸಿದ್ದರು. ೨. ಶ್ರೀ ಎಸ್.ಲಿಂಗಪ್ಪ (ನಿವೃತ್ತ ಎನ್.ಐ.ಎಸ್. ಅಧಿಕಾರಿಗಳು ಕೋಚ್ ಮತ್ತು ದೈಹಿತ ಶಿಕ್ಷಣ ನಿರ್ದೇಶಕ, ಬಿ.ಐ.ಟಿ. ಬೆಂಗಳೂರು) ಇವರು ೧೯೫೬ರಲ್ಲಿ ಮದ್ರಾಸಿನಲ್ಲಿ ನಡೆದ ಅಖಿಲಭಾರತ ಒಲಂಪಿಕ್ ಕ್ರೀಡಾಮೇಳದಲ್ಲಿ ೧೦,೦೦೦ಮೀ ನಡಿಗೆ ಸ್ಪರ್ಧೆಯಲ್ಲಿ ಮೂರನೆಯ ಸ್ಥಾನ ಗಳಿಸಿದರು. ೧೯೫೮ರಲ್ಲಿ ನಡೆದ ಅಖಿಲ ಭಾರತ ಅಥ್ಲೆಟಿಕ್ಸ್ ಕ್ರೀಡಾಕೂಟದಲ್ಲಿ ೧೦,೦೦೦ಮೀ ನಡಿಗೆ ಸ್ಪರ್ಧೆಯಲ್ಲಿ ಎರಡನೆಯ ಸ್ಥಾನ ಪಡೆದರು. ೧೯೫೭ರಲ್ಲಿ ನಡೆದ ಕ್ರೀಡಾಕೂಟದಲ್ಲಿ ೫೦ ಕಿ.ಮೀ.ನಡಿಗೆ ಸ್ಪರ್ಧೆಯಲ್ಲಿ ಮೂರನೆಯ ಸ್ಥಾನ ಪಡೆದರು ೧೯೭೭ರಲ್ಲಿ ಟೆಹರಾನ್‌ನಲ್ಲಿ ಪ್ರೀ-ಏಷ್ಯನ್ ಗೇಮ್ಸ್ ಕ್ರೀಡಾಕೂಟ ನಡೆಯಿತು. ಆಗ ಭಾರತವನ್ನು ಪ್ರನಿಧಿಸಿದ ಭಾರತದ ಅಥ್ಲೆಟಿಕ್ಸ್ ಟೀಮಿಗೆ ಇವರು ವ್ಯವಸ್ಥಾಪಕರಾಗಿ ಹೋಗಿದ್ದರು. ಇವರು ಎ.ಎ.ಎಫ್.ಐ.ಉದ್ಯೋಗಿ ಹಾಗೂ ಕೋಚ್. ೩. ಶ್ರೀ ಕೆ.ಎಸ್.ರಾಮೇಗೌಡ (ಆಡಳಿತಾಧಿಕಾರಿ ಮೈಶುಗರ್ ಕಂ; ಮಂಡ್ಯ) ಮೈಸೂರು ವಿಶ್ವವಿದ್ಯಾನಿಲಯದ ೧,೫೦೦ ಮೀಟರ್ ಓಟಗಾರರು. ಲಕ್ನೋ ಮತ್ತು ಅಲಹಾಬಾದ್‌ನಲ್ಲಿ ನಡೆದ ಅಂತರ ವಿಶ್ವವಿದ್ಯಾನಿಲಯ ಸ್ಪರ್ಧೆಯಲ್ಲಿ ಮೊದಲ ಸ್ಥಾನಗಳಿಸಿದರು. ಇವರು ರಾಜ್ಯದ ಮ್ಯಾರತಾನ್ ಓಟಗಾರ. ೧೯೫೫ರಲ್ಲಿ ಇವರು ರಾಜ್ಯತಂಡದ ಕ್ಯಾಪ್ಟನ್ ಆಗಿದ್ದರು. ೪. ಶ್ರೀ ಕೆ.ಎಲ್.ಶಿವಶಂಕರ್ ಇವರು ಸುತ್ತಿಗೆ (ಹ್ಯಾಮರ್) ಎಸೆತ ಸ್ಪಧೆಯಲ್ಲಿ ರಾಜ್ಯವನ್ನು ಪ್ರತಿನಿಧಿಸಿದ್ದರು. ೧೯೫೮ರಲ್ಲಿ ನಡೆದ ಅಖಿಲಭಾರತ ವಿಶ್ವವಿದ್ಯಾನಿಲಯಗಳ ಕ್ರೀಡಾಕೂಟದಲ್ಲಿ ಸುತ್ತಿಗೆ ಎಸೆತದಲ್ಲಿ ಪ್ರಥಮ ಬಹುಮಾನ ಪಡೆದರು. ೫. ಶ್ರೀ ಎಂ.ಎನ್.ರಾಮಣ್ಣ: ಇವರು ಮ್ಯಾರತಾನ್ ಸ್ಪರ್ಧೆಯಲ್ಲಿ ರಾಜ್ಯವನ್ನು ಪ್ರತಿನಿಧಿಸಿದ್ದರು. ೬. ಶ್ರೀ ಕೆ.ನಾರಾಯಣಸ್ವಾಮಿ: (ಪಿ.ಆರ್.ಒ, ಕೆ.ಇ.ಬಿ) ಇವರು ಓಟದ ಸ್ಪರ್ಧೆಯಲ್ಲಿ ರಾಜ್ಯವನ್ನು ಪ್ರತಿನಿಧಿಸಿದ್ದರು.

**ಬ್ಯಾಸ್ಕೆಟ್ ಬಾಲ್:**

೧. ಶ್ರೀ ಎಸ್.ಪಿ.ರಾಜಣ್ಣ: (ಮಾಜಿ ಎಂ.ಎಲ್.ಸಿ) ಇವರು ಅನೇಕ ವರ್ಷಗಳ ಕಾಲ ರಾಜ್ಯ ತಂಡದಲ್ಲಿ ಆಡಿದರು.

೨. ಶ್ರೀ ಹಿ.ವಿ.ರಾಮಯ್ಯ: (ಅಧ್ಯಕ್ಷರು ಕೆ.ಇ.ಬಿ)ಬಾಸ್ಕೆಟ್‌ಬಾಲ್ ಸ್ಪರ್ಧೆಯಲ್ಲಿ ಮೈಸೂರು ವಿಶ್ವವಿದ್ಯಾನಿಲಯವನ್ನು ಪ್ರತಿನಿಧಿಸಿದ್ದರು.

೩. ಶ್ರೀ ವಿ.ರಾಮಚಂದ್ರಯ್ಯ: ರಾಷ್ಟ್ರೀಯ ಸ್ಪರ್ಧೆಯಲ್ಲಿ ರಾಜ್ಯದ ಮೊದಲ ತಂಡದ ನೇತೃತ್ವವಹಿಸಿದ್ದರು.

೪. ಶ್ರೀ ಎಸ್.ವಿ.ಅಪ್ಪಯ್ಯ: ಪಾಕಿಸ್ತಾನದಲ್ಲಿ ನಡೆದ ಅಂತರ್‌ರಾಷ್ಟ್ರೀಯ ಸ್ಪರ್ಧೆಯಲ್ಲಿ ಭಾತರದ ಪರ ಆಡಿದರು. ಇವರು ರಾಜ್ಯತಂಡವನ್ನು ಅನೇಕ ವರ್ಷಗಳ ವರೆಗೆ ಪ್ರತಿನಿಧಿಸಿದ್ದರು.

೫. ಶ್ರೀ ಎಸ್.ಕೆ.ಅಪ್ಪಯ್ಯ: ಮೈಸೂರು ರಾಜ್ಯದ ಹಾಗೂ ಮುಂಬಯಿ ರಾಜ್ಯದ ತಂಡವನ್ನು ಪ್ರತಿನಿಧಿಸಿದ್ದರು.

೬. ಶ್ರೀ ಎಸ್.ವಿ.ರಾಮಣ್ಣ: ರಾಜ್ಯತಂಡವನ್ನು ಪ್ರತಿನಿಧಿಸಿದ್ದರು.

೭. ಶ್ರೀ ಎಸ್.ವಿ.ಜಯರಾಮ್: (ಕೆ.ಎಸ್.ಬಿಬಿ ಎ.ಗೌ. ಕಾರ್ಯದರ್ಶಿ) ವಿಖ್ಯಾತ ಆಟಗಾರರು. ರಾಜ್ಯತಂಡದಲ್ಲಿ ೮ವರ್ಷಗಳ ವರೆಗೆ ಪ್ರತಿನಿಧಿಸಿದ್ದರು. ನಗೋಯ ಟೋಕಿಯೋದಲ್ಲಿ ನಡೆದ ಏಷ್ಯಾ ಯುವ ಚಾಂಪಿಯನ್‌ಷಿಪ್‌ನಲ್ಲಿ ರಾಷ್ಟ್ರವನ್ನು ತಾಂತ್ರಿಕ ನಿಯೋಗಿಯಾಗಿ ಪ್ರತಿನಿಧಿಸಲು ಆರಿಸಲಾಯಿತು. ಬಾಂಕಾಕ್‌ಗೆ ಹೋದ ಭಾರತೀಯ ಕಿರಿಯ ಬಾಲಕರು ಮತ್ತು ಬಾಲಕಿಯರ ತಂಡದ ಪ್ರಧಾನ ವ್ಯವಸ್ಥಾಪಕರಾಗಿದ್ದರು.

೮. ಶ್ರೀ ಎಸ್.ವಿ.ರಾಜಗೋಪಾಲ್ ಪಾಕಿಸ್ತಾನದಲ್ಲಿ ನಡೆದ ಅಂತರ್‌ರಾಷ್ಟ್ರೀಯ ಸ್ಪರ್ಧೆಯಲ್ಲಿ ಭಾರತವನ್ನು ಪ್ರತಿನಿಧಿಸಿದ್ದರು ಹಾಗೂ ಆಸ್ಟ್ರೇಲಿಯ ತಂಡದ ವಿರುದ್ಧ ಆಡಿದರು. ಸುಮಾರು ೧೨ ವರ್ಷಗಳ ಕಾಲ ರಾಜ್ಯದ ಪರವಾಗಿ ಆಡಿದರು.

**ಚೆಸ್:** ೧. ಶ್ರೀ ಪ್ರಕಾಶ್: (ಡೆಕನ್ ಹೆರಾಲ್ಡ್ ವರದಿಗಾರ) ರಾಜ್ಯ ಚಾಂಪಿಯನ್ ೧೯೭೨ರಲ್ಲಿ ರಾಷ್ಟ್ರೀಯ ಜೂನಿಯರ್ ಚಾಂಪಿಯನ್‌ಷಿಪ್ ಪ್ರಶಸ್ತಿ ಪಡೆದರು.

೨. ಶ್ರೀಮತಿ ಮೀನಾ ಸುಧಾಕರ್: ಬೆಂಗಳೂರು ವಿಶ್ವವಿದ್ಯಾನಿಲಯವನ್ನು ಪ್ರತಿನಿಧಿಸಿದ್ದರು. ಈಗ ಇವರು ಅಮೆರಿಕಾಲದಲ್ಲಿ ನೆಲೆಸಿದ್ದಾರೆ. ಇವರು ಪ್ರಕಾಶ್ ಅವರ ಸಹೋದರಿ.

೩. ಕುಮಾರಿ ಕಲ್ಪನಾ: ಕರ್ನಾಟಕ ರಾಜ್ಯವನ್ನು ಪ್ರತಿನಿಧಿಸಿದ್ದರು. ಇವರು ಪ್ರಕಾಶ್‌ಇವರ ಸಹೋದರಿ.

**ಕ್ರಿಕೆಟ್:**

೧. ಶ್ರೀ ವಿ.ಎಲ್.ಮುದ್ದಯ್ಯ: (ನಿವೃತ್ತ ಕ್ಯಾಪ್ಟನ್, ಭಾರತ ವಾಯುದಳ) ಇವರು ಭಾರತವನ್ನು ಪ್ರತಿನಿಧಿಸಿದ್ದರು ಮತ್ತು ಅನೇಕ ಬಾರಿ ರಾಜ್ಯದ ಪರವಾಗಿ ಆಡಿದ್ದರು.

೨. ಡಾ.ಟಿ.ತಿಮ್ಮಯ್ಯ: (ಐ.ಎ.ಎಸ್, ಡೈರಿ ಅಭಿವೃದ್ಧಿ ನಿರ್ದೇಶಕರು, ಕರ್ನಾಟಕ ಸರ್ಕಾರ) ಇವರು ಅನೇಕ ಬಾರಿ ಮೈಸೂರು ವಿಶ್ವವಿದ್ಯಾನಿಲಯವನ್ನು ಮತ್ತು ಕರ್ನಾಟಕ ರಾಜ್ಯವನ್ನು ಪ್ರತಿನಿಧಿಸಿದ್ದರು.

೩. ಶ್ರೀ ಎಲ್.ಟಿ.ಆದಿಶೇಷ: ಪ್ರಸಿದ್ಧ ಬ್ಯಾಟ್ಸ್‌ಮನ್, ಅನೇಕ ಬಾರಿ ಕರ್ನಾಟಕ ರಾಜ್ಯವನ್ನು ಪ್ರತಿನಿಧಿಸಿದ್ದರು ಮತ್ತು ರಾಜ್ಯತಂಡದ ನೇತೃತ್ವ ವಹಿಸಿದ್ದರು.

೪. ಶ್ರೀ ಎಲ್.ಟಿ.ಸುಬ್ಬು: ಪ್ರಸಿದ್ಧ ಬ್ಯಾಟ್ಸ್‌ಮನ್ ಮತ್ತು ಬೌಲರ್. ಮೈಸೂರು ರಾಜ್ಯವನ್ನು ಪ್ರತಿನಿಧಿಸಿದ್ದರು. (ಕ್ರ.ಸಂ. ೩ ಮತ್ತು ೪ರ ವ್ಯಕ್ತಿಗಳಿಬ್ಬರೂ ಸಹೋದರರು. ಇವರು ಆಸ್ಟ್ರೇಲಿಯಾದಲ್ಲಿ ನೆಲೆಸಿದ್ದಾರೆ.)

ಶ್ರೀ ಪುಟ್ಟಕೆಂಪಣ್ಣ: (ಎಸ್.ಈ.ಬಿ.ಡಬ್ಲೂ.ಎಸ್.ಬಿ) ಒಳ್ಳೆಯ ಬ್ಯಾಟ್ಸ್‌ಮನ್. ಮೈಸೂರು ವಿಶ್ವವಿದ್ಯಾನಿಲಯ ಮತ್ತು ಕರ್ನಾಟಕ ರಾಜ್ಯವನ್ನು ಪ್ರತಿನಿಧಿಸಿದ್ದರು. ಶ್ರೀ ದೊಡ್ಡಗಣೇಶ್ ಭಾರತತಂಡದ ಉತ್ತಮ ಬೌಲರ್ ಇವರು ಇತ್ತೀಚೆಗೆ ನಿವೃತ್ತರಾದರು.

**ಕಬ್ಬಡಿ:**

೧. ಶ್ರೀ ಎ.ಜಿ.ಸಿದ್ದಪ್ಪ: (ಬೆಂಗಳೂರಿನ ಒಬ್ಬ ಕೈಗಾರಿಕೋಧ್ಯಮಿ) ಇವರು ಮೈಸೂರು ವಿಶ್ವವಿದ್ಯಾನಿಲಯವನ್ನು ಪ್ರತಿನಿಧಿಸಿದ್ದರು ಹಾಗೂ ರಾಷ್ಟ್ರೀಯ ಚಾಂಪಿಯನ್ ಷಿಪ್ ಸ್ಪರ್ಧೆಗಳಲ್ಲಿ ಕರ್ನಾಟಕವನ್ನು (ಆಗಿನ ಮೈಸೂರು) ಪ್ರತಿನಿಧಿಸಿದ್ದರು. ರಾಜ್ಯ ಕಬ್ಬಡಿ ಅಸೋಸಿಯೇಷನ್ ಸದಸ್ಯರು. ಮುದ್ರಣಯಂತ್ರದಲ್ಲಿ ಹೊಸ ವಿಧಾನವೊಂದನ್ನು ಕಂಡುಹಿಡಿದು ಭಾರತ ಸರ್ಕಾರದಿಂದ ಅನ್ವೇಷಣಾ ಪ್ರಶಸ್ತಿ ಪಡೆದರು.

೨. ಶ್ರೀ ಎಸ್.ಬಿ.ಶಿವಲಿಂಗಯ್ಯ: (ಎಂಜಿನಿಯರ್ ಮಸ್ಸರ್ಸ್ ಐ.ಟಿ.ಐ.ಲಿಮಿಟೆಡ್, ಬೆಂಗಳೂರು) ಅನೇಕ ಬಾರಿ ಕರ್ನಾಟಕವನ್ನು (ಆಗಿನ ಮೈಸೂರು) ಪ್ರತಿನಿಧಿಸಿದ್ದರು ರಾಜ್ಯ ತಂಡದ ನೇತೃತ್ವವನ್ನು ವಹಿಸಿದ್ದರು. ರಾಜ್ಯ ಕಬ್ಬಡಿ ತಂಡದ ಕೋಚ್ ಮತ್ತು ಮ್ಯಾನೇಜರ್ ಆಗಿದ್ದರು

೩. ಶ್ರೀ ಡಿ.ಗೋವಿಂದ: (ಮೆಸ್ಸರ್ಸ್ ಐ.ಟಿ.ಐ ಲಿಮಿಟೆಡ್, ಬೆಂಗಳೂರು) ರಾಜ್ಯ ಕಬ್ಬಡಿ ಅಸೋಷಿಯೇಷನ್ನಿನ ಖಜಾಂಚಿ. ಏಳುಬಾರಿ ಕರ್ನಾಟಕವನ್ನು (ಆಗಿನ ಮೈಸೂರು) ಪ್ರತಿನಿಧಿಸಿದ್ದರು ಮತ್ತು ರಾಜ್ಯ ತಂಡದ ಕ್ಯಾಪ್ಟನ್, ಮ್ಯಾನೇಜರ್ ಮತ್ತು ಕೋಚ್ ಆಗಿದ್ದರು.

**ವಾಲಿಬಾಲ್:** ೧. ಶ್ರೀ ಎಚ್.ಎಸ್.ವೆಂಕಟೇಶ್: (ನಿವೃತ್ತ ಜೂನಿಯರ್ ಇಂಜಿನಿಯರ್ ಪಿ.ಡಬ್ಲೂ.ಡಿ.) ಇವರು ೧೯೫೨ರಲ್ಲಿ ಮಾಸ್ಕೋದಲ್ಲಿ ನಡೆದ ಎರಡನೆಯ ವಿಶ್ವ ವಾಲಿಬಾಲ್ ಟೂರ್ನ್‌ಮೆಂಟ್‌ನಲ್ಲಿ ಭಾರತವನ್ನು ಪ್ರತಿನಿಧಿಸಿದ್ದರು. ರಾಷ್ಟ್ರೀಯ ಚಾಂಪಿಯನ್‌ಷಿಪ್ ಸ್ಪರ್ಧೆಯಲ್ಲಿ ಅನೇಕ ಬಾರಿ ಮೈಸೂರು ರಾಜ್ಯವನ್ನು ಪ್ರತಿನಿಧಿಸಿದ್ದರು.

೨. ಶ್ರೀ ಶಿವಲಿಂಯ್ಯ: ಬಿ.ಇ.ರಫ್ತು ಮತ್ತು ಆಮದುಗಳಿಗೆ ಜನರಲ್ ಮ್ಯಾನೇಜರ್, ಕರ್ನಾಟಕ ಸರ್ಕಾರದ ಆಟಗಾರರು.

೩. ಶ್ರೀ ಕೆ.ಎಂ.ಈ.ಸ್ವಾಮಿ: (ಫಿಸಿಕಲ್ ಡೈರೆಕ್ಟರ್, ಆಗ್ರಿಕಲ್ಚರಲ್ ಸರ್ವಿಸ್, ಬೆಂಗಳೂರು) ಆಟಗಾರರು.

೪. ಶ್ರೀ ವಿ.ಎಂ.ರಂಗಸ್ವಾಮಿ: (ಡೆಪ್ಯೂಟಿ ಜನರಲ್ ಮ್ಯಾನೇಜರ್ ಎಚ್.ಎಂ.ಟಿ.) ಆಟಗಾರರು.

೫. ಶ್ರೀ ಕೃಷ್ಣಪ್ಪ: (ನಿವೃತ್ತ ಅಧಿಕಾರಿ, ಬೆಂಗಳೂರು ಕಾರ್ಪೂರೇಷನ್) ಆಟಗಾರರು.

೬. ಶ್ರೀ ತಮ್ಮಣ್ಣಗೌಡ: (ನಿವೃತ್ತ ವ್ಯವಸಾಯ ಅಧಿಕಾರಿ) ಆಟಗಾರರು

೭. ಶ್ರೀ ಪಿ.ವಿ.ರಾಮಯ್ಯ: (ಅಧ್ಯಕ್ಷರು ಕೆ.ಇ.ಬಿ.) ಮೈಸೂರು ವಿಶ್ವವಿದ್ಯಾನಿಲಯವನ್ನು ಪ್ರತಿನಿಧಿಸಿದ್ದರು.

**ಭಾರ ಎತ್ತುವುದು:** ೧. ಶ್ರೀ ಎಚ್.ಜಿ.ಬಾಲಕೃಷ್ಣ: (ನ್ಯಾಯವಾದಿ) ರಾಜ್ಯವನ್ನು ಪ್ರತಿನಿಧಿಸಿದ್ದರು.

**ಕುಸ್ತಿ:** ೧.ಶ್ರೀ ಚಿಕ್ಕವೆಂಕಟಪ್ಪ: (ಉಪ ಪ್ರಾಚಾರ್ಯ, ದೈಹಿಕ ಶಿಕ್ಷಣ ಕಾಲೇಜು, ಮೈಸೂರು ವಿಶ್ವವಿದ್ಯಾನಿಲಯ) ಮೈಸೂರು ವಿಶ್ವವಿದ್ಯಾನಿಲಯ ಮತ್ತು ರಾಜ್ಯವನ್ನು ಪ್ರತಿನಿಧಿಸಿದ್ದರು.

೨. ಶ್ರೀ ಎ.ಸಿದ್ದಪ್ಪ: (ಕೈಗಾರಿಕೋದ್ಯಮಿ, ಬೆಂಗಳೂರು) ಮೈಸೂರು ವಿಶ್ವವಿದ್ಯಾನಿಲಯ ಮತ್ತು ರಾಜ್ಯವನ್ನು ಪ್ರತಿನಿಧಿಸಿದ್ದರು.

**೪ ೧೯೬೦ರ ಅನಂತರ**

೧೯೬೦ರ ಅನಂತರ ಸರ್ಕಾರ ಗ್ರಾಮಾಂತರ ಪ್ರದೇಶಗಳಲ್ಲಿ ಶೈಕ್ಷಣಿಕ ಸಂಸ್ಥೆಗಳನ್ನು ಪ್ರಾರಂಭಿಸಿದ್ದರಲ್ಲದೆ, ಹೆಚ್ಚಿನ ಹಣಕಾಸು ನೆರವು ನೀಡುವ ಮೂಲಕ ಗ್ರಾಮಾಂತರ ಪ್ರದೇಶದ ಕ್ರೀಡಾ ಚಟುವಟಿಕೆಗೆ ಹೆಚ್ಚಿನ ಸೌಲಭ್ಯಗಳನ್ನೂ ಒದಗಿಸತೊಡಗಿದರು. ಇದರಿಂದಾಗಿ ಕ್ರೀಡೆಗಳಲ್ಲಿ ಒಕ್ಕಲಿಗರು ಹೆಚ್ಚು ಹೆಚ್ಚಾಗಿ ಭಾಗವಹಿಸತೊಡಗಿದರು. ಬಹುತೇಕ ಒಕ್ಕಲಿಗರು ಕೆಳ ಮತ್ತು ಮಧ್ಯಮವರ್ಗದ ಕುಟುಂಬಗಳಿಗೆ ಸೇರಿದವರಾದ್ದರಿಂದ ಶ್ರೀಮಂತ ಕ್ರೀಡೆಗಳಾದ ಕ್ರಿಕೆಟ್, ಟೆನ್ನಿಸ್, ಬ್ಯಾಟ್‌ಮಿಟನ್ ಮೊದಲಾದ ಕ್ರೀಡೆಗಳಲ್ಲಿ ಇವರ ಪಾತ್ರ ಗಣನೀಯವಾಗಿಲ್ಲ. ಅಥ್ಲೆಟಿಕ್ಸ್, ಫುಟ್‌ಬಾಲ್, ವಾಲಿಬಾಲ್, ಕಬ್ಬಡಿ, ಖೋಖೋ ಮೊದಲಾದ ಕಡಿಮೆ ವೆಚ್ಚದ ಪಂದ್ಯಗಳಲ್ಲಿ ಅವರು ಭಾಗವಹಿಸುತ್ತಿರುವುದು ಪ್ರೋತ್ಸಾಹದಾಯಕವಾಗಿದೆ. ಅನೇಕ ಯುವ ಕ್ರೀಡಾಪಟುಗಳು ತಮ್ಮ ಸಾಧನೆಯಿಂದ ರಾಷ್ಟ್ರೀಯ ಹಾಗೂ ಅಂತರ್‌ರಾಷ್ಟ್ರೀಯ ಪ್ರಖ್ಯಾತಿ ಪಡೆದಿದ್ದಾರೆ. ಅನೇಕ ನಿವೃತ್ತ ಕ್ರೀಡಾಪಟುಗಳು ವ್ಯವಸ್ಥಾಪಕರಾಗಿದ್ದುಕೊಂಡು ಅನೇಕ ಕ್ರೀಡಾ ಸಂಸ್ಥೆಗಳಲ್ಲಿ ಕೆಲಸ ಮಾಡುತ್ತಿದ್ದಾರೆ.

**ಅಥ್ಲೆಟಿಕ್ಸ್:** ೧.ಡಾ.ಸುಬ್ಬೇಗೌಡ: (ಕರ್ನಾಟಕ ವೈದ್ಯಕೀಯ ಸೇವೆ) ಮೈಸೂರು ವಿಶ್ವವಿದ್ಯಾನಿಲಯವನ್ನು ಹಲವು ಬಾರಿ ಪ್ರತಿನಿಧಿಸಿದ್ದರು.

೨. ಶ್ರೀ ಶ್ರೀಧರ್ ಆಳ್ವ: (ವಿಜಯ ಬ್ಯಾಂಕ್) ಎತ್ತರ ನೆಗೆತದಲ್ಲಿ ಬೆಂಗಳೂರು ವಿಶ್ವವಿದ್ಯಾನಿಲಯವನ್ನು ಮತ್ತು ಕರ್ನಾಟಕವನ್ನು ಪ್ರತಿನಿಧಿಸಿದ್ದರು.

೩. ಶ್ರೀ ಕೆ.ಎಲ್.ಶಿವೇಗೌಡ: (ವಿಜಯ ಬ್ಯಾಂಕ್) ಕೃಷಿ ವಿದ್ಯಾಲಯವನ್ನು ಪ್ರತಿನಿಧಿಸಿದ್ದರು. ೧೯೭೨ರಿಂದ ಕರ್ನಾಟಕವನ್ನು ಪ್ರತಿನಿಧಿಸಿದ್ದಾರೆ. ಇಸ್ಸಾರ್ ಅಥ್ಲೆಟಿಕ್ಸ್ ಚಾಂಪಿಯನ್‌ಷಿಪ್ ಕ್ರೀಡಾಕೂಟದಲ್ಲಿ ಟ್ರಿಪಲ್ ಜಂಪ್‌ನಲ್ಲಿ ಇವರು ಎರಡನೆಯ ಸ್ಥಾನ ಗಳಿಸಿದರು. ೧೯೮೧ರಲ್ಲಿ ನಡೆದ ಅಖಿಲ ಭಾರತ ಅಥ್ಲೆಟಿಕ್ಸ್ ಆಹ್ವಾನ ಕ್ರೀಡಾಕೂಟದಲ್ಲಿ ಇವರು ಚಿನ್ನದ ಪದಕ ಗಳಿಸಿದರು. ೧೯೮೧ರಲ್ಲಿ ಶ್ರೀಲಂಕಾದಲ್ಲಿ ನಡೆದ ಅಖಿಲ ಭಾರತ ಅಂತರ್‌ಬ್ಯಾಂಕ್ ಚಾಂಪಿಯನ್‌ಷಿಪ್‌ನಲ್ಲಿ ಹಾಫ್ ಸ್ಟೆಪ್ ಅಂಡ್ ಜಂಪ್‌ನಲ್ಲಿ ಇವರು ಪ್ರಥಮಸ್ಥಾನ ಗಳಿಸಿದರು. ಇವರು ಮೈಸೂರು ರಾಜ್ಯವನ್ನು ಹಲವು ಭಾರಿ ಪ್ರತಿನಿಧಿಸಿದ್ದಾರೆ.

**ಬಾಸ್ಕೆಟ್ ಬಾಲ್:**

೧. ಶ್ರೀ ಬಿ.ರಾಮಕೃಷ್ಣ: ರಾಜ್ಯದ ಪರವಾಗಿ ಆಡಿದರು.

೨. ಶ್ರೀ ಜಿ.ಎಸ್.ವೆಂಕಟೇಶ್: ರಾಜ್ಯದ ಪರವಾಗಿ ಆಡಿದರು

೩. ಶ್ರೀ ಎಸ್.ಎ.ರಂಗದೇವ್: ಟೋಕಿಯೋ ಮತ್ತು ಕೌಲಲಂಪೂರ್‌ನಲ್ಲಿ ನಡೆದ ಏಷ್ಯಾ ಯುವಜನ ಟೂರ್ನಿಯಲ್ಲಿ ರಾಜ್ಯವನ್ನು ಪ್ರತಿನಿಧಿಸಿದ್ದರು.

೪. ಶ್ರೀ ಎಸ್.ವಿ.ಸುರೇಶ್: ಅನೇಕ ವರ್ಷಗಳ ಕಾಲ ರಾಜ್ಯತಂಡವನ್ನು ಪ್ರತಿನಿಧಿಸಿದ್ದರು ಮತ್ತು ನ್ಯಾಷನಲ್ಸ್ ಸೌತ್‌ಗೆ ರಾಜ್ಯತಂಡದ ನೇತೃತ್ವ ವಹಿಸಿದ್ದರು.

೫. ಶ್ರೀ ಎಸ್.ವಿ.ರಾಜಶೇಖರ್: ವಿಶ್ವವಿದ್ಯಾನಿಲಯ ಮತ್ತು ರಾಜ್ಯವನ್ನು ಪ್ರತಿನಿಧಿಸಿದ್ದರು.

೬. ಶ್ರೀ ಬಿ.ಚಂದ್ರಪ್ಪ: ಜೂನಿಯರ್ ಏಷ್ಯನ್ ಚಾಂಪಿಯನ್‌ಷಿಪ್‌ನಲ್ಲಿ ರಾಷ್ಟ್ರವನ್ನು ಪ್ರತಿನಿಧಿಸಿದ್ದರು. ಅನೇಕ ವರ್ಷಗಳು ರಾಜ್ಯ ತಂಡದಲ್ಲಿ ಆಡಿದ್ದು, ರಾಜ್ಯ ತಂಡದ ನೇತೃತ್ವವನ್ನು ವಹಿಸಿದ್ದರು.

೭. ಶ್ರೀ ಜಿ.ಹನುಮಂತಪ್ಪ: ಜೂನಿಯರ್ ವಿಭಾಗದಲ್ಲಿ ರಾಜ್ಯವನ್ನು ಪ್ರತಿನಿಧಿಸಿದ್ದರು.

೮. ಶ್ರೀ ಸುರೇಶ್ ಬಾಬು: ರಾಜ್ಯದ ಜೂನಿಯರ್ ತಂಡವನ್ನು ಪ್ರತಿನಿಧಿಸಿದ್ದರು.

೯. ಶ್ರೀ ಬಿ.ಕೆಂಪಣ್ಣ: ಜೂನಿಯರ್ ವಿಭಾಗದಲ್ಲಿ ರಾಜ್ಯವನ್ನು ಪ್ರತಿನಿಧಿಸಿದ್ದರು.

೧೦. ಶ್ರೀ ಎಸ್.ಎ.ಸೂರ್ಯಕಾಂತ್: ಜೂನಿಯರ್ ವಿಭಾಗದಲ್ಲಿ ರಾಜ್ಯವನ್ನು ಪ್ರತಿನಿಧಿಸಿದ್ದರು.

೧೧. ಶ್ರೀ ಸಂಜಯ, ಜೂನಿಯರ್: ವಿಭಾಗದಲ್ಲಿ ರಾಜ್ಯವನ್ನು ಪ್ರತಿನಿಧಿಸಿದ್ದರು.

೧೨. ಶ್ರೀ ಸುಬೋಧ್ ಕುಮಾರ್: ರಾಜ್ಯದ ಜೂನಿಯರ್ ಮತ್ತು ಸೀನಿಯರ್ ತಂಡಗಳಲ್ಲಿ ರಾಜ್ಯವನ್ನು ಪ್ರತಿನಿಧಿಸಿದ್ದರು.

೧೩. ಶ್ರೀ ಕೃಷ್ಣೇಗೌಡ: ರಾಜ್ಯದ ಜೂನಿಯರ್ ತಂಡವನ್ನು ಪ್ರತಿನಿಧಿಸಿದ್ದರು.

೧೪. ಶ್ರೀ ಡಾ.ಸತ್ಯಾನಂದ: ರಾಜ್ಯದ ಜೂನಿಯರ್ ತಂಡವನ್ನು ಪ್ರತಿನಿಧಿಸಿದ್ದರು.

೧೫. ಶ್ರೀ ಪ್ರಭಾಕರ್: ರಾಜ್ಯದ ಜೂನಿಯರ್ ತಂಡವನ್ನು ಪ್ರತಿನಿಧಿಸಿದ್ದರು.

೧೬. ಶ್ರೀ ತನತ್ ಕುಮಾರ್: ಬ್ಯಾಂಕಾಕ್‌ನಲ್ಲಿ ನಡೆದ ಜೂನಿಯರ್ ಏಷ್ಯನ್ ಬಾಸ್ಕೆಟ್‌ಬಾಲ್ ಚಾಂಪಿಯನ್‌ಷಿಪ್ ಸ್ಪರ್ಧೆಯಲ್ಲಿ ಭಾರತವನ್ನು ಪ್ರತಿನಿಧಿಸಿದ್ದರು.

೧೭. ಶ್ರೀ ದಿನೇಶ್‌ಬಾಬು: ರಾಜ್ಯ ಜೂನಿಯರ್ ತಂಡವನ್ನು ಪ್ರತಿನಿಧಿಸಿದ್ದರು.

೧೮. ಶ್ರೀ ಅರುಣ ಚಂದ್ರ: ರಾಜ್ಯ ಜೂನಿಯರ್ ತಂಡವನ್ನು ಪ್ರತಿನಿಧಿಸಿದ್ದರು.

೧೯. ಶ್ರೀ ರಾಜು: (ಮಂಡ್ಯ) ರಾಜ್ಯ ಜೂನಿಯರ್ ತಂಡವನ್ನು ಪ್ರತಿನಿಧಿಸಿದ್ದರು.

**ಕ್ರಿಕೆಟ್:**

೧. ಶ್ರೀ ವೇಣುಗೋಪಾಲ್: ವೇಗದ ಬೌಲರ್, ಕರ್ನಾಟಕ ರಾಜ್ಯದ ಜೂನಿಯರ್ ತಂಡವನ್ನು ಪ್ರತಿನಿಧಿಸಿದ್ದರು.

೨. ಶ್ರೀ ಕೆ.ಎಂ.ರಾಮಪ್ರಸಾದ್: ಸರ್ವ ವಿಭಾಗ ಸಮರ್ಥರು. ಕರ್ನಾಟಕ ರಾಜ್ಯವನ್ನು ಪ್ರತಿನಿಧಿಸಿದ್ದರು.

೩. ಶ್ರೀ ಜಯರಾಂ: (ಪಿ.ಟಿ.ಐ.) ಸರ್ವ ವಿಭಾಗ ಸಮರ್ಥರು. ಕರ್ನಾಟಕ ರಾಜ್ಯವನ್ನು ಪ್ರತಿನಿಧಿಸಿದ್ದರು.

೪. ಶ್ರೀ ಸಿದ್ದರಾಂ: (ಸಿಂಡಿಕೇಟ್ ಬ್ಯಾಂಕ್) ಬ್ಯಾಟ್ಸ್‌ಮನ್, ಕರ್ನಾಟಕ ರಾಜ್ಯವನ್ನು ಪ್ರತಿನಿಧಿಸಿದ್ದರು.

೫. ಶ್ರೀ ಜಿ.ವಿ.ಕುಮಾರ್: (ಎಚ್.ಎಂ.ಟಿ) ಆಫ್‌ಸ್ಪಿನ್ ಬೌಲರ್ ಕರ್ನಾಟಕವನ್ನು ಪ್ರತಿನಿಧಿಸಿದ್ದರು.

೬. ಶ್ರೀ ದೊಡ್ಡಗಣೇಶ್, ಸರ್ವವಿಭಾಗ ಸಮರ್ಥರು. ಭಾರತೀಯ ಕ್ರಿಕೆಟ್ ಮಂಡಳಿ.

**ಪುಟ್‌ಬಾಲ್:**

೧. ಶ್ರೀ ಮುನಿರಾಜು: (ಎಚ್.ಎ.ಎಲ್.ನ ಉದ್ಯೋಗಿ) ರಾಜ್ಯವನ್ನು ಪ್ರತಿನಿಧಿಸಿದ್ದರು.

೨. ಶ್ರೀ ಪುಟ್ಟಸ್ವಾಮಿ: (ಎ.ಜಿ.ಒ.ಆರ್.ಸಿ) ರಾಜ್ಯವನ್ನು ಪ್ರತಿನಿಧಿಸಿದ್ದರು.

೩. ಶ್ರೀ ಚಂದ್ರಶೇಖರಪ್ಪ: (ಎ.ಜಿ.ಒ.ಆರ್.ಸಿ) ರಾಜ್ಯವನ್ನು ಪ್ರತಿನಿಧಿಸಿದ್ದರು.

೪. ಶ್ರೀ ನರಸಿಂಹಯ್ಯ: ಮೈಸೂರಿನ ಜಾವಾ ಟೀಮ್‌ನಿಂದ ರಾಜ್ಯವನ್ನು ಪ್ರತಿನಿಧಿಸಿದ್ದರು.

೫. ಶ್ರೀ ಬಸವರಾಜು: (ಮಂಡ್ಯದವರು) ರಾಜ್ಯವನ್ನು ಪ್ರತಿನಿಧಿಸಿದ್ದರು.

೬. ಶ್ರೀ ವೆಂಕಟ: (ಮಂಡ್ಯದವರು) ರಾಜ್ಯವನ್ನು ಪ್ರತಿನಿಧಿಸಿದ್ದರು.

೭. ಶ್ರೀ ಜಿ.ಬಿ.ಬ್ರಮಾನಂದ: (ಮಂಡ್ಯದವರು) ೧೯೭೨ರಲ್ಲಿ ಮೈಸೂರು ವಿಶ್ವವಿದ್ಯಾನಿಲಯ ತಂಡದ ಕ್ಯಾಪ್ಟನ್ ಆಗಿದ್ದರು. ೧೯೭೪ರಲ್ಲಿ ರಾಜ್ಯವನ್ನು ಪ್ರತಿನಿಧಿಸಿದ್ದರು.

೮. ಶ್ರೀ ರಾಮು: ರಾಜ್ಯವನ್ನು ಪ್ರತಿನಿಧಿಸಿದ್ದರು.

೯. ಶ್ರೀ ಜಿ.ಬಿ.ಶಿವಶಂಕರ್: ೧೯೭೯ರಲ್ಲಿ ರಾಜ್ಯವನ್ನು ಪ್ರತಿನಿಧಿಸಿದ್ದರು. ಇದೇ ವರ್ಷ ಮೈಸೂರು ವಿಶ್ವವಿದ್ಯಾನಿಲಯ ತಂಡದ ಕ್ಯಾಪ್ಟನ್ ಆಗಿದ್ದರು.

೧೦. ಶ್ರೀ ಜಯರಾಮ: (ತುಮಕೂರಿನವರು) ರಾಜ್ಯವನ್ನು ಪ್ರತಿನಿಧಿಸಿದ್ದರು.

**ಕಬ್ಬಡಿ:**

೧. ಶ್ರೀ ವೇಣುಗೋಪಾಲ್: (ಮೈಕೋ ಲಿಮಿಟೆಡ್ ಉದ್ಯೋಗಿ, ಬೆಂಗಳೂರು) ಸುಮಾರು ಮೂರು ಬಾರಿ ರಾಜ್ಯತಂಡವನ್ನು ಪ್ರತಿನಿಧಿಸಿದ್ದರು.

೨. ಶ್ರೀ.ಬಿ.ರಾಮಚಂದ್ರಪ್ಪ: (ಮೈಕೋ ಲಿಮಿಟೆಡ್ ಉದ್ಯೋಗಿ ಬೆಂಗಳೂರು) ಅನೇಕ ಸಲ ರಾಜ್ಯ ತಂಡವನ್ನು ಪ್ರತಿನಿಧಿಸಿದ್ದರು ಮತ್ತು ರಾಜ್ಯ ತಂಡದ ಕ್ಯಾಪ್ಟನ್ ಆಗಿದ್ದರು.

೩. ಶ್ರೀ ಶ್ರೀನಿವಾಸ್: (ಮೈಕೋ ಲಿಮಿಟೆಡ್ ಉದ್ಯೋಗಿ ಬೆಂಗಳೂರು) ಅನೇಕ ಬಾರಿ ರಾಜ್ಯತಂಡವನ್ನು ಪ್ರತಿನಿಧಿಸಿದ್ದರು ಮತ್ತು ಮೈಕೋ ತಂಡದ ಕ್ಯಾಪ್ಟನ್. ಇವರು ಕೆಂಪೇಗೌಡ ಹೆಸರಿನಲ್ಲಿ ಬೆಂಗಳೂರುನಗರ ಕಾರ್ಪೋರೇಷನ್ ಸ್ಥಾಪಿಸಿದ ಕಬಡ್ಡಿ ಪ್ರಶಸ್ತಿ ವಿಜೇತರು.

೪. ಶ್ರೀ ಚನ್ನಯ್ಯ: (ಸಕ್ಕರೆ ಕಾರ್ಖಾನೆಯ ಉದ್ಯೋಗಿ, ಕಾಳಮುದ್ದನ ದೊಡ್ಡಿ, ಮಂಡ್ಯ ಜಿಲ್ಲೆ) ನ್ಯಾಷನಲ್‌ನಲ್ಲಿ ಮೈಸೂರು ವಿಶ್ವವಿದ್ಯಾನಿಲಯ ಮತ್ತು ಮೈಸೂರನ್ನು ಪ್ರತಿನಿಧಿಸಿದ್ದರು.

೫. ಶ್ರೀ ಎಚ್.ಕೆ.ವೀರಣ್ಣಗೌಡ: ಮಂಡ್ಯ ಜಿಲ್ಲಾ ಕಬಡ್ಡಿ ತಂಡದ ಸದಸ್ಯರು ಮತ್ತು ನ್ಯಾಷನಲ್‌ನಲ್ಲಿ ಕರ್ನಾಟಕವನ್ನೂ, ಮೈಸೂರು ವಿಶ್ವವಿದ್ಯಾನಿಲಯವನ್ನೂ ಪ್ರತಿನಿಧಿಸಿದ್ದರು.

೬. ಶ್ರೀ ಬಿ.ಪುಟ್ಟಸ್ವಾಮಿ: (ದೈಹಿಕ ಶಿಕ್ಷಣಾಧಿಕಾರಿ ಪಿ.ಈ.ಎಸ್.ಕಾಲೇಜ್ ಆಫ್ ಸೈನ್ಸ್, ಮಂಡ್ಯ) ಮಂಡ್ಯ ಜಿಲ್ಲಾ ಕಬಡ್ಡಿ ತಂದ ಸದಸ್ಯರು. ಕರ್ನಾಟಕದ ಹಾಗೂ ಮೈಸೂರು ವಿಶ್ವವಿದ್ಯಾನಿಲಯದ ಕಬಡ್ಡಿ ತಂಡದ ಪರವಾಗಿ ಆಡಿದರು.

೭. ಶ್ರೀ ಎಚ್.ಎಸ್.ಸಿದ್ದಯ್ಯ: (ಮಂಡ್ಯ) ಕರ್ನಾಟಕ ಮತ್ತು ಮೈಸೂರು ವಿಶ್ವವಿದ್ಯಾನಿಲಯವನ್ನು ಪ್ರತಿನಿಧಿಸಿದ್ದರು.

೮. ಶ್ರೀ ಮಂಚೇಗೌಡ: (ಎನ್.ಜಿ.ಈ.ಎಫ್. ಲಿಮಿಟೆಡ್ ಉದ್ಯೋಗಿ) ಬೆಂಗಳೂರು ಕರ್ನಾಟಕ ವನ್ನು ಪ್ರತಿನಿಧಿಸಿದ್ದರು.

೯. ಶ್ರೀ ಟಿ.ಎಂ.ವೆಂಕಟೇಶ್: (ಎನ್.ಜಿ.ಈ.ಆಫ್ ಲಿಮಿಟೆಡ್ ಉದ್ಯೋಗಿ, ಬೆಂಗಳೂರು) ಪ್ರತಿನಿಧಿಸಿದ್ದರು.

೧೦. ಶ್ರೀ ಕೃಷ್ಣೇಗೌಡ: (ಎಚ್.ಎ.ಎಲ್.ಲಿಮಿಟೆಡ್ ಉದ್ಯೋಗಿ, ಬೆಂಗಳೂರು) ಕರ್ನಾಟಕವನ್ನು ಪ್ರತಿನಿಧಿಸಿದ್ದರು.

೧೧. ಶ್ರೀ ಸಿ.ಲಿಂಗೇಗೌಡ: (ಸಿ.ಐ.ಎಲ್.ಸ್ಪೋರ್ಟ್ಸ್‌ಕ್ಲಬ್ ಉದ್ಯೋಗಿ) ಕರ್ನಾಟಕವನ್ನು ಪ್ರತಿನಿಧಿಸಿದ್ದರು.

೧೨. ಶ್ರೀ ನಂಜೇಗೌಡ: (ಹೆಸರಘಟ್ಟ ಸ್ಪೋರ್ಟ್ಸ್‌ರ್ಟ್‌ಕ್ಲಬ್ ಸದಸ್ಯ) ಕರ್ನಾಟಕವನ್ನು ಪ್ರತಿನಿಧಿಸಿದ್ದರು.

೧೩. ಶ್ರೀ ಮುನೇಗೌಡ: (ಹೆಸರಘಟ್ಟ ಸ್ಪೋರ್ಟ್ಸ್‌ಕ್ಲಬ್ ಸದಸ್ಯ ಈಗ ಕೇಂದ್ರ ಎಕ್ಸೈಸ್ ಮತ್ತು ಕಸ್ಟಮ್ಸ್ ಉದ್ಯೋಗಿ) ಕೇಂದ್ರ ಸಚಿವಾಲಯ ಹಾಗೂ ಕರ್ನಾಟಕವನ್ನು ಪ್ರತಿನಿಧಿಸಿದ್ದರು

೧೪. ಶ್ರೀ ಕುಮಾರಸ್ವಾಮಿ: (ಎಚ್.ಎಂ.ಟಿ.ಕಾರ್ಖಾನೆಯ ಉದ್ಯೋಗಿ, ಬೆಂಗಳೂರು) ಕರ್ನಾಟಕವನ್ನು ಮತ್ತು ಸಿ.ಪಿ.ಈ.ಎಸ್.ಬಿ.ಯನ್ನು ಪ್ರತಿನಿಧಿಸಿದ್ದರು. ಅರ್ಹ ಅಂಪೈರ್.

೧೫. ಶ್ರೀ ಶಿವಶಂಕರ್: (ಎಚ್.ಎಂ.ಟಿ. ಕಾರ್ಖಾನೆಯ ಉದ್ಯೋಗಿ, ಬೆಂಗಳೂರು) ಕರ್ನಾಟಕ ಮತ್ತು ಸಿ.ಪಿ.ಈ.ಎಸ್.ಬಿ.ಯನ್ನು ಪ್ರತಿನಿಧಿಸಿದ್ದರು. ಎಚ್.ಎಂ.ಟಿ. ಮತ್ತು ಸಿ.ಪಿ.ಈ.ಎಸ್.ಬಿ.ತಂಡದ ಕ್ಯಾಪ್ಟನ್.

೧೬. ಶ್ರೀ ವೈ.ಜಿ.ಕೃಷ್ಣಮೂರ್ತಿ: (ಕೇಂದ್ರ ಎಕ್ಸೈಜ್ ಮತ್ತು ಕಸ್ಟಮ್ಸ್, ಬೆಂಗಳೂರು) ಕಿರಿಯರ ಮತ್ತು ಹಿರಿಯರ ತಂಡಗಳೆರಡರಲ್ಲೂ ಕರ್ನಾಟಕವನ್ನು ಪ್ರತಿನಿಧಿಸಿದ್ದರು. ಅಖಿಲ ಭಾರತ ಅಂಚೆ ಮತ್ತು ತಂತಿ ಇಲಾಖೆ ಹಾಗೂ ಬೆಂಗಳೂರು ವಿಶ್ವವಿದ್ಯಾನಿಲಯವನ್ನು ಪ್ರತಿನಿಧಿಸಿದ್ದರು.

೧೭. ಶ್ರೀ ನಸಿಂಹಮೂರ್ತಿ: (ಅಖಿಲ ಭಾರತ ಅಂಚೆ ಮತ್ತು ತಂತಿ ಇಲಾಖೆ ಉದ್ಯೋಗಿ, ಬೆಂಗಳೂರು) ಕಿರಿಯರ ಮತ್ತು ಹಿರಿಯರ ಎರಡೂ ತಂಡಗಳಲ್ಲಿ ಕರ್ನಾಟಕವನ್ನು ಪ್ರತಿನಿಧಿಸಿದ್ದರು. ಅಖಿಲ ಭಾರತ ಅಂಚೆ ಮತ್ತು ತಂತಿ ಇಲಾಖೆ ತಂಡವನ್ನೂ ಪ್ರತಿನಿಧಿಸಿದ್ದರು. ಕಿರಿಯರ ಕಬಡ್ಡಿ ತಂಡದ ಕ್ಯಾಪ್ಟನ್.

೧೮. ಶ್ರೀ ಎಂ.ಎಸ್.ರವಿಶಂಕರ್: (ಮಂಡ್ಯ) ಕರ್ನಾಟಕ ರಾಜ್ಯ ಮತ್ತು ಮೈಸೂರು ವಿಶ್ವವಿದ್ಯಾನಿಲಯವನ್ನು ಪ್ರತಿನಿಧಿಸಿದ್ದರು. ಮೈಸೂರು ವಿಶ್ವವಿದ್ಯಾನಿಲಯ ತಂಡದ ಕ್ಯಾಪ್ಟನ್

೧೯. ಶ್ರೀ ಕೆ.ಸಿ.ರಾಮಚಂದ್ರಯ್ಯ: (ಐ.ಪಿ.ಎಸ್, ಸರ್ಕಲ್ ಇನ್ಸ್‌ಪೆಕ್ಟರ್, ಮಳವಳ್ಳಿ) ಮೈಸೂರು ವಿಶ್ವವಿದ್ಯಾನಿಲಯವನ್ನು ಪ್ರತಿನಿಧಿಸಿದ್ದರು ಮತ್ತು ವಿಶ್ವವಿದ್ಯಾಲನಿಲಯ ತಂಡದ ಕ್ಯಾಪ್ಟನ್ ಹಾಗೂ ರಾಜ್ಯದ ಪರವಾಗಿಯೂ ಆಡಿದರು.

**ವಾಲಿಬಾಲ್:**

೧. ಶ್ರೀ ಬಾಲಾಜಿ: (ಐ.ಟಿ.ಐ. ಬೆಂಗಳೂರು) ೧೯೭೪ರಲ್ಲಿ ರಾಜ್ಯತಂಡದಲ್ಲಿ ಆಡಿ ಮೊದಲ ಸ್ಥಾನ ಪಡೆದರು. ಮತ್ತು ೯ ಬಾರಿ ಕರ್ನಾಟಕ ರಾಜ್ಯವನ್ನು ಪ್ರತಿನಿಧಿಸಿದ್ದರು.

೨. ಶ್ರೀ ರಾಮಚಂದ್ರಮೂರ್ತಿ: ಕರ್ನಾಟಕ ರಾಜ್ಯವನ್ನು ೧೦ ಬಾರಿ ಪ್ರತಿನಿಧಿಸಿದ್ದರು ಮತ್ತು ೧೯೭೪ರಲ್ಲಿ ರಾಜ್ಯ ತಂಡದ ಕ್ಯಾಪ್ಟನ್ ಆಗಿದ್ದರು.

೩. ಶ್ರೀ ರಂಗಪುರಂ ಬಿ.ಎ.: (ಆದಾಯ ತೆರಿಗೆ ವಿಭಾಗ ಬೆಂಗಳೂರು) ಕರ್ನಾಟಕ ರಾಜ್ಯವನ್ನು ೯ಬಾರಿ ಪ್ರತಿನಿಧಿಸಿದ್ದರು. ೧೯೭೭ರಲ್ಲಿ ರಾಜ್ಯತಂಡದ ಕ್ಯಾಪ್ಟನ್ ಆಗಿದ್ದರು.

೪. ಶ್ರೀ ಎಂ.ಚಂದ್ರಕುಮಾರ್ ಬಿ.ಎಸ್.ಸಿ., ಬಿ.ಇಡಿ., ಎಂ.ಪಿ.ಇಡಿ.(ಅಧ್ಯಾಪಕ) ಮೈಸೂರು ವಿಶ್ವವಿದ್ಯಾನಿಲಯ ವಿಎಫ್.ಐ.ರೆಫರಿ ಆಗಿ ೧೯೭೮ರಲ್ಲಿ ಕರ್ನಾಟಕ ರಾಜ್ಯವನ್ನು ಪ್ರತಿನಿಧಿಸಿದ್ದರು.

೫. ಶ್ರೀ ಚಂದ್ರಶೇಖರ ಬಿ.ಎ. (ತುರುವೇಕೆರೆ) ೧೯೮೦ರಲ್ಲಿ ಕರ್ನಾಟಕ ರಾಜ್ಯವನ್ನು ಪ್ರತಿನಿಧಿಸಿದ್ದರು.

೬. ಶ್ರೀ ರಾಮಕೃಷ್ಣೇಗೌಡ: (ಎಚ್.ಎಂ.ಟಿ. ಬೆಂಗಳೂರು) ಕರ್ನಾಟಕ ರಾಜ್ಯವನ್ನು ೭ಬಾರಿ ಪ್ರತಿನಿಧಿಸಿದ್ದರು.

೭. ಶ್ರೀ ಚಂದ್ರೇಗೌಡ: (ಬಿ.ಇ.ಎಲ್.ಬೆಂಗಳೂರು) ಕರ್ನಾಟಕ ರಾಜ್ಯವನ್ನು ೨ ಬಾರಿ ಪ್ರತಿನಿಧಿಸಿದ್ದರು.

೮. ಶ್ರೀ ವೇಣುಗೋಪಾಲಗೌಡ: (ಐ.ಟಿ.ಐ.ಬೆಂಗಳೂರು) ಕರ್ನಾಟಕ ರಾಜ್ಯವನ್ನು ೩ ಬಾರಿ ಪ್ರತಿನಿಧಿಸಿದ್ದರು.

೯. ಶ್ರೀ ಚಂದ್ರಶೇಖರ: (ಬಿ.ಇ.ಎಲ್.ಬೆಂಗಳೂರು) ೧೯೮೦ರಲ್ಲಿ ಕರ್ನಾಟಕ ರಾಜ್ಯವನ್ನು ಪ್ರತಿನಿಧಿಸಿದ್ದರು.

೧೦. ಶ್ರೀ ರೇವಣ್ಣ: ಬಿ.ಎ., ಬಿ.ಪಿ.ಇಡಿ. (ಕೆ.ಆರ್.ಪೇಟೆ) ೧೯೮೦ರಲ್ಲಿ ಕರ್ನಾಟಕ ರಾಜ್ಯವನ್ನು ಪ್ರತಿನಿಧಿಸಿದ್ದರು.

೧೧. ಶ್ರೀ ಎಂ.ಎಚ್.ಮಾದೇಗೌಡ ಎಂ.ಎ.ಎನ್.ಐ.ಎಸ್ (ಮಂಡ್ಯ) ಕರ್ನಾಟಕ ರಾಜ್ಯವನ್ನು ೩ ಬಾರಿ ಪ್ರತಿನಿಧಿಸಿದ್ದರು. ೧೯೮೦ರಲ್ಲಿ ರಾಜ್ಯದ ಕ್ಯಾಪ್ಟನ್ ಆಗಿದ್ದರು ೧೯೮೦ರಲ್ಲಿ ವಾಲಿಬಾಲ್‌ನಲ್ಲಿ ಎನ್.ಐ.ಎಸ್.ಡಿಪ್ಲೋಮಾ ಮಾಡಿದರು.

೧೨. ಶ್ರೀ ಲೋಕೇಗೌಡ (ಬೆಂಗಳೂರು) ೧೯೮೦ರಲ್ಲಿ ಕರ್ನಾಟಕ ರಾಜ್ಯವನ್ನು ಪ್ರತಿನಿಧಿಸಿದ್ದರು.

೧೩. ಶ್ರೀ ಬೆಟ್ಟೇಗೌಡ, ಎಂ.ಪಿ.ಡಿ.ನಿರ್ದೇಶಕರು, ಎಂ.ಎಸ್.ಆರ್.ಐ.ಟಿ.(ಬೆಂಗಳೂರು) ಐ.ಎಫ್.ಐ.ರೆಫರಿಆಗಿ ಕರ್ನಾಟಕ ರಾಜ್ಯವನ್ನು ಪ್ರತಿನಿಧಿಸಿದ್ದರು.

**೫. ಕ್ರಿಡಾ ವ್ಯವಸ್ಥಾಪಕ ವರ್ಗದಲ್ಲಿ**

೧. ಶ್ರೀ ಎಚ್.ಸಿ.ಶ್ರೀಕಂಠಯ್ಯ: (ಸಹಕಾರ ಸಚಿವರು) ಅಧ್ಯಕ್ಷರು. ಕೆ.ಆರ್.ಎ.ಕಬಡ್ಡಿ ಅಸೋಸಿಯೇಷನ್.

೨. ಶ್ರೀ ಪ್ರೊ.ಎಚ್.ಜಿ.ಬಾಲಕೃಷ್ಣ: (ಕಾನೂನು ಕಾಲೇಜಿನ ಪ್ರಾಧ್ಯಾಪಕರು) ಉಪಾಧ್ಯಕ್ಷರು ಕೆ.ಆರ್.ಎ. ಕಬಡ್ಡಿ ಅಸೋಸಿಯೇಷನ್

೩. ಶ್ರೀ ಕೆ.ಟಿ.ತಮ್ಮರಾಯಗೌಡ: (ಮಾಜಿ ಮೇಯರ್, ಬೆಂಗಳೂರು ನಗರ) ಉಪಾಧ್ಯಕ್ಷರು ಕೆ.ಆರ್.ಎ ಕಬಡ್ಡಿ ಅಸೋಸಿಯೇಷನ್.

೪. ಶ್ರೀ ಕೆ.ಲಕ್ಕಪ್ಪ: (ಎಂ.ಪಿ.) ಅಧ್ಯಕ್ಷರು ಕರ್ನಾಟಕ ವಾಲಿಬಾಲ್ ಅಸೋಸಿಯೇಷನ್.

೫. ಶ್ರೀ ಎಚ್.ಎಸ್.ವೆಂಕಟೇಶ್: ಉಪಾಧ್ಯಕ್ಷರು, ಕರ್ನಾಟಕ ವಾಲಿಬಾಲ್ ಅಸೋಸಿಯೇಷನ್.

೬. ಶ್ರೀ ಎಂ.ರಂಗಸ್ವಾಮಿ: ಕಾರ್ಯದರ್ಶಿ ಕರ್ನಾಟಕ ವಾಲಿಬಾಲ್ ಅಸೋಸಿಯೇಷನ್.

೭. ಶ್ರೀ ಪಿ.ವಿ.ರಾಮಯ್ಯ: (ಅಧ್ಯಕ್ಷರು, ಕೆ.ಇ.ಬಿ.) ಉಪಾಧ್ಯಕ್ಷರು, ಬ್ಯಾಸ್ಕೆಟ್‌ಬಾಲ್ ಅಸೋಸಿಯೇಷನ್.

೮. ಶ್ರೀ ಎಸ್.ವಿ.ಜಯರಾಮ್: ಕಾರ್ಯದರ್ಶಿ ಬಾಸ್ಕೆಟ್‌ಬಾಲ್ ಅಸೋಸಿಯೇಷನ್.

೯. ಶ್ರೀ ಸಾಯಿ ಪ್ರಕಾಶ್: ಕಾರ್ಯದರ್ಶಿ, ರಾಜ್ಯ ಚೆಸ್ ಅಸೋಸಿಯೇಷನ್. ಇವರು ಇತ್ತೀಚೆಗೆ ಬೆಂಗಳೂರಿನಲ್ಲಿ ಪ್ರಥಮ ಬಾರಿಗೆ ನಡೆದ ಗ್ರ್ಯಾಂಡ್ ಮಾಸ್ಟರ್ ಚೆಸ್ ಟೂರ್ನಮೆಂಟನ್ನು ವ್ಯವಸ್ಥೆಗೊಳಿಸಿದವರು.

**೪.೫. ರಾಜಕೀಯ ಕ್ಷೇತ್ರದಲ್ಲಿ ಒಕ್ಕಲಿಗರ ಪಾತ್ರ**

ಕರ್ನಾಟಕದಲ್ಲಿ ಇತ್ತೀಚಿನ ದಿನಗಳಲ್ಲಿ ಒಕ್ಕಲಿಗರು ರಾಜಕೀಯವಾಗಿ ತಮ್ಮ ಅಸ್ತಿತ್ವವನ್ನು ಹೆಚ್ಚಿಸಿಕೊಂಡಿದ್ದಾರೆ. ಎರಡನೆಯ ದರ್ಜೆಯ ನಾಯಕರಾಗಿ ಹೊರಹೊಮ್ಮಿದ್ದಾರೆ. ಇದಕ್ಕೆಕೆ ಈ ಜನಾಂಗದಲ್ಲಿನ ಸಂಘಟಿತ ನಾಯಕತ್ವ ಕಾರಣವಾಗಿದೆ. ಅವರೂ ಸಹ ಜನಾಂಗದ ಎಲ್ಲಾ ವರ್ಗದವರನ್ನೂ ಒಂದುಗೂಡಿಸುವಂತಹ ಒಂದು ಕೇಂದ್ರಶಕ್ತಿಯ ಅಭಾವವುಂಟಾಗಿದೆ. ಪ್ರಾಯಶಃ ಇಂತಹ ಒಂದು ಶಕ್ತಿ ಇದ್ದದ್ದೇ ಆಗಿದ್ದರೆ, ಒಕ್ಕಲಿಗರು ರಾಜಕೀಯವಾಗಿ ಇನ್ನೂ ಹೆಚ್ಚು ಮುನ್ನಡೆಯಲು ಸಾಧ್ಯವಾಗುತ್ತಿತ್ತು ಈ ಕಾರ್ಯವನ್ನು ಒಕ್ಕಲಿಗರ ಸಂಘ ಮಾಡಬೇಕಾಗಿದೆ. ಒಕ್ಕಲಿಗರ ಸಂಘ ತನ್ನ ವಜ್ರಮಹೋತ್ಸವ ಸಮಾರಂಭದಲ್ಲಿ ಸಂಘಟನೆಗಾಗಿ ತನ್ನ ಎಲ್ಲ ಶಕ್ತಿಯನ್ನೂ ಉಪಯೋಗಿಸುತ್ತದೆಂಬ ಪ್ರತಿಜ್ಞೆಯನ್ನು ಕೈಗೊಳ್ಳುವುದರ ಮೂಲಕ ಈ ಕಾರ್ಯ ಸಾಧಿತವಾಗಬೇಕು.

ರಾಜಕೀಯ ಕ್ಷೇತ್ರದಲ್ಲಿ ಅದರಲ್ಲೂ ಕರ್ನಾಟಕದಲ್ಲಿ ಒಕ್ಕಲಿಗರ ಪಾತ್ರ ಹಿರಿದಾದದು. ಬೆಂಗಳೂರಿನ ನಿರ್ಮಾಪಕ ಕೆಂಪೇಗೌಡರಿಂದ ಹಿಡಿದು ಇಂದಿನವರೆಗೂ ಒಕ್ಕಲಿಗರು ಪ್ರಮುಖ ಪಾತ್ರವನ್ನು ವಹಿಸಿದ್ದಾರೆಂದೇ ಹೇಳಬಹುದು. ನೇರವಾದ ರಾಜಕೀಯವಲ್ಲವಾದರೂ, ಅಧಿಕಾರಿಯಾಗಿದ್ದು, ಒಕ್ಕಲಿಗರಲ್ಲಿ ರಾಜಕೀಯ ಪ್ರಜ್ಞೆಯನ್ನುಂಟುಮಾಡಿ, ಒಕ್ಕಲಿಗರು ರಾಜ್ಯದ ರಾಜಕೀಯದಲ್ಲಿ ಪ್ರಮುಖ ಪಾತ್ರ ವಹಿಸುವಂತೆ ಮಾಡಿದ ಸರಕಾರದ ಹಿರಿಯ ಅಧಿಕಾರಿ ಶ್ರೀ ಕೆ.ಎಚ್.ರಾಮಯ್ಯನವರನ್ನು ಈ ಸಮಯದಲ್ಲಿ ನಾವು ಸ್ಮರಿಸಲೇಬೇಕು. ಶ್ರೀ ರಾಮಯ್ಯನವರು ಇಲ್ಲದೆ ಹೋಗಿದ್ದರೆ ಹಲವಾರು ಮಂದಿ ಒಕ್ಕಲಿಗ ಪ್ರಮುಖರು ರಾಜಕೀಯದಲ್ಲಿ ಪ್ರಮುಖ ಪಾತ್ರ ವಹಿಸುತ್ತಿರಲಿಲ್ಲವೆಂದು ಅನ್ನಿಸುತ್ತದೆ. ಅದಕ್ಕೆ ಸಾಕ್ಷಿರೂಪವಾಗಿಯೇ ಇಂದು ಗ್ರಾಮಾಂತರ ಪ್ರದೇಶಗಳ ಒಕ್ಕಲಿಗರ ಮನೆಗಳಲ್ಲಿ ದಿವಂಗತ ಕೆ.ಎಚ್.ರಾಮಯ್ಯನವರ ಭಾವಚಿತ್ರಗಳನ್ನು ನಾವು ಕಾಣಬಹುದಾಗಿದೆ. ಅಷ್ಟೇ ಅಲ್ಲದೆ, ಇಂದು ವಿವಿಧ ದಿಕ್ಕಿನಲ್ಲಿ ಚಲಿಸುತ್ತಿರುವ ಒಕ್ಕಲಿಗರನ್ನು ಪೂರ್ತಿಯಾಗಿಲ್ಲವಾದರೂ ಸ್ವಲ್ಪ ಮಟ್ಟಿಗಾದರೂ ಒಂದುಗೂಡಿಸಿ, ಸಂಘಟಿತರಾಗುವಂತೆ ಮಾಡುವಲ್ಲಿ, ಆದಿಚುಂಚನಗಿರಿ ಮಠವನ್ನು ಒಕ್ಕಲಿಗರದನ್ನಾಗಿ ಮಾಡಲು ಕಾರಣಕರ್ತರೂ ಅವರೇ.

**೨. ರಾಜ್ಯದ ರಾಜಕೀಯದಲ್ಲಿ ಜನಜಾಗೃತಿ**

ಭಾರತ ಸ್ವಾತಂತ್ರದ ಪ್ರಾರಂಭದಲ್ಲಿ ಒಕ್ಕಲಿಗರ ಪಾತ್ರ ಅಷ್ಟೇನೂ ಇಲ್ಲವಾದರೂ, ಮೈಸೂರು ರಾಜ್ಯದ ರಾಜಕೀಯದಲ್ಲಿ ಜನಜಾಗೃತಿಯನ್ನುಂಟುಮಾಡುವ ಕಾರ್ಯದಲ್ಲಿ ಒಕ್ಕಲಿಗರ ಪಾತ್ರ ಪ್ರಮುಖವಾದದ್ದು. ವಿ.ವೆಂಕಟಪ್ಪ ಹಾಗೂ ಎಚ್.ಕೆ.ವೀರಣ್ಣಗೌಡರವರು ರಾಷ್ಟ್ರೀಯ ವಾದಿಗಳಾಗಿ, ಕಾಂಗ್ರೆಸ್ ಪಕ್ಷದ ಸಕ್ರಿಯ ಸದಸ್ಯರಾಗಿ ದುಡಿಯುತ್ತಿದ್ದರೂ, ಎಚ್.ಸಿ.ದಾಸಪ್ಪ, ಕೆ.ಸಿ.ರೆಡ್ಡಿ ಮುಂತಾದವರು 'ಪ್ರಜಾಮಿತ್ರ ಮಂಡಳಿ'ಯ ಪ್ರಮುಖ ಸದಸ್ಯರಾಗಿ ಹಳೇ ಮೈಸೂರಿನಲ್ಲಿ ದುಡಿದವರು. ಆ ಕಾಲದಲ್ಲಿ ರಾಜರ ಆಡಳಿತದಲ್ಲಿ ದಿವಾನರು ಸರ್ವಸ್ವವೂ ಆಗಿದ್ದರೂ, ಕಾಂಗ್ರೆಸ್‌ವಿರುದ್ಧ ಹೋಗುವುದೇ ಕಷ್ಟವಾಗಿದ್ದರೂ, ವಿಶ್ವೇಶ್ವರಯ್ಯ ನಾಲೆಯ (ಅಂದು

ಇರ್ವಿನ್ ನಾಲೆ) ಪ್ರದೇಶದ ಸುಮಾರು ೪,೦೦೦ ಮಂದಿ ರೈತರನ್ನು ಕಾಲು ನಡಿಗೆಯಲ್ಲೇ ಬೆಂಗಳೂರಿಗೆ ನಡೆಯಿಸಿಕೊಂಡು ಹೋಗಿ, ಅಂದಿನ ದಿವಾನರಾದ ಸರ್ ಮಿರ್ಜಾರವರಿಗೆ ಮನವಿ ಪತ್ರವನ್ನು ಸಲ್ಲಿಸಿದರು. ಶ್ರೀ.ಎಚ್.ಕೆ.ವೀರಣ್ಣಗೌಡರೆ ಅಂದಿನ ಮೈಸೂರು ರಾಜ್ಯದ ಎಲ್ಲೆಡೆಯಲ್ಲೂ ಪ್ರವಾಸ ಮಾಡಿ ಕಾಂಗ್ರೆಸ್ ತತ್ವವನ್ನು ಸಾರಿದ್ದಲ್ಲದೆ, ಒಕ್ಕಲಿಗರು ರಾಷ್ಟ್ರೀಯ ಚಳುವಳಿಗೆ ವಿರೋಧಿಗಳಲ್ಲ ಎಂಬುದನ್ನು ತೋರಿಸಿಕೊಟ್ಟವರು. ಅವರು ಹಾಗೂ ವಿ.ವೆಂಕಟಪ್ಪನವರು (ಇಬ್ಬರೂ ಕರ್ನಾಟಕದ ಮಾಜಿ ಮಂತ್ರಿಗಳು) ತಮ್ಮ ಅವಿಶ್ರಾಂತ, ನಿಷ್ಠಾಯುತ ಪ್ರಯತ್ನದಿಂದಲೇ ಅಂದಿನ ಮೈಸೂರು ರಾಜ್ಯದಲ್ಲಿದ್ದ ವಿವಿಧ ವಿರೋಧ ಪಕ್ಷಗಳನ್ನು ರಾಷ್ಟ್ರೀಯ ಕಾಂಗ್ರೆಸ್ಸಿಗೇ ಸೇರುವಂತೆ ಮಾಡಿದರು. ಪ್ರಾಯಶಃ ಅದೊಂದು ಕಾರ್ಯದಲ್ಲಿ ಅವರು ಯಶಸ್ವಿಯಾಗದೆ ಹೋಗಿದ್ದಿದ್ದರೆ ಅಂದಿನ ಮೈಸೂರು ರಾಜ್ಯದಲ್ಲಿ ರಾಷ್ಟ್ರೀಯ ಕಾಂಗ್ರೆಸ್ಸಾಗಲಿ, ಮುಂದೆ ಅಸ್ತಿತ್ವಕ್ಕೆ ಬಂದ ಮೈಸೂರು ಕಾಂಗ್ರೆಸ್ಸಾಗಲಿ ತಲೆ ಎತ್ತುತ್ತಲೇ ಇರಲಿಲ್ಲವೆಂದು ಹೇಳಬಹುದು.

**೩. ೧೯೩೭ ಪ್ರಜಾಪ್ರತಿನಿಧಿ ಸಭೆಯಲ್ಲಿ ಪ್ರತಿಭಟನೆ**

ಮೈಸೂರು ರಾಜ್ಯದ ರಾಜಕೀಯದಲ್ಲಿ ೧೯೩೭ ಅತ್ಯಂತ ಗಣನೀಯವಾದ ವರ್ಷ. ಕಾರಣ ಇಷ್ಟೆ. ರಾಜ್ಯದಲ್ಲಿ ಆಗ ಬೇರೆ ಬೇರೆ ಹೆಸರಿನಿಂದ ಇದ್ದ ರಾಜಕೀಯ ತತ್ವಗಳು ಒಂದಾಗಿ ರಾಷ್ಟ್ರೀಯವಾದುದು. ಹಿಂದಿನ ರಾಜಕೀಯ ಪಕ್ಷಗಳ ಸೂಕ್ಷ್ಮ ಪರಿಚಯ ಮಾಡಿಕೊಡುವುದು ಅಗತ್ಯ. ಮೈಸೂರು ರಾಜ್ಯ ದೇಶೀಯ ಆಡಳಿತಕ್ಕೆ ಸೇರಿದ್ದು. ಕನ್ನಡದ ಕೆಲವು ಭಾಗಗಳು ಬೊಂಬಾಯಿ, ಹೈದರಾಬಾದ್ ಹಾಗೂ ಮದ್ರಾಸು ಆಧಿಪತ್ಯಗಳಿಗೆ ಸೇರಿದ್ದಾಗಿತ್ತು. ಕೊಡಗು ಮಾತ್ರ ಬೇರೆಯೇ ಇತ್ತು. ಮೈಸೂರು ಸಂಸ್ಥಾನ ಒಡೆಯರ ಆಳ್ವಿಕೆಗೆ ಸೇರಿದ್ದಾಗಿತ್ತು. ಒಡೆಯರ್‌ರವರುಗಳು ಸ್ವತಂತ್ರರಾಗಿರಲಿಲ್ಲ. ಅವರು ಬ್ರಿಟಿಷರ ಅಧೀನದಲ್ಲಿದ್ದರು. ಹೀಗಾಗಿ ರಾಜ್ಯದ ಪ್ರಜೆಗಳು ಇಬ್ಬರು ಯಜಮಾನರ ಅಧೀನದಲ್ಲಿದ್ದರು. ಇದನ್ನು ತಪ್ಪಿಸಲು ರಾಷ್ಟ್ರೀಯ ಕಾಂಗ್ರೆಸ್ಸಿಗರು ಪ್ರಯತ್ನಿಸುತ್ತಿದ್ದರೂ, ಇಲ್ಲಿ ಗಮನೀಯವಾದ ನಾಯಕರು ಇಲ್ಲದೆ ಅದೊಂದು ಸಪ್ಪೆ ಪಕ್ಷವಾಗಿತ್ತು. ರಾಜ್ಯದ ಪ್ರಭಾವಶಾಲಿ ನಾಯಕರುಗಳೆಲ್ಲ 'ಸಂಯುಕ್ತ ಪ್ರಜಾಪಕ್ಷ'ದಲ್ಲೇ ಇದ್ದರು. ಈ ಪಕ್ಷದಲ್ಲಿ ಎಚ್.ಸಿ.ದಾಸಪ್ಪ, ಎಚ್.ಬಿ.ಗುಂಡಪ್ಪಗೌಡ, ಕೆ.ಸಿ.ರೆಡ್ಡಿ, ಎಸ್.ಸಿ.ಮಲ್ಲಯ್ಯ, ಎಂ.ಸಿ.ಲಿಂಗೇಗೌಡ ಮುಂತಾದ ಹಲವಾರು ಮಂದಿ ಒಕ್ಕಲಿಗ ನಾಯಕರೂ ಹಾಗೂ ಇತರ ಹಲವಾರು ಪ್ರಮುಖರೂ ಇದ್ದುದರಿಂದ ಈ ಪಕ್ಷವೇ ರಾಜ್ಯದ ಪ್ರಭಾವೀ ಪಕ್ಷವಾಗಿತ್ತು.

ಆಗ ರಾಜ್ಯದಲ್ಲಿ ಶ್ರೀ ಬಿ.ಎಂ.ಶೀನಪ್ಪನವರ ನಾಯಕತ್ವದಲ್ಲಿ ಜನರನ್ನು ಜಾಗೃತಗೊಳಿಸಲು ಜನಜಾಗೃತಿ ಸಂಘವು ಕೆಲಸ ಮಾಡುತ್ತಿತ್ತು. ಈ ಪಕ್ಷವೂ ಅಲ್ಲಲ್ಲಿ ಚಳುವಳಿ ಮಾಡುತ್ತಿದ್ದರೂ, ಜನತೆಯ ಮೇಲೆ ಸಾಕಷ್ಟು ಪ್ರಭಾವ ಬೀರಲು ಸಾಧ್ಯವಾಗುತ್ತಿರಲಿಲ್ಲ. ಇದರಿಂದ ಎಲ್ಲರ ಕಣ್ಣು ''ಸಂಯುಕ್ತ ಪ್ರಜಾಪಕ್ಷ''ದ ಮೇಲೆಯೇ ಇತ್ತು. ಆ ಸಮಯಕ್ಕಾಗಲೇ ರಾಜ್ಯದಲ್ಲಿ ಗಾಂಧೀಜಿಯವರ ಪ್ರವಾಸ ನಡೆದು ಜನರ ಮೇಲೆ ಒಂದು ರೀತಿಯ ರಾಷ್ಟ್ರೀಯ ಮನೋಭಾವ ಮೂಡಿತ್ತು. ಮೇಲಾಗಿ ಸಂಯುಕ್ತ ಪ್ರಜಾಪಕ್ಷವೂ ರಾಜ್ಯದಲ್ಲಿ ಜವಾಬ್ದಾರಿ ಸರಕಾರದ ಬೇಡಿಕೆಯನ್ನು ಮುಂದಿಟ್ಟಿತ್ತು. ಅದಕ್ಕೆ ಸರಿಯಾಗಿ ಬೊಂಬಾಯಿ ಮೇಯರ್ ಆಗಿದ್ದ ಕೆ.ಎಫ್. ನಾರಿಮನ್‌ರವರು ಬೆಂಗಳೂರಿಗೆ ಬಂದಿದ್ದಾಗ ಅವರನ್ನು ಪೋಲೀಸರು ಬನಪ್ಪ ಪಾರ್ಕಿನಲ್ಲಿ (ಕಬ್ಬನ್‌ಪೇಟೆ ಪಕ್ಕದ ಮೈದಾನ) ದಸ್ತಗಿರಿ ಮಾಡಿದಾಗ ನಡೆದ ಗಲಭೆ ಈ ಸೌಮ್ಯವಾದಿಗಳನ್ನು ಕೆರಳಿಸಿತು.

ಅದೇ ಸಮಯಕ್ಕೆ ಅಂದರೆ, ಅಕ್ಟೋಬರ್ ತಿಂಗಳಲ್ಲಿ, ಮೈಸೂರಿನಲ್ಲಿ ಪ್ರಜಾಪ್ರತಿನಿಧಿ ಸಭೆ ಸೇರಿದ್ದಿತು. ರೆಸಿಡೆಂಟರೇ ಸಭೆಯ ಕಾರ್ಯಕಲಾಪ ವೀಕ್ಷಿಸಲು ಬಂದಿದ್ದರು. ಆ ಸಭೆಗೆ ದಿವಾನರೇ ಅಧ್ಯಕ್ಷರಾಗಿದ್ದುದರಿಂದ ಸರ್ ಮಿರ್ಜಾರವರು ಅಧ್ಯಕ್ಷತೆ ವಹಿಸಿದ್ದರು. ಸಭೆಯ ಪ್ರಾರಂಭದಲ್ಲಿ ಅಧ್ಯಕ್ಷರು ಭಾಷಣ ಮಾಡುವುದು ಪದ್ಧತಿಯಾಗಿತ್ತು. ಅದರಂತೆಯೇ ಸರ್ ಮಿರ್ಜಾನವರು ಭಾಷಣ ಮಾಡುತ್ತಿದ್ದಾಗ ಹಿಂದಿನ ಪಕ್ಷದ ನಾಯಕರಾದ ಶ್ರೀ ಕೆ.ಟಿ.ಭಾಷ್ಯಂರವರನ್ನು ದಸ್ತಗಿರಿ ಮಾಡಿದ ನೀತಿಯನ್ನು ಪ್ರತಿಭಟಿಸಿ, ಎಚ್.ಕೆ.ವೀರಣ್ಣಗೌಡರ ನಾಯಕತ್ವದಲ್ಲಿ ಸುಮಾರು ೬೦ ಮಂದಿ ಸಭಾತ್ಯಾಗ ಮಾಡಿ ಸಭಿಕರನ್ನು ದಿಗ್ಭ್ರಾಂತರನ್ನಾಗಿ ಮಾಡಿದರು. ಅದರಿಂದ ಸರಕಾರದ ಧೈರ್ಯ ಕುಗ್ಗಿದಂತಾಯಿತು.

**೪. ೧೯೩೭ ಸಂಸ್ಥಾನದಲ್ಲಿ ಕಾಂಗ್ರೆಸ್ ಜನನ**

ಈ ಎಲ್ಲಾ ಪ್ರಕರಣಗಳು ನಡೆಯುತ್ತಿರುವಂತೆಯೇ 'ಕಾಂಗ್ರೆಸ್' ಮತ್ತು 'ಸಂಯುಕ್ತ ಪ್ರಜಾಪಕ್ಷ'ಗಳು ಒಂದಾಗುವುದರ ಬಗ್ಗೆ ಸಾಕಷ್ಟು ಮಾತುಕತೆಗಳು ನಡೆದು ೧೬.೧೦.೧೯೩೭ರಂದು ಭಾರಿ ಸಮ್ಮೇಳನವೊಂದು ಮೈಸೂರಿನ ಇರ್ವಿನ್ ರಸ್ತೆಯಲ್ಲಿರುವ ಶ್ರೀ ತಿಮ್ಮಯ್ಯಾಚಾರ್ ಛತ್ರದಲ್ಲಿ ನಡೆಯಿತು. ಸುಮಾರು ೫೦೦ಮಂದಿ ಪ್ರತಿನಿಧಿಗಳು ಅದರಲ್ಲಿ ಭಾಗವಹಿಸಿದ್ದರು. ಹಿರಿಯ ನಾಯಕರಾದ ಎಚ್.ಸಿ.ದಾಸಪ್ಪನವರು ಚರಿತ್ರಾರ್ಹವಾದ ಈ ಸಮ್ಮೇಳನದಲ್ಲಿ ಪ್ರತಿನಿಧಿಗಳನ್ನು ಸ್ವಾಗತಿಸಿ, ತಮ್ಮ ಪಕ್ಷ ಕಾಂಗ್ರೆಸ್ ಪಕ್ಷದೊಡನೆ ವಿಲೀನವಾಗುವ ಅಗತ್ಯತೆಯನ್ನು ಹೀಗೆ ವಿವರಿಸಿದರು 'ಮೈಸೂರು ಭಾರತದ ಒಂದು ಅಂಗ. ಮಾತೃಭೂಮಿಯ ಸ್ವಾತಂತ್ರ್ಯಕ್ಕಾಗಿ ನಾವೆಲ್ಲರೂ ದುಡಿಯಬೇಕಾದ್ದು ನಮ್ಮ ಆದ್ಯ ಕರ್ತವ್ಯ. ಆದ್ದರಿಂದ ನಮ್ಮ ಪಕ್ಷದ ಕಾರ್ಯಕಾರಿ ಸಮಿತಿ ಅಖಿಲ ಭಾರತ ಕಾಂಗ್ರೆಸ್ಸಿನೊಡನೆ ವಿಲೀನಗೊಳ್ಳುವ ನಿರ್ಣಯ ಮಾಡಿದೆ. ಅದಕ್ಕೆ ಎಲ್ಲರೂ ಬೆಂಬಲ ನೀಡಬೇಕು. ಶ್ರೀಮನ್ಮಹಾರಾಜರವರ ಕೃಪಾಶ್ರಯದಲ್ಲಿ ಜವಾಬ್ದಾರಿ ಸರಕಾರ ರಚಿಸುವುದೇ ನಮ್ಮ ಗುರಿ' ಎಂದು ಸಾರಿದರು. ಆ ನಿರ್ಣಯ ಸರ್ವಾನುಮತದಿಂದ ಅಂಗೀಕೃತವಾಗಿ ಮೈಸೂರು ಸಂಸ್ಥಾನದಲ್ಲಿ ಬಲಿಷ್ಠವಾದ ಕಾಂಗ್ರೆಸ್ ಪಕ್ಷದ ಉದಯವಾಯಿತು. ಇದರಲ್ಲಿ ಒಕ್ಕಲಿಗರ ಮುಖಂಡರುಗಳು ಪ್ರಮುಖ ಪಾತ್ರ ವಹಿಸಿದ್ದರಾದರೂ ಶ್ರೀಯುತರುಗಳಾದ ಎಸ್.ಸಿ.ಮಲ್ಲಯ್ಯನವರು ಮತ್ತು ಎಂ.ಸಿ.ಲಿಂಗೇಗೌಡರು ಬೇರೆಯೇ ಉಳಿದರು. ಪ್ರಬಲ ಕಾಂಗ್ರೆಸ್ ರಚನೆಯಲ್ಲಿ ಒಕ್ಕಲಿಗ ಮುಖಂಡರ ಪಾತ್ರ ಹಿರಿದಾದದ್ದು. ಅಂದು ಇಂದಿನಂತೆ ಹಲವಾರು ವಿಧವಾದ ಜಾತೀಯ ಕಲಹಗಳು ಇರಲೇ ಇಲ್ಲ. ಏನಾದರೂ ಇದ್ದಿತೆಂದರೆ ಅದು ಬ್ರಾಹ್ಮಣ ಮತ್ತು ಬ್ರಾಹ್ಮಣೇತರ ಎಂಬ ಎರಡೇ ಜಾತಿ. ಬ್ರಾಹ್ಮಣರನ್ನು ಬಿಟ್ಟರೆ ಉಳಿದವರೆಲ್ಲಾ ಒಂದೇ ಜಾತಿಯವರಂತೆ ವರ್ತಿಸುತ್ತಿದ್ದರು. ಅವರುಗಳಲ್ಲಿ ಒಕ್ಕಲಿಗರೇ ಎಲ್ಲಾ ರಂಗಗಳಲ್ಲೂ ಮುಂಚೂಣಿಯಲ್ಲಿದ್ದರು. ಈ ದಿಸೆಯಲ್ಲಿ ಕಾಂಗ್ರೆಸ್ಸಿಗೆ ಸದಸ್ಯರನ್ನು ಸೇರಿಸುವ ಕಾರ್ಯ ಮುಂದುವರಿಯುತ್ತಾ ಹೋಯಿತು. ಕಾಂಗ್ರೆಸ್ ಶಕ್ತಿ ಬಲವಾಗುತ್ತಿರುವುದನ್ನು ನೋಡಿದ ಸರಕಾರ ಬಂಧಿತರನ್ನು ಬಿಡುಗಡೆ ಮಾಡಿತು.

**೫. ೧೯೩೮ ಹರಿಪುರದಲ್ಲಿ ಭಾರತ ಕಾಂಗ್ರೆಸ್ ಅಧಿವೇಶನ**

೧೯೩೮ ಮತ್ತೊಂದು ವಿಧದಲ್ಲಿ ಮಹತ್ವಪೂರ್ಣ ಹಾಗೂ ಚರಿತ್ರಾರ್ಹ ವರ್ಷ, ಅಖಿಲ ಭಾರತ ಕಾಂಗ್ರೆಸ್ ಅಧಿವೇಶನ ಹರಿಪುರದಲ್ಲಿ ಶ್ರೀ ಸುಭಾಷ್‌ಚಂದ್ರ ಬೋಸ್‌ರವರ ಅಧ್ಯಕ್ಷತೆಯಲ್ಲಿ ಫೆಬ್ರವರಿ ತಿಂಗಳಲ್ಲಿ

ಏರ್ಪಾಡಾಗಿತ್ತು. ಆ ಅಧಿವೇಶನಕ್ಕೆ ಕೆ.ಸಿ.ರೆಡ್ಡಿ, ಕೆ.ಹನುಮಂತಯ್ಯ ವಿ.ವೆಂಕಟಪ್ಪನವರೇ ಆದಿಯಾಗಿ ಪ್ರತಿನಿಧಿಗಳಾಗಿ ಹೋಗಿದ್ದರು. ಅಲ್ಲಿ ಒಂದು ವಿಶೇಷ ನಿರ್ಣಯ ತೆಗೆದುಕೊಳ್ಳಲಾಯಿತು.. ಅಂದರೆ ದೇಶೀಯ ರಾಜ್ಯಗಳು ಕಾಂಗ್ರೆಸ್ಸಿನ ಹೆಸರಿನಲ್ಲಿ ಹೋರಾಟ ನಡೆಸಬಾರದೆಂಬುದು ಅಂಗೀಕೃತವಾಯಿತು. ಮೂಲ ನಿರ್ಣಯವು ದೇಶೀಯ ಸಂಸ್ಥಾನಗಳ ಪ್ರಜೆಗಳ ಆಸೆ ಆಕಾಂಕ್ಷೆಗಳಿಗೆ ಮಾರಕವಾಗಬಹುದೆಂಬ ನಿರ್ಣಯಕ್ಕೆ ಚಂಗಲರಾಯ ರೆಡ್ಡಿಯವರು ತಿದ್ದುಪಡಿ ಮಾಡಿಸಿ ಪ್ರಭಾವಯುತವಾಗಿ ವಾದಿಸಿದರು. ಆದರೂ ನಿರ್ಣಯದ ಸೂಚಕರಾದ ಮೌಲಾನಾ ಅಬುಲ್ ಕಲಾಂ ಆಜಾದ್‌ರವರು ತಮ್ಮ ಪಟ್ಟನ್ನು ಬಿಡದಿದ್ದುದರಿಂದ ತಿದ್ದುಪಡಿ ಬಿದ್ದುಹೋಗಿ ಮೂಲ ನಿರ್ಣಯ ಅಂಗೀಕೃತವಾಯಿತು. ಆಗ ನಮ್ಮ ನಾಯಕರುಗಳಾದ ಕೆಂಗಲ್ ಹನುಮಂತಯ್ಯ ಮತ್ತಿತರರು ಪಂಡಿತ ನೆಹರೂರವರನ್ನೂ ಮತ್ತಿತರ ಮುಖಂಡರುಗಳನ್ನೂ ಭೇಟಿಯಾಗಿ ಮಾತುಕತೆ ನಡೆಸಿದರು. ಒಟ್ಟಿನಲ್ಲಿ ನಡೆಸಿದ ಮಾತುಕತೆಯಂತೆ ನೆಹರು ಮತ್ತು ರಾಜಾಜಿಯವರು ಮೊದಲು ಒಪ್ಪದೆ ಹೋದರೂ ಅಧ್ಯಕ್ಷರಾದ ಶ್ರೀ ಸುಭಾಷ್‌ಚಂದ್ರ ಬೋಸ್‌ರವರೂ ಒಂದು ಒಡಂಬಡಿಕೆಗೆ ಒಪ್ಪಿದರು. ಅದೆಂದರೆ, ದೇಶೀಯ ರಾಜ್ಯಗಳಲ್ಲೂ ಅಖಿಲ ಭಾರತ ಕಾಂಗ್ರೆಸ್ಸಿನಿಂದ ಕಾರ್ಯ ನಡೆಯಬಹುದು. ಆದರೆ ಹೋರಾಟ ಮಾತ್ರ ಕೂಡದು. ಹೋರಾಟ ನಡೆಯುವುದಾದರೆ ಬೇರೆ ಪಕ್ಷದ ಹೆಸರಿನಲ್ಲಿ ಮಾತ್ರ ಮಾಡಬಹುದು ಎಂಬುದು. ಅವರು ಹಾಗೆ ಮಾಡಲು ಕಾರಣವೆಂದರೆ ದೇಶೀಯ ರಾಜ್ಯಗಳ ಜನರು ಹೋರಾಟಕ್ಕೆ ಸಿದ್ಧ ಇಲ್ಲ ಎನ್ನುವುದು ಒಂದು. ಸದ್ಯದಲ್ಲಿ ಬ್ರಿಟಿಷರನ್ನೂ ಮತ್ತು ದೇಶೀಯ ರಾಜರುಗಳನ್ನೂ ಏಕಕಾಲದಲ್ಲಿ ಎದುರುಹಾಕಿಕೊಳ್ಳುವುದು ಸರಿಯಲ್ಲ ಎಂಬುದು ಇನ್ನೊಂದು. ಬ್ರಿಟಿಷರು ಹೋದರೆ ಈ ರಾಜರುಗಳು ಹೋಗಿಯೇ ಹೋಗುತ್ತಾರೆಂಬ ಕಲ್ಪನೆ ಅವರದಾಗಿತ್ತು. ಆದರೆ ಇದರಿಂದ ದೇಶೀಯ ರಾಜ್ಯಗಳ ಪ್ರಜೆಗಳು ಎಚ್ಚೆತ್ತು ತಮ್ಮ ಕಾಲ ಮೇಲೆ ನಿಂತು ತಮ್ಮದೇ ಸ್ವಂತ ಸಂಸ್ಥೆಯನ್ನು ಸ್ಥಾಪಿಸುವಂತಾಯಿತು. ಅದೇ ಪ್ರತ್ಯೇಕ ಮೈಸೂರು ಕಾಂಗ್ರೆಸ್ಸಿನ ಜನನ.

**೬. ಶಿವಪುರ ಕಾಂಗ್ರೆಸ್ ಅಧಿವೇಶನ ಧ್ವಜ ಸತ್ಯಾಗ್ರಹ ರಾಜಕೀಯದಲ್ಲಿ ಹೊಸ ತಿರುವು.**

ಹರಿಪುರ ಕಾಂಗ್ರೆಸ್ ಅಧಿವೇಶನದಿಂದ ಹಿಂತಿರುಗಿ ಬಂದ ನಾಯಕರಿಗೆ ಒಂದು ರೀತಿಯ ಹುರುಪು ಬಂತು. ಇಲ್ಲಿಯೂ ೧೨.೦೪.೩೮ರಂದು ಅದೇ ರೀತಿಯ ಕಾಂಗ್ರೆಸ್ ಅಧಿವೇಶನವನ್ನು ಏರ್ಪಡಿಸಬೇಕೆಂದು ನಾಯಕರುಗಳ ಒಂದು ನಿರ್ಧಾರ ಕೈಗೊಂಡರು. ಅಲ್ಲದೆ ಮೈಸೂರು ಜಿಲ್ಲೆಯಲ್ಲೇ ಮಾಡುವುದೆಂದೂ ತೀರ್ಮಾನಕ್ಕೆ ಬಂದರು. ಮೈಸೂರು ಜಿಲ್ಲೆಯಲ್ಲಿ ಒಕ್ಕಲಿಗರೇ ಹೆಚ್ಚು ಇರುವ ಮದ್ದೂರು ತಾಲ್ಲೂಕಿನಲ್ಲಿ ಶಿವಪುರ ಮಧ್ಯಭಾಗದ ಊರು. ನೀರು ರೈಲು ಇತ್ಯಾದಿ ಎಲ್ಲಾ ಸೌಲಭ್ಯಗಳೂ ಇವೆ. ಆದ್ದರಿಂದ ಅಲ್ಲೆಯೇ ಮಾಡುವುದೆಂದು ನಿರ್ಧಾರವಾಯಿತು. ರಾಜಕೀಯದಲ್ಲಿ ಇದ್ದರೂ ಹಿಂದುಗಡೆ, ಇದ್ದೇ ಕೆಲಸಮಾಡುತ್ತಿದ್ದ ಮೈಸೂರಿನ ಸಾಹುಕಾರ್ ಎಸ್.ಚನ್ನಯ್ಯನವರನ್ನೇ ಸ್ವಾಗತ ಸಮಿತೆ ಅಧ್ಯಕ್ಷರನ್ನಾಗಿಯೂ, ಎಚ್.ಕೆ.ವೀರಣ್ಣಗೌಡರು ಹಾಗೂ ಎ.ಜಿ.ಬಂದೀಗೌಡರನ್ನು ಕಾರ್ಯದರ್ಶಿಗಳನ್ನಾಗಿಯೂ ಆಯ್ಕೆ ಮಾಡಲಾಯಿತು. ಈ ಸಮ್ಮೇಳನಕ್ಕೆ ಎಲ್ಲೂ ಇಲ್ಲದ ಮಹತ್ವ ಬಂತು. ಅಂತಹ ಯಶಸ್ವೀ ಸಮ್ಮೇಳನ ಅದು. ಇದರ ಯಶಸ್ಸಿಗೆ ಒಕ್ಕಲಿಗರ ಪಾತ್ರ ಪ್ರಮುಖವಾದುದೆಂಬುದನ್ನು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ. ರಾಜ್ಯದ ರಾಜಕೀಯದಲ್ಲಿ ಹೊಸ ತಿರುವು ಇಲ್ಲಿಂದ ಪ್ರಾರಂಭವಾಗಿ ಪ್ರಜಾಸತ್ಯಾಗ್ರಹವೆಂಬ ಭಾರಿ ಆಂಧೋಲನವು ಏರ್ಪಟ್ಟಿತು. ಇದರಲ್ಲಿ ಎಲ್ಲಾ ಮುಖಂಡರೂ ಭಾಗವಹಿಸಿದ್ದರು. ಮೊದಲ ದಿನದ ದಸ್ತಗಿರಿಯಿಂದ ಚಳುವಳಿ ಪ್ರಾರಂಭವಾಗಿ ನೂರಾರು ಜನ ದಸ್ತಗಿರಿ

ಮಾಡಲ್ಪಟ್ಟರು. ಸತ್ಯಾಗ್ರಹ ಬಲವಾಯಿತು. ಕೊನೆಗೆ ಶ್ರೀಮತಿ ಯಶೋಧರ ದಾಸಪ್ಪನವರು ಧ್ವಜಾರೋಹಣ ಮಾಡಿದಾಗ ನವ ಚೈತನ್ಯ ಉಕ್ಕಿ ಹರಿಯಿತು.

**೭. ವಿದುರಾಶ್ವತ್ಥ ಘಟನೆ 'ಅರಮನೆ ಚಲೋ' ಚಳುವಳಿ**

೧೯೩೮ರಲ್ಲಿ ವಿದುರಾಶ್ವತ್ಥದಲ್ಲಿ ಮೈಸೂರು ಕಾಂಗ್ರೆಸ್ಸಿನ ದ್ವಿತಿಯ ಅಧಿವೇಶನ ನಡೆಯಿತು. ಅಲ್ಲಿ ಎಚ್.ಸಿ.ದಾಸಪ್ಪನವರು ಅಧ್ಯಕ್ಷರಾದರು. ಮುಂದೆ ಎನ್.ಸಿ.ನಾಗಯ್ಯರೆಡ್ಡಿ, ಎನ್.ಸಿ.ತಿಮ್ಮಾರೆಡ್ಡಿ ಹಾಗೂ ದಾಸಪ್ಪನವರ ನಾಯಕತ್ವದಲ್ಲಿ ಕಾಂಗ್ರೆಸ್ ಮತ್ತಷ್ಟು ಬೆಳೆಯಿತು. ೧೯೩೮ರಲ್ಲ ರಾಜ್ಯದಲ್ಲಿ ಭಾರಿ ಸತ್ಯಾಗ್ರಹ ಆರಂಭವಾಗಿ ಸುಮಾರು ೩,೦೦೦ಕ್ಕಿಂತಲೂ ಹೆಚ್ಚು ಮಂದಿ ಸತ್ಯಾಗ್ರಹದಲ್ಲಿ ಭಾಗವಹಿಸಿದರು. ೧೯೪೨ರಲ್ಲಿ 'ಬ್ರಿಟಿಷರೇ ಭಾರತ ಬಿಟ್ಟು ತೊಲಗಿ' ಚಳುವಳಿಯಲ್ಲಿ ಇನ್ನೂ ಹೆಚ್ಚುಮಂದಿ ಭಾಗವಹಿಸಿದ್ದರು. ಅಂತೂ ರಾಜ್ಯದ ರಾಜಕೀಯದಲ್ಲಿ ೧೯೪೭ರಲ್ಲಿ ಭಾರತಕ್ಕೆ ಸ್ವಾತಂತ್ರ್ಯ ಬಂದರೂ, ದೇಶೀಯ ಸಂಸ್ಥಾನಗಳಲ್ಲಿ ನಿರಂಕುಶ ಆಡಳಿತವೇ ಇತ್ತು. ಆಗಲೇ ಕೆ.ಹನುಮಂತಯ್ಯನವರು 'ಅರಮನೆ ಚಲೋ' ಘೋಷಣೆಯನ್ನು ತಂದರು. ಚಂಗಲರಾಯರೆಡ್ಡಿಯವರ ನಾಯಕತ್ವದಲ್ಲಿ 'ಅರಮನೆ ಚಲೋ' ಚಳುವಳಿ ಪ್ರಾರಂಭವಾಯಿತು. ಕೇವಲ ೪೨ ದಿನಗಳ ಚಳುವಳಿಯಲ್ಲಿ ಅಂದಿನ ದಿವಾನರಾದ ಸರ್ ಆರ್ಕಾಟ್ ರಾಮಸ್ವಾಮಿ ಮೊದಲಿಯಾರ್‌ರವರು ಜೈಲಿನಲ್ಲಿದ್ದ ಕಾಂಗ್ರಿಸ್ ನಾಯಕರನ್ನೂ ಹಾಗೂ ಚಂಗಲರಾಯರೆಡ್ಡಿ, ಎಚ್.ಸಿ.ದಾಸಪ್ಪನವರೇ ಮುಂತಾದ ಮುಖಂಡರನ್ನೂ ಬರಮಾಡಿಕೊಂಡು ಸಂಧಾನ ನಡೆಸಿದರು.

**೮. ಮಂತ್ರಿಮಂಡಲ ರಚನೆ**

ಅದರ ಫಲವಾಗಿ ಮಹಾರಾಜರಾದ ಜಯಚಾಮ ರಾಜ ಒಡೆಯರವರು ಒಕ್ಕಲಿಗರನಾಯಕರ ಕೋರಿಕೆಯಂತೆ, ಸರ್ ರಾಮಸ್ವಾಮಿ ಮೊದಲಿಯಾರ್ ದಿವಾನರಾಗಿದ್ದಾಗ ಹತ್ತು ಮಂದಿ ಮಂತ್ರಿಮಂಡಲ ರಚನೆಯಾಯಿತು. ಇದರಲ್ಲಿ ಕಾಂಗ್ರೆಸ್‌ನವರು ೭ ಮಂದಿ ಇರುವಂತೆ ಒಪ್ಪಿದರು. ಆದರೆ ರಾಜಕೀಯ ಬಂದಿಗಳ ಬಿಡುಗಡೆಯಾಗಿ ಕೆ.ಚಂಗಲ ರಾಯರೆಡ್ಡಿಯವರು ಮುಖ್ಯಮಂತ್ರಿಗಳಾಗಿಯೂ, ಎಚ್.ಸಿ.ದಾಸಪ್ಪನವರು ಆರ್ಥಿಕ ಹಾಗೂ ಹಣಕಾಸಿನ ಮಂತ್ರಿಯಾಗಿಯೂ ಅಧಿಕಾರ ವಹಿಸಿಕೊಂಡರು. ಭಾರತದ ರಾಜ್ಯಾಂಗ ಸಭೆಗೆ ಹಿರಿಯ ನಾಯಕರಾದ ಕೆ.ಹನುಮಂತಯ್ಯನವರು ಚುನಾಯಿತರಾದರು. ೧೯೫೦ನೇ ಜನವರಿ ೨೬ರಂದು ಹೊಸ ರಾಜ್ಯಾಂಗ ಅಸ್ತಿತ್ವಕ್ಕೆ ಬಂತು. ಅದರ ಆಧಾರದ ಮೇಲೆ ೧೯೫೨ನೇ ಫೆಬ್ರವರಿ ತಿಂಗಳಲ್ಲಿ ಪ್ರಥಮ ಮಹಾಚುನಾವಣೆ ನಡೆಯಿತು. ಅಷ್ಟೊತ್ತಿಗಾಗಲೇ ಕೆ.ಹನುಮಂತಯ್ಯನವರು ಕ್ರಾಂಗ್ರೆಸ್ ಪಕ್ಷದ ಅಧ್ಯಕ್ಷರಾಗಿದ್ದುದರಿಂದ ಉಮೇದುವಾರರನ್ನು ಆಯ್ಕೆಮಾಡುವ ಜವಾಬ್ದಾರಿ ಅವರ ಹೆಗಲಿಗೆ ಬಿದ್ದು, ಕಾಂಗ್ರೆಸ್ ಚನಾವಣೆಯಲ್ಲಿ ಬಹುಮತ ಗಳಿಸಿತು. ಕಾಂಗ್ರೆಸ್ ಶಾಸನ ಸಭೆಯ ನಾಯಕತ್ವಕ್ಕೆ ಕೆ.ಸಿ.ರೆಡ್ಡಿ ಹಾಗೂ ಕೆ.ಹನುಮಂತಯ್ಯನವರ ಮಧ್ಯೆ ಸ್ಪರ್ಧೆ ಇರುವುದೆಂದು ತಿಳಿದು ಅಭಿಪ್ರಾಯ ಸಂಗ್ರಹವಾಗಿ ಹನುಮಂತಯ್ಯನವರಿಗೇ ಬಹುಮತ ಕಂಡುಬಂದದ್ದರಿಂದ ಅವರನ್ನೇ ಸರ್ವಾನುಮತದಿಂದ ನಾಯಕರಾಗಿ ಆರಿಸಿದ್ದಾಯಿತು. ಅವರು ಕೇವಲ ೭ ಮಂದಿಯ ಚಿಕ್ಕದಾದ ಚೊಕ್ಕ ಮಂತ್ರಿ ಮಂಡಲ ರಚಿಸಿದರು. ಅದರಲ್ಲಿ ಶಿವಮೊಗ್ಗದ ಕಡಿದಾಳ್ ಮಂಜಪ್ಪನವರೂ ಮಂತ್ರಿಗಳಾದರು. ಚಂಗಲರಾಯರೆಡ್ಡಿ ಕೇಂದ್ರದ ಮಂತ್ರಿಯಾದರು.

### ೯. ೧೯೫೬ರ ದುರಂತ ವಿಶಾಲ ಕರ್ನಾಟಕ ರಚನೆಗೆ ಪ್ರತಿಭಟನೆ

೧೯೫೬ರ ನವೆಂಬರ್‌ವರೆಗೆ ರಾಜ್ಯದಲ್ಲಿ ಪ್ರಬಲವಾದ ಪರಿಸ್ಥಿತಿಯಲ್ಲಿದ್ದ ಒಕ್ಕಲಿಗರು ತಮ್ಮ ರಾಜಕೀಯ ಮುಂದಾಳತ್ವದಲ್ಲಿದ್ದ ವಿಶಾಲಕರ್ನಾಟಕ ರಚನೆಗೆ ಬಿಟ್ಟುಕೊಡಬೇಕಾಗಿ ಬಂದುದು ಒಂದು ದುರಂತವೇ ಸರಿ. ದೇಶದಲ್ಲಿ ಭಾಷಾವಾರು ಪ್ರಾಂತ ರಚನೆಯ ಕೂಗು ಎಲ್ಲೆಲ್ಲೂ ಬಂದು. ಆಂಧ್ರದಲ್ಲಿ ಪೊಟ್ಟಿ ಶ್ರೀಮುಲುರವರ ಪ್ರಾಣಾರ್ಪಣೆಯಿಂದಾಗಿ ಪ್ರಧಾನಮಂತ್ರಿ ನೆಹರೂರವರು ಮಣಿದು, ಆಂಧ್ರ ಪ್ರಾಂತ ರಚನೆ ಮಾಡಿದರು. ಆಗ ಬಳ್ಳಾರಿ ಜಿಲ್ಲೆ ಮೈಸೂರಿಗೆ ಸೇರಿತು. ಅದೇ ಕಾಲದಲ್ಲಿ ಶ್ರೀ ಫಜಲ್ ಆಲಿಯವರ ಅಧ್ಯಕ್ಷತೆಯಲ್ಲಿ ಪ್ರಾಂತ ಪುನರ್ವಿಂಗಡನಾ ಆಯೋಗ ನೇಮಕವಾಯಿತು. ಆ ಹೊತ್ತಿಗಾಗಲೇ ಮುಖ್ಯಮಂತ್ರಿಯಾಗಿದ್ದ ಕೆ.ಹನುಮಂತಯ್ಯನವರನ್ನು ಆಗಿನ ಬೊಂಬಾಯಿ ಕರ್ನಾಟಕ ಹಾಗೂ ಹೈದರಾಬಾದ್ ಕರ್ನಾಟಕ ಭಾಗಗಳಿಗೆ ಕರೆದುಕೊಂಡು ಹೋಗಿ, ಅವರು ಅಖಂಡ ಕರ್ನಾಟಕದತ್ತ ವಾಲುವಂತೆ ಮಾಡಿದ್ದರು. ೧೯೫೬ನೇ ಅಕ್ಟೋಬರ್ ೧೦ರಂದು ಪ್ರಾಂತಪುನರ್ವಿಂಗಡನಾ ಸಮಿತಿ ವರದಿ ಹೊರಬಂತು. ಆ ದಿನವೇ ಮೈಸೂರಲ್ಲಿ ಆಸೆಂಬ್ಲಿ ಮತ್ತು ಕೌನ್ಸಿಲ್ ಅಧಿವೇಶನ ನಡೆಯುತ್ತಿತ್ತು. ರಾಜ್ಯದ ಮಂತ್ರಿಗಳು ಶಾಸಕರು ಮೈಸೂರಿಗೆ ಬಂದಿದ್ದರು. ಪ್ರಾಂತಪುನರ್ವಿಂಗಡನಾ ಸಮಿತಿ ಮೈಸೂರನ್ನೊಳಗೊಂಡ ಎಲ್ಲಾ ಕನ್ನಡ ಭಾಗಗಳೂ ಸೇರಿದ ವಿಶಾಲ ಕರ್ನಾಟಕ ರಾಜ್ಯ ರಚನೆಯ ಶಿಫಾರಸ್ಸನ್ನು ಮಾಡಿತು. ಅದು ಮುಂಚಿತವಾಗಿಯೇ ಗೊತ್ತಾಯಿತು. ಅದರ ವಿರುದ್ಧ ತಮ್ಮ ಪ್ರತಿಭಟನೆ ತೋರಿಸಬೇಕೆಂದು ನಿರ್ಧಾರವಾಯಿತು. ಮೈಸೂರಿನಲ್ಲಿರುವ ಕನ್ನೇಗೌಡನ ಕೊಪ್ಪಲು, ಕುಂಬಾರಕೊಪ್ಪಲು, ಪಡುವಾರಳ್ಳಿ, ಒಂಟಿಕೊಪ್ಪಲು ಮುಂತಾದ ಪ್ರದೇಶಗಳಿಗೆ ಹೋಗಿ ಆಯಾಯ ಮುಖಂಡರುಗಳನ್ನು ಸಂಧಿಸಿ, ಪರಿಸ್ಥಿತಿಯನ್ನು ವಿವರಿಸಿ ಬೆಳಿಗ್ಗೆ ೧೧ ಗಂಟೆಯೊಳಗೆ ಅಠಾರಾ ಕಛೇರಿ ಮೈದಾನದಲ್ಲಿ ಸೇರಬೇಕೆಂದು ತಿಳಿಸಲಾಗಿತ್ತು. ಅದರಂತೆ ಸಾವಿರಾರು ಮಂದಿ ಸೇರಿದರು. ಒಟ್ಟು ಸುಮಾರು ೧೦,೦೦೦ಕ್ಕಿಂತ ಹೆಚ್ಚು ಮಂದಿ ಸಿದ್ಧರಾದರು. ಇದು ಮುಖ್ಯಮಂತ್ರಿಗಳಿಗೆ ತಿಳಿಯಿತು. ಮಂತ್ರಿಮಂಡಲದ ತುರ್ತು ಸಭೆ ಸೇರಿತ್ತು. ಮುಖಂಡರನ್ನು ಪೋಲೀಸರ ಮುಖಾಂತರ ಹುಡುಕಿಸಿ, ಜಲದರ್ಶಿನಿಯ ಮಂತ್ರಿಮಂಡಲದ ಸಭೆಗೆ ಕರೆದುಕೊಂಡು ಬರುವಂತೆ ಮಾಡಿದರು. ಅಲ್ಲಿ ಹನುಮಂತಯ್ಯನವರು ಮತ್ತಿತರರೂ ಪ್ರತಿಭಟನಾ ಮೆರವಣಿಗೆಯನ್ನು ಕೈಬಿಡಬೇಕೆಂದೂ, ಇಲ್ಲವಾದರೆ ಅನಾಹುತಕ್ಕೆ ಅವಕಾಶವಾಗುವುದೆಂದೂ, ದಸರಾ ಮಹೋತ್ಸವಕ್ಕೆ ತೊಂದರೆಯಾಗುವುದೆಂದೂ ವಾದಿಸಿದರು. ಪ್ರತಿಭಟನೆಗಾಗಿ ಜನರನ್ನು ಕರೆಸಿದ್ದಾಗಿದೆ. ಸಾವಿರಾರು ಮಂದಿ ಬಂದಿದ್ದಾರೆ. ಅವರನ್ನು ಹಿಂದಕ್ಕೆ ಕಳುಹಿಸಲಾಗುವುದಿಲ್ಲ. ಆದರೆ ಯಾವುದೇ ಹಿಂಸಾಕೃತ್ಯಕ್ಕೆ ಅವಕಾಶವಿಲ್ಲದೋಪಾದಿಯಲ್ಲಿ ಪ್ರದರ್ಶನ ನಡೆಸುವುದಾಗಿ ತಿಳಿಸಿ ಅದರಂತೆ ಪ್ರದರ್ಶನ ಶಾಂತರೀತಿಯಲ್ಲಿ ನಡೆಯಿತು. ಎಲ್ಲರಿಗೂ ಸಂತೋಷವಾಯಿತು. ಅನಂತರ ಆ ಚಳುವಳಿಯನ್ನು ಮುಂದುವರಿಸಲಾಯಿತು. ಈ ಪ್ರದರ್ಶನವೆಂದರೆ ಕರ್ನಾಟಕ ಪ್ರಾಂತರಚನೆಗೆ ವಿರೋಧವಾದದ್ದೆಂದಲ್ಲ. ಅದಕ್ಕೆ ನಮ್ಮ ಪೂರ್ಣ ಬೆಂಬಲವಿತ್ತು ಆದರೆ ಹಳೇ ಮೈಸೂರು ರಾಜ್ಯ ಪ್ರತ್ಯೇಕವಾಗಿದ್ದು, ಇತರ ಹೊಸ ಕನ್ನಡ ಭಾಗಗಳು ಒಂದಾಗಿ ಸೇರಿಸಿ ಕರ್ನಾಟಕ ಪ್ರಾಂತರಚನೆ ಮಾಡುವುದು ಒಕ್ಕಲಿಗರ ಯೋಜನೆಯಾಗಿತ್ತು. ಇದಕ್ಕೆ ರಾಜ್ಯದ ಎಲ್ಲೆಲ್ಲೂ ಭಾರಿ ಬೆಂಬಲವೂ ದೊರೆಯಿತು. ಮೈಸೂರು ಮಂತ್ರಿಮಂಡಲದಲ್ಲೂ ಮೂವರು ಸದಸ್ಯರು ಬೆಂಬಲ ನೀಡಿದರು. ಈ ಬಗ್ಗೆ ಒಂದು ಭಾರಿ ಸಮ್ಮೇಳನವನ್ನು ಮಂಡ್ಯದಲ್ಲಿ ನಡೆಸಲು ನಿರ್ಧಾರವಾಯಿತು. ಅದಕ್ಕೆ ಕೆ.ವಿ.ಶಂಕರಗೌಡರ ಅಧ್ಯಕ್ಷತೆಯಲ್ಲಿ

ಸ್ವಾಗತ ಸಮಿತಿ ರಚನೆಯಾಯಿತು. ರಾಜ್ಯದ ಎಲ್ಲಾ ಕಡೆಗಳಿಂದ ಪ್ರತಿನಿಧಿಗಳನ್ನು ಸೇರಿಸಲು ಎಸ್.ಹುಚ್ಚುಮಾಸ್ತಿಗೌಡರು ಪ್ರವಾಸ ಹೊರಟರು.

ಸಂಘದ ಪ್ರತಿನಿಧಿ ಶುಲ್ಕ ಕೇವಲ ಒಂದು ರೂಪಾಯಿ. ಚಿಕ್ಕ ಮಗಳೂರು ಜಿಲ್ಲೆಯ ಕೊಪ್ಪಕ್ಕೆ ಹೋಗಿ ಅಲ್ಲಿ ದೊಡ್ಡ ಕಾಫಿ ಪ್ಲಾಂಟರ್ ಶ್ರೀ ಎಂ.ಎಸ್.ದೇವೇಗೌಡರ ಭೇಟಿಮಾಡಿ ಅವರಿಗೆ ಸಂಘದ ಉದ್ದೇಶವನ್ನು ವಿವರಿಸಲಾಗಿ ಅವರು ಹೇಳಿದ ಮಾತೆಂದರೆ 'ನೀವು ಮೈಸೂರನ್ನು ಪ್ರತ್ಯೇಕವಾಗಿ ಉಳಿಸುವುದಾದರೆ ಅದಕ್ಕೆ ಎಷ್ಟು ಖರ್ಚಾಗುತ್ತದೋ ಅಷ್ಟು ಹಣವನ್ನು ನಾನು ಕೊಡುತ್ತೇನೆ' ಎಂದು ಈ ಮಾತನ್ನು ಕೇಳಿ ತುಂಬಾ ಸಂತೋಷವಾಯಿತು. ಹಣ ಸಿಗುವುದೆಂದಲ್ಲ. ನಮ್ಮ ಕಾರ್ಯಕ್ರಮಕ್ಕೆ ಎಷ್ಟು ಬೆಂಬಲವಿದೆಯೆಂಬುದರಿಂದ ಅಲ್ಲಿಂದ ಮುಂದೆ ಶಿವಮೊಗ್ಗ ಮತ್ತಿತರ ಕಡೆಗೆ ಹೋಗಿ ಬಂದರು. ಮಂಡ್ಯದಲ್ಲಿ ಭಾರಿ ಸಮ್ಮೇಳನ ನಡೆಯಿತು. ೧೧,೦೦೦ ಮಂದಿ ಪ್ರತಿನಿಧಿಗಳು ಹಾಗೂ ಇತರ ಸಾವಿರಾರು ಮಂದಿ ಪ್ರೇಕ್ಷಕರು ಸೇರಿದ್ದರು. ಪಿ.ಎನ್.ಜವರಪ್ಪಗೌಡ ಎ.ಸಿ.ಮಾದೇಗೌಡ, ಬೊಮ್ಮೇಗೌಡ ಆದಿಯಾಗಿ ಮಂಡ್ಯದ ಮುಖಂಡರು ಶ್ರೀ ಕೆ.ವಿ.ಶಂಕರಗೌಡರ ಮುಖಂಡತ್ವದಲ್ಲಿ ಸಮರ್ಪಕ ಏರ್ಪಾಡು ಮಾಡಿದ್ದರು. ಹಾಸನದ ಕೆ.ಲಕ್ಕಪ್ಪನವರು ಅಧ್ಯಕ್ಷತೆ ವಹಿಸಲು ತೀರ್ಮಾನವಾಗಿತ್ತು. ಅವರ ಮೆರವಣಿಗೆ ರಸ್ತೆಯುದ್ದಕ್ಕೂ ಹೊರಟು ಬಂದಿತ್ತು. ಇಡೀ ಮೈಸೂರು ರಸ್ತೆಗಳಲ್ಲಿ ವಿಲೀನ ವಿರೋಧಿ ಬ್ಯಾಡ್ಜ್ ಧರಿಸಿದ್ದ ಪ್ರತಿನಿಧಿಗಳು ಕಾಣಿಸಿಕೊಳ್ಳುತ್ತಿದ್ದರು. ಶ್ರೀಗಳಾದ ವಿ.ವೆಂಕಟಪ್ಪ, ಎಚ್.ಕೆ.ವೀರಣ್ಣಗೌಡ, ಹುಚ್ಚುಮಾಸ್ತಿಗೌಡರೇ ಆದಿಯಾಗಿ ಮುಖಂಡರು ಬಂದಿದ್ದರು. ಸಮ್ಮೇಳನದಲ್ಲಿ ವೀರಣ್ಣಗೌಡರು ಮಂಡಿಸಿದ ವಿಲೀನ ವಿರೋಧಿನಿರ್ಣಯ ಮಂಜೂರಾಯಿತು. ನಿರ್ಣಯದಲ್ಲಿ ಹಳೇ ಕನ್ನಡ ಜಿಲ್ಲೆಗಳು ಸೇರಿಸಿ ಒಂದು ರಾಜ್ಯವನ್ನು ಮೈಸೂರಾಗಿಯೇ ಉಳಿಸಿ, ಕನ್ನಡ ಭಾಗಗಳು ಸೇರಿ ಕರ್ನಾಟಕ ಪ್ರದೇಶದ ನಿರ್ಮಾಣವಾಗಬೇಕೆಂಬುದಾಗಿತ್ತು.

ಆದರೆ ಮುಖ್ಯಮಂತ್ರಿ ಕೆ.ಹನುಮಂತಯ್ಯನವರು ಕರ್ನಾಟಕ ಪ್ರಾಂತರಚನೆ ಆಗಲೇಬೇಕೆಂದು ಪಟ್ಟುಹಿಡಿದರು. ಅವರು ಹಾಗೆ ಹೇಳಿದಾಗ, ಆಗ ಮೈಸೂರು ಪ್ರದೇಶ ಕಾಂಗ್ರೆಸ್ಸಿನ ಅಧ್ಯಕ್ಷರಾಗಿದ್ದ ಎಸ್.ಚನ್ನಯ್ಯನವರೂ ಪ್ರಾಂತರಚನೆಗೆ ಬೆಂಬಲ ನೀಡಿದರು. ಅವರಿಂದಾಗಿ ಅದಕ್ಕೆ ಬೆಂಬಲ ಬಂತು. ಅದಕ್ಕೆ ನಮ್ಮ ನಿರ್ಣಯ ವಿಧಾನ ಸಭೆಯಲ್ಲಿ ಮಂಡಿತವಾದಾಗ ಮುಖ್ಯಮಂತ್ರಿ ಹನುಮಂತಯ್ಯನವರು ತಮ್ಮ ಅಧಿಕಾರವನ್ನೂ ಕಳೆದುಕೊಳ್ಳುವಂತಾಯಿತು. ಸರ್ದಾರ್ ವಲ್ಲಬಾಯ್ ಪಟೇಲರು ವಿಲೀನ ವಿರೋಧಿ ಸಮ್ಮೇಳನದ ಮುಖಂಡರನ್ನು ಬರಮಾಡಿಕೊಂಡು ಒಂದು ಒಪ್ಪಂದಕ್ಕೆ ಬಂದುರು. ಅದರಲ್ಲಿ ಮುಖ್ಯವಾಗಿ ಏಕೀಕೃತವಾದ ಪ್ರಾಂತಕ್ಕೆ ಮೈಸೂರೆಂದೇ ಹೆಸರಿಡುವುದೆಂಬುದು ಮುಖ್ಯವಾದ್ದು. ಕೆ.ಹನುಮಂತಯ್ಯನವರು ಆ ನಿಲುವನ್ನು ತೆಗೆದುಕೊಳ್ಳದೆ ಹೋಗಿದ್ದಿದ್ದರೆ ಖಂಡಿತವಾಗಿಯೂ ಒಂದು ಕರ್ನಾಟಕವಾಗುತ್ತಿರಲಿಲ್ಲ. ಹನುಮಂತಯ್ಯನವರು ಅಧಿಕಾರವನ್ನು ಕಳೆದುಕೊಳ್ಳುತ್ತಿರಲಿಲ್ಲ. ರಾಜ್ಯದ ಒಕ್ಕಲಿಗರ ಪ್ರಾಬಲ್ಯ ಹೋಗಿ ಅವರು ರಾಜಕೀಯದಲ್ಲಿ ಎರಡನೇ ದರ್ಜೆಯವರಾಗುತ್ತಿರಲಿಲ್ಲ.

ಕರ್ನಾಟಕ ಇತಿಹಾಸದಲ್ಲಿ ಎಂದೆಂದೂ ಅಚ್ಚಳಿಯದೆ ಉಚ್ಚರೀತಿಯಲ್ಲಿ ಉಳಿಯತಕ್ಕಂತಹ ಹಾಗೂ ದೇಶವಿದೇಶಗಳಿಂದ ಬಂದವರಿಂದ ಮುಕ್ತಕಂಠದಿಂದ ಹೊಗಳಲ್ಪಡುತ್ತಿರುವ ವಿಧಾನಸೌಧದ ನಿರ್ಮಾಪಕರು ಕೆ.ಹನುಮಂತಯ್ಯನವರೆಂಬುದು ಒಕ್ಕಲಿಗರಿಗೆ ಒಂದು ಹೆಮ್ಮೆಯ ವಿಷಯವಾಗಿದೆ. ಆದರೆ ಅದರಿಂದ ಎಷ್ಟು ಜನ ಸಂತೋಷಪಡುವರೋ ಹೇಳಲಾಗುವುದಿಲ್ಲ. ಅದಕ್ಕಿಂತ ಮಿಗಿಲಾಗಿ ಆಡಳಿತ ತತ್ವದ ಪ್ರತಿಪಾದನೆಗಾಗಿ

ಮಂತ್ರಿಮಂಡಳಿಗೆ ರಾಜಿನಾಮೆಸಲ್ಲಿಸಿದ ಏಕೈಕ ಮಹಿಳೆಯೆಂದರೆ ಶ್ರೀಮತಿ ಯಶೋಧರದಾಸಪ್ಪ. ನಿಜಲಿಂಗಪ್ಪನವರ ಮಂತ್ರಿಮಂಡದಲ್ಲಿ ಸಮಾಜ ಕಲ್ಯಾಣ ಸಚಿವೆಯಾಗಿದ್ದ ಶ್ರೀಮತಿ ಯಶೋಧರದಾಸಪ್ಪ ಅವರು ರಾಷ್ಟ್ರದ ಅಂಗೀಕೃತ ನೀತಿಯಾದ ಪಾನನಿರೋಧವನ್ನು ರದ್ದುಗೊಳಿಸುವ ನಿರ್ಧಾರಕ್ಕೆ ಬಂದಾಗ ಅದನ್ನು ವಿರೋಧಿಸಿ ರಾಜೀನಾಮೆ ಸಲ್ಲಿಸಿ ಹೊರಬಂದರು. ಅದರಂತೆ ಎಂತಹ ಅವಮಾನಕರವಾದರೂ ಸಹಿಸಿಕೊಂಡು ಮಂತ್ರಿಪದವಿ ಹಾಗೂ ಅಧಿಕಾರಗಳಿಗೆ ಜನ ಅಂಟಿಕೊಂಡಿರುವ ಈ ಕಾಲದಲ್ಲಿ ಚುನಾವಣೆಯಲ್ಲಿ ಸ್ಪರ್ಧಿಸಬಾರದೆಂದು ಸ್ಥಾನ ಬಿಟ್ಟುಕೊಟ್ಟ ಮಂತ್ರಿ ಶ್ರೀ ಎ.ಬಿ.ಶೆಟ್ಟರು ರಾಜ್ಯದಲ್ಲೇ ಮೊದಲಿಗರು. ನಂತರ ರಾಜ್ಯದಲ್ಲಿ ಒಕ್ಕಲಿಗರಲ್ಲಿ ಮುಖಂಡರಾಗಿದ್ದಂತಹ ಕಡಿದಾಳ್ ಮಂಜಪ್ಪನವರು ಮುಖ್ಯಮಂತ್ರಿಗಳಾದರು. ಇವರ ಆಡಳಿತಾವಧಿ ಅಲ್ಪದಾಗಿದ್ದರೂ, ಸಹ ಇವರು ಕೈಗೊಂಡ ಸಾಮಾಜಿಕ ಹಾಗೂ ಲೋಕೋಪಯೋಗಿ ಕೆಲಸಗಳು ಚಿರಸ್ಮರಣೆಯವಾಗಿವೆ. ಇವರ ನಂತರ ಎಚ್.ಡಿ.ದೇವೇಗೌಡರು ಈ ರಾಜ್ಯದ ಮುಖ್ಯಮಂತ್ರಿಗಳಾಗಿರುವುದರ ಜೊತೆಗೆ ಈ ಭಾರತ ದೇಶದ ಪ್ರಧಾನಮಂತ್ರಿಗಳಾಗಿ ಆಳ್ವಿಕೆ ಮಾಡಿದ ಮಹಾನ್ ನಾಯಕರಾಗಿದ್ದಾರೆ. ಈ ರಾಷ್ಟ್ರಕ್ಕೆ ಕರ್ನಾಟಕ ನೀಡಿದ ಪ್ರಥಮ ಪ್ರಧಾನಿ ಶ್ರಿ ಎಚ್.ಡಿ.ದೇವೇಗೌಡರು. ಇಂದಿಗೂ ಸಹ ರಾಜ್ಯ ಹಾಗೂ ರಾಷ್ಟ್ರೀಯ ಸಮಸ್ಯೆಗಳಿಗೆ ನಿರಂತರವಾಗಿ ಹೋರಾಡುತ್ತಿದ್ದಾರೆ. ನಂತರ ಕರ್ನಾಟಕ ಕಂಡು ಪಟೇಲ್ ಮುಖ್ಯಮಂತ್ರಿಗಳು ಎಂದು ಹೆಸರು ಪಡೆದಿದ್ದ ಎಸ್.ಎಂ.ಕೃಷ್ಣರವರೂ ಸಹ ಒಕ್ಕಲಿಗರೇ ಇಂದು ಕರ್ನಾಟಕದಲ್ಲಿ ಜಾರಿಯಲ್ಲಿರುವ ಬಿ.ಜೆ.ಪಿ ಹಾಗೂ ಜಾತ್ಯಾತೀತ ಜನತಾದಳ ಸಮ್ಮಿಶ್ರ ಸರ್ಕಾರದ ಮುಖ್ಯಮಂತ್ರಿಗಳಾದ ಶ್ರೀ ಎಚ್.ಡಿ.ಕುಮಾರಸ್ವಾಮಿಯವರೂ ಸಹ ಒಕ್ಕಲಿಗರೆ. ಇವರು ತಮ್ಮ ತಂದೆಯವರಾದ ಎಚ್.ಡಿ.ದೇವೇಗೌಡರ ಮಾರ್ಗದರ್ಶನದಲ್ಲಿ ಕರ್ನಾಟಕದಲ್ಲಿ ಅನೇಕ ಅಭಿವೃದ್ಧಿ ಪರ ಕೆಲಸಗಳನ್ನು ಹಮ್ಮಿಕೊಂಡು ಜನಪ್ರಿಯ ವ್ಯಕ್ತಿಗಳಾಗಲು ಮುಂದಾಗಿದ್ದಾರೆ.

**೧೧. ಪ್ರಮುಖ ಒಕ್ಕಲಿಗ ಮಹನೀಯರ ಸೇವಾನಿಷ್ಠೆ**

ಬೆಂಗಳೂರು ನಗರ ಕಾರ್ಪೊರೇಷನ್‌ನಲ್ಲಿ ಶ್ರೀಗಳಾದ ಆರ್.ಸುಬ್ಬಣ್ಣ, ಆರ್.ಅನಂತರಾಮನ್, ಎಂ.ಕೃಷ್ಣಪ್ಪ, ಪಿ.ಹನುಮಂತಯ್ಯ, ಬಿ.ಇಂದಿರಮ್ಮ ಟಿ.ಕೆ.ತಿಮ್ಮರಾಯಗೌಡ, ಜಿ.ನಾರಾಯಣ, ಜೆ.ಲಿಂಗಯ್ಯ, ಟಿ.ಡಿ.ನಾಗಣ್ಣ, ಎಸ್.ನಾಗರಾಜು ಇವರುಗಳು ಮೇಯರುಗಳಾಗಿ ತಮ್ಮ ಪ್ರಭಾವವನ್ನು ತೋರಿದ್ದಾರೆ.

ಅಂತೆಯೇ ಶ್ರೀಯುತರುಗಳಾದ ಕೆ.ವಿ.ನರಸಪ್ಪ, ಎಸ್.ಶಿವಪ್ಪ ಮತ್ತು ಎಂ.ವಿ.ವೆಂಕಟಪ್ಪ ಎಚ್.ಕೃಷ್ಣ ಇವರುಗಳು ಕರ್ನಾಟಕ ವಿಧಾನ ಪರಿಷತ್ತಿನ ಚೇರ್ಮನ್ನರುಗಳಾಗಿ ಪಾತ್ರವಹಿಸಿದ್ದಾರೆ.

ಹಾಗೆಯೇ ಕೇಂದ್ರ ಲೋಕಸಭೆಯಲ್ಲಿ ಎಂ.ಪಿ.ಗಳಾಗಿ ಶ್ರೀಗಳಾದ ತುಲಸಿ ದಾಸಪ್ಪ, ಕೆ.ಲಕ್ಕಪ್ಪ, ಎನ್.ನಂಜೇಗೌಡ, ಟಿ.ಮಾದಪ್ಪಗೌಡ, ಕೆ.ಎಸ್.ಹೆಗ್ಡೆ, ಕೆ.ಚಿಕ್ಕಲಿಂಗಯ್ಯ, ಎಂ.ಕೆ.ಶಿವಲಿಂಗಪ್ಪ, ಕೆ.ಎಸ್.ಮಲ್ಲೆಗೌಡ, ಎಚ್.ಡಿ.ದೇವೇಗೌಡಇವರುಗಳ ಸೇವೆ ಅತ್ಯಮೋಘವಾಗಿದೆ.

ಅಲ್ಲದೆ ಶ್ರೀಗಳಾದ ಕಡಿದಾಳ್ ಮಂಜಪ್ಪ, ವಿ.ವೆಂಕಟಪ್ಪ, ಕೆ.ಲಕ್ಕಪ್ಪ, ಕೆ.ಪುಟ್ಟಸ್ವಾಮಿ, ಎನ್.ಹುಚ್ಚಮಾಸ್ತಿಗೌಡ, ಕೆ.ವಿ.ಶಂಕರೇಗೌಡ, ಎಚ್.ಕೆ.ವೀರಣ್ಣಗೌಡ, ಎಸ್.ಎಂ.ಕೃಷ್ಣ, ಎಂ.ವಿ.ಕೃಷ್ಣಪ್ಪ, ಮಾಲಿ ಮರಿಯಪ್ಪ, ಕೆ.ಎಚ್.ಪಾಟೀಲ್, ಕೆ.ಕೆ.ಹೆಗ್ಡೆ, ಡಾ.ಕೆ.ನಾಗಪ್ಪ ಆಳ್ವ, ಎಚ್.ಸಿ.ಶ್ರೀಕಂಠಯ್ಯ, ಬೇಗಾನೆ ರಾಮಯ್ಯ, ಜೆ.ಮಾದೇಗೌಡ. ಜಿ.ನಾರಾಯಣಗೌಡ, ಆರ್.ಎಂ.ಪಾಟೀಲ್, ಜಿ.ಹೆಚ್.ಅಶ್ವತರೆಡ್ಡಿ,

ಕೆ.ಗಂಗಾಧರ್, ಎಚ್.ಟಿ.ಕೃಷ್ಣಪ್ಪ, ಎಚ್.ಎನ್.ನಂಜೇಗೌಡ, ಡಿ.ಬಿ.ಚಂದ್ರೇಗೌಡ, ಆರ್.ದಯಾನಂದಸಾಗರ್, ಎನ್.ಚಿಕ್ಕೇಗೌಡ, ಡಿ.ಕೆ.ಶಿವಕುಮಾರ್ ಇವರುಗಳು ಮಂತ್ರಿಗಳಾಗಿ ಸಾಕಷ್ಟು ಕೆಲಸಮಾಡಿದ್ದಾರೆ.

ಹಿಂದೆ ಹಳೆಯ ಮೈಸೂರು ರಾಜ್ಯದ ಎಲ್ಲ ಜಿಲ್ಲೆಗಳಿಂದಲೂ ಸಾವಿರಾರು ಮಂದಿ ಒಕ್ಕಲಿಗ ಬಾಂಧವರು ರಾಜಕೀಯ ಕ್ಷೇತ್ರದಲ್ಲಿ ಶ್ರಮಿಸಿದ್ದಾರೆ. ಮಳವಳ್ಳಿ ವಿರಪ್ಪ, ಜಿ.ಎ.ತಿಮ್ಮಪ್ಪಗೌಡ, ಎಲ್.ಟಿ.ಕಾರ್ಲೆ, ಬಾಗಮನೆ ದೇವೇಗೌಡ, ಎಚ್.ಬಿ.ಬೋರಣ್ಣಗೌಡ, ಕೆ.ಎನ್.ವೀರಪ್ಪಗೌಡ, ಮುಲ್ಕ ಗೋವಿಂದರೆಡ್ಡಿ, ಎಂ.ಗೋವಿಂದರೆಡ್ಡಿ, ಬಿ.ಜಿ.ಲಿಂಗೇಗೌಡ, ಕೆ.ಎಲ್.ಶಿವಲಿಂಗಯ್ಯ, ಕರಡಹಳ್ಳಿ ಕೃಷ್ಣಪ್ಪಗೌಡ, ಎಂ.ಶಂಕರಲಿಗೇಗೌಡ, ಸಿಂಗಾರಿಗೌಡ, ಮರೀಗೌಡ, ಬೈರಾಪಟ್ಟಣದ ಅಂಕುಗೌಡ, ದೇಶಹಳ್ಳಿ ಅಣ್ಣೇಗೌಡ, ಚನ್ನಬೈರೇಗೌಡ, ಹಿಂಡುವಾಳು ಹೊನ್ನಯ್ಯ, ಮಂಡ್ಯದ ಕೆಂಪೇಗೌಡ, ಅರಕೆರೆ ಚುಂಚೇಗೌಡ, ಕೈಲಂಚದ ನರಸಿಂಹಯ್ಯ, ಕೊಳ್ಳೇಗಾಲದ ವೆಂಕಟೇಗೌಡ, ಚಂದಗಾಲ್, ಎಂ.ಮರಿಗೌಡ, ನಂಜನಗೂಡು ಮಹದೇವಯ್ಯ, ಕೆ.ಜಿ.ತಿಮ್ಮೇಗೌಡ, ಮಂಡ್ಯದ ದೇವೇಗೌಡ, ಮಾದಪ್ಪಗೌಡ, ಎಂ.ಹುಚ್ಚೇಗೌಡ, ಶ್ರೀಮತಿ ಬಿ.ಎಲ್.ಸುಬ್ಬಮ್ಮ ಮುಂತಾದವರನ್ನು ಹೆಸರಿಸಬಹುದು.

ಒಕ್ಕಲಿಗರ ಸಂಘ ಬಿಟ್ಟರೆ ಇನ್ನೊಂದು ಆಶಾವಾದಿ ಕ್ಷೇತ್ರ ಶ್ರೀ ಆದಿಚುಂಚನಗಿರಿ ಮಠ. ಶ್ರೀಮಠವೂ ಹಲವಾರು ವರ್ಷಗಳಿಂದ ಕುಂಟುತ್ತಲೇ ಇತ್ತು. ಆದರೆ ಈಗ ಉತ್ಸಾಹಿಗಳೂ, ಯುವಕರೂ, ವಿದ್ಯಾವಂತರೂ, ಸೇವೆಗಾಗಿಯೇ ತಮ್ಮ ಜೀವನವನ್ನು ಮುಡುಪಾಗಿಟ್ಟು, ಹಲವಾರು ಉಪಯುಕ್ತ ಕಾರ್ಯಕ್ರಮಗಳನ್ನು ಕೈಗೊಂಡು, ಭಕ್ತಾದಿಗಳ ಆದರ ಆಶ್ವಾಸಗಳಿಗೆ ಪಾತ್ರರೂ ಆಗಿರುವ ಶ್ರೀ ಶ್ರೀ ಶ್ರೀ ಬಾಲಗಂಗಾಧರನಾಥ ಸ್ವಾಮಿಗಳವರು ಪೀಠಾಧಿಪತ್ಯವನ್ನು ವಹಿಸಿಕೊಂಡ ನಂತರ ಒಂದು ಆಶಾಕಿರಣ ಕಾಣಬರುತ್ತಿದೆ. ಅವರ ದಿವ್ಯ ದೃಷ್ಟಿಯ ಪ್ರಭಾವ ಜನಾಂಗಕ್ಕೆ ಒಂದು ಹೊಸ ಚೈತನ್ಯವನ್ನು ಮೂಡಿಸುವುದೆಂದು ಭಾವಿಸಬಹುದಾಗಿದೆ.

* * * * *

ಅಧ್ಯಾಯ -೫

# ಮಲೆನಾಡಿನ ಒಕ್ಕಲಿಗರು ಹಾಗೂ ಸಂಘಟನಾ ಚರಿತ್ರೆ

೫.೧. ಮಲೆನಾಡು ಕರ್ನಾಟಕದ ನಾಮಧಾರಿ ಒಕ್ಕಲಿಗರು

೫.೨. ಸಂಘ ನಡೆದು ಬಂದ ದಾರಿ

೫.೩. ಅಭಿವೃದ್ಧಿಯ ಹಾದಿಯಲ್ಲಿ

೫.೪. ಸಂಘ ಸಂಸ್ಥಾಪನೆಯಿಂದ ಪುನಶ್ಚೇತನದ ವರೆಗೆ ಸೇವೆ ಸಲ್ಲಿಸಿದ ಮಹಾನೀಯರು

## ೫.೧. ಮಲೆನಾಡು ಕರ್ನಾಟಕದ ನಾಮಧಾರಿ ಒಕ್ಕಲಿಗರು: ಕಿರು ಪರಿಚಯ

ಕರ್ನಾಟಕ ಮತ್ತು ಭಾರತದ ಇತಿಹಾಸ-ಸಂಸ್ಕೃತಿಗಳಲ್ಲಿ ಒಕ್ಕಲಿಗ ಸಮುದಾಯ ಮಹತ್ವದ ಪಾತ್ರವಹಿಸಿದೆ. ರಾಷ್ಟ್ರಕವಿ ಕುವೆಂಪು ಮತ್ತು ರಾಷ್ಟ್ರನಾಯಕರಾದ ಮಾಜಿ ಪ್ರಧಾನ ಮಂತ್ರಿ ಶ್ರೀ ಎಚ್.ಡಿ. ದೇವೇಗೌಡರಂಥ ದಿಗ್ಗಜರು ಈ ಸಮುದಾಯದಿಂದ ಮೂಡಿಬಂದವರು. ಕರ್ನಾಟಕದ ಏಕೀಕರಣಕ್ಕೆ ಮೊದಲು ಒಕ್ಕಲಿಗರೇ ಮೈಸೂರು ರಾಜ್ಯದ ಬಹುಸಂಖ್ಯಾತ ಸಮುದಾಯವಾಗಿದ್ದರು. ವಿವಿಧ ಸಂಸ್ಕೃತಿಗಳ ಆಗರವಾದ ಕರ್ನಾಟಕದಲ್ಲಿ ಒಕ್ಕಲಿಗರದ್ದೂ ಒಂದು ವಿಶಿಷ್ಟ ಸಂಸ್ಕೃತಿ. ಜಾತ್ಯಾಧಾರಿತ ನಮ್ಮ ಸಮಾಜ ವ್ಯವಸ್ಥೆಯಲ್ಲಿ ಸಾವಿರಾರು ಜಾತಿ-ಉಪಜಾತಿಗಳಿದ್ದು, ಒಂದೊಂದು ಜಾತಿಯಲ್ಲಿಯೂ ಅನೇಕ ಉಪಪಂಗಡಗಳಿವೆ. ಇದಕ್ಕೆ ಒಕ್ಕಲಿಗ ಜನಾಂಗವೇನೂ ಅಪವಾದವಲ್ಲ. ಶಿವಮೊಗ್ಗ ಮತ್ತು ಚಿಕ್ಕಮಗಳೂರು ಜಿಲ್ಲೆಗಳ ತೀರ್ಥಹಳ್ಳಿ, ಹೊಸನಗರ, ಶೃಂಗೇರಿ, ಕೊಪ್ಪ ಮತ್ತು ನರಸಿಂಹರಾಜಪುರ ತಾಲ್ಲೂಕುಗಳಲ್ಲಲ್ಲದೆ ಇನ್ನೂ ಕೆಲವು ಸ್ಥಳಗಳಲ್ಲಿ ಒಕ್ಕಲಿಗ ಸಮುದಾಯದ ಒಂದು ಉಪಪಂಗಡವಾದ 'ನಾಮಧಾರಿ ಶ್ರೀ ವೈಷ್ಣವ ಒಕ್ಕಲಿಗ/ಗೌಡರು' ವಾಸವಾಗಿರುವುದು ಕಂಡು ಬರುತ್ತದೆ. ಸುಧೀರ್ಘ ಚಾರಿತ್ರಿಕ ಹಿನ್ನೆಲೆಯಲ್ಲಿ ನಾಮಧಾರಿ ಒಕ್ಕಲಿಗರು ಹೊಂದಿರುವ ಪ್ರಾಚೀನ ಮತ್ತು ಆಧುನಿಕ ಜೀವನಕ್ರಮಗಳೆರಡೂ ವಿಶಿಷ್ಟ ಮತ್ತು ವಿಶಾಲ. ನಿಜಕ್ಕೂ, ಇವರ ಬಗ್ಗೆ ಒಂದು ಆಳವಾದ ಸಂಶೋಧನೆಗೆ ಯೋಗ್ಯವಾದ ಹಲವು ಮಹತ್ವದ ಸಾಂಸ್ಕೃತಿಕ ವಿಷಯಗಳಿವೆ. ಆದ್ದರಿಂದ, ಇವರ ಅಪಾರವಾದ ಸಂಸ್ಕೃತಿ ಎಂಬ ಅಗಾಧ ಅಂಶವನ್ನು ಪೂರ್ತಿಯಾಗಿ ಹಿಡಿದು ತೋರಿಸುವುದು ಅಸಾಧ್ಯ. ಇಷ್ಟಾದರೂ, ಕರ್ನಾಟಕ ಮತ್ತು ಭಾರತದ ಇತಿಹಾಸ-ಸಂಸ್ಕೃತಿಗಳಲ್ಲಿ ಪ್ರಮುಖ ಪಾತ್ರ ವಹಿಸಿರುವ ನಾಮಧಾರಿ ಒಕ್ಕಲಿಗರ ಜೀವನದ ಕೆಲವು ಪ್ರಮುಖ ಹೆಜ್ಜೆ ಗುರುತುಗಳನ್ನು ಮಾತ್ರ ಗುರುತಿಸುವ ಒಂದು ಕಿರು ಪ್ರಯತ್ನ ಇಲ್ಲಿದೆ.

ಸಾವಿರಾರು ವರ್ಷಗಳ ಹಿಂದೆ ಅಲೆಮಾರಿ ಬದುಕನ್ನು ಬಿಟ್ಟು ಒಂದು ನಿರ್ದಿಷ್ಟ ಸ್ಥಳದಲ್ಲಿ ಮನುಷ್ಯ ವಾಸಮಾಡಿ ವ್ಯವಸಾಯವನ್ನು ಆರಂಭಿಸಿದಾಗ ಎಲ್ಲರೂ 'ಒಕ್ಕಲಿಗ'ರೇ ಆಗಿದ್ದರು. ಆದರೆ, ನಾಗರಿಕತೆ ಬೆಳೆದಂತೆ, ಬದುಕು ಸಂಕೀರ್ಣವಾದಂತೆ ವಿವಿಧ ವೃತ್ತಿಗಳು ಹುಟ್ಟಿಕೊಂಡಿರಬೇಕು. 'ಒಕ್ಕಲು' ಶಬ್ದಕ್ಕೆ ಒಕ್ಕುವಿಕೆ, ಮನೆ, ಕುಲ, ಬೇಸಾಯಗಾರ, ಗುತ್ತಿಗೆದಾರ ಎಂಬ ಅರ್ಥಗಳಿವೆ. ''ಕಾಳನ್ನು ಬೇರ್ಪಡಿಸುವ ಕೃಷಿ ಕೆಲಸಕ್ಕೆ ಒಕ್ಕುಲು

ಎನ್ನಲಾಗುವುದು". 'ಒಕ್ಕಲಿಕ್ಕು' ಎಂದರೆ, ಕಡಿ, ಕತ್ತರಿಸು, ಕುಟ್ಟು, ಕುಟ್ಟಿತುಂಡರಿಸಿ, ಉಲಿಯಲಿಕ್ಕೂ, ಬೆಳೆಯಲಿಕ್ಕೂ ಇಂಬನ್ನು ಮಾಡಿಕೊಂಡ ಸೂಚನೆಯು ಕುರಿತು ಅಥವಾ ಒಕ್ಕಲು ಎಂಬ ಮಾತಿನಲ್ಲಿ ದೊರೆಯುತ್ತದೆ.[೧] "ವೃತ್ತಿ ಸೂಚಕವಾದ ಒಕ್ಕಲಿಗ ಶಬ್ದವು ಯಾವಾಗ ಜಾತಿ ಸೂಚಕವಾಯಿತೆಂಬುದಕ್ಕೆ ಸ್ಪಷ್ಟ ಆಧಾರಗಳು ದೊರೆಯುವುದಿಲ್ಲ"[೨].

ಕಾಲಾಂತರದಲ್ಲಿ ಜಾತಿಯಿಂದ ಒಕ್ಕಲಾದವರಿಗೆ 'ಗೌಡ' ಎಂಬ ಉಪಾಧಿ ಸೇರಿಕೊಂಡಿತು. ಇಂದು 'ಒಕ್ಕಲಿಗ', 'ಗೌಡ' ಎಂಬ ಎರಡೂ ಶಬ್ದಗಳು ಸಮಾನಾಂತರ ಶಬ್ದಗಳಾಗಿ ಜಾತಿ ಸೂಚಕವಾಗಿ ಚಾಲ್ತಿಯಲ್ಲಿವೆ. 'ಗೌಡ' ಶಬ್ದದ ನಿಷ್ಪತ್ತಿಯನ್ನು ಗ್ರಾಮಮುಖಂಡ ಎಂಬ ಅರ್ಥದಲ್ಲಿ ಗಾಮುಂಡ > ಗಾವುಂಡ > ಗೌಡ ಎಂದು ಕಂಡುಕೊಳ್ಳಲಾಗಿದೆ. 'ಗೋವಳ ಎಂದರೆ ಪಶುಪಾಲಕ, ಗೋವಳ > ಗೌಳ > ಗೌಡ' ಎಂದು ಆಗಿರಬಹುದೆಂದು ಶಂ.ಭಾ. ಜೋಷಿಯವರು ಅಭಿಪ್ರಾಯಪಟ್ಟಿದ್ದಾರೆ. ಕೌಟಿಲ್ಯನ ಅರ್ಥಶಾಸ್ತ್ರದಲ್ಲಿ ಉಕ್ತವಾಗಿರುವ 'ಗ್ರಾಮಣಿ' ಎಂಬುದು ಗೌಡ ಎಂಬುದಕ್ಕೆ ಸಂವಾದಿಯಾಗಿರಬೇಕೆಂದು ವಿದ್ವಾಂಸರು ಅಭಿಪ್ರಾಯಪಡುತ್ತಾರೆ. "ಪ್ರಾಚೀನ ಕನ್ನಡ ಶಾಸನಗಳಲ್ಲಿ ಗೌಡ ಎಂಬುದು ಪದವಿ ಸೂಚಕವಾಗಿ ಪ್ರಯೋಗವಾಗಿದೆ. ಆದ್ದರಿಂದ 'ಗೌಡ' ಎಂಬುದು ಪದವಿ ಸೂಚಕವಾಗಿ ಬಳಕೆಯಲ್ಲಿ ಇದ್ದುದನ್ನು ಧ್ವನಿಸುತ್ತದೆಯೆ ಹೊರತು ಜನಾಂಗವಾಚಿಯಾಗಿಲ್ಲ. ಇದರಿಂದಾಗಿ ಹಲವು ಒಕ್ಕಲಿಗೇತರ ಜನಾಂಗಗಳಿಗೂ 'ಗೌಡ' ಎಂಬ ಉಪಾಧಿ ಸೇರುವಂತಾಯಿತು. ಕಾಡುಗೊಲ್ಲರು, ತಿಗುಳರು, ಉಪ್ಪಾರರು, ಹಾಲಕ್ಕಿಗಳು, ಕುರುಬರು, ಬಣಜಿಗರು, ಈಡಿಗರು ಮುಂತಾದ ಜಾತಿಗೆ ಸೇರಿದ ವ್ಯಕ್ತಿಗಳಿಗೂ ಹೆಸರಿನ ಮುಂದೆ 'ಗೌಡ' ಶಬ್ದ ತಗುಲಿರುವುದು ಅವರು ಗೌಡ ಎಂಬ ಪಣಕಟ್ಟೆಗೆ ಸೇರಿದ ಕಾರಣವಾಗಿ". ಕೆಲವೊಮ್ಮೆ ಹಳ್ಳಿಯಲ್ಲಿ 'ಗೌಡಿಕೆ' ಮಾಡುತ್ತಿದ್ದ ಬ್ರಾಹ್ಮಣರ ಮನೆಯನ್ನೂ 'ಗೌಡರ ಮನೆ' ಎಂದು ಕರೆದಿರುವುದನ್ನು ಕಾಣಬಹುದಾಗಿದೆ.

"ಕ್ರಿ.ಶ. ೧೮೭೧ರ ಜನಗಣತಿಯವರೆಗೆ 'ಒಕ್ಕಲಿಗ' ಎಂಬ ಪದ ರೈತರು, ಕೃಷಿಕರು, ಎನ್ನುವ ಅರ್ಥದಲ್ಲಿ ಬಳಸಲ್ಪಡುತ್ತಿತ್ತು. ೧೯೨೦ರ ಹೊತ್ತಿಗೆ ಈ ಗುಂಪು 'ಕಾಸ್ಟ್' ಆಯಿತು"[೩] ವ್ಯವಸಾಯ ಮತ್ತು ಪಶುಸಂಗೋಪನೆಯನ್ನು ಮುಖ್ಯ ಕಸುಬಾಗಿ ಹೊಂದಿ, ಅನ್ನದಾತರಾಗಿರುವ 'ಒಕ್ಕಲಿಗರು' ಅಥವಾ 'ಗೌಡರು' ಇಂದು ಒಂದು ನಿರ್ದಿಷ್ಟ ಜಾತಿಯವರಾಗಿದ್ದಾರೆ. 'ಒಕ್ಕಲಿಗ' ಎಂದರೆ ಭೂಮಿಯನ್ನು ಉಳುವವನೆಂದೂ, 'ಗೌಡ' ಎಂದರೆ ಯಜಮಾನ ಎಂದೂ ಥರ್ಸ್ಟನ್ ಅರ್ಥೈಸಿರುವುದು[೪] ಈಗಿನ ಸಂದರ್ಭಕ್ಕೆ ಸರಿಯಾಗುವುದಿಲ್ಲ.

**ಒಕ್ಕಲಿಗರಲ್ಲಿ ವಿವಿಧ ಗುಂಪುಗಳು**

ಮೈಸೂರು ಗೆಜೆಟೀರನಲ್ಲಿ ಬಿ.ಎಲ್. ರೈಸ್ ಅವರು 'ಒಕ್ಕಲಿಗ ಜನಾಂಗ'ದಲ್ಲಿ ಒಟ್ಟು ೫೪ ಉಪಪಂಗಡಗಳನ್ನು ಗುರುತಿಸಿದ್ದಾರೆ. ಕರ್ನಾಟಕದ ಒಕ್ಕಲಿಗರನ್ನು ಮುಖ್ಯವಾಗಿ ಮೂರು ಗುಂಪಾಗಿ ವಿಂಗಡಿಸಬಹುದು. ೧. ಮಲೆನಾಡು ಒಕ್ಕಲಿಗರು. ೨. ಬಯಲು ಸೀಮೆ ಒಕ್ಕಲಿಗರು ಮತ್ತು ೩. ಕರಾವಳಿ ಒಕ್ಕಲಿಗರು. ಈ ಒಂದೊಂದು ಗುಂಪಿಗೂ ಭೌಗೋಳಿಕ, ಸಾಮಾಜಿಕ ಕಾರಣಗಳ ಹಿನ್ನೆಲೆ ಇದೆ. ಆಹಾರಾಭ್ಯಾಸ, ಆಚಾರ, ನಂಬಿಕೆ, ಸಂಪ್ರದಾಯ ಮತ್ತು ಜೀವನ ರೀತಿಯಲ್ಲಿ ಭಿನ್ನತೆಯನ್ನು ಗುರುತಿಸಬಹುದು.

"ಮೈಸೂರು, ಹಾಸನ, ಮಂಡ್ಯ ಜಿಲ್ಲೆಗಳಲ್ಲಿರುವ ಒಕ್ಕಲಿಗರಿಗೆ 'ಗಂಗಡಿಕಾರ'ರೆಂದೂ, ಶಿವಮೊಗ್ಗ, ಚಿಕ್ಕಮಗಳೂರು, ಕೊಡಗು ಜಿಲ್ಲೆಗಳ ಒಕ್ಕಲಿಗರಿಗೆ 'ನಾಮಧಾರಿ'ಗಳೆಂದೂ, ಕೋಲಾರ, ಬೆಂಗಳೂರು ಜಿಲ್ಲೆಗಳ ಒಕ್ಕಲಿಗರಿಗೆ 'ಮೊರಸು' ಒಕ್ಕಲಿಗರೆಂದೂ, ಚಿತ್ರದುರ್ಗ, ತುಮಕೂರು ಜಿಲ್ಲೆಗಳ ಒಕ್ಕಲಿಗರಿಗೆ 'ಕುಂಚಿಟಿಗ' ರೆಂದೂ ಮತ್ತು ಕಾರವಾರ ಜಿಲ್ಲೆಯ ಒಕ್ಕಲಿಗರಿಗೆ 'ಹಾಲಕ್ಕಿ' ಒಕ್ಕಲಿಗ ಅಥವಾ 'ಗೌಡ'ರೆಂದೂ ಕರೆಯುತ್ತಾರೆ". ಇಷ್ಟಲ್ಲದೆ ಚಿಕ್ಕಮಗಳೂರು ಜಿಲ್ಲೆಯ ಕಡೂರು ತಾಲ್ಲೂಕಿನಲ್ಲಿ 'ಸರ್ಪ ಒಕ್ಕಲಿಗರು' ಎಂಬ ಮತ್ತೊಂದು ಗುಂಪು ಕಂಡು ಬರುತ್ತದೆ. 'ತುಳುಗೌಡರು' ಮತ್ತು 'ರೆಡ್ಡಿ ಒಕ್ಕಲಿಗರು' ಎಂಬ ಇನ್ನೆರಡು ಗುಂಪುಗಳನ್ನೂ ಒಕ್ಕಲಿಗ ಸಮುದಾಯಕ್ಕೆ ಸೇರಿಸಬಹುದು.

ಮಲೆನಾಡ ನಾಮಧಾರಿಗಳು, ಒಕ್ಕಲಿಗ ಜನಾಂಗದ ಅತಿದೊಡ್ಡ ಪಂಗಡಗಳಲ್ಲಿ ಎರಡನೆಯದು. ನಾಮಧಾರಿಗಳು ಶಿವಮೊಗ್ಗ ಜಿಲ್ಲೆಯ ಮಲೆನಾಡು ತಾಲ್ಲೂಕುಗಳಲ್ಲಿ, ಚಿಕ್ಕಮಗಳೂರು ಜಿಲ್ಲೆಯ ಕೊಪ್ಪ, ನರಸಿಂಹರಾಜಪುರ, ಶೃಂಗೇರಿ, ಮೂಡಿಗೆರೆ ತಾಲ್ಲೂಕುಗಳಲ್ಲಿ, ದಕ್ಷಿಣಕನ್ನಡ ಜಿಲ್ಲೆಯ ಪುತ್ತೂರು, ಸುಳ್ಯ, ಬೆಳ್ತಂಗಡಿ, ತಾಲ್ಲೂಕುಗಳಲ್ಲಿ, ಬಯಲು ಸೀಮೆಯ ಕಡೂರು, ಬೇಲೂರು, ನಾಗಮಂಗಲ, ಕುಣಿಗಲ್, ಪಿರಿಯಾ ಪಟ್ಟಣ, ಹುಣಸೂರು, ಕೆ.ಆರ್. ನಗರ, ಹೆಗ್ಗಡದೇವನ ಕೋಟೆ ಮತ್ತು ಕೊಡಗು ಜಿಲ್ಲೆಯ ಕೆಲವೆಡೆಗಳಲ್ಲಿ ಮತ್ತು ಕೇರಳದ ವೈನಾಡಿನಲ್ಲಿ ಕಂಡು ಬರುತ್ತಾರೆ.

**ಮಲೆನಾಡಿನ ನಾಮಧಾರಿ ಒಕ್ಕಲಿಗರು**

ಪಶ್ಚಿಮ ಘಟ್ಟದ ಗಿರಿಪಂಕ್ತಿಗಳಲ್ಲಿ ಬೆಳೆದಿರುವ ಅರಣ್ಯ ಪ್ರದೇಶದಲ್ಲಿ ಮಳೆ ವಿಪರೀತ ಸುರಿಯುತ್ತದೆ. ಸಾಮಾನ್ಯವಾಗಿ ವರ್ಷವೆಲ್ಲಾ ತಂಪು ಹವಾಮಾನವಿದ್ದು ಅಪ್ಯಾಯಮಾನವಾಗಿರುತ್ತದೆ. ಕೆಂಪು ಮಣ್ಣು, ಮರಳುಮಿಶ್ರಿತ ಮಣ್ಣು, ಲೇಟರೇಟ್ (ಜಂಬಿಟ್ಟಿಗೆ) ಹೀಗೆ ವಿವಿಧ ಮಣ್ಣುಗಳಿದ್ದು, ಅನಾದಿಕಾಲದಿಂದಲೂ ಜನ ಇಲ್ಲಿ ವಾಸವಾಗಿದ್ದಾರೆ. ಇಲ್ಲಿ ವಾಸವಾಗಿರುವ ನಾಮಧಾರಿ ಒಕ್ಕಲಿಗರು ಅದೇ ಮಣ್ಣಿನ ಮಕ್ಕಳು. ಕ್ರಿ.ಶ. ೮ ರಿಂದ ೧೬ನೇ ಶತಮಾನದವರೆಗೆ ಹೊಂಬುಜ ಹುಂಚ ದಲ್ಲಿ ಆಡಳಿತ ಮಾಡಿದ ಸಂತಾರರು ಜೈನರಾಗಿದ್ದು. ತಮ್ಮ ಮೂಲಸ್ಥಾನ ಉತ್ತರದ ಮಧುರೆಯೆಂದು ತಮ್ಮ ಶಾಸನಗಳಲ್ಲಿ ಹೇಳಿಕೊಂಡಿದ್ದಾರೆ. ಇವರಿಗೆ ಮೊದಲೇ ಗಂಗವಾಡಿಯಲ್ಲಿ ಆಡಳಿತವನ್ನು ಪ್ರಾರಂಭಿಸಿದ್ದ ತಲಕಾಡಿನ ಗಂಗರೂ ಜೈನಮತೀಯರಾಗಿದ್ದರು. ಆದರೆ ಮಲೆನಾಡು ಪ್ರಾಂತ್ಯದಲ್ಲಿ ಹೊಂಬು ಜನ ಸಂತಾರರ ಕಾಲದಲ್ಲಿ ಇಲ್ಲಿನ ಮೂಲನಿವಾಸಿಗಳನ್ನು ಜೈನಧರ್ಮಕ್ಕೆ ಸೇರಿಸಿಕೊಂಡಿರಬಹುದೆ, ಈ ಅಂಶ ಐತಿಹಾಸಿಕ ಸಂಶೋಧನೆಗಳಿಂದ ದೃಢಪಡಬೇಕಾಗಿದೆ. ೧೯೨೫ರಲ್ಲಿ ಪ್ರಕಟವಾಗಿರುವ ಕಿರು ಹೊತ್ತಿಗೆ 'The Story of the Namadaris' ನ ಲೇಖಕ ಪ್ರೊಟೆಸ್ಟಂಟ್ ಕ್ರಿಶ್ಚಿಯನ್ ಮಿಷನರಿಯಾಗಿದ್ದ ನೈಟಿಂಗೇಲ್, ನಾಮಧಾರಿ ಒಕ್ಕಲಿಗರನ್ನು ಕುರಿತು ಹೀಗೆ ಬರೆಯುತ್ತಾನೆ.

"One matter of great interest, from a missionary point of view, is the fact that this community has already been coverted twice".

**ಶ್ರೀ ರಾಮಾನುಜರ ಆಗಮನ ಮತ್ತು ಜೈನರ ಮತಾಂತರ**

ದ್ವಾರ ಸಮುದ್ರದಲ್ಲಿ ಜೈನನಾದ ಹೊಯ್ಸಳರಾಜ ಬಿಟ್ಟಿದೇವ ಆಡಳಿತ ಮಾಡುತ್ತಿದ್ದಾಗ ಅವನ ಸಮಕಾಲೀನ ತಮಿಳುನಾಡಿನ ಚೋಳರಾಜ ಒಂದನೇ ಕುಲೋತ್ತುಂಗ (ಶೈವಮತಾವಲಂಬಿ) ತನ್ನ 'ಮತಾಂಧತೆ'ಯಲ್ಲೆ ವೈಷ್ಣವ

ಧರ್ಮ ಪ್ರಚಾರಕರಾಗಿದ್ದ ರಾಮಾನುಜಾಚಾರ್ಯರನ್ನು ಶಿಕ್ಷಿಸುವ ಮಟ್ಟಕ್ಕೆ ಹೋದಾಗ ಅವರು ಭೀತಿಗೊಂಡು ಚೋಳರಾಜ್ಯವನ್ನು ತೊರೆದು ಹೊಯ್ಸಳರಾಜ್ಯಕ್ಕೆ ಬಂದು ಆಶ್ರಯ ಪಡೆದರು. ಈ ಆಶ್ರಯಕ್ಕೆ ಕೇವಲ ಧಾರ್ಮಿಕ ಕಾರಣ ಮಾತ್ರವಿರದೆ ಅದಕ್ಕೊಂದು ರಾಜಕೀಯ ಆಯಾಮವೂ ಇತ್ತು ಎನಿಸುತ್ತದೆ. ಕಾರಣ, ರಾಜಕೀಯದಲ್ಲಿ ಹೊಯ್ಸಳರು ಮತ್ತು ಚೋಳರು ಶತ್ರುಗಳಾಗಿದ್ದರು. ಚೋಳ ಶತ್ರುರಾಜನ ಉಪಟಳಕ್ಕೆ ಒಳಗಾದ ರಾಮಾನುಜರಿಗೆ ಜೈನನಾಗಿದ್ದ ಬಿಟ್ಟಿಗದೇವಾ ತುಂಬು ಹೃದಯದ ಸ್ವಾಗತ ನೀಡಿದ. ರಾಮಾನುಜರ ಪ್ರಭಾವಕ್ಕೆ ಒಳಗಾದ. ರಾಮಾನುಜರ ತೃಪ್ತಿಗಾಗಿ ಹಾಗೂ ಶತ್ರುವಿನ ಅಹಂಕಾರ ಮುರಿಯಲು ರಾಜ ಬಿಟ್ಟಿಗನೇ ಶ್ರೀ ವೈಷ್ಣವ ಧರ್ಮದ ಪ್ರಚಾರಕ್ಕೆ ಮುಂದಾದ. ತನ್ನ ರಾಜ್ಯದಲ್ಲಿ ಶ್ರೀ ವೈಷ್ಣವ ಧರ್ಮವನ್ನು ವರ್ಧಿಸಿದ್ದರಿಂದ 'ವಿಷ್ಣುವರ್ಧನ' ಎಂಬ ಹೆಸರನ್ನು ಪಡೆದನೆಂದು ಹೇಳಿದೆಯಾದರೂ, ಪ್ರಾಯಶಃ ಅದು ಅವನ ಬಿರುದಾಗಿ ಬಂದಿರಬಹುದು.

ಶ್ರೀ ವೈಷ್ಣವ ಧರ್ಮ ಪ್ರಚಾರದ ಸಂದರ್ಭದಲ್ಲಿ ಅನೇಕ ಜೈನರು ತಮ್ಮ ಮತವನ್ನು ಬದಲಿಸಿ ವೈಷ್ಣವರಾದರು. ವೈಷ್ಣವಧರ್ಮದ ಸಂಕೇತವಾಗಿ ನಾಮಧಾರಿ ಗಳಾದರು. ಒಕ್ಕಲು ವೃತ್ತಿಯಲ್ಲಿ ತೊಡಗಿದವರಾದ್ದರಿಂದ 'ನಾಮಧಾರಿ ಒಕ್ಕಲಿಗ'ರಾದರು. ಶ್ರೀ ಕೆ.ಜಿ. ನಾಗರಾಜಪ್ಪನವರು ಅಭಿಪ್ರಾಯ ಪಡುವಂತೆ 'ಇವರು ಯಾವುದೋ ಕಾಲದಲ್ಲಿ ಜೈನ ಧರ್ಮದ ಪ್ರಾಬಲ್ಯವಿರುವಾಗ ಜೈನಧರ್ಮಕ್ಕೆ ಮತಾಂತರವಾದವರು. ರಾಮಾನುಜರು ಕರ್ನಾಟಕಕ್ಕೆ ಬಂದು ಜೈನರನ್ನು ವೈಷ್ಣವರನ್ನಾಗಿ ಪರಿವರ್ತನೆ ಮಾಡಿದಾಗ, ಈ ಜೈನ ಒಕ್ಕಲಿಗರನ್ನು ವೈಷ್ಣವರನ್ನಾಗಿಸಿದ ನಂತರ 'ನಾಮಧಾರಿ ಒಕ್ಕಲಿಗರು' ಎಂದರು ಹೆಸರು ಬಂದಿತು. ಅದೂ ಅಲ್ಲದೆ ವ್ಯವಸಾಯವನ್ನೇ ಮುಖ್ಯ ಕಸುಬಾಗಿ ಹೊಂದಿರುವ ಜೈನ ಒಕ್ಕಲಿಗರಿಗೆ, ಉಳುವಾಗ ಹಿಂಸೆಗೆ ಅವಕಾಶವಿರುವುದರಿಂದ ಜೈನರಲ್ಲಿ ಅವರ ಬಗ್ಗೆ ಅಂಥ ಗೌರವ ಇರುವುದಿಲ್ಲ. ಜೈನರಲ್ಲಿಯೇ ಕೆಳವರ್ಗವಾಗಿ ಉಳಿಯುವ ಬದಲು ವೈಷ್ಣವರಾಗಿ ಪ್ರತ್ಯೇಕವಾದ ನಾಮಧಾರಿ ಒಕ್ಕಲಿಗ ಬಣವಾದರು. ನಾಮಧಾರಿ ಒಕ್ಕಲಿಗರಾದ ಅನಂತರವೂ ಕೆಲವು ಜೈನ ಸಂಪ್ರದಾಯಗಳು ಅವರಲ್ಲಿ ಮುಂದುವರೆದಿವೆ. ಜೈನೆಡೆ ಮುಂತಾದ ಆಚರಣೆಗಳು ನಾಮಧಾರಿ ಒಕ್ಕಲಿಗರಲ್ಲಿ ಜೈನಮತದ ಅವಶೇಷಗಳಾಗಿ ಉಳಿದುಕೊಂಡು ಬಂದಿವೆ.

ಶ್ರೀ ವೈಷ್ಣವ ಧರ್ಮಕ್ಕೆ ಜೈನರ ಮತಾಂತರವನ್ನು ಕುರಿತಂತೆ ೧೮ನೇ ಶತಮಾನದ ಉತ್ತರಾರ್ಧದಲ್ಲಿ ಮತ್ತು ೧೯ನೇ ಶತಮಾನದ ಪೂರ್ವಾಧದಲ್ಲಿ ಬದುಕಿದ ಜೈನಧರ್ಮೀಯ ದೇವಚಂದ್ರ ಹೀಗೆ ವಿವರಿಸುತ್ತಾನೆ. 'ಆನೆಯಟ್ಟೆ ಬಂದರಂ ಶಿವಾಲಯಮಂ ಪುಗಲಾಗದೆ'ಎಂದು ನಂಬಿದ್ದ ಶ್ರೀ ರಾಮಾನುಜರು ದ್ರಾವಿಡ ದೇಶದಲ್ಲಿ ಸ್ಯಾದಾಯವಾದಿಗಳಿಂದ ಸೋತು ಬಿರುದುಗಳನ್ನು ಕಳೆದುಕೊಂಡು ಚಿಂತಾಕ್ರಾಂತರಾಗಿದ್ದರು. ಅವರ ಇಬ್ಬರು (ಹೆಣ್ಣು) ಮಕ್ಕಳಾದ ಬಂಗಾರೆ-ಸಿಂಗಾರೆಯರು ಭರತಶಾಸ್ತ್ರ, ಸಂಗೀತ, ಸಾಹಿತ್ಯ, ವಿದ್ಯಾವಿಶಾರದೆಯರಾಗಿದ್ದು ತಮ್ಮ ತಂದೆಯನ್ನು 'ಸಂತೈಸಿ' ಜೈನರೆಲ್ಲರಂ ಶ್ರೀವೈಷ್ಣವರಂ ಮಾಳ್ಪ ಕಜ್ಜಮನೆತ್ತಿಕೊಂಡು ಕುಂಟಸಿಂಗರಿಯಂ ಕೂಡಿಕೊಂಡು ಹೊಯ್ಸಳದೇಶದ ಬಲ್ಲಾಳನ ಬೀಡಂ ಪೊಕ್ಕು' ಎಂಬ ವಿವರಣೆ ಬರುತ್ತದೆ. ನಂತರ ರಾಮಾನುಜಾಚಾರ್ಯರು ಹೊಯ್ಸಳ ದೇಶವನ್ನು ಪ್ರವೇಶಿಸಿ ಹೊಯ್ಸಳರಾಜನು ಪರಮ ಶಿಷ್ಯನಾಗಿ ''ಬಲ್ಲಾಳರಾಯ ವಿಷ್ಣುವರ್ಧನ'' ಎಂದು ಹೆಸರಾಯಿತೆಂದು ದೇವಚಂದ್ರ ಹೇಳುತ್ತಾನೆ. ಮುಂದುವರೆದ ಭಾಗದಲ್ಲಿ ದೇವಚಂದ್ರ ಹೇಳುತ್ತಾನೆ ಶೂದ್ರರಲ್ಲಿ ದಾಸಗೌಡ ಬಣಜಿಗ ತಿರುಕುಲದಾಸರಾದಿಯನೇಕ ಭೇದದಿಂದೊಪ್ಪಿದರು. ಚಾತಾಳಾಭಿದಾನದಿಂ ೪೬ ಭೇದವಾಯಿತು. ನಂತರ ಬಲಾತ್ಕಾರದಿಂದ ಜೈನ ಸ್ಮಾರ್ತಶೈವರ ಚಾತುರ್ವರ್ಣಕ್ಕಂ

ನಾಮನಾಮುವನಿಕ್ಕಿಸುವಲ್ಲಿ ದೇವಿಹಳ್ಳಿ, ಕಡದರವಳ್ಳಿ, ಅಡುಗೂರು, ಸಾವಂತನವಳ್ಳಿ, ಹೊಂಗೆರೆಯೆಂಬ ಪಂಚಗ್ರಾಮದ ಶ್ರಾವಕರು ಬಂಗಾರಮ್ಮ ಸಿಂಗಾರಮ್ಮಗಳಿಗೆ ಅತಿಶಯವಾದ ವಸ್ತ್ರಾಭರಣಾದಿಗಳನ್ನು ಕೊಟ್ಟು ಬಡಳ ಬಗ್ಗೆ ಹೇಳಿಕೊಂಡು ವಿಷ್ಣುವರ್ಧನಂ ಗರಿಯಂ ಮಾಡಿಕೊಂಡು ನಮ್ಮ ಮನೆ ಪ್ರಸ್ತಪ್ರಯೋಜನದೊಳು ರಾಮಾನುಜರ ಹೆಸರು ನಿಮ್ಮ ಹೆಸರು ಹೇಳಿ ಪೂಜೆಯಂ ಮಾಡುತ್ತಿದ್ದೇವೆ ಎಂದು ಬಿಡಿಸಿಕೊಂಡರು. ಆದರಿಂದವರು ನಾಮವಿಕ್ಕದೆ ಗೌಡರೆಂದು ಹೆಸರಾಯ್ತು ದೇವಚಂದ್ರ ಜೈನನಾದುದರಿಂದ ಅವನ ವಿವರಣೆಯಲ್ಲಿ ಉತ್ಪ್ರೇಕ್ಷೆ ಇರಲಿಕ್ಕೆ ಸಾಕು. ಇಷ್ಟಾದರೂ ಅವನ ವಿವರಣೆಗಳು ಆಸಕ್ತಿ ಪೂರ್ಣವಾಗಿವೆ.

ಒಕ್ಕಲಿಗರಲ್ಲಿ ನಾಮಧಾರಿ ಲಿಂಗಾಯಿತರು ಎಂಬ ಪಂಗಡವೊಂದಿದೆ. ಅವರ ಪೂರ್ವೇತಿಹಾಸ ಅಸ್ಪಷ್ಟವಾಗಿದೆ. ಅವರು ಇತರೆ ಒಕ್ಕಲಿಗರಿಗಿಂತ ಭಿನ್ನವಾದ ಆಚಾರವನ್ನು ಪಾಲಿಸುತ್ತಾರೆ. ಬಯಲು ನಾಡಿನ ನಾಮಧಾರಿ ಒಕ್ಕಲಿಗರು ಮುಖ್ಯವಾಗಿ ಮಾಂಸ ತಿನ್ನುವುದಿಲ್ಲ. ಆದರೆ ಮಲೆನಾಡಿನ ಒಕ್ಕಲಿಗರಿಗೆ ಮಾಂಸ ನಿಷಿದ್ಧವಲ್ಲ. ನಾಮಧಾರಿ ಎಂಬುದು ವಿಷ್ಣುಪಂಥವನ್ನು ಸೂಚಿಸುತ್ತದಾದರೂ ಅವರಲ್ಲಿ ಶಿವಪಂಥದವರೂ ಇದ್ದಾರೆ. ನಾಮಧಾರಿ ಒಕ್ಕಲಿಗರಲ್ಲಿಯೇ ವಿಷ್ಣುಭಕ್ತ ಮತ್ತು ಶಿವಭಕ್ತರಿದ್ದಾರೆ. ವಿಷ್ಣುಭಕ್ತರನ್ನು ವೈಷ್ಣವರು, ನಾಮಧಾರಿಗಳು, ಶನಿವಾರದವರು, ದೇಶಾಭಾಗಸ್ತರು ಮುಂತಾಗಿ ಕರೆಯುತ್ತಾರೆ. ವಿಷ್ಣುಪಂಥದ ಉಚ್ಚವರ್ಗದ ಧಾರ್ಮಿಕವಿಧಿಯ ಮಾರ್ಗದರ್ಶಕರನ್ನು ಗುರುಗಳು, ಆಚಾರ್ಯರು ಎಂದು ಕರೆದರೆ, ಅದೇ ಪಂಥದ ಕೆಳವರ್ಗದ ವಿಷ್ಣುಪಂಥಗಳ ಧಾರ್ಮಿಕ ವಿಧಿಯ ಮಾರ್ಗದರ್ಶಕ ದಾಸಯ್ಯನಾಗುತ್ತಾನೆ.

ಮಲೆನಾಡಿನ ನಾಮಧಾರಿ ಒಕ್ಕಲಿಗರ ಬಗ್ಗೆ ೧೯ನೇ ಶತಮಾನದ ಮಧ್ಯಭಾಗದ ನಂತರ ವಿವರಣೆಗಳು ಸಿಗುತ್ತವೆ. ಕುವೆಂಪು ಅವರ ಕಾದಂಬರಿಗಳಲ್ಲಿ ನಾಮಧಾರಿ ಒಕ್ಕಲಿಗ ಸಮಾಜದ ಚಿತ್ರಣ ಸಿಗುತ್ತದೆ. ಅಲ್ಲದೆ, ಕ್ರೈಸ್ತಧರ್ಮ ಪ್ರಚಾರಕನಾಗಿದ್ದ (ಮಿಷನರಿ) ನೈಟಿಂಗೇಲ್ ನಾಮಧಾರಿ ಒಕ್ಕಲಿಗರೊಂದಿಗೆ ತೀರ್ಥಹಳ್ಳಿ ಸುತ್ತಮುತ್ತ ಒಡನಾಟವನ್ನು ಹೊಂದಿದ್ದ. ಅವನು ಬರೆಯುತ್ತಾನೆ. ''ಇವರು ಶೂದ್ರಗುಂಪಿನ ವ್ಯವಸಾಯಗಾರರು. ಸುಮಾರು ೩೦,೦೦೦ ದಷ್ಟು ಇರಬಹುದು. ಕಾಡುಗಳಲ್ಲಿ ವಾಸಮಾಡುವ ಇವರು ವನಚೇತನದೊಂದಿಗೆ ಬದುಕುತ್ತಿದ್ದು ಸುಂದರವಾದುದರೆಡೆಗೆ ಆಕರ್ಷಿತರಾಗುತ್ತಾರೆ. ನಾಮಧಾರಿಗಳು ಗೌರವಾನ್ವಿತರಾಗಿದ್ದು ಆತ್ಮಗೌರವದೊಂದಿಗೆ ಬದುಕುವ ಸಮುದಾಯ. ತಮ್ಮನ್ನು ತಾವು ನಾಡವರು ಎಂದು ಕರೆದುಕೊಳ್ಳಲು ಇಚ್ಛಿಸುತ್ತಾರೆ. ಇವರಲ್ಲಿ ಹಲವರು 'ಇನಾಂ'ಭೂಮಿಗಳನ್ನು ಹೊಂದಿದ್ದಾರೆ. ಇವರ ಪೂರ್ವಜರಿಗೆ ಹಿಂದಿನ ರಾಜರುಗಳು ಅವರ ಸೇವೆಯನ್ನು ಗುರುತಿಸಿ ನೀಡಿರುವ ಭೂಮಿಗಳಾಗಿವೆ. ನಾಮಧಾರಿಗಳು ತಾವು ಹುಟ್ಟಿದ ಸ್ಥಳದೊಂದಿಗೆ Peculiar attachment ಅನ್ನು ಹೊಂದಿದ್ದಾರೆ. ಈ attachment ಹೆಚ್ಚೂಕಡಿಮೆ ಒಂದು ಪ್ರವೃತ್ತಿಯಾಗಿದೆ.

ಮಲೆನಾಡಿನ ನಾಮಧಾರಿ ಒಕ್ಕಲಿಗರಲ್ಲಿ 'ಗೌಡ', 'ಹೆಗಡೆ' ಮತ್ತು 'ನಾಯಕ' ಎಂಬ ಮೂರು ಗುಂಪುಗಳು ಇವೆ. ಅಥವಾ ಇವುಗಳನ್ನು ಒಳಪಂಗಡಗಳೆಂದೂ ಕರೆಯಬಹುದು. ಹಿಂದೆ ಇವು 'ಸ್ಥಾನ' (Rank) ಸೂಚಕವಾಗಿದ್ದವು ಎಂಬುದಕ್ಕೆ 'ಹೆಗಡೆ' ಮತ್ತು 'ನಾಯಕ' ಹೆಸರುಗಳನ್ನು ಈಗಲೂ ಹೊಂದಿರುವ ಜೈನರು, ಬಂಟರು, ಬ್ರಾಹ್ಮಣರು ಮತ್ತು ಗೌಡಸಾರಸ್ವತ ಬ್ರಾಹ್ಮಣರನ್ನು ನೋಡಬಹುದು. ನಾಮಧಾರಿಗಳ ರೀತಿ-ನೀತಿಗಳು, ಆಚಾರ-ವಿಚಾರಗಳನ್ನು ಈ ಕೆಳಗಿನಂತೆ ವಿವರಿಸಬಹುದು.

ಶ್ರೀವೈಷ್ಣವಧರ್ಮದ ರೀತಿ-ನೀತಿಗಳ ಮುಂದುವರಿಕೆಗಾಗಿ ಮೇಲುಕೋಟೆಯಲ್ಲಿ (ಮಂಡ್ಯಜಿಲ್ಲೆ) ರಾಮಾನುಜರು ಒಂದು ಮಠವನ್ನು ಸ್ಥಾಪಿಸಿದರು. ಅದರ ಶಾಖೆಯಾಗಿ ಚಿಕ್ಕಮಗಳೂರು ಜಿಲ್ಲೆಯ ಕೊಪ್ಪದಲ್ಲಿ ಒಂದು ಶ್ರೀವೈಷ್ಣವಮಠ ಅಸ್ತಿತ್ವದಲ್ಲಿತ್ತೆಂಬುದು ೧೯೦೨ನೇ ಇಸವಿಯ ದಾಖಲೆಗಳಿಂದ ತಿಳಿದು ಬರುತ್ತದೆ".[೫೫] ಈ ಮಠದ ಹೆಸರು "ಶ್ರೀ ಕೊಪ್ಪದ ಅನ್ನರಾಯ ಒಡೆಯರವರ ಶ್ರೀಮಠ". ರಾಮಾನುಜರು ಮೂರು ನಾಮವನ್ನು ಹಣೆಯ ಮೇಲೆ ಧರಿಸುವ ಸಂಪ್ರದಾಯಸ್ಥರಾಗಿದ್ದರು. ಹಣೆಯ ಮೇಲೆ ಆಚೀಚೆಗೆ ನೆಟ್ಟಗೆ ಬಿಳಿನಾಮದ ಪಟ್ಟಿ ಎಳೆದು ಮಧ್ಯ ಒಂದು ಕೆಂಪುನಾಮದ ಪಟ್ಟಿ ಎಳೆದುಕೊಳ್ಳುತ್ತಿದ್ದರು. ಒಕ್ಕಲಿಗರಿಗೆ/ಗೌಡರಿಗೆ ಅವರು ಗುರುಗಳಾದ್ದರಿಂದ ಈ ಶಿಷ್ಯರೂ ಸಹ ಹಣೆಯ ಮೇಲೆ ನೆಟ್ಟಗೆ ಒಂದು ಕೆಂಪುನಾಮ ಧರಿಸಲು ಶುರುಮಾಡಿದರು. ಶ್ರೀವೈಷ್ಣವ ಪಂಥಕ್ಕೆ ಸೇರಿದ ಬ್ರಾಹ್ಮಣರನ್ನು 'ಅಯ್ಯಂಗಾರ್' ಎಂದು ಕರೆಯುತ್ತಾರೆ. ಕೊಪ್ಪದ ಶ್ರೀಮಠದಲ್ಲಿದ್ದವರು ಅಯ್ಯಂಗಾರ್ ಗುರುಗಳು. ಈ ಮಠದ ಆಡಳಿತ ಗೌಡರ ಆಡಳಿತಕ್ಕೆ ಒಳಪಟ್ಟಿತ್ತು. ಉತ್ತರದಿಂದ ಬಂದ ಜೈನಮತ ಹೇಗೆ ಕಾಡುಗಳಲ್ಲಿ ಆಶ್ರಯ ಪಡೆಯಿತೋ ಹಾಗೇ ಶ್ರೀವೈಷ್ಣವ ಧರ್ಮದ ಮಠಶಾಖೆ ಮಲೆನಾಡಿನ ಮಡಿಲಾದ ಕೊಪ್ಪದಲ್ಲಿ ಸ್ಥಾಪಿತವಾಗಿದ್ದರಲ್ಲಿ ಮೇಲ್ನೋಟಕ್ಕೆ ದುರ್ಗಮ ಕಾಡಿನಲ್ಲಿ ಸಿಗಬಹುದಾದ ರಕ್ಷಣೆ ಮತ್ತು ಮತಾವಲಂಬಿಗಳಿರುವ ಪ್ರದೇಶದ ಕಾರಣವೆನಿಸಬಹುದಾದರೂ, ಕೊಪ್ಪ ಶೃಂಗೇರಿಗೆ ಸಮೀಪವಿದೆ. ಅಲ್ಲಿಯಮಠ ಶ್ರೀ ಆದಿಶಂಕರಾಚಾರ್ಯರಿಂದ ಸ್ಥಾಪಿತವಾದ ಸ್ಮಾರ್ತ ಸಂಪ್ರದಾಯದ ಮಠ. ವಿಶಿಷ್ಟಾದ್ವೈತ ಸಿದ್ಧಾಂತ ಪ್ರತಿಪಾದನೆ ಮಾಡುವಾಗ ರಾಮಾನುಜರು ಶಂಕರರ ಅದ್ವೈತ ಸಿದ್ಧಾಂತದ ಕೆಲವು ಅಂಶಗಳನ್ನು ಟೀಕೆ ಮಾಡಿದ್ದರು. ಆಗ ಶೈವಚೋಳರಾಜನ ಉಪಟಳಕ್ಕೆ ಒಳಗಾಗಿದ್ದರು. ಈ ಹಿನ್ನೆಲೆಯಲ್ಲಿ ಮಲೆನಾಡಿನಲ್ಲಿ ಪ್ರತಿಧಾರ್ಮಿಕ, ಸಂಪ್ರಧಾಯಿಕ ಸಂಪ್ರದಾಯ ಒಂದರ ಪ್ರತೀಕವಾಗಿ ಕೊಪ್ಪದಲ್ಲಿ ಶ್ರೀವೈಷ್ಣವ ಮಠವನ್ನು ಸ್ಥಾಪಿಸಿದ್ದಿರಬಹುದೆ? ಎಂಬ ಪ್ರಶ್ನೆ ಮತ್ತು ಅನುಮಾನ ಏಕಕಾಲಕ್ಕೆ ಉದ್ಭವಿಸುತ್ತವೆಯಾದರೂ, ಉತ್ತರ ವಸ್ತುನಿಷ್ಠವಾದ ಮಾದರಿಯ ಸಂಶೋಧನೆಗಳಿಂದ ಮಾತ್ರ ಸಿಗಲು ಸಾಧ್ಯ. ಏನೇ ಆದರೂ ೨೦ ನೇ ಶತಮಾನದ ಪ್ರಾರಂಭದ ದಶಕಗಳಲ್ಲಿ ಕೊಪ್ಪದ ಶ್ರೀಮಠಕ್ಕೆ ಹೊಸನಗರ, ತೀರ್ಥಹಳ್ಳಿ, ಎನ್.ಆರ್. ಪುರ, ಕೊಪ್ಪ ಮತ್ತು ಶೃಂಗೇರಿ ತಾಲೂಕುಗಳ. ಒಕ್ಕಲಿಗ ಜನಾಂಗದವರು ಪ್ರತಿ ಮನೆ ಒಂದಕ್ಕೆ ಎರಡೂ ಕಾಲು ರೂಪಾಯಿಗಳಂತೆ ದೀಪಾರಾಧನೆ ಕಾಣಿಕೆಯಾಗಿ ಕಾರ್ತಿಕ ಮಾಸದಲ್ಲಿ ವಸೂಲಿ ಮಾಡಿ ಮಠಕ್ಕೆ ನೀಡಬೇಕಾಗಿತ್ತು. ಹಾಗೂ ಪಾಲು ಮುಖಂಡರು ತಮ್ಮ ಪಾಲಿನಲ್ಲಿ ಪಂಚಾಯ್ತಿ ಮೂಲಕ ವಿಧಿಸುವ ದಂಡದಲ್ಲಿ ಅರ್ಧಭಾಗ ಮಠಕ್ಕೆ ಕೊಡುತ್ತಿದ್ದರು.

''ಇನ್ನು ಗೌಡರಲ್ಲಿ ಯಾರಿಗಾದರೂ ಬಹಿಷ್ಕಾರ ಹಾಕಿದರೆ ಅದಕ್ಕೆ ಗುರುಮುದ್ರೆ ಒಪ್ಪಿಗೆ ಕೊಟ್ಟನಂತರ ಆ ಬಹಿಷ್ಕಾರ ಸಿಂಧುವಾಗುತ್ತಿತ್ತು. ಈ ಮಠಕ್ಕೆ ಇನ್ನೊಂದು ವರ್ಗದ ಶಿಷ್ಯರಿದ್ದರು. ಇವರು ದಾಸಯ್ಯನವರು. ಇವರು ಕೂಡ ಮೂರು ನಾಮ ಧರಿಸತಕ್ಕವರು. ಇವರ ಸಂಖ್ಯೆ ಬಹಳ ಕಡಿಮೆ. ಇವರ ಕೆಲಸ ಗೌಡರ ಮನೆಗಳಲ್ಲಿ ವಿಶೇಷ ಕಾರ್ಯಗಳಲ್ಲಿ ಬಂದು ತುಳಸಿಪೂಜೆ ಮಾಡುವುದು, ಯಾರಾದರೂ ಸತ್ತಾಗ ಹನ್ನೊಂದನೆಯ ಸೂತಕ ಕಳೆದುಕೊಳ್ಳುವ ದಿನ ಬಂದು ಮನೆಗೆಲ್ಲಾ ತೀರ್ಥ ಹಾಕಿ ಶುದ್ಧಿಗೊಳಿಸಿ, ತುಳಸಿಪೂಜೆ ಮಾಡಿ, ಸೇರಿದವರಿಗೆಲ್ಲಾ ತೀರ್ಥಪ್ರಸಾದ ಕೊಟ್ಟು ಹೋಗುತ್ತಿದ್ದರು. ಅಲ್ಲಿ ಗುರುಗಳ ದರ್ಶನಕ್ಕೆ ಬಂದವರಿಗೆ ಮುದ್ರೆ ಕಾಣಿಕೆಗಳನ್ನು

ತೆಗೆದುಕೊಂಡು ಮುದ್ರೆ ಒತ್ತುತ್ತಿದ್ದರು. ಮುದ್ರೆ ಒತ್ತುವುದು ಎಂದರೆ ಒಂದು ಉಂಗುರದ ಹಾಗೆ ಇರುತ್ತಿತ್ತು. ಒಂದು ಕಾಸಿನಷ್ಟು ಅಗಲದ ಅದನ್ನು ಬೆಂಕಿಯಲ್ಲಿ ಸಾಧಾರಣ ಕಾಯಿಸಿ ಯಾವುದಾದರೂ ಒಂದು ಭಾಗದ ರಟ್ಟೆಗೆ ಒತ್ತುತ್ತಿದ್ದರು. ಅದಕ್ಕೆ 'ಗುರುಮುದ್ರೆ' ಎಂದು ಹಸರು. ಈ ಗುರುಮುದ್ರೆ ಒತ್ತಿಸಿಕೊಂಡರೆ ಆತನಿಗೆ ಜೀವನದಲ್ಲಿ ಒಳ್ಳೆಯದಾಗುತ್ತದೆ ಎಂಬ ನಂಬಿಕೆ. ಆಗ ಗಂಡಸರು ಹೆಂಗಸರು ಎಲ್ಲರೂ ಮುದ್ರೆ ಒತ್ತಿಸಿಕೊಳ್ಳುತ್ತಿದ್ದರು ಇಂದು ಈ ಸಂಪ್ರದಾಯ ಕಡಿಮೆಯಾಗಿದೆ. ಕಾರಣಾಂತರಗಳಿಂದ ಈ ಮಠಕ್ಕೆ ಇಬ್ಬರು ಗುರುಗಳಾದರು. ಪರಸ್ಪರರಲ್ಲಿ ಭಿನ್ನಾಭಿಪ್ರಾಯ ಮೂಡಿ, ಒಬ್ಬರು ಮತ್ತೊಬ್ಬರಿಗೆ ಕಾಣಿಕೆ ಕೊಡಬಾರದೆಂದು ಶಿಷ್ಯರಿಗೆ ಪತ್ರ ಬರೆದರು. ಶಿಷ್ಯರು ಯಾರಿಗೂ ಕಾಣಿಕೆ ಕೊಡಲಿಲ್ಲವಾಗಿ ೧೯೨೧ರಲ್ಲಿ ಗುರುಗಳಿರ್ವರೂ ಮಠವನ್ನು ಬಿಟ್ಟು ಹೋದರು. ಇಂದು ಅಲ್ಲಿ ಪ್ರಾಚೀನತೆಯ ದ್ಯೋತಕವಾಗಿ ಶಿಥಿಲವಾಗಿರುವ ಕಲ್ಲಿನ ಕಟ್ಟಡಗಳನ್ನು ಕಾಣಬಹುದು. ಶಿಷ್ಯಸಂಸ್ಕೃತಿಯ ಪ್ರಭಾವಕ್ಕೆ ಒಳಗಾದಾಗ ಗುರುಮಠ ಮತ್ತು ಶಿಷ್ಯರಾದ ನಾಮಧಾರಿ ಒಕ್ಕಲಿಗರ ನಡುವೆ ದಾಸಯ್ಯನವರು ಪುರೋಹಿತ ವರ್ಗದವರಾಗಿ ಕಂಡು ಬರುತ್ತಾರೆ. ಗುರು, ಮಠ, ಮುದ್ರೆ, ಕಾಣಿಕೆ, ಇತ್ಯಾದಿಗಳು ಸಾಂಸ್ಥೀಕರಣ (Institutionalisation)ದ ಲಕ್ಷಣಗಳಾಗಿದ್ದು ಈ ಸಮುದಾಯ ಆ ಪ್ರಕ್ರಿಯೆಗೆ ಒಳಪಟ್ಟಿತ್ತು.

**ನಾಮಧಾರಿಗಳ ವಾಸಸ್ಥಳ**

ನಾಮಧಾರಿಗಳ ವಾಸಸ್ಥಳ ಬಯಲು ಸೀಮೆಯಂತಲ್ಲ. ಹಿಂದೆ ಮಲೆನಾಡಿನಲ್ಲಿ ಒಂದೊಂದು ಮನೆಯೂ ಒಂದೊಂದು ಊರು. ಊರಿಗೊಂದು ಮನೆ ಎಂಬಂತೆ. ನೀರು ಮತ್ತು ಕಾಡಿನ ಆಸರೆ ಇರುವಲ್ಲಿ ಜಮೀನಿನ ಸಮೀಪವೇ ಮನೆ. ಒಂದೊಂದು ಮನೆಯೂ ಒಂದೊಂದು ವಠಾರದ ವ್ಯಾಪ್ತಿ ಹೊಂದಿರುತ್ತದೆ. ದವಸ-ಧಾನ್ಯ ಶೇಖರಿಸಲು ಕಣಜ, ಪಣತಗಳ ಕೊಟ್ಟಿಗೆ, ಸೌದೆಕೊಟ್ಟಿಗೆ, ಕುರಿಕೋಳಿಗಳ ಒಡ್ನು, ಹಂದಿ ಒಡ್ನು -ಹೀಗೆ ಮನೆಯ ಆವರಣ ಸೃಷ್ಟಿಗೊಂಡಿರುತ್ತದೆ. ಇಂತಹ ಅನೇಕ ಮನೆಗಳನ್ನು ಮಲೆನಾಡಿನಲ್ಲಿ ಇಂದೂ ಕಾಣಬಹುದು. ಇವರು ವಾಸಮಾಡುವ ಹಿಂದಿನ ಕೆಲವು ಮನೆಗಳು ವಿನ್ಯಾಸದಲ್ಲಿ ಸೊಗಸಾಗಿದ್ದು ಅವುಗಳಲ್ಲಿರುವ ಮರದ ಕೆತ್ತನೆ ಎಷ್ಟು ಕಲಾತ್ಮಕವಾಗಿದೆಯೆಂದರೆ, ಅವುಗಳನ್ನು ನೋಡಿ ಆನಂದಿಸುವುದೇ ಒಂದು ವಿಶೇಷ ಅನುಭವ. ಅಂಟಿಕೆ ಪಿಂಟಿಕೆ ಇರುವಲ್ಲಿ ಮನೆಯ ಬಾಗಿಲಿನ ವಿವರಣೆ ಕೇವಲ ಅವರ ಧಾರ್ಮಿಕ ಭಾವನೆಯಲ್ಲ ಅದು ಅವರ ಕಲಾರಾಧನೆಯ ಪ್ರತೀಕವೂ ಹೌದು. ಇಂಥ ಮನೆಗಳನ್ನು ಕುರಿತು ಯಾರಾದರೂ ಸಂಶೋಧನೆ ಮಾಡುವಷ್ಟು ಸುಂದರವಾಗಿವೆ. ಹಿಂದೆ ಇಂಥ ಮನೆಗಳಲ್ಲಿ ಅವಿಭಕ್ತ ಕುಟುಂಬ ವ್ಯವಸ್ಥೆ ಇತ್ತು.

**ಕುಟುಂಬ ವ್ಯವಸ್ಥೆ**

''ಹಿಂದೆ ಗೌಡರ ಒಂದು ಕುಟುಂಬ ಎಂದರೆ ತಂದೆ ಮಕ್ಕಳು, ಅಣ್ಣ ತಮ್ಮ, ದೊಡ್ಡಪ್ಪ, ಚಿಕ್ಕಪ್ಪ, ಅವರುಗಳ ಹೆಂಡಿರು, ಮಕ್ಕಳು, ಮೊಮ್ಮಕ್ಕಳು, ಸೊಸೆಯಂದಿರು ಹೀಗೆ ಒಂದು ಕುಟುಂಬದಲ್ಲಿ ಸುಮಾರು ನಲವತ್ತು, ಐವತ್ತು ಜನಗಳಿಗೆ ಕಡಿಮೆ ಇಲ್ಲದೆ ಇರುತ್ತಿದ್ದರು. ಇಂತಹ ಒಂದು ಕುಟುಂಬಕ್ಕೆ 'ಅವಿಭಕ್ತ ವ್ಯವಸಾಯಗಾರರ ಕುಟುಂಬ' ಎಂದು ಹೆಸರು. ಇಂತಹ ಕುಟುಂಬದಲ್ಲಿ ಹಿರಿಯರೊಬ್ಬರು ಯಜಮಾನ. ಈ ಯಜಮಾನ ಸ್ವಲ್ಪ ಓದು ಬರಹ ಕಲಿತು ವ್ಯವಹಾರ ಬಲ್ಲವನಾಗಿರುತ್ತಿದ್ದ. ಈ ಯಜಮಾನನ ಹಂಡತಿ 'ಹಿರೇತನದ ಹೆಗ್ಗಡತಿ'. ಇವರಿಬ್ಬರು ಆ ಕುಟುಂಬದ ಯಜಮಾನರು. ಯಜಮಾನರ ಕೆಲಸ ಕುಟುಂಬದ ಇತರೆ ಸದಸ್ಯರಿಗೆಲ್ಲ ದಿನನಿತ್ಯದ

ಕೆಲಸಕಾರ್ಯಗಳನ್ನು ನಿಗದಿಪಡಿಸುವುದು. ಕುಟುಂಬದ ಹೆಂಗಸರುಗಳು ಹಿರೇತನದ ಹೆಗ್ಗಡತಿ ಹೇಳಿದಂತೆ ಕೆಲಸ ಕಾರ್ಯಗಳನ್ನು ಮಾಡುತ್ತಿದ್ದರು.

ನಾಮಧಾರಿಗಳ, ಗುಂಪಿಗೆ ಸೇರಿದ ಸ್ತ್ರೀಯರನ್ನು 'ಗೌಡತಿ', 'ಹೆಗ್ಗಡತಿ' 'ಒಕ್ಕಲಗಿತ್ತಿ' ಎಂದು ಕರೆಯಲಾಗುತ್ತಿತ್ತು. ''ಹಾಲು, ತುಪ್ಪ, ಮೊಸರು ದಿನಬಳಕೆಯ ಸಾಮಾನುಗಳನ್ನೆಲ್ಲಾ ಇಟ್ಟು ಬೀಗಹಾಕಿದ ಕೊಠಡಿಯ ಕೀಲಿಗೊಂಚಲು ಹೆಗ್ಗಡಿತಿಯ ಸೊಂಟದಲ್ಲಿ ಇರುತ್ತಿತ್ತು. ಆ ಕೋಣೆಗೆ "ಹಿರೇತನದವರ ಕೋಣೆ" ಎಂದು ಕರೆಯುತ್ತಿದ್ದರು.

## ನಾಮಧಾರಿಗಳಲ್ಲಿ 'ಬಳಿ' ಪದ್ಧತಿ

ಮಲೆನಾಡಿನ ನಾಮಧಾರಿಗಳಲ್ಲಿ ಸುಮಾರು ೧೮ 'ಬಳಿ' ಅಥವಾ 'ಕು'ಗಳಿವೆ. ಇವುಗಳು ಒಂದು ರೀತಿಯಲ್ಲಿ ಗೋತ್ರಗಳಿದ್ದಂತೆ. 'ಕರುಳು ಬಳ್ಳಿ' ಅಂತ ಅನ್ನುವುದೇ ಪ್ರಾಯಶಃ ಆಡುಮಾತಿನಲ್ಲಿ 'ಬಳಿ' ಆಗಿದೆ. ಅಂದರೆ ಒಂದೇ ರಕ್ತಕ್ಕೆ ಸೇರಿದವರು ಎಂದು ಅರ್ಥ. ''ಕೆಲವು ಮುಖ್ಯ ಬಳಿಗಳೆಂದರೆ, ಗಂಗರ ಬಳಿ, ತೋಳಾರ್ ಬಳಿ, ಹಡ್ಲಿಗಿ ಬಳಿ, ಕೌಡ್‌ಚ್ಚಿಬಳಿ, ಬಾಳೆಬಳಿ, ಅರಿಶಿನ ಬಳಿ, ಹೊನ್ನೆಬಳಿ, ಸೆಟ್ಟಿಬಳಿ, ಚಂದಿರಬಳಿ, ಮಿಗಾನ್ ಬಳಿ, ಹೊಳೆಬಳಿ, ಇತ್ಯಾದಿ. ಈ ಒಂದೊಂದು ಬಳಿಯೂ ಬೇರೆ ಬೇರೆ ಪ್ರಾಣಿ, ಸಸ್ಯ ಅಥವಾ ವಸ್ತುಗಳನ್ನು ಸಂಕೇತಿಸುತ್ತವೆ. ಒಂದೇ ಬಳಿಗೆ ಸೇರಿದವರ ನಡುವೆ ರಕ್ತ ಸಂಬಂಧ ನಡೆಯುವುದಿಲ್ಲ. ಅಂದರೆ ಇವರಲ್ಲಿ ಸ್ವಗೋತ್ರ ವಿವಾಹವಿಲ್ಲ. ಆದರೆ, ವಿವಾಹದ ನಂತರ ಹೆಣ್ಣು ತನ್ನ ಗಂಡನ ಕುಲದ ಆಚರಣೆಗಳನ್ನು ಅನುಸರಿಸಿಕೊಂಡು ಹೋಗಬೇಕು. ಮಲೆನಾಡಿನಲ್ಲೇ ವಾಸವಾಗಿರುವ 'ಕೂಡಿಗೆ ಗೌಡ್ಲು' ಎಂಬ ಬುಡಕಟ್ಟು ಜನಾಂಗದವರಲ್ಲೂ ಬಳಿಪದ್ಧತಿ ಇದ್ದು ಸಾಂಸ್ಕೃತಿಕವಾಗಿ ನಾಮಧಾರಿ ಒಕ್ಕಲಿಗರೂ ಮತ್ತು ಕೂಡಿಗೆ ಗೌಡ್ಲುಗಳಿಗೂ ಕೆಲವು ವಿಚಾರಗಳಲ್ಲಿ ಸಾಮ್ಯ ಕಂಡುಬರುವುದರಿಂದ ಮೊದಲು ಇವರುಗಳ ನಡುವೆ ಏನಾದರೂ ಸಂಬಂಧ ಇತ್ತೇ ಹೇಗೆ ಎಂಬುದರ ಬಗ್ಗೆ ಸಂಶೋಧನೆಗಳು ನಡೆಯಬೇಕಾಗಿದೆ. ಒಕ್ಕಲಿಗ ಜನಾಂಗದ ಹಲವು ಗುಂಪುಗಳ ವಿವರಣೆಯನ್ನು ನೀಡುವಾಗ, ನಾಮಧಾರಿ ಒಕ್ಕಲಿಗರಲ್ಲೇ ಮತ್ತೊಂದು ಗುಂಪನ್ನು 'ಕೊಟ್ಟೆ ಒಕ್ಕಲಿಗರು' ಎಂದು ಅನಂತಕೃಷ್ಣ ಅಯ್ಯರ್ ಅವರು ಹೆಸರಿಸಿರುತ್ತಾರೆ. ಇವರು ಮಳೆಗಾಲದಲ್ಲಿ ಅಡಿಕೆ ಕೊನೆಗಳಿಗೆ ಕೊಳೆರೋಗ ಬರದಂತೆ ತಡೆಗಟ್ಟಲು ಅಡಿಕೆ ಮರದ ಹಾಳೆ ಕೊಟ್ಟೆಯನ್ನು ಗೋನೆಗಳಿಗೆ ಕಟ್ಟುವ ಕಸುಬು ಮಾಡುತ್ತಿದ್ದುದರಿಂದ ಕೊಟ್ಟೆ ಒಕ್ಕಲಿಗರು ಎಂದು ಹೆಸರಿಸಿದ್ದಾರೆ. ಮಲೆನಾಡಿನ ಅದೇ ಭಾಗಗಳಲ್ಲಿ 'ಕರೆ (ಕಪ್ಪುವರ್ಣದ) ಒಕ್ಕಲಿಗರು' ಎಂಬ ಇನ್ನೊಂದು ಪಂಗಡದವರು ಕಾಣಸಿಗುತ್ತಾರೆ. ಇವರೂ ವೈಷ್ಣವರು, ಮತ್ತು ಮದ್ಯ-ಮಾಂಸಾಹಾರಿಗಳು. ಆದರೆ, ಇವರ ಮತ್ತು ಕೊಟ್ಟೆ ಒಕ್ಕಲಿಗರ ನಡುವೆ ಯಾವುದೇ ಬಗೆಯ ಸಂಬಂಧ ಕಂಡುಬರುವುದಿಲ್ಲ.

ಕೊಟ್ಟೆಕಟ್ಟುವವರನ್ನು ಕುರಿತು ಕಡಿದಾಳು ರಾಮಣ್ಣಗೌಡರು ಹೀಗೆ ಬರೆಯುತ್ತಾರೆ ''ಹಿಂದಿನಿಂದಲೂ ನಡೆದುಕೊಂಡು ಬಂದ ಕ್ರಮವೊಂದಿದೆ-ಅದು ಕೊಟ್ಟೆ ಕಟ್ಟುವುದು. ಕೊಟ್ಟೆ ಕಟ್ಟುವ ಜನ ಕರಾವಳಿ ಕನ್ನಡ ಜಿಲ್ಲೆಯಿಂದ (ಘಟ್ಟದ ಕೆಳಗಿಂದ) ಬರಬೇಕು. ಅಡಿಕೆ ಮರ ಹತ್ತಬೇಕು. ಅಡಿಕೆ ಕೊನೆಗೆ ಕೊಟ್ಟೆ ಕಟ್ಟಬೇಕು. ಎತ್ತರವಾದ ಅಡಿಕೆ ಮರ ಹತ್ತಬೇಕು. ಎತ್ತರವಾದ ಅಡಿಕೆ ಮರ ಹತ್ತುವುದರಲ್ಲಿ ಅವರು ನಿಪುಣರು. ಇಂಥ ಕಷ್ಟದ ಕೆಲಸಕ್ಕೆ ಘಟ್ಟದ ಮೇಲಿನವರು ಹೆದರುತ್ತಿದ್ದರು. ವಾಡಿಕೆಯಂತೆ ಇಲ್ಲಿರುವ ಒಂದುಗಾದೆಯೇ ಇದನ್ನು ಸ್ಪಷ್ಟಪಡಿಸುತ್ತದೆ. ಅಡಿಕೆ ತೋಟದವರ ಜುಟ್ಟು ಘಟ್ಟದ ಕೆಳಗಿನ ಕೊಟ್ಟೆ ಕಟ್ಟುವವರ ಕೈಯಲ್ಲಿದೆ'' ಎಂಬುವುದು.

**ಉಡುಗೆ-ತೊಡುಗೆ**

ಆಧುನಿಕ ಉಡುಪುಗಳು ಬರುವ ಮೊದಲು ಇವರ ಉಡಿಗೆ-ತೊಡಿಗೆಗಳು ವಿಶೇಷವಾಗಿದ್ದವು. ಕೆಲಸ ಮಾಡತಕ್ಕಂತ ಗಂಡಸರು ದಿನಚರಿ ಕೆಲಸಕ್ಕೆ ಹೋಗುವಾಗ ಸೊಂಟದಷ್ಟು ಉದ್ದಕ್ಕೆ ಬರುವ ಅರ್ಧ ಕೈನ ದೊಗಲೆ ಅಂಗಿ ಹಾಕಿಕೊಳ್ಳುವುದು. ಸೊಂಟಕ್ಕೆ ಭಾರಾಪುರ ಪಂಚೆ ಅರ್ಧ ತೊಡೆ ಮುಚ್ಚುವಷ್ಟು ಸುತ್ತಿಕೊಳ್ಳುತ್ತಿದ್ದರು. ಒಳಗಡೆ ಲಂಗೋಟೆಯನ್ನು ಕಟ್ಟಿಕೊಳ್ಳುತ್ತಿದ್ದರು. ತಲೆಗೆ ನಾಲ್ಕು ಮೊಳ ಉದ್ದದ ಚೌಕಳಿ ಟವಲನ್ನು ಸುತ್ತಿಕೊಳ್ಳುತ್ತಿದ್ದರು. ಇದು ಬೇಸಿಗೆ ಕಾಲದಲ್ಲಿ ಕೆಲಸಕ್ಕೆ ಹೋಗುವಾಗಿನ ಉಡುಗೆ. ಮನೆಗೆ ಇದೇ ಉಡುಗೆ. ಮಳೆಗಾಲದಲ್ಲಿ ಕೆಲಸಕ್ಕೆ ಹೋಗುವಾಗ ಮೈಗೆ ಕಂಬಳಿ ಕೋಟನ್ನು (ತೋಳಿಲ್ಲದ್ದು) ಸೊಂಟದವರೆಗಿನ ಉದ್ದದನ್ನು ಹಾಕಿಕೊಳ್ಳುತ್ತಿದ್ದರು. ಇನ್ನು ಕೆಲವರು 'ಬಲಗೊಬ್ಬೆ' ಅಂದರೆ ಎದೆ, ಹೊಟ್ಟೆ ಬೆನ್ನು ಮುಚ್ಚುವಷ್ಟು ಭಾಗಕ್ಕೆ ದಪ್ಪನಾದ ಬಟ್ಟೆ ಅಥವಾ ಕಂಬಳಿ ತುಂಡು. ಇದನ್ನು ಭುಜದಮೇಲಿಂದ ಬಲದಿಂದ ಎಡಕ್ಕೂ ಎಡದಿಂದ ಬಲಕ್ಕೂ, ಹೊಟ್ಟೆಯ ಮೇಲೂ, ಬೆನ್ನಿನ ಮೇಲೂ ಬರುವಂತೆ ಕ್ರಾಸಿನಲ್ಲಿ ಸುತ್ತಿ ಸೊಂಟದ ಬಳಿ ಗಂಟುಹಾಕಿಕೊಳ್ಳುತ್ತಿದ್ದರು. ನೆಂಟರಿಷ್ಟರ ಮನೆಗೆ ಹೋಗುವಾಗ ಶ್ರೀಮಂತರು ಪಾದದವರೆಗೆ ಬರುವ ಉದ್ದ ಕಚ್ಚೆ ಹಾಕುತ್ತಿದ್ದರು. ಮೈಗೆ ಒಳಗಡೆ ಉದ್ದ ಬನಿಯನ್ನು ಅದರ ಮೇಲೆ ಎದೆ ಮುಚ್ಚುವ ಉದ್ದ ಕೋಟು, ತಲೆಗೆ ಜರೀ ಮುಂಡಾಸ (ಪೇಟ) ಧರಿಸುತ್ತಿದ್ದರು. ಕೆಲವರು ತಲೆಗೆ ರೇಷ್ಮೆ ಕೆಂಪು, ಹಸಿರು ಪದ್ಮೆವಸ್ತ್ರ ಕಟ್ಟುತ್ತಿದ್ದರು. ಕೆಲವರು ತಲೆಗೆ ಕಪ್ಪು ಟೋಪಿ ಹಾಕುತ್ತಾರೆ.

ಗಂಡಸರು ತಲೆಯಲ್ಲಿ ಜುಟ್ಟು ಬಿಡುತ್ತಿದ್ದರು. ತಲೆ ಸುತ್ತಾ ಕೂದಲನ್ನು ಕತ್ತರಿಸಿ, ಮಧ್ಯ ತಲೆನೆತ್ತಿಯ ಮೇಲೆ ಕೂದಲನ್ನು  ಹೆಂಗಸರ ಹಾಗೆ ಉದ್ದವಾಗಿ ಬೆಳೆಸುತ್ತಿದ್ದರು. ಕುವೆಂಪುರವರ ಮಲೆಗಳಲ್ಲಿ ಮದುಮಗಳು ಕಾದಂಬರಿಯಲ್ಲಿ ದೇವಯ್ಯನನ್ನು ಹೊರತುಪಡಿಸಿ ಉಳಿದವರೆಲ್ಲಾ ಜುಟ್ಟು ಬಿಟ್ಟಿರುವುದನ್ನು ಗಮನಿಸಬಹುದು. ಆ ಜುಟ್ಟನ್ನು ಎಣ್ಣೆ ಹಾಕಿ ಬಾಚಿ ಕಟ್ಟಿಕೊಂಡು ಅದರ ಮೇಲೆ ಪೇಟಾ, ಟೋಪಿ ಹಾಕಿಕೊಳ್ಳುತ್ತಿದ್ದರು. ಪೇಟಾ ಅಥವಾ ಟೋಪಿ ಹಾಕಿಕೊಳ್ಳದೆ ಹೋಗುತ್ತಿರಲಿಲ್ಲ. ಸಾಮಾನ್ಯ ಒಕ್ಕಲಿಗರ ಉಡಿಗೆ ಮೊಣಕಾಲುವರೆಗೆ ಮಾತ್ರಾ ಪಂಚೆ ಕಚ್ಚೆ ಹಾಕುತ್ತಿದ್ದರು. ಮುಕ್ಕಾಲು ತೋಳು ಉದ್ದ ಒಂದು ಬನಿಯನ್ನು ಮೈಗೆ ಹಾಕಿಕೊಂಡು ತಲೆಗೆ ಒಂದು ಚೌಕಳಿ ಟವಲ್ಲಿನ ಪೇಟ ಅಥವಾ ಟೋಪಿ ಹಾಕುತ್ತಿದ್ದರು.

ಹೆಂಗಸರು ಕೆಲಸಕ್ಕೆ ಹೋಗುವವರು ನಿತ್ಯದ ಉಡುಗೆ ಜಡ್ಡುಸೀರೆ. ಹದಿನೆಂಟು ಮೊಳ ಉದ್ದದ್ದು. ಸೀರೆಗಳನ್ನು ಹೆಚ್ಚಾಗಿ ಉಪಯೋಗಿಸುತ್ತಿದ್ದರು. ಸಾಮಾನ್ಯವಾಗಿ ಇವರು ಸೀರೆ ಉಡುವ ಕ್ರಮಕ್ಕೆ 'ಗೊಬ್ಬಸೀರೆ' ಎಂದು ಕರೆಯುತ್ತಾರೆ. ಇದು, ಹಾಲಕ್ಕಿ ಒಕ್ಕಲಿಗ ಹೆಂಗಸರು ಮತ್ತು ಕೂರ್ಗಿಹೆಂಗಸರು ಸೀರೆ ಉಡುವ ಕ್ರಮವನ್ನು ಹೋಲುತ್ತದೆ. ವಿವಾಹವಾದ ಹೆಂಗಸರು ಹೀಗೆ ಗೊಬ್ಬೆ ಸೀರೆ ಉಡುತ್ತಿದ್ದರು. ವಯಸ್ಸಾದವರು ಕುಪ್ಪಸ ತೊಡುತ್ತಿರಲಿಲ್ಲ.

''ಉಡುಗೆಗಳಿಗಿದ್ದ ಹೆಸರುಗಳೆಂದರೆ, ಹೆಣ್ಣುಮಕ್ಕಳದ್ದು ಕಿರಿಗೆ, ಪರಿಕಾರ. ಗಂಡಸರದ್ದು ಅಂಗಿ, ದಗಲೆ, ಪಂಚೆ, ಕೋಟು, ರುಮಾಲು. ಹುಡುಗರದ್ದು ಅಂಗಿ, ಟೋಪಿ, ಚಡ್ಡಿ, ಬಚಕಾನೆ, ದಿನಚರಿ ಉಪಯೋಗಿಸುವ ಒಡವೆ-ಕತ್ತಿನಲ್ಲಿ ಮಾಂಗಲ್ಯ ಹವಳದ ಸರ, ಕೈಗೆ ಬೆಳ್ಳಿಯ ಕಡಗ, ಗಾಜಿನ ಬಳೆ, ಸೊಂಟಕ್ಕೆ ಬೆಳ್ಳಿಯ ಪಟ್ಟೆ (ಡಾಬು) ಇವುಗಳನ್ನು ಉಪಯೋಗಿಸುತ್ತಿದ್ದರು. ಗಂಡಸರು ಕಿವಿಗಳಿಗೆ ಒಂಟಿಗಳನ್ನು ಹಾಕಿಕೊಳ್ಳುತ್ತಾರೆ.

## ಆಹಾರ ಕ್ರಮ

ನಾಮಧಾರಿ ಒಕ್ಕಲಿಗರು (ಮಲೆನಾಡಿನ) ಮಿಶ್ರಾಹಾರಿಗಳು. ಮಾಂಸಹಾರ ಮತ್ತು ಸಸ್ಯಾಹಾರ ಎರಡನ್ನೂ ಉಪಯೋಗಿಸುವರು. ಹೆಚ್ಚಾಗಿ ತಮಗೆಬೇಕಾದ ಎಲ್ಲವನ್ನೂ ಬೆಳೆದುಕೊಳ್ಳುತ್ತಾರೆ. ಕುಂಬಳಕಾಯಿ, ಹಾಗಲಕಾಯಿ, ಹೀರೆಕಾಯಿ, ಬಾಳೆಕಾಯಿ, ತಿಂಗಳವರೆಕಾಯಿ.ಮುಳ್ಳು ಸೌತೆಕಾಯಿ, ಗದ್ದೆ ಸೌತೆಕಾಯಿ, ತೊಂಡೆಕಾಯಿ, ಬೆಂಡೆಕಾಯಿ, ಬಾಳೆಕಾಯಿ, ಬಸಳೆಸೊಪ್ಪು, ಹರಿವೆ ಸೊಪ್ಪುಗಳನ್ನು ಬೆಳೆಯುತ್ತಿದ್ದರು. ಮಾವಿನ ಮಿಡಿ, ಲಿಂಬೆಹಣ್ಣು, ದೊಡಲಿಕಾಯಿ, ಅಮಟೆಮಿಡಿ, ನೆಲ್ಲಿಕಾಯಿ, ಕಳಲೆ, ಅರಮರಲಕಾಯಿ ಇವುಗಳನ್ನು ಬಳಸಿ ಉಪ್ಪಿನಕಾಯಿ ತಯಾರಿಸಿ ಗಾಜುಗಳ ಒಳಗೆ ತುಂಬಿಸಿ ಹಾಳಾಗದಂತೆ ಇಟ್ಟುಕೊಳ್ಳುತ್ತಿದ್ದರು. ಮಳೆಗಾಲದಲ್ಲಿ ಕಾಡಿನಲ್ಲಿ ದೊರೆಯುವ ತರಕಾರಿಗಳಾದ ಅಣಬೆ, ಮಾಡಾಗಲಕಾಯಿ, ಮುಳ್ಳುಸೊಪ್ಪು, ಚಗಟೆಸೊಪ್ಪು, ಇವುಗಳನ್ನು ತಂದು ಆಹಾರ ತಯಾರಿಸುತ್ತಾರೆ.

ಇವರು ಮಾಂಸಾಹಾರಿಗಳಾದ್ದರಿಂದ ಕೋಳಿಗಳನ್ನು ಸಾಕುತ್ತಿದ್ದರು. ಮಳೆಗಾಲದಲ್ಲಿ ಬೆಳ್ಳೇಡಿ ಸಾರು, ಏಡಿಚಟ್ನಿ, ಕಾರೇಡಿಸಾರು-ಚಟ್ನಿ, ಹಸಿಮೀನು ಪದಾರ್ಥ ಇವುಗಳನ್ನೆಲ್ಲಾ ಮಾಡಿ ಉಪಯೋಗಿಸುತ್ತಿದ್ದರು. ಇವರಲ್ಲಿ ಕೆಲವರು ಶಿಕಾರಿದಾರರು ಇದ್ದು ದೊಡ್ಡ ಪ್ರಾಣಿಗಳಾದ ಕಾಡುಹಂದಿ, ಕಡವೆ, ಕಾಡುಕುರಿ, ಇಂಥವುಗಳನ್ನು ಹೊಡೆದು ಇವುಗಳ ಮಾಂಸವನ್ನು ಒಣಗಿಸಿ ಸಂಡಿಗೆಯನ್ನು ಮಾಡಿ ಇಟ್ಟುಕೊಳ್ಳುತ್ತಿದ್ದರು. ಇನ್ನು ಎಣ್ಣೆಗಳನ್ನು ಕೂಡ ಕಾಡುಹಣ್ಣಿನ ಬೀಜಗಳಿಂದ ತಯಾರಿಸಿಕೊಳ್ಳುತ್ತಿದ್ದರು. ಹಳ್ಳುಗುರಗಿ ಹಣ್ಣು, ಮುರುಗನಹಣ್ಣು, ಇವುಗಳು ಹಣ್ಣಾಗಿ ಮರದಿಂದ ಬೀಳುವ ಕಾಲದಲ್ಲಿ ಹೆಂಗಸರು ಕಾಡಿಗೆ ಹೋಗಿ ಆ ಹಣ್ಣುಗಳನ್ನು ಆಯ್ದುತಂದು ಅದರೊಳಗಿರುವ ಬೀಜಗಳನ್ನು ತೆಗೆದು ಚೆನ್ನಾಗಿ ತೊಳೆದು ಒಣಗಿಸಿ ಆ ಬೀಜದಿಂದ ಎಣ್ಣೆಯನ್ನು ತೆಗೆಯುತ್ತಿದ್ದರು.

ಈ ಎಣ್ಣೆಯನ್ನು ಅಡಿಗೆ ಒಗ್ಗರಣೆಗೆ, ತಿಂಡಿಗಳನ್ನು ಕರಿಯುವದಕ್ಕೂ ದೀಪಕ್ಕೂ ಉಪಯೋಗಿಸುತ್ತಿದ್ದರು. ಧೂಪದಕಾಯಿಂದ ತೆಗೆದ ಎಣ್ಣೆಯನ್ನು ದೀಪಕ್ಕೆ ಉಪಯೋಗಿಸುತ್ತಿದ್ದರು. ಅಡಿಗೆಗೆ ದೀರ್ಕನಹುಳಿ, ಓಟೆ ಹುಳಿಯನ್ನು ತಯಾರಿಸುತ್ತಿದ್ದರು. ಕಬ್ಬನ್ನು ಬೆಳೆದು ಬೇಕಾದಷ್ಟು ಬೆಲ್ಲ ಮಾಡಿಕೊಳ್ಳುತ್ತಿದ್ದರು. ಮಲೆನಾಡಿನ ಜೋನಿಬೆಲ್ಲ ತುಂಬಾ ಪ್ರಸಿದ್ಧ. ಕೊಬ್ಬರಿ, ಬೇಳೆಕಾಳು, ಮೆಣಸಿನ ಕಾಯಿ, ಬಯಲು ಸೀಮೆಯಿಂದ ಬರುತ್ತಿತ್ತು. ಈ ಪದಾರ್ಥಗಳನ್ನು ಬಯಲು ಸೀಮೆಯವರು ಹೇರಿಕೊಂಡು ಬಂದು ಅಲ್ಲಲ್ಲಿ ಕ್ಯಾಂಪ್ ಮಾಡಿ ವ್ಯಾಪಾರ ಮಾಡುತ್ತಾರೆ. ಬಯಲು ಸೀಮೆ ಒಕ್ಕಲಿಗರು ರಾಗಿಯನ್ನು ಮುಖ್ಯ ಆಹಾರವಾಗಿ ಬಳಸಿದರೆ, ಮಲೆನಾಡಿನ ನಾಮಧಾರಿಗಳ ಮುಖ್ಯ ಆಹಾರ ಅಕ್ಕಿ-ಅನ್ನ.

## ವಿವಾಹ

ವಿವಾಹ ನಾಗರೀಕ ಸಮಾಜದ ಒಂದು ಅತೀ ಮುಖ್ಯ ಸಂಸ್ಥೆ. ಮಾನವ ಸಮಾಜಗಳು ಲೈಂಗಿಕ ಸಂಯೋಗವನ್ನು ವೈಯಕ್ತಿಕ ಅಥವಾ ಜೈವಿಕವೆಂದು ಮಾತ್ರ ಭಾವಿಸದೆ ಸಾಮಾಜಿಕ ಮತ್ತು ನೈತಿಕ ವಿಷಯವೆಂದು ಪರಿಗಣಿಸುತ್ತವೆ. ಅಲ್ಲದೆ ಪ್ರತಿ ಮಾನವ ಸಮುದಾಯವೂ ಅಂಗೀಕಾರಾರ್ಹ ಸಂಗಾತಿಗಳ ನಡುವೆ ಸ್ಥಿರವಾದ ಬಂಧನವೊಂದನ್ನು ಅಪೇಕ್ಷಿಸುತ್ತದೆ. ಅದನ್ನೇ ಮದುವೆ ಎಂದು ಕರೆದು ಗಂಡು ಹೆಣ್ಣುಗಳನ್ನು ಒಂದು ವ್ಯವಸ್ಥಿತ ಕುಟುಂಬ ಜೀವನಕ್ಕೆ ಒಳಪಡಿಸುತ್ತದೆ.

ನಾಮಧಾರಿ ಒಕ್ಕಲಿಗರ ವಿವಾಹ ಪದ್ಧತಿ ತುಂಬಾ ಆಸಕ್ತಿ ಪೂರ್ಣವಾಗಿದೆ. ಆದರೆ, ಇಲ್ಲಿ ಪ್ರತಿಯೊಂದು ವಿವರವನ್ನೂ ಬರೆಯಲು ಸಾಧ್ಯವಾಗದೆ ಕೆಲವು ಅತೀ ಮುಖ್ಯ ಅಂಶಗಳನ್ನು ಮಾತ್ರ ಪ್ರಸ್ತಾಪಿಸಲಾಗಿದೆ.

ಗಂಡು-ಹೆಣ್ಣುಗಳು ಪ್ರಾಪ್ತ ವಯಸ್ಕರಾದಾಗ ತಂದೆ-ತಾಯಿಗಳು ಮಕ್ಕಳ ವಿವಾಹದ ಬಗ್ಗೆ ಚಿಂತಿಸುತ್ತಾರೆ. ಹಿಂದೆ ತುಂಬಾ ದೂರದ ಸಂಬಂಧಗಳಿಗೆ ಹೋಗದೆ ಹತ್ತಿರದಲ್ಲಿಯೇ ಸಂಬಂಧ ಬೆಳೆಸುತ್ತಿದ್ದರು. ವಿಚಾರಿಸಿ, ತಿಳಿದು, ಉತ್ತಮ ಮನೆತನದ ಹೆಣ್ಣನ್ನು ತಂದು ವಿವಾಹ ಮಾಡುತ್ತಿದ್ದರು. 'ಜಲಶೋಧಿಸಿ ನೀರು ತಾ, ಕುಲ ಶೋಧಿಸಿ ಹೆಣ್ಣು ತಾ' ಎನ್ನುವ ಗಾದೆ ಮಾತು ಇಲ್ಲಿ ನೆನಪಾಗುತ್ತದೆ. ಹುಡುಗನ ತಂದೆ-ತಾಯಿ ಸೋದರ ಮಾವನ ಮನೆಗೆ ಹೋಗಿ ನೋಡಿ, ಒಪ್ಪಿಗೆಯಾದರೆ ಸಾಕು, ಹುಡುಗ ನೋಡಲೇ ಬೇಕೆಂದೇನೂ ಇರಲಿಲ್ಲ. (ಆದರೆ ಈಗ ಪರಿಸ್ಥಿತಿಗಳು ಬದಲಾಗಿವೆ). ಹುಡುಗಿ ಸುಗುಣೆಯಾಗಿದ್ದು ಮನೆ ಕೆಲಸಗಳನ್ನೆಲ್ಲಾ ಕಲಿತಿದ್ದರೆ ಸಾಕು. ಹಾಗೆಯೇ ಹುಡುಗಿಯ ಕಡೆಯವರೂ ಹುಡುಗನ ಬಗ್ಗೆ ಕೇಳಿ ತಿಳಿದಿರುತ್ತಾರೆ. ಇಬ್ಬರಿಗೂ ಒಪ್ಪಿಗೆಯಾದರೆ ಹಾಗೂ ಒಂದೇ ಬಳಿ(ಗೋತ್ರ)ಗೆ ಸೇರಿರದಿದ್ದರೆ ವಿವಾಹವಾಗಬಹುದು.

ಶಕುನಗಳನ್ನೆಲ್ಲಾ ನೋಡಿದ ನಂತರ ಜೋಯಿಸರಲ್ಲಿಗೆ ಹೋಗಿ ಲಗ್ನಪತ್ರಿಕೆ ಬರೆಸುತ್ತಾರೆ. ಎರಡೂ ಕಡೆಯವರೂ ಮದುವೆಗೆ ಸಿದ್ಧತೆ ಮಾಡಿಕೊಳ್ಳುತ್ತಾರೆ. ವಿವಾಹದ ಸಂದರ್ಭದಲ್ಲಿ ಗಂಡು ಹೆಣ್ಣಿನ ಮನೆಗೆ ಬಂಧು ಬಾಂಧವರೊಡನೆ ಹೋಗುವಾಗ ಮಂಗಳವಾದ್ಯಗಳೊಂದಿಗೆ ಬರುತ್ತಾನೆ. ಹಿಂದೆ ದಂಡಿಗೆಯಲ್ಲಿ ಕುಳಿತು ಬರುತ್ತಿದ್ದ. ಈ ದಂಡಿಗೆಯನ್ನು ಅಲ್ಲಲ್ಲಿ ಕೆಲವರು ಬಾಡಿಗೆಗೆ ಇಟ್ಟಿರುತ್ತಿದ್ದರು. ಅದನ್ನು ಹೊರುವುದಕ್ಕೆ ದಕ್ಷಿಣ ಕನ್ನಡ ಜಿಲ್ಲೆಯಿಂದ ಬೋವಿಯವರು ಬರುತ್ತಿದ್ದರು. ಅವರು ಈ ದಂಡಿಗೆ ಮುಖತೋರಣ ಚಿತ್ರ, ದೀವಟಿಗೆ ಇವುಗಳನ್ನು ಯಾರಲ್ಲಿ ಇದೆ ಅವರಿಂದ ಬಾಡಿಗೆಗೆ ವಹಿಸಿಕೊಳ್ಳುತ್ತಿದ್ದರು. ದಿಬ್ಬಣ ಹೆಣ್ಣಿನ ಮನೆ ತಲುಪಿದ ಮೇಲೆ ಎಲ್ಲರನ್ನೂ ಆದರಿಸಿ ಸತ್ಕರಿಸುತ್ತಾರೆ.

ಜೋಯಿಸರು ಗೊತ್ತುಪಡಿಸಿರುವ ಮುಹೂರ್ತಕ್ಕೆ ಸರಿಯಾಗಿ ವಧುವನ್ನು ಧಾರೆಮಂಟಪಕ್ಕೆ ಸೋದರಮಾವ ಕರೆತರುತ್ತಾರೆ. ಕನ್ಯಾಪಿತೃಗಳು ೩೩೦ ದೇವತೆಗಳ ಸಾಕ್ಷಿಯಾಗಿ ಧಾರೆ ಎರೆಯುತ್ತಾರೆ. ಆಗ ಶಾಸ್ತ್ರಗಳೊಂದಿಗೆ, ಹಿರಿಯರ ಆಶೀರ್ವಾದದೊಂದಿಗೆ ಹುಡುಗ ವಧುವಿಗೆ ತಾಳಿ ಕಟ್ಟುತ್ತಾನೆ. ಧಾರೆ ಊಟ ಅತಿಥಿ ಸತ್ಕಾರ ನಡೆಯುತ್ತದೆ. ಕನ್ಯೆಯನ್ನು ಒಪ್ಪಿಸುವಾಗ ಕನ್ಯಾಪಿತೃಗಳು 'ಮಗಳು ಏನೆ ತಪ್ಪು ಮಾಡಿದರೂ ನೀವುಗಳು ಮನ್ನಿಸಿ ನಿಮ್ಮ ಮಗಳಂತೆ ರಕ್ಷಿಸಿಕೊಂಡು ಹೋಗಬೇಕು' ಎಂದು ವಿನಂತಿಸುತ್ತಾರೆ. ತವರಿನಿಂದ ಹೊರಡುವ ಮೊದಲು ವಧು ತಂದೆ-ತಾಯಿಗಳಿಗೆ ನಮಸ್ಕರಿಸಿ ಮನೆ ದೇವರಿಗೆ ಕೈಮುಗಿಯುತ್ತಾಳೆ. ಆನಂತರ ಆಕೆ ಮುಂಬಾಗಿಲು ದಾಟಿ ಹೊರಗೆ ಹೋಗುವಾಗ ಅವಳ ಕೈಗೆ ಸ್ವಲ್ಪ ಅಕ್ಕಿ-ಭತ್ತವನ್ನು ಕೊಡುತ್ತಾರೆ. ಅವಳು ಎರಡೂ ಕೈಗಳಿಂದ ತೆಗೆದುಕೊಂಡು ಮುಂದೆ ಬಾಗುತ್ತಾ ನಂತರ ಹಿಮ್ಮುಖವಾಗಿ ಹೋಗುತ್ತಾ ಮನೆ ಒಳಗೆ ಬೀಳುವಂತೆ ಅಕ್ಕಿ ಬತ್ತವನ್ನು ಬೀಸುತ್ತಾ ಹೊರಬರುತ್ತಾಳೆ. ಇದರ ಅರ್ಥ ಈ ಗೃಹಲಕ್ಷ್ಮಿಯನ್ನು ನಾನು ಕರೆದುಕೊಂಡು ಹೋಗುತ್ತಿಲ್ಲ. ನಿಮ್ಮ ಮನೆ (ತವರು) ದವಸ ಧಾನ್ಯದಿಂದ ತುಂಬಿ ಸಮೃದ್ಧಿಯಾಗಿರಲೆಂದು ಪ್ರಾರ್ಥಿಸುತ್ತಾಳೆ. ಇದು ರೈತಸಂಸ್ಕೃತಿಯ ಪ್ರತೀಕವೆನಿಸುತ್ತದೆ. ನಂತರ ವಧು-ವರರನ್ನು ಹುಡುಗನ ಮನೆಗೆ ಮಂಗಳವಾದ್ಯಗಳೊಂದಿಗೆ ಕರೆತರುತ್ತಾರೆ. ಮದುಮಕ್ಕಳು ತುಳಸಿಗೆ ಪ್ರದಕ್ಷಿಣೆಹಾಕಿ ಬಂದ ನಂತರ, ಹೊಸ್ತಿಲ ಬಳಿ ಕುಳಿತುಕೊಳ್ಳುತ್ತಾರೆ. ವಧು ಅರಿಶಿನ,

ಕುಂಕುಮ, ರಂಗೋಲಿಯೊಂದಿಗೆ ಇಟ್ಟಿರುವ ಅಕ್ಕಿಯನ್ನು ಬಲಗಾಲಿನಿಂದ ನವಿರಾಗಿ ಒದೆಯುತ್ತಾ, ಬಲಗಾಲಿಟ್ಟು 'ಗೃಹಲಕ್ಷ್ಮಿ'ಯಾಗಿ ಒಳಗೆ ಪ್ರವೇಶಿಸುತ್ತಾಳೆ.

**ಮಂತ್ರ ಮಾಂಗಲ್ಯ**

ಸೃಜನಶೀಲ ಚಿಂತಕ ಮತ್ತು ಲೇಖಕರಾದ ಶ್ರೀ ಕುವೆಂಪು ಅವರು ವಿವಾಹದಲ್ಲಿ ಸುಧಾರಣೆಯನ್ನು ಬಯಸಿದರು. ಆ ನಿಟ್ಟಿನಲ್ಲಿ 'ಮಂತ್ರಮಾಂಗಲ್ಯ'ವೆಂಬ ಸರಳ ವಿವಾಹ ಪದ್ಧತಿಯನ್ನು ರೂಪಿಸಿದರು. ಈ ವಿವಾಹದಲ್ಲಿ ಗಂಡು-ಹೆಣ್ಣಿನ ಒಪ್ಪಿಗೆ ಇದ್ದು ಸತಿ-ಪತಿಗಳು ಪರಸ್ಪರರನ್ನು ಸಮಾನರೆಂದು ತಿಳಿಯುತ್ತಾರೆ. ವಿವಾಹ ಕಡಿಮೆ ಕಾಲಾವಧಿಯಲ್ಲಿ ಸರಳ ರೀತಿಯಲ್ಲಿ ನಡೆಯುತ್ತದೆ. ಗಂಡು-ಹೆಣ್ಣು ಪರಸ್ಪರರಿಗೆ ಹಾರ ಹಾಕುತ್ತಾರೆ. ನಂತರ ಹುಡುಗ ತಾಳಿ ಕಟ್ಟುತ್ತಾನೆ.

ಇಲ್ಲಿ ವೃತ್ತಿಯಿಂದ ಪುರೋಹಿತವಾದವರು ಇರುವುದಿಲ್ಲ. ವಿವಾಹ ಮಾಡಿಸುವವರು ಯಾರು ಬೇಕಾದರೂ ಆಗಬಹುದು. ವಿವಾಹ ಮಾಡಿಸುವವರು ಕೆಲವು ವೇದ ಮಂತ್ರಗಳನ್ನು ಸರಳ ಕನ್ನಡದಲ್ಲಿ ಎಲ್ಲರಿಗೂ ತಿಳಿಯುಂತೆ ಹೇಳುತ್ತಾರೆ. ಮುಯ್ಯಿ ಉಡುಗೊರೆ ಏನೂ ಇರುವುದಿಲ್ಲ. ಸರಳವಾದ ಊಟ ಇರಬಹುದು ಅಥವಾ ಇಲ್ಲದಿರಬಹುದು. ವಿವಾಹಕ್ಕೆ ಬಂದಿರುವವರು ಮಧುಮಕ್ಕಳಿಗೆ ಶುಭಕೋರಿ ಹೊರಟುಹೋಗುತ್ತಾರೆ. ಈ ವಿವಾಹ ಕ್ರಮವನ್ನು ಯಾರು ಬೇಕಾದರೂ ಅನುಸರಿಸಬಹುದು. ಇಂದು ಹಲವರು ಈ ಸಂಪ್ರದಾಯಕ್ಕೆ ಹೆಚ್ಚಿನ ಆಸಕ್ತಿತೋರಿಸುತ್ತಿದ್ದಾರೆ.

ಹಿಂದೆ ವಿವಾಹಿತ ಮಹಿಳೆಯರು ವಿಶೇಷವಾಗಿ ಹೆರಿಗೆಯ ಸಂದರ್ಭದಲ್ಲಿ ಮರಣ ಹೊಂದುವ ಪ್ರಮಾಣ ಜಾಸ್ತಿ ಇತ್ತು. ಆ ಕುರಿತು ಮಿಷನರಿ ನೈಟಿಂಗೇಲ್ "Three of every four women die in those parts"(Mulavadi Nalur)[29] ಎಂದು ಬರೆಯುತ್ತಾನೆ. ಆದ್ದರಿಂದ ವಿಧುರರು ಮತ್ತೆ ಮದುವೆಯಾಗುತ್ತಿದ್ದರು. ಮೂರನೆ ಮದುವೆಯಾಗಬೇಕಿದ್ದ ವಿಧುರರು ಮೊದಲು ಎಕ್ಕೆಗಿಡಕ್ಕೆ ಧಾರೆ ಎರೆದು ವಿವಾಹವಾಗಿ ಆನಂತರ ಮೂರನೆಯ ಮದುವೆ ಮಾಡಿಕೊಳ್ಳುತ್ತಿದ್ದರು. ಇದರಿಂದ ಮೂರನೆ ಪತ್ನಿಗೆ ತೊಂದರೆಯಾಗುವುದಿಲ್ಲವೆಂಬ ನಂಬಿಕೆ ಇತ್ತು.

ವಿಧವೆಯಾದ ಸ್ತ್ರೀಯನ್ನು ಪುನರ್ವಿವಾಹವಾಗುವ ಪದ್ಧತಿ ಈ ಸಮುದಾಯದಲ್ಲಿತ್ತು. ಇದಕ್ಕೆ 'ಉಡ್ಕಿಮದುವೆ' ಅಥವಾ 'ಸೀರುಡಿಕೆ' ಎಂದು ಹೆಸರು. ಕುವೆಂಪು ಅವರ 'ಮಲೆಗಳಲ್ಲಿ ಮದುಮಗಳು' ಕಾಂದಬರಿಯಲ್ಲಿ ಹೂವಳ್ಳಿಯ ವೆಂಕಟಣ್ಣ, ವಿಧವೆ ನಾಗಕ್ಕನನ್ನು ವಿವಾಹವಾಗುವುದಕ್ಕೆ ಸೀರುಡಿಕೆ ಎಂದು ಕರೆಯಲಾಗಿದೆ. 'ಈಸ್ಟ್ ಇಂಡಿಯಾ ಕಂಪೆನಿ' ಭಾರತದಲ್ಲಿ ಆಡಳಿತ ಮಾಡುತ್ತಿದ್ದಾಗ ೧೮೫೬ರ ಕಾಯಿದೆ ಪ್ರಕಾರ ವಿಧವಾ ಪುನರ್ವಿವಾಹಕ್ಕೆ ಮಾನ್ಯತೆ ನೀಡಿತು. ವಿಧವಾಪುನರ್ವಿವಾಹಕ್ಕೆ ಚಳುವಳಿಗಳೇ ಆರಂಭವಾಗಿದ್ದವು ಆಗ. ಆದರೆ, ನಾಮಧಾರಿ ಒಕ್ಕಲಿಗರಲ್ಲಿ ಉಡ್ಕಿಮದುವೆ ಮೊದಲಿಂದಲೂ ಇದ್ದು ವಿಧವೆಯರ ಬಗ್ಗೆ ಅವರ ಸಮಾಜದ ಮಾನವೀಯ ಧೋರಣೆಯನ್ನು ತೋರಿಸುತ್ತದೆ.

ಹಿಂದೆ ಈ ಸಮುದಾಯದಲ್ಲಿ ಆರ್ಥಿಕವಾಗಿ ಚೆನ್ನಾಗಿದ್ದು ಪುನರ್ವಿವಾಹ ಬಯಸಿದ್ದ ವಿಧುರರಿಗೆ ಸಮಾನರಾದವರು ಹೆಣ್ಣು ಕೊಡುತ್ತಿರಲಿಲ್ಲ. ಆಗ ಅವರು ಸಾಮಾನ್ಯ ಬಡವರ ಮನೆಯ ಹೆಣ್ಣನ್ನು ತಂದು ವಿವಾಹವಾಗುವ ಸಂದರ್ಭದಲ್ಲಿ 'ವಧು ದಕ್ಷಿಣೆ'ಯನ್ನು ಕೊಡಬೇಕಿತ್ತು. ಇದಕ್ಕೆ 'ತೆರ' ಎಂದು ಹೆಸರು. 'ಕಾನೂರು ಹೆಗ್ಗಡಿತಿ' ಕಾದಂಬರಿಯ ನಾಯಕಿ ಸುಬ್ಬಮ್ಮನ ವಿವಾಹ ಪ್ರಸಂಗವನ್ನು ಇಲ್ಲಿ ನೆನೆಯಬಹುದು.

**ಜಕಣಿ ಮಾಡುವುದು**

ಇದು ನಾಮಧಾರಿ ಒಕ್ಕಲಿಗರಲ್ಲಿ ಒಂದು ವಿಶೇಷ ಆಚರಣೆ. ಇರಲ್ಲಿರುವ ಒಂದು ವಿಶೇಷ ನಂಬಿಕೆಯೆಂದರೆ ರಣವನ್ನು ಜಕಣಿ ಮಾಡುವುದು. ಅವಿವಾಹಿತರು ಸತ್ತರೆ ಅವರಿಗೆ ಮೋಕ್ಷ ದೊರಕುವುದಿಲ್ಲವೆಂದು ನಂಬಿಕೆ. ಅವಿವಾಹಿತರು ಸತ್ತರೆ ಅವರು ರಣವಾಗಿ ಸಂಚರಿಸುತ್ತಾರೆ. ಆದ್ದರಿಂದ ಹಾಗೆ ಸತ್ತ ಗಂಡು ಅಥವಾ ಹೆಣ್ಣನ್ನು ಅಣಕು ವಿವಾಹದ ಆಚರಣೆಯ ಮೂಲಕ ಒಂದು ಗೂಡಿಸುವುದು. (Mock Marriage) ಸತ್ತಿರುವ ಅವಿವಾಹಿತ ಹುಡುಗನ ಕಡೆಯವರು, ಸತ್ತಿರುವ ಅವಿವಾಹಿತ ಹುಡುಗಿಯ ಮನೆಯವರನ್ನು ಹುಡುಕಿ ಅವರ ಒಪ್ಪಿಗೆಯೊಂದಿಗೆ ಅವಿವಾಹಿತರಾಗಿ ಸತ್ತವರಿಗೆ ಅಣಕು ವಿವಾಹ ಮಾಡಿಸುವುದನ್ನು ಜಕಣಿ ಮಾಡಿಸುವುದೆಂದು ಕರೆಯುತ್ತಾರೆ. ಇಲ್ಲಿ ಗಂಡು-ಹೆಣ್ಣಿಗೆ ಬದಲಾಗಿ ಎರಡು ಮರಗಳನ್ನು ಅಥವಾ ಎರಡು ಕೊಂಬೆಗಳನ್ನು ಆಯ್ದುಕೊಳ್ಳಬಹುದು.

ಚೀನಾ ದೇಶದಲ್ಲಿ ಅವಿವಾಹಿತರು ಸತ್ತರೆ, ತಕ್ಷಣ ಹಾಗೆ ಸತ್ತಿರುವ (ಗಂಡು ಅಥವಾ ಹೆಣ್ಣು) ಅವಿವಾಹಿತರನ್ನು ಹುಡುಕಿ ಶವಗಳಿಗೇ ಮದುವೆ ಮಾಡಿಸುವ ಒಂದು ಪದ್ಧತಿ ಇದೆಯಂತೆ. ಆದರೆ ಜಕಣಿ ಮಾಡಿಸುವುದು ಸತ್ತು ರಣವಾಗಿರುವವರಿಗೆ ಎಷ್ಟೋ ದಿನಗಳ, ವರುಷಗಳ ನಂತರವೂ ಇದು ಆಗಬಹುದು.

**ಹಬ್ಬ ಹರಿದಿನಗಳ ಧಾರ್ಮಿಕ ಆಚರಣೆಗಳು**

ನಾಮಧಾರಿ ಒಕ್ಕಲಿಗರು ತಿರುಪತಿಯ ವೆಂಕಟರಮಣ, ಮೇಲುಕೋಟೆಯ ಚಲುವನಾರಾಯಣ ಮತ್ತು ನರಸಿಂಹಸ್ವಾಮಿಗಳನ್ನು ಮನೆದೇವರನ್ನಾಗಿ ಹೊಂದಿದ್ದರೂ ತಿರುಪತಿಯ ವೆಂಕಟರಮಣನ ಒಕ್ಕಲುಗಳೇ ಜಾಸ್ತಿ. ಇವರು ಶ್ರೀ ವೈಷ್ಣವ ಸಂಪ್ರದಾಯವನ್ನು ಅನುಸರಿಸಿದ್ದರಿಂದ 'ಶ್ರೀ ತುಳಸಿ' ಇವರ ಧಾರ್ಮಿಕ-ಆಧ್ಯಾತ್ಮಿಕ ಜೀವನದ ಒಂದು ಅವಿಭಾಜ್ಯ ಅಂಗವಾಗಿದೆ. ಅವರುಗಳ ಮನೆಯ ಮುಂದೆ ದೊಡ್ಡ ಮತ್ತು ಚೆಂದದ ವೃಂದಾವನಗಳನ್ನು ಈಗಲೂ ನೋಡಬಹುದು. ಗ್ರೀಕರಿಗೆ ಅಲೀವ್ ವೃಕ್ಷ (ಜೀವವೃಕ್ಷ) ಹೇಗೊ, ಹಾಗೆ ನಾಮಧಾರಿಗಳಿಗೆ ತುಳಸಿ ಅಂದರೆ ಉತ್ಪ್ರೇಕ್ಷೆಯ ಮಾತಾಗದು.

**ಶ್ರಾವಣ ಶನಿವಾರ**

ನಾಮಧಾರಿ ಒಕ್ಕಲಿಗರಲ್ಲಿ ಶ್ರಾವಣ ಶನಿವಾರ ಆಚರಣೆ ವಿಶೇಷವಾಗಿದೆ. ಆಗ ಅವರು ಇಡೀ ತಿಂಗಳು ಮನೆಯಲ್ಲಿ ಮಾಂಸಾಹಾರವನ್ನು ಮಾಡುವುದಿಲ್ಲ. ಶನಿವಾರ ಇಡೀ ಮನೆಯನ್ನು ಸಗಣಿಯಿಂದ ಸಾರಿಸಿ ಚೊಕ್ಕಟವಾಗಿಡುತ್ತಾರೆ. ಎಲ್ಲರೂ ಸ್ನಾನ ಮಾಡುತ್ತಾರೆ. ಸಾಮಾನ್ಯವಾಗಿ ಆಗ ವಾರಕ್ಕೆ ಒಂದೇ ಸ್ನಾನ. ಮಲೆನಾಡಿನ ಶೈವ ಒಕ್ಕಲಿಗರಲ್ಲಿ ಸೋಮವಾರವನ್ನು ಹಾಗೆ ಆಚರಿಸುವ ಪದ್ಧತಿ ಇತ್ತು. ತಿರುಪತಿ ಯಾತ್ರೆಗೆ ಹೋಗಿಬಂದವರು ಒಪ್ಪೊತ್ತು ಊಟ ಮಾಡುತ್ತಿದ್ದರು. 'ಅವರಿಗೆ ಅಡಿಗೆ ಊಟ ಮಾಡಲು ಒಂದು ಪ್ರತ್ಯೇಕ ಕೋಣೆ ಇರುತ್ತಿತ್ತು. ಅದಕ್ಕೆ 'ಶನಿವಾರದ ಒಳಗು' ಎಂದು ಹೆಸರು.' ಅವರಿಗೆ ಅಡಿಗೆ ಮಾಡುವವರು ಮಡಿಯಿಂದ ಮಾಡಬೇಕಿತ್ತು.

**ಹರಿಸೇವೆ**

ನಾಮಧಾರಿಗಳು ತಿರುಪತಿ ಯಾತ್ರೆಗೆ ಹೋಗಿ ಬಂದು, ಅಲ್ಲಿಂದ ತಂದ ತೀರ್ಥ ಪ್ರಸಾದವನ್ನು ನೆಂಟರಿಷ್ಟರಿಗೆ ಹಂಚುತ್ತಿದ್ದ ಧಾರ್ಮಿಕ ಆಚರಣೆಗೆ ಹರಿಸೇವೆಯೆಂದು ಹೆಸರು. ಆಸಕ್ತಿಯ ವಿಷಯವೆಂದರೆ ಘಟ್ಟದ ಕೆಳಗಿರುವ ಉಡುಪಿಯ ಕೃಷ್ಣನಿಗೆ ಇವರು ಯಾತ್ರೆ ಹೋದಂತೆ ಕಾಣುವುದಿಲ್ಲ. ನಾಮಧಾರಿಗಳು ಶ್ರೀ ವೈಷ್ಣವ ಸಂಪ್ರದಾಯಕ್ಕೆ

ಬದ್ಧರಾಗಿದ್ದವರು, ಹಾಗಾಗಿ ಉಡುಪಿಯ ಮಾಧ್ವ ಸಂಪ್ರದಾಯದ ಕೃಷ್ಣದೇವಾಲಯಕ್ಕೆ ನಡೆದುಕೊಂಡಿಲ್ಲದಿರಬಹುದೆ ? ಹಿಂದೆ ತಿರುಪತಿ ಯಾತ್ರೆಗೆ ನಡೆದೇ ಹೋಗುತ್ತಿದ್ದರು. ಯಾತ್ರೆಗೆ ಹೋದಾಗ ಮನೆಯಲ್ಲಿ ನಂದಾದೀಪವನ್ನು ಹಚ್ಚಿಡುತ್ತಿದ್ದರು. ಅದು ಆರಬಾರದೆಂಬ ಪ್ರತೀತಿ. ಯಾತ್ರೆಗೆ ಹೋದವರು ಹಿಂದಿರುಗಿದ ಮೇಲೆ ನೆಂಟರಿಷ್ಟರಿಗೆ ಹೇಳಿ ಕಳುಹಿಸಿ ದಾಸಯ್ಯನಿಂದ ಮನೆಯನ್ನು ಶುದ್ಧಗೊಳಿಸಿ, ತುಳಸಿಪೂಜೆ ಮಾಡಿ, ಪ್ರಸಾದವನ್ನು ಹಂಚಿ ಹಬ್ಬದ ಊಟವನ್ನು ಮಾಡುತ್ತಿದ್ದರು. ಹರಿ-ಹರರಿಗೆ ಭೇದವನ್ನು ಮಾಡದ ಸ್ಮಾರ್ತ ಸಂಪ್ರದಾಯದ ಹೊಯ್ಸಳ ಕರ್ನಾಟಕ ಬ್ರಾಹ್ಮಣ ಗುಂಪಿಗೆ ಸೇರಿದ ಕೆಲವರು ತಿರುಪತಿಯ ವೆಂಕಟರಮಣನನ್ನು ಮನೆದೇವರನ್ನಾಗಿ ಮಾಡಿಕೊಂಡಿದ್ದಾರೆ. ಶ್ರಾವಣ ಮಾಸದಲ್ಲಿ ಯಾವುದಾದರೂ ಒಂದು ಶನಿವಾರ ದಾಸಯ್ಯನನ್ನು ಮನೆಗೆ ಬರಮಾಡಿಕೊಂಡು (ದಾಸಯ್ಯ ಅಬ್ರಾಹ್ಮಣ) ಊಟೋಪಚಾರಗಳನ್ನು ಮಾಡಿ ಆತನನ್ನು ಗೌರವದಿಂದ ಕಂಡು ಕಳುಹಿಸುತ್ತಾರೆ. ಈ ಆಚರಣೆಗೆ "ದಾಸರಿಗಿಕ್ಕುವುದು" ಎನ್ನುತ್ತಾರೆ. ಈ ಆಚರಣೆಗೂ ತಿರುಪತಿ ಯಾತ್ರೆಗೂ ಸಂಬಂಧವಿದ್ದಂತೆ ಇಲ್ಲ. ಈ ಆಚರಣೆಯ ಸಾಮಾಜಿಕ ಧಾರ್ಮಿಕ ಹಿನ್ನೆಲೆ ಏನೆಂಬುದು ಸಂಶೋಧನೆಗಳಿಂದ ತಿಳಿಯಬೇಕಾಗಿದೆ.

ಏನೇ ಆದರೂ ನಾಮಧಾರಿಗಳಲ್ಲಿರುವ 'ಹರಿಸೇವೆ' ಕ್ರಮವನ್ನು ನೋಡಿದರೆ, ಬ್ರಾಹ್ಮಣರಲ್ಲಿ ಕಾಶಿಗೆ ಹೋಗಿಬಂದವರು 'ಗಂಗಾಸಂತರ್ಪಣೆ' ಯನ್ನು ಮಾಡುವ ಕ್ರಮವನ್ನು ಹೋಲುತ್ತದೆ. ಸುಪ್ರಸಿದ್ಧ ಸಮಾಜಶಾಸ್ತ್ರಜ್ಞ ಡಾ. ಎಂ.ಎನ್. ಶ್ರೀನಿವಾಸ್ ಅವರು 'ಸಂಸ್ಕೃತೀಕರಣ' ದ ಪರಿಕಲ್ಪನೆಯನ್ನು ನೀಡಿರುತ್ತಾರೆ. ಕೆಳಸ್ತರದವರು ಮೇಲ್‌ಸ್ತರದವರನ್ನು ಸಾಂಸ್ಕೃತಿಕವಾಗಿ ಅನುಕರಿಸುವುದಕ್ಕೆ 'ಸಂಸ್ಕೃತೀಕರಣ'ವೆಂದು ಹೆಸರು. ಇಲ್ಲಿ ನಾಮಧಾರೀ ಒಕ್ಕಲಿಗರು ಸಂಸ್ಕೃತೀಕರಣಕ್ಕೆ ಒಳಗಾದಂತೆ ಕಂಡು ಬಂದರೂ ೧೯೨೦ಕ್ಕೆ ಮೊದಲು ಶ್ರೀ ವೈಷ್ಣವ ಮಠದ ಧಾರ್ಮಿಕ ನಿರ್ದೇಶನಕ್ಕೆ ನೇರವಾಗಿ ಒಳಗಾಗಿದ್ದಾರೆಂಬುದು ಗಮನಾರ್ಹ.

**ಪಿತೃಪಕ್ಷ:** ನಾಮಧಾರೀಗೌಡರಲ್ಲಿ ಪಿತೃಪಕ್ಷದ ಆಚರಣೆ ತುಂಬಾ ಜೋರು ಪಿತೃಪಕ್ಷವನ್ನು ಭಾದ್ರಪದ ಬಹುಳ ಹದಿನೈದು ದಿನಗಳಲ್ಲಿ ಮಾತ್ರ ಆಚರಿಸುತ್ತಾರೆ. ಆ ಸಂದರ್ಭದಲ್ಲಿ ಹತ್ತಿರದ ನೆಂಟರಿಸ್ಟರು, ಹೆಣ್ಣುಮಕ್ಕಳು-ಅಳಿಯಂದಿರೆಲ್ಲಾ ಬಂದಿರುತ್ತಾರೆ. ಆ ದಿನ ರಾತ್ರಿ ಪಿತೃಗಳಿಗೆಲ್ಲಾ ಎಡೆ ಹಾಕುತ್ತಾರೆ. ಎಡೆ ಹಾಕಿದಾಗಲೆಲ್ಲಾ ಒಂದು ಎಡೆಯನ್ನು ಹೊರಗಡೆ ಕಾಗೆಗೆ ಇಡುತ್ತಾರೆ.

**ಜೈನೆಡೆ:** ನಾಮಧಾರಿ ಒಕ್ಕಲಿಗರಲ್ಲಿ ಈಗಲೂ ಇರುವ ಒಂದು ಅತೀಮುಖ್ಯ ಆಚರಣೆಯೆಂದರೆ 'ಜೈನೆಡೆ'. ಜೈನೆಡೆಯೆಂದು ಸಸ್ಯಹಾರಿ ಎಡೆಯನ್ನು ತೆಗೆದಿಡುವುದು. ಈ ಆಚರಣೆ ಇವರು ಹಿಂದೆಜೈನರಾಗಿದ್ದರೆಂಬುದರ ಕುರುಹಾಗಿರುವುದರ ಜೊತೆಗೆ ಸಸ್ಯಾಹಾರಿಗಳಾಗಿದ್ದ ಇವರ ಪೂರ್ವಿಕರುಗಳಿಗಾಗಿ ಸಸ್ಯಾಹಾರಿ ಎಡೆಯನ್ನು ಇಡುವುದು ಶ್ರೇಯಸ್ಕರವೆಂದು ನಂಬಿದಂತಿದೆ.

**ಹೊಲಸಿನ ಕೋಣೆ**

ನಾಮಧಾರಿ ಒಕ್ಕಲಿಗರ ಒಂದು ವಿಶೇಷವೆಂದರೆ ಮಾಂಸದ ಅಡಿಗೆಯನ್ನು ಮಾಡಲು ಹಿಂದೆ ಬೇರೆ ಒಂದು ಕೋಣೆಯನ್ನೇ ಮಾಡಿರುತ್ತಿದ್ದರು. ಪ್ರತಿನಿತ್ಯ ಮಾಡುವ ಅಡಿಗೆ ಒಲೆಯಲ್ಲಿ ಮಾಂಸದ ಅಡಿಗೆಯನ್ನು ಮಾಡುತ್ತಿರಲಿಲ್ಲ. ಮಾಂಸದ ಅಡುಗೆ ಮಾಡುವ ಒಲೆಗೆ ಹೊಲಸಿನ ಒಲೆ ಮತ್ತು ಆ ಕೋಣೆಗೆ ಹೊಲಸಿನ

ಕೋಣೆ ಎಂದು ಹೆಸರು. ಮಾಂಸದ ಪದಾರ್ಥ ತಯಾರು ಮಾಡುವ ಪಾತ್ರಗಳೇ ಬೇರೆ. ಅವುಗಳನ್ನು ಆ ಕೋಣೆಯ ಒಳಗೆ ಇಡುತ್ತಿದ್ದರು. ಮಾಂಸಕ್ಕೆ ಹೊಲಸು ಎಂದು ಹೇಳುತ್ತಿದ್ದುದು ಗಮನ ಸೆಳೆಯುತ್ತದೆ.

ಹಿಂದೆ ಜೈನರಾಗಿದ್ದು ಅನಂತರ ಶ್ರೀ ವೈಷ್ಣವ ಪ್ರಭಾವಕ್ಕೆ ಒಳಗಾಗಿದ್ದ ಇವರು ಸಸ್ಯಹಾರಿಗಳಾಗಿದ್ದು, ಕಾಲಾನುಕ್ರಮದಲ್ಲಿ ಆಯ್ಕೆಯಿಂದಲೊ ಅಥವಾ ಅನಿವಾರ್ಯತೆಯಿಂದಲೊ ಮಾಂಸಾಹಾರ ಪದ್ಧತಿಯನ್ನು ಅಳವಡಿಸಿಕೊಂಡಾಗ ಮಾಂಸವನ್ನು 'ಹೊಲಸು' ಎಂದು ಕರೆಯಲು ಪ್ರಾರಂಭಿಸಿರಬಹುದೆ ಎನ್ನುವ ಅನುಮಾನ ಬರುತ್ತದೆ. ಮಾಂಸ ತಿನ್ನದವರು ಮಾಂಸಕ್ಕೆ 'ಹೊಲಸು' ಎಂದು ಕರೆದರೆ ವಿಶೇಷವೆನಿಸುವುದಿಲ್ಲ. ಮಾಂಸ ಭಕ್ಷಣೆಮಾಡಿಯೂ ಮಾಂಸಕ್ಕೆ 'ಹೊಲಸು' ಎನ್ನುತ್ತಿದ್ದುದು ನಾಮಧಾರಿ ಒಕ್ಕಲಿಗರು ಹಿಂದೆ ಯಾವುದೊ ಒಂದು ಹಂತದಲ್ಲಿ ಸಸ್ಯಾಹಾರಿಗಳಾಗಿದ್ದಿರಬಹುದೆ ಎಂಬ ಶಂಕೆಗೆ ಪುಷ್ಟಿಕೊಡುತ್ತದೆ.

ನಾಮಧಾರಿಗಳು ಗೌರಿ-ಗಣೇಶ, ದೀಪಾವಳಿ, ಯುಗಾದಿ ಮೊದಲಾದ ಹಬ್ಬಗಳನ್ನೆಲ್ಲಾ ಆಚರಿಸುತ್ತಾರೆ. ದೀಪಾವಳಿ ಹಬ್ಬದ ರಾತ್ರಿ ಅವರು ಗದ್ದೆ-ತೋಟಗಳಲ್ಲಿ ದೀಪಗಳನ್ನು ಹಚ್ಚಿಡುತ್ತಾರೆ. ಇದು ನೋಡಲು ಅತ್ಯಂತ ಮನೋಹರವಾದ ದೃಶ್ಯ. ಯುಗಾದಿ ಹಬ್ಬದ ಸಂದರ್ಭದಲ್ಲಿ ಬೇವು-ಬೆಲ್ಲ ತಿನ್ನುವುದರ ಜೊತೆಗೆ ''ಪೂಜೆ ಮುಗಿದ ಮೇಲೆ ಎಲ್ಲರೂ ಹಣೆಗೆ ಕಾಡು ಗೇರನ್ನು ಹಚ್ಚಿಕೊಳ್ಳುತ್ತಾರೆ'' ಇದು ಹಣೆಯ ಮಧ್ಯೆ ಒಂದು ಕಪ್ಪು ಬೊಟ್ಟಿನಂತಿರುತ್ತದೆ. ಈ ಆಚರಣೆಯ ಹಿನ್ನಲೆಯೇನೆಂದು ಇನ್ನೂ ಸ್ಪಷ್ಟವಾಗಿ ತಿಳಿಯಬೇಕಾಗಿದೆ.

**ಭೂಮಿ ಹುಣ್ಣಿಮೆ ಹಬ್ಬ**

ಅನ್ನಕೊಡುವ ಭೂಮಿತಾಯಿಯನ್ನು ರೈತರು ಸಾವಿರಾರು ವರ್ಷಗಳಿಂದ ಆರಾಧಿಸುತ್ತಾ ಬಂದಿದ್ದಾರೆ. 'ಭೂಮಿ ಹುಣ್ಣಿಮೆ' ಮಲೆನಾಡಿನ ನಾಮಧಾರಿ ಒಕ್ಕಲಿಗರಿಗೆ ಒಂದು ಸಂಭ್ರಮದ ಹಬ್ಬ. ''ಈ ಹಬ್ಬ ಅಶ್ವೀಜ ಶುದ್ಧ ಪೂರ್ಣಿಮೆಯ ದಿನ ಬೆಳಗಿನ ಜಾವ ಐದು ಗಂಟೆಯ ಸಮಯಕ್ಕೆ ನಡೆಯುತ್ತದೆ. ತಮ್ಮ ತಮ್ಮ ಬತ್ತದ ಬೆಳೆ ಹಾಕಿದ ಸಾಗುವಳಿ ಜಮೀನಿನಲ್ಲಿ ಎಡೆ ಇಟ್ಟು ತಮ್ಮ ತಮ್ಮ ಜಮೀನಿನಲ್ಲಿ ಪೂಜೆ ಮಾಡುತ್ತಾರೆ. ಇದಕ್ಕೆ 'ಬೈಕೆ' (ಬಯಕೆ) ಹಾಕುವುದೆಂದು ಹೆಸರು. ಆಗ ಬತ್ತದ ಬೆಳೆ ಹೊಡೆಯಾಗಿರುತ್ತದೆ. ಕದರು ಹೊರಬರಲು ಸಿದ್ಧವಾಗಿರತ್ತದೆ. ಆದ್ದರಿಂದ ಅದು ಗರ್ಭಿಣಿ ಎಂಬ ಭಾವನೆ. ಈ ಭಾವನೆಯಿಂದಲೇ 'ಬೈಕೆ' ಹಾಕುವುದೆಂದು ಹೇಳುವುದು. ಈ ಬೈಕೆ ಹಾಕುವುದಕ್ಕೆ ಮಾಡುವ ಅಡಿಗೆಯ ವಿಶೇಷವೆಂದರೆ ನೂರಾ ಒಂದು ಜಾತಿಯ ಮರಗಿಡಗಳ ಸೊಪ್ಪನ್ನು ಸೇರಿಸಿ ಪಲ್ಯ ಮಾಡುತ್ತಾರೆ ಇದಕ್ಕೆ 'ಬೆರಕೆ ಸೊಪ್ಪಿನ ಪಲ್ಯ'ವೆಂದು ಹೆಸರು ಈ ರೀತಿ ನೂರಾ ಒಂದು ಗಿಡ-ಮರದ ಸೊಪ್ಪು ತಂದು ಇದಕ್ಕೆ ಅಮ್ಮಟೆಕಾಯನ್ನು ಸೇರಿಸಿ ಪಲ್ಯ (ಪದಾರ್ಥ) ಮಾಡುತ್ತಾರೆ. ಇಲ್ಲಿ ಗಮನಿಸಬೇಕಾದ ಅಂಶವೆಂದರೆ ಮಲೆನಾಡಿನ ನಾಮಧಾರಿ ಒಕ್ಕಲಿಗರು ತಿನ್ನಬಹುದಾದ ನೂರಾ ಒಂದು ಸಸ್ಯಗಳನ್ನು ಗುರುತಿಸಿರುವುದು. ಇದು ಅವರ ಪರಿಸರ ಪ್ರಜ್ಞೆಯನ್ನೂ ತೋರಿಸುತ್ತದೆ. ಭೂಮಿತಾಯಿಗೆ ನೂರಾ ಒಂದು ಸೊಪ್ಪಿನ ಬೆರಕೆ ಪಲ್ಯವನ್ನು ಅರ್ಪಿಸುವ ಉದ್ದೇಶ ಪ್ರಾಯಶಃ ಹುಟ್ಟುವ ಮಕ್ಕಳು-ಮರಿಗಳಿಗೆ ಶತಾಯುಷ್ಯವನ್ನು ಕೊಟ್ಟುಹರಸೆಂಬ ಸಂಕೇತದ ಆಚರಣೆಯಿರಬಹುದು.

ಪೂಜೆಮಾಡಿದ ಮೇಲೆ ಎಡೆಯನ್ನೆಲ್ಲಾ ಚೆಲ್ಲುವಾಗ ಅಚ್ಚಂಬಲಿ, ಹಾಲಂಬಲಿ ಬಣ್ಣದ ಸೌತೆಕಾಯಿ, ಬೇಲಿಮೇಲಿನ ದಾರಹೀರೆಕಾಯಿ, ನೂರಾಒಂದು ಕುಡಿ, ಭೂಮಿತಾಯಿಗೆ ಬೈಕೆ ಬೈಕೆ ಎಂದು ಹೇಳುತ್ತಾರೆ.

**ಅಂಟಿಕೆ-ಪಂಟಿಕೆ**

ಅಂಟಿಕೆ-ಪಂಟಿಕೆ ಮಲೆನಾಡಿನ ಜಾನಪದ ಸಂಪ್ರದಾಯ. ದೀಪಾವಳಿಹಬ್ಬದ ಅಮವಾಸ್ಯೆ, ಪಾಡ್ಯ, ಬಿದಿಗೆ ಮತ್ತು ತದಿಗೆ ಈ ನಾಲ್ಕೂ ದಿನಗಳು ಅಂಟಿಕೆ-ಪಂಟಿಕೆ ಆಚರಣೆ ನಡೆಯುತ್ತದೆ. ರಾತ್ರಿ ಇಡೀ ಹಾಡುತ್ತಾ ಮನೆಯಿಂದ ಮನೆಗೆ ಜ್ಯೋತಿಯನ್ನು ತೆಗೆದುಕೊಂಡು ತಂಡಗಳಲ್ಲಿ ಹೋಗುವ ಸಂಪ್ರದಾಯವೇ ಅಂಟಿಕೆ-ಪಂಟಿಕೆ. ಅಂಟಿಕೆ-ಪಂಟಿಕೆ ಆಚರಣೆಯಲ್ಲಿ ಬ್ರಾಹ್ಮಣರು ಮತ್ತು ದಲಿತರನ್ನು ಹೊರತು ಪಡಿಸಿ (ತುಂಬಾ ಹಿಂದೆ ಬ್ರಾಹ್ಮಣರು ಉಳಿಮೆ ಮಾಡುತ್ತಿರಲಿಲ್ಲ ಹಾಗೂ ದಲಿತರಿಗೆ ಭೂಮಿಯ ಒಡೆತನ ಇರಲಿಲ್ಲ) ಉಳಿದ ಮಲೆನಾಡಿನ ವ್ಯವಸಾಯಗಾರರೆಲ್ಲ ಅಂಟಿಕೆ-ಪಂಟಿಕೆಯಲ್ಲಿ ಸೇರಿರುತ್ತಾರೆ. ಅವರಲ್ಲಿ ನಾಮಧಾರಿ ಒಕ್ಕಲಿಗರೂ ಪ್ರಮುಖ ಪಾತ್ರ ವಹಿಸುತ್ತಾರೆ.

ಅಂಟಿಕೆ-ಪಂಟಿಕೆ ಜಾನಪದ ಹಾಡುಗಳು ಸೂಕ್ಷ್ಮವಾಗಿ ಹಿಂದಿನ ೨೫೦ ರಿಂದ ೩೦೦ ವರ್ಷಗಳ ಇತಿಹಾಸವನ್ನು (ಮಲೆನಾಡಿನ) ತಿಳಿಸುತ್ತವೆ. ಈ ಜಾನಪದ ಹಾಡುಗಳ ಅತ್ಯಂತ ಗಮನಾರ್ಹ ಅಂಶವೆಂದರೆ ಅವು ಸಾಮಾಜಿಕ ಸಾಮರಸ್ಯಕ್ಕೆ ಒತ್ತುಕೊಟ್ಟು ಸಾಮಾನ್ಯವಾಗಿ ಆ ಪರಿಸರದ ಎಲ್ಲಾ ಜಾತಿಯ ಜನಗಳನ್ನೂ ಕುರಿತಂತೆ ರಚಿತವಾಗಿವೆ.

ಜ್ಯೋತಿಯನ್ನು ದೇವರಗುಡಿಯ ಹತ್ತಿರ ಅಥವಾ ಹಾಲು ಬರುವ ಮರದ ಹತ್ತಿರ ಹೊತ್ತಿಸಿಕೊಳ್ಳುತ್ತಾರೆ. ಅಂಟಿಕೆ-ಪಂಟಿಕೆ ತಂಡದಲ್ಲಿ ಇಬ್ಬರು ಹಾಡಿದರೆ ಮತ್ತಿಬ್ಬರು ಹಿಮ್ಮೇಳ ಹಾಡುತ್ತಾರೆ. ರಾತ್ರಿ ಮನೆ ಮನೆಗೆ ಹೋಗಿ ಹಾಡಿ ಬಾಗಿಲು ತೆರೆಸಿ, ಜ್ಯೋತಿಯನ್ನು ಮುತ್ತೈದೆಯರಿಂದ ಪೂಜಿಸಿ, ಹರಸಿ ಮುಂದೆ ಹೋಗುತ್ತಾರೆ. ಪ್ರತಿ ಮನೆಯಲ್ಲೂ ಅಕ್ಕಿ, ಬತ್ತ, ಕಾಣಿಕೆ ಕೊಟ್ಟದ್ದನ್ನು ಸಂಗ್ರಹಿಸುತ್ತಾರೆ.

ಜ್ಯೋತಿಯನ್ನು ಕುರಿತು ಹಾಡುವ ಪದ್ಯದ ಒಂದು ಭಾಗ ಹೀಗಿದೆ:

''ಮಣ್ಣಲ್ಲಿ ಹುಟ್ಟೋಳೆ ಮಣ್ಣಲ್ಲಿ ಬೆಳೆಯೋಳೆ
ಮಣ್ಣಲ್ಲಿ ಕಣ್ಣಾ ಬಿಡುವೊಳೆ-ಜಗಜ್ಯೋತಿ
ಚೊಕ್ಕದಿಂದುರಿಯೆ ನಮಗಾಗಿ''

ನಾಮಧಾರಿಗಳಿಗೆ ತಿರುಪತಿ ಯಾತ್ರೆ ತುಂಬಾ ಮುಖ್ಯವಾಗಿತ್ತು. ಅದಕ್ಕೆ ಸಂಬಂಧಿಸಿದಂತೆ ತಿರುವತಿ ಯಾತ್ರೆ ಪದ ಹಾಡಿನಲ್ಲಿ ಒಂದು ಸಂದರ್ಭ ಹೀಗದೆ.

''ಮಕ್ಕಳೂ ಜೋಕೆ ಮನೆ ಜೋಕೆ ತೊಳಸಮ್ಮ
ಎಪ್ಪತ್ತು ಗಾವುದಾದೊಡೆಯಾನ
ಎಪ್ಪತ್ತು ಗಾವುದಾದೊಡೆಯ ತಿಮ್ಮಪ್ಪನಾ
ಯಾತ್ರೆಮಾಡಿ ಮನೆಗೆ ಬರುತ್ತೇವೆ''

ಪ್ರೊಫೆಸರ್ ಜೆ.ಕೆ. ರಮೇಶ್ ಅವರು ಸಂಪಾದಿಸಿರುವ 'ನೀತ್ಯುಳ ಜ್ಯೋತಿ ನಡೆ ಮುಂದೆ' ಅಂಟಿಕೆ ಪಂಟಿಕೆ ಪದಗಳ ಸಂಗ್ರಹದಲ್ಲಿ 'ಇತ್ರೆ ಗಂಡಸರ ಮೇಲೆ ಜನ ಬೆಡಗು' ಮತ್ತು 'ಇತ್ರೆ ಹೆಂಗಸರ ಮೇಲೆ ಜನ ಬೆಡಗು' (ಪುಟಗಳು ೪೯,೫೦,೫೧) ಹಾಡುಗಳಲ್ಲಿ ಬರುವ 'ರಾಯಪಟ್ಟಣ', 'ಕೆಂಚ ಪಟ್ಟಣ' ಮತ್ತು 'ದುರ್ಗಾ ಪಟ್ಟಣ'

ಎಂಬ ಉಲ್ಲೇಖಗಳು ಚಿಕ್ಕಮಗಳೂರು ಜಿಲ್ಲೆಯ ಸಖರಾಯಪಟ್ಟಣಕ್ಕೆ ಸಂಬಂಧಿಸಿದ ಹೆಸರುಗಳು. ಸಖರಾಯ ಪಟ್ಟಣದ ರಂಗನಾಥಸ್ವಾಮಿಗೆ ಜನವರಿ ತಿಂಗಳ ಸಂಕ್ರಮಣದಂದು ನಡೆಯುವ ಜಾತ್ರೆ-ರಥೋತ್ಸವಕ್ಕೆ ಮಲೆನಾಡಿನ ಬೇರೆ ಬೇರೆ ಭಾಗಗಳಿಂದ ಭಕ್ತರು ಬರುತ್ತಾರೆ. ಕೆಳದಿ ನಾಯಕರ ಕಾಲದಲ್ಲಿ ಸಖರಾಯ ಪಟ್ಟಣ ಒಂದು ಮುಖ್ಯ ಆಡಳಿತ ಕೇಂದ್ರವಾಗಿತ್ತು. ಆದ್ದರಿಂದ ಮಲೆನಾಡಿನ ತೀರ್ಥಹಳ್ಳಿ ಸುತ್ತಮುತ್ತಲಿನ ನಾಮಧಾರಿ ಒಕ್ಕಲಿಗರೂ ಸಖರಾಯ ಪಟ್ಟಣದ ರಂಗನಾಥನಿಗೆ ಒಕ್ಕಲಾಗಿದ್ದರೆ (ಭಕ್ತ) ಎಂಬುದರ ಬಗ್ಗೆ ಸಂಶೋಧನೆ ನಡೆಯಬೇಕಾಗಿದೆ. ಸಖರಾಯಪಟ್ಟಣದ ರಂಗನಾಥ ದೇವರಿಗೆ 'ಬೇಟೆರಂಗ' ಎಂದೂ ಕರೆಯುತ್ತಾರೆ. ಹಿಂದೆ ನಾಮಧಾರಿ ಗೌಡರು ಪ್ರಾಣಿಯನ್ನು ಬೇಟೆಯಾಡಿದ ನಂತರ 'ಬೇಟೆ ರಂಗನ ಪೂಜೆ' ಮಾಡುತ್ತಿದ್ದರೆಂಬುದೂ ಇಲ್ಲಿ ಗಮನಾರ್ಹ ಸಂಗತಿಯಾಗಿದೆ.

**ಬೇಸಾಯ**

ನಾಮಧಾರಿಗೌಡರ ಮುಖ್ಯ ಉದ್ಯೋಗ ವ್ಯವಸಾಯ ಮತ್ತು ಪಶುಸಂಗೋಪನೆ. ಪ್ರಾಯಶಃ ಅನಾದಿ ಕಾಲದಿಂದಲೂ ಇವರು ಈ ವೃತ್ತಿಯನ್ನು ಮಾಡಿಕೊಂಡು ಬಂದಿದ್ದಾರೆ. ರೈತಾಪಿಗಳ ಪ್ರಾಮುಖ್ಯವನ್ನು ಕುರಿತು ಕುವೆಂಪು ಹೀಗೆ ಬರೆದಿರುತ್ತಾರೆ.

''ರಾಜ್ಯಗಳುದಿಸಲಿ ರಾಜ್ಯಗಳಳಿಯಲಿ,
ಹಾರಲಿ ಗದ್ದುಗೆ ಮಕುಟಗಳು
ಮುತ್ತಿಗೆ ಹಾಕಲಿ ಸೈನಿಕರೆಲ್ಲ
ಬಿತ್ತುಳುವುದನದ ಬಿಡುವುದೆ ಇಲ್ಲ''

''ಬಾಳಿತು ನಮ್ಮೀ ನಾಗರಿಕತೆ ಸಿರಿ
ಮಣ್ಣಿನ ನೇಗಿಲನಾಶ್ರಯದಿ
ನೇಗಿಲ ಹಿಡಿದಾ ಕೈಯಾಧಾರದಿ
ದೊರೆಗಳು ದರ್ಪದೊಳಾಳಿದರು
ನೇಗಿಲ ಬಲದೊಳು ವೀರರು ಮೆರೆದರು
ಶಿಲ್ಪಿಗಳೆಸೆದರು, ಕವಿಗಳು ಬರೆದರು''

ಮಲೆನಾಡಿನಲ್ಲಿ ಇವರು ಭತ್ತ, ಕಬ್ಬು, ತರಕಾರಿಗಳು, ಅಡಿಕೆ, ಕಾಫಿ, ಮೆಣಸು, ಏಲಕ್ಕಿ ಇವುಗಳನ್ನು ಮುಖ್ಯವಾಗಿ ಬೆಳೆಯುತ್ತಾರೆ. ಕಾಫಿ, ಅಡಿಕೆ, ಮೆಣಸು, ಮತ್ತು ಏಲಕ್ಕಿ ಮುಖ್ಯ ವಾಣಿಜ್ಯ ಬೆಳೆಗಳು. ಹೊಸನಗರ, ತೀರ್ಥಹಳ್ಳಿ ತಾಲ್ಲೂಕುಗಳಲ್ಲಿ ಮುಖ್ಯವಾಗಿ ಅಡಿಕೆ ಮತ್ತು ಭತ್ತವನ್ನು ಬೆಳೆದರೆ, ಕೊಪ್ಪ, ಶೃಂಗೇರಿ, ಮತ್ತು ನರಸಿಂಹರಾಜಪುರ ತಾಲ್ಲೂಕುಗಳಲ್ಲಿ ಭತ್ತ ಮತ್ತು ಅಡಿಕೆಯ ಜೊತೆಗೆ ಕಾಫಿಯನ್ನೂ ಬೆಳೆಯುತ್ತಾರೆ.

ಆಧುನಿಕ ಕಾಲದಲ್ಲಿ ಯೂರೋಪಿಯನ್ನರು ಮಲೆನಾಡಿನಲ್ಲಿ ಕಾಫಿ ಬೆಳೆಯನ್ನು ವಾಣಿಜ್ಯ ಬೆಳೆಯಾಗಿ ಬೆಳೆಯಲು (ಕಾಫಿ ತೋಟಗಳ ಮುಖೇನ) ಪ್ರಾರಂಭಿಸಿದ ನಂತರ ಮಲೆನಾಡಿನ ಶೈವ ಒಕ್ಕಲಿಗರೂ ಮತ್ತು ನಾಮಧಾರಿ ಒಕ್ಕಲಿಗರೂ ಇತರರಂತೆ ಕಾಫಿಯನ್ನು ತೋಟಗಳಲ್ಲಿ ಬೆಳೆಯಲಾರಂಭಿಸಿದರು. ಮೊದಲು ಕಾಫಿ ಒಂದು ಬೆಳೆಯೆಂದು ಪೇಯವಾಗಿ ನಾಮಧಾರಿಗಳಿಗೆ ಗೊತ್ತಿರಲಿಲ್ಲ. ಇದಕ್ಕೆ ಪೂರಕವಾಗಿ 'ಮಲೆಗಳಲ್ಲಿ ಮದುಮಗಳು' ಕಾದಂಬರಿಯಲ್ಲಿ ಸುಬ್ಬಣ್ಣ ಹೆಗಡೆಯವರ ಅಂತಕ್ಕನ ಹೋಟೆಲಿನಲ್ಲಿ ಅಪ್ಪಾಗಿ ಪರಿಚಯವಿರದ ಕಾಫಿಯನ್ನು ಕುಡಿದು ರುಚಿಸದೆ ಉಗಿಯುವುದನ್ನು ನೆನೆಯಬಹುದು. ಕ್ವಿನೈನ್ ಔಷಧಿ ತಯಾರಿಸಲು ಮಲೆನಾಡಿನಲ್ಲಿ ಬೆಳೆಯಲಾರಂಭಿಸಿದ ಸಿಂಕೋನ ಮರ, ರಬ್ಬರ್ ಮರ, ಪಪಾಯ್, ಸಪೋಟ, ಟೊಮೊಟೊ, ಹುರುಳಿಕಾಯಿ, ಇತ್ಯಾದಿ ಬೆಳೆಗಳು ದಕ್ಷಿಣ ಅಮೇರಿಕಾದಿಂದ ಭಾರತಕ್ಕೆ ಪೋರ್ಚುಗೀಸರ ಕಾಲದಲ್ಲಿ ಬಂದವೆಂದು ಬಿ.ಜಿ.ಎಲ್. ಸ್ವಾಮಿ ಬರೆದಿದ್ದಾರೆ.

ನಾಲ್ಕೈದು ವರ್ಷಗಳಿಂದ ಅಡಿಕೆಗಿದ್ದ ಹೆಚ್ಚಿನಧಾರಣೆ ಇತ್ತೀಚೆಗೆ ಸಾಕಷ್ಟು ಇಳಿಮುಖವಾಗಿದ್ದು, ವಿಶೇಷವಾಗಿ ಸಣ್ಣ ರೈತರು ಆರ್ಥಿಕ ಸಂಕಷ್ಟಗಳಿಗೆ ಒಳಗಾಗಿದ್ದಾರೆ. ಕಡಿಮೆಯಾಗುತ್ತಿರುವ ಮಳೆ ಪ್ರಮಾಣ ಕೂಡ ರೈತರನ್ನು ಸಾಕಷ್ಟು ಕಂಗೆಡಿಸಿದೆ.

**ಊಳಿಗಮಾನ್ಯ ವ್ಯವಸ್ಥೆ**

ಮಲೆನಾಡಿನಲ್ಲಿ ಹಿಂದಿನಿಂದಲೂ ಊಳಿಗಮಾನ್ಯ ವ್ಯವಸ್ಥೆ ಇತ್ತು. 'ಪಾಳೆಯಗಾರಿಕೆ' ಮತ್ತು 'ನಾಯಂಕಾರ ಪದ್ಧತಿ' ಗಳು ಪ್ಯೂಡಲಿಸಂನ ರೂಪಗಳೆ. ನಾಮಧಾರಿ ಒಕ್ಕಲಿಗರಲ್ಲೂ ಭೂಮಾಲೀಕರು ಮತ್ತು ಸಾಮಾನ್ಯ ಒಕ್ಕಲುಗಳು ಇರುತ್ತಿದ್ದರು. ಬ್ರಾಹ್ಮಣರಲ್ಲೂ ಭೂಮಾಲೀಕರು ಇರುತ್ತಿದ್ದರು. ಆದರೆ, ಅವರಲ್ಲಿ ಗೌಡರಲ್ಲಿದ್ದಂತೆ ಒಕ್ಕಲು ಮಾಡುವ ಸಾಮಾನ್ಯ ಒಕ್ಕಲುಗಳು ಇರುತ್ತಿರಲಿಲ್ಲ. ೧೯ನೇ ಶತಮಾನದ ಉತ್ತರಾರ್ಧ ಹಾಗೂ ೨೦ನೇ ಶತಮಾನದ ಪ್ರಾರಂಭದ ದಶಕಗಳಲ್ಲಿದ್ದ ಒಡೆಯ-ಒಕ್ಕಲು ಸಂಬಂಧದ ಬಗ್ಗೆ ಮತ್ತು ಜೀತದಾಳುಗಳ ಬಗ್ಗೆ ಕುವೆಂಪು ಅವರ ಕಾದಂಬರಿಗಳಿಂದ ಹಾಗೂ ಕಡಿದಾಳು ಶ್ರೀ ರಾಮಣ್ಣಗೌಡರ ಬರವಣಿಗೆಗಳಿಂದ ಮಾಹಿತಿಯನ್ನು ಸಂಗ್ರಹಿಸಬಹುದು.

**ಜೀತದ ಆಳು**

ಅಂದು ಈ ಮಲೆನಾಡಿನ ಶ್ರೀಮಂತ ಜಮೀನುದಾರರಾದ ಗೌಡರು, ಹಾರ್ವರು, ಮತ್ತು ಕೆಲವರು ತಮ್ಮ ಜಮೀನು ಕೆಲಸ, ಇತರೆ ಕೆಲಸಕ್ಕೆಲ್ಲ ಖಾಯಂ ಆಗಿ ಆಳುಗಳನ್ನು ಇಟ್ಟುಕೊಳುತ್ತಿದ್ದರು. ಇವರು ಹೆಚ್ಚಾಗಿ ಹೊಲೆಯರು (ಹರಿಜನ) ಇವರಿಗೆ ಒಬ್ಬನಿಗೆ ಕುಹುಲು ಮೊರೆ ಅಂದರೆ, ಮದುವೆ ಮಾಡಿದರೆ, ಅವನು ಅವನ ಹೆಂಡತಿ, ಅವನ ಮಕ್ಕಳು ಎಲ್ಲಾ ಖಾಯಂ ಆಗಿ ಅವರ ಮನೆಯಲ್ಲಿ ದುಡಿಯಬೇಕು. ಮದುವೆ ಖರ್ಚಿಗೆ ಕೊಟ್ಟ ಹಣಕ್ಕೆ ಲೆಕ್ಕವಿಲ್ಲ. ಸಂಬಳದಲ್ಲಿ ವಸೂಲು ಇಲ್ಲ. ಸಂಬಳ ಅನ್ನೋದೆ ಇಲ್ಲ. ಅವರಿಗೆ ಮದುವೆ ಆದರೆ ಸರಿ. ಹಣಕೊಟ್ಟವರಿಗೆ ಜೀತದ ಆಳಾಯ್ತು... ಇವರು ಊರ ಹೊರಗೆ ಒಂದು ಕಡೆ ನಾಲ್ಕಾರು ಗುಡಿಗಳ (ಇವರ ಮನೆಗಳ ಹೆಸರು) ನ್ನು ಕಟ್ಟಿಕೊಂಡು ವಾಸವಾಗಿರುತ್ತಿದ್ದರು" ಜೀತದಾಳಾಗಿದ್ದವರು ಯಾರ ಮನೆಯ ಆಳಾಗಿದ್ದರೋ ಅವರ ಮನೆಯಲ್ಲೇ ದುಡಿಯಬೇಕು. ಬೇರೆಯವರ ಮನೆ ಕೆಲಸಕ್ಕೆ ಹೋಗುವಂತಿಲ್ಲ. ನಿತ್ಯ ಕೆಲಸ ಮಾಡುವ ಇವರಿಗೆ ಗಂಡಸರು, ಹೆಂಗಸರು ಎಲ್ಲರಿಗೂ ದಿನಕ್ಕೆ ಒಂದು ಕೊಳಗ ಭತ್ತ, ಒಂದು ಮುಷ್ಟಿ ಉಪ್ಪು, ಒಂದು

ಮುಷ್ಟಿ ಮೆಣಸಿನ ಕಾಯಿ ಇಷ್ಟನ್ನು ಕೊಟ್ಟರೆ ಆಯಿತು. ನಗದು ಕೂಲಿಕೊಡುವ ವ್ಯವಹಾರವೇ ಇರಲಿಲ್ಲ. ಇವರನ್ನು ಉತ್ತಮರು ಮುಟ್ಟಿದರೆ ಬಟ್ಟೆ ಒಗೆದು, ಸ್ನಾನಮಾಡಿ ಮನೆ ಒಳಗೆ ಬರಬೇಕಿತ್ತು.

ಕುವೆಂಪು ಅವರ 'ಮಲೆಗಳಲ್ಲಿ ಮದುಮಗಳು' ಕಾದಂಬರಿಯಲ್ಲಿ ಬೆಟ್ಟಳ್ಳಿಯ ಕಲ್ಲೇಗೌಡರ ಪಾಳೇಯದಲ್ಲಿ ಜೀತದಾಳಾಗಿದ್ದ ತಿಮ್ಮಿಯನ್ನು ಸಿಂಬಾವಿ ಹೆಗಡೆಯವರಲ್ಲಿ ಜೀತದಾಳಾಗಿದ್ದ ನಾಯಿಗುತ್ತಿಗೆ ಅವಳ ಕುಟುಂಬದವರು ವಿವಾಹ ಮಾಡಿಕೊಡಲು ಉದ್ದೇಶಿಸಿ, ತಿಮ್ಮಿಯನ್ನು ಅವಳ ಸೋದರರ ಸಹಕಾರದಿಂದ ಗುತ್ತಿ ಗುಟ್ಟಾಗಿ ಕರೆದುಕೊಂಡು ಹೋದನೆಂಬ ಕಾರಣಕ್ಕಾಗಿ, ವಿಚಾರವನ್ನು ಖಾತ್ರಿಪಡಿಸಿ ಸರಿಯಾಗಿ ತಿಳಿಯಲು ಬೆಟ್ಟಳ್ಳಿ ಕಲ್ಲೇಗೌಡರು ಹೊನ್ನಾಳಿಯಿಂದ ಸಾಬರನ್ನು ಕರೆಸಿ ತಿಮ್ಮಿಯ ಸೋದರರನನ್ನು ಥಳಿಸುವುದನ್ನು (ಹೊನ್ನಾಳಿ ಹೊಡೆತ) ಇಲ್ಲಿ ಸ್ಮರಿಸಬಹುದು. ಕಲ್ಲಳ್ಳಿಯ ಗೌಡರಿಗೆ ಅದು ಒಂದು ಜೀತದಾಳನ್ನು ಕಳೆದುಕೊಳ್ಳುವುದರ ಪ್ರಶ್ನೆಯಾಗಿತ್ತು ಅಷ್ಟೇ. ಗುತ್ತಿ-ತಿಮ್ಮಿಯರ ಪ್ರೀತಿ, ಭಾವನೆ ಆಯ್ಕೆ ಇತ್ಯಾದಿಗಳು ಅವರಿಗೆ ಮುಖ್ಯವಾಗಿರಲಿಲ್ಲ.

**ಸೀಮೆ ಪದ್ಧತಿ**

ವಿಜಯನಗರದ ಆಡಳಿತದ ಕಾಲದಲ್ಲಿ ಮಲೆನಾಡೇ ಒಂದು ಪ್ರಾಂತ್ಯವಾಗಿತ್ತು. ಅದನ್ನು 'ಮಲೇಹರಾಜ್ಯ' ವೆಂದು ಕರೆಯುತ್ತಿದ್ದರು. ಒಂದನೇ ಬುಕ್ಕರಾಯ ಆಳುತ್ತಿದ್ದಾಗ ಅವನ ಮಗ 'ಮಲೇಹರಾಜ್ಯ' ದ ರಾಜಧಾನಿಯಾದ ಆರಗದಲ್ಲಲಿ ಪ್ರಾಂತ್ಯಾಧಿಕಾರಿಯಾಗಿ ಆಳ್ವಿಕೆ ನಡೆಸುತ್ತಿದ್ದನು. ಕೆಳದಿ ನಾಯಕರ ಕಾಲದಲ್ಲಿ ಕೌಲೇದುರ್ಗ (ಕಾವಲು ದುರ್ಗ) ಆಡಳಿತದ ಮುಖ್ಯ ಸ್ಥಳವಾಗಿತ್ತು. ಬ್ರಿಟಿಷರ ಆಡಳಿತದ ಕಾಲದಲ್ಲಿಯೂ ಕವಲೇದುರ್ಗ ತಾಲ್ಲೂಕು ಕೇಂದ್ರವಾಗಿತ್ತು. ಅನಂತರ ತೀರ್ಥಹಳ್ಳಿಗೆ ತಾಲ್ಲೂಕು ಕೇಂದ್ರ ವರ್ಗಾವಣೆಯಾಯಿತು.

'ಸೀಮೆಪದ್ಧತಿ' ಅಂದರೆ ಏನೆಂದು ತಿಳಿಯಲು ಇಲ್ಲಿ ಒಂದು ಸಣ್ಣ ಉಲ್ಲೇಖ ಮಾಡಲಾಗಿದೆ. ಆಧುನಿಕ ಕಾಲವನ್ನು ಪ್ರವೇಶಿಸುವ ಮೊದಲು ಅದನ್ನು ತಿಳಿಯುವುದು ಸೂಕ್ತವೆನಿಸುತ್ತದೆ. ತೀರ್ಥಹಳ್ಳಿ ತಾಲ್ಲೂಕಿನಲ್ಲಿ ಐದು ಹೋಬಳಿಗಳಿವೆ. ಹೋಬಳಿಗೆ ಎರಡರಂತೆ ಹತ್ತು ಸೀಮೆಗಳಿದ್ದವು. ಸೀಮೆಯೆಂದರೆ ಹೋಬಳಿಯ ಅರ್ಧಭಾಗ ಇರಬಹುದು. ಒಂದು ಸೀಮೆಯಲ್ಲಿ ಎರಡು ಪಾಲುಗಳಿರುತ್ತಿದ್ದವು. ಮೇಲು ಪಾಲು, ಕೆಳಪಾಲು ಎಂದು. ಈ ಪಾಲುಗಳಿಗೆ ಕೆಲವು ಗ್ರಾಮಗಳು ಸೇರಿರುತ್ತಿದ್ದವು. ಪ್ರತಿಯೊಂದು ಪಾಲಿಗೂ 'ಪಾಲುಗೌಡ' ಎಂಬ ಯಜಮಾನ. ಸೀಮೆಗೆ 'ಸೀಮೆಗೌಡ' ಎಂಬ ಯಜಮಾನ. ಅವನಿಗೆ ಒಂದು ಸಮಿತಿ. ಈ ಸಮಿತಿಯವರೆಲ್ಲಾ ವರ್ಷಕ್ಕೊಮ್ಮೆಯಾದರೂ ಸೀಮೆದೇವರಾದ ಗುತ್ಯಮ್ಮನವರ ಗುಡಿಯಲ್ಲಿ ಸೇರಿ ಸೀಮೆಯ ಬಗ್ಗೆ ವಿಚಾರ ವಿನಿಮಯ ಮಾಡುವ ಪದ್ಧತಿ ಇತ್ತು. ಹೆಚ್ಚು ಭಾಗ ಸೀಮೆಯ ಧಾರ್ಮಿಕ ಮತ್ತು ಸಾಮಾಜಿಕ ವಿಚಾರಗಳು ಇಲ್ಲಿ ಚರ್ಚಿತವಾಗುತ್ತಿದ್ದವು. ಹೀಗೆ ಚರ್ಚಿತವಾದ ವಿಚಾರಗಳು ಕೆಲವು ಸಂದರ್ಭಗಳಲ್ಲಿ ಗುರುಮಠಕ್ಕೆ ಹೋಗುತ್ತಿದ್ದವು. ಅಲ್ಲದೇ ನೇರವಾಗಿಯೇ ಕೆಲವು ವಿಚಾರಗಳು ಗುರುಮಠಕ್ಕೆ ಹೋಗುತ್ತಿದ್ದವು. ಹೀಗೆ ಸೀಮೆಗೌಡ, ಪಾಲುಗೌಡ, ಊರುಗೌಡ ಎಂದು ನಾಮಧಾರಿ ಗೌಡರಲ್ಲಿ ಮಾತ್ರವಲ್ಲದೆ ಆಚಾರ್ರು, ಅಗಸರು, ಉಳಿದ ಜಾತಿಯಲ್ಲಿಯೂ ಇರುತ್ತಿದ್ದರು. ಈ ಪದ್ಧತಿ ಇಂದಿಗೂ ಜಾರಿಯಲ್ಲಿರುವುದನ್ನು ಕಾಣಬಹುದಾಗಿದೆ.

**ನಾಮಧಾರಿಗೌಡರು-ಆಧುನಿಕ ಕಾಲ ಮತ್ತು ಕ್ರಿಶ್ಚಿಯನ್ ಮಿಷನರಿಗಳು**

ಕ್ರಿ.ಶ. ೧೮೩೧ರಲ್ಲಿ ಲಾರ್ಡ್ ವಿಲಿಯಂ ಬೆಂಟಿಂಕ್ ಇಂಗ್ಲಿಷ್ ಈಸ್ಟ್ ಇಂಡಿಯಾ ಕಂಪೆನಿಯ ಗೌರ್ನರ್ ಜನರಲ್ ಆಗಿದ್ದಾಗ, ಅದಕ್ಷ ಆಡಳಿತದ ಆರೋಪದ ಮೇಲೆ ಮೈಸೂರು ರಾಜ್ಯದ ಆಡಳಿತವನ್ನು ಇಂಗ್ಲಿಷರು

ತಮ್ಮ ಕೈಗೆ ತೆಗೆದುಕೊಂಡರು. ಕ್ರಿ.ಶ. ೧೮೮೧ರವರೆಗೆ ಒಡೆಯರ ಆಡಳಿತ ತಪ್ಪಿ, ಕಮೀಷನರ್‌ಗಳ (ಇಂಗ್ಲಿಷ್) ಆಡಳಿತದ ಕಾಲದಲ್ಲಿ ಆಂಗ್ಲ ವಿದ್ಯಾಭ್ಯಾಸ ಮತ್ತು ತನ್ಮುಖೇನ ಪಾಶ್ಚಿಮಾತ್ಯ ವಿಚಾರಗಳು ಹಾಗೂ ಆಧುನಿಕತೆ ಮೈಸೂರು ರಾಜ್ಯವನ್ನು ಪ್ರವೇಶಿಸಿದವು. (ಮೈಸೂರು, ಮಂಡ್ಯ, ಬೆಂಗಳೂರು, ಕೋಲಾರ, ತುಮಕೂರು, ಚಿತ್ರದುರ್ಗ, ಶಿವಮೊಗ್ಗ, ಚಿಕ್ಕಮಗಳೂರು ಮತ್ತು ಹಾಸನ ಜಿಲ್ಲೆಗಳು ಸೇರಿ ಆಗ ಮೈಸೂರು ಸಂಸ್ಥಾನವಾಗಿತ್ತು). ಮೈಸೂರು ರಾಜ್ಯದಲ್ಲಿ ಬ್ರಿಟಿಷರ ನೇರ ಆಡಳಿತ ಮುಕ್ತಾಯವಾದರೂ (೧೮೮೧) ಇಂಗ್ಲಿಷ್ ವಿದ್ಯಾಭ್ಯಾಸ ಮತ್ತು ಆಧುನಿಕತೆಯ ಪ್ರಕ್ರಿಯೆ ಮುಂದುವರೆಯಿತು. ಮೈಸೂರು ರಾಜ್ಯದ ಒಂದು ಭಾಗವಾಗಿದ್ದ ಮಲೆನಾಡಿಗೂ ಆಧುನಿಕತೆ ಮತ್ತು ಪಾಶ್ಚಿಮಾತ್ಯ ವಿದ್ಯಾಭ್ಯಾಸ ಬಂದಿತು. ಇಂಗ್ಲಿಷ್ ವಿದ್ಯಾಭ್ಯಾಸದ ಒಂದು ಅತೀ ಮುಖ್ಯ ಪರಿಣಾಮವೆಂದರೆ,ಪರಿಸರದಲ್ಲಿ ಜಾತಿ ಪ್ರದಾನವಾಗಿದ್ದ ಮತ್ತು ಹೆಚ್ಚಿನ ಸಂದರ್ಭದಲ್ಲಿ ಮೇಲ್ಜಾತಿಯವರಿಗೆ ಮಾತ್ರ ಸೀಮಿತವಾಗಿದ್ದ ಸಾಂಪ್ರದಾಯಿಕ ವಿದ್ಯಾಭ್ಯಾಸ ಹೊರಟುಹೋಗಿ, ವಿದ್ಯಾಭ್ಯಾಸ ಕ್ಷೇತ್ರ ಎಲ್ಲಾ ಜಾತಿಯವರಿಗೂ ತೆರೆದಿಟ್ಟು ಒಂದು 'ಸೆಕ್ಯುಲರ್' ವಾತಾವರಣವನ್ನು ನಿರ್ಮಾಣ ಮಾಡಿತು.

ಇಂಗ್ಲಿಷ್ ವಿದ್ಯಾಭ್ಯಾಸದ ಆಗಮನದೊಂದಿಗೆ ಕ್ರಿಶ್ಚಿಯನ್ ಮಿಷನರಿಗಳೂ ವಿದ್ಯಾಸಂಸ್ಥೆಗಳನ್ನು ಸ್ಥಾಪಿಸುವುದನ್ನು ನೋಡುತ್ತೇವೆ. ಜೊತೆಗೆ ಅವರು ಕ್ರಿಶ್ಚಿಯನ್ ಧರ್ಮ ಪ್ರಚಾರದ ಕೆಲಸವನ್ನೂ ಆರಂಭಿಸಿದರು. ಶಿವಮೊಗ್ಗ ಜಿಲ್ಲೆಯ ತೀರ್ಥಹಳ್ಳಿ ಪ್ರದೇಶದಲ್ಲಿಯೂ ಮೇಲಿನ ಪ್ರಕ್ರಿಯೆ ಪ್ರಾರಂಭವಾದುದಕ್ಕೆ ಆಧಾರಗಳು ದೊರೆಯುತ್ತವೆ.

ಜಾತಿ ಆಧಾರಿತ ನಮ್ಮ ಸಾಮಾಜಿಕ ವ್ಯವಸ್ಥೆಯಲ್ಲಿ ಅಸಮಾನತೆ ತುಂಬಿದ್ದು ಅದರಲ್ಲೂ ಕೆಳಸ್ತರದವರು ಹೊಸತನಕ್ಕಾಗಿ ಮತ್ತು ಸಮಾನತೆಗಾಗಿ ತವಕಿಸುತ್ತಿದ್ದರು. ಶಿವಮೊಗ್ಗ-ಚಿಕ್ಕಮಗಳೂರು ಜಿಲ್ಲೆಗಳ ಮಲೆನಾಡು ಪ್ರಾಂತ್ಯದಲ್ಲಿ ವಿವಿಧ ಸಿದ್ಧಾಂತಗಳಿಗೆ ಮತ್ತು ಜಾತಿಗಳಿಗೆ ಸೇರಿದ ಹನ್ನೊಂದು ಮಠಗಳಿದ್ದು, ಅವುಗಳು ಹುಟ್ಟುಹಾಕಿರಬಹುದಾದ ಮಡಿವಂತಿಕೆ ಮತ್ತು ಸಂಪ್ರದಾಯಶೀಲತೆಗಳು ಯಾರಿಗಾದರೂ ಅರಿವಾಗುತ್ತದೆ. ಸಾಮಾಜಿಕವಾಗಿ, ಧಾರ್ಮಿಕವಾಗಿ ಮತ್ತು ಸಾಂಸ್ಕೃತಿಕವಾಗಿ ತುಂಬಾ ಸಂಕೀರ್ಣವಾಗಿರುವ ಈ ಪ್ರದೇಶದಲ್ಲಿ ನಾಮಧಾರಿಗೌಡರು ವಾಸವಾಗಿದ್ದಾರೆಂಬುದು ಗಮನಾರ್ಹ ಸಂಗತಿ. ಸಮಾಜದಲ್ಲಿ ಕೆಳಸ್ತರವಾಗಿ 'ಶೂದ್ರ' ಗುಂಪಿಗೆ ಸೇರಿದ್ದ ನಾಮಧಾರಿ ಒಕ್ಕಲಿಗರೂ ಕಲಿಕೆ ಮತ್ತು ಆಧುನಿಕತೆಯ ಮುಖೇನ ಬದುಕನ್ನು ಹೊಸದಾಗಿ ರೂಪಿಸಿಕೊಳ್ಳಲು ಮಾಡಿದ ಪ್ರಯತ್ನಗಳ ಬಗ್ಗೆ ಕ್ರಿಶ್ಚಿಯನ್ ಮಿಷನರಿಗಳ ಬರವಣಿಗೆಯಿಂದ ತಿಳಿದು ಬರುತ್ತದೆ. ಮಲೆನಾಡಿನಲ್ಲಿ ಕ್ರೈಸ್ತಮತ ಪ್ರಚಾರದ ಉದ್ದಿಶ್ಯವನ್ನು ಹೊಂದಿದ್ದ ಪ್ರೊಟೆಸ್ಟೆಂಟ್ ಗುಂಪಿನವರು ನಾಮಧಾರಿ ಒಕ್ಕಲಿಗ ಸಮಾಜವನ್ನು ಹತ್ತಿರದಿಂದ ಮತ್ತು ಅತ್ಯಂತ ಸೂಕ್ಷ್ಮವಾಗಿ ಅವಲೋಕಿಸಿ ಅವರ ಬದುಕಿನ ಬಗ್ಗೆ ಖಾಸಗಿಯಾಗಿ ಮತ್ತು ಗುಟ್ಟಾಗಿ ಬರೆದು ೧೯೨೫ರಲ್ಲಿ ಮೈಸೂರು ವೆಸ್ಲಿಯನ್ ಪ್ರೆಸ್ ಮುಖೇನ ಪ್ರಕಟಿಸಿರುವ 'ದಿ ಸ್ಟೋರಿ ಆಫ್ ದಿ ನಾಮಧಾರಿಸ್' ಕಿರುಹೊತ್ತಿಗೆಯಲ್ಲಿ ಹಲವು ಆಸಕ್ತಿಪೂರ್ಣ ವಿಚಾರಗಳು ಅಡಕವಾಗಿವೆ.

ಮೇಲ್ಜಾತಿಯ ಬಹುಸಂಖ್ಯಾತರಿಗಿಂತ ನಾಮಧಾರಿಗಳು ಕ್ರಿಶ್ಚಿಯನ್ ಪ್ರಭಾವ ಮತ್ತು ತತ್ವಗಳಿಗೆ ಹೆಚ್ಚು ಆಕರ್ಷಿತರಾಗಬಹುದಾದವರು ಎಂದು ತಿಳಿಸುತ್ತಾನೆ. ನಾಲೂರಿನ (ತೀರ್ಥಹಳ್ಳಿ ತಾಲ್ಲೂಕ್) ಗಿರಿಯಪ್ಪಗೌಡರು ಮಿಷನರಿಗಳೊಂದಿಗೆ ಅತ್ಯಂತ ಆತ್ಮೀಯ ಸಂಬಂಧಹೊಂದಿದ್ದವರು ಹಾಗೂ ಶಾಲೆಗಳನ್ನು ಸ್ಥಾಪಿಸುವಂತೆ ವಿನಂತಿಸಿಕೊಂಡಿದ್ದರೆಂದು ನೈಟಿಂಗೇಲ್ ತಿಳಿಸುತ್ತಾನೆ. ಗಿರಿಯಪ್ಪಗೌಡರ ಪ್ರಭಾವ ಅವರ ಜಾತಿ ಇದ್ದ ಪ್ರದೇಶವನ್ನು

ಎಷ್ಟು ಆವರಿಸಿತೆಂದರೆ ಅದು ಇಂಗ್ಲೆಂಡಿನ ಸುಸೆಕ್ಸ್‌ಗೆ ಸಮ ಎಂದು ಹೇಳುತ್ತಾನೆ. ಹಾಗೂ ದೇವಂಗಿ ರಾಮಣ್ಣಗೌಡರನ್ನು 'ನಾಮಧಾರಿ ಒಕ್ಕಲಿಗ ಸಮುದಾಯದ ತಿಲಕ' (The Jewel of the Caste) ಎಂದು ವರ್ಣಿಸುತ್ತಾನೆ.

ನಾಲೂರಿನ ಗಿರಿಯಪ್ಪಗೌಡರು ಒಮ್ಮೆ ಮಾಡಿದರೆಂದು ಹೇಳಲಾಗಿರುವ ಭಾಷಣದ ಒಂದು ಭಾಗವೆಂದು ನೈಟಿಂಗೇಲ್ ಉಲ್ಲೇಖಿಸುತ್ತಾ "ಭಾರತದಿಂದ ಹತ್ತಿ ಇಂಗ್ಲೆಂಡಿಗೆ ರಫ್ತಾಗಿ, ಅಲ್ಲಿ ಯಂತ್ರಗಳಲ್ಲಿ ಸುಂದರ ಬಟ್ಟೆಗಳಾಗಿ ಹೊರಬರುವಂತೆ, ನಮ್ಮ ಮಕ್ಕಳು ಮಿಷನರಿ ಶಾಲೆಗಳಿಗೆ ಹೋಗಿ ಸುಂದರ ವ್ಯಕ್ತಿತ್ವದ ವ್ಯಕ್ತಿಗಳಾಗಿ ಮೂಡಿ ಬರುತ್ತಾರೆ." ಎನ್ನುತ್ತದೆ. ೧೯೦೫ರಲ್ಲಿ ಮಂಡಗದ್ದೆ ಸಮೀಪದ ಸಿಂಧುವಾಡಿಯ ಪ್ರತಿಷ್ಠಿತ ಚನ್ನಪ್ಪಗೌಡರು ಕ್ರೈಸ್ತಧರ್ಮಕ್ಕೆ ಮತಾಂತರವಾದರೆಂದು ನೈಟಿಂಗೇಲ್ ಹೇಳುತ್ತಾನೆ. "೧೯೦೬ರಲ್ಲಿ ಇವ್ಯಾಂಜಲಿಸ್ಟ್, ನೈಟಿಂಗೇಲ್‌ಗೆ ಕಳುಹಿಸಿದ ವರದಿಯ ಪ್ರಕಾರ-ಮಿಷನರಿಗಳ ಕಾರ್ಯ ಪ್ರಾರಂಭವಾದ ಮೇಲೆ ಆದ ಪ್ರಮುಖ ಬೆಳವಣಿಗೆಗಳೆಂದರೆ ಹಲವು ನಾಮಧಾರಿಗಳು ಜ್ಯೋತಿಷಿಗಳ ಹತ್ತಿರ ಹೋಗುವುದನ್ನು ನಿಲ್ಲಿಸಿದ್ದರು, ಬ್ರಾಹ್ಮಣರಿಗೆ ದಾನ ದಕ್ಷಿಣೆಗಳನ್ನು ಕೊಡುವುದನ್ನು ನಿಲ್ಲಿಸಿ, ಶನಿವಾರ ಉಪವಾಸವಿರುವ ಪದ್ಧತಿಯನ್ನೂ ನಿಲ್ಲಿಸಿದ್ದರು. ಈ ಹೇಳಿಕೆಯಲ್ಲಿ ಉತ್ಪ್ರೇಕ್ಷೆ ಇರಬಹುದಾದರೂ ಮಲೆನಾಡನ್ನು ಪ್ರವೇಶಿಸಿದ್ದ ಹೊಸ ವಿಚಾರಗಳ ಪ್ರಭಾವವನ್ನು ತಳ್ಳಿಹಾಕುವಂತಿಲ್ಲ.

ಕುವೆಂಪು ಅವರ 'ಮಲೆಗಳಲ್ಲಿ ಮದುಮಗಳು' ಕಾದಂಬರಿಯಲ್ಲಿ ಬರುವ ದೇವಯ್ಯನ ಪಾತ್ರ ನಾಲೂರಿನ ಗಿರಿಯಪ್ಪಗೌಡರ ರೂಪಾಂತರವೆನಿಸುತ್ತದೆ. ಗಿರಿಯಪ್ಪಗೌಡರು ತೀರಿಕೊಂಡಾಗ ಅವರ ಮಗ ಶಂಕರಪ್ಪ ತಂದೆಯ ಶವವನ್ನು ಸುಟ್ಟು ಬೂದಿಯನ್ನು ಕದರದೆ, ಆಯ್ದ ಕಲ್ಲುಗಳಿಂದ ಸುಟ್ಟ ಸ್ಥಳದಲ್ಲಿ ಕ್ರಿಸ್‌ಕ್ರಾಸ್ (ಶಿಲುಬೆ) ಮಾಡಿದ್ದನೆಂದು ನೈಟಿಂಗೇಲ್ ತಿಳಿಸುತ್ತಾನೆ. ಗಿರಿಯಪ್ಪಗೌಡರ ಸ್ಮರಣಾರ್ಥ ನಾಲೂರಿನಲ್ಲಿ ಅಂದು ಕಟ್ಟಿಸಿದ ಶಾಲೆಯ ಕಟ್ಟಡದಲ್ಲಿ ಈ ಶಾಸನವನ್ನು ಇಂದೂ ಕಾಣಬಹುದು.

ಕುವೆಂಪುರವರಿಗೆ ಮಲೆನಾಡಿನಲ್ಲಿ ನಡೆದ ಮಿಷನರಿ ಚಟುವಟಿಕೆಗಳ ಬಗ್ಗೆ ತಿಳಿದಿತ್ತು. ಕುವೆಂಪು ಬರೆಯುತ್ತಾರೆ. ಅಂದು ಪ್ರಾರಂಭವಾದ **'ಮಲೆನಾಡು ಒಕ್ಕಲಿಗರ ಯುವಕರ ಸಂಘ'** (೩.೬.೧೯೩೨) ಒಳ ಹೊಕ್ಕು ನೋಡಿದರೆ ಅದೊಂದು ಕ್ರಾಂತಿ ಸಂಸ್ಥೆಯೇ ಆಗಿತ್ತು. ಒಕ್ಕಲಿಗರ ಎಂಬ ವಿಶೇಷಣ ಅಂದಿನ ಮಲೆನಾಡಿನ ದುಸ್ಥಿತಿಯ ಪರಿಸ್ಥಿತಿಗೆ ಅನಿವಾರ್ಯವಾಗಿತ್ತು.ಅಲ್ಲಿನ ಒಕ್ಕಲಿಗರು ಇತರ ಶೂದ್ರ ವರ್ಗದವರಂತೆ ಬ್ರಾಹ್ಮಣರೊಡ್ಡಿದ ಮತಾಚಾರದ ಮೌಢ್ಯಸಂಕುಲಗಳ ಬೋನಿನೊಳಗೆ ಸಿಕ್ಕಿಬಿದ್ದ ಇಲಿಗಳಾಗಿದ್ದರು. ಆ ಇಲಿಗಳನ್ನು ಬೋನಿನಿಂದ ಬಿಡಿಸಲು ಕ್ರೈಸ್ತಪಾದ್ರಿಗಳು ತಮ್ಮ ಎಲ್ಲಾ ರೀತಿಯ ಪ್ರಯತ್ನಗಳನ್ನು ಮಾಡಿ ಆ ಬೋನಿನಿಂದ ನೆಗೆದರೆ ಕ್ರೈಸ್ತ ಮೌಢ್ಯದ ಬೋನಿಗೆ ಬೀಳಬೇಕಾಗಿತ್ತು. ಎರಡೂ ಪುರೋಹಿತಶಾಹಿಗಳೇ. ಎರಡೂ ಪುರೋಹಿತಶಾಹಿಗಳು ಬೋನಿನೊಳಗೆ ಇಲಿಗಳನ್ನು ಆಕರ್ಷಿಸಲು ಇಡುತ್ತಿದ್ದ ತಿಂಡಿಗಳು ರೂಪದಲ್ಲಿ ಬೇರೆ ಬೇರೆಯಾಗಿದ್ದರೂ ಸ್ವರೂಪದಲ್ಲಿ ಒಂದೇ ತರಹವಾಗಿದ್ದವು. ನಮ್ಮವರನ್ನು ಈ ಹಳೆಯ ಮತಮೌಢ್ಯ ಸಂಕುಲಗಳಿಂದ ಪಾರುಮಾಡಿ ಅವರಿಗೆ ವೈಚಾರಿಕತೆಯನ್ನು, ವೈಜ್ಞಾನಿಕತೆಯನ್ನೂ ನೀಡಿ ನಿಜವಾದ ಉಪನಿಷತ್ ಪ್ರಣೀತವಾದ ವೇದಾಂತದ ಆಧ್ಯಾತ್ಮಶ್ರೀಯಡೆಗೆ ಅವರನ್ನು ಕರೆದೊಯ್ಯಬೇಕು ಎಂಬುದು ನನ್ನ ಉದ್ದೇಶವಾಗಿತ್ತು ಎಂದು ಹೇಳುವುದು ಅಂದಿನ ಮಲೆನಾಡಿನ ಒಕ್ಕಲಿಗರ ಪ್ರಗತಿಯ ಸಂಕೇತವಾಗಿ ಕಂಡುಬರುತ್ತದೆ.

**ಸಾಮಧಾರಿ ಗೌಡರಲ್ಲಿ ಜಾಗೃತಿ ಮತ್ತು ಸಾಮಧಾರಿ ಅನ್ಯೋನ್ಯಾಭಿವೃದ್ಧಿ ಸಭಾ-೧೯೦೧**

ನಮ್ಮ ದೇಶದಲ್ಲಿ ಸಾವಿರಾರು ವರ್ಷಗಳಿಂದ ಉಳಿದು ಬಂದಿರುವ ಸಂಸ್ಥೆಯೆಂದರೆ ಜಾತಿ ವ್ಯವಸ್ಥೆ. ಬೇರೆ ಬೇರೆ ಕಾಲಘಟ್ಟಗಳಲ್ಲಿ ಈ ಜಾತಿ ವ್ಯವಸ್ಥೆಯನ್ನು ನಿವಾರಣೆ ಮಾಡಲು ಹಲವು ಸಮಾಜ ಸುಧಾರಕರು ಪ್ರಯತ್ನಿಸಿದರೂ, ಅದು ಮುಂದುವರೆದಿರುವುದು ಆಶ್ಚರ್ಯಕರ ಮತ್ತು ಅಷ್ಟೇ ಆಸಕ್ತಿ ಪೂರ್ಣ ವಿಚಾರವಾಗಿದೆ. ನಮ್ಮ ದೇಶದ ಶ್ರೇಣೀಕೃತ ಜಾತಿ ವ್ಯವಸ್ಥೆಯಲ್ಲಿ ಹಲವು ಜಾತಿಗಳು ತಮ್ಮ ತಮ್ಮ ಸಮಾಜದ ಶ್ರೇಯೋಭಿವೃದ್ಧಿಗಾಗಿ ಜಾತಿ ಸಂಘಗಳನ್ನು ಕಟ್ಟಿಕೊಂಡಿರುವುದು ಎಲ್ಲರಿಗೂ ವೇದ್ಯವಾದ ವಿಚಾರವೆ, ಇಂಥ ಜಾತಿ ಸಂಘಟನೆಯ ವಿಚಾರ ಸರಿಯೊ, ತಪ್ಪೋ ಎಂದು ಹೇಳುವುದು ಕಷ್ಟದ ಕೆಲಸವಾದರೂ ಅಂಥ ಸಂಘಟನೆಯ ಹಿಂದಿರುವ ಧೋರಣೆಗಳನ್ನು ಗಮನಿಸಿದರೆ ಪ್ರತಿಕ್ರಿಯಿಸಲು ಸಾಧ್ಯವಾದೀತು. ಪ್ರತಿಯೊಂದು ಜಾತಿಗೂ ತನ್ನದೇ ಆದ ಸಾಮಾಜಿಕ-ಸಾಂಸ್ಕೃತಿಕ ಆಯಾಮ ಅಗತ್ಯವಿರುವುದರಿಂದ ತನ್ನ ಜಾತಿಯವರ ಸಂಘಟನೆಗೆ ಮುಂದಾಗುತ್ತದೆ. ಈ ಪ್ರಕ್ರಿಯೆಗೆ ಕಳೆದ ಶತಮಾನದ ಪ್ರಾರಂಭದಲ್ಲಿ ನಾಮಧಾರಿ ಒಕ್ಕಲಿಗರು ಒಳಗಾದರು. ಅಂದು ನಾಮಧಾರಿ ಒಕ್ಕಲಿಗರ ಸಂಘಟನೆ ಹೊಂದಿದ್ದ ಧೋರಣೆ ಮತ್ತು ಉದ್ದೇಶಗಳನ್ನು ಗಮನಿಸಿದರೆ ತುಂಬಾ ಶ್ಲಾಘನೀಯವೆನಿಸುತ್ತದೆ. ಇದಕ್ಕೆ ಈ ಪ್ರದೇಶದಲ್ಲಿ ಬ್ರಿಟೀಷ್‌ರವರ ಪ್ರಭಾವ ಹೆಚ್ಚಾಗಿ ಬೀರಿದೆ. ಮಿಷನರಿಗಳು ಇಂಗ್ಲಿಷ್ ಶಿಕ್ಷಣವನ್ನು ಇಲ್ಲಿನ ಒಕ್ಕಲಿಗರಿಗೆ ಸುಲಭವಾಗಿ ನೀಡಿದರು. ಇದರಿಂದಾಗಿ ಪ್ರಾಪಂಚಿಕ ಜ್ಞಾನ ಹೆಚ್ಚಿ ತಮ್ಮ ಸಂಘಟನೆಗಾಗಿ ಈ ಸಂಘ ಸ್ಥಾಪಿಸಿದರು. ಕಾರಣ ಅದು ಪ್ರಗತಿಪರವಾಗಿತ್ತು.

ಅಂದಿನ ನಾಮಧಾರಿ ಒಕ್ಕಲಿಗ ಸಮಾಜಕ್ಕೆ ಅಂಟಿದ್ದ ಕೆಲವು ಅನಿಷ್ಟಗಳನ್ನು ನಿವಾರಿಸಿ, ತಮ್ಮ ಸಮಾಜವನ್ನು ಆರೋಗ್ಯವಂತ ಮತ್ತು ಸತ್ವಪೂರ್ಣಗೊಳಿಸಲು ಕೆಲವು ಪ್ರಜ್ಞಾವಂತ ಮುಂದಾಳುಗಳು ಪ್ರಾಮಾಣಿಕವಾಗಿ ಪ್ರಯತ್ನಿಸಿರುವುದು ದಾಖಲೆಗಳಿಂದ ತಿಳಿದುಬರುತ್ತದೆ.

**ಕುವೆಂಪು ಯುಗ: ೧೯೦೪-೧೯೯೪**

ಸ್ವಾತಂತ್ರ್ಯ ಪೂರ್ವದಲ್ಲಿ ಇಂಗ್ಲಿಷ್ ವಿದ್ಯಾಭ್ಯಾಸವನ್ನು ಪಡೆದ ನಮ್ಮ ಅನೇಕ ಜನರ ಧೋರಣೆ, ದೃಷ್ಟಿಕೋನ, ಅಭಿರುಚಿ, ಆಸಕ್ತಿ, ಆಯ್ಕೆ ಇವುಗಳಲ್ಲಿ ಬದಲಾವಣೆಗಳು ಕಾಣಿಸಿಕೊಂಡವು. ಅವರು ಇತರರಿಗಿಂತ ಭಿನ್ನವಾಗಿ ಆಲೋಚಿಸಿ ಭಿನ್ನವಾಗಿ ರೂಪಿತವಾದರು. ಪಾಶ್ಚಿಮಾತ್ಯ ಸಂಸ್ಕೃತಿಯಲ್ಲಿ 'ಪ್ರಜಾಪ್ರಭುತ್ವ', 'ಸೆಕ್ಯುಲರಿಸಂ' ಇತ್ಯಾದಿ ವಿಚಾರಗಳು ಮೌಲ್ಯಗಳಾಗಿ ಪ್ರತಿಪಾದಿತವಾಗಿದ್ದವು. ಇಂಥ ಆಧುನಿಕ ದೃಷ್ಟಿಕೋನದ ಪರಿಣಾಮವಾಗಿ ಭಾರತದಲ್ಲಿ ಅಸಮಾನತೆಯನ್ನು ಆಧರಿಸಿದ್ದ ಬ್ರಿಟಿಷರ ಆಡಳಿತದ ಸ್ವರೂಪವನ್ನು ಪ್ರಶ್ನಿಸುವ, ವಿರೋಧಿಸುವ ಕೆಲಸಕ್ಕೆ ಹಲವು ವಿದ್ಯಾವಂತ ಭಾರತೀಯರು ಮುಂದಾದರೆ, ಮತ್ತೊಂದೆಡೆ ಅಸಮಾನತೆಯ ಪ್ರತೀಕವಾಗಿದ್ದ ಜಾತಿವ್ಯವಸ್ಥೆಯಲ್ಲಿದ್ದ ಅನ್ಯಾಯಗಳನ್ನು ಗುರುತಿಸಿ ಅದರ ವಿರುದ್ಧ ಕೆಲವರು ಸೊಲ್ಲೆತ್ತಿದ್ದರು. ಆದ್ದರಿಂದ ೧೯ ಮತ್ತು ೨೦ ನೇ ಶತಮಾನಗಳ ನಮ್ಮ ರಾಷ್ಟ್ರೀಯ ಚಳುವಳಿ ನಮ್ಮನ್ನು ಅಸಮಾನತೆಯಿಂದ ನಡೆಸಿಕೊಳ್ಳುತ್ತಿದ್ದ ಬ್ರಿಟಿಷರ ವಿರುದ್ಧ ನಡೆದ ಹೋರಾಟವಾಗಿ ಒಂದು ಆಯಾಮವನ್ನು ಪಡೆದುಕೊಂಡರೆ, ಮತ್ತೊಂದು ಆಯಾಮದಲ್ಲಿ ಸಾಮಾಜಿಕ ಕಾಳಜಿಯನ್ನು ಹೊಂದಿದ್ದ ನಮ್ಮ ಸೃಜನಶೀಲ ಚಿಂತಕರು ಮತ್ತು ಸುಧಾರಕರು ನಮ್ಮ ಸಮಾಜದಲ್ಲಿದ್ದ ಮೇಲು-ಕೀಳು, ಸ್ಪೃಶ್ಯ-ಅಸ್ಪೃಶ್ಯ ಇತ್ಯಾದಿ ಅನಿಷ್ಟ ನಂಬಿಕೆ-ಆಚರಣೆಗಳನ್ನು ಪ್ರಶ್ನಿಸಿ, ಚರ್ಚಿಸಿ ಸಮಾಜದ ಓರೆ ಕೋರೆಗಳನ್ನು ತಿದ್ದಿ ಸಮಾಜಸ್ವಾಸ್ಥ್ಯದ ಬಗ್ಗೆ ಚಿಂತಿಸಿ ಸಮಾನತೆಯನ್ನು ಪ್ರತಿಪಾದಿಸಿದರು.

ಇಪ್ಪತ್ತನೇ ಶತಮಾನದಲ್ಲಿ ಮಲೆನಾಡಿನ ಮೇಲೆ ಎರಡೂ ಆಯಾಮಗಳು ವಿಶೇಷ ಪಾತ್ರ ವಹಿಸಿದವು. 'No reformation is possible without a renaissance' ನವೋದಯವಿಲ್ಲದೆ ಯಾವುದೇ ಸುಧಾರಣೆ ಸಾಧ್ಯವಿಲ್ಲ ಎಂದು ಹೆಗಲ್ ಹೇಳಿದ್ದಾರೆ.

'ಜಗದ ಕವಿಗೆ ಯುಗದ ಕವಿಗೆ ರಾಮಾಯಣ ದರ್ಶನದಿಂದಲೇ ಕೈಮುಗಿದ ಕವಿಗೆ ಮಣೆಯದವರಾರು.'' ಎಂದು ಕುವೆಂಪು ಅವರನ್ನು ಕುರಿತು ದ.ರಾ. ಬೇಂದ್ರೆಯವರು ಹೇಳಿದ ಮಾತು ಅರ್ಥಪೂರ್ಣವಾಗಿದೆ. 'ರಾಷ್ಟ್ರಕವಿ'ಯಾಗಿ, ಕರ್ನಾಟಕ ರತ್ನವಾಗಿ, ರಸಋಷಿಯಾಗಿ ಹಲವು ಪ್ರಶಸ್ತಿ ಗೌರವಗಳಿಗೆ ಪಾತ್ರರಾಗಿ ಕನ್ನಡನಾಡು ನುಡಿಯ ಸೇವೆಯನ್ನು ತಮ್ಮ ಅದ್ವಿತೀಯ ಸಾಹಿತ್ಯದ ಮುಖೇನ ಗೈದ ಕುವೆಂಪು ಅವರು ಕನ್ನಡ ಸಾರಸ್ವತ ಲೋಕದಲ್ಲಿ ಯುಗಪುರುಷರಾಗಿದ್ದಾರೆ.

ಕ್ರಿ.ಶ.೧೯೦೪ ಕುಪ್ಪಳ್ಳಿಯ ನಾಮಧಾರಿ ಒಕ್ಕಲಿಗರ ಕುಟುಂಬದಲ್ಲಿ ಜನಿಸಿದ ಕುವೆಂಪು ತಮ್ಮ ವಿದ್ಯೆ, ಅರಿವು ಮತ್ತು ಬರಹಗಳ ಮುಖೇನ ಖ್ಯಾತರಾಗಿ ನವೋಯದ ಹರಿಕಾರರಲ್ಲಿ ಒಬ್ಬರಾದರು. ೧೯೬೭ರಲ್ಲಿ ಇವರ 'ಶ್ರೀ ರಾಮಾಯಣ ದರ್ಶನಂ' ಕೃತಿಗೆ ಭಾರತದ ಸಾಹಿತ್ಯದ ಅತ್ಯುನ್ನತ ಪ್ರಶಸ್ತಿಯಾದ 'ಜ್ಞಾನಪೀಠ ಪ್ರಶಸ್ತಿ' ಬಂದದ್ದು ಕರ್ನಾಟಕಕ್ಕೆ, ಕನ್ನಡಿಗರಿಗೆ ಕೀರ್ತಿ-ಗೌರವಗಳನ್ನು ತಂದು ಕೊಟ್ಟಿತು. ಮಾತ್ರವಲ್ಲದೆ ಇದು ಕನ್ನಡ ಸಾಹಿತ್ಯಕ್ಕೆ ಸಂದ ಮೊದಲ ಜ್ಞಾನಪೀಠ ಪ್ರಶಸ್ತಿ ಎಂಬ ಹೆಗ್ಗಳಿಕೆಗೆ ಪಾತ್ರವಾಯಿತು.

ಕುವೆಂಪು ಅವರು ಬರೆದ 'ಕಾನೂರು ಹೆಗ್ಗಡತಿ' ಮತ್ತು 'ಮಲೆಗಳಲ್ಲಿ ಮದುಮಗಳು' ಮಹಾಕಾದಂಬರಿಗಳು ಮಲೆನಾಡಿನ 'ರಾಮಾಯಣ' ಮತ್ತು 'ಮಹಾಭಾರತ' ಗಳಿದ್ದಂತೆ ಎಂದು ತಜ್ಞರು ಅಭಿಪ್ರಾಯ ಪಡುತ್ತಾರೆ. ಸಾಹಿತ್ಯದ ವಿದ್ಯಾರ್ಥಿಗಳಿಗೆ ಮಾತ್ರವಲ್ಲದೆ ಇತಿಹಾಸದ ವಿದ್ಯಾರ್ಥಿಗಳಿಗೂ ಈ ಕಾದಂಬರಿಗಳು ಮಹತ್ವದ ವಿಚಾರಗಳನ್ನು ನೀಡುತ್ತವೆ. ಸಾಹಿತ್ಯ ಸಮಕಾಲೀನ ಚರಿತ್ರೆ ಎಂಬ ಮಾತನ್ನು ಆಗಾಗ ಕೇಳುತ್ತಿರುತ್ತೇವೆ, ಯಾಕೆಂದರೆ ಸೂಕ್ಷ್ಮಜ್ಞರೂ, ಸಂವೇದನಾಶೀಲರೂ ಆದ ಸಾಹಿತಿಗಳು ತಮ್ಮ ಸುತ್ತಣ ಆಗುಹೋಗುಗಳನ್ನು ಪರೀಕ್ಷಿಸಿ ತಮ್ಮದೇ ಪ್ರಕಾರಗಳ ಮೂಲಕ ಅಭಿವ್ಯಕ್ತಿಸುತ್ತಾರೆ. ಜಗತ್ತಿನ ಎಲ್ಲಾ ಶ್ರೇಷ್ಠ ಲೇಖಕ ಕಲಾವಿದರ ವಿಷಯದಲ್ಲೂ ಈ ಮಾತು ನಿಜ ಎಂಬ ಮಾತನ್ನು ಡಾ.ಎಸ್.ಚಂದ್ರಶೇಖರ್‌ರವರು ಹೇಳುತ್ತಾರೆ. (ಸಾಹಿತ್ಯ ಮತ್ತು ಚರಿತ್ರೆ) 'ಕಾನೂರು ಹೆಗ್ಗಡಿತಿ' ೧೯೩೬ರಲ್ಲಿ ಪ್ರಕಟವಾಗಿ ಸಮಕಾಲೀನ ಆಗುಹೋಗುಗಳನ್ನು ಬಹಳ ಸೂಕ್ಷ್ಮವಾಗಿ ಚಿತ್ರಿಸುತ್ತದೆ. 'ಮಲೆಗಳಲ್ಲಿ ಮದುಮಗಳು' ಕೃತಿಯ ರಚನೆ ೧೯೩೭-೪೦ರಲ್ಲಿ ಪ್ರಾರಂಭವಾಗಿ ೧೯೬೭ರಲ್ಲಿ ಅಚ್ಚಾಗಿದೆ. 'ಮದುಮಗಳು' ೧೯ನೇ ಶತಮಾನದ ಉತ್ತರಾರ್ಧದ ಮಲೆನಾಡಿನ ಸಮಾಜದ ಚಿತ್ರಣವನ್ನು ನೀಡಿದರೆ, 'ಹೆಗ್ಗಡಿತಿ' ೨೦ನೇ ಶತಮಾನದ ಪೂರ್ವಾರ್ಧ ಸಮಾಜದ ಚಿತ್ರಣವನ್ನು ಕಟ್ಟಿಕೊಡುತ್ತದೆ.

''ತಮ್ಮ ಬರಹಗಳಲ್ಲಿಯೇ ಕಂಡು ಬರುವಂತೆ ಕುವೆಂಪು ಉದಾರವಾದಿ, ರಾಷ್ಟ್ರೀಯವಾದಿ ಬೆಳೆದ ಪರಿಸರ ಅವರನ್ನು ಪುನರುತ್ಥಾನವಾದಿ ಲೇಖಕರನ್ನಾಗಿಸಿದೆ ಎನಿಸುತ್ತದೆ. ಹಾಗೆಂದು ಈ ವ್ಯಕ್ತಿಗಳು ವೈದಿಕ ಪುನರುತ್ಥಾನವಾದಿ ಮಾದರಿಯವಾಗಲಿ, ಪಾಶ್ಚಿಮಾತ್ಯವಾದುದನ್ನೆಲ್ಲಾ ತಿರಸ್ಕರಿಸುವಂಥಾಗಲಿ ಅಲ್ಲ. ಹಿಂದೂ ಧರ್ಮದ ಬಗ್ಗೆ ಕ್ರೈಸ್ತ ಮಿಷನರಿಗಳು ಮಾಡುತ್ತಿದ್ದ ಅನುಚಿತ ಟೀಕೆಯ ಬಗ್ಗೆ ಕೃತಿಗಳಲ್ಲಿ ಪ್ರತಿರೋಧವಿದೆ. ಆದರೆ, ಈ ಪ್ರತಿರೋಧ ಹಿಂದೂ ಮತಾಂಧರು ಒಡ್ಡಿದ ಪ್ರತಿರೋಧದಂತಿಲ್ಲ. ಸಮುಚಿತ್ತದ್ದು. ವೈಚಾರಿಕವಾದದ್ದು ಮತ್ತು ಆರೋಗ್ಯಕರವಾದದ್ದು. ಸಂಪ್ರದಾಯದಲ್ಲಿ ಪ್ರಗತಿ ಪರವಾದುದನ್ನು, ಸಾಮಾಜಿಕ ಆರೋಗ್ಯ ಕಾಪಾಡಬಲ್ಲದ್ದನ್ನೂ

ವೈಚಾರಿಕವಾದುದನ್ನೂ ಸಮರ್ಥಿಕೊಳ್ಳುವ ಕೃತಿಗಳು, ಅನಿಷ್ಟ ಅವೈಚಾರಿಕ, ಸಮಾಜ ಕಂಟುಕವಾದುದನ್ನೆಲ್ಲಾ ಖಂಡಿಸಿ ತಿರಸ್ಕರಿಸಿ ಬಿಡುತ್ತವೆ. ಕುವೆಂಪು ಕೃತಿಗಳ ವಿಶಿಷ್ಟತೆ ಇರುವುದಲ್ಲೇ. ಅನ್ಯಧರ್ಮೀಯರ ಅನುಚಿತ ಟೀಕೆಗೊಳಗಾದಾಗ ಸ್ವಧರ್ಮವನ್ನು ಸಮರ್ಥಿಸಿಕೊಳ್ಳುವ ತಂತ್ರವೂ ಇಲ್ಲಿದೆ. ಹಾಗೆಯೇ ಸ್ವಧರ್ಮಿಯರನ್ನು ಅರ್ಥಮಾಡಿಕೊಳ್ಳದೆ ಅದನ್ನು ಹೀಗಳೆಯುವವರನ್ನು ಮೂದಲಿಸಿ ಸರಿಯಾದ ದಾರಿಗೆ ತರುವ ಪ್ರಯತ್ನವೂ ಇದೆ. ಸಂಪ್ರದಾಯ, ಹೊಸಶಿಕ್ಷಣ, ಪುರೋಹಿತಶಾಹಿ ಮತ್ತು ವೈಚಾರಿಕತೆಗಳ ಸಂಘರ್ಷದ ಚಿತ್ರಣವೂ ಮನೋಜ್ಞವಾಗಿದೆ. ತೀವ್ರ ಶೋಷಣೆಗೆ ತುತ್ತಾದ ಸ್ತ್ರೀಯರು ಅಸ್ಪೃಶ್ಯರು, ಮತ್ತವರ ದುಃಖದುಮ್ಮಾನಗಳೇ ಈ ಕೃತಿಗಳ ಸಾರಂಶವಾಗಿವೆ. ಈ ಸಮಸ್ಯೆಗಳೇ ಅಂದಿನ ನೈಜ ರಾಷ್ಟ್ರೀಯವಾದಿಗಳ ಮುಖ್ಯ ಕಾಳಜಿಗಳಾಗಿದ್ದವೆನ್ನುವ ಹಿನ್ನೆಲೆಯಲ್ಲಿ ಈ ಕೃತಿಗಳ ಚಾರಿತ್ರಿಕ ಮಹತ್ವವೂ ಸ್ಪಷ್ಟವಾಗುತ್ತದೆ. ಡಾ.ಶಿವರುದ್ರಪ್ಪನವರು ಹೇಳುವಂತೆ 'ಸಮಕಾಲೀನ ಭಾರತದ ಸಾಂಸ್ಕೃತಿಕ ಇತಿಹಾಸ ಮತ್ತು ಸಾಮಾಜಿಕ ಪರಿಸರವನ್ನು ಸರಳವಾಗಿ ಮತ್ತು ಪರಿಣಾಮಕಾರಿಯಾಗಿ ನಮಗೆ ಕಟ್ಟಿ ಕೊಡುತ್ತವೆ' ಎಂಬುವುದು ಇಲ್ಲಿ ಸತ್ಯವಾಗಿವೆ.

ಕುವೆಂಪು ಬರೆಯುತ್ತಾರೆ 'ಮುಂದೆ ನಾನು 'ಕಾನೂರು ಹೆಗ್ಗಡತಿ' ಮತ್ತು 'ಮಲೆಗಳಲ್ಲಿ ಮದುಮಗಳು' ಕಾದಂಬರಿಗಳನ್ನು ಬರೆದ ಮೇಲೆ 'ಕಾಲೋಸ್ಮಿ' ಎಂಬ ಹೆಸರಿನ ಒಂದು ಮಹಾ ಕಾದಂಬರಿಯನ್ನು ಬರೆಯಲು ಸಂಕಲ್ಪಿಸಿದೆ. ಆ ಕಾದಂಬರಿಯಲ್ಲಿ ಇಡೀ ನಮ್ಮ ರಾಷ್ಟ್ರ ಜೀವನದ ಒಂದು ಶತಮಾನವನ್ನು ಸ್ವಾತಂತ್ರ್ಯ ಸಂಗ್ರಾಮಾದಿಯಾಗಿ ಅದರ ಶತಶತ ಮುಖಗಳನ್ನು, ಹಳ್ಳಿ-ಪಟ್ಟಣ, ಸಂಸಾರ-ಸನ್ಯಾಸ, ಮತ-ಆಧ್ಯಾತ್ಮ ಮೌಢ್ಯ ವಿಜ್ಞಾನಪ್ರಗತಿ-ರಾಜಕೀಯ-ಸಾಮಾಜಿಕ ಇತ್ಯಾದಿಗಳನ್ನು ಚಿತ್ರಿಸಬೇಕೆಂದು ಸಂಕಲ್ಪಿಸಿದೆ. ಅದಕ್ಕಾಗಿ ಸಾಮಗ್ರಿಗಳನ್ನೂ ಸಂಗ್ರಹಿಸತೊಡಗಿದೆ. ಹಾಗೆ ಕೂಡಿ ಹಾಕಿರುವ ಜೀವನ ಚರಿತ್ರೆಗಳಲ್ಲಿ ಅನಾಮಧೇಯರೂ, ಅಖ್ಯಾತರೂ, ಆದವರ ಬದುಕುಗಳೂ ಸೇರಿವೆ.' ಕುವೆಂಪು ಸಂಕಲ್ಪಿಸಿದ್ದ 'ಕಾಲೋಸ್ಮಿ' ಎಂಬ ಮಹಾಕಾದಂಬರಿಯನ್ನು ಬರೆದಿದ್ದರೆ ಅನೇಕ ವಿಚಾರಗಳನ್ನು ತಿಳಿಯಲು ಸಹಕಾರಿಯಾಗುತ್ತಿತ್ತು. ಅದು ಮಲೆನಾಡಿನ ಬಗ್ಗೆಯೂ ಹೆಚ್ಚಿನ ಬೆಳಕು ಚೆಲ್ಲುತ್ತಿತ್ತೊ ಏನೊ.

ಕುವೆಂಪು ನಾಮಧಾರಿ ಒಕ್ಕಲಿಗ ಕುಟುಂಬದಲ್ಲಿ ಜನಿಸಿದರೂ ತಮ್ಮ ಚಿಂತನೆ, ಆಧ್ಯಾತ್ಮ ಮತ್ತು ಸೃಜನಶೀಲ ಬರವಣಿಗೆಯಿಂದಾಗಿ ವಿಶ್ವಮಾನವತ್ವದ ಸ್ಫೂರ್ತಿಯನ್ನು ಮೈಗೂಡಿಸಿಕೊಂಡವರು. ಅವರ 'ಪಂಚಮಂತ್ರ' ಮತ್ತು 'ಸಪ್ತಸೂತ್ರಗಳು' ಇದಕ್ಕೆ ಕನ್ನಡಿ ಹಿಡಿದಂತೆ. ಅವರ ವಿಶ್ವಮಾನವ ಗೀತೆ 'ಓ ನನ್ನ ಚೇತನ ಆಗು ನೀ ಅನಿಕೇತನ' ಅವರ ವಿಶ್ವಪ್ರಜ್ಞೆಯನ್ನು ಪ್ರಚುರಪಡಿಸುತ್ತದೆ. 'ಆತ್ಮಶ್ರೀಗಾಗಿ ನಿರಂಕುಶ ಮತಿಗಳಾಗಿ' ಎಂದು ಹೇಳಿದ್ದ ಕುವೆಂಪು ಅವರ ಮಾತು ಎಲ್ಲರಿಗೂ ಸದಾ ಸ್ಮರಣೀಯ. ಕುವೆಂಪುರವರು ಬದುಕಿದ್ದಾಗಲೇ ಅವರ ಹೆಸರಿನಲ್ಲಿ ಒಂದು ವಿಶ್ವವಿದ್ಯಾನಿಲಯವನ್ನು ಸ್ಥಾಪಿಸಿದ್ದು ಕೇವಲ ಅವರಿಗೆ ಸಂದ ಗೌರವವಾಗಿರದೆ ಮಲೆನಾಡಿಗರೆಲ್ಲರಿಗೂ ಸಂದ ಗೌರವವಾಗಿದೆ.

ನಾಮಧಾರಿ ಒಕ್ಕಲಿಗರ ಬಗ್ಗೆ ಬರೆಯುತ್ತಿರುವಾಗ ಆ ಹಿನ್ನೆಲೆಗೆ ಮತ್ತು ಪರಿಸರಕ್ಕೆ ಕುವೆಂಪು ಸೇರಿದ್ದರೆಂಬ ಕಾರಣಕ್ಕಾಗಿ ಇಲ್ಲಿ ಅವರ ಬಗ್ಗೆ ಬರೆಯಲಾಗಿದೆಯೇ, ಹೊರತು ಅವರನ್ನು ಯಾವುದೇ ಜಾತಿಯ ಚೌಕಟ್ಟಿನಲ್ಲಿ ತೋರಿಸುವುದು ಉದೇಶವಲ್ಲ. ನಿಜಕ್ಕೂ ಕುವೆಂಪು ಮತ್ತು ಅವರ ಶ್ರೇಷ್ಠ ಸಾಹಿತ್ಯ ಸಮಸ್ತ ಕನ್ನಡಿಗರ ಆಸ್ತಿ.

ಹಲವು ಪೀಳಿಗೆಗಳನ್ನು ತಮ್ಮ ಸತ್ವಪೂರ್ಣ ಚಿಂತನೆ ಮತ್ತು ಸೃಜನಶೀಲ ಸಾಹಿತ್ಯದಿಂದ ಪ್ರೇರೆಪಿಸುತ್ತಿರುವ ಕುವೆಂಪು ಅವರಂಥಹ ಮಹಾನ್ ಚೇತನವನ್ನು ರೂಪಿಸಿದ ಮಲೆನಾಡು ನಾಮಧಾರೀ ಗೌಡ ಸಂಸ್ಕೃತಿ ಶ್ರೇಷ್ಠವಾದದೆಂದು ಹೇಳಬಹುದು.

**ನಾಮಧಾರಿ ಒಕ್ಕಲಿಗ ಹಿನ್ನೆಲೆಯಿಂದ ಮೂಡಿಬಂದ ಹಲವು ಮಹಾನ್ ಸಾಧಕರು**

ಮಲೆನಾಡಿನ ನಾಮಧಾರಿ ಒಕ್ಕಲಿಗ ಸಮಾಜ ರಾಜ್ಯಕ್ಕೆ ಮತ್ತು ರಾಷ್ಟ್ರಕ್ಕೆ ಅನುಪಮ ಕೊಡುಗೆಗಳನ್ನು ನೀಡಿದೆ. ಈ ಸಂಸ್ಕೃತಿಯಿಂದ ಮೂಡಿ ಬಂದ ಹಲವರು ಅಂತರಾಷ್ಟ್ರೀಯ ಮಟ್ಟದಲ್ಲೂ ಖ್ಯಾತರಾಗಿದ್ದಾರೆ. ಅದರಲ್ಲೂ ತೀರ್ಥಹಳ್ಳಿ ಪ್ರದೇಶದ ಪರಿಸರದಿಂದ ಮೂಡಿ ಬಂದ ಕೆಲವರ ಸಾಧನೆ ಆಸಕ್ತಿಪೂರ್ಣವಾಗಿದೆ.

ಸರಳರೂ, ಶುದ್ಧಹಸ್ತರೂ ಆಗಿದ್ದ ಕಡಿದಾಳು ಮಂಜಪ್ಪನವರು ನಮ್ಮ ರಾಜ್ಯದ ಮುಖ್ಯಮಂತ್ರಿಗಳಾಗಿ ಅನುಕರಣೀಯ ರಾಜಕೀಯವನ್ನು ನಡೆಸಿದರು. ಶಾಂತವೇರಿ ಗೋಪಾಲಗೌಡರು ಮಲೆನಾಡಿನಲ್ಲಿ ಸಮಾಜವಾದಿ ಚಳುವಳಿಯನ್ನು ನಡೆಸಿ ಚಿಂತನೆ ಸಂಘಟನೆಯಲ್ಲಿ ಡಾ. ರಾಮಮನೋಹರ ಲೋಹಿಯಾ ಅವರಿಗೆ ಸಮಾನರಾದವರು. ಮುಂದೆ ರಾಜಕೀಯದಲ್ಲಿ ಹೆಸರು ಮಾಡಿದ ಕೆಲವು ಶಿಷ್ಯರನ್ನೂ ತಮ್ಮ ಗರಡಿಯಲ್ಲಿ ತಯಾರು ಮಾಡಿದವರು. ಶೃಂಗೇರಿ ಕ್ಷೇತ್ರವನ್ನು ಪ್ರತಿನಿಧಿಸಿ, ಮಂತ್ರಿಗಳಾಗಿದ್ದು (ವಿದ್ಯಾ) ಶುದ್ಧ ರಾಜಕಾರಣಿಯಾಗಿ "ಮಲೆನಾಡು ಗಾಂಧಿ" ಎಂದು ಹೆಸರಾಗಿರುವ ಶ್ರೀ ಎಚ್.ಜಿ. ಗೋವಿಂದೇಗೌಡರು ಸಹ ಮೇಲಿನ ಹಿನ್ನೆಲೆಯಿಂದ ಮೂಡಿಬಂದವರು.

ಕೃಷಿಕ್ಷೇತ್ರದಲ್ಲಿ ಹಲವಾರು ಸಂಶೋಧನೆಗಳನ್ನು ನಡೆಸಿ, ಉತ್ತಮ ಫಲಗಳನ್ನು ಪಡೆದಿರುವ ಶ್ರೀ ದೇವಂಗಿ ಪ್ರಫುಲ್ಲ ಚಂದ್ರ ಅವರು ಅಂತರಾಷ್ಟ್ರೀಯ ಖ್ಯಾತಿಯನ್ನು ಪಡೆದವರು. ರೈತ ಚಳುವಳಿ ಮತ್ತು ಸಂಘಟನೆಯಲ್ಲಿ ದಿ|| ಎನ್.ಡಿ. ಸುಂದರೇಶ್ ಮತ್ತು ಶ್ರೀ ಕಡಿದಾಳು ಶಾಮಣ್ಣ ತುಂಬಾ ದುಡಿದವರು.

ಸಹಕಾರಿ ಕ್ಷೇತ್ರದಲ್ಲಿ ಶ್ರೀ ಬಿ.ಎಸ್. ವಿಶ್ವನಾಥ್ ಅಂತರಾಷ್ಟ್ರೀಯ ಖ್ಯಾತಿಯನ್ನು ಪಡೆದರೆ, ನ್ಯಾಯಾಂಗದಲ್ಲಿ ನ್ಯಾಯಮೂರ್ತಿ ಶ್ರೀ ಎಸ್.ಡಿ. ವೆಂಕಟೇಶ್, ಕರ್ನಾಟಕದ ಉಚ್ಛನ್ಯಾಯಾಲಯದ ನ್ಯಾಯ ಮೂರ್ತಿಯಾಗಿ ಸೇವೆ ಸಲ್ಲಿಸಿದ ನಂತರ ಈಗ ಕುವೆಂಪು ಪ್ರತಿಷ್ಠಾನದ ಅಧ್ಯಕ್ಷರಾಗಿ ಸೇವೆ ಸಲ್ಲಿಸುತ್ತಿದ್ದಾರೆ.

ಸಾಹಿತ್ಯ ಕ್ಷೇತ್ರದಲ್ಲಿ ಹತ್ತು ಹಲವು ಸೃಜನಶೀಲ ಸಾಹಿತ್ಯ ಕೃಷಿ ಮಾಡುತ್ತಾ ಪರಿಸರದ ಬಗ್ಗೆ ನಿಜಕಾಳಜಿಯನ್ನು ಹೊಂದಿ ಇತ್ತೀಚೆಗಷ್ಟೆ ನಿಧನಹೊಂದಿದ ಪಂಪ ಪ್ರಶಸ್ತಿಯೊಂದಿಗೆ ಪುರಸ್ಕೃತರಾದ ಶ್ರೀ ಪೂರ್ಣಚಂದ್ರ ತೇಜಸ್ವಿ ಮತ್ತು ಉತ್ತಮ ಸಾಹಿತಿ, ವಿಮರ್ಶಕ. ಉತ್ತಮ ಆಡಳಿತಗಾರರಾಗಿದ್ದ ಡಾ|| ಹಾ.ಮಾ. ನಾಯಕ ನಾಮಧಾರಿ ಒಕ್ಕಲಿಗ ಸಮಾಜದಿಂದ ಮೂಡಿ ಬಂದವರು. ಕಡಿದಾಳು ಎಸ್. ರಾಮಪ್ಪಗೌಡರು ಬರೆದಿರುವ 'ಮಲೆನಾಡು ಶ್ರೀ ವೈಷ್ಣವ ನಾಮಧಾರಿ ಗೌಡ ಸಂಸ್ಕೃತಿ' ಮತ್ತು ತ್ಯಾನಂದೂರು ಪುಟ್ಟಣ್ಣನವರು ಬರೆದಿರುವ 'ನಾ ಕಂಡ ಮಲೆನಾಡು' ಪುಸ್ತಕಗಳು ಮಲೆನಾಡಿನ ಬಗ್ಗೆ ಮಾಹಿತಿ ಸಂಗ್ರಹಿಸಲು ಉತ್ತಮ ಆಕರಗಳಾಗಿದ್ದು ಈ ಸಮುದಾಯದ ಗಮನಾರ್ಹ ಪ್ರತಿಭೆಗಳಾಗಿದ್ದಾರೆ.

ಏಷ್ಯನ್ ಕ್ರೀಡಾಕೂಟದಲ್ಲಿ (ಬೀಜಿಂಗ್) ಭಾರತವನ್ನು ಪ್ರತಿನಿಧಿಸಿ ಶಾಟ್‌ಪುಟ್ ಎಸೆತದಲ್ಲಿ ಕಂಚಿನ ಪದಕವನ್ನು ಗೆದ್ದು ಭಾರತಕ್ಕೆ ಕೀರ್ತಿ ಗೌರವಗಳನ್ನು ತಂದಿತ್ತ ಶ್ರೀ ಎಸ್.ಡಿ. ಈಶನ್ ಮತ್ತು ವೇಗದ ಓಟಗಾರ್ತಿಯಾಗಿ ಅಂತರಾಷ್ಟ್ರೀಯ ಕ್ರೀಡಾಕೂಟಗಳಲ್ಲಿ ಭಾರತವನ್ನು ಪ್ರತಿನಿಧಿಸಿದ್ದ ಶ್ರೀಮತಿ ಇ.ಬಿ. ಶೈಲಾ ಇವರುಗಳು ಈ ಸಮಾಜದಿಂದ ಮೂಡಿಬಂದವರು.

ಈ ಸಮುದಾಯದ ಈಚಿನ ಪೀಳಿಗೆಯ ಕೆಲವು ಭರವಸೆಯ ಲೇಖಕರು, ಸಂಘಟಕರು ಮತ್ತು ಹೋರಾಟಗಾರರೂ ಸಹ ನಮ್ಮ ಗಮನ ಸೆಳೆಯುತ್ತಾರೆ.

ಯಾವುದೇ ಒಂದು ನಿರ್ದಿಷ್ಟ ಸಾಮಾಜಿಕ ಸಾಂಸ್ಕೃತಿಕ ಹಿನ್ನೆಲೆಗೆ ಸೇರಿದ ಸಮುದಾಯದ ಕೆಲವರು ಮಾಡುವ ಸಾಧನೆ ಆ ಸಮುದಾಯದ ಯುವ ಪೀಳಿಗೆಗಳಿಗೆ ಮಾತ್ರವಲ್ಲದೆ ಎಲ್ಲರಿಗೂ ಮಾದರಿಯಾಗಬೇಕು, ಮಾರ್ಗದರ್ಶಿಯಾಗಬೇಕು. ಈ ನಿಟ್ಟಿನಲ್ಲಿ ನಾಮಧಾರಿ ಒಕ್ಕಲಿಗ ಸಮುದಾಯದ ಹಿನ್ನೆಲೆಯಿಂದ ಮೂಡಿ ಬಂದ ಕೆಲವರು ಮಾಡಿರುವ ಅನುಪಮ ಸಾಧನೆ ಆ ಸಮುದಾಯದವರಿಗೆ ಮಾತ್ರ ಸ್ಫೂರ್ತಿದಾಯಕವಾಗಿರದೆ, ಎಲ್ಲರಿಗೂ ಉದಾಹರಣಾತ್ಮಕವಾಗಿದೆ. ನಮ್ಮ ನಾಡು, ನುಡಿ ಮತ್ತು ಸಮಾಜಕ್ಕೆ ಅವರು ಮಾಡಿರುವ ಸೇವೆ ಮತ್ತು ನೀಡಿರುವ ಕೊಡುಗೆಗಳು ಅಪಾರ.

ಇಂದು ಜಾಗತೀಕರಣದ (Globalisation) ಪ್ರಕ್ರಿಯೆಯಲ್ಲಿ ಎಲ್ಲರೂ ಎದುರಿಸುತ್ತಿರುವಂತೆ ಮಲೆನಾಡಿನ ನಾಮಧಾರಿ ಒಕ್ಕಲಿಗ ಸಮಾಜವೂ ಕೆಲವು ಸಮಸ್ಯೆಗಳನ್ನು ಎದುರಿಸುತ್ತಿದೆ. ಅವುಗಳಲ್ಲಿ ಅತಿ ಮುಖ್ಯವಾಗಿ ವ್ಯವಸಾಯ ಭೂಮಿಯ ಅತಿಯಾದ ವ್ಯಾಪಾರೀಕರಣದ (Commercialisation of agriculaturl Land) ಪ್ರಯುಕ್ತ ಭೂಮಿಯೊಂದಿಗೆ ತಳುಕು ಹಾಕಿಕೊಂಡಿರುವ ಸಾಂಸ್ಕೃತಿಕ ನಂಬಿಕೆಗಳು ಮತ್ತು ಆಚರಣೆಗಳು ದುರ್ಬಲಗೊಳ್ಳುತ್ತಿರುವುದು. ಎರಡನೆಯದಾಗಿ, ನಗರಮುಖೀ ಆಶೋತ್ತರಗಳನ್ನು ಹೊಂದಿರುವ ಗಣನೀಯ ಪ್ರಮಾಣದ ಯುವ ಜನತೆ ಇಂಗ್ಲಿಷ್‌ನತ್ತ ಒಲವು ತೋರುವುದರಿಂದ ಗ್ರಾಮೀಣ ಸಂಸ್ಕೃತಿಯ ಉಳಿವು ಮತ್ತು ಬೆಳವಣಿಗೆಗೆ ತೊಂದರೆಯಾಗುತ್ತದೆಯೆ ಎಂಬ ಅನುಮಾನ ಕಾಡುತ್ತದೆ. ಮೂರನೆಯದಾಗಿ-ಮಲೆನಾಡಿನ ಒಕ್ಕಲಿಗರು ಕೇವಲ ಮಣ್ಣಿನ ಮಕ್ಕಳಾಗಿರದೆ ಕಾಡಿನ ಮಕ್ಕಳೂ ಆಗಿದ್ದಾರೆ. ಇಂದು ಅರಣ್ಯಗಳು ನಾಶವಾಗುತ್ತಿವೆ, ಪ್ರಯುಕ್ತ ಮಳೆಯೂ ಇಳಿಮುಖವಾಗುತ್ತಿದೆ, ಅಲ್ಲದೆ ಕಾಡುಗಳೊಂದಿಗೆ ಬೆಸೆದುಕೊಂಡಿರುವ ಇವರ ಸಂಸ್ಕೃತಿಯೂ ಆಂತಕವನ್ನೆದುರಿಸುತ್ತಿದೆ.

ಕುವೆಂಪು ಅವರ ಬದುಕು ಬರಹಗಳಿಂದ ಪ್ರಭಾವಿತರಾಗಿ, ವೈಚಾರಿಕತೆಯ ತುಡಿತ ಈ ಸಮುದಾಯದಲ್ಲಿ ಕಾಣುವ ಒಂದು ಆಯಾಮವಾದರೆ, ಕುವೆಂಪು ಅವರೇ ವಿರೋಧಿಸಿದ್ದ ಮತ್ತು ತಿರಸ್ಕರಿಸಿದ್ದ ಪುರೋಹಿತಶಾಹಿ ಸಾಂಸ್ಕಿಕ ರೂಪವನ್ನು ಪಡೆದುಕೊಂಡು ಈ ಸಮುದಾಯವನ್ನು ಈಗ ಪ್ರವೇಶಿಸಲು ಪ್ರಯತ್ನಿಸುತ್ತಿರುವುದು ಪ್ರಾಯಶಃ ಮತ್ತೊಂದು ಆಯಾಮ. ಯಾವುದೇ ಸಮಾಜಕ್ಕೆ ಸಾಂಸ್ಕೃತಿಕ ವಿಚಾರಗಳ ಪುನರ್ ಮೌಲ್ಯೀಕರಣ ಒಂದು ನಿರಂತರ ಪ್ರಕ್ರಿಯೆಯಾದಾಗ ಮಾತ್ರ ಆ ಸಮುದಾಯ ಸದಾ ಜಾಗೃತವಾಗಿರುತ್ತದೆ. ಮತ್ತು ಜೀವಂತವಾಗಿರುತ್ತದೆ. ಯಾವುದೇ ಸಂಸ್ಕೃತಿ ಉಳಿದು ಬೆಳೆಯಬೇಕಾದರೆ ಆ ಸಂಸ್ಕೃತಿಯ ಸಾಮಾನ್ಯವಾಗಿ ಅಲ್ಪ ಸಂಖ್ಯಾತರಾಗಿರುವ ಸೃಜನಶೀಲರು ನಿರಂತರವಾಗಿ ಶ್ರಮಿಸಬೇಕಾಗುತ್ತದೆ.

ನೂರು ವರ್ಷಗಳ ಹಿಂದೆ 'ನಾಮಧಾರಿ ಅನ್ಯೋನ್ಯಾಭಿವೃದ್ಧಿ ಸಭಾ' ಎಂಬ ಹೆಸರಿನಿಂದ ಪ್ರಾರಂಭವಾಗಿ ಅನೇಕ ಮಜಲುಗಳನ್ನು ಕಂಡು ಇಂದು ಶತಮಾನೋತ್ಸವವನ್ನು ಆಚರಿಸುತ್ತಿರುವ ಸಂಘಟನೆಗೆ ಇನ್ನೂ ಉತ್ತಮ ಕೆಲಸ ಕಾರ್ಯಗಳನ್ನು ಕೈಗೊಂಡು ರಾಷ್ಟ್ರಕ್ಕೆ ಮಾದರಿಯಾಗಲೆಂದು ಆಶಿಸಬಹುದು. ಈ ಸಂಘದ ಉಗಮದ ಬಗ್ಗೆ ಈ ಕೆಳಗಿನಂತೆ ಚರ್ಚಿಸಬಹುದಾಗಿದೆ.

### ೫.೨. ಸಂಘ ನಡೆದು ಬಂದ ದಾರಿ

ಮಲೆನಾಡು ಒಕ್ಕಲಿಗರಲ್ಲಿ ಸಾಮಾಜಿಕ ಶೈಕ್ಷಣಿಕ ಜಾಗೃತಿಯ ಚಿಂತನೆ, ಅದಕ್ಕಾಗಿ ಸಂಘಟಿತರಾಗುವ ಪ್ರಯತ್ನ ಪ್ರಾರಂಭವಾದದ್ದನ್ನು ೧೯ನೇ ಶತಮಾನದ ಪೂರ್ವಾರ್ಧದಲ್ಲೇ ನಾವು ಕಾಣಬಹುದು. ಮಲೆನಾಡು ಪ್ರಾಂತ್ಯದ ಹೃದಯಭಾಗವಾಗಿದ್ದ ತೀರ್ಥಹಳ್ಳಿಯಲ್ಲಿ ಒಕ್ಕಲಿಗರ ಸಂಘ ರೂಪುಗೊಂಡಿದ್ದರ ನಿಖರತೆಯನ್ನು ಕಂಡುಕೊಳ್ಳಲು ಹಲವಾರು ದಾಖಲೆ ಪತ್ರಗಳನ್ನು, ಬರಹಗಳನ್ನು, ಲೇಖನಗಳನ್ನು, ಘಟನೆಗಳನ್ನು ಪರಿಶೀಲನೆ-ವಿಶ್ಲೇಷಣೆ ಮಾಡಿದಾಗ ನಿಖರವಾದ ತೀರ್ಮಾನ ಸ್ವಲ್ಪ ಕಷ್ಟವೇ ಆದರೂ ಲಭ್ಯ ದಾಖಲಾತಿಗಳ ಆಧಾರದಲ್ಲಿ ೫.೫.೧೯೦೧ ರಂದು ಸಂಘ ಸ್ಪಷ್ಟ ರೂಪುರೇಷೆ ಪಡೆದುಕೊಂಡು **'ನಾಮಧಾರಿ ಅನ್ಯೋನ್ಯಾಭಿವೃದ್ಧಿ ಸಭಾ'** ಎಂಬ ನಾಮಧೇಯದೊಂದಿಗೆ ಸ್ಥಾಪಿಸಲ್ಪಟ್ಟಿದ್ದನ್ನು ನಾವು ಗುರುತಿಸಬಹುದು. ಅಂದರೆ ಈಗ ಸರಿಸುಮಾರು ನೂರು ವರ್ಷಗಳ ಮೊದಲು ಪ್ರಾರಂಭವಾದ ಸಂಘ ಅನೇಕ ಕಾಲಘಟ್ಟಗಳಲ್ಲಿ ಹಲವು ರೂಪಾಂತರಗಳನ್ನು ಏರು-ಪೇರುಗಳನ್ನು ಕಂಡೂ ನಿರಂತರವಾಗಿ ಮುನ್ನಡೆದು ಬರುತ್ತಿದೆ. ಸಂಘ ನಡೆದು ಬಂದ ಶತಮಾನದ ಸಿಂಹಾವಲೋಕನ ಎಂದರೆ ಈ ಪ್ರಾಂತ್ಯದ ಜನಜೀವನ, ಸಾಮಾಜಿಕ-ಆರ್ಥಿಕ-ಶೈಕ್ಷಣಿಕ ಅಭಿವೃದ್ಧಿ, ಆಚಾರ-ವಿಚಾರಗಳ ಚಿತ್ರಣವನ್ನೊಳಗೊಂಡ ಒಂದು ಇತಿಹಾಸ ನಿರೂಪಣೆಯೇ ಆಗುವುದು. ಮಲೆನಾಡು ನಾಮಧಾರಿ ಗೌಡಸಂಸ್ಕೃತಿಯನ್ನು ದಾಖಲು ಗೊಳಿಸಿದ ಪೂಜ್ಯರೂ-ಸದಾ ಸ್ಮರಣೀಯರೂ ಆದ ಕಡಿದಾಳ್ ಎಸ್. ರಾಮಪ್ಪಗೌಡರು, ನಂದೀಪುರ ಎನ್.ಕೆ. ಪುಟ್ಟೇಗೌಡರು, ಮಾಕೋನಹಳ್ಳಿ ದೊಡ್ಡಪ್ಪಗೌಡರು, ತ್ಯಾನಂದೂರು ವೈ. ಎಸ್ ಪುಟ್ಟಣ್ಣ ಮುಂತಾದವರ ಕೃತಿಯಲ್ಲಿ ಇದೆಲ್ಲವೂ ಅಲ್ಲಲ್ಲಿ ದಾಖಲೆ ಗೊಂಡಂತಹವುಗಳಾಗಿವೆ. ಈ ಎಲ್ಲವುಗಳ ಆಧಾರದಲ್ಲಿ ಹಾಗೂ ಸಂಘದಲ್ಲಿ ಅಳಿದುಳಿದ ಹಿಂದಿನ ದಾಖಲೆ-ಪತ್ರಗಳನ್ನು, ದೀರ್ಘಕಾಲ ಸಂಘದ ಸಂಪರ್ಕದಲ್ಲಿದ್ದ ಅನೇಕ ಹಿರಿಯರ ನೆನಪು- ಅಭಿಪ್ರಾಯಗಳನ್ನು ಆಧರಿಸಿ ಸಂಘ ನಡೆದುಬಂದ ದಾರಿ ಹೇಗೆ ಸಮುದಾಯದ ಮೇಲೆ, ಜನಾಂಗದ ಮೇಲೆ ಪರಿಣಾಮ ಬೀರಿತು ಎಂಬುದನ್ನು ಈಚಿನವರಿಗೆ ತಿಳಿಸುವ ಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ.

#### ಸಂಘದ ಹುಟ್ಟಿನ ಹಿನ್ನೆಲೆ-ಸಾಮಾಜಿಕ ಸಂದರ್ಭ

ಶಿವಮೊಗ್ಗ ಜಿಲ್ಲೆಯ ಮಲೆನಾಡುಭಾಗದ ತೀರ್ಥಹಳ್ಳಿ ತಾಲ್ಲೂಕು ಪಶ್ಚಿಮ ಘಟ್ಟಗಳಿಂದ ಆವರಿಸಲ್ಪಟ್ಟಿರುವ ಊರು. ಹಿಂದೆ ದಟ್ಟವಾದ ಗೊಂಡಾರಣ್ಯ ಪ್ರದೇಶವಾಗಿದೆ. ಸುತ್ತಲಿನ ಹೊಸನಗರ, ಕೊಪ್ಪ, ನರಸಿಂಹರಾಜಪುರ, ಶೃಂಗೇರಿ ತಾಲ್ಲೂಕುಗಳನ್ನೊಳಗೊಂಡಂತೆ ಈ ಭಾಗ ಗುಡ್ಡ ಪರ್ವತಗಳಿಂದ ಕೂಡಿದ್ದು ನಿತ್ಯ ಹರಿದ್ವರ್ಣದ ಅರಣ್ಯ ಪ್ರದೇಶವಾಗಿದೆ. ಹಿಂದೆ ಇಲ್ಲಿ ಸುಮಾರು ಇನ್ನೂರು-ಮುನ್ನೂರು ಇಂಚು ಮಳೆ ವರ್ಷದ ಆರು ತಿಂಗಳು ಎಡೆಬಿಡದೆ ಸುರಿಯುತ್ತಿತ್ತು. ಅನೇಕ ಜಾತಿಯ ಕಾಡು ಪ್ರಾಣಿಗಳು, ಪಕ್ಷಿಗಳು, ವಿಷಜಂತುಗಳು ಕಾಡಿನಲ್ಲಿ ಇದ್ದವು. ದೊಡ್ಡ ದೊಡ್ಡ ನದಿಗಳು, ಹಳ್ಳಕೊಳ್ಳಗಳು ವರ್ಷಪೂರ್ತಿ ತುಂಬಿ ಹರಿಯುತ್ತಿದ್ದುದರಿಂದ ಸಂಪರ್ಕ ಸಾಧನಗಳಿಲ್ಲದೆ ಒಂದೊಂದು ಹಳ್ಳಿಯೂ ನಡುಗುಡ್ಡೆಗಳಂತಾಗಿದ್ದವು. ಮಾರ್ಗ ಸೌಕರ್ಯ ಊರಿಂದ ಊರಿಗೆ ಇರಲೇ ಇಲ್ಲ. ತುಂಬಿ ಹರಿಯುತ್ತಿದ್ದ ನದಿ, ಹಳ್ಳ ಕೊಳ್ಳಗಳನ್ನು ದಾಟಲು ಸೇತುವೆಗಳಿರಲಿಲ್ಲ. ದೋಣಿಗಳಲ್ಲಿ, ಮರದ ಸಾರಗಳಲ್ಲಿ ದಾಟಬೇಕಿತ್ತು. ಈ ಪ್ರದೇಶದಲ್ಲಿ ವಾಸಮಾಡುವ ಜನಸಂಖ್ಯೆಯೂ ಕಡಿಮೆ ಇದ್ದು ಮಲೇರಿಯಾ ರೋಗದ ಗೂಡಾಗಿತ್ತು. ಜನರಿಗೆ ರೋಗ ರುಜಿನ ಬಂದರೆ ವೈದ್ಯಕೀಯ ಸೌಲಭ್ಯ ಇರಲಿಲ್ಲ. ಅಲ್ಲೊಂದು

ಇಲ್ಲೊಂದು ಮನೆಗಳಿದ್ದು ರಾತ್ರಿ ಕಾಲದಲ್ಲಿ ಊರಿಂದೂರಿಗೆ ಪ್ರಯಾಣ ಕಷ್ಟಕರವಾಗಿತ್ತು. ನಡೆದೇ ಹೋಗಬೇಕು; ಕಾಡು ಪ್ರಾಣಿಗಳು, ವಿಷ ಜಂತುಗಳ ಭಯ ಬೇರೆ. ವಿದ್ಯಾಭ್ಯಾಸಕ್ಕಂತೂ ಯಾವ ಸೌಲಭ್ಯ, ಶಾಲೆಗಳೂ ಇರಲಿಲ್ಲ. ನೂರು ವರ್ಷಗಳ ಹಿಂದಿನ ಇಂತಹ ಭಯಾನಕ ಸತ್ಯ ಸಂಗತಿಯನ್ನು ಕಲ್ಪಿಸಿಕೊಂಡರೆ ಜನ ಹೇಗೆ ಬದುಕಿ ಬಾಳಿದರು ಎಂದು ಊಹಿಸುವುದೂ ಕಷ್ಟ.

ಇಂತಹ ಹಿಂದುಳಿದ ಪ್ರದೇಶದಲ್ಲಿ ವ್ಯವಸಾಯ ವೃತ್ತಿಯಿಂದ, ಜೀವನ ನಡೆಸುತ್ತಿದ್ದ ಈ ಗೌಡ ಜನಾಂಗವು ಅಲ್ಲಲ್ಲಿ ಐಗಳ ಮಠ ಸ್ಥಾಪಿಸಿಕೊಂಡು, ಆಯಾಯ ಪ್ರದೇಶಕ್ಕೆ ತಮ್ಮದೇ ಆದಂಥ ಆಡಳಿತಕ್ಕೆ ಅನುಕೂಲವಾಗುವ ರೀತಿಯಲ್ಲಿ ಸೀಮೆ, ಪಾಲುಗಳನ್ನಾಗಿ ವಿಂಗಡಿಸಿಕೊಂಡು ಗೌಡಾಡಳಿತ ನಡೆಸುತ್ತಿದ್ದುದು ಅಂದಿನ ದಾಖಲೆಗಳಿಂದ ತಿಳಿದು ಬರುತ್ತದೆ. ಈ ಸೀಮೆ ಮುಖಂಡರುಗಳು, ಪಾಲು ಮುಖಂಡರುಗಳು ಸೇರಿ ನಮ್ಮ ಜನಾಂಗ ಬಹಳ ಹಿಂದುಳಿದಿದೆ, ಅನೇಕರು ಮಧ್ಯಪಾನಾದಿ ದುಶ್ಚಟಗಳಿಗೆ ಗುರಿ ಆಗಿದ್ದಾರೆ. ದುಂದುಗಾರಿಕೆಗೆ ಇತಿ ಮಿತಿ ಇಲ್ಲ. ಮಕ್ಕಳಿಗೆ ವಿದ್ಯಾಭ್ಯಾಸ ಮಾಡಿಸಲು ಯಾವ ಸೌಲಭ್ಯವೂ ಇಲ್ಲ. ವಿದ್ಯಾವಿಹೀನತ್ವವೇ ಈ ಜನಾಂಗ ಹಿಂದುಳಿಯಲು ಕಾರಣ ಎಂಬ ವಿಚಾರಗಳ ಬಗ್ಗೆ ಚರ್ಚಿಸಿ, ಜನಾಂಗದ ಕುಂದು ಕೊರತೆಗಳನ್ನು ಅಂದಿನ ಸಾಮಾಜಿಕ ಪದ್ಧತಿ-ಪರಿಸ್ಥಿತಿಗನುಗುಣವಾಗಿ ಹೇಗೆ ಪರಿಹರಿಸಬಹುದು ಎಂಬ ಬಗ್ಗೆ ಚಿಂತನೆ ಮಾಡಿದರು. ಈ ಚಿಂತನೆಯ ಫಲವಾಗಿ, ಜನಾಂಗದ ಹತ್ತೂ ಸಮಸ್ತರನ್ನೊಳಗೊಂಡ ಒಂದು ಸಂಘವನ್ನು ಸ್ಥಾಪನೆ ಮಾಡಿ ಆ ಮೂಲಕ ಜನಾಂಗದ ಅಭಿವೃದ್ಧಿಯ ಬಗ್ಗೆ ಶ್ರಮಿಸಲು ಅಂದಿನ ಜನಾಂಗದ ಮುಂದಾಳುಗಳು ಪ್ರಯತ್ನಶೀಲರಾದುದನ್ನು ೧೯೨೨ರಲ್ಲಿ ಮಿಷನರಿ ಒಬ್ಬರು ವರದಿ ರೂಪದಲ್ಲಿ ಬರೆದು ಲಂಡನ್‌ನಲ್ಲಿ ಪ್ರಕಟಿಸಿದ **'ದ ಸ್ಟೋರಿ ಆಫ್ ದ ನಾಮ್‌ಧಾರಿಸ್'** ಎಂಬ ಕಿರುಹೊತ್ತಿಗೆಯಲ್ಲೂ ಹಾಗೂ ಆ ಕಾಲದಲ್ಲಿ ನಡೆದ ಒಕ್ಕಲಿಗರ ಸಭೆಗಳ ನಡಾವಳಿ ದಾಖಲೆಗಳಲ್ಲೂ ಕಾಣಬಹುದಾಗಿದೆ.

**ಸಂಘ ಸ್ಥಾಪನೆ:**

ಜನಾಂಗದವರ ಕುಂದು-ಕೊರತೆಗಳಿಗೆ ಪರಿಹಾರ ಸೂಚಿಸಿ, ಸಮಾಜ ಬಾಂಧವರನ್ನು ಸರಿದಾರಿಯಲ್ಲಿ ಕೊಂಡೊಯ್ಯಬೇಕೆಂಬ ಪ್ರಗತಿಪರ ಚಿಂತನೆಯಲ್ಲಿ ಸಂಘ ಸ್ಥಾಪನೆಗೆ ಅಂದಿನ ಜನಾಂಗದ ಗಣ್ಯರೂ-ಪ್ರಾಜ್ಞರೂ ಆದ ಮಳುವಾಡಿ (ನಾಲೂರು) ಎಂ. ಆರ್. ಗಿರಿಯಪ್ಪ ಗೌಡರು ಹಾಗೂ ದೇವಂಗಿ ರಾಮಣ್ಣಗೌಡರು ಮುಂದಾಳತ್ವ ನೀಡಿದರು. ಇವರ ಕರೆಯ ಮೇರೆಗೆ ತಾರೀಖು ೫.೫.೧೯೦೧ ರಲ್ಲಿ ಈ ಪ್ರಾಂತ್ಯದ ಒಕ್ಕಲಿಗರ ಸಭೆ ಅರಗದಲ್ಲಿ ಸೇರಿತು. ಆ ಸಭೆಯ ಅಗ್ರಾಸನವನ್ನು ಅಂದಿನ ಜನಾಂಗದ ಗಣ್ಯರಲ್ಲೊಬ್ಬರಾದ ಅಲಿಗೆ ಗಣಪಯ್ಯ ನಾಯ್ಕರು ವಹಿಸಿದ್ದರು. ಆ ಸಭೆಯಲ್ಲಿ ಜನಾಂಗದ ಅನೇಕ ವಿಚಾರಗಳ ಬಗ್ಗೆ ಚರ್ಚಿಸಿ, ಜನಾಂಗದ ಸರ್ವತೋಮುಖ ಏಳಿಗೆಗಾಗಿ ಶ್ರಮಿಸಲು "ನಾಮಧಾರಿ ಅನ್ಯೋನ್ಯಾಭಿವೃದ್ಧಿ ಸಭಾ ಸರ್ವಾನುಮತದ ನಿರ್ಣಯ ಕೈಗೊಂಡರು. ಅಲ್ಲಿ ಒಂದು ಸ್ಟ್ಯಾಂಡಿಂಗ್ ಕಮಿಟಿಯನ್ನು ರಚಿಸಲಾಯ್ತು. ಈ ಕಮಿಟಿಗೆ ಎಂ.ಆರ್. ಗಿರಿಯಪ್ಪಗೌಡರು ಕಾರ್ಯದರ್ಶಿಗಳಾಗಿಯೂ, ದೇವಂಗಿ ರಾಮಣ್ಣಗೌಡರು ಕೋಶಾಧಿಕಾರಿಗಳಾಗಿಯೂ ಆಯ್ಕೆಯಾದರು. ಈ ಸಮಿತಿಯಲ್ಲಿ ಚನ್ನಪ್ಪಗೌಡರು, ಶೇಕ್‌ದಾರ್ ತಿಮ್ಮಪ್ಪಗೌಡರು, ಜಮೇದಾರ್ ತಿಮ್ಮಪ್ಪನವರು, ಟಿ. ಸಿದ್ದಪ್ಪನವರು ಮುಂತಾದವರು ಸದಸ್ಯರು. ಆ ಸಭೆಯ ಮುಖ್ಯ ನಡಾವಳಿಗಳೆಂದರೆ.

೧. ಕನ್ಯಾ ವಿಕ್ರಯವನ್ನು ನಿಲ್ಲಿಸುವುದು.

೨. ಕನ್ಯಾ ಶುಲ್ಕವನ್ನು ಕೈಬಿಡುವುದು.

೩. ವಿಧವಾ ವಿವಾಹವನ್ನು ನಿಷೇಧಿಸದಿರುವುದು

೪.ಮಧ್ಯಪಾನ ತ್ಯಜಿಸಲು ಪ್ರಚಾರ ಕೈಗೊಳ್ಳುವುದು

೫. ವಿಧ್ಯಾಭ್ಯಾಸವನ್ನು ಪ್ರೋತ್ಸಾಹಿಸುವುದು.

ಇವು ಅಂದಿನ ಸಭೆಯು ರಚಿಸಿದ ನೀತಿಸಂಹಿತೆಯ ಪಂಚಸೂತ್ರಗಳಾಗಿದ್ದವು. ತೀರ್ಥಹಳ್ಳಿಯಲ್ಲಿ ಒಂದು ವಿದ್ಯಾರ್ಥಿನಿಲಯ ಕಟ್ಟಲು ಹಣ ಸಂಗ್ರಹಿಸುವ ಜವಾಬ್ದಾರಿಯನ್ನು ಈ ಸಮಿತಿಗೆ ವಹಿಸಲಾಯ್ತು. ಈ ಕಾರ್ಯಕ್ಕೆ ವಿವಿಧ ಗ್ರಾಮಸಮಿತಿಗಳನ್ನು ಅಸ್ತಿತ್ವಕ್ಕೆ ತರಲು ತೀರ್ಮಾನಿಸಲಾಯ್ತು. ಸಭೆಯಲ್ಲಿದ್ದ ಅನೇಕರು ವಿಧ್ಯಾಭ್ಯಾಸ ಪ್ರೋತ್ಸಾಹಕ್ಕೆ ಮುಂದಾದರು ಹಾಗೂ ಕೆಲವು ಸಾಮಾಜಿಕ ಸುಧಾರಣೆಗಳನ್ನು ತರಲು ನಿರ್ಧರಿಸಿದರು. ಈ ಸಂಘದ ಕಾರ್ಯಕ್ಷೇತ್ರ ತೀರ್ಥಹಳ್ಳಿ ತಾಲ್ಲೂಕು, ಕೊಪ್ಪ ಮತ್ತು ನಗರ ಪ್ರಾಂತ್ಯಗಳನ್ನೊಳಗೊಂಡ ಮಲೆನಾಡು ಭಾಗಕ್ಕೆ ವಿಸ್ತರಿಸಲು ತೀರ್ಮಾನಿಸಿತು.

ಈ ರೀತಿ ರಚನೆಗೊಂಡ 'ನಾಮಧಾರಿ ಅನ್ಯೋನ್ಯಾಭಿವೃದ್ಧಿ ಸಭಾ'ದ ನೀತಿ ಸಂಹಿತೆ-ನಿರ್ಣಯಗಳನ್ನು ಅಂದಿನ ಮೈಸೂರು ಮಹಾರಾಜರಾದ ನಾಲ್ವಡಿ ಕೃಷ್ಣರಾಜ ಒಡೆಯರಿಗೆ ಕಳುಹಿಸಿಕೊಡಲಾಗಿ, ಮಹಾರಾಜರು ಈ ಸಂಘದ ಪ್ರಣಾಳಿಕೆಯನ್ನು ನೋಡಿ, ಮೆಚ್ಚಿಕೊಡು ೧೯೦೧ರ ಜುಲೈ ೧೭ ನೇ ತಾರೀಖು ರಾಜಮುದ್ರೆಯೊಂದಿಗೆ ಸಹಿ ಮಾಡಿ ಹಿಂಬರಹದ ಒಂದು ಪತ್ರ ಬರೆಸಿದ್ದರೆಂಬುವುದು ಅನೇಕ ದಾಖಲೆಗಳಲ್ಲಿ ಉಕ್ತವಾಗಿದೆ. ಈ ರೀತಿಯಲ್ಲಿ ಇಂದು ಶತಮಾನೋತ್ಸವ ಸಂಭ್ರಮವನ್ನು ಆಚರಿಕೊಂಡಿರುವ ಸಂಘ ವಿದ್ಯುಕ್ತವಾಗಿ ಸ್ಥಾಪನೆಗೊಂಡಿದ್ದನ್ನು ಕಾಣಬಹುದಾಗಿದೆ.

ಸಂಘ ಸ್ಥಾಪನೆಗೊಂಡ ನಂತರ ಗಿರಿಯಪ್ಪಗೌಡರು ಮತ್ತು ರಾಮಣ್ಣಗೌಡರು ತಮ್ಮ ಪ್ರಭಾವವನ್ನು ಬಳಸಿ ಮತ ಸಂಬಂಧವಾದ ವಿಚಾರಗಳನ್ನು ಪರಿಹರಿಸಲು, ಅಭಿವೃದ್ಧಿ ಬಗ್ಗೆ ವಿದ್ಯಾಭ್ಯಾಸದ ಬಗ್ಗೆ ಜನಾಂಗವನ್ನು ಎಚ್ಚರಿಸಲು ಶ್ರಮಿಸಿರುವುದನ್ನು ದಾಖಲೆಗಳಿಂದ ಕಾಣಬಹುದು. ಮೇಲೆ ಹೇಳಿದ ಮಿಷನರಿಯ ಕಿರು ಹೊತ್ತಿಗೆಯಲ್ಲಿ ಗಿರಿಯಪ್ಪಗೌಡರು ಮತ್ತು ರಾಮಣ್ಣಗೌಡರ ಅಂದಿನ ಕಾರ್ಯಚಟುವಟಿಕೆಗಳು ಸವಿಸ್ತಾರವಾಗಿ ದಾಖಲಾಗಿದ್ದು ಅದನ್ನು ಆಧರಿಸಿ ಹಲವು ವಿಚಾರಗಳನ್ನು ಇಲ್ಲಿ ಉಲ್ಲೇಖಿಸಬಹುದು.

ಸಂಘ ಸ್ಥಾಪನೆಗೊಂಡ ನಂತರ ಗಿರಿಯಪ್ಪಗೌಡರು ಕ್ರೈಸ್ತ ಮಿಷನರಿಗಳಿಗೆ ಒಂದು ಪತ್ರ ಬರೆದು ನನ್ನನ್ನು ಮೂವತ್ತು ಸಾವಿರ ನಾಮಧಾರಿಗಳ ಪ್ರತಿನಿಧಿಯನ್ನಾಗಿ ಮಾಡಿದ್ದಾರೆಂದೂ, ನಮ್ಮ ಮಕ್ಕಳಿಗೆ ನೀವು ಶಿಕ್ಷಣ ಮತ್ತು ಸನ್ನಡತೆಯನ್ನು ಕಲಿಸಬೇಕೆಂದೂ ಕೋರಿದರು. ಇದರಿಂದ ಬ್ರಾಹ್ಮಣರು ಬಿತ್ತಿರುವ ಮೂಢನಂಬಿಕೆಗಳಿಂದ ನಮ್ಮವರು ಹೊರ ಬರಬಹುದೆಂದು ಆಶಿಸಿದ್ದರು. ಅವರು ವೃತ್ತಾಂತ ಪತ್ರಿಕೆಗೆ ಒಂದು ಬಹಿರಂಗ ಪತ್ರ ಬರೆದು ವೆಸ್ಲಿಯನ್ ಮಿಷನ್‌ನ ಶಿಕ್ಷಣ ಸೇವೆಯನ್ನು ಹೊಗಳಿದರು . ೧೯೦೨ ರಲ್ಲಿ ಅವರು ಬೆಂಗಳೂರಿಗೆ ತೆರಳಿ ಅಲ್ಲಿನ ಕ್ರೈಸ್ತ ಪ್ರಚಾರಕರ ಸಭೆಯಲ್ಲಿ ಭಾಗವಹಿಸಿ ಕ್ರೈಸ್ತರೊಡನೆ ಸಾಮೂಹಿಕ ಪ್ರಾರ್ಥನೆಯಲ್ಲಿ ಪಾಲ್ಗೊಂಡು ಮಿಷನರಿಗಳ ವಿಶ್ವಾಸ-ನಂಬಿಕೆ ಗಳಿಸಿದರು. ಇದರಿಂದ ಮಿಷನರಿಗಳಿಗೆ ತೀರ್ಥಹಳ್ಳಿ ಪ್ರಾಂತ್ಯದ ನಾಮಧಾರಿ

ಒಕ್ಕಲಿಗರ ಬಗ್ಗೆ ಅಭಿಮಾನ ಬೆಳೆಯಿತು. ಅವರು ಒಂದಲ್ಲ ಒಂದು ದಿನ ಕ್ರಿಶ್ಚಿಯನ್ನರಾಗುತ್ತಾರೆಂಬ ಆಸೆ ಮಿಷನರಿಗಳಲ್ಲಿ ಉದಯಿಸಿತು. ಇದರಿಂದಾಗಿ ಈ ಭಾಗದಲ್ಲಿ ಮಿಷನರಿಗಳಿಂದ ಶಿಕ್ಷಣ ಮತ್ತುಆರೋಗ್ಯ ಸೇವೆಗಳು ಹೆಚ್ಚುತ್ತಾ ಬಂದವು. ಜೊತೆಯಲ್ಲಿ ಮತಾಂತರಗೊಳಿಸಲು-ಮತಾಂತರಗೊಳ್ಳಲು ಪ್ರಯತ್ನಗಳು ನಡೆಯುತ್ತಾ ಬಂದುದನ್ನೂ ನಾವು ಗುರುತಿಸಬಹುದು. ಮಿಷನರಿಯ ಕೈಹೊತ್ತಿಗೆ "ನಾಮಧಾರಿಗಳ ವೃತ್ತಾಂತ" ವನ್ನ ಪೂರ್ಣ ಇದರೊಂದಿಗೆ ಪ್ರತ್ಯೇಕವಾಗಿ ನೀಡಿರುವುದರಿಂದ ಅದರಲ್ಲಿನ ವಿಚಾರಗಳನ್ನು ಇಲ್ಲ ವಿಸ್ತಾರವಾಗಿ ವಿವರಿಸಲು ಹೋಗುವುದಿಲ್ಲ. ಕ್ರೈಸ್ತಮತ ಪ್ರಚಾರಕರ ಪ್ರಭಾವಕ್ಕೆ ಒಳಗಾದ ಸಿಂದುವಾಡಿ ಚನ್ನಪ್ಪಗೌಡರು ಆ ದಿನಗಳಲ್ಲೇ ಅಧಿಕೃತವಾಗಿ ಕ್ರೈಸ್ತಮತ ಸ್ವೀಕರಿಸಿದರು. ಗಿರಿಯಪ್ಪಗೌಡರು ಮತ್ತು ರಾಮಣ್ಣಗೌಡರು ಒಲವು ತೋರಿಸಿದರಾದರೂ ಅವರುಗಳ ಕುಟುಂಬದವರ ಪ್ರಬಲ ವಿರೋಧದಿಂದಾಗಿ ಮತಾಂತರಗೊಳ್ಳಲಿಲ್ಲ ಎಂದು ಇವರ ಕುಟುಂಬವರ್ಗದವರ ಅಭಿಪ್ರಾಯವಾಗಿದೆ.

ವಿದ್ಯಾಪ್ರಚಾರದ ಬಗ್ಗೆ ಪಣತೊಟ್ಟಿದ್ದ ಗಿರಿಯಪ್ಪಗೌಡರು ಮತ್ತು ರಾಮಣ್ಣಗೌಡರು ಈ ನಿಟ್ಟಿನಲ್ಲಿ ತಮ್ಮ ಪ್ರಯತ್ನ ಮುಂದುವರಿಸುತ್ತಾ ಬಂದರು. ಶಾಲೆ ತೆರೆಯಲು ರಾಮಣ್ಣಗೌಡರು ತಮ್ಮ ಹೊಸಮನೆಯ ಒಂದು ಭಾಗವನ್ನು ಮಿಷನರಿಗಳಿಗೆ ಬಿಟ್ಟುಕೊಟ್ಟರು. ನಾಲೂರಿನಲ್ಲಿ ಗಿರಿಯಪ್ಪಗೌಡರು ವಸತಿ ಶಾಲೆ ಕಟ್ಟಲು ಒಂದು ನೂರು ರೂಪಾಯಿಗಳನ್ನು ದಾನವಾಗಿ ನೀಡಿ ಮಿಷನರಿಗಳ ಬೆಂಬಲಕ್ಕೆ ನಿಂತರು, ಧರ್ಮಪ್ರಚಾರಕರಿಗೆ ಇಳಿದುಕೊಳ್ಳಲು ಗ್ರಾಮಸ್ಥರು ವಸತಿ ಸೌಲಭ್ಯ ಒದಗಿಸುವಂತೆ ನೋಡಿಕೊಂಡರು. ಸಿಂದುವಾಡಿ ಚನ್ನಪ್ಪಗೌಡರ ನೆರವಿನಿಂದ ಮಂಡಗದ್ದೆಯಲ್ಲಿ ಮಿಷನರಿ ಆಸ್ಪತ್ರೆ ಪ್ರಾರಂಭವಾಯಿತು. ವೆಸ್ಲಿಯನ್ ಮಿಷನ್‌ನವರು ಈ ಭಾಗದ ಅನೇಕ ಒಕ್ಕಲಿಗ ವಿದ್ಯಾರ್ಥಿಗಳಿಗೆ ಮೈಸೂರಿನ ಹಾರ್ಡ್‌ವಿಕ್ ಪ್ರೌಢಶಾಲೆಯಲ್ಲಿ ಕಲಿಯಲು ಉಚಿತ ಊಟ ವಸತಿಯ ವ್ಯವಸ್ಥೆ ಮಾಡಿದರು. ಒಟ್ಟಿನಲ್ಲಿ ಮಲೆನಾಡುಭಾಗದ ಒಕ್ಕಲಿಗ ಜನಾಂಗದವರಲ್ಲಿ ಮೊದಲ ಬಾರಿಗೆ ಹೊಸ ಆಲೋಚನೆಯ ಹೊಸ ಆಕಾಂಕ್ಷೆಯ ಗಾಳಿ ಬೀಸತೊಡಗಿತು. ಮಿಷನರಿಗಳಲ್ಲೂ ನಿರೀಕ್ಷೆ ಹೆಚ್ಚತೊಡಗಿತು. ಇದರಲ್ಲಿ ಒಬ್ಬರದು ಆಧುನಿಕ ಶಿಕ್ಷಣದ ಹಂಬಲವಾದರೆ ಮತ್ತೊಬ್ಬರದು ಮತಾಂತರಗೊಳಿಸುವ ಉದ್ದೇಶವಾಗಿದ್ದಿತು. ಈ ಬದಲಾವಣೆಗಳ ಪರಿಣಾಮವಾಗಿ ಆ ದಿನಗಳಲ್ಲಿ ಮುಂದೆ ರಾಷ್ಟ್ರಕವಿಯಾಗಿ ಪ್ರಬುದ್ಧರಾದ ಕುವೆಂಪು ಅವರ ಪ್ರಾಥಮಿಕ ಶಿಕ್ಷಣ ನಡೆದದ್ದು ಮೋಸೆಸ್ ಎಂಬ ಪರಿವರ್ತಿತ ಕ್ರೈಸ್ತರಿಂದ, ಇಲ್ಲದಿದ್ದರೆ ಅವರು ದಕ್ಷಿಣಕನ್ನಡ ಐಯ್ಯಗಳಿಂದ ಕಲಿಯಬೇಕಾಗಿತ್ತು.

**ಎರಡನೇ ಮಹಾಸಭೆ**

೧೯೦೭ ರಲ್ಲಿ ಗಿರಿಯಪ್ಪ ಗೌಡರು ತೀರಿಕೊಂಡ ನಂತರ ಸಂಘದ ಚಟುವಟಿಕೆ ಆಶಯವನ್ನು ಮುಂದುವರಿಸುವ ಜವಾಬ್ದಾರಿ ದೇವಂಗಿ ರಾಮಣ್ಣಗೌಡರ ಹೆಗಲಿಗೆ ಬಂತು. ವಿದ್ಯಾರ್ಥಿನಿಲಯ ಸ್ಥಾಪನೆಗಾಗಿ ಹಣ ಸಂಗ್ರಹಿಸುವುದರ ಜೊತೆಯಲ್ಲಿಮತ ಸಂಬಂಧಿ ಸುಧಾರಣಾ ಕಾರ್ಯಗಳನ್ನು ನಡಿಸುತ್ತಾಬಂದರು. ೧೯೧೧, ಡಿಸೆಂಬರ್ ೨೧ರಲ್ಲಿ ದೇವಂಗಿ ರಾಮಣ್ಣಗೌಡರ ನೇತೃತ್ವದಲ್ಲಿ ತೀರ್ಥಹಳ್ಳಿ ಪೇಟೆಯಡೇಹಳ್ಳಿ ಶೇಷಪ್ಪನವರ ಅಂಗಡಿ ಮಹಡಿಮೇಲೆ ಜನಾಂಗದವರ ಮಹಾಸಭೆ ಸೇರಿ ಜನಾಂಗದ ಮುಂದಿರುವ ಸಮಸ್ಯೆಗಳ ಬಗ್ಗೆ ಚರ್ಚಿಸಿದರು. ಈ ಸಭೆಯಲ್ಲಿ ದೇವಂಗಿ ರಾಮಣ್ಣಗೌಡರು, ಮಂಡಗದ್ದೆ ಅಡ್ಡಮನೆ ಭರಮಯ್ಯಗೌಡರು, ಸಿಂಧುವಾಡಿ ಬಿ. ಚನ್ನಪ್ಪಗೌಡರು ಅಂದಿನ ಸಾಮಾಜಿಕ ಅನಿಷ್ಟಗಳಾದ ಮಧ್ಯಪಾನ, ಕನ್ಯಾ ವಿಕ್ರಯ, ಮತಾಂತರದ ಕುಟಿಲೋಪಾಯ ತಡೆಗಟ್ಟುವುದು,

ಮುಂತಾದವುಗಳ ಬಗ್ಗೆ ಬಹು ಸ್ವಾರಸ್ಯವಾಗಿ ಮಾತನಾಡಿ ಸಭೆಯ ಗಮನ ಸೆಳೆದರು. ಅಂದಿನ ಸಭೆಯಲ್ಲಿ ಜನಾಂಗದ ಯಾವೊಬ್ಬ ವ್ಯಕ್ತಿಯೂ ಮಧ್ಯಪಾನ ಮಾಡಕೂಡದೆಂದು ನಿರ್ಬಂಧಿಸಿದ್ದಲ್ಲದೆ, ಮಧ್ಯಪಾನ ಮಾಡಿಕೊಂಡು ಯಾವುದೇ ಸಾರ್ವಜನಿಕ ಸ್ಥಳಗಳಿಗೆ ಬರುವ ಮನುಷ್ಯನು ಸಭೆಗೆಬರಲು ಅಯೋಗ್ಯನೆಂದು ಭಾವಿಸಿ ಸಭೆಯಿಂದ ತಿರಸ್ಕರಿಸಬೇಕಲ್ಲದೆ. ಸಭೆಯವರಿಗೆ ತೋಚಿದಷ್ಟು ದಂಡ ವಿಧಿಸಲು ತೀರ್ಮಾನಿಸಿದರು. ಮಧ್ಯದ ಹಣವನ್ನು ನಾಡವ ಜನಾಂಗದವರಾರೂ ಹರಾಜುಗಳಲ್ಲಿ ಹಿಡಿಯಕೂಡದೆಂದು ತೀರ್ಮಾನಿಸಿದರು. ಕನ್ಯಾ ವಿಕ್ರಯ ಮುಂದುವರಿಯುತ್ತಿರುವುದಕ್ಕೆ ಮತಾಂತರ ಪ್ರಯತ್ನಗಳು ನಡೆಯುತ್ತಿರುವ ಬಗ್ಗೆ ತುಂಬಾ ವಿಷಾದ ಪಟ್ಟು ಊರಿನ ದುಷ್ಟಪದ್ಧತಿ ನಿಲ್ಲಿಸಲು, ಮತಾಂತರ ತಡೆಗಟ್ಟಲು ಎಲ್ಲರೂ ಪ್ರಯತ್ನಪಡಬೇಕೆಂದು ತೀರ್ಮಾನಿಸಿದರು. ಈ ತೀರ್ಮಾನವನ್ನು ಕಟ್ಟುನಿಟ್ಟಾಗಿ ಜಾರಿಗೆ ತರಲು ನಾಮಧಾರಿ ಅನ್ಯೋನ್ಯಾಭಿವೃದ್ಧಿ ಸಭಾದ ಟ್ರಜರರ್ ದೇವಂಗಿ ರಾಮಣ್ಣ ಗೌಡರಿಗೆ ಹೆಚ್ಚಿನ ಅಧಿಕಾರ ನೀಡಿತು.

ಅಲ್ಲಿಂದ ಈ ಸಂಘದ ವಾರ್ಷಿಕ ಸಭೆಯು ಪ್ರತಿ ಸಂವತ್ಸರದ ಪುಷ್ಯಶುದ್ಧ ಪಾಡ್ಯದಲ್ಲು ಕ್ರಮವಾಗಿ ಸೇರಾತ್ತಾ, ಜನಾಂಗದ ಶ್ರೇಯೋಭಿವೃದ್ಧಿ ಬಗ್ಗೆ ಅನೇಕ ನಿರ್ಣಯಗಳನ್ನು ಕೈಗೊಂಡು, ಅವುಗಳನ್ನು ಕಾರ್ಯಗತಗೊಳಿಸಲು ಹಾಗೂ ಬಡತನ, ರೋಗ-ರುಜಿನ, ಮೂಢನಂಬಿಕೆಗಳಿಂದ ಜನಾಂಗವನ್ನು ಪಾರುಮಾಡಲು ಸಂಘ ಹಲವಾರು ಕ್ರಮಗಳನ್ನು ಕೈಗೊಂಡಿದ್ದನ್ನು ದಾಖಲೆಗಳಿಂದ ಗಮನಿಸಬಹುದು. ಈ ಎಲ್ಲ ಸುಧಾರಣೆಗಳಿಗೆ ಅಂದಿನ ಜನಾಂಗದ ಹಿರಿಯರ, ಸೀಮೆ ಮುಂಖಡರ, ಪಾಲು ಮುಖಂಡರ ಸಹಕಾರವನ್ನು ಪಡೆದದ್ದು ದಾಖಲೆಗಳಿಂದ ವ್ಯಕ್ತವಾಗುತ್ತದೆ.

**ಮದ್ಯಪಾನ ತ್ಯಜಿಸಿದ ಬಗ್ಗೆ ಮುಚ್ಚಳಿಕೆ**

ಸಂಘದ ಎರಡನೇ ಮಹಾಸಭೆಯ ನಿರ್ಣಯದಂತೆ ಮದ್ಯಪಾನ ನಿಷೇಧಿಸುವ ಬಗ್ಗೆ ಎಲ್ಲಾ ಸೀಮೆಗಳ ಪಾಲು ಮುಖಂಡರುಗಳು ಕಾರ್ಯಪ್ರವೃತ್ತರಾದರು. ಆಯಾಯಾ ಪಾಲಿನ ಮುಖಂಡರು ಜನಾಂಗದ ಸಭೆ ಸೇರಿಸಿ ಇನ್ನು ಮುಂದೆ ಮದ್ಯಪಾನ ಮಾಡುವುದಿಲ್ಲವೆಂದು ಅವರುಗಳಿಂದ ಮುಚ್ಚಳಿಕೆ ಬರೆಸಿಕೊಳ್ಳಲು ಪ್ರಾರಂಭಿಸಿದರು. ಅಂಥ ಒಂದು ಮುಚ್ಚಳಿಕೆಯ ಯಥಾ ನಕಲು ಈ ಕೆಳಗಿನಂತಿರುತ್ತೆ:

ತಾರೀಖು : ೧೪.೩.೧೯೧೨

ಕೊಪ್ಪದ ಶ್ರೀ ಮಠಕ್ಕೂ ಮತ್ತು ಸೀಮೆಯವರಿಗೂ ಮುತ್ತೂರು ಸೀಮೆ ಹಳುವಾನಿ ಪಾಲಿನ ನಾಮಧಾರಿ ನಾಡವರಾದ ಈ ಕೆಳಗೆ ರುಜು ಮಾಡಲ್ಪಟ್ಟ ಡಿಸೆಂಬರ್ ತಾರೀಖು ೨೧ರಲ್ಲಿ ತೀರ್ಥಹಳ್ಳಿಯಲ್ಲಿ ನಾಮಧಾರಿ ಅನ್ಯೋನ್ಯಾಭಿವೃದ್ಧಿ ಸಭಾದವರು ಸಭೆ ಸೇರಿ ಇತ್ಯರ್ಥ ಪಡಿಸಿದ ಪ್ರೆಸಿಡಿಂಗ್ಸ್‌ನಲ್ಲಿ ನಮೂದಿಸಿದ ೧ನ್ನು ತಿಳಿದು ಕೊಂಡದ್ದಾಯಿತು. ಇದಕ್ಕೆ ಅನುಸರಿಸಿ ಮದ್ಯಪಾನ, ಹೆಂಡ, ಕಳ್ಳು, ಸಾರಾಯಿ ವಗೈರೆ ಬಾಬ್ತುಗಳನ್ನು ಈಲಾಗಾಯ್ತು ನಾವು ಸರ್ವರು ತೆಗೆದುಕೊಳ್ಳುವುದನ್ನು ನಮ್ಮ ನಮ್ಮ ಆತ್ಮ ಸಾಕ್ಷಿ ಆಗಿಯೂ ಬಿಟ್ಟಿರುತ್ತೇವೆ. ಇನ್ನು ಮುಂದೆಯಿಂದ ತಿಳಿದು ಬಂದಲ್ಲಿ ಶ್ರೀ ಮಠಕ್ಕೆ ನಾಲ್ಕು ಮತ್ತು ಸೀಮೆಯವರಿಗೆ ನಾಲ್ಕು ಒಟ್ಟು ಎಂಟು ರೂಪಾಯಿ ದಂಡಕೊಟ್ಟು ಮತ್ತು ಅವರ ಕ್ಷಮೆ ಕೇಳುತ್ತೇವೆ. ಅಲ್ಲದೆ ತಪ್ಪಿ ಕುಡಿದವನನ್ನು ಕಂಡು ಹೇಳಿದವನಿಗೆ ೨ ರೂಪಾಯಿ ಕುಡಿದವನಿಂದ ದಂಡ ಕೊಡಿಸಲು ತೀರ್ಮಾನ ಮಾಡಿಕೊಂಡಿದ್ದೇವೆ. ಈ ತೀರ್ಮಾ:ನಗಳನ್ನು ಒಪ್ಪಿ ರುಜು ಮಾಡಿದ್ದೇವೆ. (೩೦ ಜನರ ಸಹಿ ಇರುತ್ತೆ)

ಸಂಘದ ತೀರ್ಮಾನಕ್ಕೆ ಅಂದು ಜನಾಂಗದವರು ಸ್ಪಂದಿಸುತ್ತಿದ್ದಕ್ಕೆ ಉದಾಹರಣೆಯನ್ನು ಸಂಘದ ಮುಖಂಡರು ಸೀಮೆ ಪಾಲು ಸಂಘದ ನಿರ್ಣಯಗಳನ್ನು ಜಾರಿಗೆ ತರಲು ಶ್ರಮಿಸುತ್ತಿದ್ದುದನ್ನು ಈ ಮೇಲಿನ ನಡಾವಳಿಗಳಿಂದ ಮನಗಾಣಬಹುದು.

**'ಸ್ಟೂಡೆಂಟ್ಸ್ ಹೋಂ' ಸ್ಥಾಪನೆ**

ಸಂಘದ ಎರಡನೇ ಮಹಾಸಭೆಯಲ್ಲಿ ಸ್ಟೂಡೆಂಟ್ಸ್ ಹೋಂ (ವಿದ್ಯಾರ್ಥಿನಿಲಯ) ಸ್ಥಾಪಿಸಲು ಹಾಗೂ ಕಟ್ಟಡ ನಿರ್ಮಿಸಲು ತೆಗೆದುಕೊಂಡ ನಿರ್ಣಯದಂತೆ ದೇವಂಗಿ ರಾಮಣ್ಣಗೌಡರು ಸೀಮೆ ಮುಖಂಡರಿಗೂ, ಪಾಲು ಮುಖಂಡರಿಗೂ ವೈಯಕ್ತಿಕ ಪತ್ರಗಳನ್ನು ಬರೆದು ವಿದ್ಯಾರ್ಜನೆಯಲ್ಲಿ ಜನಾಂಗ ಹಿಂದುಳಿದಿರುವುದು, ಹಳ್ಳಿಗಾಡಿನಲ್ಲಿ. ಇಲ್ಲಿ ಶಿಕ್ಷಣ ಕ್ಷೇತ್ರದ ಪ್ರಗತಿಗೆ ಯಾವುದೇ ಸೌಲಭ್ಯವಿಲ್ಲದೆ, ದೂರದ ಪಟ್ಟಣಗಳಿಗೆ ಹೋಗಲಾಗದೆ ನಮ್ಮ ಮಕ್ಕಳ ಭವಿಷ್ಯ ನಶಿಸುತ್ತಿರುವುದನ್ನು ಮನದಟ್ಟಾಗುವಂತೆ ವಿವರಿಸಿ, ಸ್ಟೂಡೆಂಟ್ಸ್ ಹೋಂ ಸ್ಥಾಪನೆಗೆ ಹಣ ಸಂಗ್ರಹಿಸಲು ಪ್ರತಿ ಪಾಲಿನಲ್ಲೂ ಸಭೆ ಏರ್ಪಡಿಸುವಂತೆ ವಿನಂತಿಸಿಕೊಂಡರು. ಅಂತೆಯೇ ಪಾಲು ಮುಖಂಡರು ಸಭೆಗಳನ್ನೇರ್ಪಡಿಸಿ ರಾಮಣ್ಣಗೌಡರಿಗೆ ಮರು ಪತ್ರ ಬರೆದಿದ್ದು, ಇವರು ತಾಲ್ಲೂಕಿನಾದ್ಯಂತ ಸಂಚರಿಸಿ, ಸಭೆಗಳಲ್ಲಿ ಪಾಲ್ಗೊಂಡು, ಜನಾಂಗದವರಿಂದ ಹಣ ಸಂಗ್ರಹಿಸಿದ ವಿವರಗಳನ್ನು ನಾವು ಲಭ್ಯ ದಾಖಲೆಗಳಿಂದ ಮನಗಾಣಬಹುದು. (ಇಂತಹ ದಾಖಲೆ ಪತ್ರಗಳನ್ನು ಇತ್ತೀಚೆಗೆ ಕಡಿದಾಳ್ ಎಸ್. ರಾಮಪ್ಪಗೌಡರು ರಚಿಸಿ, ಸಂಘವು ಪ್ರಕಟಿಸಿದ 'ಮಲೆನಾಡು ಶ್ರೀ ವೈಷ್ಣವ ನಾಮಧಾರಿ ಗೌಡ ಸಂಸ್ಕೃತಿ' ಪುಸ್ತಕದಲ್ಲಿ ನೋಡಬಹುದು. - ಸಂ)

ಈ ರೀತಿ ದೇವಂಗಿ ರಾಮಣ್ಣಗೌಡರು ಎಲ್ಲಾ ಹೋಬಳಿಗಳಲ್ಲೂ ಸಂಚರಿಸಿ ಚಂದಾ ವಸೂಲು ಮಾಡಿದ್ದಲ್ಲದೆ ತಾಲ್ಲೂಕಿನ ಕೆಲವು ಗಣ್ಯವ್ಯಕ್ತಿಗಳನ್ನು ಸಂಪರ್ಕಿಸಿ ಅವರುಗಳು ಒಂದೊಂದು ಕೊಠಡಿ ಕಟ್ಟಿಸಿಕೊಡುವಂತೆ ಮನ ಒಲಿಸಿದರು. ತೀರ್ಥಹಳ್ಳಿಯಲ್ಲಿ ಗಣ್ಯವ್ಯಕ್ತಿಗಳಾಗಿದ್ದು, ಅಂದಿನ ದಿನಗಳಲ್ಲಿ ಸಮಾಜ ಬಾಂಧವರ ವಿಶ್ವಾಸಕ್ಕೆ ಪಾತ್ರರಾಗಿದ್ದ ತುಡ್ಕಿ ರಾಮಣ್ಣಗೌಡರ ಸಹಕಾರದಿಂದ ತೀರ್ಥಹಳ್ಳಿ ಕುಶಾವತಿಯಲ್ಲಿ ಅಂದಿನ ಸ್ಥಳೀಯಾಡಳಿತದವರಿಂದ ಸುಮಾರು ಎರಡು ಎಕರೆ ಜಾಗವನ್ನು ಮುಫತ್ತಾಗಿ ಪಡೆದುಕೊಂಡು ನಿಲಯದ ನಿರ್ಮಾಣ ಕಾರ್ಯ ಕೈಗೊಂಡರು.

ದೇವಂಗಿ ರಾಮಣ್ಣಗೌಡರ ಮುಂದಾಳತ್ವದಲ್ಲಿ ನಿರ್ಮಾಣಗೊಂಡ ವಿದ್ಯಾರ್ಥಿನಿಲಯದ ಕೊಠಡಿ ದಾನಿಗಳನ್ನು ಹೆಸರಿಸುವುದಾದರೆ ಶ್ರೀಯುತರುಗಳಾದ ಕಣಗಲುಕೊಪ್ಪ ಮಂಜಪ್ಪಗೌಡರು, ಮಣೇಗಾರ್ ತಿಮ್ಮಯ್ಯಗೌಡರು ಕೂಡಿಗೆ, ಹುಗಲವಳ್ಳಿ ರಂಗಣ್ಣಗೌಡರು, ಅರಮನೆ ಕೇರಿ ಹಿರಿಯಣ್ಣಗೌಡರು, ಕುಡುಮಲ್ಲಿಗೆ ದುಗ್ಗಪ್ಪಗೌಡರು, ಹೊಸಮನೆ ಪಟೇಲ್ ಸುಬ್ಬಣ್ಣಗೌಡರ ಮಗ ಹೆಚ್.ಎಸ್. ಮಂಜಪ್ಪಗೌಡರು, ಜಿ. ರಾಮಯ್ಯಗೌಡರು, ಗರಗೇಶ್ವರ. ಈ ಏಳು ಜನ ದಾನಿಗಳಿಂದ ಏಳು ಕೊಠಡಿಗಳನ್ನು, ಮಧ್ಯದ ಸಭಾಂಗಣ, ಅಡಿಗೆ ಮನೆ, ಊಟದ ಮನೆಗಳನ್ನು ಜನಾಂಗದವರಿಂದ ಕಂಟ್ರಾಕ್ಟರ್ ಆಗಿದ್ದ ಶ್ರೀ ಚೆಲುವ ಶೆಟ್ಟರು ಈ ಸುಂದರ ಕಟ್ಟಡದ ನಿರ್ಮಾಣ ಕಾರ್ಯವನ್ನು ಮಾಡಿಸಿಕೊಟ್ಟಿರುತ್ತಾರೆ. ಈ ನಿರ್ಮಾಣಗೊಂಡ ವಿದ್ಯಾರ್ಥಿನಿಲಯಕ್ಕೆ 'ನಾಡವರ ಹಾಸ್ಟೆಲ್' ಎಂಬ ಹೆಸರಿನಲ್ಲಿ ತಾರೀಖು ೨೭.೨.೧೯೩೧ರಲ್ಲಿ ಪ್ರಾರಂಭೋತ್ಸವ ನೆರವೇರಿಸಲಾಯಿತು.

ವಿದ್ಯಾರ್ಥಿನಿಲಯ ನಿರ್ಮಾಣ ಮತ್ತು ಉದ್ಘಾಟನೆಯ ಸಂದರ್ಭದಲ್ಲಿ ಮುಖಂಡರುಗಳಲ್ಲಿ ಅಭಿಪ್ರಾಯ ಭೇದದಿಂದ ಅಸಮಾಧಾನಗಳು ಉಂಟಾದುದನ್ನೂ, ದೇವಂಗಿ ರಾಮಣ್ಣಗೌಡರ ಮಾರ್ಗದರ್ಶನದಲ್ಲಿ ತುಡ್ಕಿ ರಾಮಣ್ಣಗೌಡರು ಈ ಎಲ್ಲಾ ಅಸಮಾಧಾನಗಳನ್ನು ನಿವಾರಿಸಿ ವಿದ್ಯಾರ್ಥಿ ನಿಲಯದ ಉಸ್ತುವಾರಿಗೆ ಮುಂದಾದುದನ್ನೂ ಇಂದಿನ ಹಿರಿಯರ ಮೌಖಿಕ ಅಧಿಕಾರಿಗಳಿಂದ ತಿಳಿಯಬಹುದು.

**ಸಂಘದ ಮೂರನೆಯ ಮಹಾಸಭೆ**

ಹೊಸ ಕಟ್ಟಡ 'ನಾಡವರ ಹಾಸ್ಟೆಲ್' ಎಂಬ ಹೆಸರಿನಲ್ಲಿ ಪ್ರಾರಂಭಿಸಲ್ಪಟ್ಟ ನಂತರ ತುಡ್ಕಿ ರಾಮಣ್ಣಗೌಡರ ಮುಂದಾಳತ್ವದಲ್ಲಿ ಒಕ್ಕಲಿಗರ ಮಹಾಸಭೆಯನ್ನು ಇದೇ ಹೊಸ ಕಟ್ಟಡದಲ್ಲಿ ದಿನಾಂಕ ೯.೧.೧೯೩೨ ರಲ್ಲಿ 'ನಾಮದಾರಿ ಒಕ್ಕಲಿಗರ ಮಹಾಸಭೆ' ಎಂಬ ಹೆಸರಿನಲ್ಲಿ ಕರೆಯಲಾಯ್ತು. ಈ ಸಭೆಯಲ್ಲಿ ಸಂಘದ ಅಭಿವೃದ್ಧಿ ಬಗ್ಗೆ, ವಿದ್ಯಾರ್ಥಿ ನಿಲಯದ ಉಸ್ತುವಾರಿ ಬಗ್ಗೆ ಸುದೀರ್ಘವಾಗಿ ಚರ್ಚಿಸಿ ಹಾಸ್ಟೆಲ್‌ನ ಹೆಸರನ್ನು 'ನಾಮಧಾರಿ ಒಕ್ಕಲಿಗರ ಹಾಸ್ಟೆಲ್' ಎಂದು ಪುನರ್ ನಾಮಕರಣಗೊಳಿಸಿದರು. ಬಡ ವಿದ್ಯಾರ್ಥಿಗಳಿಗೆ ಉಚಿತ ಊಟ-ವಸತಿ ಸೌಲಭ್ಯ ಕಲ್ಪಿಸಲು ತೀರ್ಮಾನಿಸಿ ಇದಕ್ಕಾಗಿ ಜನಾಂಗದವರ ಉದಾರ ನೆರವು ಕೋರಿ ನಿರ್ಣಯ ಸ್ವೀಕರಿಸಿದರು. ಹಾಗೂ ಹಾಸ್ಟೆಲ್ ಅಭಿವೃದ್ಧಿ ಬಗ್ಗೆ ಈ ಕೆಳಕಂಡವರನ್ನೊಳಗೊಂಡ ಒಂದು ಸಮಿತಿಯನ್ನು ರಚಿಸಿದರು -

ಮಾ.ರಾ.ಶ್ರೀ ನಾಲೂರು ಎಂ.ಜಿ. ಶಂಕರಪ್ಪಗೌಡರು, ಅಧ್ಯಕ್ಷರು

" ತುಡ್ಕಿ ರಾಮಣ್ಣಗೌಡರು, ಕಾರ್ಯದರ್ಶಿಗಳು

" ನಾಡ್ತಿ ದುಗ್ಗಣ್ಣಗೌಡರು ಪಟೇಲ್

" ಮಾದಾಪುರದ ರಾಮಣ್ಣಗೌಡರು

" ಕುರುವಳ್ಳಿ ಪಟೇಲ್ ಸಿದ್ದಪ್ಪಗೌಡರು

" ಹಾರೋಗದ್ದೆ ಶಂಕರಪ್ಪ ನಾಯ್ಕರ್

" ಕೋಳಾವರದ ತಿಮ್ಮಯ್ಯಗೌಡರು

" ಅಗಳಬಾಗಿಲು ಗಂಗಪ್ಪಗೌಡರು

" ಕಿಮ್ಮನೆ ಮಂಜಪ್ಪಗೌಡರು

" ಹಾರೋಗೊಳಿಗೆ ಪಟೇಲ್ ಧರ್ಮಣ್ಣಗೌಡರು, ಸದಸ್ಯರುಗಳು.

ಈ ಸಭೆಯ ನಿರ್ಣಯಗಳಂತೆ ಸಂಘವು ಜನಾಂಗದ ಶೈಕ್ಷಣಿಕ ಅಭಿವೃದ್ಧಿಗೆ ಹೆಚ್ಚಿನ ಆದ್ಯತೆ ನೀಡಿ, ವಿದ್ಯಾರ್ಥಿನಿಲಯದಲ್ಲಿ ಕೆಲವು ಉಚಿತಾವಕಾಶಗಳನ್ನು ನೀಡುವ ಮೂಲಕ ಯುವಕರನ್ನು ವಿದ್ಯಾಭ್ಯಾಸದತ್ತ ಆಕರ್ಷಿಸಲಾಯ್ತು. ಅಂದಿನ ದಿನಗಳಲ್ಲಿ ತೀರ್ಥಹಳ್ಳಿ-ಕೊಪ್ಪ-ಶೃಂಗೇರಿ-ಹೊಸನಗರ ಈ ಮಲೆನಾಡು ಪ್ರಾಂತ್ಯಕ್ಕೆ ತೀರ್ಥಹಳ್ಳಿಯಲ್ಲಿ ಮೂರೇ ಪ್ರೌಢಶಾಲೆಯಿದ್ದು, ಈ ವಿದ್ಯಾರ್ಥಿನಿಲಯದ ಆಶ್ರಯದಿಂದಾಗಿ ಮುಚ್ಚುವ ಸ್ಥಿತಿಯಲ್ಲಿದ್ದ ಪ್ರೌಢಶಾಲೆ, ವಿದ್ಯಾರ್ಥಿಗಳ ಸಂಖ್ಯೆ ಹೆಚ್ಚಳದಿಂದ ಉಳಿದುಕೊಳ್ಳುವಂತಾಯ್ತು. ಇದೊಂದು ವಿದ್ಯಾಪ್ರಸಾರದಲ್ಲಿ ದೊಡ್ಡ ಸಾಧನೆ ಎಂದೇ ಹೇಳಬಹುದು.

**ಮಲೆನಾಡು ಒಕ್ಕಲಿಗರ ಯುವಕರ ಸಂಘ**

ವಿದ್ಯಾರ್ಥಿನಿಲಯದಲ್ಲಿ ಒಟ್ಟಾಗಿ ಸೇರುವ ಸದವಕಾಶ ಹಾಗೂ ದೊರೆತ ಸಂಪರ್ಕದಿಂದಾಗಿ, ಶಿಕ್ಷಣಾಭಿವೃದ್ಧಿಯಲ್ಲಿ ಆಸಕ್ತಿ ತಳೆದ ಹೊಸ ವಿಚಾರ ಧಾರೆಯ ಯುವಕರು ೧೯೩೨ರ ಅಂತ್ಯಭಾಗದಲ್ಲಿ **'ಮಲೆನಾಡು ಒಕ್ಕಲಿಗರ ಯುವಕರ ಸಂಘ'** ಎಂಬ ಹೆಸರಿನಲ್ಲಿ ಸಂಘವನ್ನು ಪುನರ್ ಸಂಘಟಿಸಿ, ವಿದ್ಯಾರ್ಥಿನಿಲಯದ ಅಭಿವೃದ್ಧಿ ಹಾಗೂ ಸಮಾಜೋದ್ಧಾರದ ಕೆಲಸವನ್ನು ಕೈಗೆತ್ತಿಕೊಂಡರು. ಇದಕ್ಕೆ ಹಿರಿಯರ ಮಾರ್ಗದರ್ಶನ ಹಾಗೂ ಪ್ರೋತ್ಸಾಹಗಳೂ ದೊರಕಿತು. ಯುವಕ ಸಂಘದ ಉದ್ಘಾಟನೆ ಹಾಗೂ ಮೊದಲ ಬಹಿರಂಗಾಧಿವೇಶನವನ್ನು ೧೯೩೩ ರಲ್ಲಿ ಮಾಳೂರು ಟಿ.ಬಿ. (ಈಗ ಆಸ್ಪತ್ರೆ) ಆವರಣದಲ್ಲಿ ಡಾ. ಕೆ.ವಿ. ಪುಟ್ಟಪ್ಪ (ಕುವೆಂಪು) ಅವರ ಅಧ್ಯಕ್ಷತೆಯಲ್ಲಿ ನಡೆಸಲಾಗಿತ್ತು. ಡಾ. ಕುವೆಂಪು ಅವರು ಅಂದು ಮಾಡಿದ ಉದ್ಘಾಟನಾ ಭಾಷಣದ ಮುದ್ರಿತ ಪ್ರತಿ (ಕಿರು ಹೊತ್ತಿಗೆ) ಇಂದಿಗೂ ಲಭ್ಯವಿದ್ದು, ತಮ್ಮ ಕೇವಲ ೨೯ರ ತಾರುಣ್ಯದಲ್ಲಿ ಅವರು ಸಮಾಜದ ಬಗ್ಗೆ ಹೊಂದಿದ್ದ ಕಳಕಳಿ, ಅಂದಿನ ಸಮಾಜದ ಸ್ಥಿತಿಗತಿಯನ್ನು ಅದರಲ್ಲಿನ ಅವರ ಮಾತುಗಳಿಂದ ನಾವು ಅರಿಯಬಹುದು.

ಡಾ. ಕುವೆಂಪು ಅವರ ಕರೆಯಿಂದ ಪ್ರೇರಣೆ ಪಡೆದ ಯುವಕರು ಹಲವಾರು ಪ್ರಗತಿಪರ ಕಾರ್ಯಚಟುವಟಿಕೆಗಳ ಮೂಲಕ ತುಂಬಾ ಯಶಸ್ವಿಯಾಗಿ ಸಂಘವನ್ನು ಮುನ್ನಡೆಸಿಕೊಂಡು ಬಂದರು. ಈ ರೀತಿ ಪುನರ್ ಸಂಘಟಿತಗೊಂಡ ಸಂಘದ ಮೊದಲ ಅಧ್ಯಕ್ಷರು ಹೊಸಮನೆ ಶ್ರೀ ಹೆಚ್.ಎಸ್. ಮಂಜಪ್ಪನವರು. ಕುಪ್ಪಳಿ ಶ್ರೀ ಕೆ.ಆರ್. ವೆಂಕಟಯ್ಯನವರು ಮತ್ತು ದೇವಂಗಿ ಶ್ರೀ ಡಿ.ಆರ್. ಮಾನಪ್ಪನವರು ಕಾರ್ಯದರ್ಶಿಗಳಾಗಿ ಆಯ್ಕೆಯಾಗಿದ್ದರು. ಹೊಸ ವಿಚಾರಧಾರೆಯ ಅಂದಿನ ಈ ಯುವಕರು ಪ್ರತಿವರ್ಷ ತಾಲ್ಲೂಕಿನ ಒಂದೊಂದು ಕಡೆ ವಾರ್ಷಿಕ ಅಧಿವೇಶನವನ್ನು ನಡೆಸುತ್ತಾ, ಗಣ್ಯ ಮಹನೀಯರಿಂದ ವಿಚಾರಪೂರ್ಣ ಉಪನ್ಯಾಸಗಳನ್ನು ಕೊಡಿಸುತ್ತಾ ಸಮಾಜ ಬಾಂಧವರಲ್ಲಿ ಜಾಗೃತಿ ಮೂಡಿಸಿದರು.

ಮಲೆನಾಡು ಒಕ್ಕಲಿಗ ಯುವಕ ಸಂಘದ ತೃತಿಯ ವಾರ್ಷಿಕ ಸಭೆಯು ತಾ. ೫.೫.೧೯೩೫ರಲ್ಲಿ ಹುಗಳವಳ್ಳಿಯಲ್ಲಿ ನಡೆದಿದೆ. ಈ ಸಭೆಯ ಅಧ್ಯಕ್ಷತೆಯನ್ನು ಡಾ. ಕೆ.ವಿ. ಪುಟ್ಟಪ್ಪನವರು ವಹಿಸಿದ್ದು, ಈ ಸಭೆಯಲ್ಲಿ ಮೈಸೂರು ವಿಶ್ವವಿದ್ಯಾನಿಲಯದ ಹಿರಿಯ ಅಧ್ಯಾಪಕರಲ್ಲಿ ಕೆಲವರು ಪಾಲ್ಗೊಂಡು ಉಪನ್ಯಾಸ ನೀಡಿದ್ದರು. ಐದನೇ ವಾರ್ಷಿಕ ಸಭೆಯು ತಾ. ೪.೬.೧೯೩೭ರಲ್ಲಿ ಜನಗಲ್ಲಿನಲ್ಲಿ ಶ್ರೀ ಕಡಿದಾಳು ಮಂಜಪ್ಪನವರ ಅಧ್ಯಕ್ಷತೆಯಲ್ಲಿ ನಡೆದಿರುತ್ತದೆ. ತಾ. ೧೫.೧೦.೧೯೩೭ರಲ್ಲಿ ಬಿಳುಮನೆಯಲ್ಲಿ ನಡೆದ ಕಾರ್ಯ ನಿರ್ವಾಹಕ ಮಂಡಳಿ ಸಭೆಯು ಸಂಘಕ್ಕೆ ನಿಬಂದನೆಗಳನ್ನು ರಚಿಸಲಿಕ್ಕಾಗಿ ಹೊಸಮನೆ ಹೆಚ್.ಎಸ್. ಮಂಜಪ್ಪನವರು, ಹೊಸಹಳ್ಳಿ ಹೆಚ್.ಎಸ್. ವೆಂಕಟಪ್ಪ ಗೌಡರು ಹಾಗೂ ಕಡಿದಾಳು ಮಂಜಪ್ಪನವರುಗಳನ್ನೊಳಗೊಂಡ ಒಂದು ಸಮಿತಿಯನ್ನು ರಚಿಸಿತು. ಈ ಸಮಿತಿಯು ಹಲವಾರು ವಿಚಾರಗಳನ್ನು ಪರ್ಯಾಲೋಚಿಸಿ ಒಂದು ನಿಯಮಾವಳಿಯನ್ನು ರಚಿಸಿ, ಉಪಯುಕ್ತ ಸಲಹೆಗಳುಳ್ಳ ವರದಿಯೊಂದನ್ನು ಸಿದ್ಧಪಡಿಸಿ ತಾ. ೨೬.೫.೩೮ರಲ್ಲು ಶೀಕೆಯಲ್ಲಿ ನಡೆದ ವಾರ್ಷಿಕ ಸಭೆಯಲ್ಲಿ ಮಂಡಿಸಿತು. ಈ ಬಗ್ಗೆ ಕೂಲಂಕುಶವಾಗಿ ಚರ್ಚಿಸಲು ಮತ್ತೆ ೫.೬.೧೯೩೮ರಲ್ಲಿ ದೇವಂಗಿ ರಾಮಣ್ಣಗೌಡರ ಆಶ್ರಯದಲ್ಲಿ ದೇವಂಗಿ ಮನೆಯಲ್ಲಿ ಕಡಿದಾಳ್ ಮಂಜಪ್ಪನವರ ಅಧ್ಯಕ್ಷತೆಯಲ್ಲಿ ಮತ್ತೊಂದು ಸಭೆ ಯಶಸ್ವಿಯಾಗಿ ನಡೆದು, ನಿಯಮ

ನಿಬಂಧನೆಗಳನ್ನು ಅಂಗೀಕರಿಸಿತು. ಈ ಸಭೆಯಲ್ಲಿ ಮಂಡಿಸಲ್ಪಟ್ಟ ನಿಯಮಾವಳಿಯನ್ನು ರಚಿಸಲು ನೇಮಕಗೊಂಡ ಸಮಿತಿಯ ವರದಿಯಲ್ಲಿನ ಮುಖ್ಯಾಂಶವೆಂದರೆ

೧. ಈಗ ಸಂಘವು ಮೂರು ವಿದ್ಯಾರ್ಥಿ ನಿಲಯಗಳಿಗೆ ಧನಸಹಾಯ ಮಾಡುತ್ತಾ ಇದೆ. ಮಂಡಗದ್ದೆ ಮತ್ತು ಆರಗಗಳಲ್ಲಿ ವಿದ್ಯಾರ್ಥಿನಿಲಯಗಳನ್ನು ಸಂಘವು ಸ್ಥಾಪಿಸಲು ತವಕ ಪಡುತ್ತಿವೆ. ಆದರೆ ಸಂಘವು ಇನ್ನೂ ಶೈಶವಾವಸ್ಥೆಯಲ್ಲಿರುವುದರಿಂದ ಒಂದೇ ಸಾರಿ ತನ್ನ ಶಕ್ತಿಯನ್ನೆಲ್ಲಾ ವೆಚ್ಚಮಾಡಿ ಆಮೇಲೆ ಬಾಯಿಮುಚ್ಚಿ ಕೂರಲಾಗುವುದಿಲ್ಲ. ಸಂಘವು ಧನಸಹಾಯವನ್ನು ಒಂದು ಅಥವಾ ಎರಡು ನಿಲಯಗಳಿಗೆ ಮಾತ್ರ ಕೊಡುವುದು ಸೂಕ್ತ. ಈ ಕಾರಣಗಳಿಂದ ಇನ್ನು ಮುಂದೆ ತೀರ್ಥಹಳ್ಳಿ ಮತ್ತು ಶಿವಮೊಗ್ಗ ಈ ಎರಡು ಸ್ಥಳಗಳಲ್ಲಿರುವ ನಿಲಯಗಳಿಗೆ ಮಾತ್ರ ಸಹಾಯಧನ ಕೊಡಬೇಕೆಂದು ಈ ಸಮಿತಿಯು ಅಭಿಪ್ರಾಯ ಪಡುತ್ತದೆ.

೨. ಮತ ವಿಚಾರಗಳಲ್ಲಿ ಸಂಘವು ಪ್ರವೇಶ ಮಾಡಬೇಕೆಂಬ ಕೂಗು ಬಹಳ ಕಡೆಗಳಿಂದ ಕೇಳಿಬರುತ್ತಿದೆ. ಆದರೆ ಸಂಘವು ಈ ವಿಷಯದಲ್ಲಿ ಪ್ರವೇಶಿಸಿದ ಕೂಡಲೆ ಅನೇಕ ತೊಂದರೆಗಳಲ್ಲಿ ಸಿಕ್ಕಿಕೊಳ್ಳುವುದು ನಿಶ್ಚಯ. ಆದ್ದರಿಂದ ನಮ್ಮ ಅಭಿಪ್ರಾಯದಲ್ಲಿ ಮತಕ್ಕೆ ಸಂಬಂಧಪಟ್ಟ ವಿಷಯಗಳನ್ನು ಮೊದಲಿನಂತೆ ಪಾಲುಗಳ ಮುಖಂಡರಿಗೆ ಬಿಟ್ಟರೆ ಒಳ್ಳೆಯದೆಂದು ಕಾಣುತ್ತದೆ.

ಈ ವರದಿಯನ್ನು ವಿಶ್ಲೇಷಿಸಿ ನೋಡಿದರೆ ಆಗಲೇ ಸಂಘವು ತನ್ನ ವಿದ್ಯಾರ್ಥಿನಿಲಯಗಳನ್ನು ವಿಸ್ತರಿಸಿ, ಶಿವಮೊಗ್ಗದಲ್ಲಿಯೂ ವಿದ್ಯಾರ್ಥಿ ನಿಲಯವನ್ನು ಸ್ಥಾಪಿಸಿ ನಡೆಸಿಕೊಂಡು ಬರುತ್ತಿದ್ದುದನ್ನು ಸ್ಪಷ್ಟವಾಗಿ ನಾವು ಮನಗಾಣಬಹುದು. ಈ ಅವಧಿಯಲ್ಲಿ ದೇವಂಗಿ ಡಿ.ಎನ್. ಹಿರಿಯಣ್ಣಗೌಡರು ಮತ್ತು ಹಿರೇತೋಟದ ಕೆ.ಟಿ. ಗುರಪ್ಪಗೌಡರು ಸಂಘದ ಕಾರ್ಯದರ್ಶಿಗಳಾಗಿದ್ದರು.

ತಾರೀಖು ೭.೧೦.೧೯೩೩ರಲ್ಲಿ ಮೈಸೂರು ಮಹಾರಾಜರ ಸರ್ಕಾರದ ದಿವಾನರಾಗಿದ್ದ ಅಮೀನ್ ಉಲ್ ಮುಲ್ಕ್ ಸರ್. ಮಿರ್ಜಾ ಎಂ. ಇಸ್ಮಾಯಿಲ್ ಅವರು ಸಂಘಕ್ಕೆ ಭೇಟಿ ನೀಡಿದ್ದು, ಸಂಘದಿಂದ ಜನಾಂಗದ ಸ್ಥಿತಿಗತಿಗಳನ್ನು ವಿವರಿಸಿ, ವಿದ್ಯಾರ್ಥಿನಿಲಯಕ್ಕೆ ಸರ್ಕಾರದ ನೆರವು ನೀಡಬೇಕೆಂದು ಕೋರಿ ಮನವಿ ಪತ್ರ ಅರ್ಪಿಸಲಾಗಿತ್ತು. ಸಂಘದ ಮನವಿಗೆ ಸ್ಪಂದಿಸಿದ ದಿವಾನರು ವಿದ್ಯಾರ್ಥಿ ನಿಲಯಕ್ಕೆ ತಿಂಗಳಿಗೆ ೯ ರೂಪಾಯಿ ೧೨ ಆಣೆ ಗ್ರಾಂಟ್ ಮಂಜೂರು ಮಾಡಿದ್ದರು. ಈ ಅವಧಿಯಲ್ಲಿ ಗುಡ್ನೇಕೇರಿ ಶ್ರೀ ಜಿ.ಎಂ. ದುಗ್ಗಪ್ಪ ಹೆಗ್ಗಡೆ ಅವರು ಸಂಘದ ಅಧ್ಯಕ್ಷರಾಗಿದ್ದರು.

ತಾ. ೨೧.೬.೧೯೪೨ ರಲ್ಲಿ ಕೆಳನರಸೆ ಶ್ರೀ ಕೆ. ಬೊಮ್ಮಯ್ಯಗೌಡರ ಮನೆಯಲ್ಲಿ ನಡೆಸಲಾದ ಸಂಘದ ೯ನೇ ವಾರ್ಷಿಕ ಮಹಾಸಭೆಯ ಅಗ್ರಸ್ಥಾನವನ್ನು ಅಂದಿನ ಬೆಂಗಳೂರು ಮುನ್ಸಿಪಾಲ್ ಪ್ರೆಸಿಡೆಂಟರಾಗಿದ್ದ ಶ್ರೀಮಾನ್ ಕೆ. ಹನುಮಂತಯ್ಯನವರು (ನಂತರ ಮೈಸೂರು ರಾಜ್ಯದ ಮುಖ್ಯಮಂತ್ರಿಗಳಾಗಿದ್ದವರು) ವಹಿಸಿದ್ದರು.

ತಾ. ೨೩.೫.೧೯೪೩ ರಲ್ಲಿ ಅಂದಿನ ಮೈಸೂರು ಸರ್ಕಾರದ ಆರೋಗ್ಯ ಶಾಖೆ ಮತ್ತು ಸ್ಥಳೀಯ ಸಂಸ್ಥೆಗಳ ಸಚಿವರಾಗಿದ್ದ ಹೆಚ್.ಬಿ. ಗುಂಡಪ್ಪಗೌಡರು ಸಂಘಕ್ಕೆ ಭೇಟಿ ನೀಡಿ ಸಂಘವು ಅರ್ಪಿಸುವ ಭಿನ್ನವತ್ತಳೆಯನ್ನು ಸ್ವೀಕರಿಸಿದ್ದರು. ಶಿವಮೊಗ್ಗ ಸಬ್ ಜಡ್ಜ್‌ರಾಗಿದ್ದ ಶ್ರೀ ಕೆ.ಸಿ. ಲಿಂಗೇಗೌಡರು ತಾ. ೨೮.೫.೧೯೪೪ ರಲ್ಲಿ ವಿದ್ಯಾರ್ಥಿನಿಲಯದಲ್ಲಿ ನಡೆದ ಸಂಘದ ೧೦ನೇ ವಾರ್ಷಿಕ ಮಹಾಸಭೆಯ ಅಗ್ರಸ್ಥಾನವನ್ನು ವಹಿಸಿದ್ದರು.

ನಂತರದಲ್ಲಿ ಇವರ ನೆರವು ಮತ್ತು ಸಹಕಾರದಿಂದ ಹೊಸಮನೆ ಶ್ರೀ ಹೆಚ್.ಎಸ್. ಮಂಜಪ್ಪನವರ ನೇತೃತ್ವದಲ್ಲಿ ಈ ಸಂಘದ ವತಿಯಿಂದ ಶಿವಮೊಗ್ಗದಲ್ಲಿ ಒಂದು ವಿದ್ಯಾರ್ಥಿನಿಲಯದ ಕಟ್ಟಡ ನಿರ್ಮಿಸಲು ಸಂಘವು ಕಾರ್ಯಪ್ರವೃತ್ತವಾಯಿತು.

ತಾ. ೨೧.೫.೧೯೪೬ ರಲ್ಲಿ ಹೊಸಮನೆ ಹೆಚ್.ಎಸ್. ಮಂಜಪ್ಪಗೌಡರ ಮನೆಯಲ್ಲಿ ಸಂಘದ ೧೧ನೇ ವಾರ್ಷಿಕ ಮಹಾಸಭೆ ನಡೆಯಿತು. ಈ ಸಭೆಯಲ್ಲಿ ತೀರ್ಥಹಳ್ಳಿಯಲ್ಲಿನ ಒಕ್ಕಲಿಗರ ವಿದ್ಯಾರ್ಥಿನಿಲಯಕ್ಕೆ ಕಾಂಪೌಂಡ್ ನಿರ್ಮಿಸಲು ಹಾಗೂ ಶಿವಮೊಗ್ಗದಲ್ಲಿನ ವಿದ್ಯಾರ್ಥಿನಿಲಯಕ್ಕೆ ಕಟ್ಟಡ ನಿರ್ಮಿಸುವ ಬಗ್ಗೆ ಎರಡು ಉಪಸಮಿತಿಗಳನ್ನು ರಚಿಸಲಾಯ್ತು. ಶಿವಮೊಗ್ಗದಲ್ಲಿ ನಿರ್ಮಿಸಲಾಗುವ ಕಟ್ಟಡಕ್ಕೆ ಅಂದು ಶ್ರೀ ಕುಳುಂಡೆ ಬೊಮ್ಮಯ್ಯ ಗೌಡರು ಮತ್ತು ಹುಗಲವಳ್ಳಿ ಶ್ರೀ ರಂಗಣ್ಣ ಗೌಡರು ತಲಾ ಐದು ಸಾವಿರ ರೂಪಾಯಿಗಳ ದೇಣಿಗೆ ಘೋಷಿಸಿ ಈ ಕಟ್ಟಡ ಕಾರ್ಯಕ್ಕೆ ಚಾಲನೆ ನೀಡಿದರು. ಈ ಅವಧಿಯಲ್ಲಿ ತೀರ್ಥಹಳ್ಳಿಯಲ್ಲಿ ವಿದ್ಯಾರ್ಥಿ ನಿಲಯದ ವಿದ್ಯಾರ್ಥಿಗಳಾಗಿದ್ದ ಪಿ.ಎಂ. ಶ್ರೀನಿವಾಸ್‌ರವರು, ಎನ್. ಕಿಟ್ಟಪ್ಪನವರು, ಎಂ.ಆರ್. ಧರ್ಮಯ್ಯಗೌಡರು, ಶಾಂತವೇರಿ ಗೋಪಾಲಗೌಡರು, ಕೆ.ಎಸ್. ಶ್ರೀನಿವಾಸಮೂರ್ತಿ ಮುಂತಾದವರು ಧನಸಂಗ್ರಹಕಾರ್ಯಕ್ಕೆ ಅಪಾರವಾಗಿ ಶ್ರಮಿಸಿದ್ದನ್ನು ಸಭೆಯು ಪ್ರಶಂಶಿಸಿತು.

೧೯೪೦ ರಿಂದ ೧೯೫೦ರ ವರೆಗೆ ಸುಮಾರು ಹತ್ತು ವರ್ಷಗಳ ಕಾಲ ಸಂಘದ ಕಾರ್ಯದರ್ಶಿಗಳಾಗಿ ಚಟುವಟಿಕೆಯಿಂದ ಕಾರ್ಯ ನಿರ್ವಹಿಸಿದವರು ಹೆಚ್.ವಿ. ರಾಮಯ್ಯನವರು ಮತ್ತು ಸಿ.ಕೆ. ಹರಿಯಪ್ಪಗೌಡರು. ಸಂಘದ ಮುಖ್ಯ ಉದ್ದೇಶವಾದ ವಿದ್ಯಾಭಿವೃದ್ಧಿಗೆ, ಬಡಮಕ್ಕಳ ಉಚಿತ ವಿದ್ಯಾಭ್ಯಾಸಕ್ಕೆ ಇವರುಗಳು ಅಪಾರವಾಗಿ ಶ್ರಮ ವಹಿಸಿದ್ದನ್ನು ನಾವು ನೋಡಬಹುದು. ಈ ಕಾಲಾವಧಿಯಲ್ಲಿ ದೇವಂಗಿ ಅಪಾರವಾಗಿ ಶ್ರಮ ವಹಿಸಿದ್ದನ್ನು ನಾವು ನೋಡಬಹುದು. ದೇವಂಗಿ, ಡಿ.ಎನ್. ಹಿರಿಯಣ್ಣಗೌಡರು, ದೇವಂಗಿ ಡಿ.ಆರ್. ವೆಂಕ್ಟಯ್ಯಗೌಡರು ಹಾಗೂ ಅರಮನೆಕೇರಿ ಎ.ಎಚ್. ಸಿದ್ದಪ್ಪಗೌಡರು ಅಧ್ಯಕ್ಷರುಗಳಾಗಿ, ಹಿರೇತೋಟದ ಕೆ.ಟಿ. ಗುರಪ್ಪಗೌಡರು ಖಜಾಂಚಿಗಳಾಗಿ ಕಾರ್ಯನಿರ್ವಹಿಸಿದರು. ೧೯೪೨ರಲ್ಲಿ ಮೈಸೂರಿನ ರೆವಿನ್ಯೂ ಸಚಿವರಾಗಿಯೂ, ೧೯೪೬ರಲ್ಲಿ ಶಿಕ್ಷಣ ಸಚಿವರಾಗಿಯೂ ಸೇವೆ ಸಲ್ಲಿಸಿದ್ದ ಶ್ರೀ ಅಪ್ಪಾಜಿ ಗೌಡರವರು ಸಂಘಕ್ಕೆ ಭೇಟಿ ನೀಡಿ ಜನಾಂಗದ ಅಹವಾಲು ಸ್ವೀಕರಿಸಿದ್ದರು.

೧೯೫೦ ರಿಂದ ೫೪ರ ಅವದಿಯಲ್ಲಿ ಕುಡುಮಲ್ಲಿಗೆ ಶ್ರೀ ದುಗ್ಗಪ್ಪಗೌಡರು ಮತ್ತು ನಾಲೂರು ಕೆ.ಟಿ. ದೇವಪ್ಪಗೌಡರು ಕ್ರಮವಾಗಿ ಅಧ್ಯಕ್ಷರುಗಳಾಗಿ ಹಾಗೂ ಮೂಡುವಳ್ಳಿ ಟಿ. ಅಣ್ಣಯ್ಯ ಹೆಗ್ಗಡೆ ಅವರು ಮತ್ತು ಹೆದ್ದೂರು ಶ್ರೀ ಹೆಚ್.ಹೆಚ್. ಮಂಜಪ್ಪಗೌಡರು ಕ್ರಮವಾಗಿ ಕಾರ್ಯದರ್ಶಿಗಳಾಗಿ ಕಾರ್ಯನಿರ್ವಹಿಸಿದರು. ಶಿವಮೊಗ್ಗದಲ್ಲಿ ನಿರ್ಮಿಸಲಾಗುತ್ತಿದ್ದ ವಿದ್ಯಾರ್ಥಿ ನಿಲಯದ ಕಟ್ಟಡದ ಉಸ್ತುವಾರಿಯನ್ನು ಹೊಸಮನೆ ಶ್ರೀ ಹೆಚ್.ಎಸ್. ಮಂಜಪ್ಪ ಗೌಡರು ಮತ್ತು ಕೆಳನರಸೆ ಶ್ರೀ ಕೆ.ವಿ. ದೇವಪ್ಪಗೌಡರುಗಳನ್ನೊಳಗೊಂಡ ಸಮಿತಿಗೆ ಬಿಟ್ಟುಕೊಡಲಾಯ್ತು. ೧೯೫೪ ನಂತರ ಸಂಘದ ಕಾರ್ಯಚಟುವಟಿಕೆಗಳು ಅಷ್ಟಾಗಿ ನಡೆಯುತ್ತಿದ್ದುದು ಕಂಡು ಬರದಿದ್ದರೂ ಡಾ. ಬಿ.ಎನ್. ರಂಗಪ್ಪನವರ ಅಧ್ಯಕ್ಷತೆಯಲ್ಲಿ ರಚಿಸಲಾದ ವಿದ್ಯಾರ್ಥಿನಿಲಯದ ಸಮಿತಿಯು ೧೯೫೪ರಿಂದ ೧೯೭೪ರವರೆಗೆ ವಿದ್ಯಾರ್ಥಿ ನಿಲಯದ ಉಸ್ತುವಾರಿಯನ್ನು ಸಮರ್ಪಕವಾಗಿ ನಡೆಸಿಕೊಂಡು ಬಂದಿತು.

೧೯೬೭ರಲ್ಲಿ ತೀರ್ಥಹಳ್ಳಿಯಲ್ಲಿ ಪ್ರಥಮ ದರ್ಜೆ ಕಾಲೇಜು ಪ್ರಾರಂಭಗೊಂಡಿದ್ದರಿಂದ ವಿದ್ಯಾರ್ಥಿನಿಲಯದ ಶಿಕ್ಷಣಾರ್ಥಿಗಳ ಸಂಖ್ಯೆ ಹೆಚ್ಚಿತು. ಇದರಿಂದಾಗಿ ವಿದ್ಯಾರ್ಥಿನಿಲಯದ ರಂಗಪ್ಪನವರ ಅವಶ್ಯಕತೆಯನ್ನು ಮನಗಂಡ ಸಂಘವು ೧೯೬೮, ೬೯ರಲ್ಲಿ ಡಾ. ಬಿ.ಎನ್. ರಂಗಪ್ಪನವರ ಅಧ್ಯಕ್ಷತೆಯಲ್ಲಿ ಉದಾರ ದಾನಿಗಳ ಸಹಕಾರದಿಂದ ತುಂಬಾ ಶ್ರಮಪಟ್ಟು ವಿದ್ಯಾರ್ಥಿನಿಲಯದ ವಿಸ್ತರಣೆ ಮಾಡಿದರು. ಈ ಕಾರ್ಯದಲ್ಲಿ ಅಂದಿನ ದಿನಗಳಲ್ಲಿ ತೀರ್ಥಹಳ್ಳಿಯಲ್ಲಿ ಕ್ಷೇತ್ರಾಭಿವೃದ್ಧಿ ಅಧಿಕಾರಿಯಾಗಿ ಕಾರ್ಯನಿರ್ವಹಿಸುತ್ತಿದ್ದ ಶ್ರೀ ಬಿ. ಲಿಂಗೇಗೌಡರು ಹೆಚ್ಚಿನ ಸಹಕಾರ ನೀಡಿದ್ದನ್ನು ಮರೆಯುವಂತಿಲ್ಲ. ನಿಲಯದ ಒಳಾಂಗಣದ ಎಡಭಾಗಕ್ಕೆ ಹೊಂದಿಕೊಂಡಂತೆ ಒಂದು ಕಟ್ಟಡವನ್ನು ನಿರ್ಮಿಸಿ ತಾ. ೨೨.೪.೧೯೬೯ರಲ್ಲಿ ಮೈಸೂರು ರಾಜ್ಯದ ಮಾನ್ಯ ಶಿಕ್ಷಣ ಸಚಿವರಾದ ಕೆ.ವಿ. ಶಂಕರೇಗೌಡರ ಅಧ್ಯಕ್ಷತೆಯಲ್ಲಿ ಮಾನ್ಯ ಲೋಕೋಪಯೋಗಿ ಸಚಿವರಾದ ಶ್ರೀ ಕೆ. ಲಕ್ಕಪ್ಪನವರಿಂದ ಉದ್ಘಾಟನೆಯನ್ನು ನೆರವೇರಿಸಲಾಯ್ತು. ನಂತರ ವಿದ್ಯಾರ್ಥಿನಿಲಯದ ಬಲಭಾಗಕ್ಕೆ ಹೊಂದಿಕೊಂಡಂತೆ ಆರುಕೋಣೆಗಳನ್ನು ನಿರ್ಮಿಸಿ ಮೈಸೂರು ರಾಜ್ಯದ ಮಾಜಿ ಮುಖ್ಯಮಂತ್ರಿಗಳಾದ ಶ್ರೀ ಕಡಿದಾಳು ಮಂಜಪ್ಪನವರ ಅಧ್ಯಕ್ಷತೆಯಲ್ಲಿ ಆದಿಚುಂಚನಗಿರಿ ಗುರುಪೀಠದ ಜಗದ್ಗುರು ಶ್ರೀ ಶ್ರೀ ಶ್ರೀ ರಮಾನಂದನಾಥ ಸ್ವಾಮೀಜಿ ಅವರ ಅಮೃತಹಸ್ತದಿಂದ ದಿನಾಂಕ ४.೧೦.೧೯೬೯ರಲ್ಲಿ ಉದ್ಘಾಟನೆ ಮಾಡಿಸಲಾಯ್ತು.

ಅನಂತರದ ೧೯೭೮ರವರೆಗಿನ ಅವಧಿಯಲ್ಲಿ ಸಂಘದ ಅಭಿವೃದ್ಧಿ ಬಗ್ಗೆ ಅಷ್ಟಾಗಿ ಯಾರೂ ಆಸಕ್ತಿ ತೋರಿಸದಿದ್ದುದರಿಂದ ಡಾ. ಬಿ.ಎನ್. ರಂಗಪ್ಪನವರ ಅಧ್ಯಕ್ಷತೆಯಲ್ಲಿ ವಿದ್ಯಾರ್ಥಿ ನಿಲಯದ ಉಸ್ತುವಾರಿಯನ್ನು ಸಮರ್ಥವಾಗಿ ನಿರ್ವಹಿಸಿಕೊಂಡು ಬರಲಾಯ್ತು. ಈ ಸಂಘಕ್ಕೆ ಆವರೆಗೂ ವಿದ್ಯಾರ್ಥಿ ನಿಲಯ ಹೊರತುಪಡಿಸಿ ಬೇರೆ ಆಸ್ತಿ ಇಲ್ಲದುದರಿಂದ, ಯಾವುದೇ ಶಾಶ್ವತ ಆದಾಯ ಮೂಲವೂ ಇಲ್ಲದಿದ್ದುದರಿಂದ ಸಂಘದ ಚಟುವಟಿಕೆಗಳು ಕ್ಷೀಣಿಸಲು ಅನುವಾಯಿತು.

೧೯೭೭-೭೮ರ ಅವಧಿಯಲ್ಲಿ ಈ ಬಗ್ಗೆ ಗಂಭೀರವಾಗಿ ಚಿಂತಿಸಿದ ಅಂದಿನ ಆಸಕ್ತ ಒಕ್ಕಲಿಗ ಯುವಕರು, ಬಡ ವಿದ್ಯಾರ್ಥಿಗಳಿಗೆ ಸಹಾಯವನ್ನು ಒದಗಿಸಲು ಶಾಶ್ವತವಾದ ಕಾರ್ಯಗಳನ್ನು ಕೈಕೊಳ್ಳಬೇಕೆಂತಲೂ ಹಾಗೂ ತಾಲ್ಲೂಕಿನಾದ್ಯಂತ ಒಕ್ಕಲಿಗ ಜನಾಂಗದವರನ್ನು ಸಂಘಟಿಸಿ, ಸಂಘವನ್ನು ಬಲಪಡಿಸುವ ಮೂಲಕ ಸಂಘದ ಕಾರ್ಯಚಟುವಟಿಕೆಗಳನ್ನು ವಿಸ್ತರಿಸಬೇಕೆಂಬ ಹಂಬಲವನ್ನು (ಸಂಘಟಿತ ಚರ್ಚೆಯ ಮೂಲಕ) ಸಂಘದ ಅಂದಿನ ಪದಾಧಿಕಾರಿಗಳ ಗಮನಕ್ಕೆ ತಂದರು. ಇದಕ್ಕೆ ಸ್ಪಂದಿಸಿದ ಅಧ್ಯಕ್ಷರಾದ ಡಾ. ಬಿ.ಎನ್. ರಂಗಪ್ಪನವರು ತಾ. ೨೪.೧೨.೧೯೭೮ರಂದು ಜನಾಂಗದ ಮಹಾಸಭೆ ಕರೆದು ಚರ್ಚಿಸಿ "ತೀರ್ಥಹಳ್ಳಿ ತಾಲ್ಲೂಕು ಒಕ್ಕಲಿಗರ ಸಂಘ" ಎಂಬ ಪುನರ್ ನಾಮಕರಣದೊಂದಿಗೆ ಸಂಘವನ್ನು ಪುನಶ್ಚೇತನಗೊಳಿಸಲು ತೀರ್ಮಾನಿಸಲಾಯ್ತು. ಅಂತೆಯೇ ಸಂಘದ ಧ್ಯೇಯೋದ್ದೇಶ ನಿಯಮ-ನಿಬಂಧನೆಗಳನ್ನು ಪುನರ್ ರೂಪಿಸಿ ಸಂಘವನ್ನು ಕರ್ನಾಟಕ ಸಂಘ ಸಂಸ್ಥೆಗಳ ನೋಂದಣೆ ಅಧಿನಿಯಮ ೧೯೬೦ರ ಮೇರೆಗೆ ಶಿವಮೊಗ್ಗ ಜಿಲ್ಲಾ ಸಂಘ ಸಂಸ್ಥೆಗಳ ವಿಲೇಖನಾಧಿಕಾರಿಗಳವರಲ್ಲಿ ತಾರೀಖು: ೨.೩.೧೯೭೯ರಲ್ಲಿ ನೊಂದಾಯಿಸುವ ಮೂಲಕ ಸಂಘವನ್ನು ಕಾನೂನು ಬದ್ಧಗೊಳಿಸಿ ಪುನಶ್ಚೇತನ ನೀಡಲಾಯ್ತು. ಅನಂತರ ಇಲ್ಲಿಯವರೆಗಿನ ಸುಮಾರು ಮೂವತ್ತು ವರ್ಷಗಳಲ್ಲಿ ಸಂಘವು ಹತ್ತು ಹಲವು ಕಾರ್ಯಯೋಜನೆಯೊಂದಿಗೆ ಅಭಿವೃದ್ಧಿಯ ಹಾದಿಯಲ್ಲಿ ದಾಪುಗಾಲಿಟ್ಟು ನಡೆಯುತ್ತಿರುವುದು ಸಂಘವನ್ನು ಬಲ್ಲ ಸರ್ವರಿಗೂ ತಿಳಿದ ವಿಚಾರವಾಗಿರುತ್ತೆ.

ಸಂಘವು ಪುನಶ್ಚೇತನಗೊಂಡ ನಂತರದ ಎಲ್ಲಾ ಬೆಳವಣಿಗೆಗಳ ಬಗ್ಗೆ, ಸೇವೆ ಸಲ್ಲಿಸಿದ ಮಹನೀಯರುಗಳ ಬಗ್ಗೆ ದಾಖಲೆಗಳನ್ನು ಸಂಘದಲ್ಲಿ ವ್ಯವಸ್ಥಿತವಾಗಿ ಕಾಯ್ದಿರಿಸಿಕೊಂಡು ಬರಲಾಗಿದೆ. ಆದರೆ ಸಂಘದ ಪ್ರಾರಂಭದಿಂದ ಪುನಶ್ಚೇತನದವರೆಗಿನ ಸುಧೀರ್ಘ ಕಾಲಾವಧಿಯಲ್ಲಿನ ದಾಖಲೆಗಳು ಸರಿಯಾಗಿ ದೊರಕುತ್ತಿಲ್ಲ. ಆಗಿನ ಕಾಲದಲ್ಲಿ ಪದಾಧಿಕಾರಿಗಳಾಗಿ ಕಾರ್ಯನಿರ್ವಹಿಸಿದವರ ವಿಳಾಸವೇ ಸಂಘದ ವಿಳಾಸವಾಗಿದ್ದರಿಂದ ದಾಖಲೆಗಳು ಅವರವರ ಮನೆಗಳಲ್ಲಿಯೇ ಉಳಿದು ಹೋಗಿದ್ದು, ಅವರಲ್ಲಿ ಹೆಚ್ಚಿನವರು ಬಹಳ ಹಿಂದೆಯೇ ಕಾಲವಶವಾಗಿರುವುದರಿಂದ ದಾಖಲೆಗಳನ್ನು ದೊರಕಿಸಿಕೊಳ್ಳಲು ಸಾಧ್ಯವಾಗುತ್ತಿಲ್ಲ. ಅಂದಿನ ಕಾಲದಲ್ಲಿ ಸಂಘದ ಅಭಿವೃದ್ಧಿಗೆ ಶ್ರಮಿಸಿದ ಮಹನೀಯರು ಪ್ರಚಾರಪೇಕ್ಷೆಯಿಲ್ಲದೆ, ಸಂಘದ ಸೇವೆ ತಮ್ಮ ಕರ್ತವ್ಯವೆಂದು ತಿಳಿದು ಕಾರ್ಯ ನಿರ್ವಹಿಸಿದ್ದರಿಂದ, ತಮ್ಮ ಸಾಧನೆಗಳನ್ನು ದಾಖಲಿಸಿಡುವ ಯಾವ ಪ್ರಯತ್ನವನ್ನೂ ಮಾಡಿಲ್ಲ ಎಂದು ಭಾವಿಸಬಹುದು. ಲಭ್ಯ ದಾಖಲೆಗಳ ಆಧಾರದಲ್ಲಿ ಈ ಮೇಲಿನಂತೆ ಸಂಘ ನಡೆದು ಬಂದ ದಾರಿಯನ್ನು ಗುರುತಿಸುವ ಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ. ಆ ಕಾಲಾವಧಿಯಲ್ಲಿ ಪದಾಧಿಕಾರಿಗಳಾಗಿ ಸೇವೆ ಸಲ್ಲಿಸಿದ ಮಹನೀಯರನೇಕರ ಹೆಸರುಗಳು ಉಲ್ಲೇಖಗೊಳ್ಳದೆ ಬಿಟ್ಟುಹೋಗಿರಬಹುದು. ಇದೇ ರೀತಿ ವಿದ್ಯಾರ್ಥಿ ನಿಲಯದ ವಾರ್ಡನ್‌ಗಳಾಗಿ ಸೇವೆ ಸಲ್ಲಿಸಿದವರನ್ನೂ, ಅಡಿಗೆಯವರಾಗಿ ಕಾರ್ಯ ನಿರ್ವಹಿಸಿದವರನ್ನೂ ದಾಖಲಿಸಲು ಸಾಧ್ಯವಾಗಿಲ್ಲ.

ನೂರು ವರ್ಷಗಳ ಹಿಂದೆಯೇ ಜನಾಂಗದ ಸಾಮಾಜಿಕ-ಶೈಕ್ಷಣಿಕ ಅಭಿವೃದ್ಧಿಯ ದೂರದೃಷ್ಟಿಯಿಂದ ಸಂಘವನ್ನು ಸ್ಥಾಪಿಸಿ ಮುನ್ನಡೆಸಿಕೊಂಡು ಬಂದಿರುವ ಹಿರಿಯರ ಕ್ರಿಯಾಶೀಲತೆ ಸಾಮಾನ್ಯವಾದ ವಿಚಾರವೇನಲ್ಲ. ವಿದ್ಯಾರ್ಥಿನಿಲಯದ ಸಂಪರ್ಕದಿಂದ ಹೊರಹೊಮ್ಮಿದ ಜನಾಂಗದ ಅನೇಕ ಪ್ರತಿಭಾವಂತರು ಇಂದು ನಾಡಿನಾದ್ಯಂತ ತಮ್ಮ ವೃತ್ತಿ-ಕಾರ್ಯಗಳಲ್ಲಿ ಗಣನೀಯ ಸಾಧನೆಗಳನ್ನು ಮಾಡಿ ನಾಡಿಗೂ-ಜನಾಂಗಕ್ಕೂ ಕೀರ್ತಿ ತಂದಿದ್ದಾರೆ. ಈ ಎಲ್ಲಾ ಕೀರ್ತಿಯು ಸಂಘವನ್ನು ಪ್ರಾರಂಭಿಸಿ ಮುನ್ನಡೆಸಿಕೊಂಡು ಬಂದ ಹಿರಿಯರಿಗೇ ಸಲ್ಲಬೇಕಾಗುತ್ತದೆ. ಜನಾಂಗದ ಸರ್ವತೋಮುಖ ಬೆಳವಣಿಗೆಗೆ, ಶ್ರೇಯೋಭಿವೃದ್ಧಿಗೆ ಹರಿಕಾರರಾದ ಹಿರಿಯರ ದೂರದರ್ಶಿತ್ವ, ಕ್ರಿಯಾಶೀಲತೆಗಳು ನಾವು ಹೆಮ್ಮೆಯಿಂದ ಸ್ಮರಿಸಬೇಕಾದ ಸಂಗತಿಗಳಾಗಿದ್ದು, ಅವು ಇಂದಿನ-ಮುಂದಿನ ಪೀಳಿಗೆಗೆ ಮಾರ್ಗದರ್ಶಿ ಸೂತ್ರಗಳೂ ಆಗಿವೆ.

**೫.೩. ಅಭಿವೃದ್ಧಿಯ ಹಾದಿಯಲ್ಲಿ**

**(ಪುನಶ್ಚೇತನದ ನಂತರ ಒಕ್ಕಲಿಗರ ಸಂಘ ೧೯೭೮-೨೦೦೨)**

ತೀರ್ಥಹಳ್ಳಿ ತಾಲ್ಲೂಕು ಒಕ್ಕಲಿಗರ ಸಂಘಕ್ಕೆ ಒಂದು ನೂರು ವರ್ಷ ತುಂಬಿದ್ದು, ಶತಮಾನೋತ್ಸವ ಸಮಾರಂಭವನ್ನು ಆಚರಿಸಿಕೊಳ್ಳುತ್ತಿದ್ದರೂ ಸಹ ಸಂಘ ಪುನಶ್ಚೇತನಗೊಂಡು ಅಭಿವೃದ್ಧಿಹೊಂದಿದ್ದು ೧೯೭೮ರ ನಂತರ. ಈ ಕಾಲಾವಧಿಯನ್ನು ಸಂಘದ ಸುವರ್ಣಯುಗ ಎಂದು ಕರೆಯಬಹುದು.

ಸಂಘವು ೧೯೦೧ರಲ್ಲಿ ಪ್ರಾರಂಭಗೊಂಡು ಅನೇಕ ಸಾಮಾಜಿಕ-ಶೈಕ್ಷಣಿಕ ಚಿಂತನೆಯ ಕಾರ್ಯಕ್ರಮಗಳನ್ನು ಜನಾಂಗದ ಅಭಿವೃದ್ಧಿಗೆ ಹಲವಾರು ರಚನಾತ್ಮಕ ಸಲಹೆಗಳನ್ನು ತೆಗದುಕೊಂಡಿತ್ತು. ಅವುಗಳನ್ನು ಕ್ರಾಂತಿಕಾರಕವಾಗಿ ಕಾರ್ಯರೂಪಕ್ಕೆ ತಂದಿರುವುದನ್ನು ೧೯೩೧ರಲ್ಲಿ ತೀರ್ಥಹಳ್ಳಿ ಪಟ್ಟಣದ ಕುಶಾವತಿಯಲ್ಲಿ ಒಕ್ಕಲಿಗರ ವಿದ್ಯಾರ್ಥಿ ನಿಲಯ ನಿರ್ಮಾಣ ಮಾಡುವುದರ ಮೂಲಕ. ಈ ದೃಷ್ಟಿಯಿಂದಾಗಿ ಜನಾಂಗದ ಗ್ರಾಮಾಂತರ ಮಕ್ಕಳು ಪ್ರೌಢಶಿಕ್ಷಣ

ಪಡೆಯಲು ಅನುಕೂಲವಾಗಿದ್ದು ಬಹಳಷ್ಟು ಜನ ಇದರ ಸದುಪಯೋಗ ಪಡೆದು ಸಮಾಜದ ವಿವಿಧ ಕ್ಷೇತ್ರದಲ್ಲಿ ಮುಂದೆ ಬಂದಿರುವುದನ್ನು ನಾವು ಕಾಣಬಹುದು.

ತೀರ್ಥಹಳ್ಳಿಯಲ್ಲಿ ೧೯೬೬-೬೭ರಲ್ಲಿ ಪ್ರಥಮ ದರ್ಜೆ ಕಾಲೇಜು ಪ್ರಾರಂಭವಾದ ನಂತರ ವಿದ್ಯಾರ್ಥಿನಿಲಯದ ವಿದ್ಯಾರ್ಥಿಗಳ ಸಂಖ್ಯೆ ಹೆಚ್ಚಿತು. ಕಾಲೇಜಿನ ದೈನಂದಿನ ವಿದ್ಯಮಾನ ಆಟೋಟ-ಸಾಂಸ್ಕೃತಿಕ ಚಟುವಟಿಕೆಗಳ ಚರ್ಚೆ ಈ ವಿದ್ಯಾರ್ಥಿ ನಿಲಯದಲ್ಲಿ ನಡೆಯುತ್ತಿತ್ತು. ಇದು ಗ್ರಾಮೀಣಪ್ರದೇಶದಿಂದ ಬರುವ ಎಲ್ಲಾ ವಿದ್ಯಾರ್ಥಿಗಳ ವಿಶ್ರಾಂತಿಯ ನೆಮ್ಮದಿಯ ತಾಣವಾಗಿತ್ತು. ೧೯೭೦-೭೨ರ ಹೊತ್ತಿಗೆ ಕಾಲೇಜಿನಲ್ಲಿ ಗ್ರಾಮೀಣ ಪ್ರದೇಶದ ವಿದ್ಯಾರ್ಥಿಗಳು ಹಾಗೂ ಪಟ್ಟಣ ಪ್ರದೇಶದ ವಿದ್ಯಾರ್ಥಿಗಳು ಎಂಬ ಎರಡು ಗುಂಪುಗಳಾಗಿ ಕಾಲೇಜಿನ ಒಳಗೆ ಹಾಗೂ ಹೊರಗೆ ಈ ಗುಂಪುಗಳ ನಡುವೆ ಆಟೋಟ-ಸಾಂಸ್ಕೃತಿಕ ವಿಚಾರದಲ್ಲಿ ಭಿನ್ನಾಭಿಪ್ರಾಯಗಳುಂಟಾಗಿ ಸದಾ ಗಲಾಟೆ-ಘರ್ಷಣೆ ನಡೆಯುತ್ತಿದ್ದುದ್ದು ಸಾಮಾನ್ಯವಾಗಿತ್ತು. ೧೯೭೨ರಲ್ಲಿ ನಿಲಯದ ಗ್ರಾಮೀಣ ಪ್ರದೇಶದ ಪ್ರತಿಭಾವಂತ ಓರ್ವ ಆಟಗಾರನಿಗೆ ಪಟ್ಟಣದ ಹುಡುಗರು ಕ್ರೀಡಾಂಗಣದಲ್ಲಿ ದೈಹಿಕವಾಗಿ ಹಲ್ಲೆ ಮಾಡಿ, ಒಬ್ಬನ ಎಡಗೈ ಮುರಿದು, ಆಡಲಾರದಂತೆ ಮಾಡಿದರು. ಈ ವಿಚಾರ ತಿಳಿದ ನಿಲಯದ ವಿದ್ಯಾರ್ಥಿಗಳು ರೊಚ್ಚಿಗೆದ್ದು ಕಾಲೇಜಿನಲ್ಲಿ ಗಲಾಟೆ ಮಾಡಿದಾಗ ನಿಲಯದ ಹಾಗೂ ಗ್ರಾಮೀಣ ಪ್ರದೇಶದ ವಿದ್ಯಾರ್ಥಿಗಳು ಭಾರೀ ಪ್ರಮಾಣದಲ್ಲಿ ದೈಹಿಕ ಹಾಗೂ ಮಾನಸಿಕ ಅವಮಾನ ಎದುರಿಸುವಂತಾಯಿತು. ಪೋಷಕರ ಹಾಗೂ ಜನಾಂಗದವರ ನೈತಿಕ ಬೆಂಬಲವೂ ಇಲ್ಲದೇ ಒಂದೆರಡು ದಿನ ಸುಮಾರು ನೂರೈವತ್ತು ವಿದ್ಯಾರ್ಥಿಗಳು ನಿಲಯ ಬಂಧನದಲ್ಲಿ ಕಾಲಕಳೆಯುವಂತಾಯ್ತು. ಈ ಶೋಚನೀಯ ಪರಿಸ್ಥಿತಿಯನ್ನು ಗಮನಿಸಿದ ಕಮ್ಯೂನಿಸ್ಟ್ ಮುಖಂಡ, ಖ್ಯಾತ ನ್ಯಾಯವಾದಿ ದಿ. ಬಿ.ಎಸ್. ಅಪ್ಪಣ್ಣ ಹೆಗ್ಡೆಯವರ ಮುಂದಾಳತ್ವದಲ್ಲಿ, ಶ್ರೀ ಕೆ.ಎಂ. ಶ್ರೀನಿವಾಸ್ ಕಾಳಮ್ಮನಗುಡಿ, ಶ್ರೀ ಹಿ.ಎಂ. ಶ್ರೀನಿವಾಸ್, ಪಟಮಕ್ಕಿ, ಶ್ರೀ ಯು.ಎಸ್. ಮಂಜುನಾಥ, ಉಬ್ಬೂರು, ಶ್ರೀ ವಾಮನಭಟ್ ತೀರ್ಥಹಳ್ಳಿ, ಶ್ರೀ ಶೇಕ್ ಅಮಹದ್ ರಂಜದಕಟ್ಟೆ ಮುಂತಾದವರು ನಿಲಯಕ್ಕೆ ಬಂದು ವಿಚಾರ ತಿಳಿದು ಎಲ್ಲರಿಗೂ ನೈತಿಕ ಧೈರ್ಯ ತುಂಬಿದರು. ತೀರ್ಥಹಳ್ಳಿ ಪೋಲಿಸ್ ಮುಖ್ಯಸ್ಥರ, ಕಾಲೇಜು ಮತ್ತು ನಿಲಯದ ಆಡಳಿತ ಮಂಡಳಿ ಹಾಗೂ ಪುರಸಭೆ ವ್ಯಾಪ್ತಿಯ ಎಲ್ಲಾ ಮುಖಂಡರುಗಳೊಡನೆ ಚರ್ಚೆಮಾಡಿ, ತೀರ್ಥಹಳ್ಳಿ ಪ್ರವಾಸಿ ಮಂದಿರದಲ್ಲಿ ವಿದ್ಯಾರ್ಥಿ ಮುಖಂಡರ ಸಮ್ಮುಖದಲ್ಲಿ ಸಭೆ ನಡೆಸಿ ಇಂತಹ ಘಟನೆಗಳು ಮರುಕಳಿಸದಂತೆ ಎಚ್ಚರಿಕೆ ಕೊಟ್ಟು ಸಾಂತ್ವನಗೊಳಿಸಿದರು. ನೀವುಗಳು ವ್ಯವಸ್ಥಿತವಾಗಿ ಸಂಘಟಿತರಾಗದಿದ್ದರೆ ಇಂತಹ ಘಟನೆಗಳನ್ನು ಸದಾ ಎದುರಿಸಬೇಕಾಗಬಹುದೆಂದೂ, ಮಾನಸಿಕವಾಗಿ ಜರ್ಝರಿತವಾದ ಇಂದಿನ ಯುವಕರ ಸಂಘದ ಪುನರ್ ಸಂಘಟನೆಗೆ ಪ್ರಯತ್ನ ಮಾಡಬೇಕೆಂದೂ ಸೂಚಿಸಿ ಇದಕ್ಕೆ ತಮ್ಮೆಲ್ಲರ ಸಂಪೂರ್ಣ ಸಲಹೆ-ಸಹಕಾರ ಬೆಂಬಲ ವ್ಯಕ್ತಪಡಿಸಿದ್ದು-ಸಂಘವು ಪುನಶ್ಚೇತನದ ದಾರಿ ಕಂಡುಕೊಳ್ಳಲು ಮೂಲ ಕಾರಣವಾಯ್ತು.

ನಂತರ ಈ ಬಗ್ಗೆ ನಿಲಯದ ಅಂದಿನ ವಿದ್ಯಾರ್ಥಿಗಳಾದ ಕೌಲಾನಿ ಧರ್ಮಯ್ಯ, ಹೆಚ್.ಎನ್. ಹಿರಿಯಣ್ಣ, ವಿ.ಟಿ. ರಾಮಪ್ಪ, ಹೆಮ್ಮನೆ ದೇವೇಂದ್ರ, ಖಂಡಕ ದೇವಪ್ಪ, ಸಿ.ಜಿ. ಪರಮೇಶ್ವರಗೌಡ, ಹೆಚ್.ಎಂ. ರಂಗಪ್ಪಗೌಡ, ಮೀಗಾ ಶ್ರೀನಿವಾಸ್, ಬೇಗಾರು ಶ್ರೀಕಂಠಗೌಡ, ಪಟಮಕ್ಕಿ ಮಂಜುನಾಥ, ಎಂ. ಕೃಷ್ಣಪ್ಪ, ಮುಂಡುಕೋಡು, ಕೆ.ಎ. ತಾರಾನಾಥ್, ಕಣಬೂರು ಶ್ರೀಧರ್, ಹೆಚ್.ಪಿ. ಶಶಿಧರ್, ಎಸ್.ಡಿ. ಹರೀಶ್, ಎ.ಬಿ. ವಾಸುದೇವ ಅಚ್ಚೂರು, ಶೆಟ್ಟಿಗದ್ದೆ ರವೀಂದ್ರ, ಹೆಚ್.ಎನ್. ವಿಜಯದೇವ್, ಟಿ.ವಿ. ಸುರೇಂದ್ರನಾಯ್ಕ, ಹೆಚ್.ಎನ್.

ಈಶ್ವರ, ಹೊಸಕೊಪ್ಪ ಎನ್.ಜಿ. ಕೃಷ್ಣಯ್ಯ, ಹೆಚ್.ಜಿ. ಶಂಕ್ರಪ್ಪಗೌಡ, ಕೌರಿ ಮಂಜಪ್ಪ ಮುಂತಾದ ಯುವಕರು ಸಭೆ ಸೇರಿ ಚರ್ಚಿಸಿದರು, ಹೋಬಳಿಯ ಒಕ್ಕಲಿಗ ಮುಖಂಡರ ಸಭೆಯನ್ನು ಗುಪ್ತವಾಗಿ ನಿಲಯದಲ್ಲಿ ಸೇರಿಸಿ ಸಂಘಟನೆಯ ಬಗ್ಗೆ ಚರ್ಚಿಸುತ್ತಾ ಇದರ ಪ್ರಗತಿಯನ್ನು ಶ್ರೀ ಅಪ್ಪಣ್ಣ ಹೆಗ್ಡೆ ಹಾಗೂ ಶ್ರೀ ಕೆ.ಎಂ. ಶ್ರೀನಿವಾಸ್‌ರವರಿಗೆ ತಿಳಿಸಿ ಅವರಿಂದ ಸಲಹೆ ಪಡೆದು ಈ ನಿಟ್ಟಿನಲ್ಲಿ ಮುನ್ನಡೆಯುತ್ತಿದ್ದರು.

ಗಂಟೆಹಕ್ಕಲು ಶ್ರೀ ಇ.ಬಿ. ರಾಮಪ್ಪಗೌಡರ ಮನೆಯಲ್ಲಿ ಶ್ರೀ ಬಿ.ಎನ್. ಅಪ್ಪಣ್ಣ ಹೆಗ್ಡೆ ಹಾಗೂ ಶ್ರೀ ಕೆ.ಎಂ. ಶ್ರೀನಿವಾಸರವರ ನೇತೃತ್ವದಲ್ಲಿ ತಾಲ್ಲೂಕು ಒಕ್ಕಲಿಗ ಮುಖಂಡರ ಸಭೆ ನಡೆಯಿತ್ತು. ಸಭೆಗೆ ಸುಮಾರು ೬೦-೭೦ ಜನ ಸೇರಿದ್ದು ಜನಾಂಗದ ಸಂಘಟನೆಯ ಬಗ್ಗೆ ದೀರ್ಘ ಚರ್ಚೆ ನಡೆದು ತೀರ್ಥಹಳ್ಳಿ ತಾಲ್ಲೂಕು ಒಕ್ಕಲಿಗರ ಸಂಘಕ್ಕೆ ಪುನಃಶ್ಚೇತನ ನೀಡಿ ಹಲವಾರು ಕಾರ್ಯಕ್ರಮ ಹಾಕಿಕೊಳ್ಳಬೇಕೆಂದೂ ತೀರ್ಮಾನ ಕೈಗೊಳ್ಳಲಾಯ್ತು. ಖಾಸಗಿಯವರ ಮನೆಯಲ್ಲಿ ಈ ರೀತಿ ಸಭೆ ಕರೆದಿರುವುದನ್ನು ಪ್ರಶ್ನಿಸಿ ಹಲವಾರು ಜನ ಪತ್ರ ಬರೆದಿದ್ದರೂ ಸಹ ಅಂದಿನ ಸಭೆ ಸಂಘಟನೆಯ ಪ್ರಯತ್ನಕ್ಕೆ ಹೊಸ ತಿರುವು ನೀಡಿತೆಂದರೂ ತಪ್ಪಾಗಲಾರದು.

ನಂತರ ದಿನಾಂಕ ೯.೧೦.೧೯೭೮ ರಲ್ಲಿ ತೀರ್ಥಹಳ್ಳಿಯ ಸಂಸ್ಕೃತಿ ಮಂದಿರದಲ್ಲಿ ತಾಲ್ಲೂಕಿನ ಎಲ್ಲಾ ಹೋಬಳಿಯ ಸುಮಾರು ೬೦-೭೦ ಜನ ಮುಖಂಡರು, ಯುವಕರು ಶ್ರೀ ಕೆ.ಎಸ್. ನಾಗಪ್ಪಗೌಡ ಕೋಣಂದೂರು ಇವರ ಅಧ್ಯಕ್ಷತೆಯಲ್ಲಿ ಸಭೆ ಸೇರಿ ಒಕ್ಕಲಿಗರ ಸಂಘದ ಸ್ಥಾಪನೆ, ವಿಚಾರ-ಪುನಶ್ಚೇತನದ ವಿಚಾರವನ್ನು ದೀರ್ಘವಾಗಿ ಚರ್ಚೆ ನಡೆಸಿದರು. ಅಂದಿನ ಸಭೆಯಲ್ಲಿ ಶ್ರೀ ಕೆ.ಎಂ. ಶ್ರೀನಿವಾಸ್ ಭಾಗವಹಿಸಿ ತುಂಬಾ ಉಪಯುಕ್ತವಾದ ಸಲಹೆ, ಮಾರ್ಗದರ್ಶ ನೀಡಿರುವುದು ಈ ಹಂತದಲ್ಲಿ ಅವಿಸ್ಮರಣೀಯ. ಹಾಗೆಯೇ ಶ್ರೀ ಕೆ.ಎ. ನರಸಿಂಹಯ್ಯ, ಹೆಬ್ಬಲಗಿ ಕೃಷ್ಣಮೂರ್ತಿ, ಶ್ರೀ ಟಿ.ಸಿ. ಜಗನ್ನಾಥ್, ಶ್ರೀ ಕೆ.ಎಂ. ಸುಬ್ಬಯ್ಯ, ಹೆಚ್.ಎನ್. ವಿಜಯದೇವ್ ಮುಂತಾದವರು ಭಾಗವಹಿಸಿ ಮಾತನಾಡಿ, ಸಂಘಟನೆಗೆ ಹಲವಾರು ಸಲಹೆಗಳನ್ನು ನೀಡಿದ್ದರು. ಕೊನೆಯಲ್ಲಿ ಶ್ರೀ ಹೆಚ್.ಕೆ. ನರಸಿಂಹಯ್ಯ ಇವರ ಅಧ್ಯಕ್ಷತೆಯಲ್ಲಿ ಸುಮಾರು ಇಪ್ಪತ್ತು ಜನರ ''ತಾತ್ಕಾಲಿಕ ಒಕ್ಕಲಿಗರ ಸಂಘ''ದ ಸಮಿತಿ ರಚನೆ ಮಾಡಲಾಯ್ತು. ಈ ಸಮಿತಿಯವರು ಈಗಾಗಲೇ ಚಾಲ್ತಿಯಲ್ಲಿರುವ ಒಕ್ಕಲಿಗರ ವಿದ್ಯಾರ್ಥಿ ನಿಲಯದ ಸಮಿತಿಯವರೊಡನೆ ಚರ್ಚಿಸಿ, ತಾ: ೧೬.೧೦.೧೯೭೮ನೇ ಸೋಮವಾರ ಒಕ್ಕಲಿಗರ ವಿದ್ಯಾರ್ಥಿ ನಿಲಯದಲ್ಲಿ ಜಂಟಿ ಸಭೆ ಕರೆಯುವಂತೆ ನಿರ್ಣಯ ಕೈಗೊಂಡು ಅಧಿಕಾರ ನೀಡಲಾಯ್ತು. ಈ ಎಲ್ಲಾ ಬೆಳವಣಿಗೆಯ ಹಿನ್ನೆಲೆಯಲ್ಲಿ ವಿದ್ಯಾರ್ಥಿಗಳಿಗೆ ಸಲಹೆ ಸಹಕಾರ ಧೈರ್ಯ ಮಾರ್ಗದರ್ಶನ ನೀಡಿದವರು ಎಕನಾಮಿಕ್ಸ್ ಲೆಕ್ಚರರ್ ನಾಗರಾಜ್‌ರವರು. ಎಂದು ಒಕ್ಕಲಿಗರ ಚಕ್ರ (೧೦ ನೇ ತಿಂಗಳು, ೧೯೭೯) ದಾಖಲಿಸುತ್ತದೆ.

ಈ ಹಿಂದಿನ ನಿರ್ಣಯದಂತೆ ತಾ. ೧೬.೧೦.೧೯೭೮ನೇ ಸೋಮವಾರ ಒಕ್ಕಲಿಗರ ವಿದ್ಯಾರ್ಥಿ ನಿಲಯದಲ್ಲಿ ಶ್ರೀ ಹಳಗ ನರಸಿಂಹಯ್ಯನವರ ಅಧ್ಯಕ್ಷತೆಯಲ್ಲಿ ಐತಿಹಾಸಿಕ ಜಂಟಿ ಸಭೆ ನಡೆಯಿತು. ಈ ಸಭೆಯಲ್ಲಿ ಡಾ. ಬಿ.ಎನ್. ರಂಗಪ್ಪ, ಶೀ ಕೆ.ಎಸ್. ರಾಮಪ್ಪಗೌಡ, ಶ್ರೀ ಬಿ.ಎನ್. ಕೃಷ್ಣಮೂರ್ತಿ, ಶ್ರೀ ಎ.ಆರ್. ಹಿರಿಯಣ್ಣಗೌಡ, ಲೆಕ್ಚರರ್ ನಾಗರಾಜ್, ಶೀ ಕೆ.ಎಸ್. ನಾಗಪ್ಪಗೌಡ, ಶ್ರೀ ಉಬ್ಬೂರು ಮಂಜುನಾಥ್, ಶ್ರೀ ಹಿರೇತೋಟ ಉಮೇಶ್, ಶ್ರೀ ಪಿ.ಎಂ. ಶ್ರೀನಿವಾಸ್, ಶ್ರೀ ಬಿ.ಟಿ. ಶಂಕ್ರಪ್ಪ ಹೆಗ್ಡೆ, ಶ್ರೀ ಕಡ್ತೂರು ಶ್ರೀನಿವಾಸ್, ಶೀ ಟಿ.ಆರ್. ನಾರಾಯಣ ಮೂರ್ತಿ, ಶ್ರೀ ಎಂ.ಟಿ. ರಂಗಪ್ಪಗೌಡ, ಶ್ರೀ ಕೆ.ಎ. ನರಸಿಂಹಯ್ಯ, ಶ್ರೀ ಶಂಕ್ರಪ್ಪ, ಶ್ರೀ ಹೆಚ್.ಜಿ. ಗಿರಿರಾಜ್, ಶ್ರೀ ಎಸ್.ಕೆ. ದಿವಾಕರ್, ಶ್ರೀ ಎಂ.ಕೆ. ಧರ್ಮಯ್ಯ, ಶ್ರೀ ಹೆಮ್ಮನೆ ದೇವೇಂದ್ರ, ಶ್ರೀ ವಿ.ಟಿ. ರಾಮಪ್ಪ, ಶ್ರೀ

ಆರಗ ಜ್ಞಾನೇಂದ್ರ, ಶ್ರೀ ಕೆ.ಎಂ. ಸುಬ್ಬಯ್ಯ, ಶ್ರೀ ಸಿ.ಜಿ. ಕೃಷ್ಣಪ್ಪ, ಶ್ರೀ ಹೆಚ್.ಎನ್. ಹಿರಿಯಣ್ಣ, ಶ್ರೀ ಹೆಚ್.ಎನ್. ವಿಜಯದೇವ್, ಶ್ರೀ ಕೆ.ಎಂ. ಶ್ರೀನಿವಾಸ್, ಶ್ರೀ ಪಿ.ವಿ. ಮಹಾಬಲೇಶ್ವರ್, ಶ್ರೀ ಈ.ಟಿ. ಬೊಮ್ಮಯ್ಯಗೌಡ, ಶ್ರೀ ಕೆ.ಎ. ತಾರಾನಾಥ್, ಶ್ರೀ ಕಣಬೂರು ಶ್ರೀಧರ್, ಶ್ರೀ ಖಂಡಕ ಕೃಷ್ಣಮೂರ್ತಿ, ಶ್ರೀ ಹೆಬ್ಬಲಿಗೆ ಕೃಷ್ಣಮೂರ್ತಿ, ಶ್ರೀ ಅಣ್ಣಯ್ಯ ಹೆಗ್ಡೆ, ಮೂಡುವಳ್ಳಿ ಶ್ರೀ ಎನ್. ಕಿಟ್ಟಪ್ಪನವರು, ಶ್ರೀ ಹೆಚ್.ಎನ್. ಗಿಡ್ಡಪ್ಪಗೌಡ, ಶ್ರೀ ಹೆಚ್.ಎಂ. ಕೃಷ್ಣಪ್ಪಗೌಡ, ಶ್ರೀ ಟಿ.ಎಸ್. ರೇಮಯ್ಯಗೌಡ, ಶ್ರೀ ಎನ್.ಡಿ. ಶ್ರೀನಿವಾಸ್ ನಂಬಳ, ಶ್ರೀ ಜಗದೀಶ್ ಕಂಠಿ, ಕೆ.ಟಿ. ಹಾಲಪ್ಪ ಮುಂತಾದವರು ಭಾಗವಹಿಸಿ ಸೂಕ್ತ ಸಲಹೆ ನೀಡಿದ್ದು ಸಂಘದ ಇತಿಹಾಸದಲ್ಲಿ ಪ್ರಮುಖ ಘಟ್ಟ ಎಂದರೂ ತಪ್ಪಾಗಲಾರದು. ಈ ಸಭೆಯಲ್ಲಿ ಸುಮಾರು ಮೂವತ್ತು ಜನರನ್ನು ಪ್ರಮೋಟರ್ಸ್ ಕಮಿಟಿಗೆ ಆಯ್ಕೆ ಮಾಡಿಕೊಂಡು, ಡಾ. ಬಿ.ಎನ್. ರಂಗಪ್ಪನವರನ್ನು ಹಾಗೂ ಶ್ರೀ ಹೆಚ್.ಕೆ. ನರಸಿಂಹಯ್ಯ ಇವರನ್ನು ಚೀಫ್ ಪ್ರಮೋಟರ್ಸ್ ಆಗಿಯೂ ಶ್ರೀ ಎನ್. ಕಿಟ್ಟಪ್ಪ ಹಾಗೂ ಕೌಲಾನಿ ಧರ್ಮಯ್ಯರವರನ್ನು ಸಂಚಾಲಕರನ್ನಾಗಿಯೂ ಆಯ್ಕೆ ಮಾಡಿಕೊಂಡು ಸಂಘದ ನಿಯಮಾವಳಿಗಳ ರಚನೆಯ ಸಂಪೂರ್ಣ ಜವಾಬ್ದಾರಿ ನೀಡಲಾಯ್ತು. ತಾ: ೨೪.೧೨.೧೯೭೪ ರಂದು ಡಾ. ರಂಗಪ್ಪನವರ ಅಧ್ಯಕ್ಷತೆಯಲ್ಲಿ ಸೇರಿದ ಸಭೆಯಲ್ಲಿ ಸಂಘದ ಉದ್ದೇಶ-ಕರ್ತವ್ಯ-ಸಂಘದ ಹೆಸರು-ಸಂಘದ ಕಾರ್ಯವ್ಯಾಪ್ತಿ-ಕಾರ್ಯಕ್ಷೇತ್ರ ನಿವೇದನಾ ಪತ್ರಿಕೆಗಳ ಬಗ್ಗೆ ದೀರ್ಘ ಚರ್ಚೆ ನಡೆಸಿ, ಸಂಘವನ್ನು ನೋಂದಾಯಿಸುವ (ರಿಜಿಸ್ಟ್ರೇಷನ್) ಜವಾಬ್ದಾರಿ ನೀಡಲಾಯ್ತು. ಅದರಂತೆ ತಾ ೧೮.೩.೧೯೭೫ರ ಸಭೆಗೆ ಅಧ್ಯಕ್ಷರು ಸಂಘ ನೋಂದಾವಣೆಯಾದ ವಿಚಾರ ತಿಳಿಸಿದರು. (ರಿ.ನಂ. ೬೭: ಆರ್‌ಓಎಸ್: ಎಸ್‌ಎಂಜಿ: ೧೯೭೪-೭೫) ಹಾಗೇ ಈ ಸಾಲಿನಿಂದ ತಾಲ್ಲೂಕಿನ ಒಕ್ಕಲಿಗರನನ್ನ ಸದಸ್ಯರನ್ನಾಗಿ ನೋಂದಾಯಿಸಿಕೊಳ್ಳಲು ಪ್ರಾರಂಭಿಸಲಾಯ್ತು.

ಸಂಘವು ನೋಂದಾವಣಿಯಾಗಿ ಪುನಃಶ್ಚೇತನ ಪಡೆದ ನಂತರ ತಾಲ್ಲೂಕು ಒಕ್ಕಲಿಗರ ಸಮ್ಮೇಳನ ತಾ ೧೫.೪.೧೯೭೫ನೇ ಭಾನುವಾರ ಒಕ್ಕಲಿಗರ ವಿದ್ಯಾರ್ಥಿ ನಿಲಯದ ಆವರಣದಲ್ಲಿ ಈ ಸಂಘದ-ಜನಾಂಗದ ಏಳಿಗೆಗೆ-ಅಭಿವೃದ್ಧಿಗೆ ಎಲೆಯ ಮರೆಯ ಕಾಯಿಯಂತೆ ಸೇವೆ ಸಲ್ಲಿಸಿದ ಶ್ರೀ ಬಿ. ಲಿಂಗೇಗೌಡರು ಭಾಗವಹಿಸಿ ಸಂಘಟನೆಯ ಅವಶ್ಯಕತೆ-ಬೇಡಿಕೆಗಳು, ಸಮಾಜದ ವಿವಿಧ ಕ್ಷೇತ್ರಗಳಲ್ಲಿ ಹೇಗೆ ಮುಂದೆ ಬರಬಹುದು, ನಾವು ಹೇಗೆ ವ್ಯವಸ್ಥಿತವಾಗಿ ಶೋಷಿತರಾಗುತ್ತೇವೆ ಎಂದೆಲ್ಲಾ ವಿಚಾರವನ್ನು ತಾವು ಈ ಕ್ಷೇತ್ರದಲ್ಲಿ ಬಿ.ಡಿ.ಓ. ಆಗಿ ಕಾರ್ಯನಿರ್ವಹಿಸುವಾಗ ಕಂಡ ಘಟನೆಗಳನ್ನು ವಿವರವಾಗಿ ಹೇಳಿ ಇಡೀ ಸಮೂಹವನ್ನು ಜಾಗೃತಗೊಳಿಸಿ ಸಂಗಟಿತರಾಗಿ ಹೋರಾಡಲು ಕರೆ ನೀಡಿದ್ದು, ಸಂಘದ ಈ ಕ್ಷಿಪ್ರ ಬೆಳವಣಿಗೆಗೆ ಕಾರಣ ಎನ್ನಬಹುದು.

ಸಂಘದ ಪ್ರಥಮ ಸರ್ವಸದಸ್ಯರ ಸಭೆಯು ತಾ. ೧೮.೧೧.೧೯೭೫ರಂದು ಡಾ. ಬಿ.ಎನ್. ರಂಗಪ್ಪನವರ ಅಧ್ಯಕ್ಷತೆಯಲ್ಲಿ ನಡೆಯಿತು. ಈ ಸಭೆಯಲ್ಲಿ ರಚನೆಗೊಂಡ ನೂತನ ಕಾರ್ಯಕಾರಿ ಮಂಡಳಿಗೆ ಶ್ರೀ ಕೆ.ಎಸ್. ರಾಮಪ್ಪಗೌಡ, ಕಡಿದಾಳ್ ಇವರು ಅಧ್ಯಕ್ಷರಾಗಿಯೂ, ಉಪಾಧ್ಯಕ್ಷರಾಗಿ ಶ್ರೀ ಹೆಚ್.ಆರ್.ಪರಮೇಶ್ವರ ಮೇಗರವಳ್ಳಿ, ಖಜಾಂಚಿಯಾಗಿ ಡಾ. ಬಿ.ಎನ್. ರಂಗಪ್ಪನವರು, ಕಾರ್ಯದರ್ಶಿಯಾಗಿ ಶ್ರೀ ಎನ್. ಕಿಟ್ಟಪ್ಪನವರು ಸಹ ಕಾರ್ಯದರ್ಶಿಯಾಗಿ ಶ್ರೀ ಕೌಲಾನಿ ಧರ್ಮಯ್ಯನವರನ್ನು ಹಾಗೂ ಎಲ್ಲಾ ಹೋಬಳಿಯಿಂದ ತಲಾ ಮೂರು ಜನರಂತೆಯೂ ಹಾಗೂ ಹತ್ತು ಜನ ವಿಶೇಷ ಆಹ್ವಾನಿತ ಸದಸ್ಯರನ್ನು ಆಯ್ಕೆ ಮಾಡಿಕೊಳ್ಳಲಾಯ್ತು.

ನೂತನ ಕಾರ್ಯಕಾರಿ ಮಂಡಳಿಯು ತಾ. ೨೬.೧೧.೧೯೭೯ರಲ್ಲಿ ಸಭೆ ಸೇರಿ, ನಮ್ಮ ಸಂಘಟನೆ ಅಭಿವೃದ್ಧಿಯ ವಿಚಾರವನ್ನು ಪ್ರತಿ ಹೋಬಳಿ ಮಟ್ಟದಲ್ಲಿ ಸಭೆ ಸೇರಿಸಿ ತಿಳಿಸುವುದರ ಮೂಲಕ ತಾಲ್ಲೂಕಿನ ನಮ್ಮ ಜನಾಂಗದವರನ್ನು ಜಾಗೃತಗೊಳಿಸಲು ತೀರ್ಮಾನಿಸಲಾಯಿತು. ತಾ. ೨.೩.೧೯೮೦ರಂದು ಕೋಣಂದೂರಿನಲ್ಲಿಯೂ ತಾ. ೧೨.೩.೧೯೮೦ರಂದು ದೇವಂಗಿಯಲ್ಲಿಯೂ, ೧೫.೩.೧೯೮೦ರಂದು ಅರಮನೆಕೇರಿಯಲ್ಲಿಯೂ, ತಾ. ೧೪.೨.೧೯೮೦ರಂದು ಗಬಡಿಯಲ್ಲೂ, ತಾ. ೨೬.೩.೧೯೮೦ರಂದು ಗುಡ್ಡೇಕೇರಿಯಲ್ಲೂ, ತಾ. ೩೦.೩.೧೯೮೦ರಂದು ಕಡೂರಿನಲ್ಲೂ ಸಭೆ ನಡೆಸುವುದರ ಮೂಲಕ ತಾಲ್ಲೂಕಿನ ಎಲ್ಲಾ ಹೋಬಳಿಯ ಗ್ರಾಮದ ಜನರ ಅಭಿಪ್ರಾಯ ಸಲಹೆ ಪಡೆದು ಸಂಘದ ಅಭಿವೃದ್ಧಿಯತ್ತ ದಾಪುಗಾಲು ಹಾಕಲು ಪ್ರಾರಂಭಿಸಿತು. ತಾ. ೧೯.೪.೧೯೮೦ರ ಕಾರ್ಯಕಾರಿ ಮಂಡಳಿಯ ಸಭೆಯಲ್ಲಿ ಜನಾಂಗಕ್ಕೆ ಒಂದು ಕಲ್ಯಾಣ ಮಂದಿರದ ಅವಶ್ಯಕತೆ ಇದ್ದು ಇದರ ವಿಚಾರ ಚರ್ಚಿಸುತ್ತಿರುವಾಗ, ಕೆಳನರಸೆ ಕೂಳುಂಡೆ ಶ್ರೀ ತಿಮ್ಮಣ್ಣಗೌಡರು ತಮ್ಮ ಪುತ್ರ ದಿ. ಕೆ.ಟಿ. ಕೇಶವಮೂರ್ತಿಯವರ ಹೆಸರಿನಲ್ಲಿ ಸುಮಾರು ೭೫.೦೦೦ ಸಹಸ್ರ ರೂಪಾಯಿಗಳ ಧನಸಹಾಯ ಮಾಡುವ ಪ್ರಸ್ತಾಪವಿರುವುದನ್ನು ಶ್ರೀ ಬಿ.ಎನ್. ಕೃಷ್ಣಮೂರ್ತಿಯವರು ಹಾಗೂ ಜಿಲ್ಲೆಯಾದ್ಯಂತ ದಾನಿಗಳಿಂದ ಧನಸಂಗ್ರಹಿಸಿ ಕಲ್ಯಾಣ ಮಂದಿರ ನಿರ್ಮಿಸುವ ಹಾಗೂ ಅದಕ್ಕೆ ಕೆಳನರಸೆ ಕೂಳುಂಡೆ ಕೆ.ಟಿ. ಕೇಶವಮೂರ್ತಿ ಒಕ್ಕಲಿಗರ ಕಲ್ಯಾಣ ಮಂದಿರವೆಂದು ಹೆಸರಿಡಬಹುದೆಂದೂ ತೀರ್ಮಾನಿಸಿ ತಾ. ೧೦.೧.೧೯೮೧ರಂದು ಇದರ ಶಂಕು ಸ್ಥಾಪನೆಯನ್ನು ಧರ್ಮಸ್ಥಳದ ಧರ್ಮಾಧಿಕಾರಿ ಶ್ರೀ ವಿರೇಂದ್ರ ಹೆಗಡೆಯವರ ಅಮೃತಹಸ್ತದಲ್ಲಿ ಶಿವಮೊಗ್ಗ ಜಿಲ್ಲಾ ಒಕ್ಕಲಿಗರ ಸಂಘದ ಅಧ್ಯಕ್ಷರಾದ ಶ್ರೀ ಕೆ.ಟಿ. ಶಾಮಯ್ಯಗೌಡರ ಅಧ್ಯಕ್ಷತೆಯಲ್ಲಿ ನೆರವೇರಿಸಲಾಯ್ತು.

ಈ ಬಗ್ಗೆ ಶಿವಮೊಗ್ಗ ಹಾಗೂ ಚಿಕ್ಕಮಗಳೂರು ಜಿಲ್ಲೆ ಹಾಗೂ ಬೆಂಗಳೂರು ನಿವಾಸಿಗಳಿಂದ ಹಣ ಸಂಗ್ರಹಣೆ ಮಾಡಿ ಸುಮಾರು ಆರು ಲಕ್ಷದ ಐವತ್ತು ಸಾವಿರ ರೂಪಾಯಿಗಳಲ್ಲಿ ಸುಸಜ್ಜಿತ ಕಲ್ಯಾಣ ಮಂದಿರ ನಿರ್ಮಾಣ ಮಾಡಿ, ತಾ. ೬.೪.೧೯೮೩ರಲ್ಲಿ ಕ್ಷೇತ್ರದ ಶಾಸಕರೂ, ವಿಧಾನಸಭಾ ಅಧ್ಯಕ್ಷರು ಆಗಿದ್ದ ಶ್ರೀ ಡಿ.ಬಿ. ಚಂದ್ರೇಗೌಡರ ಅಧ್ಯಕ್ಷತೆಯಲ್ಲಿ ಮಾಜಿ ಮುಖ್ಯಮಂತ್ರಿಗಳು ಸಮಾಜದ ಹಿರಿಯರೂ ಆದ ಶ್ರೀ ಕಡಿದಾಳ್ ಮಂಜಪ್ಪನವರು ಕಲ್ಯಾಣ ಮಂದಿರವನ್ನು ಉದ್ಘಾಟಿಸಿ ಜನತೆಗೆ ಸಮರ್ಪಿಸಿದರು. ಅಂದಿನಿಂದ ನಮ್ಮ ಸಂಘದ ಎಲ್ಲಾ ಕಾರ್ಯ ಚಟುವಟಿಕೆ ಹಾಗೂ ಸಂಘಟನೆಯ ಆರ್ಥಿಕ ಚೈತನಕ್ಕೆ ಕಲ್ಯಾಣ ಮಂದಿರದ ಆದಾಯವೇ ಆಧಾರಸ್ತಂಭವಾಯ್ತೆಂದರೂ ತಪ್ಪಾಗಲಾರದು. ಸಂಘವು ಹಿಂದುಳಿದ ವರ್ಗದ ಪಟ್ಟಿಯಿಂದ ಕೈಬಿಟ್ಟಿರುವ ನ್ಯಾಯಮೂರ್ತಿ ವೆಂಕಟಸ್ವಾಮಿ ಆಯೋಗದ ವರದಿಯನ್ನು ಬಹಿಷ್ಕರಿಸಿ ತಾ. ೪.೯.೧೯೮೬ರಂದು ತೀರ್ಥಹಳ್ಳಿಯಲ್ಲಿ ಜನಾಂಗದ ಬಹೃತ್ ಸಭೆ ಸೇರಿಸಿ ಪಟ್ಟಣದಲ್ಲಿ ಮೆರವಣಿಗೆ ನಡೆಸಿ ಸರ್ಕಾರಕ್ಕೆ ಈ ವರದಿ ಕೈಬಿಡುವಂತೆ ತಹಶೀಲ್ದಾರ್ ಮೂಲಕ ಮನವಿ ಸಲ್ಲಿಸಿದ್ದು, ನಂತರ ೧೯೮೬ರಲ್ಲಿ ನಡೆದ ಐತಿಹಾಸಿಕ ಬೆಂಗಳೂರು ಒಕ್ಕಲಿಗರ ಪ್ರತಿಭಟನಾ ಜಾಥಾದಲ್ಲಿ ಸಾವಿರಾರು ಜನ ಭಾಗವಹಿಸಿದ್ದು ಸಂಘದ ಹಿರಿಮೆಯಾಗಿದೆ.

ಸಂಘಕ್ಕೆ ೭೫ ವಸಂತಗಳು ತುಂಬಿದ ಸಂದರ್ಭದಲ್ಲಿ ಇದರ ಸವಿನೆನಪಿಗಾಗಿ ವಜ್ರಮಹೋತ್ಸವ ಸಮಾರಂಭ ನಡೆಸಲು ತೀರ್ಮಾನಿಸಿ ಶ್ರೀ ಕಟ್ಟೆ ಚೆನ್ನಕೇಶವ ಬೀದಿಗೆ ಅಭಿಮುಖವಾಗಿ ಸುಮಾರು ಐದು ಲಕ್ಷ ರೂಪಾಯಿಗಳ ಅಂದಾಜಿನಲ್ಲಿ ವಜ್ರಮಹೋತ್ಸವ ಕಟ್ಟಡದ ಶಂಕುಸ್ಥಾಪನೆಯನ್ನು ತಾ. ೨೦.೧೧.೧೯೮೮ ರಂದು ಕೇಂದ್ರ ಒಕ್ಕಲಿಗರ ಸಂಘದ ಅಧ್ಯಕ್ಷರಾದ ಡಾ. ಎಂ.ಹೆಚ್. ಮರಿಗೌಡರ ಅಮೃತಹಸ್ತದಲ್ಲಿ ನೆರವೇರಿಸಲ್ಪಟ್ಟಿದ್ದು ಈ ಸಮಾರಂಭದ

ಮುಖಂಡರೂ ಆದ ಶ್ರೀ ದೇವಂಗಿ ಆರ್. ರತ್ನಾಕರ್ ವಹಿಸಿದ್ದರು. ಮುಖ್ಯ ಅತಿಥಿಯಾಗಿ ನ್ಯಾಯಮೂರ್ತಿ ಎನ್.ಡಿ. ವೆಂಕಟೇಶ್, ಮಾಜಿ ಉಪಕುಲಪತಿ ಡಾ.ಹಾ.ಮಾ.ನಾಯಕ, ವಿಶ್ವ ಸಹಕಾರಿ ಕ್ಷೇತ್ರದ ದುರೀಣರೆನ್ನಿಸಿಕೊಂಡಿರುವ ಶ್ರೀ ಬಿ.ಎನ್. ವಿಶ್ವನಾಥನ್, ಶ್ರೀ ಸಿ.ಎನ್. ಮಂಜುನಾಥ್ ಭಾಗವಹಿಸಿ ಶುಭ ಹಾರೈಸಿದ್ದರು.

೧೯೮೭-೮೮ ರಲ್ಲಿ ಒಕ್ಕಲಿಗರ ವಿದ್ಯಾರ್ಥಿ ನಿಲಯದ ಈ ಹಿಂದಿನ ಅಡಿಗೆ ಮನೆ, ಊಟದ ಹಾಲ್, ಬಚ್ಚಲು ಮನೆ, ಶೌಚಾಲಯಗಳನ್ನು ಸುಮಾರು ಎರಡು ಲಕ್ಷರೂಪಾಯಿಗಳ ವೆಚ್ಚದಲ್ಲಿ ನವೀಕರಿಸಲಾಯ್ತು. ಹಾಗೆಯೇ ಸಂಘದ ಸುತ್ತಾ ಸುಮಾರು ಒಂದುವರೆ ಲಕ್ಷ ರೂಪಾಯಿಗಳಲ್ಲಿ ಕಾಂಪೌಂಡ್ ನಿರ್ಮಿಸಲಾಯ್ತು. ಈ ಕಾಮಗಾರಿಗಳಿಗೂ ಕೂಡ ಬೆಂಗಳೂರು ಒಕ್ಕಲಿಗರ ಸಂಘ ಸುಮಾರು ೭೫,೦೦೦.೦೦ ರೂಪಾಯಿಗಳ ನೆರವು ನೀಡಿರುತ್ತದೆ. ತಾ. ೧೯.೧.೧೯೮೮ರಂದು ಸಂಘಕ್ಕೆ ಕೇಂದ್ರ ಒಕ್ಕಲಿಗರ ಸಂಘದ ಪ್ರತಿನಿಧಿ ಶ್ರೀ ಸಿ.ಎನ್. ಮಂಜುನಾಥ್ ಮತ್ತು ಹಾಸನದ ಪ್ರತಿನಿಧಿ ಶ್ರೀ ಜೆ.ಟಿ. ಪುಟ್ಟಸ್ವಾಮಿಗೌಡರವರುಇವರು ಭೇಟಿ ಕೊಟ್ಟು ಕಾರ್ಯಕಾರಿ ಮಂಡಳಿ ಸಭೆಯಲ್ಲಿ ಭಾಗವಹಿಸಿದ ಸಂದರ್ಭದಲ್ಲಿ ಶ್ರೀ ಜೆ.ಟಿ. ಪುಟ್ಟಸ್ವಾಮಿಗೌಡರು ಮಾತನಾಡುತ್ತಾ ಹಿಂದೆ ಬೆಂಗಳೂರಿನಲ್ಲಿ ಕೇಂದ್ರ ಒಕ್ಕಲಿಗರ ಸಂಘ ಹೇಗೆ ಸ್ಥಾಪನೆಯಾಯ್ತು, ಯಾವ ರೀತಿ ಸಂಘಟನೆ ಮಾಡಿದರು, ಯಾವ ರೀತಿ ಬೆಳೆಯುತ್ತಾ ಬಂತು, ಯಾವ ಯಾವ ರಾಜಕಾರಣಿಗಳು ಮಂತ್ರಿಗಳು ಮುಖ್ಯ ಮಂತ್ರಿಗಳು ಹೇಗೆ ಸಹಕರಿಸಿದರು, ಈಗ ಸಂಘ ಶೈಕ್ಷಣಿಕ ಕ್ಷೇತ್ರದಲ್ಲಿ ಹಾಗೂ ಸಾಮಾಜಿಕ ಆಂದೋಲನದಲ್ಲಿ ಹೇಗೆ ಮುಂದುವರಿಯುತ್ತಿದೆ, ಇದಕ್ಕೆಲ್ಲಾ ಹಿರಿಯರ ಸಂಘಟಿತ ಪ್ರಾಮಾಣಿಕ ನಿಸ್ವಾರ್ಥ ಸೇವೆಯೇ ಕಾರಣ ಎಂದು ತಿಳಿಸುತ್ತಾ ಇಂದಿನ ಶೈಕ್ಷಣಿಕ ವ್ಯವಸ್ಥೆಯಲ್ಲಿ ನಾವು ಮುಂದೆ ಬರಬೇಕಾದರೆ ಆಂಗ್ಲಮಾಧ್ಯಮದಲ್ಲಿ ಶಿಕ್ಷಣ ಎಷ್ಟು ಅವಶ್ಯಕ ಎನ್ನುವುದನ್ನು ತುಂಬಾ ಮಾರ್ಮಿಕವಾಗಿ ತಿಳಿಸುತ್ತಾ, ನೀವು ಯಾಕೆ ಸಂಘದ ವತಿಯಿಂದ ಪ್ರಾಥಮಿಕ ಹಂತದಲ್ಲಿ ಆಂಗ್ಲಮಾಧ್ಯಮ ಶಾಲೆ ಪ್ರಾರಂಭಿಸಬಾರದು, ಇಲ್ಲಿಯ ಈ ಕಟ್ಟಡ, ವ್ಯವಸ್ಥೆ ಪರಿಸರ-ಜನರ ಮನಸ್ಸು ವಿಶಾಲವಾಗಿದೆ. ಇದಕ್ಕೆಲ್ಲಾ ಪೂರಕವಾಗಿ ಸಂಘದ ಪದಾಧಿಕಾರಿಗಳು ಅನುಭವಿಗಳು, ವಿದ್ಯಾವಂತರೂ-ಯುವಕರು ಇದ್ದೀರಿ. ನೀವು ಈ ನಿಟ್ಟಿನಲ್ಲಿ ಪ್ರಯತ್ನ ಮಾಡಿದರೆ ನಮ್ಮ ಕೇಂದ್ರ ಸಂಘವು ಸಹಕಾರ ನೀಡಲು ಬದ್ಧವಾಗಿದೆ. ಖಂಡಿತಾ ಇಲ್ಲೊಂದು ಪ್ರತಿಷ್ಠಿತ ಆಂಗ್ಲ ಮಾಧ್ಯಮ ಶಾಲೆಯನ್ನು ಸ್ಥಾಪಿಸಿದರೆ ಸಂಘ ತನ್ನ ಕೈಲಾದ ಸಹಾಯ ಮಾಡಲು ಬದ್ಧವಾಗಿದೆ ಎಂದು ತಿಳಿಸಿದ್ದು, ಇದಕ್ಕೆ ಶ್ರೀ ಸಿ.ಎನ್. ಮಂಜುನಾಥ್‌ರವರೂ ಒತ್ತುಕೊಟ್ಟಿದ್ದು, ಶಾಲೆಯನ್ನು ಪ್ರಾರಂಭಿಸಬೇಕೆನ್ನುವ ಚಿಂತನೆಯಲ್ಲಿದ್ದ ನಮಗೆ ಸ್ಪೂರ್ತಿ ತುಂಬಿದರು. ಇದು ''ಸಹ್ಯಾದ್ರಿ ಆಂಗ್ಲ ಮಾಧ್ಯಮ ಶಾಲೆಯ ಹುಟ್ಟಿಗೆ'' ಕಾರಣವಾಯ್ತು ಎಂದರೆ ಅತಿಶಯೋಕ್ತಿಯಾಗಲಾರದು. ತಾ. ೨೮.೨.೧೯೮೮ ರಂದು ಕೇಂದ್ರ ಒಕ್ಕಲಿಗರ ಸಂಘದ ಅಧ್ಯಕ್ಷರಾದ ಶ್ರೀ ಗುತ್ತಲಗೌಡರು, ಉಪಾಧ್ಯಕ್ಷರಾದ ಶ್ರೀ ಬಿ.ಟಿ. ಪಾರ್ಥಸಾರಥಿಯವರು ಶ್ರೀ ಸಿ.ಎನ್. ಮಂಜುನಾಥ್, ಶ್ರೀ ಜೆ.ಟಿ. ಪುಟ್ಟಸ್ವಾಮಿಗೌಡ ಹಾಗೂ ಕಾರ್ಯಕಾರಿ ಮಂಡಳಿ ಸದಸ್ಯರು ಸಂಘಕ್ಕೆ ಭೇಟಿ ಕೊಟ್ಟು ಸಂಘದ ಎಲ್ಲಾ ಅಭಿವೃದ್ಧಿ ಕಾರ್ಯಗಳನ್ನು ಪರಿಶೀಲಿಸಿ ಮೆಚ್ಚುಗೆ ವ್ಯಕ್ತಪಡಿಸಿ ಆಂಗ್ಲಮಾಧ್ಯಮ ಶಿಕ್ಷಣ ಪ್ರಾರಂಭಿಸುವಂತೆ ಸಲಹೆ ನೀಡಿ ೭೫,೦೦೦.೦೦ ರೂ.ಗಳ ಆರ್ಥಿಕ ಧನಸಹಾಯ ನೀಡಿದ್ದು ಈ ನಿಟ್ಟಿನಲ್ಲಿ ಹೆಚ್ಚಿನ ಪ್ರೋತ್ಸಾಹಸಿಕ್ಕಂತಾಗಿ ತಾ. ೧೦.೬.೧೯೯೦ ರಂದು ಶಿಕ್ಷಣ ಕ್ಷೇತ್ರದ ದಿಗ್ಗಜ, ಸಂಘದ ಹಿರಿಯ ಸ್ಥಾಪಕ ಸದಸ್ಯರಾದ

ಡಾ. ಬಿ.ಎನ್. ರಂಗಪ್ಪನವರ ಅಮೃತಹಸ್ತದಲ್ಲಿ ''ಸಹ್ಯಾದ್ರಿ ಆಂಗ್ಲ ಮಾಧ್ಯಮ ಶಾಲೆಯನ್ನು ಜ್ಯೋತಿ ಬೆಳಗಿಸುವುದರ ಮೂಲಕ ಪ್ರಾರಂಭಿಸಲಾಯ್ತು. ಪ್ರಾರಂಭದಲ್ಲಿ ಕೇವಲ ಇಪ್ಪತ್ತಮೂರು (೨೩) ವಿದ್ಯಾರ್ಥಿಗಳು ಸೇರ್ಪಡೆಗೊಂಡಿದ್ದರು. ತಾ. ೨೭.೬.೧೯೯೦ರ ಕಾರ್ಯಕಾರಿ ಮಂಡಳಿಗೆ ಸಂಘದ ಹಿತಚಿಂತಕರೂ ಆಜೀವ ಸದಸ್ಯರೂ ನ್ಯಾಯವಾದಿ ಶ್ರೀ ಕಿಮ್ಮನೆ ರತ್ನಾಕರ್ ಪತ್ರ ಬರೆದು ಸಂಘದವತಿಯಿಂದ ಪ್ರಾರಂಭಗೊಂಡ ಆಂಗ್ಲ ಮಾಧ್ಯಮ ಶಾಲೆಯ ವಿಚಾರವನ್ನು ಸ್ವಾಗತಿಸಿ ಹಾಲೀ ತೀರ್ಥಹಳ್ಳಿಯಲ್ಲಿ ನಮ್ಮವರೇ ಆದ ಶ್ರೀ ಕೆ.ಎಸ್. ಜಗದೀಶ್, ಹಿರೇತೋಟ ಉಮೇಶ್, ಶ್ರೀ ಜಿ.ವಿ. ಜಯರಾಂ ಹೆಗ್ಡೆ, ಶ್ರೀ ಕೆ.ಜಿ. ಮಹೇಶ್ ಮತ್ತು ಶ್ರಿ ಡಾನ್ ರಾಮಣ್ಣನವರು ನಡೆಸುತ್ತಿರುವ ಶ್ರೀ ವಾಗ್ದೇವಿ ಆಂಗ್ಲ ಮಾಧ್ಯಮ ಶಾಲೆಯನ್ನು ಒಕ್ಕಲಿಗರ ಸಂಘದವರು ಪ್ರಾರಂಭಿಸಿರುವ ಸಹ್ಯಾದ್ರಿ ಶಾಲೆಯೊಂದಿಗೆ ಸೇರಿಸಿಕೊಳ್ಳಬಾರದೇಕೆ, ಎರಡೂ ಕಡೆಯವರ ಉದ್ದೇಶ ಒಂದೇ ಆಗಿದ್ದು-ತೀರ್ಥಹಳ್ಳಿ ಪಟ್ಟಣಕ್ಕೆ ಒಂದೇ ಆಂಗ್ಲ ಮಾಧ್ಯಮ ಶಾಲೆ ಸದ್ಯಕ್ಕೆ ಸಾಕು ಎನ್ನುವ, ಅವರ ಅಭಿಪ್ರಾಯದ ಪತ್ರವನ್ನು ಪರಿಶೀಲಿಸಿ-ಚರ್ಚಿಸಿ ಒಪ್ಪಿಗೆ ನೀಡಿ ಆ ಬಗ್ಗೆ ಎರಡೂ ಸಂಸ್ಥೆಗಳೊಂದಿಗೆ, ಮಾತನಾಡಿ, ಒಪ್ಪಿಸುವ ಒಪ್ಪಂದ ಮಾಡುವ ಜವಾಬ್ದಾರಿಯನ್ನು ಶ್ರೀ ಕಿಮ್ಮನೆ ರತ್ನಾಕರರವರಿಗೆ ಸಂಘವು ವಹಿಸಿ ಅದರಂತೆ ತಾ. ೨೯.೬.೧೯೯೦ರಂದು ಎರಡೂ ಸಂಸ್ಥೆಗಳು ಒಪ್ಪಂದ ಮಾಡಿಕೊಂಡು ವಿಲೀನವಾದವು.

ಸುಮಾರು ಐದು ಲಕ್ಷ ರೂಪಾಯಿಗಳ ವೆಚ್ಚದಲ್ಲಿ ಕಟ್ಟೆ ಚನ್ನಕೇಶವ ಬೀದಿಗೆ ಅಭಿಮುಖವಾಗಿ ತಲೆ ಎತ್ತಿ ನಿಂತ ಅಮೃತೋತ್ಸವ ಕಟ್ಟಡದ (ವಜ್ರಮಹೋತ್ಸವ) ಉದ್ಘಾಟನೆಯನ್ನು ತಾ. ೧೦.೩.೧೯೯೧ರಂದು ಸಂಘದ ಅಧ್ಯಕ್ಷರಾದ ಶ್ರೀ ಕಡಿದಾಳ್ ರಾಮಪ್ಪಗೌಡರಿಂದ ನೆರವೇರಿಸಲ್ಪಟ್ಟಿತ್ತು. ಈ ಸಮಾರಂಭದ ಅಧ್ಯಕ್ಷತೆಯನ್ನು ಸಂಘದ ಖಜಾಂಚಿ ತುಂಗಾ ವಿದ್ಯಾವರ್ಧಕ ಸಂಘದ ಅಧ್ಯಕ್ಷರೂ ಆದ ಡಾ. ಬಿ.ಎನ್. ರಂಗಪ್ಪನವರು ವಹಿಸಿದ್ದರು. ಮುಖ್ಯ ಅತಿಥಿಗಳಾಗಿ ಕೇಂದ್ರ ಒಕ್ಕಲಿಗರ ಸಂಘದ ಹಿರಿಯ ಉಪಾಧ್ಯಕ್ಷರಾದ ಶ್ರೀ ಬಿ.ಟಿ. ಪಾರ್ಥಸಾರಥಿಯವರೂ, ನ್ಯಾಯವಾದಿ ಶ್ರೀ ಎನ್.ಡಿ. ವೆಂಕಟೇಶರವರೂ, ಅಕಾಡೆಮಿ ಆಫ್ ಲಿಬರಲ್ ಎಜುಕೇಷನ್ ಟ್ರಸ್ಟ್ ಸುಳ್ಯ ಇದರ ಅಧ್ಯಕ್ಷರೂ ಕೇಂದ್ರ ಒಕ್ಕಲಿಗರ ಸಂಘದ ನಿರ್ದೇಶಕರೂ ಆದ ಶ್ರೀ ಕುರುಂಜಿ ವೆಂಕಟರಮಣ ಗೌಡರು, ಶ್ರೀ ಸಿ.ಎನ್. ಮಂಜುನಾಥ್ ಭಾಗವಹಿಸಿದ್ದರು. ಅರ್ಜುನ್ ಪ್ರಶಸ್ತಿ ವಿಜೇತ, ಅಂತರಾಷ್ಟ್ರೀಯ ಕ್ರೀಡಾಪಟು, ಶ್ರೀ ಎಸ್.ಡಿ. ಈಶನ್ ಮತ್ತು ಅಂತರಾಷ್ಟ್ರೀಯ ಕ್ರೀಡಾಪಟು ಕು. ಈ.ಬಿ. ಶೈಲಾರವರನ್ನು ಈ ಸಂದರ್ಭದಲ್ಲಿ ಸನ್ಮಾನಿಸಲಾಯಿತು.

ನಮ್ಮ ತಾಲ್ಲೂಕಿನಲ್ಲಿ ಪ್ರವಾಸ ಕೈಗೊಂಡ ಆದಿ ಚುಂಚನಗಿರಿ ಮಠಾಧೀಶ್ವರರಾದ ಬಾಲಗಂಗಾಧರನಾಥ ಸ್ವಾಮೀಜಿಯವರನ್ನು ತಾ ೨೦.೧.೧೯೯೨ರಂದು ಸಂಘಕ್ಕೆ ಬರಮಾಡಿಕೊಂಡು ಕೆ.ಟಿ.ಕೆ. ಸಭಾಂಗಣದಲ್ಲಿ ಸನ್ಮಾನಿಸಲಾಯಿತು. ಹಾಗೆಯೇ ಸ್ವಾಮೀಜಿಯವರ ಪ್ರವಾಸ ಕಾಲದಲ್ಲಿ ತಾ ೨೦.೧.೧೯೯೨ ರಿಂದ ೨೫.೧.೧೯೯೨ರವರೆಗೆ ಎಲ್ಲಾ ಹೋಬಳಿಯ ಪ್ರವಾಸದಲ್ಲಿ ಅಧ್ಯಕ್ಷರು ಹಾಗೂ ಕಾರ್ಯಕಾರಿ ಮಂಡಳಿ ಸದಸ್ಯರು ಭಾಗವಹಿಸಿ ಸಹಕರಿಸಿದ್ದು ತಾ. ೨೪.೨.೧೯೯೨ರಂದು ಕೇಂದ್ರ ಒಕ್ಕಲಿಗರ ಸಂಘದ ಅಧ್ಯಕ್ಷರಾದ ಶ್ರೀ ಗುತ್ತಲಗೌಡರು ಹಾಗೂ ನಿರ್ದೇಶಕರುಗಳು ಸಂಘಕ್ಕೆ ಭೇಟಿಕೊಟ್ಟು, ಸಂಘದ ಅಭಿವೃದ್ಧಿ ಕಾರ್ಯಗಳನ್ನೂ ಶಿಕ್ಷಣ ಸಂಸ್ಥೆಯ ಪ್ರಗತಿಯನ್ನು ಪರಿಶೀಲಿಸಿ ಮೆಚ್ಚುಗೆ ಸೂಚಿಸಿ ಹಲವಾರು ಸಲಹೆಗಳನ್ನು ನೀಡುವುದರ ಜೊತೆಗೆ ೭೫,೦೦೦-೦೦ ಸಾವಿರ ರೂ ಗಳ ಆರ್ಥಿಕ ನೆರವನ್ನು ನೀಡಿ ನಮ್ಮನ್ನು ಪ್ರೋತ್ಸಾಹಿಸಿದ್ದು ಸಹ್ಯಾದ್ರಿ ಆಂಗ್ಲಮಾಧ್ಯಮ

ಶಾಲೆ ತೀವ್ರಗತಿಯಲ್ಲಿ ಪ್ರಗತಿ ಹೊಂದಲು ಕಾರಣವಾಯ್ತು. ತಾ. ೨೨.೩.೧೯೯೩ರಂದು ಕೆ.ಟಿ.ಕೆ ಕಲ್ಯಾಣ ಮಂದಿರದಲ್ಲಿ ಅಧ್ಯಕ್ಷರು ಹಾಗೂ ಕಾರ್ಯಕಾರಿ ಮಂಡಳಿಯವರು ತಾಲೂಕಿನ ನಮ್ಮ ಜನಾಂಗದ ವಿವಿಧ ಕ್ಷೇತ್ರದ ಗಣ್ಯರು ಹಾಗೂ ಜನಪ್ರತಿನಿಧಿಗಳ ಸಭೆ ಕರೆದು ಅವರೊಂದಿಗೆ ಸಂಘದ ಅಭಿವೃದ್ಧಿ ಸಂಘಟನೆ-ಕಾರ್ಯಕ್ರಮಗಳ ಬಗ್ಗೆ ಚರ್ಚಿಸಿ ಸಲಹೆ ಪಡೆದಿರುತ್ತೇವೆ. ಪ್ರತೀ ವರ್ಷವೂ ನಮ್ಮ ಶಾಲೆಯ ವಿದ್ಯಾರ್ಥಿಗಳ ಸಂಖ್ಯೆ ಹೆಚ್ಚಾಗುತ್ತಿದ್ದು ಇದಕ್ಕೆ ಅನುಗುಣವಾಗಿ ಕೊಠಡಿಗಳ ಅಗತ್ಯವಿದ್ದು ಇದಕ್ಕಾಗಿ ತಾ. ೨೯.೧.೧೯೯೪ರಂದು ಸಹ್ಯಾದ್ರಿ ಆಂಗ್ಲ ಮಾಧ್ಯಮ ಹಿರಿಯ ಪ್ರಾಥಮಿಕ ಪಾಠಶಾಲಾ ಕಟ್ಟಡದ ಶಂಕುಸ್ಥಾಪನೆಯನ್ನು ಆದಿ ಚುಂಚನಗಿರಿ ಮಠದ ಶಿವಮೊಗ್ಗ ಶಾಖೆಯ ಶ್ರೀ ಶ್ರೀ ಪ್ರಸನ್ನನಾಥ್ ಸ್ವಾಮೀಜಿಯವರ ಅಮೃತ ಹಸ್ತದಲ್ಲಿ ನೆರವೇರಿಸಲ್ಪಟ್ಟಿದ್ದು ಈ ಸಮಾರಂಭದ ಅಧ್ಯಕ್ಷತೆಯನ್ನು ಕ್ಷೇತ್ರದ ಶಾಸಕರೂ, ಕರ್ನಾಟಕ ವಿಧಾನಸಭೆಯ ಅಧ್ಯಕ್ಷರೂ ಆದ ಶ್ರೀ ಡಿ.ಬಿ. ಚಂದ್ರೇಗೌಡರು ವಹಿಸಿದ್ದರು. ಮುಖ್ಯ ಅತಿಥಿಯಾಗಿ ಶ್ರೀ ಬಿ.ಟಿ. ಪೆಮ್ಮಯ್ಯ ಉಪ ನಿರ್ದೇಶಕರು ಸಾರ್ವಜನಿಕ ಶಿಕ್ಷಣ ಇಲಾಖೆ ಶಿವಮೊಗ್ಗ ಭಾಗವಹಿಸಿದ್ದರು.

ಕೆ.ಟಿ.ಕೆ. ಕಲ್ಯಾಣ ಮಂದಿರದ ಪಕ್ಕದ ಜಾಗದಲ್ಲಿ ಸುಮಾರು ಎಂಟು ಲಕ್ಷ ರೂ.ಗಳ ಅಂದಾಜಿನಲ್ಲಿ ರಸ-ಋಷಿ ಕುವೆಂಪುರವರ ಹೆಸರಿನಲ್ಲಿ "ಕುವೆಂಪು ಸಮುದಾಯ" ಭವನದ ಶಂಕು ಸ್ಥಾಪನೆಯನ್ನು ತಾ. ೧೬.೧೧.೧೯೯೫ರಂದು ಸಂಘದ ಅಧ್ಯಕ್ಷರಾದ ಶ್ರೀ ಕೆ.ಎಸ್. ರಾಮಪ್ಪಗೌಡರು ನೆರವೇರಿಸಿದರು. ಸುಮಾರು ಐದು ಲಕ್ಷ ರೂಪಾಯಿಗಳ ಅಂದಾಜಿನ ಪ್ರೌಢಶಾಲಾ ಕಟ್ಟಡದ ಶಂಕು ಸ್ಥಾಪನೆಯನ್ನು ಡಾ. ಬಿ.ಎನ್. ರಂಗಪ್ಪನವರ ಅಮೃತಹಸ್ತದಲ್ಲಿ ಇದೇ ದಿನ ನೆರವೇರಿಸಲಾಯ್ತು. ಸಹ್ಯಾದ್ರಿ ಶಾಲೆಯ ಅಭಿವೃದ್ಧಿ ಕಾಮಗಾರಿಗಳಿಗೆ ಶಿವಮೊಗ್ಗದ ಪ್ರತಿಷ್ಠಿತ ಮ್ಯಾಮ್‌ಕೋಸ್ ಸಂಸ್ಥೆ ಸುಮಾರು ೨ ಲಕ್ಷ ರೂಪಾಯಿಗಳ ಆರ್ಥಿಕ ಧನಸಹಾಯ ಮಾಡಿರುತ್ತದೆ.

ಸುಮಾರು ಆರು ಲಕ್ಷ ರೂ.ಗಳ ಅಂದಾಜಿನಲ್ಲಿ ನಿರ್ಮಾಣಗೊಂಡ ಸಹ್ಯಾದ್ರಿ ಆಂಗ್ಲಮಾಧ್ಯಮ ಹಿರಿಯ ಪ್ರಾಥಮಿಕ ಪಾಠಶಾಲಾ ನೂತನ ಕಟ್ಟಡದ ಉದ್ಘಾಟನೆಯನ್ನು ತಾ. ೧೩.೧.೧೯೯೬ರಂದು ಕರ್ನಾಟಕ ಸರ್ಕಾರದ ಶಿಕ್ಷಣ ಸಚಿವರಾಗಿದ್ದ ಶ್ರೀ ಹೆಚ್.ಜಿ. ಗೋವಿಂದೇಗೌಡರು ನೆರವೇರಿಸಿದ್ದರು. ಮುಖ್ಯ ಅತಿಥಿಗಳಾಗಿ ಮಾಜಿ ಶಾಸಕರಾದ ಶ್ರೀ ಡಿ.ಬಿ. ಚಂದೇಗೌಡರು ಹಾಗೂ ಶ್ರೀ ಎಂ. ಚಂದ್ರಶೇಖರಯ್ಯ ಉಪನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ ಇವರು ಭಾಗವಹಿಸಿದ್ದು, ಸಮಾರಂಭದ ಅಧ್ಯಕ್ಷತೆಯನ್ನು ಸಂಘದ ಅಧ್ಯಕ್ಷರಾದ ಶ್ರೀ ಕೆ.ಎಸ್. ರಾಮಪ್ಪಗೌಡರು ವಹಿಸಿದ್ದರು.

ಸಂಘದ ಕನಸಿನ ಕೂಸು ಸಹ್ಯಾದ್ರಿ ಶಾಲೆ ನಮಗೇ ಅರಿವಿಲ್ಲದಂತೆ ಏಳು ವರುಷ ಬೆಳೆದು ಪ್ರೌಢಾವಸ್ಥೆಯಲ್ಲಿ ನಿಂತಿದ್ದು ಮುಂದೇನು ಎನ್ನುವ ಪ್ರಶ್ನೆಗೆ ಪ್ರೌಢಶಾಲೆ ಪ್ರಾರಂಭಿಸಲು ನಿರ್ಣಯಿಸಿ ಆ ದಿಸೆಯಲ್ಲಿ ಅಂದಿನ ಶಿಕ್ಷಣ ಸಚಿವರಾದ ಶ್ರೀ ಹೆಚ್.ಜಿ. ಗೋವಿಂಗೇಗೌಡರ ಸಲಹೆ ಮಾರ್ಗದರ್ಶನ ಪಡೆದು ತಾ. ೨೨.೫.೧೯೯೬ರಂದು ಹಿರಿಯರೂ ಶಿಕ್ಷಣ ಸಂಸ್ಥೆಗಳ ಅಭಿಮಾನಿಗಳೂ ಆದ ಡಾ. ರಂಗಪ್ಪನವರಿಂದ ಜ್ಯೋತಿ ಬೆಳಗಿಸುವುದರ ಮೂಲಕ ಪ್ರಾರಂಭಿಸಲಾಯ್ತು.

೧೯೭೯ರಿಂದ ದೀರ್ಘ ಸೇವೆಯನ್ನು ನೀಡಿ ಸಂಘದ ಅಭಿವೃದ್ಧಿಯ ಹರಿಕಾರರೆಂದು ಹೆಸರು ಮಾಡಿದ ಸಂಘದ ಅಧ್ಯಕ್ಷರಾದ ಶ್ರೀ ಕೆ.ಎಸ್. ರಾಮಪ್ಪಗೌಡರು ೧೯೯೫ರಲ್ಲಿ ಸ್ವಯಂ ನಿವೃತ್ತಿ ಹೊಂದಿ ಅಧ್ಯಕ್ಷ ಸ್ಥಾನವನ್ನು ತೆರವುಗೊಳಿಸಿದ್ದು, ತೆರವಾದ ಈ ಜವಾಬ್ದಾರಿ ಸ್ಥಾನಕ್ಕೆ ಸಂಘದ ಹಿರಿಯ ಅನುಭವಿ ಸದಸ್ಯರಾದ ಶ್ರೀ ಯು.ಎನ್.

ಶ್ರೀನಿವಾಸ್ ಕಡ್ತೂರು ಇವರನ್ನು ತಾ. ೩.೧೨.೧೯೯೬ ರಂದು ಸರ್ವಾನುಮತದಿಂದ ಆರಿಸಲಾಯ್ತು. ಹಾಗೆಯೇ ಈ ಸಂಘದ ಸರ್ವತೋಮುಖ ಅಭಿವೃದ್ಧಿಗೆ ಶ್ರಮಿಸುತ್ತಿರುವ ಹಿರಿಯ ಚೇತನಗಳಾದ ಶ್ರೀ ಡಾ. ಬಿ.ಎನ್. ರಂಗಪ್ಪನವರನ್ನು ಹಾಗೂ ಶ್ರೀ ಕೆ.ಎಸ್. ರಾಮಪ್ಪಗೌಡರನ್ನು ಸಂಘದ ಆಜೀವ ಗೌರವ ಅಧ್ಯಕ್ಷ ಪದವಿ ನೀಡಿ ಗೌರವಿಸುವಂತೆ ಸರ್ವಾನುಮತದಿಂದ ತೀರ್ಮಾನಿಸಲಾಯ್ತು.[೩೦]

ಸುಮಾರು ೮ ಲಕ್ಷ ರೂಪಾಯಿಗಳ ಅಂದಾಜಿನಲ್ಲಿ ನಿರ್ಮಾಣಗೊಂಡ ಸಹ್ಯಾದ್ರಿ ಶಾಲಾ ಕೊಠಡಿಗಳ ಉದ್ಘಾಟನಾ ಸಮಾರಂಭ ತಾ. ೧೩.೧೦.೧೯೯೬ ರಂದು ಶಾಸಕರಾದ ಶ್ರೀ ಆರಗ ಜ್ಞಾನೇಂದ್ರ ಅವರ ಅಧ್ಯಕ್ಷತೆಯಲ್ಲಿ ನಡೆದಿದ್ದು, ನೂತನ ಕೊಠಡಿಗಳನ್ನು ಸಂಘದ ಹಿರಿಯ ಸದಸ್ಯರೂ, ಜಮೀನುದಾರರೂ ಆದ ಶ್ರೀ ಹೆಚ್.ವಿ. ರಾಮಯ್ಯ ತೀರ್ಥಹಳ್ಳಿ ಇವರು ಉದ್ಘಾಟಿಸಿದ್ದು. ಮುಖ್ಯ ಅತಿಥಿಗಳಾದ ಶ್ರೀ ಬಿ.ಎಸ್. ವಿಶ್ವನಾಥನ್, ಶ್ರೀ ಎನ್.ಡಿ. ವೆಂಕಟೇಶ್ ಹಾಗೂ ಕೇಂದ್ರ ಒಕ್ಕಲಿಗರ ಸಂಘದ ಶಿವಮೊಗ್ಗ ಜಿಲ್ಲಾ ಪ್ರತಿನಿಧಿ ಶ್ರೀ ಕೆ.ಸಿ. ದಿನೇಶ್ ಭಾಗವಹಿಸಿದ್ದರು. ಈ ಕಾಮಗಾರಿಗೆ ಬೆಂಗಳೂರು ಕೇಂದ್ರ ಒಕ್ಕಲಿಗರ ಸಂಘ ಹಾಗೂ ಶಿವಮೊಗ್ಗ ಮ್ಯಾಮ್‌ಕೋಸ್‌ನಿಂದ ಆರ್ಥಿಕ ಧನ ಸಹಾಯ ದೊರೆಯುತ್ತಿರುವುದು ಶ್ಲಾಘನೀಯ. ಇದೇ ದಿನ ಅಂದರೆ ತಾ. ೧೩.೧೦.೧೯೯೬ ರಂದು ಸುಮಾರು ಎಂಟು ಲಕ್ಷ ರೂಪಾಯಿಗಳ ಅಂದಾಜು ವೆಚ್ಚದಲ್ಲಿ ಭವ್ಯವಾಗಿ ನಿರ್ಮಾಣಗೊಂಡ ಕುವೆಂಪು ಸಮುದಾಯ ಭವನದ ಉದ್ಘಾಟನೆಯನ್ನು ನಿವೃತ್ತ ನ್ಯಾಯಾಧೀಶರಾದ ಶ್ರೀ ಎನ್.ಡಿ. ವೆಂಕಟೇಶ್‌ರವರ ಅಮೃತಹಸ್ತದಿಂದ ನೆರವೇರಿಸಲಾಯ್ತು.

ತೀರ್ಥಹಳ್ಳಿಯ ಕಟ್ಟೆ ಚನ್ನಕೇಶವ ಬೀದಿಗೆ ಅಭಿಮುಖವಾಗಿ ಸುಮಾರು ಹತ್ತು ಲಕ್ಷ ರೂಪಾಯಿಗಳ ಅಂದಾಜು ವೆಚ್ಚದ ಸಹ್ಯಾದ್ರಿ ಆಂಗ್ಲ ಮಾಧ್ಯಮ ಶಾಲಾ ಸಂಕೀರ್ಣದ ಶಂಕು ಸ್ಥಾಪನೆಯನ್ನು ತಾ. ೧೦.೧೦.೧೯೯೭ರಂದು ಸಂಘದ ಅಧ್ಯಕ್ಷರಾದ ಶ್ರೀ ಕಡ್ತೂರು ಶ್ರೀನಿವಾಸ್‌ರವರು ನೆರವೇರಿಸಿದ್ದು ಈ ಸಂಕೀರ್ಣದ ಉದ್ಘಾಟನೆಯನ್ನು ತಾ. ೧೪.೨.೧೯೯೯ರಂದು ಮಲೆನಾಡು ಅಭಿವೃದ್ಧಿ ಮಂಡಳಿ ಅಧ್ಯಕ್ಷರಾದ ಶ್ರೀಮತಿ ಸ್ವರ್ಣಾಪ್ರಭಾಕರ್‌ರವರ ಅಮೃತ ಹಸ್ತದಿಂದ ನೆರವೇರಿಸಲ್ಪಟ್ಟಿದ್ದು. ಈ ಸಮಾರಂಭದ ಅಧ್ಯಕ್ಷತೆಯನ್ನು ಕ್ಷೇತ್ರದ ಶಾಸಕರಾದ ಶ್ರೀ ಆರಗ ಜ್ಞಾನೇಂದ್ರರವರು ವಹಿಸಿದ್ದರು. ಮುಖ್ಯ ಅತಿಥಿಗಳಾಗಿ ಡಾ.ಶ್ರೀಕಂಠ ಕೂಡಿಗೆ, ಪ್ರಾಧ್ಯಾಪಕರು ಕುವೆಂಪು ವಿಶ್ವವಿದ್ಯಾನಿಲಯ ಶ್ರೀ ಕೆ.ಟಿ. ಕೃಷ್ಣಪ್ಪ ಕೊಳಾವರ, ನಿವೃತ್ತ ತೋಟಗಾರಿಕಾ ನಿರ್ದೇಶಕರು ಹಾಗೂ ಕೇಂದ್ರ ಸಂಘದ ನಿರ್ದೇಶಕ ಶ್ರೀ ಕೆ.ಸಿ. ದಿನೇಶ್ ಭಾಗವಹಿಸಿದ್ದು ಕೇಂದ್ರ ಸಂಘದಿಂದ ಒಂದು ಲಕ್ಷ ರೂಪಾಯಿಗಳ ಆರ್ಥಿಕ ನೆರವು ನೀಡಿದ್ದರು.

ತಾ. ೨.೪.೨೦೦೦ ರಂದು ಸುಮಾರು ೮ ಲಕ್ಷ ರೂಪಾಯಿಗಳ ಅಂದಾಜು ವೆಚ್ಚದಲ್ಲಿ ನಿರ್ಮಿಸಿರುವ ಸಹ್ಯಾದ್ರಿ ಶಾಲಾ ಸಂಕೀರ್ಣದ ವಿಸ್ತೃತ ಕಟ್ಟಡದ ಉದ್ಘಾಟನೆಯನ್ನು ಕರ್ನಾಟಕ ಸರ್ಕಾರದ ಕಾನೂನು ಹಾಗೂ ಸಂಸದೀಯ ವ್ಯವಹಾರಗಳ ಸಚಿವರಾದ ಶ್ರೀ ಡಿ.ಬಿ. ಚಂದ್ರೇಗೌಡರ ಅಮೃತ ಹಸ್ತದಲ್ಲಿ ನೆರವೇರಿಸಲಾಯ್ತು. ಈ ಸಮಾರಂಭದ ಅಧ್ಯಕ್ಷತೆಯನ್ನು ಶಾಸಕ ಶ್ರೀ ಆರಗ ಜ್ಞಾನೇಂದ್ರರವರು ವಹಿಸಿದ್ದರು. ತಾ. ೧.೩.೨೦೦೧ ರಂದು ನಮ್ಮ ಸಂಘದ ಕರಾಳ ದಿನ. ಸಂಘದ ಅಧ್ಯಕ್ಷರಾಗಿ ಸುದೀರ್ಘ ಸೇವೆ ಸಲ್ಲಿಸಿ ಸಂಘದ ಅಭಿವೃದ್ಧಿಯ ಹರಿಕಾರ ಹಿರಿಯ ಮುತ್ಸದ್ಧಿ ಕಡಿದಾಳ್ ರಾಮಪ್ಪಗೌಡರು ನಿಧನರಾಗಿದ್ದು ಅವರ ಪಾರ್ಥೀವ ಶರೀರವನ್ನು ಕೆ.ಟಿ.ಕೆ. ಸಭಾಂಗಣದಲ್ಲಿ

ಸಾರ್ವಜನಿಕರ, ಸಂಘದ ಸದಸ್ಯರ ಅಂತಿಮ ದರ್ಶನಕ್ಕೆ ಇಟ್ಟು ಪೂಜಿಸಿ ಗೌರವಿಸಿ, ಅಂತ್ಯ ಸಂಸ್ಕಾರಕ್ಕೆ ಅವರ ಕುಟುಂಬದ ವರ್ಗದವರಿಗೆ ಒಪ್ಪಿಸಿ ಕೊಟ್ಟು ಅವರ ಆತ್ಮಕ್ಕೆ ಶಾಂತಿಕೋರಲಾಯ್ತು.

ಸಂಘಕ್ಕೆ ತೀರ್ಥಹಳ್ಳಿಯ ಪಟ್ಟಣದ ವ್ಯಾಪ್ತಿಯಲ್ಲಿ ಜಾಗ ಅಥವಾ ನಿವೇಶನ ಕೊಳ್ಳುವ ಬಹುದಿನಗಳ ಕನಸು ಕಳೆದ ವರ್ಷ ೨೦೦೧ರಲ್ಲಿ ನನಸಾಗಿದ್ದು, ಅದನ್ನು ಶತಮಾನೋತ್ಸವದ ನೆನಪಿನಕಾಣಿಕೆ ಎಂದರೂ ತಪ್ಪಾಗಲಾರದು. ತೀರ್ಥಹಳ್ಳಿಯ ಪ್ರತಿಷ್ಠಿತ ತುಂಗಾ ಮಹಾವಿದ್ಯಾಲಯದ ಸಮೀಪ ರಾಷ್ಟ್ರೀಯ ಹೆದ್ದಾರಿಗೆ ಹೊಂದಿಕೊಂಡಿರುವ ತುಡ್ಕಿಯಲ್ಲಿ ಸುಮಾರು ೪ ಎಕರೆ ಜಮೀನನ್ನು ಹಾಗೂ ಒಂದು ನಿವೇಶನವನ್ನು ಹದಿಮೂರು ಲಕ್ಷ ರೂಪಾಯಿಗಳಿಗೆ ಕೊಂಡುಕೊಂಡು ಅದರ ಸುತ್ತ ಕಲ್ಲು ಕಂಬದ ಬೇಲಿ ನಿರ್ಮಿಸಿದ್ದು ಜೊತೆಗೆ ಈ ಸ್ಥಳದಲ್ಲೇ ಸುಮಾರು ಎರಡೂವರೆ (೨½) ಲಕ್ಷ ರೂಪಾಯಿಗಳ ಅಂದಾಜು ವೆಚ್ಚದಲ್ಲಿ ೨೦೦ ಮೀಟರ್ ಟ್ರಾಕ್‌ನ ಕ್ರೀಡಾಂಗಣವನ್ನು ನಿರ್ಮಿಸುತ್ತಿದೆ. ಇದರೊಂದಿಗೆ ಶತಮಾನೋತ್ಸವದ ಸ್ಮರಣಾರ್ಥವಾಗಿ ಸುಮಾರು ಮೂರು ಲಕ್ಷ ರೂಪಾಯಿಗಳ ಕಾರ್ಯವು ಭರದಿಂದ ಸಾಗುತ್ತಿದ್ದು, ಜೊತೆಗೆ ಸಂಘದ ಅಮೃತೋತ್ಸವ ಭವನದ ಮೇಲು ಭಾಗದಲ್ಲಿ ನಮ್ಮ ಶಾಲೆಯ ಮಕ್ಕಳ ಸರ್ವಾಂಗೀಣ ಏಳಿಗೆಗಾಗಿ ಕಲೆ, ನೃತ್ಯ, ಸಂಗೀತ ಕಲಿಕೆಗೆ ಅನುಕೂಲವಾಗುವಂತಹ ಸುಮಾರು ಏಳು ಲಕ್ಷ ರೂಪಾಯಿಗಳ ಸುಸಜ್ಜಿತ "ಶತಮಾನೋತ್ಸವ ಸಭಾಂಗಣ" ನಿರ್ಮಾಣ ಮಾಡಿ ಜನಾಂಗಕ್ಕೆ ಸಮರ್ಪಿಸುತ್ತಿದ್ದೇವೆ. ಹಾಗೆಯೇ ಸಂಘದ ಚರಿತ್ರೆಯನ್ನು ದಾಖಲಿಸುವ ಉದ್ದೇಶದಿಂದ ಹಲವು ಮಹತ್ತರ ವಿಷಯಗಳು - ವ್ಯಕ್ತಿಗಳು ಅವರ ಕಾರ್ಯಕ್ರಮ ಸಂಘಟನೆ, ಅಭಿವೃದ್ಧಿಯ ವಿಚಾರಗಳನ್ನು ಇಲ್ಲಿ ಪ್ರಸ್ತಾಪಿಸಲಾಗಿದೆ.

**೫.೪. ಸಂಘ ಸ್ಥಾಪನೆಯಿಂದ ಪುನಶ್ಚೇತನದವರೆಗೆ ಸೇವೆ ಸಲ್ಲಿಸಿದ ಮಹನೀಯರು:- ೧೯೦೧-೧೯೭೮**

**ಸ್ಥಾಪಕ ಗಣ್ಯರು**

ಶ್ರೀ ದೇವಂಗಿ ರಾಮಣ್ಣ ಗೌಡರು

ಶ್ರೀ ಮಳವಾಡಿ ಎಂ.ಆರ್. ಗಿರಿಯಪ್ಪಗೌಡರು

ಶ್ರೀ ಅಲಿಗೆ ಗಣಪಯ್ಯ ನಾಯಕರು

ಶ್ರೀ ಚನ್ನಪ್ಪಗೌಡರು

ಶ್ರೀ ಶೇಖ್ದಾರ್ ತಿಮ್ಮಪ್ಪಗೌಡರು

ಶ್ರೀ ಜಮೇದಾರ್ ತಿಮ್ಮಪ್ಪಗೌಡರು

ಶ್ರೀ ಟಿ. ಸಿದ್ದಪ್ಪಗೌಡರು

**ಪದಾಧಿಕಾರಿಗಳಾಗಿ ಸೇವೆ ಸಲ್ಲಿಸಿದ ಮಹನೀಯರು**

ಶ್ರೀ ನಾಲೂರು ಎಂ.ಜಿ. ಶಂಕರಪ್ಪಗೌಡರು

ಶ್ರೀ ಹೊಸಮನೆ ಹೆಚ್.ಎಸ್. ಮಂಜಪ್ಪನವರು

ಶ್ರೀ ಹಿರೇತೋಟ ಕೆ.ಟಿ. ಗುಪಪ್ಪಗೌಡರು

ಶ್ರೀ ದೇವಂಗಿ ಡಿ.ಎನ್. ಹಿರಿಯಣ್ಣಗೌಡರು

ಶ್ರೀ ದೇವಂಗಿ ಡಿ.ಆರ್. ವೆಂಕ್ಕಯ್ಯ ಗೌಡರು

ಶ್ರೀ ಅರಮನೆಕೇರಿ ಎ.ಹೆಚ್, ಸಿದ್ದಪ್ಪಗೌಡರು

ಶ್ರೀ ತುಡ್ಕಿ ರಾಮಣ್ಣಗೌಡರು

ಶ್ರೀ ಕುಪ್ಪಳ್ಳಿ ಕೆ.ಆರ್. ವೆಂಕಟಯ್ಯನವರು

ಶ್ರೀ ದೇವಂಗಿ ಡಿ.ಆರ್. ಮಾನಪ್ಪನವರು

ಶ್ರೀ ಜಿ.ಎಂ. ದುಗ್ಗಪ್ಪ ಹೆಗ್ಗಡೆಯವರು, ಗುಡ್ಡೇಕೇರಿ

ಶ್ರೀ ಹೆಚ್.ವಿ. ರಾಮಯ್ಯನವರು, ತೀರ್ಥಹಳ್ಳಿ

ಶ್ರೀ ಶೀಕೆ ಹರಿಯಪ್ಪಗೌಡರು

ಶ್ರೀ ಕುಡು ಮಲ್ಲಿಗೆ ಕೆ. ದುಗ್ಗಪ್ಪಗೌಡರು

ಶ್ರೀ ನಾಲೂರು ಕೆ.ಟಿ. ದೇವಪ್ಪಗೌಡರು

ಶ್ರೀ ಮೂಡುವಳ್ಳಿ ಟಿ. ಅಣ್ಣಯ್ಯ ಹೆಗ್ಗಡೆ

ಶ್ರೀ ಪಿ.ಎಂ. ಶ್ರೀನಿವಾಸ್, ಪಟಮಕ್ಕಿ

ಶ್ರೀ ಡಾ. ಬಿ.ಎನ್. ರಂಗಪ್ಪನವರು

ಶ್ರೀ ಹೆದ್ದೂರು ಹೆಚ್.ಹೆಚ್. ಮಂಜಪ್ಪಗೌಡರು

ಶ್ರೀ ಕೆ.ಟಿ. ಕೃಷ್ಣಪ್ಪನವರು, ಕೊಳಾವರ

ಶ್ರೀ ಎನ್. ಕಿಟ್ಟಪ್ಪನವರು, ತೀರ್ಥಹಳ್ಳಿ

**ಕಾರ್ಯಕಾರಿ ಸಮಿತಿ ಸದಸ್ಯರಾಗಿ ಸೇವೆ ಸಲ್ಲಿಸಿದವರು**

೧. ನಾಡ್ತಿ ಪ. ದುಗ್ಗಣ್ಣಗೌಡರು

೨. ಹಲಸಿನಹಳ್ಳಿ ಪ. ಗೋವಿಂದಣ್ಣಗೌಡರು

೩. ಕುರುವಳ್ಳಿ ಪ. ಸಿದ್ಧಪ್ಪಗೌಡರು

೪. ಮಾದಾಪುರದ ಶಾಮಣ್ಣಗೌಡರು

೫. ಹಾರೋಗದ್ದೆ ಶಂಕರಪ್ಪ ನಾಯ್ಕರು

೬. ಕೊಳಾವರದ ತಿಮ್ಮಣ್ಣಗೌಡರು

೭. ಬಸರವಳ್ಳಿ ಸುಬ್ಬಯ್ಯಗೌಡರು

೮. ಅಗಳಬಾಗಿಲು ಗಂಗಪ್ಪಗೌಡರು

೯. ಕಿಮ್ಮನೆ ಮಂಜಪ್ಪಗೌಡರು

೧೦. ಹಾರೋಗೊಳಿಗೆ ಪ. ಧರ್ಮಣ್ಣಗೌಡರು

೧೧. ಎಂ.ಆರ್. ಧರ್ಮಣ್ಣಗೌಡ, ಮೇಗರವಳ್ಳಿ

೧೨. ಎಸ್. ಗೋಪಾಲಗೌಡ, ಶಾಂತವೇರಿ

೧೩. ಕೆ.ಎಸ್. ಶ್ರೀನಿವಾಸಮೂರ್ತಿ, ಕೋಡ್ಲು

೧೪. ವೈ.ಕೆ. ಧರ್ಮಯ್ಯ, ಕೆರೆಕೊಪ್ಪ

೧೫. ಡಿ.ಟಿ. ಚಂದ್ರಶೇಖರ್, ದೇವಂಗಿ

೧೬. ಐ.ಎಸ್. ರಾಮಣ್ಣ, ಇಂಗ್ಲಾದಿ

೧೭. ಎ.ಹೆಚ್. ರಾಮಣ್ಣ, ಅರಮನೆಕೇರಿ

೧೮. ಹಾಲಿಗೆ ಗುಂಡಪ್ಪಗೌಡ

೧೯. ಕೆ.ಟಿ. ಗುಂಡಪ್ಪಗೌಡ, ಕಿಮ್ಮನೆ

೨೦. ಪಿ.ಎಂ. ವಿಜಯದೇವ್, ಪಟಮಕ್ಕಿ

೨೧. ಕೆ.ಎಸ್. ರಾಮಪ್ಪಗೌಡ, ಕಡಿದಾಳ್

೨೨. ಮತ್ತಿಗಾರ್ ವೆಂಕಟಪ್ಪಗೌಡ

೨೩. ವೈ.ಎಸ್. ಪುಟ್ಟಣ್ಣ, ತ್ಯಾನಂದೂರು

೨೪. ತಿಮ್ಮಪ್ಪ ಹೆಗ್ಗಡೆ, ಹೆದ್ದೂರು

೨೫. ವೆಂಕಪ್ಪ ಹೆಗ್ಗಡೆ, ಗುಡ್ಡೆಕೇರಿ

೨೬. ವೆಂಕಟಪ್ಪ ಹೆಗ್ಗಡೆ, ಮೇಗರವಳ್ಳಿ

೨೭. ಬಿ.ಎನ್. ಶಂಕರಪ್ಪ, ತೀರ್ಥಹಳ್ಳಿ

೨೮. ಕೆ.ಟಿ. ಶಾಂತಪ್ಪಗೌಡ, ಶಿವಮೊಗ್ಗ

೨೯. ಎನ್.ಪಿ. ರಾಮಪ್ಪ, ನಾಡಗಂಟಿ

೩೦. ಎಂ.ಜಿ. ಚಿನ್ನಪ್ಪಗೌಡ, ಶಿವಮೊಗ್ಗ

೩೧. ಎಂ.ಜಿ. ಚಿನ್ನಪ್ಪಗೌಡ, ನಾಲೂರು

೩೨. ಗಂಗಯ್ಯಗೌಡ, ಹುಲ್ಲತ್ತಿ ಕೋಣಂದೂರು

೩೩. ಬಿ.ಎನ್. ಕೃಷ್ಣಮೂರ್ತಿ, ತೀರ್ಥಹಳ್ಳಿ

೩೪. ಕೆ.ಬಿ. ತಿಮ್ಮಪ್ಪಗೌಡ, ಗಬಡಿ

೩೫. ಬಿ.ಹೆಚ್. ಸುಬ್ಬಯ್ಯಗೌಡ, ಬಸರವಳ್ಳಿ

೩೬. ಕೆ.ಎನ್. ಬಾಲರಾಜ್, ಕೊಳವಳ್ಳಿ

೩೭. ಬಿ.ಟಿ. ಶಂಕರಪ್ಪ ಹೆಗ್ಗಡೆ, ಬಾವಿಕೇರಿ

೩೮. ಕೆ.ಟಿ. ರಾಮಸ್ವಾಮಿ, ಕೊಳಾವರ

೩೯. ಹೆಚ್.ವಿ. ಕೃಷ್ಣಮೂರ್ತಿ, ತೀರ್ಥಹಳ್ಳಿ

೪೦. ಹೆಚ್.ಸಿ. ಶ್ರೀನಿವಾಸ್, ಹಲಸವಾಳ

೪೧. ಕೆ.ಟಿ. ವೆಂಕಟಯ್ಯ, ಕೊಳವಾರ

೪೨. ನಾಗರಾಜ್, ಮೈಸೂರು

೪೩. ಟಿ.ಆರ್. ಜಗದೀಶ್, ತುಡ್ಕಿ

೪೪. ಯು.ಎಸ್. ಶ್ರೀನಿವಾಸ್, ಕಡ್ತೂರು

೪೫. ಉಮೇಶಗೌಡ, ಏಳುಮನೆ

೪೬. ಕೆ.ಎಂ. ಗೋಪಾಲಕೃಷ್ಣ, ಕಿಮ್ಮನೆ

ವಾರ್ಡನ್ ಆಗಿ ಕಾರ್ಯನಿರ್ವಹಿಸಿದವರು

ಶ್ರೀ ಲಕ್ಷ್ಮಿ ನಾರಾಯಣ ಪೈ

ಶ್ರೀ ಮೂಪರಾಯ ಚೆಟ್ಟಿ

ಶ್ರೀ ಕೆ.ವಿ. ಕುಂದಯ್ಯಗೌಡ

ಶ್ರೀ ಎಲ್.ಸಿ. ದುಗ್ಗಪ್ಪ ಅಶೋಕ್

ಶ್ರೀ ಕೆ.ಎ. ಗೋಪಾಲ್

ಶ್ರೀ ಎ. ಕೃಷ್ಣಯ್ಯ ಶೆಟ್ಟಿ

ಶ್ರೀ ಎ.ಎಸ್. ಶಾಂತಪ್ಪ

ಶ್ರೀ ಎ. ಶಂಕರಪ್ಪ

ಶ್ರೀ ಹೆಚ್. ಸುಬ್ಬಯ್ಯಗೌಡ

ಶ್ರೀ ಕೆ.ಎಸ್. ನಾಗಪ್ಪಗೌಡ

ಶ್ರೀ ಟಿ.ಆರ್. ನಾರಾಯಣಮೂರ್ತಿ

ವಿದ್ಯಾರ್ಥಿ ನಿಲಯದ ಅಡುಗೆಯವರಾಗಿ ಸೇವೆ ಸಲ್ಲಿಸಿದವರು

ಶ್ರೀ ವೆಂಕಟಯ್ಯ

ಶ್ರೀ ಹೂವಣ್ಣ

ಶ್ರೀ ಲಕ್ಷ್ಮಣ

ಶ್ರೀ ದೇವಪ್ಪ

ಶ್ರೀ ತಿಮ್ಮಪ್ಪ

**ಪುನಶ್ಚೇತನದ ನಂತರ (೧೯೭೯-೨೦೦೨) ಸಂಘದ ಪದಾಧಿಕಾರಿಗಳಾಗಿ ಸೇವೆ ಸಲ್ಲಿಸಿದವರು**

**ಅಧ್ಯಕ್ಷರು**

ಡಾ. ಬಿ.ಎನ್. ರಂಗಪ್ಪನವರು, ೧೯೫೮ ರಿಂದ ೧೯೭೯

ಶ್ರೀ ಕೆ.ಎಸ್. ರಾಮಪ್ಪಗೌಡ, ಕಡಿದಾಳ್ ೧೯೭೯ ರಿಂದ ೧೯೯೫

ಶ್ರೀ ಯು.ಎಸ್. ಶ್ರೀನಿವಾಸ್, ಕಡ್ತೂರು ೧೯೯೫ ರಿಂದ ೨೦೦೨

ಶ್ರೀ ಎಂ. ವೆಂಕಟೇಗೌಡ (ಮುಂದುವರೆದಿದ್ದಾರೆ...)

**ಉಪಾಧ್ಯಕ್ಷರು**

ಶ್ರೀ ಹೆಚ್.ಆರ್. ಪರಮೇಶ್ವರಿ, ಮೇಗರವಳ್ಳಿ

ಶ್ರೀ ಯು.ಎಸ್. ಶ್ರೀನಿವಾಸ್, ಕಡ್ತೂರು

ಶ್ರೀ ಹೆಚ್.ಹೆಚ್. ಮಂಜಪ್ಪಗೌಡ, ಹೆದ್ದೂರು

ಶ್ರೀಮತಿ ಸರೋಜನಿ ಗಿರಿರಾಜ್, ಕೋಣಂದೂರು

**ಪ್ರಧಾನ ಕಾರ್ಯದರ್ಶಿಗಳು**

ಶ್ರೀ ಎನ್. ಕಿಟ್ಟಪ್ಪಗೌಡ, ತೀರ್ಥಹಳ್ಳಿ

ಶ್ರೀ ಕೌಲಾನಿ ಧರ್ಮಯ್ಯ, ತೀರ್ಥಹಳ್ಳಿ

ಶ್ರೀ ಕೆ.ಎ. ಮಂಜಪ್ಪ ಹೆಗ್ಡೆ, ಮೇಗರವಳ್ಳಿ

ಶ್ರೀ ಹೆಚ್.ಎಂ. ಸತೀಶ, ಹೊಸಮನೆ

**ಸಹ ಕಾರ್ಯದರ್ಶಿಗಳು**

ಶ್ರೀ ಕೌಲಾನಿ ಧರ್ಮಯ್ಯ, ತೀರ್ಥಹಳ್ಳಿ

ಶ್ರೀ ಇ.ಆರ್. ವಾಸುದೇವಮೂರ್ತಿ, ಘಂಟೆಹಕ್ಕಲು

ಶ್ರೀ ಹೆಬ್ಬಲಿಗೆ ಕೃಷ್ಣಮೂರ್ತಿ

ಶ್ರೀ ಕೊಡಸಗೊಳ್ಳಿ ಶಾಮಣ್ಣ

ಶ್ರೀ ಹೆಚ್.ಎಂ. ವಿಶ್ವನಾಥ, ಹೊಳೆಕೊಪ್ಪ

**ಖಜಾಂಚಿಗಳು**

ಡಾ. ಬಿ.ಎನ್. ರಂಗಪ್ಪನವರು, ತೀರ್ಥಹಳ್ಳಿ

ಶ್ರೀ ಟಿ.ಆರ್. ಅರುಣಾಚಲ, ತೀರ್ಥಹಳ್ಳಿ

ಶ್ರೀ ಕಿಮ್ಮನೆ ಕೃಷ್ಣಮೂರ್ತಿ, ತೀರ್ಥಹಳ್ಳಿ

**ಸಂಘದ ಪುನಶ್ಚೇತನದ ನಂತರ (೧೯೭೯-೨೦೦೨) ನಿರ್ದೇಶಕರಾಗಿ ಸೇವೆ ಸಲ್ಲಿಸಿದ ಗಣ್ಯರು**

೧. ಡಾ. ಬಿ.ಎನ್. ರಂಗಪ್ಪನವರು, ತೀರ್ಥಹಳ್ಳಿ

೨. ಶ್ರೀ ಕೆ.ಎಸ್. ರಾಮಪ್ಪಗೌಡ, ಕಡಿದಾಳ್

೩. ಶ್ರೀ ಯು.ಎಸ್. ಶ್ರೀನಿವಾಸ್, ಕಡ್ತೂರು

೪. ಶ್ರೀ ಹೆಚ್.ಕೆ. ನರಸಿಂಹ ಗೌಡ, ಹಳಗ

೫. ಶ್ರೀ ಎನ್. ಕಿಟ್ಟಪ್ಪಗೌಡ, ತೀರ್ಥಹಳ್ಳಿ

೬. ಶ್ರೀ ಹೆಚ್.ಆರ್. ಪರಮೇಶ್ವರ್ ಮೇಗರವಳ್ಳಿ

೭. ಶ್ರೀ ಕೌಲಾನಿ ಧರ್ಮಯ್ಯ, ತೀರ್ಥಹಳ್ಳಿ

೮. ಶ್ರೀ ಕೊಡಸಗೊಳ್ಳಿ ಶಾಮಣ್ಣ, ಕೊಡಸಗೊಳ್ಳಿ

೯. ಶ್ರೀ ಕೆ.ಎಸ್. ನಾಗಪ್ಪಗೌಡ, ಕೋಣಂದೂರು

೧೦. ಶ್ರೀ ಪಿ.ವಿ. ಮಹಾಬಲೇಶ್, ಪಟಮಕ್ಕಿ

೧೧. ಶ್ರೀ ಕೆ.ಎಂ. ಶ್ರೀನಿವಾಸ್, ಕಾಳಮ್ಮನಗುಡಿ

೧೨. ಶ್ರೀ ಎಸ್.ಕೆ. ದಿವಾಕರ, ಸರುವಿನಕೊಪ್ಪ

೧೩. ಶ್ರೀ ಹೆಚ್. ಕೃಷ್ಣಮೂರ್ತಿ, ಹೆಬ್ಬಲಿಗೆ

೧೪. ಶ್ರೀ ಯು.ಎಸ್. ಮಂಜುನಾಥ ಉಬ್ಬೂರು

೧೫. ಶ್ರೀ ಹೆಚ್.ಎಂ. ಕೃಷ್ಣಪ್ಪಗೌಡ, ಹೊಸಕೊಪ್ಪ

೧೬. ಶ್ರೀ ಎಂ.ಟಿ. ರಂಗಪ್ಪಗೌಡ, ಮಲ್ಲೆಸರ

೧೭. ಶ್ರೀ ಸಿ.ಜಿ. ಕೃಷ್ಣಪ್ಪಗೌಡ, ಚಿಕ್ಕಳೂರು

೧೮. ಶ್ರೀ ಕೆ.ಟಿ. ನಾರಾಯಣಮೂರ್ತಿ, ಕೊಳಾವರ

೧೯. ಶ್ರೀ ಖಂಡಕ ಕೃಷ್ಣಮೂರ್ತಿ, ಖಂಡಕ

೨೦. ಶ್ರೀ ಟಿ.ಎಸ್. ಕೃಷ್ಣಮೂರ್ತಿ, ಚಳುಮಂಡೆ

೨೧. ಶ್ರೀ ಎನ್.ಡಿ. ಶ್ರೀನಿವಾಸ, ನಂಬಳ

೨೨. ಶ್ರೀ ಕೆ.ಟಿ. ವೆಂಕಟಯ್ಯ, ಕೊಳಾವರ

೨೩. ಶ್ರೀ ಹೆಚ್.ವಿ. ರಾಮಯ್ಯ, ತೀರ್ಥಹಳ್ಳಿ

೨೪. ಶ್ರೀ ಡಿ.ವಿ. ರಾಮಮೋಹನ್, ಇಂಗ್ಲಾದಿ

೨೫. ಶ್ರೀ ಬಿ.ಎಸ್. ಕೃಷ್ಣಮೂರ್ತಿ, ತೀರ್ಥಹಳ್ಳಿ

೨೬. ಶ್ರೀ ಕೆ.ಆರ್. ಉಮೇಶ, ಹಿರೇತೋಟ

೨೭. ಶ್ರೀ ಬಿಳಿಯಪ್ಪಗೌಡರು, ಅಕ್ಕಾಪುರ

೨೮. ಶ್ರೀ ಜಿ.ವಿ. ಜಯರಾಂ ಹೆಗ್ಡೆ, ಗುಡ್ಡೇಕೇರಿ

೨೯. ಶ್ರೀ ಎ. ರಾಮಪ್ಪ ಹೆಗ್ಡೆ, ಆನಂದೂರು

೩೦. ಶ್ರೀ ಹೊ.ನಾ. ಕೃಷ್ಣಮೂರ್ತಿ, ಹೊಸಕೇರಿ

೩೧. ಶ್ರೀ ಎಂ.ಟಿ. ಅಣ್ಣಯ್ಯ ಹೆಗ್ಡೆ, ಮೂಡುವಳ್ಳಿ

೩೨. ಶ್ರೀ ಎ. ಹಿರಿಯಣ್ಣಗೌಡರ, ಅಳಗಬಾಗಿಲು

೩೩. ಶ್ರೀ ಟಿ. ಶಂಕರಪ್ಪ, ಟೆಂಕಬೈಲು

೩೪. ಶ್ರೀ ಹೆಚ್.ಡಿ. ಸೋಮಶೇಖರ್, ಹೊನ್ನಕೊಡಿಗೆ

೩೫. ಶ್ರೀ ಇ.ಆರ್. ವಾಸುದೇವಮೂರ್ತಿ, ಘಂಟೆಹಕ್ಕಲು

೩೬. ಸ್ರೀ ಜಗದೀಶ ಕಂಠಿ, ಕೋಣಂದೂರು

೩೭. ಶ್ರೀ ಎನ್.ಡಿ. ಈಶ್ವರ್, ಸಾಲೂರು

೩೮. ಶ್ರೀ ನಾಕುಂಜಿ ಸುಧಾಕರ್. ನಾಕುಂಜಿ

೩೯. ಶ್ರೀ ಹೆಚ್.ಜಿ. ಗಿರಿರಾಜ್, ಕೋಣಂದೂರು

೪೦. ಶ್ರೀ ಟಿ.ಆರ್. ವೆಂಕಟರಮಣ ಗೌಡ, ತೂದೂರು

೪೧. ಶ್ರೀ ಹೆಚ್.ಹೆಚ್. ಮಂಜಪ್ಪಗೌಡರು, ಹೆದ್ದೂರು

೪೨. ಶ್ರೀ ಕೆ.ಎನ್. ಪುಟ್ಟಯ್ಯ, ಕೊಳಗಿ

೪೩. ಶ್ರೀ ಕಿಮ್ಮನೆ ನರಸಿಂಹಯ್ಯ, ತೀರ್ಥಹಳ್ಳಿ

೪೪. ಶ್ರೀ ಕೆ.ಎನ್. ಪದ್ಮಯ್ಯಗೌಡ, ತೀರ್ಥಹಳ್ಳಿ

೪೫. ಶ್ರೀ ಟಿ.ಎಸ್. ರೇಮಯ್ಯಗೌಡ, ಕುರುವಳ್ಳಿ

೪೬. ಶ್ರೀ ಹೆಚ್.ಎನ್. ಗಿಡ್ಡಪ್ಪಗೌಡ, ಕೇಶವಾಪುರ

೪೭. ಶ್ರೀ ಎ.ಯು. ನಾಗರಾಜ್, ಎಳುಮನೆ

೪೮. ಶ್ರೀ ಜಿ.ಆರ್. ಅರುಣಾಚಲ, ತೀರ್ಥಹಳ್ಳಿ

೪೯. ಶ್ರೀ ಕೆ.ಪಿ. ಮಂಜುನಾಥ್ ಕಡೇಮನೆ

೫೦. ಶ್ರೀ ಕೆ.ಪಿ. ವೆಂಕಟೇಶ್, ತೀರ್ಥಹಳ್ಳಿ

೫೧. ಶ್ರೀ ಕೆ.ಟಿ. ನಟರಾಜ್, ಕುಳುಂಡೆ

೫೨. ಶ್ರೀ ಇ.ಟಿ. ಬೊಮ್ಮಯ್ಯಗೌಡ, ಈಚಲು ಬೈಲು

೫೩. ಶ್ರೀ ಡಿ.ಕೆ. ಮಂಜುನಾಥ, ಕೆಸ್ತೂರು

೫೪. ಶ್ರೀ ಡಿ.ಎಂ. ಮನುದೇವ್, ದೇವಂಗಿ

೫೫. ಶ್ರೀ ಕೆ.ಎ. ಮಂಜಪ್ಪ ಹೆಗಡೆ, ಮೇಗರವಳ್ಳಿ

೫೬. ಶ್ರೀ ಹೆಚ್. ಕುಮಾರೇಗೌಡ ಹೊರಮೇಬ್ಬೈಲು

೫೭. ಶ್ರೀ ಬಿ. ಎನ್. ದೇವದಾಸ್, ಬೊಮ್ಮನಹಳ್ಳಿ

೫೮. ಶ್ರೀ ಕೆ.ಎಂ. ಜ್ಞಾನೇಂದ್ರಗೌಡ, ಕನಸವಳ್ಳಿ

೫೯. ಶ್ರೀ ವೀರಪ್ಪಗೌಡ, ಕಲ್ಗದ್ದೆ ಕೋಣಂದೂರು

೬೦. ಶ್ರೀ ಹೆಚ್.ಎಂ. ಚಿನ್ನಯ್ಯಗೌಡ, ಹುಗಳವಳ್ಳಿ

೬೧. ಶ್ರೀಮತಿ ತಾರಾ ನಾಗೇಶ, ದೇವಂಗಿ

೬೨. ಶ್ರೀ ಬಿ.ಆರ್. ರಾಜು, ಅರಳಸುರಳಿ

೬೩. ಶ್ರೀ ಎಂ.ವಿ. ಧರ್ಮಣ್ಣ, ಮಂಗಳ

೬೪. ಶ್ರೀ ಕೆ.ಟಿ. ಹಾಲಪ್ಪ, ಕಟ್ಟಗದ್ದೆ

೬೫. ಶ್ರೀ ಬಿ.ಎಸ್. ಪೀತಾಂಬರಗೌಡ, ತೀರ್ಥಹಳ್ಳಿ

೬೬. ಶ್ರೀ ಕೆ.ಎಂ. ಕೃಷ್ಣಮೂರ್ತಿ, ಕಿಮ್ಮನೆ

೬೭. ಶ್ರೀ ಕೆ. ರಂಗಪ್ಪಗೌಡ, ಕನಸವಳ್ಳಿ

೬೮. ಶ್ರೀ ಟಿ.ಆರ್. ಡಾಕಪ್ಪಗೌಡ, ಮೂಡ್ನು

೬೯. ಶ್ರೀ ಸಿ.ಬಿ. ಲೇಕಪ್ಪಗೌಡ, ಚಂದವಳ್ಳಿ

೭೦. ಶ್ರೀ ಕೆ.ಎಂ. ಶಿವಪ್ಪ, ಕರಡಿಕೋಡು

೭೧. ಶ್ರೀ ಕೆ.ಸಿ. ಮಂಜುನಾಥ, ಕುಡುತನಹಳ್ಳಿ

೭೨. ಶ್ರೀ ಜಿ.ಕೆ. ಜಯಪ್ರಕಾಶ್, ತನಿಕಲ್ಲ

೭೩. ಶ್ರೀ ಕೆ.ಸಿ. ರಾಮಚಂದ್ರ, ಬೆಟ್ಟಮಕ್ಕಿ

೭೪, ಶ್ರೀ ಅಂಬಳಿಕೆ ಶಂಕ್ರಪ್ಪ, ತೀರ್ಥಹಳ್ಳಿ

೭೫. ಶ್ರೀ ಹಾಲಿಗೆ ನಾಗರಾಜ್, ತೀರ್ಥಹಳ್ಳಿ

೭೬. ಶ್ರೀ ಕೆ.ಎಸ್. ಸತೀಶ್, ಕೊಡಸಗೊಳ್ಳಿ

೭೭. ಶ್ರೀ ಹೆಚ್.ಎಂ. ಸತೀಶ್, ಹೊಸಮನೆ

೭೮. ಶ್ರೀ ವೈ.ಕೆ. ಧರ್ಮಯ್ಯ, ಕೆರೆಕೊಪ್ಪ

೭೯. ಶ್ರೀ ಎಸ್. ನಾಗಪ್ಪಗೌಡ, ಶೇಡಗಾರು

೮೦. ಶ್ರೀ ಆರ್.ಬಿ. ವಿಜಯ, ರಾಮನಸರ

೮೧. ಶ್ರೀ ಕೆ.ಎಸ್. ಸುರೇಶ್, ಹೊಸಕೇರಿ

೮೨. ಶ್ರೀ ಬಿ.ಬಿ. ಮಂಜುನಾಥ, ಬಾವಿಕೈಸರು

೮೩. ಶ್ರೀ ಬಿ.ಎಂ. ಶ್ರೀನಿವಾಸಮೂರ್ತಿ, ತೀರ್ಥಹಳ್ಳಿ

೮೪. ಶ್ರೀ ಎನ್.ಡಿ. ಪ್ರಭಾಕರ್, ನಾಲೂರು

೮೫. ಶ್ರೀ ಕೆ.ಎಲ್. ರಾಮಯ್ಯ, ಕುಡುಮಲ್ಲಿಗೆ

೮೬. ಶ್ರೀಮತಿ ಸರೋಜಿನಿ ಗಿರಿರಾಜ್, ಕೋಣಂದೂರು

೮೭. ಶ್ರೀ ಹೆಚ್.ಎಂ. ವಿಶ್ವನಾಥ್ ಹೊಳೆಕೊಪ್ಪ

೮೮. ಶ್ರೀ ಎಂ.ಆರ್. ಭೋಜರಾಜ್, ಮಂಗಳ

೮೯. ಶ್ರೀ ಜೆ. ಗಿರಿಯಪ್ಪಗೌಡ, ಜಾಗಟ್ಟಾಗರು

೯೦. ಶ್ರೀ ಕೆ.ಟಿ. ನಟರಾಜ್, ಹೆದ್ದೂರು

೯೧. ಶ್ರೀ ಎಂ.ಡಿ. ಅಶೋಕ್, ಮೂಡ್ಲು

೯೨. ಶ್ರೀ ಡಾ. ಎಂ.ಸಿ. ಅನಿಲ್, ತೀರ್ಥಹಳ್ಳಿ

೯೩. ಶ್ರೀ ಬಿ.ಡಿ. ಪ್ರಭಾಕರ್, ಬಾಳೆಹಳ್ಳಿ

೯೪. ಶ್ರೀಮತಿ ಉಷಾ ಸುಬ್ಬಣ್ಣ ಬೆಕ್ಕನೂರು

೯೫. ಶ್ರೀಮತಿ ಧನಲಕ್ಷ್ಮಿ ಶಿವಪ್ಪ, ತೀರ್ಥಹಳ್ಳಿ

೯೬. ಶ್ರೀಮತಿ ಜಮುನಾ ಕೃಷ್ಣಮೂರ್ತಿ, ಕಡ್ತೂರು

೯೭. ಶ್ರೀಮತಿ ಲತಾ ವಿಷ್ಣುಮೂರ್ತಿ, ಅಂದಬೈಲು

೯೮. ಶ್ರಿಮತಿ ಶೈಲಾ ಪ್ರಭಾಕರ್, ತೂದೂರು

೯೯. ಶ್ರೀ ಸಿ.ಎನ್. ಮಂಜುನಾಥ್, ಬೆಂಗಳೂರು

೧೦೦. ಶ್ರೀ ಕೆ.ಸಿ. ದಿನೇಶ್, ಕಡ್ತೂರು

೧೦೧. ಶ್ರೀ ಎನ್. ಶಿವರಾಂ, ಶಿವಮೊಗ್ಗ

**ವಾರ್ಡನ್ / ಮ್ಯಾನೇಜರ್ ಆಗಿ ಸೇವೆ ಸಲ್ಲಿಸಿದವರು**

ಶ್ರೀ ಕೆ.ಎಸ್. ಜಗದೀಶ್, ಕೊಡಸಗೊಳ್ಳಿ

ಶ್ರೀ ಎಸ್.ಆರ್. ರವೀಂದ್ರ, ಸರುವಿನಕೊಪ್ಪ

ಶ್ರೀ ಎಸ್.ಡಿ. ಲಿಂಗಪ್ಪಗೌಡರು, ತೀರ್ಥಹಳ್ಳಿ

ನಿಲಯದ ಅಡುಗೆಯವರಾಗಿ ಕಾರ್ಯನಿರ್ವಹಿಸಿದವರು

ಶ್ರೀ ಗುಂಡಣ್ಣ, ಕೊಡುಗೊಳ್ಳಿ

ಶ್ರೀ ಭಾಸ್ಕರ, ಕೊಳವಳ್ಳಿ

ಶ್ರೀ ವಾಸಪ್ಪ, ಹಿಲಿಕೆರ

ಶ್ರೀ ಅನಂತಯ್ಯನವರು

ಉಲ್ಲೇಖಗಳು


೦೧. ಎಡೆಗಳು ಹೇಳುವ ಕನ್ನಡ ಕತೆ - ಶಂ.ಭಾ. ಜೋಶಿ

೦೨. ಮಲೆನಾಡು ಒಕ್ಕಲಿಗರು - ಜಾನಪದೀಯ ಅಧ್ಯಯನ - ವೈ.ಸಿ. ಭಾನುಮತಿ.

೦೩. ವಿಚಾರ ಸಾಹಿತ್ಯ - ೧೯೯೨ ಮೀಸಲಾತಿ ಒಂದು ಸಮೀಕ್ಷೆ - ಪುಟ ೧೭೯

೦೪. ಮಲೆನಾಡು ಜಾನಪದ ಸಂಪ್ರದಾಯಗಳು - ಅಂಬಳಿಕೆ ಹಿರಿಯಣ್ಣ - ಪುಟ ೭

೦೫. ಅದೇ ಪುಟ ೯

೦೬. ಅದೇ ಪುಟ ೯

೦೭. ಶತಮಾನದ ಸಂಶೋಧನೆ - ನಾಮಧಾರಿ ಲಿಂಗಾಯಿತರು - ಕೆ.ಜಿ. ನಾಗರಾಜಪ್ಪ, ಪುಟ ೨೫೪

೦೮. ರಾಜಾವಳಿ ಕಥಾಸಾರ-ನಮಮಾಧಿಕರಣಂ - ದೇವಚಂದ್ರ - ಪುಟ ೧೭೭

೦೯. ಅದೇ ಪುಟ ೧೮೦

೧೦. ಅದೇ ಪುಟಗಳು ೧೮೨, ೧೮೩

೧೧. ಶತಮಾನದ ಸಂಶೋಧನೆ - ನಾಮಧಾರಿ ಲಿಂಗಾಯಿತರು - ಕೆ.ಜಿ. ನಾಗರಾಜಪ್ಪ, ಪುಟ ೧೫೩

೧೨. ಅದೇ ಪುಟ ೧೫೪

೧೩. ಅದೇ ಪುಟ ೧೫೮

೧೪. The Story of the Namadaris - Nightingale - Page 2-3

೧೫. ಮಲೆನಾಡು ಶ್ರೀ ವೈಷ್ಣವ ನಾಮಧಾರಿ ಗೌಡ ಸಂಸ್ಕೃತಿ - ಕಡಿದಾಳು ಎಸ್. ರಾಮಪ್ಪಗೌಡ, ಪುಟ ೧೨

೧೬. ಅದೇ

೧೭. ಅದೇ

೧೮. ಮಲೆನಾಡಿನ ಜಾನಪದ ಸಂಪ್ರದಾಯಗಳು - ಅಂಬಳಿಕೆ ಹಿರಿಯಣ್ಣ

೧೯. The Mysore Tribes and Castes - Volume IV Mambundaradhy H.V. Ananta

Krishna Iyer P-1

೨೦. ಮಲೆನಾಡಿನ ಅಂದಿನ ನೆನಪುಗಳು - ಕಡಿದಾಳು ಕೆ.ಎಸ್. ರಾಮಪ್ಪಗೌಡ, ಪುಟಗಳು ೧೧೦, ೧೧೩

೨೧. ಮಲೆನಾಡು ಶ್ರೀ ವೈಷ್ಣವ ನಾಮಧಾರಿ ಗೌಡ ಸಂಸ್ಕೃತಿ - ಕಡಿದಾಳು ಎಸ್. ರಾಮಪ್ಪಗೌಡ

೨೨. ಅದೇ

೨೩. ಅದೇ

೨೪. ಅದೇ

೨೫. ಅದೇ

೨೬. ಅದೇ

೨೭. ಮಲೆನಾಡಿನ ಜನಪದ ಸಂಪ್ರದಾಯಗಳು - ಅಂಬಳಿಕೆ ಹಿರಿಯಣ್ಣ, ಪುಟ ೫೮

೨೮. ಮಲೆನಾಡು ಶ್ರೀ ವೈಷ್ಣವ ನಾಮಧಾರಿ ಗೌಡ ಸಂಸ್ಕೃತಿ, ಕಡಿದಾಳು ಎಸ್. ರಾಮಪ್ಪಗೌಡ

೨೯. Story of the Namadaris - Nightingale - Page 1

೩೦. ಮಲೆನಾಡು ಜನಪದ ಸಂಪ್ರದಾಯಗಳು - ಅಂಬಳಿಕೆ ಹಿರಿಯಣ್ಣ

೩೧. ಮಲೆನಾಡು ಶ್ರೀ ವೈಷ್ಣವ ನಾಮದಾರಿಗೌಡ ಸಂಸ್ಕೃತಿ - ಕಡಿದಾಳು ಎಸ್. ರಾಮಪ್ಪಗೌಡ ಪುಟ ೫೯

೩೨. ಅದೇ ಪುಟ ೫೯

೩೩. ಅದೇ ಪುಟ ೬೧

೩೪. ಅದೇ

೩೫. ಅದೇ ಪುಟ ೬೨

೩೬. Intricacies of Antige Pantige - D.S. Somashekhar - An article in One India one People - International Magazine - Bombay, May-2000

೩೭. ಮಲೆನಾಡು ಶ್ರೀ ವೈಷ್ಣವ ನಾಮಧಾರಿ ಗೌಡ ಸಂಸ್ಕೃತಿ - ಕಡಿದಾಳು ಎಸ್. ರಾಮಪ್ಪಗೌಡ, ಪುಟ ೬೩

೩೮. ಅಂಟಿಕೆ ಪಂಟಿಕೆ ಪದಗಳು - ಶ್ರೀ ಕಂಠಕೂಡಿಗೆ - ಪುಟ ೧೮

೩೯. ನೀತ್ಸುಳ್ಳ ಜ್ಯೋತಿ ನಡೆಮುಂದೆ - ಜೆ.ಕೆ. ರಮೇಶ್, ಪುಟ ೨೨

೪೦. ‘ಕೊಳಲು’ ಕವನಸಂಕಲನ - ನೇಗಿಲಯೋಗಿ - ಕುವೆಂಪು, ಪುಟ ೨೮

೪೧. ನಮ್ಮ ಹೊಟ್ಟೆಯಲ್ಲಿ ದಕ್ಷಿಣ ಅಮೆರಿಕಾ - ಬಿ.ಜಿ.ಎಲ್. ಸ್ವಾಮಿ

೪೨. ಮಲೆನಾಡು ಶ್ರೀ ವೈಷ್ಣವ ನಾಮಧಾರಿ ಗೌಡ ಸಂಸ್ಕೃತಿ - ಕಡಿದಾಳು ಎಸ್. ರಾಮಪ್ಪಗೌಡ, ಪುಟ ೪೭

೪೩. ಅದೇ ಪುಟ ೪೮

೪೪. ನಾ ಕಂಡ ಮಲೆನಾಡು - ತ್ಯಾನಂದೂರು ಪುಟ್ಟಣ್ಣ ವೈ.ಎಸ್. ಪರಿಷ್ಕೃತ ಮುದ್ರಣ

೪೫. Story of the Namadaris, Nightingale Page 8

೪೬. ಅದೇ ಪುಟ ೮

೪೭. ಅದೇ ಪುಟ ೧೦

೪೮. ಅದೇ ಪುಟ ೧೩

೪೯. ನೆನಪಿನ ದೋಣಿಯಲ್ಲಿ - ಕುವೆಂಪು, ಸಂಪುಟ ೧, ಪುಟ ೯೬೯

೫೦. A New look on Modern Indian History B.L. Grover page 365

೫೧. ಸಾಹಿತ್ಯ ಮತ್ತು ಚರಿತ್ರೆ - ಡಾ. ಎಸ್. ಚಂದ್ರಶೇಖರ್ ಕುವೆಂಪು ಕಾದಂಬರಿಗಳಲ್ಲಿ ಸಮಾಜ ಚಿತ್ರಣ -ಪುಟ ೪೫

೫೨. ಅದೇ ಪುಟ ೪೭, ೫೦

೫೩. ನೆನಪಿನ ದೋಣಿಯಲ್ಲಿ ಕುವೆಂಪು ಪುಟ ೧೮೯೩

೫೪. ಮಲೆನಾಡು ಶ್ರೀ ವೈಷ್ಣವ ನಾಮಧಾರಿಗೌಡ ಸಂಸ್ಕೃತಿ, ಕಡಿದಾಳು ಎಸ್. ರಾಮಪ್ಪಗೌಡ

೫೫. ಅದೇ

* * * * *

# ಅಧ್ಯಾಯ -೬

## ತುಮಕೂರು ಒಕ್ಕಲಿಗರು ಹಾಗೂ ಒಕ್ಕಲಿಗರ ಸಂಘಗಳು

೬.೧. ತುಮಕೂರು ಜಿಲ್ಲೆ ಒಕ್ಕಲಿಗರ ಸಂಘ ಬೆಳೆದು ಬಂದ ಹಾದಿ...

೬.೨. ತುಮಕೂರು ಜಿಲ್ಲೆಯ ತಾಲ್ಲೂಕುಗಳ ಒಕ್ಕಲಿಗರ ಸಂಘಗಳು

೬.೩. ಜಿಲ್ಲೆಯ ಒಕ್ಕಲಿಗರ ಬಗೆಗಿನ ಹೊಸ ಶೋಧನೆ

‘ಇತಿಹಾಸವನ್ನು ಮರೆತವರು ಇತಿಹಾಸವನ್ನು ಸೃಷ್ಟಿಸಲಾರರು’ ಡಾ.ಬಿ.ಆರ್.ಅಂಬೇಡ್ಕರ್‌ರವರ ಮಾತು ಇಲ್ಲಿ ಪ್ರಸ್ತುತವೆನ್ನಿಸುತ್ತದೆ. ಇತಿಹಾಸ ಸಮಾಜದ, ಜನಾಂಗದ ನೆನಪು, ಮನುಕುಲದ ಕಥೆ. ಎಲ್ಲಾ ಜನರ ನೋವು ನಲಿವು ಅನುಭವಗಳ ಸೆಲೆ. ಕಾಲಕಾಲಕ್ಕೆ ಭೂಮಿಯಲ್ಲಿ ನೆಲೆಸಿದ ಮನುಷ್ಯನ ಸಾಂಸ್ಕೃತಿಕ ಸಾಧನೆ. ಇಂದಿನ ಸಾಂಸ್ಕೃತಿಕ ಸಾರಸತ್ವ ಒದಗಿಸುತ್ತಿದೆ. ನಡೆದು ಬಂದ ಹಾದಿಯಲ್ಲಿ ಯಾವುದೋ ಒಂದು ನಿಶ್ಚಿತ ಸ್ಥಳದಲ್ಲಿ ನಿಂತು ಹಿಂತಿರುಗಿ ನೋಡುವ, ಸ್ಮರಿಸುವ ಕ್ರಮವೇ ಇತಿಹಾಸ. ಇಲ್ಲಿನ ದೇಶ, ಜನ, ಜೀವನ, ಭಾಷೆ, ವಸ್ತು, ವಿಷಯ, ಸಂಘ, ಸಂಸ್ಥೆ ಹೀಗೆ ಎಲ್ಲದಕ್ಕೂ ತನ್ನದೇ ಆದ ಇತಿಹಾಸವಿದೆ. ಅದೇ ಪ್ರಕಾರ ‘ತುಮಕೂರು ಜಿಲ್ಲಾ ಒಕ್ಕಲಿಗರ ಸಂಘ’ ಸಹ ಸುಮಾರು ಶತಮಾನದ ಇತಿಹಾಸ ಹೊಂದಿದೆ. ಅದರ ಸ್ಥಾಪನೆ, ಪ್ರಗತಿ ಎಲ್ಲವೂ ಆಕಸ್ಮಿಕವೋ ಏನೋ ಎಂಬಂತೆ ವಿಸ್ಮಯಕರವಾಗಿದೆ.

ವಿಭಿನ್ನ ಐತಿಹಾಸಿಕ ಹಿನ್ನೆಲೆ ಹಾಗೂ ಸಾಂಸ್ಕೃತಿಕ ಶ್ರೀಮಂತಿಕೆಯ ತುಮಕೂರು ಜಿಲ್ಲೆಯಲ್ಲಿ ಹಲವು ಜಾತಿ, ಧರ್ಮ, ಭಾಷೆಯ ಜನರು ವಾಸಿಸುತ್ತಿದ್ದರೂ ಅವರಲ್ಲಿ ಒಕ್ಕಲಿಗ ಜನಾಂಗದವರು ಬಹು ಸಂಖ್ಯಾತರಾಗಿದ್ದಾರೆ. ಬಹುತೇಕ ಗ್ರಾಮೀಣ ಪರಿಸರದಲ್ಲಿಯೇ ವಾಸಿಸುತ್ತಿದ್ದು ವ್ಯವಸಾಯ ಮತ್ತು ಅದಕ್ಕೆ ಪೂರಕವಾದ ಉಪಕಸುಬುಗಳಲ್ಲಿ ನಿರತರಾಗಿರುವ ಒಕ್ಕಲಿಗರು ಅನೇಕ ಪಂಗಡಗಳು ಮತ್ತು ಉಪಪಂಗಡಗಳಾಗಿ ಹರಿದು ಹಂಚಿ ಹೋಗಿದ್ದರೂ ಇತ್ತೀಚೆಗೆ ಇವರೆಲ್ಲರಲ್ಲಿ ಸಾಮರಸ್ಯ ಮೂಡುತ್ತಿರುವುದು ಆಶಾದಾಯಕ. ಕಾಲಕಾಲಕ್ಕೆ ವ್ಯಕ್ತಿ, ಸಂಘ, ಸಂಸ್ಥೆ, ಮಠಮಾನ್ಯಗಳ ಆಸೆ ಆಮಿಷ ಒತ್ತಡಕ್ಕೆ ಸಿಕ್ಕಿ ಜೈನರಾಗಿ, ವೈಷ್ಣವರಾಗಿ, ವೀರಶೈವರಾಗಿ ಪರಿವರ್ತನೆಗೊಂಡಿದ್ದರೂ ಅವರ ಸಂಖ್ಯೆ ಏನು ಕಡಿಮೆಯಾಗಿಲ್ಲ. ಗಂಗ-ರಾಷ್ಟ್ರಕೂಟ ಕಾಲದಿಂದ ಮಧಗಿರಿ, ನಿಡಗಲೇ, ಬಿಜವಾರ, ಹೊಳವನಹಳ್ಳಿ ಪಾಳೇಗಾರರ ಆಡಳಿತದವರೆಗೆ, ಸ್ವತಂತ್ರ್ಯ ಹೋರಾಟದಿಂದ ಆರಂಭಿಸಿ ಪ್ರಸ್ತುತ ಸಂದರ್ಭದವರೆಗೆ ಸಾಧಿಸಿರುವ ಸಾಧನೆ, ನಾಡು-ನುಡಿ-ಸಂಸ್ಕೃತಿಗೆ ಕೊಟ್ಟ ಕೊಡುಗೆ ಅಪೂರ್ವವಾದದ್ದು. ಸಾಂಸ್ಕೃತಿಕ ವೈಶಿಷ್ಟ್ಯ, ಸಂಖ್ಯೆ ಸಾಧನೆ, ಕೊಡುಗೆಗಳಲ್ಲಿ ಒಕ್ಕಲಿಗರು ಸದಾ ಮುಂದಿದ್ದರೂ ಅವರಲ್ಲಿ ಬಹುಸಂಖ್ಯಾತರು ಶೈಕ್ಷಣಿಕವಾಗಿ, ಆರ್ಥಿಕವಾಗಿ ತೀರ ಹಿಂದುಳಿದಿದ್ದಾರೆ. ಇತ್ತೀಚಿನವರೆಗೂ ಜನಾಂಗದವರು ನಡೆಸುವ ಶೈಕ್ಷಣಿಕ ಸಂಸ್ಥೆಗಳಾಗಲಿ, ವಿದ್ಯಾರ್ಥಿನಿಲಯಗಳಾಗಲಿ ಇರಲಿಲ್ಲ. ಸರ್ಕಾರವೂ ಅಂತಹ ಹೇಳಿಕೊಳ್ಳುವಂತಹ ಸೌಕರ್ಯಗಳನ್ನೇನು ಈ ಜನಾಂಗಕ್ಕೆ ಮಾಡಿರಲಿಲ್ಲ. ‘ಕೊಡುವುದು ಮಾತ್ರ ಗೊತ್ತು ಬೇಡುವುದು ಅಲ್ಲ’ ಎಂಬ ಜಮೀನ್ದಾರಿ

ಅಹಾಕಾರದಿಂದಲೋ ಏನೋ ಜನಾಂಗದ ಗಣ್ಯರು ಸರ್ಕಾರದಿಂದ ಸವಲತ್ತು ಪಡೆಯಲು ಹೋರಾಡದಿರುವುದು ಆಶ್ಚರ್ಯಕರವಾಗಿದ್ದರೂ ಸತ್ಯವಾಗಿದೆ.

ಅಷ್ಟಾದರೂ ಆಧುನಿಕ ಶಿಕ್ಷಣದಿಂದ ಎಚ್ಚೆತ್ತ ಹಲವು ಜನಾಂಗದ ನಾಯಕರು ಇಪ್ಪತ್ತನೇ ಶತಮಾನದ ಆರಂಭದಲ್ಲಿ ಜಾತಿಯ ಸಂಘಗಳನ್ನು ವಿದ್ಯಾರ್ಥಿ ನಿಲಯಗಳನ್ನು ಸ್ಥಾಪಿಸಲು ಮುಂದಾದರು. ಸಂಖ್ಯೆಯಿಂದ ಬಲಿಷ್ಠರಾದ ಜಾತಿಯವರು ಜಾತಿಯ ಸಂಘಗಳನ್ನು ಸ್ಥಾಪಿಸಿಕೊಳ್ಳಬೇಕೇ ಬೇಡವೇ? ಎಂಬ ಚರ್ಚೆಯ ನಡುವೆಯೇ ಜನಾಂಗದ ಸಂಘಟನೆ, ಗುಣಾತ್ಮಕ ಬೆಳವಣಿಗೆ, ಕಟ್ಟಕಡೆಯ ವ್ಯಕ್ತಿಯ ಏಳಿಗೆ ಮುಂತಾದ ಕಾರಣಗಳಿಗಾಗಿ ಮಾನವೀಯ ನೆಲೆಗಟ್ಟಿನಲ್ಲಿ ತುಮಕೂರಿನಲ್ಲಿ ಒಕ್ಕಲಿಗರ ಸಂಘ ಸ್ಥಾಪನೆಯಾಯಿತು.

**೬.೧. ಸಂಘ ಬೆಳೆದು ಬಂದಹಾದಿ**

ತುಮಕೂರು ಜಿಲ್ಲಾ ಒಕ್ಕಲಿಗರ ಸಂಘದ ಇತಿಹಾಸವನ್ನು ಎರಡು ಹಂತಗಳಲ್ಲಿ ವಿವರಿಸಬಹುದು. ೧೯೨೭ರಿಂದ ೧೯೬೭ರವರೆಗೆ ಮೊದಲ ಹಂತ. ೧೯೬೭ರಿಂದ ೧೯೯೭ರವರೆಗೆ ಎರಡನೇ ಹಂತ. ವಿದ್ಯಾರ್ಥಿನಿಲಯದ ನಿರ್ವಹಣೆಯನ್ನು ಒಳಗೊಂಡಂತೆ ಒಕ್ಕಲಿಗರ ಶೈಕ್ಷಣಿಕ ಚಟುವಟಿಕೆಗಳು 'ಒಕ್ಕಲಿಗ ವಿದ್ಯಾರ್ಥಿನಿಲಯ ಆಡಳಿತ ಮಂಡಳಿ' ಎಂಬ ಹೆಸರಿನಲ್ಲಿ ಮೊದಲ ಹಂತದಲ್ಲಿ ನಡೆಯುತ್ತಿದ್ದವು. ಎರಡನೆಯ ಹಂತದಲ್ಲಿ ಅದೇ ಚಟುವಟಿಕೆಗಳು 'ತುಮಕೂರು ಜಿಲ್ಲಾ ಒಕ್ಕಲಿಗರ ಸಂಘ' ಎಂಬ ಹೆಸರಿನಲ್ಲಿ ನಡೆಯುತ್ತಿವೆ. ಸಂಘ ೨೫.೦೫.೧೯೬೭ರಂದು ಸರ್ಕಾರದಲ್ಲಿ ನೋಂದಾಯಿಸಲ್ಪಟ್ಟು (ನಂ. ೪/೬೭-೬೮) ವಿದಿವತ್ತಾಗಿ ಮಾನ್ಯತೆ ಪಡೆದರೂ ಅದರ ಕಾರ್ಯಚಟುವಟಿಕೆಗಳು, ಪ್ರಾರಂಭವಾದದ್ದು ೧೯೨೭ರಲ್ಲಿ ಆಹಾರ ಮತ್ತು ಅನ್ನ, ವಸತಿ ನೀಡಿ ಜನಾಂಗದ ಬಡ ವಿದ್ಯಾರ್ಥಿಗಳು ಶಿಕ್ಷಣ ಪಡೆಯುವಲ್ಲಿ ನೆರವಾಗಲು ಒಕ್ಕಲಿಗ ವಿದ್ಯಾರ್ಥಿ ನಿಲಯ ಸ್ಥಾಪನೆಯಾಯಿತು. ವಿದ್ಯಾರ್ಥಿ ನಿಲಯವನ್ನು ನಿರ್ವಹಿಸಲು ಆಡಳಿತ ಮಂಡಳಿ ರಚನೆಯಾಗಿ ಇದೇ ಕಾಲಾಂತರದಲ್ಲಿ ಒಕ್ಕಲಿಗರ ಸಂಘವಾಗಿ ರೂಪುಗೊಂಡಿತು. ವಿದ್ಯಾರ್ಥಿನಿಲಯ ಸ್ಥಾಪಿಸಿ ಒಕ್ಕಲಿಗರ ಸಾಂಘಿಕ ಚಟುವಟಿಕೆಗಳಿಗೆ ನಾಂದಿ ಹಾಡಿದ ಮಹನೀಯರೆಂದರೆ ಸುಬೇದಾರ್ ಎಂ.ಲಿಂಗಯ್ಯನವರು. ಇವರಿಗೆ ಒತ್ತಾಸೆಯಾಗಿ ನಿಂತು ಸಹಕಾರ ನೀಡಿದವರು ಬೆಲವತ್ತ ಗ್ರಾಮದ ಬಿ. ಹೊನ್ನಲಿಂಗೇಗೌಡರು. ಕಡಬದ ದೊಡ್ಡೇಗೌಡರು ಮತ್ತು ತುಮಕೂರಿನ ಎಂ.ಆರ್.ಬಸಪ್ಪನವರು. ಆದ್ದರಿಂದ ಈ ನಾಲ್ವರನ್ನು ಸಂಘದ ಸಂಸ್ಥಾಪಕರೆಂದರೆ ತಪ್ಪಾಗಲಾರದು.

ಸುಬೇದಾರ್ ಎಂ.ಲಿಂಗಯ್ಯನವರು ಕುಣಿಗಲ್ ತಾಲ್ಲೂಕು ನಾಗಸಂದ್ರ ಹೋಬಳಿಯ ಚಟ್ಟನಹಳ್ಳಿ ಗ್ರಾಮದ ಮರಿಗೌಡರ ಪುತ್ರರಾಗಿದ್ದು, ತಮ್ಮ ಶಿಕ್ಷಣದ ನಂತರ ಸೈನಿಕನಾಗಿ ೧೯೦೦ರಲ್ಲಿ ಮೈಸೂರು ಸಂಸ್ಥಾನದ ಸೈನ್ಯವನ್ನು ಸೇರಿದರು. ನಂತರ ೧೯೧೬ರಲ್ಲಿ ಹವಾಲ್ದಾರ್ ಆಗಿ ಆನಂತರ ಜಮೆದಾರ್, ಸುಭೇದಾರ್ ಆಗಿ ಸೇವೆ ಸಲ್ಲಿಸಿ ೧೯೨೭ರಲ್ಲಿ ನಿವೃತ್ತಿಯಾದರು. ನಿವೃತ್ತರಾದ ಮೇಲೆ ತುಮಕೂರು ನಗರದ ಸೋಮೇಶ್ವ, ಬಡಾವಣೆಯಲ್ಲಿ ವಾಸಿಸುತ್ತಿದ್ದ ಶ್ರೀ ಲಿಂಗಯ್ಯನವರು. ತಮ್ಮ ಒಕ್ಕಲಿಗ ಜನಾಂಗದ ಬಡ ಮಕ್ಕಳಿಗೆ ವಿದ್ಯಾಭ್ಯಾಸ ಮಾಡಲು ನೆರವಾಗುವಂತಹ ಒಂದು ವಿದ್ಯಾರ್ಥಿನಿಲಯದ ಸ್ಥಾಪನೆಯ ಅವಶ್ಯಕತೆ ಮನಗಂಡು ಮೊದಲು ತಮ್ಮ ಮನೆಯಲ್ಲಿಯೇ ಕಿರಿದಾಗಿ ಆರಂಭಿಸಿದರು. ಒಂದೆರಡು ವರ್ಷಗಳಲ್ಲಿ ವಿದ್ಯಾರ್ಥಿಗಳ ಸಂಖ್ಯೆ ಜಾಸ್ತಿಯಾಗಲು ವಸತಿ ಸಮಸ್ಯೆ ಉಂಟಾಯಿತು. ಪ್ರತ್ಯೇಕ ನಿವೇಶನ ಪಡೆದು ಸ್ವಂತ ಕಟ್ಟಡ ಕಟ್ಟುವುದು ಅನಿವಾರ್ಯವಾಯಿತು. ಎಂ.ಲಿಂಗಯ್ಯನವರ ಸತತ ಪ್ರಯತ್ನದಿಂದಾಗಿ ತುಮಕೂರಿನ ಹೃದಯ ಭಾಗದಂತಿರುವ ಬಿ.ಎಚ್.ರಸ್ತೆ ಮತ್ತು

ಎಂ.ಜಿ.ರಸ್ತೆಗಳಿಗೆ ಹೊಂದಿಕೊಂಡಂತೆ ಈಗ ಹಾಲಿ ಸಂಘದ ಕಚೇರಿ ಮತ್ತು ವಾಣಿಜ್ಯ ಕಾಂಪ್ಲೆಕ್ಸ್ ಇರುವ ಸ್ಥಳದಲ್ಲಿ ಎಕರೆ ಒಂದಕ್ಕೆ ಎರಡೂ ನೂರು ರೂಗಳಂತೆ ಎರಡು ಎಕರೆ ಭೂಮಿಯನ್ನು ಅಂದಿನ ಮುನಿಸಿಪಾಲಿಟಿಯಿಂದ ೨೬.೦೩.೧೯೨೯ ರಂದು ಪಡೆಯಲಾಯಿತು. ಹೀಗೆ ದಿ.೦೪.೦೨.೧೯೩೦ರಲ್ಲಿ ನಿವೇಶನ ಸ್ವಾಧೀನ ಪಡೆದ ಮೇಲೆ ಸ್ವಂತ ಕಟ್ಟಡ ನಿರ್ಮಿಸಲು ಪ್ರಯತ್ನಗಳಾದವು. ೯೩೬೭ ರೂಪಾಯಿಗಳ ಅಂದಾಜಿನಲ್ಲಿ ವಿದ್ಯಾರ್ಥಿನಿಲಯ ಸ್ಥಾಪಿಸಲು ಮುನಿಸಿಪಲ್ ಆಫೀಸ್‌ನಿಂದ ಪರವಾನಗಿ ಪಡೆದು ಸಹಾಯ ಧನಕ್ಕಾಗಿ ಸರ್ಕಾರಕ್ಕೆ ಅರ್ಜಿ ಸಲ್ಲಿಸಲಾಯಿತು.

ಮೈಸೂರು ಪ್ರಜಾ ಪ್ರತಿನಿಧಿ ಸಭೆಯ ಸದಸ್ಯರೂ, ದಾನಿಗಳೂ ಆಗಿದ್ದ ಕಡಬದ ದೊಡ್ಡೇಗೌಡರು ೭೦೦ ರೂಪಾಯಿಗಳನ್ನು, ಬೆಲವತ್ತದ ಹುಚ್ಚವೀರೇಗೌಡರು ೩೦೦ ರೂಪಾಯಿಗಳನ್ನು, ಕಂಟ್ರಾಕ್ಟರ್ ಎಂ.ಆರ್.ಬಸಪ್ಪನವರು ೨೦೦೦ ರೂಪಾಯಿಗಳನ್ನು ಕಟ್ಟಡ ನಿರ್ಮಾಣಕ್ಕೆ ದಾನವಾಗಿ ನೀಡಿದರೆ, ಸರ್ಕಾರ ೪೬೮೩ ರೂಪಾಯಿಗಳನ್ನು ಸಹಾಯ ಧನವನ್ನು ಕೊಟ್ಟಿತು. ಉಳಿದ ೧೬೮೪ ರೂಪಾಯಿಗಳನ್ನು ಸುಬೇದಾರ್ ಎಂ.ಲಿಂಗಯ್ಯನವರ ಅಳಿಯಂದಿರೂ, ಮೈಸೂರು ಪ್ರಜಾಪ್ರತಿನಿಧಿ ಸಭೆಯ ಸದಸ್ಯರೂ ಆಗಿದ್ದ ಬೆಲತ್ತದ ಪಟೇಲ್ ಬಿ. ಹೊನ್ನಲಿಂಗೇಗೌಡರು ಉದಾರವಾಗಿ ನೀಡಿದರು. ಇಂದು ಇದೆಲ್ಲಾ ತೀರ ಚಿಕ್ಕ ಮೊತ್ತವಾಗಿ ಕಂಡು ಬಂದರೂ ಈ ಶತಮಾನದ ಆದಿಯಲ್ಲಿ ಅದರ ಮೌಲ್ಯ ಬಹಳ ದೊಡ್ಡದೇ ಆಗಿತ್ತು. ಕಂಟ್ರಾಕ್ಟರ್ ಎಂ.ಆರ್.ಬಸಪ್ಪನವರು ಹಣ ನೀಡಿದ್ದರ ಜೊತೆಗೆ ವಿದ್ಯಾರ್ಥಿನಿಲಯ ನಿರ್ಮಾಣದ ಜವಾಬ್ದಾರಿಯನ್ನೂ ವಹಿಸಿಕೊಂಡರು. ಸಾಮಾಜಿಕ ಕಾಳಜಿ, ಪ್ರಾಮಾಣಿಕ ಚಿಂತನೆಗಳ ಈ ಎಲ್ಲಾ ಮಹನೀಯರ ಹೃದಯವಂತಿಕೆಯಿಂದಾಗಿ ೧೯೧೨ರಿಂದ ೧೯೩೪ರವರೆಗೆ ಕಾಮಗಾರಿ ನಡೆದು ಕಟ್ಟಡ ಪೂರ್ಣಗೊಂಡಿತು. ಈ ಸಂದರ್ಭದಲ್ಲಿ ಅಸೂಯೆಯಿಂದ ಕಟ್ಟಡ ನಿರ್ಮಾಣಕ್ಕೆ ತೊಂದರೆ ನೀಡುತ್ತಿದ್ದ ಕೆಲವು ಜನರನ್ನು ಧೈರ್ಯದಿಂದ ಹೆದರಿಸಿದ್ದು ಒಂದು ಸ್ವಾರಸ್ಯ ಕತೆಯಾಗಿದೆ. ಅಂತೂ ಎಲ್ಲಾ ಎಡರು ತೊಡರು ನಿವಾರಿಸಿ ನಿರ್ಮಾಣಗೊಂಡ ಹೊಸ ಕಟ್ಟಡಕ್ಕೆ ವಿದ್ಯಾರ್ಥಿನಿಲಯ ಸುಬೇದಾರ್ ಎಂ.ಲಿಂಗಯ್ಯನವರ ಮನೆಯಿಂದ ಸ್ಥಳಾಂತರವಾಯಿತು.

**ಬಿ.ಹೊನ್ನಲಿಂಗೇಗೌಡರು:** ಒಕ್ಕಲಿಗ ವಿದ್ಯಾರ್ಥಿನಿಲಯದ ಚಟುವಟಿಕೆಗಳಲ್ಲಿ ಜನಾಂಗದ ಪ್ರಾತಃಸ್ಮರಣೀಯ ನಾಯಕರು ತುಂಬ ಉತ್ಸಾಹದಿಂದ ಪಾಲ್ಗೊಂಡರು. ಈ ನಡುವೆ ವಿದ್ಯಾರ್ಥಿಗಳ ಸಂಖ್ಯೆ ಹೆಚ್ಚಿ ಕಾರ್ಯವ್ಯಾಪ್ತಿ ಜಾಸ್ತಿಯಾದುದ್ದರಿಂದ ವಿದ್ಯಾರ್ಥಿ ನಿಲಯ ಆಡಳಿತ ಮಂಡಳಿ ರಚಿಸುವುದು ಅನಿವಾರ್ಯವಾಯಿತು. ಪಟೇಲ್ ಬಿ.ಹೊನ್ನಲಿಂಗೇಗೌಡರ ಅಧ್ಯಕ್ಷತೆಯಲ್ಲಿ ಪ್ರಥಮ ಆಡಳಿತ ಮಂಡಳಿ ಆಸ್ತಿತ್ವಕ್ಕೆ ಬಂದಿತು. ಕಂಟ್ರಾಕ್ಟರ್ ಎಂ.ಆರ್.ಬಸಪ್ಪನವರು ಉಪಾಧ್ಯಕ್ಷರಾಗಿದ್ದರೆ ಕಡಬದ ದೊಡ್ಡೇಗೌಡರು, ಬೆಲವತ್ತದ ಬಿ.ಹುಚ್ಚವೀರೇಗೌಡರು, ಸುಬೇದಾರ್ ಲಿಂಗಯ್ಯನವರು, ನಾಗಲ್ಲಿಯ ಟಿ.ಎನ್.ಮೂಡಲಗಿರಿಗೌಡರು, ಮಂಚಕಲ್‌ಕುಪ್ಪೆಯ ಪಟೇಲ್, ಬಸವೇಗೌಡರು, ನರಸಿಂಹೇಗೌಡರು, ಮರಿರಂಗೇಗೌಡರು, ಅಪ್ಪಯ್ಯಣ್ಣನವರು ರಂಗೇಗೌಡರು, ಸಿದ್ಧಪ್ಪನವರು ಮತ್ತು ರಾಮಣ್ಣಗೌಡರು, ಮಂಡಳಿಯ ಸದಸ್ಯರಾದ್ದರು. ೧೯೩೩ರಿಂದ ೧೯೪೬ರವರೆಗೆ ಅಧಿಕಾರದಲ್ಲಿದ್ದ ಆಡಳಿತ ಮಂಡಳಿ ಗ್ರಾಮಾಂತರ ಪ್ರದೇಶದಿಂದ ವಿದ್ಯಾಕಾಂಕ್ಷಿಗಳಾಗಿ ಬಂದ ಬಡ ವಿದ್ಯಾರ್ಥಿಗಳಿಗೆ ಆಶ್ರಯ ನೀಡಿ ಅನ್ನ ನೀರು ಒದಗಿಸಿತು. ಈ ವಿದ್ಯಾರ್ಥಿ ನಿಲಯದಲ್ಲಿ ಇದ್ದು ವ್ಯಾಸಂಗ ಮಾಡಿ ಅನೇಕ ವಿದ್ಯಾರ್ಥಿಗಳು

ಇಂದು ಸರ್ಕಾರದ ಉನ್ನತ ಸ್ಥಾನಗಳಲ್ಲಿದ್ದಾರೆ, ಸಮಾಜದಲ್ಲಿ ಗಣ್ಯವ್ಯಕ್ತಿಗಳಾಗಿದ್ದಾರೆ. ಆ ಮೂಲಕ ತಾನು ಹುಟ್ಟಿಬಂದ ಜನಾಂಗಕ್ಕೆ, ದೇಶಕ್ಕೆ ಕೀರ್ತಿ ತಂದಿದ್ದಾರೆ.

**ಬಿ.ಎಚ್.ಹೊನ್ನಲಿಂಗೇಗೌಡರು:** ೧೯೪೬ರಿಂದ ೧೯೫೫ರವರೆಗೆ ಯಾವ ಮಂಡಳಿಯೂ ಅಸ್ತಿತ್ವದಲ್ಲಿಲ್ಲದಿದ್ದರೂ ಹಿಂದಿನ ಅಧ್ಯಕ್ಷ ಬೆಲವತ್ತದ ಬಿ. ಹೊನ್ನಲಿಂಗೇಗೌಡರ ಪುತ್ರ ಸುಬೇದಾರ್ ಎಂ.ಲಿಂಗಯ್ಯನವರ ಮಗಳ ಮಗನಾದ ಮಾಜಿ ಜಿಲ್ಲಾ ಪರಿಷತ್ ಸದಸ್ಯ ಬಿ.ಎಚ್.ಎಂ. ಹೊನ್ನಲಿಂಗೇಗೌಡರು ಆಡಳಿತ ಮಂಡಳಿ ಅಧ್ಯಕ್ಷರಾಗಿ ಕಾರ್ಯನಿರ್ವಹಿಸಿದರು. ಆನಂತರ ಖ್ಯಾತ ನ್ಯಾಯವಾದಿಗಳಾಗಿದ್ದ ಶ್ರೀ ಎನ್.ಟಿ.ಲಕ್ಷ್ಮಣಗೌಡರು ಅಧ್ಯಕ್ಷರಾಗಿ, ನ್ಯಾಯವಾದಿ ಹೆಚ್.ಎಸ್.ಶೇಷಾದ್ರಿಯವರು ಕಾರ್ಯದರ್ಶಿಯಾಗಿ ಹತ್ತು ಜನರ ಆಡಳಿತ ಮಂಡಳಿ ೧೯೫೫ರಲ್ಲಿ ರಚನೆಯಾಗಿ ಒಂದು ವರ್ಷ ವಿದ್ಯಾರ್ಥಿನಿಲಯದ ಉಸ್ತುವಾರಿ ವಹಿಸಿಕೊಂಡಿತ್ತು. ಈ ಕಮಿಟಿಯ ಕಲಾವಧಿ ಕೇವಲ ಒಂದು ವರ್ಷವಾಗಿತ್ತು.

**ಟಿ.ನ್ ಮೂಡಲಗಿರಿಗೌಡರು:** ಸ್ವತಂತ್ರ್ಯ ಹೋರಾಟಗಾರರೂ ಮತ್ತು ಮಾಜಿ ಶಾಸಕರೂ ಆಗಿದ್ದ ಶ್ರೀ ಟಿ.ಎನ್.ಮೂಡಲಗಿರಿಗೌಡರ ಅಧ್ಯಕ್ಷತೆಯಲ್ಲಿ ಆಡಳಿತ ಮಂಡಲಿ ರಚನೆಯಾಯಿತು. ಇದರಲ್ಲಿ ಬಿ.ಎಚ್.ಹೊನ್ನಲಿಂಗೇಗೌಡರು ಉಪಾಧ್ಯಕ್ಷರಾಗಿ ನ್ಯಾಯವಾದಿ ಎಚ್.ಎಸ್.ಶೇಷಾದ್ರಿಯವರು ಕಾರ್ಯದರ್ಶಿಯಾಗಿ, ದಿಬ್ಬೂರು ಡಿ.ಗಂಗಣ್ಣನವರು ಸಹಕಾರ್ಯದರ್ಶಿಗಳಾಗಿ, ಎನ್.ಟಿ.ಲಕ್ಷ್ಮಣಗೌಡರು ಖಜಾಂಚಿಗಳಾಗಿ ಚುನಾಯಿತರಾದರು. ಬಿ.ರಂಗಣ್ಣನವರು, ಕೆ.ಮಲ್ಲಣ್ಣನವರು, ಮಂಚಕಲ್ ಕುಪ್ಪೆಯ ಬಸವೇಗೌಡರು ಕಡಬದ ರಾಮಲಿಂಗೇಗೌಡರು, ಬ್ಯಾಡಗೆರೆಯ ಬೋರೆಗೌಡರು, ಬಂಡೀಹಳ್ಳಿಯ ದಾಸೇಗೌಡರು, ಬೈತರ ಹೊಸಹಳ್ಳಿಯ ಎಂ.ನಂಜೇಗೌಡರು, ಶ್ರೀರಾಮಪುರುದ ಎಸ್.ಬಿ.ನಂಜೇಗೌಡರು, ಬೊಮ್ಮನಹಳ್ಳಿಯ ಕಣ್ಣಪ್ಪಗೌಡರು, ಗಂಗನಘಟ್ಟದ ಜಿ.ಕೆ.ವಡ್ಡಗಲ್ಲಪ್ಪನವರು, ತಾವರೇಕೆರೆಯ ಟಿ.ತಾರೇಗೌಡರು, ಮತ್ತು ನಾಗವಲ್ಲಿಯ ಎನ್.ವೆಂಕಟೇಶಯ್ಯನವರು ಸದಸ್ಯರಾಗಿದ್ದರು. ೧೯೫೬ರಿಂದ ೧೯೬೪ರವರೆಗೆ ಅಧಿಕಾರದಲ್ಲಿದ್ದ ಈ ಆಡಳಿತ ಮಂಡಳಿ ತುಂಬ ಸಮರ್ಥವಾಗಿ ವಿದ್ಯಾರ್ಥಿ ನಿಲಯದ ಜವಾಬ್ದಾರಿಯನ್ನು ನಿರ್ವಹಿಸಿತು. ಉನ್ನತ ವ್ಯಾಸಂಗಕ್ಕಾಗಿ ಹಳ್ಳಿ ಪ್ರದೇಶದಿಂದ ಬರುವ ವಿದ್ಯಾರ್ಥಿಗಳ ಸಂಖ್ಯೆ ಜಾಸ್ತಿಯಾಯಿತು.

ಟಿ.ಎನ್.ಮೂಡಲಗಿರಿಗೌಡರ ಕಾಲದಲ್ಲಿ ಆದ ಮುಖ್ಯ ಬದಲಾವಣೆ ಎಂದರೆ ಕೇವಲ ತುಮಕೂರು ಕುಣಿಗಲ್ ಮತ್ತು ಗುಬ್ಬಿ ತಾಲ್ಲೂಕುಗಳಿಗೆ ಮಾತ್ರ ಸೀಮಿತವಾಗಿದ್ದ ಆಡಳಿತ ಮಂಡಳಿಯಲ್ಲಿ ಜಿಲ್ಲೆಯ ಇನ್ನಿತರ ತಾಲೂಕುಗಳಿಗೂ ಪ್ರಾತಿನಿಧ್ಯ ಕೊಡುವಂತಾಯಿತು. ಜೊತೆಗೆ ಒಕ್ಕಲಿಗರ ವಿವಿಧ ಒಳ ಪಂಗಡಗಳನ್ನು ಒಳಗೊಂಡಂತೆ ಎಲ್ಲಾ ಜಾತಿಯ ಬಡ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿ ನಿಲಯದಲ್ಲಿ ಅವಕಾಶ ಮಾಡಿಕೊಡಲಾಯಿತು. ಒಕ್ಕಲಿಗ ವಿದ್ಯಾರ್ಥಿನಿಲಯ 'ಒಕ್ಕಲಿಗ ಸಾರ್ವಜನಿಕ ವಿದ್ಯಾರ್ಥಿನಿಲಯ'ವಾಗಿ ಪರಿವರ್ತನೆಯಾಯಿತು. ಇದೊಂದು ದಿಟ್ಟ ಹೆಜ್ಜೆಯಾಗಿದ್ದು, ತನ್ನ ಕೋಮಿನವರಿಗೆ ಮಾತ್ರವಲ್ಲ. ಎಲ್ಲಾ ವರ್ಗದವರಿಗೂ ಸಹಾಯ ಹಸ್ತ ನೀಡಬೇಕೆಂಬ ಸದುದ್ದೇಶ ಮಂಡಳಿಯ ಮಹನೀಯರಲ್ಲಿ ಇದ್ದುದು ಇಂದರಿಂದ ವ್ಯಕ್ತವಾಗುತ್ತದೆ.

ನ್ಯಾಯವಾದಿಗಳು, ರಾಜಕಾರಣಿಗಳು, ಜಮೀನ್ದಾರರು, ಗುತ್ತಿಗೆದಾರರು ಮತ್ತು ಸಮಾಜ ಸೇವಕರಿಂದ ಕೂಡಿದ್ದು ಸಮಾಜದ ಗಣ್ಯ ವ್ಯಕ್ತಿಗಳು ವಿದ್ಯಾರ್ಥಿ ನಿಲಯವನ್ನು ಮುನ್ನಡೆಸುತ್ತಾ ಆಡಳಿತ ಮಂಡಳಿಯ ಚಟುವಟಿಕೆಗಳನ್ನು

ವಿಸ್ತರಿಸಿದ್ದರೂ ಸರ್ಕಾರದಲ್ಲಿ ನೊದಾಯಿಸಲ್ಪಟ್ಟ ಸಂಘವಾಗಲಿ, ಟ್ರಸ್ಟ್ ಆಗಲಿ ಇರಲಿಲ್ಲ. ಇದನ್ನು ಮನಗಂಡ ಮಂಡಳಿಯ ಪದಾಧಿಕಾರಿಗಳು ಸಂಘವನ್ನು ನೊಂದಾಯಿಸಲು ತೀರ್ಮಾನಿಸಿ ೧೯೬೫ರಿಂದ ಒಕ್ಕಲಿಗ ವಿದ್ಯಾರ್ಥಿನಿಲಯ ಆಡಳಿತ ಮಂಡಳಿಯನ್ನು 'ತುಮಕೂರು ಜಿಲ್ಲಾ ಒಕ್ಕಲಿಗರ ಸಂಘ' ಎಂದು ಬದಲಾಯಿಸಿಕೊಂಡಿತು.

**ಎಸ್.ಟಿ.ಲಕ್ಷ್ಮಣಗೌಡರು:** ಈ ಮಧ್ಯೆ ನ್ಯಾಯವಾದಿ ಎನ್.ಟಿ.ಲಕ್ಷ್ಮಣಗೌಡರ ಅಧ್ಯಕ್ಷತೆಯಲ್ಲಿ ಹೊಸ ಮಂಡಳಿ ರಚನೆಯಾಯಿತು. ಉಪಾಧ್ಯಕ್ಷರಾಗಿ ಬಿ.ಎಚ್.ಹೊನ್ನಲಿಂಗೇಗೌಡರು, ಕಾರ್ಯದರ್ಶಿಗಳಾಗಿ ಹೆಚ್.ಎಸ್.ಶೇಷಾದ್ರಿಯವರು ಮತ್ತೆ ಮುಂದುವರೆದರು. ಮಾಜಿ ಶಾಸಕರಾದ ಅಂದಾನಯ್ಯನವರು ಖಜಾಂಚಿಗಳಾಗಿ ನೇಮಕವಾದರು. ಲೋಕಸಭಾ ಸದಸ್ಯರಾಗಿದ್ದ ಕೆ.ಲಕ್ಕಪ್ಪನವರು, ಭಕ್ತರ ಹಳ್ಳಿಯ ಬೆಟ್ಟೇಗೌಡರು, ತುರುವೇಕೆರೆಯ ಶಾಸಕರಾದ ಕೆ.ಎಚ್.ರಾಮಕೃಷ್ಣಯ್ಯನವರು, ಬಂಡಿಹಳ್ಳಿಯ ದಾಸೇಗೌಡರು, ತಿಪಟೂರಿನ ಎಂ.ಆರ್.ತೋಪೇಗೌಡರು, ತುರುವೇಕೆರೆಯ ನಂಜೇಗೌಡರು, ಹೊನ್ನುಡಿಕೆಯ ನರಸೇಗೌಡರು, ಕಣತ್ತೂರು ಬೀದಿಮನೆ ತಿಮ್ಮೇಗೌಡರು, ಮಂಚಕಲ್ ಕುಪ್ಪೆಯ ಕಂಬಣ್ಣನವರು, ತುಮಕೂರಿನ ಕೆ.ಮಲ್ಲಣ್ಣನವರು, ಗೂಳೂರಿನ ಎಸ್,ತಿಮ್ಮಯ್ಯನವರು ಮತ್ತು ತುರುವೇಕೆರೆಯ ಟಿ.ಶಂಕರೇಗೌಡರು ನಿರ್ದೇಶಕರಾದರು. ೧೯೬೫-೧೯೮೦ರ ವರೆಗೆ ಅಧಿಕಾರದಲ್ಲಿದ್ದ ಈ ಕಾರ್ಯಕಾರಿ ಸಮಿತಿ ಅನೇಕ ಜವಾಬ್ದಾರಿಗಳನ್ನು ನಿರ್ವಹಿಸಿತು.

ಹಿಂದಿನ ಕಾರ್ಯಕಾರಿ ಸಮಿತಿಯ ತೀರ್ಮಾನದಂತೆ ೨೦.೦೫.೬೭ರಂದು ಸರ್ಕಾರದಲ್ಲಿ 'ಒಕ್ಕಲಿಗರ ಸಂಘ' ನೊಂದಾಯಿಸಲ್ಪಟ್ಟಿತು. (ನಂ.೪/೬೭-೬೮). ಇಂದರೊಂದಿಗೆ ಒಕ್ಕಲಿಗ ವಿದ್ಯಾರ್ಥಿಗಳ ಸಾರ್ವಜನಿಕ ವಿದ್ಯಾರ್ಥಿನಿಲಯದ 'ಆಡಳಿತ ಮಂಡಳಿ'ಯ ಜಾಗದಲ್ಲಿ ಒಕ್ಕಲಿಗರ ಸಂಘದ ಕಾರ್ಯಕಾರಿ ಸಮಿತಿ ವಿಧಿವತ್ತಾಗಿ ಅಸ್ತಿತ್ವಕ್ಕೆ ಬಂದಿತು. ಸರ್ಕಾರದಿಂದ ಮತ್ತಷ್ಟು ಅನುದಾನ ಪಡೆದು ಸಂಘದ ಚಟುವಟಿಕೆ ವಿಸ್ತರಿಸಲು ಪ್ರಯತ್ನಿಸಿದರೂ ಅದು ದೊರಕದಿದ್ದುದು ದುರದೃಷ್ಟಕರ. ಆದರೂ ಚಿತ್ರತಾರೆ ಪಂಡರಿಬಾಯಿಯವರನ್ನು ಕರೆಸಿ ಅವರ ತಂಡದಿಂದ ಸಹಾಯಾರ್ಥ ನಾಟಕವನ್ನು ಪ್ರದರ್ಶಿಸಿ ಸ್ವಲ್ಪ ಮಟ್ಟಿಗೆ ಹಣ ಸಂಗ್ರಹ ಮಾಡಿದ್ದರಿಂದಾಗಿ ಸಂಘಕ್ಕೆ ಜೀವ ಬಂದಂತಾಯಿತು. ಬೈಲಾದಲ್ಲಿ ನಮೂದಿಸಿರುವ ಉದ್ದೇಶಗಳನ್ನು ಕಾರ್ಯರೂಪಕ್ಕೆ ತರಲು ಸಂಘ ಪ್ರಯತ್ನಿಸಿದರೂ ಇಚ್ಛಾ ಶಕ್ತಿಯ ಕೊರತೆಯಿಂದಾಗಿ ಅಭಿವೃದ್ಧಿ ಕಾರ್ಯಗಳೇನು ಅಷ್ಟಾಗಿ ನಡೆಯಲಿಲ್ಲ.

ಉಪನ್ಯಾಸಕರಾಗಿದ್ದ ಟಿ.ಶಿವಣ್ಣ, ವೈ.ಹನುಮಯ್ಯ, ಕೆ.ಆರ್.ಸುಶೀಲಗೌಡರು ಕ್ರಮವಾಗಿ ವಿದ್ಯಾರ್ಥಿನಿಲಯದ ವಾರ್ಡನ್ ಆಗಿ, ಕಾರ್ಯಕಾರಿ ಸಮಿತಿಯ ಸೂಚನೆಯಂತೆ ವಿದ್ಯಾರ್ಥಿಗಳ ಕುಂದುಕೊರತೆಗಳನ್ನು ನಿಬಾಯಿಸಿದರು.

**ಶ್ರೀ.ಕೆ.ಲಕ್ಕಪ್ಪ :** ೧೯೮೦ರಲ್ಲಿ ಜಿಲ್ಲಾ ಒಕ್ಕಲಿಗರ ಸಂಘಕ್ಕೆ ಇದ್ದಕ್ಕಿದಂತೆ ವಿದ್ಯುತ್ ಸಂಚಾರವಾದಂತಾಯಿತು. ಸ್ತಬ್ಧಗೊಂಡಿದ್ದ ಚಟುವಟಿಕೆಗಳಿಗೆ ಹೊಸ ಚಾಲನೆ ದೊರೆತಂತಾಯಿತು. ಅದಕ್ಕೆ ಮುಖ್ಯ ಕಾರಣವೆಂದರೆ ಜಿಲ್ಲೆಯ ಜನಪ್ರಿಯ ಮುಖಂಡರಾಗಿ, ನಾಲ್ಕು ಬಾರಿ ಲೋಕಸಭಾ ಸದಸ್ಯರಾಗಿದ್ದ, 'ಡೈನಾಮಿಕ್' ವ್ಯಕ್ತಿತ್ವ ಹೊಂದಿದ್ದ ಕೆ.ಲಕ್ಕಪ್ಪನವರು ಸಂಘದ ಅಧ್ಯಕ್ಷರಾಗಿ ಸರ್ವಾನುಮತದಿಂದ ಆಯ್ಕೆಯಾದದ್ದು. ತಮ್ಮನ್ನು ಆರಿಸಿ ಕಳುಹಿಸಿದ್ದ ತುಮಕೂರು ಲೋಕಸಭಾ ಕ್ಷೇತ್ರಕ್ಕೆ ಅವರು ನೀಡಿದ ಮುಖ್ಯವಾದ ಎರಡು ಕೊಡುಗೆಗಳೆಂದರೆ ಎಚ್.ಎಂ.ಟಿ.ಕೈಗಡಿಯಾರ ಕಾರ್ಖಾನೆ ಮತ್ತು ಹಾಲಿನ ಡೈರಿಯ ಸ್ಥಾಪನೆ. ಇದರಿಂದಾಗಿ ಸಾವಿರಾರು ಜನರಿಗೆ ನೌಕರಿ ದೊರೆತು ಕೈಗಾರಿಕಾ ರಂಗದಲ್ಲಿ ತುಮಕೂರು ಗುರುತಿಸುವಂತಾಯಿತು.

ಕೆ.ಲಕ್ಕಪ್ಪನವರ ಅಧ್ಯಕ್ಷತೆಯಲ್ಲಿ ೧೯೮೦ರಿಂದ ೧೯೯೧ರ ವರೆಗೆ ಅಸ್ತಿತ್ವದಲ್ಲಿದ್ದ ಕಾರ್ಯಕಾರಿ ಸಮಿತಿಯಲ್ಲಿ ಹಿರಿಯ ರಾಜಕಾರಣಿ, ಸ್ವಾತಂತ್ರ್ಯ ಹೋರಾಟಗಾರ, ಮಾಜಿ ಸಚಿವ ಶ್ರೀ ಎನ್.ಹುಚ್ಚಮಾಸ್ತಿಗೌಡರು ಉಪಾಧ್ಯಕ್ಷರಾಗಿ, ಕಂಟ್ರಾಕ್ಟರ್ ಬಿ.ರಂಗಣ್ಣನವರು ಖಜಾಂಚಿಯಾಗಿ, ಹೈಕೋರ್ಟ್ ನ್ಯಾಯಾಧೀಶರಾಗಿದ್ದ ಎಚ್.ಎನ್.ನಾರಾಯಣ ಅವರು ಕಾರ್ಯದರ್ಶಿಗಳಾಗಿ ಸೇವೆ ಸಲ್ಲಿಸಿದರು. ೨೦.೦೩.೧೯೮೩ರಂದು ಹೆಚ್.ಎನ್.ನಾರಾಯಣ ಅವರು ತಮ್ಮ ಸ್ಥಾನಕ್ಕೆ ರಾಜೀನಾಮೆ ನೀಡಿದ್ದರಿಂದಾಗಿ ಮಾಜಿ ತಾಲೂಕು ಬೋರ್ಡ್ ಅಧ್ಯಕ್ಷರಾದ ಮಂಚಕಲ್‌ಕುಪ್ಪಯ ಜಿ.ಕಂಬಯ್ಯನವರು ಕಾರ್ಯದರ್ಶಿಗಳಾಗಿ ಸೇವೆಸಲ್ಲಿಸಿದರು.

ತುಮಕೂರು ತಾಲ್ಲೂಕಿನಿಂದ ಬಿ.ರುದ್ರಯ್ಯ, ಆರ್.ನಾರಾಯಣ್, ಹೆಚ್.ಎಸ್.ಶೇಷಾದ್ರಿಯವರು, ತುರುವೇಕೆರೆ ತಾಲ್ಲೂಕಿನಿಂದ ಬಿ.ಬೈರಪ್ಪಾಜಿಯವರು, ಗಂಗಾಧರಗೌಡರು, ಟಿ.ಶಂಕರೇಗೌಡರು, ಕುಣಿಗಲ್ ತಾಲ್ಲೂಕಿನಿಂದ ಚೌದರಿಶಂಕರ್, ಟಿ. ತೋಪೇಗೌಡರು, ಜಿ.ಎಂ.ತಿಮ್ಮೇಗೌಡರು, ಗುಬ್ಬಿ ತಾಲ್ಲೂಕಿನಿಂದ ಬಿಳಿನಂದಿ ಗಂಗಣ್ಣನವರು, ಬಿ.ಹೆಚ್.ಹೊನ್ನಲಿಂಗೇಗೌಡರು, ಕರಿಯಪ್ಪನವರು, ಶಿರಾ ತಾಲ್ಲೂಕುನಿಂದ ಮುರುಗಪ್ಪಗೌಡರು, ಮಧುಗಿರಿ ತಾಲ್ಲೂಕಿನಿಂದ ಬಿ.ಎನ್. ಶಂಕರಯ್ಯನವರು, ಕೊರಟಗೆರೆ ತಾಲ್ಲೂಕಿನಿಂದ ತೋವಿನಕೆರೆಯ ಟಿ.ಹೆಚ್. ಹನುಮಂತರಾಯಪ್ಪನವರು, ಪಾವಗಡ ತಾಲ್ಲೂಕಿನಿಂದ ನರಸಿಂಹರೆಡ್ಡಿಯವರು ಮತ್ತು ಚಿಕ್ಕನಾಯಕನಹಳ್ಳಿ ತಾಲ್ಲೂಕಿನಿಂದ ಶಂಕರಲಿಂಗಪ್ಪನವರು ಈ ಅವಧಿಯಲ್ಲಿ ನಿರ್ದೇಶಕರಾಗಿ ಆಯ್ಕೆಯಾದರು.

ಕೆ. ಲಕ್ಕಪ್ಪನವರ ಅಧ್ಯಕ್ಷಾವಧಿಯಲ್ಲಿ ಬಹಳಷ್ಟು ಅಭಿವೃದ್ಧಿ ಕಾರ್ಯಗಳು ಯಶಸ್ವಿಯಾಗಿ ಜನ ಗುರುತಿಸುವಂತೆ ನಡೆದವು. ೧೯೮೪-೮೫ರಲ್ಲಿ ಸಂಘವು ತನ್ನ ಸುವರ್ಣ ಮಹೋತ್ಸವ ಸಮಾರಂಭವನ್ನು ಅದ್ದೂರಿಯಾಗಿ ಆಚರಿಸಿತು. ಸಂದರ್ಭದಲ್ಲಿ ಹಬ್ಬತ್ತನ ಹಳ್ಳಿಯ ಪ್ರಗತಿಪರ ರೈತ ಹೆಚ್.ಟಿ. ಅಡವಿಸ್ವಾಮಿಯವರ ಸಂಪಾದಕತ್ವದಲ್ಲಿ 'ಸ್ಮರಣ ಸಂಚಿಕೆ'ಯನ್ನು ಹೊರತರಲಾಯಿತು. ಈ ಸಂಚಿಕೆಯಲ್ಲಿ ಅಧ್ಯಕ್ಷರಾದ ಕೆ. ಲಕ್ಕಪ್ಪನವರು ಬರೆದಿರುವ ಮನವಿಯಲ್ಲಿ ಸಂಘದ ಏಳಿಗೆ, ಅದಕ್ಕಾಗಿ ಹಮ್ಮಿಕೊಳ್ಳಬೇಕಾದ ಯೋಜನೆಗಳ ಬಗ್ಗೆ ವ್ಯಾಪಕವಾಗಿ ಚರ್ಚಿಸಿದ್ದಾರೆ. ರೈತ ಜನಾಂಗ ಶೈಕ್ಷಣಿಕ, ಆರ್ಥಿಕ, ಸಾಮಾಜಿಕ ಪ್ರಗತಿಗಾಗಿ ಬ್ಯಾಂಕು, ವಿದ್ಯಾರ್ಥಿನಿಲಯ, ವಿದ್ಯಾಸಂಸ್ಥೆಗಳನ್ನು ಸ್ಥಾಪಿಸುವ, ಕಲ್ಯಾಣ ಮಂಟಪಗಳನ್ನು ನಿರ್ಮಿಸುವ ಆ ಮೂಲಕ ಸಂಘವನ್ನು ಜನಾಂಗದ ಕಲ್ಪ ವೃಕ್ಷವನ್ನಾಗಿ ಬೆಳೆಸುವ ಗುರಿಯನ್ನು ಹೊಂದಿದ್ದುದು ವೇದ್ಯವಾಗುತ್ತದೆ.

ಯಾವುದೇ ಕಲ್ಯಾಣ ಕಾರ್ಯಗಳನ್ನು ಕೈಗೊಳ್ಳಲು ಆರ್ಥಿಕ ಶಕ್ತಿ ಮತ್ತು ಇಚ್ಛಾ ಶಕ್ತಿ ಎರಡೂ ಅತ್ಯವಶ್ಯಕ. ಸಂಘದ ಸಂಪನ್ಮೂಲ ಹೆಚ್ಚಿಸಲು ಸಂಘವಿದ್ದ ವಿಶಾಲ ನಿವೇಶನದಲ್ಲಿ ಬಿ.ಹೆಚ್. ರಸ್ತೆಗೆ ಹೊಂದಿಕೊಂಡಂತೆ ಪ್ರಥಮ ಹಂತದ ವಾಣಿಜ್ಯ ಸಂಕೀರ್ಣವನ್ನು ನಿರ್ಮಿಸುವ ಯೋಜನೆಯನ್ನು ಕಾರ್ಯಕಾರಿ ಸಮಿತಿ ಕೈಗೆತ್ತಿಕೊಂಡಿತು. ಬೆಂಗಳೂರಿನ ವಿ.ಜಿ. ತಮ್ಮಯ್ಯನವರು ಕಟ್ಟಡದ ವಿನ್ಯಾಸ ರೂಪಿಸಿಕೊಟ್ಟಿದ್ದಾರೆ. ದಿ.೧.೨.೧೯೮೨ ರಂದು ಅಂದಿನ ಕರ್ನಾಟಕದ ಮುಖ್ಯಮಂತ್ರಿಗಳಿಂದ ಕಟ್ಟಡದ ಶಂಕು ಸ್ಥಾಪನೆಯಾಯಿತು. ಸ್ಮರಣ ಸಂಚಿಕೆಯ ಜಾಹೀರಾತು, ದೇಣಿಗೆ ಮತ್ತಿತರ ಮೂಲಗಳಿಂದ ಹಣ ಸಂಗ್ರಹಿಸಲಾಯಿತು. ಸರ್ವಶ್ರೀ ಬಿ.ಬೈರಪ್ಪಾಜಿ ಅಧ್ಯಕ್ಷರಾಗಿ, ಜಿ. ಕಂಬಯ್ಯ ಕಾರ್ಯದರ್ಶಿಯಾಗಿ ಹಾಗೂ ಆರ್. ನಾರಾಯಣಗೌಡ, ಬಿ.ಗಂಗಣ್ಣ, ಬಿ.ರುದ್ರಯ್ಯನವರನ್ನು ಒಳಗೊಂಡ ಬಿಲ್ಡಿಂಗ್ ಸಮಿತಿ ನಿರ್ಮಾಣದ ಸಂಪೂರ್ಣ ಜವಾಬ್ದಾರಿ ವಹಿಸಿಕೊಂಡಿತು. ಈ ದಿಸೆಯಲ್ಲಿ ಕಾರ್ಯದರ್ಶಿ ಜಿ. ಕಂಬಯ್ಯನವರು ಮತ್ತು ಇಂಜಿನಿಯರ್ ಎನ್. ರಾಮಚಂದ್ರ ಅವರ ಸೇವೆ ಸದಾ

ಸ್ಮರಿಸುವಂತದ್ದು. ಎಲ್ಲರ ಪ್ರಯತ್ನದಿಂದ ಹತ್ತು ವರ್ಷಗಳ ಕಾಲ ಕಾಮಗಾರಿ ನಡೆದು ಮೂರು ಅಂತಸ್ತಿನ ೨೧ ಕೊಠಡಿಗಳು ಮತ್ತು ಹಾಲ್‌ಗಳನ್ನು ಒಳಗೊಂಡ ವಾಣಿಜ್ಯ ಸಂಕೀರ್ಣ ನಿರ್ಮಾಣವಾಯಿತು. ಸಹಜವಾಗಿಯೇ ಆರ್ಥಿಕ ಶಕ್ತಿ ಹೆಚ್ಚಾಗಿ ಸಂಘದ ಅನೇಕ ಯೋಜನೆಗಳನ್ನು ಕೈಗೆತ್ತಿಕೊಳ್ಳಲು ಸಾಧ್ಯವಾಯಿತು. ಅವುಗಳಲ್ಲಿ ಮುಖ್ಯವಾದವುಗಳೆಂದರೆ ಹೆಣ್ಣು ಮಕ್ಕಳ ವಿದ್ಯಾರ್ಥಿನಿಲಯ, ಕಲ್ಯಾಣ ಮಂದಿರ ಸ್ಥಾಪನೆ, ಮತ್ತೊಂದು ವಾಣಿಜ್ಯ ಮಳಿಗೆಗಳ ಸ್ಥಾಪನೆ, ಪ್ರತಿಭಾವಂತ ವಿದ್ಯಾರ್ಥಿಗಳ ತಾಂತ್ರಿಕ, ವೈದ್ಯಕೀಯ ಶಿಕ್ಷಣಕ್ಕೆ ಸಹಾಯ ಮಾಡುವುದು, ಅನಾಥ ವೃದ್ಧರಿಗೆ, ವಿಧವೆಯರಿಗೆ ಧನ ಸಹಾಯ ನೀಡುವುದು ಇತ್ಯಾದಿ. ನಿಜಕ್ಕೂ ಇವೆಲ್ಲಾ ಆಶಾದಾಯಕ ಯೋಜನೆಗಳೇ ಆಗಿದ್ದರೂ ಕಾರ್ಯರೂಪಕ್ಕೆ ಬರುವಲ್ಲಿ ತಡವಾಯಿತು. ಆದರೆ ಇಂದು ಈ ಯೋಜನೆ ನಡೆಯುತ್ತಿದೆ.

**ಎಸ್. ಹುಚ್ಚಮಾಸ್ತಿಗೌಡರು ಮತ್ತು ಬಿ. ಭೈರಪ್ಪಾಜಿಯವರು:** ದಿನಾಂಕ ೮.೧೧. ೧೯೯೧ ರಂದು ಸಂಘಕ್ಕೆ ಚಾಲನೆ ಕೊಟ್ಟ ಅಧ್ಯಕ್ಷರಾದ ಕೆ. ಲಕ್ಕಪ್ಪನವರು ದಿವಂಗತರಾದರು. ಈಗ ಕಾರ್ಯದರ್ಶಿಗಳಾಗಿದ್ದ ಜಿ. ಕಂಬಯ್ಯನವರು ಅಧ್ಯಕ್ಷರಾಗಿ ೧೪.೨.೧೯೯೨ರವರೆಗೆ ಕೆಲವು ತಿಂಗಳು ಕಾರ್ಯ ನಿರ್ವಹಿಸಿದರು. ನಂತರ ೧೬.೬.೨೯೯೭ರವರೆಗೆ ಐದು ವರ್ಷಗಳ ಕಾಲ ಸ್ವಾತಂತ್ರ್ಯ ಹೋರಾಟಗಾರ, ಮಾಜಿ ಕೃಷಿ ಸಚಿವ ಎನ್. ಹುಚ್ಚಮಾಸ್ತಿಗೌಡರು ಸಂಘದ ಅಧ್ಯಕ್ಷರಾಗಿ ಚುನಾಯಿತರಾದರು. ತುರುವೇಕೇರಿಯ ಮಾಜಿ ಶಾಸಕರೂ, ಹಿರಿಯ ಗಾಂಧಿವಾದಿಯೂ ಆಗಿದ್ದ ಬಿ. ಭೈರಪ್ಪಾಜಿಯವರು ೧೨.೧೧.೧೯೯೧ ರಿಂದ ೨೪.೩.೧೯೯೭ ರವರೆಗೆ ಮತ್ತು ಮಾಜಿ ಸಚಿವ ವೈ.ಕೆ. ರಾಮಯ್ಯನವರು ೨೩.೧೧.೧೯೯೧ ರಿಂದ ೧೬.೬.೧೯೯೭ ರವರೆಗೆ ಸಂಘದ ಉಪಾಧ್ಯಕ್ಷರಾಗಿದ್ದರು. ೧೨.೧೧.೧೯೯೧ ರಿಂದ ೨೩.೩.೧೯೯೨ ರವರೆಗೆ ಜೆ.ಕೆ. ಕೆಂಪಯ್ಯನವರು ಕಾರ್ಯದರ್ಶಿಗಳಾಗಿದ್ದರೆ ನಂತರ ಬೆಳ್ಳಾವೆಯ ವಿಧಾನಸಭಾ ಸದಸ್ಯರಾದ ಆರ್. ನಾರಾಯಣ್ ಅವರು ಕಾರ್ಯದರ್ಶಿಗಳಾದರು.

೧೯೯೧,೯೭ರ ಅವಧಿಯಲ್ಲಿ ತುಮಕೂರು ತಾಲ್ಲೂಕಿನಿಂದ ಹೆಚ್.ಎಸ್. ಶೇಷಾದ್ರಿಯವರು, ಬಿ. ರಂಗಣ್ಣ, ಬಿ. ರುದ್ರಯ್ಯ, ಕೆ.ಎಲ್. ಪ್ರಕಾಶ, ಎಂ.ಕೆ. ರಾಮಣ್ಣ, ಆರ್. ಚಿನ್ನಪ್ಪ, ಎನ್. ಕೆಂಪಯ್ಯ ಕುಣಿಗಲ್ ತಾಲ್ಲೂಕಿನಿಂದ ಹೆಚ್. ಬೋರೆಗೌಡ, ಕೆ.ಬಿ. ಬೋರೆಗೌಡ, ಬಿ.ಆರ್. ಲಕ್ಷ್ಮಣಗೌಡ, ತುರುವೇಕೆರೆ ತಾಲ್ಲೂಕಿನಿಂದ ಡಿ.ಎಸ್. ಗಂಗಾಧರಗೌಡ, ಗುಬ್ಬಿ ತಾಲ್ಲೂಕಿನಿಂದ ಬಿ.ಹೆಚ್. ಹೊನ್ನಲಿಂಗೇಗೌಡ, ಬಿಳಿನಂದಿ ಗಂಗಣ್ಣ, ಎಂ.ಎನ್.ಕರಿಯಪ್ಪ, ಕೊರಟನಗೆರೆ ತಾಲ್ಲೂಕಿನಿಂದ ಟಿ.ಹೆಚ್.ಹನುಮಂತರಾಯಪ್ಪ, ಶಿರಾ ತಾಲ್ಲೂಕಿನಿಂದ ಎಂ.ಕೆ. ಮುರುಗಪ್ಪಗೌಡ, ಪಾವಗಡ ತಾಲ್ಲೂಕಿನಿಂದ ನರಸಿಂಹರೆಡ್ಡಿ ಮತ್ತು ಚಿಕ್ಕನಾಯಕನಹಳ್ಳಿ ತಾಲ್ಲೂಕಿನಿಂದ ಬಿ.ಎನ್. ಶಂಕರಲಿಂಗಪ್ಪನವರು ಪ್ರತಿನಿಧಿಗಳಾಗಿ ಹಾಗೂ ನಿರ್ದೇಶಕರಾಗಿ ಹೊಸ ಕಾರ್ಯಕಾರಿ ಸಮಿತಿ ರಚನೆಯಾಗಿರುವುದು ಕಂಡುಬರುತ್ತದೆ. ಇವರು ಅನೇಕ ಪ್ರಗತಿಪರ ಕಾರ್ಯಗಳನ್ನು ಕೈಗೊಂಡು ಸಂಘವನ್ನು ಮುನ್ನಡೆಸಿಕೊಂಡು ಬರುವಲ್ಲಿ ಯಶಸ್ವಿಯಾಗಿದ್ದಾರೆ..

ಕೆಲಸದ ಒತ್ತಡ ಮತ್ತು ಇಳಿವಯಸ್ಸಿನ ಕಾರಣದಿಂದಾಗಿ ಅಧ್ಯಕ್ಷರಾಗಿದ್ದ ಎನ್. ಹುಚ್ಚಮಾಸ್ತಿಗೌಡರು ಸಂಘದ ಕೆಲಸಗಳಲ್ಲಿ ಹೆಚ್ಚು ಕ್ರಿಯಾಶೀಲರಾಗಿ ಪಾಲ್ಗೊಳ್ಳುತ್ತಿರಲಿಲ್ಲ. ಉಪಾಧ್ಯಕ್ಷರಾಗಿದ್ದ ಬಿ. ಬೈರಪ್ಪಾಜಿಯವರು ಬಹುತೇಕ ಸಂಘದ ಎಲ್ಲಾ ಜವಾಬ್ದಾರಿಗಳನ್ನು ನಿರ್ವಹಿಸುತ್ತಿದ್ದರು. ಈ ಮಹನೀಯರ ಅಧಿಕಾರವಧಿಯಲ್ಲಿ

ಒಕ್ಕಲಿಗರ ಸಂಘದಲ್ಲಿ ಅನೇಕ ಪ್ರಗತಿದಾಯಕ ಅಭಿವೃದ್ಧಿ ಕಾರ್ಯಗಳು ನಡೆದವು. ಅವುಗಳಲ್ಲಿ ಮುಖ್ಯವಾದುದ್ದೆಂದರೆ ಎರಡನೇ ವಾಣಿಜ್ಯ ಸಂಕೀರ್ಣದ ನಿರ್ಮಾಣ. ೪೯,೦೬,೨೬೪/- ರೂಪಾಯಿಗಳ ವೆಚ್ಚದಲ್ಲಿ ಒಂದನೇ ವಾಣಿಜ್ಯ ಸಂಕೀರ್ಣದ ಪಕ್ಕದಲ್ಲಿ ನದಕಜ ಎಂ.ಜಿ. ರಸ್ತೆಗೆ ಹೊಂದಿಕೊಂಡಂತೆ ಎರಡನೇ ವಾಣಿಜ್ಯ ಸಂಕೀರ್ಣ ನಿರ್ಮಾಣವಾಯಿತು. ದೇಣಿಗೆಯಾಗಿ ಪಡೆದ ಹಣದ ಜೊತೆಗೆ ಸ್ಟೇಟ್ ಬ್ಯಾಂಕ್ ಆಫ್ ಇಂಡಿಯಾದಲ್ಲಿ ಸಾಲವಾಗಿ ಪಡೆದ ಹಣದಿಂದ ಇದನ್ನು ನಿರ್ಮಿಸಲಾಯಿತು. ನೆಲ ಅಂತಸ್ತಿನಲ್ಲಿ ೧೫ ಅಂಗಡಿಗಳಿದ್ದು ಅವನ್ನು ಬಾಡಿಗೆಗೆ ನೀಡಲಾಗಿದೆ. ಮೊದಲ ಅಂತಸ್ತಿನ ಇಡೀ ಕಟ್ಟಡವನ್ನು ಸ್ಟೇಟ್ ಬ್ಯಾಂಕ್ ಆಫ್ ಇಂಡಿಯಾ ಶಾಖೆಯನ್ನು ತೆರೆಯಲು ಬಾಡಿಗೆ ನೀಡಲಾಗಿದೆ. ಕಟ್ಟಡದ ಸಾಲ ತೀರಿದ ಮೇಲೆ ಮೊದಲನೇ ಮತ್ತು ಎರಡನೇ ವಾಣಿಜ್ಯ ಸಂಕೀರ್ಣದಲ್ಲಿ ಬರುವ ಮಾಸಿಕ ವರಮಾನದಿಂದ ವಿದ್ಯಾರ್ಥಿನಿಲಯ ಮತ್ತು ಇತರೆ ಅಭಿವೃದ್ಧಿ ಕಾರ್ಯಗಳನ್ನು ಯಾವುದೇ ತೊಂದರೆ ಇಲ್ಲದೆ ನಿರ್ವಹಿಸಬಹುದಾಗಿದೆ.

ಜನನಿಬಿಡ ಪ್ರದೇಶದಲ್ಲಿರುವ ವಿದ್ಯಾರ್ಥಿನಿಲಯದಲ್ಲಿ ವ್ಯಾಸಂಗ ಮಾಡಲು ವಿದ್ಯಾರ್ಥಿಗಳಿಗೆ ತೊಂದರೆಯಾಗುತ್ತದೆ ಎಂದು ತೀರ್ಮಾನಿಸಿ ಸೂಕ್ತ ಪ್ರಶಾಂತ ಸ್ಥಳದಲ್ಲಿ ಹೊಸ ವಿದ್ಯಾರ್ಥಿನಿಲಯ ನಿರ್ಮಿಸಲು ಕಾರ್ಯಕಾರಿ ಸಮಿತಿ ಸೂಕ್ತ ನಿವೇಶನಕ್ಕಾಗಿ ಅಧ್ಯಕ್ಷ ಕೆ. ಲಕ್ಕಪ್ಪನವರ ಕಾಲದಿಂದಲೇ ಸರ್ಕಾರಕ್ಕೆ ಮನವಿ ಸಲ್ಲಿಸಲಾಗಿತ್ತು. ಪದೇ ಪದೇ ವಿನಂತಿಸಿ ಕೊಂಡಿದ್ದರೂ ಸಾಧ್ಯವಾಗಿರಲಿಲ್ಲ. ಶಾಸಕರು ಮತ್ತು ಕಾರ್ಯದರ್ಶಿಗಳಾಗಿದ್ದ ಆರ್. ನಾರಾಯಣರವರ ಸತತ ಪರಿಶ್ರಮದ ಫಲವಾಗಿ ಶ್ರೀ ಎಸ್. ಬಂಗಾರಪ್ಪನವರು ಮುಖ್ಯಮಂತ್ರಿಗಳಾಗಿದ್ದಾಗ ಕುಣಿಗಲ್ ರಸ್ತೆಯ ಕೆಂಪೇಗೌಡ ನಗರದಲ್ಲಿ ಉಪ್ಪಾರಹಳ್ಳಿಗೆ ಸೇರಿದ ಸರ್ವೆ ನಂ. ೩೬ರಲ್ಲಿ ಎರಡು ಎಕರೆ ಭೂಮಿಯನ್ನು ಸರ್ಕಾರ ಮಂಜೂರು ಮಾಡಿಕೊಟ್ಟಿತು. ಇಲ್ಲಿ ೧೦೦ ವಿದ್ಯಾರ್ಥಿಗಳಿಗೆ ವ್ಯಾಸಂಗಕ್ಕೆ ಅನುಕೂಲವಾಗುವಂತೆ ಇಪತ್ತೈದು ಕೊಠಡಿಗಳ ಹೊಸ ವಿದ್ಯಾರ್ಥಿನಿಲಯವನ್ನು ಅಂದಾಜು ೪೫ ಲಕ್ಷ ರೂಪಾಯಿಗಳ ವೆಚ್ಚದಲ್ಲಿ ನಿರ್ಮಾಣ ಮಾಡಲಾಯಿತು. ಇಲ್ಲಿ 'ಕುವೆಂಪು ವಿದ್ಯಾಕೇಂದ್ರ' ಸ್ಥಾಪಿಸಿ, ಆ ಮೂಲಕ ಶಾಲಾ ಕಾಲೇಜುಗಳನ್ನು ಆರಂಭಿಸಿ ಜನಾಂಗದ ಶೈಕ್ಷಣಿಕ ಉನ್ನತಿಗೆ ಅನುಕೂಲ ಕಲ್ಪಿಸಲು ತೀರ್ಮಾನ ಕೈಗೊಳ್ಳಲಾಯಿತು.

**ವೈ.ಕೆ. ರಾಮಯ್ಯ ಮತ್ತು ಆರ್. ನಾರಾಯಣ್:** ೧೬.೬.೧೯೯೦ರಂದು ವೃದ್ಧಾಪ್ಯದ ನಿಮಿತ್ತ ಎನ್. ಹುಚ್ಚಮಾಸ್ತಿಗೌಡರು ಸಂಘದ ತಮ್ಮ ಸ್ಥಾನಕ್ಕೆ ರಾಜಿನಾಮೆ ಸಲ್ಲಿಸಿದರು. ತೆರವಾದ ಅಧ್ಯಕ್ಷ ಸ್ಥಾನಕ್ಕೆ ಸೂಕ್ತ ಆಯ್ಕೆ ಎಂದು ಕಾರ್ಯಕಾರಿ ಸಮಿತಿ ಸದಸ್ಯರಾಗಿದ್ದ ವೈ.ಕೆ. ರಾಮಯ್ಯನವರನ್ನು ಸರ್ವಾನುಮತದಿಂದ ನೇಮಿಸಲಾಯಿತು. ಪಿ. ಚೌಡ್ರಿಶಂಕರ್‌ರವರು ಉಪಾಧ್ಯಕ್ಷರಾಗಿ ನೇಮಕರಾದರು. ಕಾರ್ಯದರ್ಶಿಗಳಾಗಿ ಹಿಂದೆ ಇದ್ದ ಆರ್. ನಾರಾಯಣ್‌ರವರು ಮುಂದುವರೆದರು. ಕುಣಿಗಲ್ ತಾಲ್ಲೂಕಿನಿಂದ ರಾಮಚಂದ್ರ ಪ್ರಸಾದರು, ತುರುವೇಕೆರೆ ತಾಲ್ಲೂಕಿನಿಂದ ಬಿ. ಬೆಟ್ಟಸ್ವಾಮಿಯವರು ಹೊಸದಾಗಿ ತಾಲ್ಲೂಕಿನ ಪ್ರತಿನಿಧಿಗಳಾಗಿ ನೇಮಕವಾದರೆ ಇನ್ನುಳಿದಂತೆ ೧೯೯೧,೯೭ರ ಅವಧಿಯಲ್ಲಿದ್ದ ಕಾರ್ಯಕಾರಿ ಸಮಿತಿಯೇ ಮುಂದುವರೆಯಿತು.

ವಕೀಲರಾಗಿ, ಶಾಸಕರಾಗಿ, ರಾಜ್ಯದ ಮಂತ್ರಿಯಾಗಿ ಉತ್ತಮ ಸಾಧನೆ ಮಾಡಿರುವ, ಸೈದ್ಧಾಂತಿಕವಾಗಿ ರಾಜಕಾರಣ ಮಾಡಿದ ದಿವಂಗತರಾದ ವೈ.ಕೆ. ರಾಮಯ್ಯನವರು ಜನಪರರು ಮತ್ತು ಪ್ರಗತಿಪರರೂ ಆಗಿದ್ದಾರೆ. ಇವರ ಮಾಂತ್ರಿಕ ಸ್ಪರ್ಶದಿಂದ ಸಂಘ ಬೌದ್ಧಿಕ ಹಾದಿಯಲ್ಲಿ ಮುನ್ನಡೆಯಬಹುದು ಎಂಬುದು ಎಲ್ಲರ ನಿರೀಕ್ಷೆಯಾಗಿತ್ತು. ಅಧ್ಯಕ್ಷರು

ಮತ್ತು ಕಾರ್ಯದರ್ಶಿಗಳು ಸಾರಥ್ಯದಲ್ಲಿ ಸಂಘ ಉದ್ದೇಶಿತ ಯೋಜನೆಗಳನ್ನು ಕಾರ್ಯರೂಪಕ್ಕೆ ತರಬಲ್ಲದು ಎಂಬುದು ಎಲ್ಲರ ಆಶಯಾಗಿತ್ತು. ಈ ಆಶಯವನ್ನು ಅವರು ನಿರಾಶೆಗೊಳಿಸಿಲ್ಲ.

ವೈ.ಕೆ. ರಾಮಯ್ಯನವರು ಅಧ್ಯಕ್ಷರಾದ ಮೇಲೆ ಎರಡನೆಯ ವಾಣಿಜ್ಯ ಮಳಿಗೆ ನಿರ್ಮಿಸಲು ಹಳೆಯ ವಿದ್ಯಾರ್ಥಿನಿಲಯದ ಒಂದು ಭಾಗವನ್ನು ಒಡೆಯಲಾಗಿ ಊಟ ವಸತಿಯನ್ನು ನಿಲ್ಲಿಸಲಾಗಿತ್ತು. ೧೯೯೭, ೯೮ ನೆಯ ಸಾಲಿನಿಂದ ವಿದ್ಯಾರ್ಥಿನಿಲಯದ ಊಟದ ವ್ಯವಸ್ಥೆಯನ್ನು ಮತ್ತೆ ಆರಂಭಿಸಲಾಗಿದೆ. ಕೆಂಪೇಗೌಡ ನಗರದಲ್ಲಿ ನಿರ್ಮಾಣಗೊಂಡಿದ್ದ ಹೊಸ ವಿದ್ಯಾರ್ಥಿನಿಲಯದ ಉಳಿದ ಕಾಮಗಾರಿ ಕೆಲಸವನ್ನು ಪೂರ್ಣಗೊಳಿಸಲಾಯಿತು. ವಿವಿಧ ತಾಲ್ಲೂಕುಗಳಲ್ಲಿ ಇರುವ ಒಕ್ಕಲಿಗ ಸಂಘಗಳನ್ನು ಪುನಶ್ಚೇತನಗೊಳಿಸುವ, ಪುನರ್‌ರಚಿಸುವ ಕೆಲಸ ನಡೆಯಿತು. ತಾಲ್ಲೂಕು ಸಮ್ಮೇಳನಗಳನ್ನು ಸಂಘಟಿಸಲಾಯಿತು.

ಇವೆಲ್ಲಕ್ಕೂ ತಿಲಕಪ್ರಾಯವಾಗಿ ದಿನಾಂಕ. ೯.೧೧.೧೯೯೭ರಂದು ತುಮಕೂರು ನಗರದಲ್ಲಿ ಜಿಲ್ಲಾ ಒಕ್ಕಲಿಗರ ಮಹಾ ಸಮ್ಮೇಳನವನ್ನು ನಡೆಸಲಾಯಿತು. ಆದಿ ಚುಂಚನಗಿರಿ ಮಹಾ ಸಂಸ್ಥಾನದ ಪೀಠಾಧ್ಯಕ್ಷರಾದ ಬಾಲಗಂಗಾಧರನಾಥ ಸ್ವಾಮಿಗಳು ಸಮ್ಮೇಳನದ ನೇತೃತ್ವ ವಹಿಸಿದ್ದರು. ಅಂದು ಸಂಘದ ಎರಡನೆಯ ವಾಣಿಜ್ಯ ಸಂಕೀರ್ಣ ಮತ್ತು ನೂತನ ವಿದ್ಯಾರ್ಥಿನಿಲಯದ ಉದ್ಘಾಟನೆ ಹಾಗೂ ಮೂರನೆಯ ವಾಣಿಜ್ಯ ಸಂಕೀರ್ಣ ಮತ್ತು ಉಚಿತ ವಿದ್ಯಾರ್ಥಿನಿಲಯಕ್ಕೆ ಶಂಕು ಸ್ಥಾಪನೆಮಾಡಲಾಯಿತು. ಜನಾಂಗದವರ ವಿವಾಹ ಸಮಾರಂಭ ನಡೆಸಲು ಅನುಕೂಲವಾಗುವಂತೆ ಕಲ್ಯಾಣ ಮಂದಿರದ ನಿರ್ಮಾಣ ಮತ್ತು ಹೆಣ್ಣು ಮಕ್ಕಳಿಗಾಗಿ ಉಚಿತ ವಿದ್ಯಾರ್ಥಿನಿಲಯ ನಿರ್ಮಾಣ ಯೋಜನೆಗಳ ಬಗ್ಗೆ ಕೈಗೊಳ್ಳುವ ಸಮ್ಮೇಳನದಲ್ಲಿ ಪ್ರತಿಜ್ಞೆ ಕೈಗೊಳ್ಳಲಾಯಿತು. 'ಕುವೆಂಪು ವಿದ್ಯಾಕೇಂದ್ರ'ದ ಆಶ್ರಯದಲ್ಲಿ ಶಾಲಾ ಕಾಲೇಜುಗಳನ್ನು ಸ್ಥಾಪಿಸುವ ಯೋಜನೆ ಇದ್ದು ಶಿಶುವಿಹಾರ, ಎಲ್‌ಕೆಜಿ, ಯುಕೆಜಿ, ಪೂರ್ವ ಪ್ರಾಥಮಿಕ ತರಗತಿ ಆರಂಭಿಸುವ ಮೂಲಕ ಮುಂದಿನ ಹೆಜ್ಜೆ ಇಡಲಾಯಿತು. ಮುಂದೆ ವೈದ್ಯಕೀಯ ಮತ್ತು ಇಂಜಿನಿಯರಿಂಗ್ ಕಾಲೇಜುಗಳನ್ನು ಸ್ಥಾಪಿಸುವ ಯೋಜನೆ ಇದೆ.

ಸಂಘದಲ್ಲಿ ಬೌದ್ಧಿಕ ವಿಭಾಗ, ಶೈಕ್ಷಣಿಕ ವಿಭಾಗ, ಆರ್ಥಿಕ ವಿಭಾಗ ಮತ್ತು ಆಧ್ಯಾತ್ಮಿಕ ವಿಭಾಗಗಳನ್ನು ಸ್ಥಾಪಿಸಿ ಸಾಹಿತ್ಯ, ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುವ ಮೂಲಕ ಇಡೀ ಜಿಲ್ಲೆಯ ಒಕ್ಕಲಿಗ ಜನಾಂಗದ ಗುಣಾತ್ಮಕ ಬೆಳವಣಿಗೆ ವೈ.ಕೆ. ರಾಮಯ್ಯನವರ ಅಧ್ಯಕ್ಷತೆಯ ಕಾರ್ಯಕಾರಿ ಸಮಿತಿಯು ಒಕ್ಕಲಿಗ ಸಂಘವನ್ನು ಮುನ್ನಡೆಸಿತ್ತು. ಈ ಎಲ್ಲಾ ಚಟುವಟಿಕೆಗಳನ್ನು ಪ್ರಾಮಾಣಿಕವಾಗಿ ಕಾರ್ಯರೂಪಕ್ಕೆ ತಂದಲ್ಲಿ ಜಿಲ್ಲಾ ಒಕ್ಕಲಿಗರ ಸಂಘಕ್ಕೆ ಹೊಸ ಚೈತನ್ಯ ಬಂದು ಜನಾಂಗದ ಆಶಾಕಿರಣವಾಗುವದರಲ್ಲಿ ಸಂದೇಹವಿಲ್ಲ.

**೭.೨. ತುಮಕೂರು ಜಿಲ್ಲೆಯ ತಾಲ್ಲೂಕು ಒಕ್ಕಲಿಗರ ಸಂಘಗಳು**

ಕರ್ನಾಟಕದ ದಕ್ಷಿಣ ಭಾಗದ ಜಿಲ್ಲೆಗಳಲ್ಲಿ ಒಂದಾದ ತುಮಕೂರು ಜಿಲ್ಲೆ ಬಯಲು ಸೀಮೆಯ ಪ್ರದೇಶವಾದರೂ ಕಲ್ಪತರು ನಾಡು ಎಂಬ ಹೆಸರು ಪಡೆದಿದೆ. ಕಾರಣ ಉತ್ತಮ ರೀತಿಯಲ್ಲಿ ಬೆಳೆಯುವ ತೆಂಗು, ರಾಜ್ಯದ ರಾಜಧಾನಿಗೆ ಹತ್ತಿರದಲ್ಲಿರುವ ತುಮಕೂರು ಜಿಲ್ಲೆ ಹತ್ತು ತಾಲ್ಲೂಕುಗಳನ್ನು ಒಳಗೊಂಡಿದೆ. ಅವುಗಳೆಂದರೆ ತುಮಕೂರು, ಕುಣಿಗಲ್, ತುರುವೇಕೆರೆ, ತಿಪಟೂರು, ಚಿಕ್ಕನಾಯಕನಹಳ್ಳಿ, ಗುಬ್ಬಿ, ಶಿರಾ, ಕೊರಟಗೆರೆ, ಮಧುಗಿರಿ, ಮತ್ತು ಪಾವಗಡ.

ಜಿಲ್ಲೆಯಲ್ಲಿ ಅಧಿಕ ಸಂಖ್ಯೆಯಲ್ಲಿರುವ ಒಕ್ಕಲಿಗ ಜನಾಂಗ ಕೆಲವು ತಾಲ್ಲೂಕುಗಳಲ್ಲಿ ಹೆಚ್ಚಿನ ಸಂಖ್ಯೆಯಲ್ಲಿದ್ದು, ಕೆಲವು ತಾಲ್ಲೂಕುಗಳಲ್ಲಿ ಸರಿಸಮವಾಗಿದ್ದರೆ, ಮತ್ತೆ ಕೆಲವು ತಾಲ್ಲೂಕುಗಳಲ್ಲಿ ಕಡಿಮೆ ಸಂಖ್ಯೆಯಲ್ಲಿದ್ದಾರೆ. ಒಕ್ಕಲಿಗ ಜನಾಂಗ ತಾಲ್ಲೂಕುಗಳಲ್ಲಿ ಸಂಘಗಳನ್ನು ರಚಿಸಿಕೊಂಡು ಜನಾಂಗಕ್ಕೆ ಅಗತ್ಯ ಅನುಕೂಲಗಳಾದ ವಿದ್ಯಾಭ್ಯಾಸ, ವಿದ್ಯಾರ್ಥಿಗಳಿಗೆ ವಿದ್ಯಾರ್ಥಿನಿಲಯಗಳು, ವ್ಯಾಪಾರ ಮಳಿಗೆಗಳನ್ನು ಸ್ಥಾಪಿಸಿ ಮತ್ತು ಇತರ ಕಾರ್ಯಗಳನ್ನು ಕೈಗೊಂಡು ಜನಾಂಗದ ಪ್ರಗತಿಗೆ ಶ್ರಮಿಸುತ್ತಿವೆ. ಇತ್ತೀಚೆಗೆ ಎಲ್ಲಾ ತಾಲ್ಲೂಕು ಸಂಘಗಳು ಜಿಲ್ಲಾ ಸಂಘದ ಜೊತೆಗೆ ಸಂಪರ್ಕ ಇಟ್ಟುಕೊಂಡು, ಉತ್ತಮ ಮಟ್ಟದಲ್ಲಿ ಜನಾಂಗಕ್ಕೆ ಸೇವೆ ಸಲ್ಲಿಸುವ ನಿಟ್ಟಿನಲ್ಲಿ ಶ್ರಮಿಸುತ್ತಿವೆ. ವಿವಿಧ ತಾಲ್ಲೂಕು ಸಂಘಗಳ ವಿವರ ಕೆಳಗೆ ತಿಳಿಸಲಾಗಿದೆ.

**ಶಿರಾ ತಾಲ್ಲೂಕು:**

ಶಿರಾ ತಾಲ್ಲೂಕಿನಲ್ಲಿ ಸುಮಾರು ೮೦ ವರ್ಷಗಳ ಹಿಂದೆ ಒಕ್ಕಲಿಗ ಕುಂಚಟಿಗರ ಸಂಘವು ಸ್ಥಾಪನೆಯಾಯಿತೆಂದು ಹಿರಿಯರ ಹೇಳಿಕೆ. ಜನಾಂಗದ ಮುಖಂಡರ ಸಮ್ಮುಖದಲ್ಲಿ ಹೆಳಿಗೆರೆ ಚಿಕ್ಕ ತಿಮ್ಮಜ್ಜನವರನ್ನು ಪ್ರಥಮ ಅಧ್ಯಕ್ಷರನ್ನಾಗಿ ಆರಿಸಿ ನಂತರ ಕಾರ್ಯಕಾರಿ ಮಂಡಳಿಯನ್ನು ರಚಿಸಿಕೊಂಡು ಸಂಘದ ಅಭಿವೃದ್ಧಿಗೆ ಶ್ರಮಿಸಿದರು. ಇವರ ನಂತರ ಅಧ್ಯಕ್ಷರುಗಳಾಗಿ ವರ್ತಕರಾದ ಸೂರಪ್ಪ, ಈರಪ್ಪ, ಮಾಲಿ ಚಿಕ್ಕಪಾಪಣ್ಣ, ಆರ್.ರಂಗನಾಥ್ ಮತ್ತು ಚಿನ್ನಪ್ಪನವರುಗಳು ಸಂಘದ ಅಭಿವೃದ್ಧಿಗೆ ಶ್ರಮಿಸಿದ್ದಾರೆ. ತದನಂತರ ೧೯೭೯ -೮೦ರಲ್ಲಿ ಸಂಘವನ್ನು ನೋಂದಣಿ ಮಾಡಿ ಅಗರಬತ್ತಿ ಮಾಲೀಕರಾದ ರಾಮಕೃಷ್ಣಪ್ಪನವರನ್ನು ಅಧ್ಯಕ್ಷರನ್ನಾಗಿ ಮಾಡಿ, ವೈದ್ಯರಾದ ಡಾ.ಚಿಕ್ಕಣ್ಣನವರನ್ನು ಕಾರ್ಯದರ್ಶಿಯಾಗಿ ನೇಮಿಸಿ, ಕಾರ್ಯಕಾರಿ ಸಮಿತಿಯನ್ನು ರಚಿಸಿ ಒಕ್ಕಲಿಗ ಜನಾಂಗದ ಶ್ರಮದಿಂದ ಸಂಘದ ಹೆಸರಿನಲ್ಲಿದ್ದ ನಿವೇಶನದಲ್ಲಿ ಭವ್ಯ ವಿದ್ಯಾರ್ಥಿನಿಲಯವನ್ನು ನಿರ್ಮಿಸಲಾಯಿತು. ಸಂಘವು ೧೯೮೩ರಲ್ಲಿ ಸಭೆ ಸೇರಿ ಶ್ರೀ ಪಿ.ಎಂ.ರಂಗನಾಥರವರನ್ನು ಅಧ್ಯಕ್ಷರನ್ನಾಗಿಯೂ, ಡಾ.ಕೆ.ರಾಮಕೃಷ್ಣಪ್ಪನವರನ್ನು ಕಾರ್ಯದರ್ಶಿಗಳಾಗಿಯೂ ಆಯ್ಕೆ ಮಾಡಲಾಯಿತು. ಇವರುಗಳ ಅವಧಿಯಲ್ಲಿ ಅನ್ನಪೂರ್ಣನಿಲಯ ಹಾಗೂ ಅಂಗಡಿ ಮಳಿಗೆಗಳ ವಿಸ್ತರಣೆ, ಪದವಿಪೂರ್ವ ಕಾಲೇಜು, ಪ್ರಥಮ ದರ್ಜೆ ಕಾಲೇಜು ಮತ್ತು ವೃತ್ತಿ ಶಿಕ್ಷಣ ಕಾಲೇಜುಗಳನ್ನು ನಡೆಸುತ್ತಾ ಕಾಲೇಜುಗಳಿಗೆ ವ್ಯವಸ್ಥಿತವಾದ ಕಟ್ಟಡ, ಗ್ರಂಥಾಲಯ, ಪ್ರಯೋಗ ಶಾಲೆ, ಪೀಠೋಪಕರಣಗಳನ್ನು ಒದಗಿಸಿ ಗ್ರಾಮಾಂತರ ವಿದ್ಯಾರ್ಥಿಗಳಿಗೆ ವಿದ್ಯಾಬ್ಯಾಸಕ್ಕೆ ಅನುಕೂಲವಾಗುವಂತೆ ಮಾಡಲಾಯಿತು. ಒಟ್ಟಿನಲ್ಲಿ ಒಕ್ಕಲಿಗ ಜನಾಂಗದ ಹಿತ ದೃಷ್ಟಿಯಿಂದ ಶಿರಾ ತಾಲ್ಲೂಕಿನಲ್ಲಿ ಸಂಘವು ನಿಸ್ವಾರ್ಥ ಸೇವೆ ಸಲ್ಲಿಸುತ್ತಾ ಕಾರ್ಯ ನಿರ್ವಹಿಸುತ್ತಿದೆ.

**ಗುಬ್ಬಿ ತಾಲ್ಲೂಕು**

೧೯೮೩ನೇ ಡಿಸೆಂಬರ್ ೨೬ನೇ ತಾರೀಖು ಒಕ್ಕಲಿಗ ಜನಾಂಗದ ಪ್ರಮುಖರು ಒಟ್ಟಿಗೆ ಸೇರಿ ವೈ.ಗಂಗವೀರಯ್ಯ ಅವರ ಅಧ್ಯಕ್ಷತೆಯಲ್ಲಿ ಸಭೆ ನಡೆಸಿ ಸಂಘ ಸ್ಥಾಪಿಸುವ ತೀರ್ಮಾನ ಕೈಗೊಂಡು ಸಭೆಯಲ್ಲಿ ತೊರೆಹಳ್ಳಿಯ ಟಿ.ಆರ್.ರಾಮಸ್ವಾಮಿಯವರನ್ನು ಅಧ್ಯಕ್ಷರನ್ನಾಗಿ, ಬಿ.ಎಸ್.ವೀರಣ್ಣಗೌಡರು ಮತ್ತು ಎಂ.ಜಿ.ಹೊನ್ನಗಂಗಯ್ಯ ಇವರನ್ನು ಉಪಾಧ್ಯಕ್ಷರನ್ನಾಗಿ, ಎಂ.ಎನ್.ಕರಿಯಪ್ಪ ಕೊಂಡ್ಲಿ ಇವರನ್ನು ಕಾರ್ಯದರ್ಶಿಗಳನ್ನಾಗಿ, ಜಿ.ಎಸ್.ಗೋಪಾಲಗೌಡರು ಚಿಕ್ಕಚೆಂಗಾವಿ ಇವರನ್ನು ಸಹ ಕಾರ್ಯದರ್ಶಿಯನ್ನಾಗಿ ನೇಮಿಸಿ ಏಳು ಮಂದಿ ಸದಸ್ಯರುಗಳನ್ನೊಳಗೊಂಡ ಕಾರ್ಯಕಾರಿ ಸಮಿತಿಯನ್ನು ರಚಿಸಿದರು. ಶ್ರೀ ಸಿದ್ಧಲಿಂಗೇಗೌಡರು ಸಂಘದ ಮಹಾ

ಪೋಷಕರಾದರು. ಸಂಘವನ್ನು ೮.೩.೮೪ರಂದು ನೋಂದಣಿ ಮಾಡಿಸಿ ಸಂಘದಿಂದ ವಿದ್ಯಾಸಂಸ್ಥೆ ಮತ್ತು ವಿದ್ಯಾರ್ಥಿನಿಲಯಗಳನ್ನು ತೆರೆಯುವ ತೀರ್ಮಾನ ಮಾಡಲಾಯಿತು. ಆದರೆ ೧೯೯೬ನೇ ಸಾಲಿನವರೆಗೂ ಯಾವುದೇ ಚಟುವಟಿಕೆ ಇಲ್ಲದೆ, ಸಂಘವು ಪುನಃಶ್ಚೇತನಗೊಂಡದ್ದು ೧೯೯೭ ಸೆಪ್ಟೆಂಬರ್ ತಿಂಗಳಿನಲ್ಲಿ ಬಾಲಗಂಗಾಧರನಾಥ ಸ್ವಾಮೀಜಿಯವರ ನೇತೃತ್ವದಲ್ಲಿ ಗುಬ್ಬಿ ತಾಲ್ಲೂಕು ಒಕ್ಕಲಿಗರ ಸಮ್ಮೇಳನವನ್ನು ವೈಭವಪೂರ್ವಕವಾಗಿ ನಡೆಸಲಾಯಿತು. ದಿನಾಂಕ.೮.೯.೯೭ರಂದು ಕಾರ್ಯಕಾರಿ ಸಮಿತಿ ಸಭೆ ಸೇರಿ ಹಿಂದಿನ ಅಧ್ಯಕ್ಷರಾದ ಟಿ.ಆರ್.ರಾಮಸ್ವಾಮಿ ಅವರ ರಾಜೀನಾಮೆಯಿಂದ ತೆರವಾದ ಸ್ಥಾನಕ್ಕೆ ಮಾವಿನ ಹಳ್ಳಿ ವೀರಣ್ಣಗೌಡರನ್ನು ಅಧ್ಯಕ್ಷರನ್ನಾಗಿಯೂ, ಕರಿಯಪ್ಪ ಅವರನ್ನು ಕಾರ್ಯದರ್ಶಿಯನ್ನಾಗಿ, ರಾಮೇಗೌಡರನ್ನು ಖಜಾಂಚಿಯನ್ನಾಗಿ ಆಯ್ಕೆ ಮಾಡಿ ಸದಸ್ಯರುಗಳನ್ನು ನೇಮಿಸಿ ಕಾರ್ಯಕಾರಿ ಸಮಿತಿಯನ್ನು ಪುನರ್ ರಚಿಸಲಾಯಿತು.

ಇಂದಿನ ಸಂಘವು ಗ್ರಾಮಾಂತರ ವಿದ್ಯಾರ್ಥಿಗಳಿಗೆ ಅನುಕೂಲವಾಗುವಂತೆ ವಿದ್ಯಾರ್ಥಿನಿಲಯ ನಿರ್ಮಿಸಿ ಜನಾಂಗಕ್ಕೆ ಅನುಕೂಲವಾಗುವಂತೆ ಕಾರ್ಯೋನ್ಮುಖವಾಗಿದೆ.

**ಮಧುಗಿರಿ ತಾಲ್ಲೂಕು**

ಮಧುಗಿರಿ ತಾಲ್ಲೂಕಿನ ಒಕ್ಕಲಿಗರ ಸಂಘವು ೧೯೩೩ರ ಹಿಂದೆಯೆ ಮಾನ್ಯ ಮಾಲಿಮರಿಯಪ್ಪ ಮತ್ತು ಹಂಚೆರಪ್ಪನವರ ನೇತೃತ್ವದಲ್ಲಿ ವಿದ್ಯಾರ್ಥಿನಿಲಯವನ್ನು ಸ್ಥಾಪಿಸಲು ದಿನಾಂಕ.೨೧.೩.೩೩ರಲ್ಲಿ ಆಗಿನ ಮೈಸೂರು ರಾಜ್ಯದ ದಿವಾನರಾಗಿದ್ದ ಸರ್. ಮಿರ್ಜಾ ಇಸ್ಮಾಯಿಲ್ ಇವರ ಅಮೃತ ಹಸ್ತದಿಂದ ಶಂಕು ಸ್ಥಾಪನೆಯನ್ನು ನೆರವೇರಿಸಿದರು. ಈ ಮಧ್ಯದಲ್ಲಿ ಕೆಲವು ತೊಂದರೆಗಳಿಂದ ಮಾಲಿ ಮರಿಯಪ್ಪನವರು ತಮ್ಮ ಸ್ವಂತ ಮನೆಯಲ್ಲಿಯ ಸಿ.ಚಿಕ್ಕಪ್ಪನವರ ನೇತೃತ್ವದಲ್ಲಿ ವಿದ್ಯಾರ್ಥಿನಿಲಯವನ್ನು ನಡೆಸುತ್ತಿದ್ದರು. ಈ ವಿದ್ಯಾರ್ಥಿನಿಲಯದಲ್ಲಿ ಈಗಿನ ಐ.ಎ.ಎಸ್.ಅಧಿಕಾರಿಯಾದ ಸಿ. ಚಿಕ್ಕಣನವರು ಸಹ ವಿದ್ಯಾಭ್ಯಾಸ ಮಾಡಿರುತ್ತಾರೆ. ಅನೇಕ ಎಡರು ತೊಡರುಗಳ ಮಧ್ಯೆ ವಿದ್ಯಾರ್ಥಿನಿಲಯ ಕಟ್ಟಡ ನಿರ್ಮಾಣವಾಗದೆ ಇದ್ದದ್ದು ೧೯೯೨ರಲ್ಲಿ ಪುನಃ ಬಾಲಗಂಗಾಧರನಾಥ ಸ್ವಾಮೀಜಿಯವರಿಂದ ಶಂಕು ಸ್ಥಾಪನೆ ನೆರವೇರಿಸಿ, ಎರಡೇ ವರ್ಷಗಳಲ್ಲಿ ಕಟ್ಟಡವನ್ನು ನಿರ್ಮಿಸಿ ೯೬-೯೭ನೇ ಸಾಲಿನಿಂದ ಸುಮಾರು ೫೦ ವಿದ್ಯಾರ್ಥಿಗಳಿಗೆ ಉಚಿತ ಊಟ ಮತ್ತು ವಸತಿ ವ್ಯವಸ್ಥೆ ಮಾಡಲಾಗಿದೆ. ಇನ್ನು ಮುಂದೆ ಮಹಿಳೆಯರಿಗೆ ವಿದ್ಯಾರ್ಥಿನಿಲಯ, ಮಕ್ಕಳಿಗೆ ಪ್ರಾಥಮಿಕ ಶಾಲೆ ತೆರೆಯಲು ಯೋಜಿಸಲಾಯಿತು. ೫.೬.೯೬ರಂದು ಎಲ್ಲಾ ಒಳ ಪಂಗಡಗಳನ್ನು ಒಟ್ಟಿಗೆ ಸೇರಿಸಿ ಒಕ್ಕಲಿಗರ ಅಧ್ಯಕ್ಷರಾಗಿ ಪಿ.ನಾಗಯ್ಯ, ಉಪಾಧ್ಯಕ್ಷರಾಗಿ ಎಂ.ಬಿ.ವೀರಣ್ಣಗೌಡ, ಟಿ.ಗೋವಿಂದರಾಜು, ಬಿ.ವಿ.ನಾಗರಾಜು, ಜಿ.ವಿ.ಚಿಕ್ಕರಂಗಪ್ಪ, ಎಂ.ಎನ್.ನಾಗಭೂಷಣ, ಖಜಾಂಚಿಯಾಗಿ, ಪಾ.ಜಿ.ಕೆ.ಜಯರಾಮು, ಪ್ರಧಾನ ಕಾರ್ಯದರ್ಶಿಯಾಗಿ ಸಿ.ಎಂ.ವೀರಣ್ಣ, ಕಚೇರಿ ಕಾರ್ಯದರ್ಶಿಯಾಗಿ ಹೆಚ್.ಎಲ್.ಲಿಂಗಣ್ಣನವರು ಕಾರ್ಯ ನಿರ್ವಹಿಸಿ ಸಂಘವನ್ನು ಮುನ್ನಡೆಸಿದರು. ಇಂದು ಶ್ರೀ ಶರತ್‌ಚಂದ್ರರವರ ಅಧ್ಯಕ್ಷತೆಯಲ್ಲಿ ಸಂಘವು ಮುನ್ನಡೆಯುತ್ತಿದೆ.

**ಪಾವಗಡ ತಾಲ್ಲೂಕು:** ಈ ತಾಲ್ಲೂಕಿನಲ್ಲಿ ಸುಮಾರು ಶೇಕಡ ೫೫ರಷ್ಟು ಒಕ್ಕಲಿಗ ಜನಾಂಗದವರು ಇದ್ದಾರೆ. ಹಿಂದೆ ಇಲ್ಲಿನ ಒಳ ಪಂಗಡಗಳಲ್ಲೇ ಸಂಘಗಳನ್ನು ರಚಿಸಿಕೊಂಡಿದ್ದರು ದಿ.೭.೭.೯೬ರಂದು ಎಲ್ಲಾ ಸಂಘಗಳು ಒಟ್ಟಿಗೆ ಸೇರಿ ಒಕ್ಕಲಿಗರ ಸಂಘ ಎಂದು ನೋಂದಣಿ ಮಾಡಿಸಿ, ಅಧಕ್ಷರಾಗಿ ಶ್ರೀ ಜಿ.ನರಸಿಂಹಮೂರ್ತಿ, ಉಪಾಧ್ಯಕ್ಷರಾಗಿ ಜುಂಜಪ್ಪ, ಕಾರ್ಯದರ್ಶಿಯಾಗಿ ಶಿವಪ್ರಸಾದ್ ಮತ್ತು ಖಜಾಂಚಿಯಾಗಿ

ಬಿ.ಹೆಚ್.ಕೃಷ್ಣಾರೆಡ್ಡಿಯವರನ್ನು ಆರಿಸಿ ಸಮಿತಿ ರಚಿಸಲಾಯಿತು. ಸಂಘವು ೧೫.೯.೯೭ರಂದು ಬಾಲಗಂಗಾಧರನಾಥ ಸ್ವಾಮೀಜಿಯವರ ನೇತೃತ್ವದಲ್ಲಿ ತಾಲ್ಲೂಕು ಮಹಾ ಸಮ್ಮೇಳನವನ್ನು ವೈಭದಿಂದ ನೆರವೇರಿಸಿತು. ಸಂಘವು ಬಾಡಿಗೆ ಕಟ್ಟಡದಲ್ಲಿ ವಿದ್ಯಾರ್ಥಿ ನಿಲಯವನ್ನು ಸ್ಥಾಪಿಸಿ ಗ್ರಾಮೀಣ ಪ್ರದೇಶದ ಬಡ ಮಕ್ಕಳಿಗೆ ಶೈಕ್ಷಣಿಕವಾಗಿ ಅಭಿವೃದ್ಧಿಹೊಂದಲು ಸಹಕಾರಿಯಾಗಿದೆ. ಜೊತೆಗೆ ಸಂಘವು ಅನೇಕ ದಾನಿಗಳು ಸಹಾಯ ಮಾಡಲು ಮುಂದೆ ಬಂದಿರುವುದರಿಂದ ವಿದ್ಯಾರ್ಥಿ ನಿಲಯದ ನಿರ್ಮಾಣ, ಶಾಲೆಗಳನ್ನು ಪ್ರಾರಂಭಿಸಿ ಜನಾಂಗಕ್ಕಾಗಿ ದುಡಿಯಲು ಕಾರ್ಯೋನ್ಮುಖವಾಗಿದೆ.

**ಕೊರಟಗೆರೆ ತಾಲ್ಲೂಕು:** ಕೊರಟಗೆರೆ ತಾಲ್ಲೂಕಿನಲ್ಲಿ ಒಕ್ಕಲಿಗರ ಸಂಘವು ಹನುಮಂತರೆಡ್ಡಿ, ವಡ್ಡಗೆರೆ ನಾಗರಾಜು, ಮತ್ತು ಸಣ್ಣಪ್ಪ ಇವರ ನೇತೃತ್ವದಲ್ಲಿ ಅಸ್ತಿತ್ವಕ್ಕೆ ಬಂದು ಕಾರ್ಯೋನ್ಮುಖವಾಗಿದೆ.

**ಚಿಕ್ಕನಾಯಕನಹಳ್ಳಿ ತಾಲ್ಲೂಕು**

ಕೆಲವೇ ತಿಂಗಳ ಹಿಂದೆ ಚಿಕ್ಕನಾಯಕನಹಳ್ಳಿ ತಾಲ್ಲೂಕಿನಲ್ಲಿ ಜನಾಂಗದ ಪ್ರಮುಖರು ಸಭೆ ಸೇರಿ ಸಂಘವನ್ನು ರಚಿಸಿರುತ್ತಾರೆ. ಸಂಘದ ಅಧ್ಯಕ್ಷರಾಗಿ ಬಿ.ಎಸ್.ನಿಂಗಪ್ಪ ಎ.ಎ.ಹಳ್ಳಿ, ಉಪಾಧ್ಯಕ್ಷರಾಗಿ ಆರ್.ರಂಗಸ್ವಾಮಿ ಮತ್ತು ಬಿ ಚಿಕ್ಕಣ್ಣ, ಕಾರ್ಯದರ್ಶಿಯಾಗಿ ಜಿ.ಶ್ರೀನಿವಾಸಮೂರ್ತಿ, ನಾರಾಯಣಗೌಡ, ಮತ್ತು ಗೋಪಾಲ್, ಖಜಾಂಚಿಯಾಗಿ ಶ್ರೀ ಜಯಚಂದ್ರಸಿದ್ಧೇಶ್ವರ ಬಸ್ ಮಾಲಿಕರು ತಿಮ್ಮನಹಳ್ಳಿ ಇವರುಗಳನ್ನು ಚುನಾಯಿಸಿ ಕಾರ್ಯಕಾರಿ ಸಮಿತಿಯನ್ನು ರಚಿಸಿ ಸಂಘವು ವಿದ್ಯಾರ್ಥಿನಿಲಯದ ನಿರ್ಮಾಣ ಮತ್ತು ಜನಾಂಗದ ಪುರೋಭಿವೃದ್ಧಿಗೆ ದುಡಿಯಲು ಕಂಕಣ ತೊಟ್ಟಿದೆ.

**ತುರುವೇಕೆರೆ ತಾಲ್ಲೂಕು**

ತುರುವೇಕೆರೆ ತಾಲ್ಲೂಕಿನಲ್ಲಿ ೧೯೮೭ರಲ್ಲಿ ಕೆ.ಎಲ್.ರಾಮೇಗೌಡ ಮತ್ತು ಶಿವಣ್ಣ ಇವರ ನೇತೃತ್ವದಲ್ಲಿ ಸಂಘ ಪ್ರಾರಂಭವಾಗಿ ೧೯೯೩ರವರೆಗೆ ಯಾವುದೇ ಚಟುವಟಿಕೆ ಇಲ್ಲದಿದ್ದರೂ ನಂತರ ಸ್ವಾಗತ ಸಮಿತಿ ರಚಿಸಿ ಸ್ವಾಮೀಜಿಯವರ ನೇತೃತ್ವದಲ್ಲಿ ಮೂರು ದಿನಗಳ ಕಾರ್ಯಕ್ರಮ ನಡೆಸಿ ಸಂಘವನ್ನು ಪುನಃಶ್ಚೇತನಗೊಳಿಸಲಾಯಿತು. ಆ ಸಂದರ್ಭದಲ್ಲಿ ಡಿ.ಎಂ.ನಂಜುಡಪ್ಪನವರು ಅಧ್ಯಕ್ಷರಾಗಿ, ಪುಟ್ಟರಂಗಪ್ಪನವರು ಕಾರ್ಯದರ್ಶಿಯಾಗಿ, ಪಿ.ಹೆಚ್.ಧನಪಾಲರನ್ನು ಖಜಾಂಚಿಯಾಗಿ ನೇಮಿಸಲಾಯಿತು. ಈ ಅವಧಿಯಲ್ಲಿ ಸಂಘಕ್ಕೆ ಕಟ್ಟಡ ನಿರ್ಮಿಸುವ ತೀರ್ಮಾನ ಮಾಡಲಾಯಿತು. ೧೯೯೭ರಲ್ಲಿ ಕಾರ್ಯಕಾರಿ ಸಮಿತಿಯನ್ನು ಪುನರ್ ರಚಿಸಿ ಅಧ್ಯಕ್ಷರಾಗಿ ಧನಪಾಲ್, ಉಪಾಧ್ಯಕ್ಷರಾಗಿ ಗಂಗರಾಜು, ಎಸ್.ಮುದ್ದೇಗೌಡ, ಕಾರ್ಯದರ್ಶಿಯಾಗಿ ಪುಟ್ಟರಂಗಪ್ಪ, ಖಜಾಂಚಿಯಾಗಿ ಹೆಚ್.ಆರ್.ರಾಮೇಗೌಡ ಇವರನ್ನು ನೇಮಿಸಿ ಸ್ವಾಮಿಜಿಯವರ ಹೆಸರಿನಲ್ಲಿ ಸಮುದಾಯ ಭವನದ ಕಟ್ಟಡವನ್ನು ಪ್ರಾರಂಭಿಸಲಾಯಿತು. ಸಂಘವು ವಿದ್ಯಾರ್ಥಿನಿಲಯ ಸ್ಥಾಪಿಸುವ, ಬಡ ವಿದ್ಯಾರ್ಥಿಗಳಿಗೆ ಉಚಿತ ಶಿಕ್ಷಣ ನೀಡುವ, ಸಾಮೂಹಿಕ ವಿವಾಹ, ಪ್ರತಿಭಾ ಪುರಸ್ಕಾರ ಮುಂತಾದ ಕಾರ್ಯಗಳನ್ನು ಕೈಗೊಂಡಿದೆ.

**ತಿಪಟೂರು ತಾಲ್ಲೂಕು**

ತೆಂಗಿನಕಾಯಿಗೆ ಹೆಸರಾಗಿರುವ ತಿಪಟೂರು ತಾಲ್ಲೂಕಿನಲ್ಲಿ ಒಕ್ಕಲಿಗ ಜನಾಂಗವು ರಾಜಕೀಯವಾಗಿ ಮತ್ತು ಶೈಕ್ಷಣಿಕವಾಗಿ ಉನ್ನತಿ ಪಡೆದಿದೆ. ೧೯೪೧ರಲ್ಲಿ ಬಡ ವಿದ್ಯಾರ್ಥಿಗಳಿಗೆ ಅನುಕೂಲವಾಗುವಂತೆ ಜನಾಂಗದ

ಪ್ರಮುಖರು ಒಟ್ಟಿಗೆ ಸೇರಿ ವಿದ್ಯಾರ್ಥಿನಿಲಯವನ್ನು ವಡ್ಡಗಲ್ಲಪ್ಪ ಅವರ ನೇತೃತ್ವದಲ್ಲಿ ಅನೇಕ ಸದಸ್ಯರುಗಳೊಂದಿಗೆ ಪ್ರಾರಂಭಿಸಿದರು. ನಂತರ ೧೯೬೨ರಲ್ಲಿ ರಂಗಪ್ಪನವರ ನೇತೃತ್ವದಲ್ಲಿ ವಿದ್ಯಾರ್ಥಿನಿಲಯಕ್ಕೆ ಪುನಶ್ಚೇತನ ನೀಡಲಾಯಿತು.

೧೯೭೫ರಲ್ಲಿ ಸಂಘಕ್ಕೆ ಒಂದು ಎಕರೆ ಒಂದು ಗುಂಟೆ ಜಾಗವನ್ನು ಜನಾಂಗದ ಪ್ರಮುಖರು ಧನ ಸಹಾಯ ಮಾಡುವ ಮುಖಾಂತರ ನಿವೇಶನ ಮಂಜೂರು ಮಾಡಿಕೊಳ್ಳಲಾಯಿತು. ೧೯೯೬ರಲ್ಲಿ ವಿದ್ಯಾರ್ಥಿನಿಲಯದ ಶಂಕುಸ್ಥಾಪನೆಯನ್ನು ನೆರವೇರಿಸಿ ಜನಾಂಗದ ಪ್ರಮುಖರ ಸಹಾಯದಿಂದ ವಿದ್ಯಾರ್ಥಿನಿಲಯದ ಕಟ್ಟಡ ಕಟ್ಟಲು ತೀರ್ಮಾನಿಸಲಾಯಿತು. ೧೯೯೭ರಲ್ಲಿ ಪರಮಪೂಜ್ಯ ಶ್ರೀ ಬಾಲಗಂಗಾಧರನಾಥ ಸ್ವಾಮೀಜಿಯವರ ನೇತೃತ್ವದಲ್ಲಿ ಎಂ.ನಾರಾಯಣಗೌಡ ಮತ್ತು ಕಾರ್ಯಕಾರಿ ಸಮಿತಿಯ ಸದಸ್ಯರುಗಳನ್ನೊಳಗೊಂಡಂತೆ ಕಾರ್ಯಕ್ರಮ ಏರ್ಪಡಿಸಲಾಗಿತ್ತು. ಅಂದು ಕನಕಪುರ ಲೋಕಸಭಾ ಸದಸ್ಯರಾಗಿದ್ದ ಹೆಚ್.ಡಿ.ಕುಮಾರಸ್ವಾಮಿ ವಿದ್ಯಾರ್ಥಿನಿಲಯದ ಉದ್ಘಾಟನೆ ನೆರವೇರಿಸಿರುತ್ತಾರೆ.

ಸಂಘವು ಜನಾಂಗದ ಅಭಿವೃದ್ಧಿಗೆ ಅನೇಕ ಕಾರ್ಯಕ್ರಮಗಳನ್ನು ಕೈಗೊಂಡಿದ್ದು ಹಾಲಿ ಅಧ್ಯಕ್ಷರಾಗಿರುವ ಎಂ.ಸಿ.ನಾರಾಯಣಗೌಡರ ಸೇವೆ ಸಂಘಕ್ಕೆ ಅಮೂಲ್ಯ. ಸದ್ಯದಲ್ಲಿ ಸಂಘದಲ್ಲಿ ಇವರ ನೇತೃತ್ವದಲ್ಲಿ ಜಿ.ಟಿ.ಶಂಕರೇಗೌಡರು ಪ್ರಧಾನ ಕಾರ್ಯದರ್ಶಿಯಾಗಿ, ಕೆ.ಆರ್.ಇಂದ್ರಕುಮಾರ್ ಸಹ ಕಾರ್ಯದರ್ಶಿಯಾಗಿ ಮತ್ತು ಆರ್.ರಂಗಸ್ವಾಮಿ ಇತರ ಸದಸ್ಯರೊಂದಿಗೆ ಸಂಘವು ಶ್ರೇಯೋಭಿವೃದ್ಧಿಗೆ ಶ್ರಮಿಸುತ್ತಿದೆ.

**ಕುಣಿಗಲ್ ತಾಲ್ಲೂಕು**

ಹೆಚ್ಚಿನ ಸಂಖ್ಯೆಯಲ್ಲಿ ಒಕ್ಕಲಿಗರೆ ಇರುವ ಕುಣಿಗಲ್ ತಾಲ್ಲೂಕಿನ ಒಕ್ಕಲಿಗರ ಸಂಘವು ೧೯೨೮ರಲ್ಲಿ ಪ್ರಾರಂಭವಾಯಿತು. ಇಲ್ಲಿಯವರೆವಿಗೂ ಸಂಘದ ಅಭಿವೃದ್ಧಿಗೆ ಜನಾಂಗದ ಹಿರಿಯ ಮುಖಂಡರು, ರಾಜಕಾರಣಿಗಳು ಶ್ರಮಿಸಿದ್ದಾರೆ. ಸಂಘದ ವತಿಯಿಂದ ಪ್ರಾಥಮಿಕ ಮತ್ತು ಪ್ರೌಢಶಾಲೆಗಳನ್ನು ಸ್ಥಾಪಿಸಲಾಗಿದೆ. ಶೈಕ್ಷಣಿಕವಾಗಿ ಈ ಶಾಲೆಗಳು ನಿವೃತ್ತ ಸಾರ್ವಜನಿಕ ಶಿಕ್ಷಣ ಇಲಾಖೆಯ ಉಪ ನಿರ್ದೇಶರಾದ ಶ್ರೀ ನರಸಿಂಹಯ್ಯನವರ ಮಾರ್ಗದರ್ಶನದಲ್ಲಿ ನಡೆಯುತ್ತವೆ. ಸಂಘವು ಕುಣಿಗಲ್‌ನ ಬಿ.ಎಂ.ರಸ್ತೆಯಲ್ಲಿ ಭವ್ಯವಾದ ವ್ಯಾಪಾರ ಮಳಿಗೆಯನ್ನು ಹೊಂದಿದೆ. ಸಂಘವು ಮುಂದೆ ಜನಾಂಗದ ಬಡ ವಿದ್ಯಾರ್ಥಿಗಳಿಗೆ ಅನುಕೂಲವಾಗುವಂತೆ ವಿದ್ಯಾರ್ಥಿನಿಲಯ ನಿರ್ಮಿಸುವ ಉದ್ದೇಶ ಹೊಂದಿದೆ. ತಾಲ್ಲೂಕಿನ, ಯಲಿಯೂರು, ಕಗ್ಗರೆ, ಕೊಂಬಿ, ಹೊನಮಾಚನಹಳ್ಳಿಗಳಲ್ಲಿ ಜನಾಂಗದ ಹಿರಿಯರು ಸ್ಥಾಪಿರುವ ಪ್ರೌಢಶಾಲೆಗಳು ನಡೆಯುತ್ತಿವೆ. ಸದ್ಯದಲ್ಲಿ ಮಾಜಿ ಶಾಸಕರಾದ ಶ್ರೀ ಅಂದಾನಯ್ಯ ಇವರು ಅಧ್ಯಕ್ಷರಾಗಿ ಹೆಚ್.ವಿ.ಗೋವಿಂದಯ್ಯ ಇವರು ಕಾರ್ಯದರ್ಶಿಗಳಾಗಿ ಬಿ.ಆರ್.ಲಕ್ಷ್ಮಣಗೌಡರು ಖಜಾಂಚಿಯಾಗಿ ಕಾರ್ಯನಿರ್ವಹಿಸುತ್ತಿದ್ದಾರೆ. ಒಟ್ಟಿನಲ್ಲಿ ಎಲ್ಲಾ ತಾಲ್ಲೂಕು ಸಂಘಗಳು ಜನಾಂಗದ ಎಲ್ಲಾ ಒಳ ಪಂಗಡಗಳನ್ನು ಒಟ್ಟಿಗೆ ಸೇರಿಸಿ, ಜನಾಂಗದ ಪ್ರಗತಿಗೆ ಶ್ರಮಿಸುವ ನಿಟ್ಟಿನಲ್ಲಿವೆ.

**೬.೩. ಜಿಲ್ಲೆಯ ಒಕ್ಕಲಿಗರ ಬಗೆಗಿನ ಹೊಸ ಶೋಧನೆ**

ಕರ್ನಾಟಕದಲ್ಲಿ ಒಕ್ಕಲಿಗರಲ್ಲಿ ಹಲವಾರು ಪಂಗಡಗಳಿವೆ. ಅವುಗಳಲ್ಲಿ ಉಪ್ಪಿನ ಕೊಳಗದ (ಉತ್ತಮ ಕೊಳಗ) ಒಕ್ಕಲಿಗರು ಎಂಬ ಪಂಗಡವೂ ಒಂದೂ. ಇವರು ವಿಶೇಷವಾಗಿ ತುಮಕೂರು ಜಿಲ್ಲೆಯ ತುಮಕೂರು, ಕೊರಟಗೆರೆ, ಮಧುಗಿರಿ, ಶಿರಾ ಮತ್ತು ಪಾವಗಡ ತಾಲ್ಲೂಕುಗಳ ಒಟ್ಟು ೧೮೫ ಗ್ರಾಮಗಳಲ್ಲಿ ವಾಸಿಸುತ್ತಿದ್ದಾರೆ. ಬೆಂಗಳೂರು

ಮತ್ತು ಕೋಲಾರ ಜಿಲ್ಲೆಗಳಲ್ಲಿ ಕೆಲವು ಹಳ್ಳಿಗಳಲ್ಲೂ ಕಂಡು ಬರುತ್ತಾರೆ. ಸತ್ಯ ಪಕ್ಷಪಾತಿಗಳೂ ನ್ಯಾಯನಿಷ್ಠುರರೂ, ಜನಹಿತಚಿಂತಕರೂ ಹಾಗೂ ಅಪಾರ ದೈವಭಕ್ತರಾದ ಇವರು "ಉತ್ತಮ ಕುಲಿಗ" ರೆಂದೇ ಖ್ಯಾತರು. ತಮ್ಮ ಪರಿಶುದ್ಧ ಜೀವನದಿಂದಾಗಿ ಇಂದಿಗೂ ಎಲ್ಲ ವರ್ಗದ ಜನರ ಮೆಚ್ಚುಗೆಗೆ ಪಾತ್ರರಾಗಿದ್ದಾರೆ.

ಉಪ್ಪಿನ ಕೊಳಗದವರ ಬಗ್ಗೆ ಅಧ್ಯಯನ ಮಾಡಲು ಮುಂದಾದಾಗ ಹಲವು ಕುತೂಹಲಕರವಾದ ಅಂಶಗಳು ಹೊರ ಬಿದ್ದುದಲ್ಲದೆ, ಅವರ ಭವ್ಯ ಪರಂಪರೆಗೆ ಸಾಕ್ಷಿಯಾದ ಕೆಲವು ಶಾಸನಗಳೂ ದೊರಕಿದವು. ಅಂತಹ ಕೆಲವನ್ನು ಇಲ್ಲಿ ಉಲ್ಲೇಖಿಸಲಾಗಿದೆ.

ಉಪ್ಪಿನ ಕೊಳಗದವರಲ್ಲಿ ಸುಮಾರು ೭೪ ಬೆಡಗುಗಳಿವೆ. ಇವುಗಳ ಆಧಾರದ ಮೇಲೆ ಮದುವೆ ಸಂಬಂಧಗಳು ಏರ್ಪಡುತ್ತವೆ. ಚಿನಗ, ನಾರ್ಗಾಜುವಹಳ್ಳಿ, ತರಿದಾಳು ಮತ್ತು ಕನ್ನಮೇಡಿ ಹೀಗೆ ನಾಲ್ಕು ಕಟ್ಟೆ ಮನೆಗಳನ್ನು ರಚಿಸಿಕೊಂಡು ವ್ಯವಸ್ಥಿತ ಸಾಂಘಿಕ ಜೀವನ ನಡೆಸುತ್ತಿದ್ದರು.

ಗುಲ್ಬರ್ಗಾ ಹಾಗೂ ಹೈದರಾಬಾದ್‌ಗಳಲ್ಲಿ ಮುಸಲ್ಮಾನರ ಆಳ್ವಿಕೆ ಪ್ರಾರಂಭವಾದಾಗ, ರಾಜ ಕುಟುಂಬಗಳಿಗೆ ಹತ್ತಿರದವರಾದ ಈ ಒಕ್ಕಲಿಗರ ಮೇಲೆ ಮುಸಲ್ಮಾನರ ಕ್ರೂರ ದೃಷ್ಟಿ ಬೀಳುತ್ತದೆ. ಅವರ ಆಕ್ರಮಣಗಳಿಂದ ತಪ್ಪಿಸಿಕೊಂಡು ತಮ್ಮ ಸಕಲ ಪರಿವಾರ ಸಮೇತ ಈ ಗೌಡ ಪಂಗಡಗಳು ವಿಜಯನಗರ ಸಾಮ್ರಾಜ್ಯಕ್ಕೆ ಆಗಮಿಸುತ್ತವೆ. ಅಲ್ಲಿ ವಿವಿಧ ಹುದ್ದೆಗಳಲ್ಲಿ ನೇಮಕರಾದುದಲ್ಲದೆ, ಕೆಲವರು ಜನಹಿತ ಕಾರ್ಯಗಳಲ್ಲಿ ತಮ್ಮನ್ನು ತಾವು ತೊಡಗಿಸಿಕೊಂಡರು. ಮತ್ತೆ ಕೆಲವರು ಸೈನ್ಯದ ಉನ್ನತ ಹುದ್ದೆಗಳನ್ನು ಅಲಂಕರಿಸಿ, ಹೋರಾಡಿ ರಾಜ ಮನ್ನಣೆ ಗಳಿಸಿದ್ದೂ ಇದೆ. ಇಂತಹ ನಿಸ್ವಾರ್ಥ ಸೇವಾಕರ್ತರಿಗೆ ಶಾಶ್ವತ ನೆಲೆಯನ್ನು ಕಲ್ಪಿಸಿಕೊಡಲು ಒಂದೊಂದು ಬೆಡಗಿವರೆಗೂ ಗ್ರಾಮಗಳನ್ನು ದತ್ತಿ ಕೊಟ್ಟು ಗೌಡಿಕೆ ನಡೆಸಿಕೊಂಡು ಹೋಗುವಂತೆ ಈಗಿನ ಮಧುಗಿರಿ, ಕೊರಟಗೆರೆ, ಶಿರಾ, ಪಾವಗಡ ಮತ್ತು ತುಮಕೂರು ತಾಲ್ಲೂಕಿನ ಪ್ರದೇಶಕ್ಕೆ ನೇಮಿಸಿದರು. ಹಾಗಾಗಿ ಇವರು ತುಮಕೂರು ಜಿಲ್ಲೆಗೆ ಬಂದು ನೆಲೆಸಿದರು. ಈ ಅಂಶ ಜಿಲ್ಲಾ ಗೆಜೆಟಿಯರ್‌ನಲ್ಲೂ ನಮೂದಾಗಿದೆ.

ತುಮಕೂರು ತಾಲ್ಲೂಕು ಎಮ್. ಗೊಲ್ಲಹಳ್ಳಿಯ ನಿವೃತ್ತ ಶಾಲಾ ಶಿಕ್ಷಕರ ಮನೆಯಲ್ಲಿದ್ದ, ಹೊಯ್ಸಳ ಅರಸು ವೀರಬಲ್ಲಾಳ ರಾಯರು ಕೊಟ್ಟ, ತಾಮ್ರ ಶಾಸನದ ನಕಲು ಪ್ರತಿಯೊಂದು ಉಪ್ಪಿನ ಕೊಳಗದವರಿಗೆ ಆ ಹೆಸರು ಹೇಗೆ ಬಂತೆಂಬುದನ್ನು ತಿಳಿಸುತ್ತದೆ. ತಾಮ್ರ ಶಾಸನ ಕೊಟ್ಟ ವಿಚಾರವನ್ನು ಶಿರಾ ತಾಲ್ಲೂಕು ಮೇಲುಕುಂಟೆಯ ಶಿಲಾಶಾಸನವೊಂದು ಸ್ಪಷ್ಟ ಪಡಿಸುತ್ತದೆ. ಈ ಜನಾಂಗದ ಬಗ್ಗೆ ಪದ್ಯ ರೂಪದಲ್ಲಿ ಹಾಡುವ ಹೆಳುವರೂ ಸಹ ಈ ಅಂಶವನ್ನು ಉಲ್ಲೇಖಿಸುತ್ತಾರೆ. ಆ ತಾಮ್ರ ಶಾಸನ ಹೀಗೆ ಹೇಳುತ್ತದೆ.

''ಸ್ವಸ್ತಿಶ್ರೀ ವಿಜಯಾಭ್ಯುದಯ ಶಾಲಿವಾಹನ ಶಕ ವರ್ಷಗಳು ೧೧೦೭ನೇ ನಂದನ ನಾಮ ಸಂವತ್ಸರ ಕಾರ್ತೀಕ ಬಹುಳ ಮೂವತ್ತನೇ ಸೋಮವಾರದಲ್ಲಿ ಶ್ರೀ ವೀರಬಲ್ಲಾಳ ರಾಯರು ಮೂರು ಸಾವಿರ ಖಂಡುಗ ಭತ್ತ ಮತ್ತು ಜೋಳದ ರಾಶಿಯನ್ನು ಈ ದಿನದ ಸಾಯಂಕಾಲದ ಒಳಗಾಗಿ ಅಳೆಯುವವರು ಯಾರಾದರೂ ಇದ್ದಾರೆಯೇ ಎಂದು ವಿಚಾರಿಸಲಾಗಿ, ಅಲ್ಲಿದ್ದವರೆಲ್ಲರೂ ನಮ್ಮ ಕೈಲಾಗದೆಂದು ಹೇಳಿದರು. ಆಗ ಕೊರಗನೂರು ತಾಯಣ್ಣಗೌಡ ಮತ್ತು ನಾಗಣ್ಣಗೌಡ ಎಂಬ ಅಣ್ಣ ತಮ್ಮಂದಿರು ಬಂದು ಅಪ್ಪಣೆಯಾದರೆ ನಾವು ಅಳೆಯುತ್ತೇವೆಂದು ವೀಳ್ಯ ಪಡೆದರು. ಶ್ರೀ ವೀರಬಲ್ಲಾಳರಾಯರ ಮುದ್ರೆ ಕೊಳಗದಲ್ಲಿ ಮೂರು ಸಾವಿರ ಖಂಡುಗದ ರಾಶಿಯನ್ನು ಅಳೆದು

ಸಿದ್ಧರಾಮೇಶ್ವರಸ್ವಾಮಿಯವರ ದರ್ಶನವಾಗುತ್ತದೆ. ಅವರಿಗೆ ಈ ಮೂಲ ಪುರುಷರು ಭಯಭಕ್ತಿಯಿಂದ ವಂದಿಸಿ ನಿಂತಿರಲು, ಇವರ ನಯ ವಿನಯ ಭಕ್ತಿಯನ್ನು ಕಂಡು ಪ್ರಸನ್ನರಾದ ಸ್ವಾಮಿಯವರು ತಮ್ಮ ದಿವ್ಯ ದೃಷ್ಟಿಯಿಂದ ನೋಡಿ ''ನೀವು ಬಹಳ ಪುಣ್ಯವಂತರು, ಅದೃಷ್ಟಶಾಲಿಗಳು, ಈಗ ನೀವು ದಕ್ಷಿಣ ದೇಶಕ್ಕೆ ಹೋಗಿ ಅಲ್ಲಿ ಶ್ರೀವರಪ್ರತಾಪರಾದಂತಹ ತಿರುಮಲರಾಯರು ರಾಜ್ಯ ಪರಿಪಾಲನೆ ಮಾಡುತ್ತಿದ್ದಾರೆ. ಅವರು ನಿಮಗೆ ಅನ್ನ ಸ್ಥಿತಿಗೆ ಮಾರ್ಗಮಾಡಿಕೊಡುತ್ತಾರೆ'' ಎಂದು ಅಪ್ಪಣೆ ಮಾಡುತ್ತಾರೆ.

ಶ್ರೀ ಸಿದ್ಧರಾಮೇಶ್ವರ ಮಹಾಸ್ವಾಮಿಯವರ ವ್ಯಾಕ್ಯಾನುಸಾರ ಸದರಿ ಅಣ್ಣತಮ್ಮಂದಿರು ತಮ್ಮ ಕುಟುಂಬ ಮತ್ತು ದನಕರುಗಳ ಸಮೇತ ವಿಜಯನಗರ ಪಟ್ಟಣಕ್ಕೆ ಬಂದು ಮಹಾರಾಜರ ದರ್ಶನಾಕಾಂಕ್ಷಿಗಳಾಗಿ ಬಹಳ ದಿನ ಕಳೆಯುತ್ತಾರೆ. ಒಂದು ದಿನ ಶ್ರೀ ವರತಿರುಮಲರಾಯರು ಸವಾರಿ ಹೊರಡುವ ನಿಮಿತ್ಯ ಹೊರಟು ಬರುತ್ತಿದ್ದಾಗ , ಮೂಲ ಪುರುಷ ಶಿಂಗೇಗೌಡನು ಹೋಗಿ ದೀರ್ಘದಂಡ ಪ್ರಣಾಮ ಮಾಡಿ, ಬಹಳ ದಿನಗಳಿಂದ ಮಹಾಸ್ವಾಮಿಯವರ ದರ್ಶನಕ್ಕಾಗಿ ಕಾದುಕೊಂಡುದ್ದುದಾಗಿಯೂ, ಇಂದು ತಮ್ಮ ಕರ್ಮವಿಮೋಚನವಾಗುವ ಕಾಲ ಬಂದಿತೆಂದೂ ಅತಿವಿನಯವಾಗಿ ಅರಿಕೆ ಮಾಡಿಕೊಂಡನು. ಮಹಾರಾಜರು ಶಿಂಗೇಗೌಡನ ಗುಣ ನಡತೆಗೆ ಮೆಚ್ಚಿ ಸಂತೋಷದಿಂದ, ನೀವು ಯಾವ ದೇಶದವರು? ಎಲ್ಲಿಂದ ಬಂದಿರಿ? ಮುಂದೆ ನಿಮ್ಮ ಮನೋಗತವೇನು? ಎಂದು ಕೇಳಿದರು. ಆಗ ಶಿಂಗೇಗೌಡನು ತಮ್ಮ ಪೂರ್ವಪರಗಳನ್ನು ತಿಳಿಸಿದನು. ಮಹಾರಾಜರು ಸಂತೋಷಪಟ್ಟು "ನೀವು ಇಲ್ಲಿಯೇ ಇರಿ, ಕೆಲವು ದಿವಸಗಳ ಮೇಲೆ ನಿಮ್ಮ ಮನೋಗತಾನುಸಾರವಾಗಿ ನಡೆಸಿಕೊಡುತ್ತೇವೆ" ಎಂಬುದಾಗಿ ಅಪ್ಪಣೆ ಮಾಡಿದರು.

ಕೆಲವು ದಿನಗಳ ನಂತರ ಶಿಂಗೇಗೌಡನ ಮಗನಾದ ಪೂಜೇಗೌಡನಿಗೆ ಅರಮನೆಯಿಂದ ಚಾಕರಿ ಕೊಟ್ಟು, ಈ ಅಣ್ಣ ತಮ್ಮಂದಿರಿಗೆ ಮಹಾರಾಜರು ಅಪ್ಪಣೆ ಮಾಡಿದ್ದೇನೆಂದರೆ ದಕ್ಷಿಣ ದೇಶದಲ್ಲಿ ಚೋಳರಾಯರು ದಿನವೊಂದಕ್ಕೆ ೧೦೦ ಬಾವಿ ೧೦೦ ದೇವಸ್ಥಾನ, ೧೦೦ ತೋಪು ಹಾಕಿಸದ ಹೊರತು ಊಟಮಾಡುವದಿಲ್ಲ. ಅಲ್ಲಿಗೆ ನೀವು ಹೋಗಿ ನಿಮ್ಮ ಮನಸ್ಸು ಇದ್ದಂತೆ ನಡೆಸಿಕೊಡುತ್ತಾರೆಂದು ಅಪ್ಪಣೆ ಮಾಡಿ ಪತ್ರ ಬರೆದು ಕೊಟ್ಟರು.

ಪತ್ರವನ್ನು ತೆಗೆದುಕೊಂಡು ಈ ಅಣ್ಣ ತಮ್ಮಂದಿರು ಚೋಳರಾಯರನ್ನು ಅರಸುತ್ತ ದಕ್ಷಿಣ ದೇಶಕ್ಕೆ ಬರುತ್ತಿರಲು ಮಧುಗಿರಿ ಪಟ್ಟಣದ ಪಕ್ಕದಲ್ಲಿ ಚೋಳರಾಯರು ಬೀಡುಬಿಟ್ಟಿರುವುದು ತಿಳಿಯುತ್ತಿದೆ. ಬಹಳ ದಿನ ಕಳೆದರೂ ಅವರ ದರ್ಶನ ದುರ್ಲಭವಾಗುತ್ತದೆ. ಒಂದು ದಿನ ರಾತ್ರಿ ಚೋಳರಾಯನನ್ನು ಮಧುಗಿರಿ ಬೆಟ್ಟದ ಕುಂಭಿ ಮೇಲಿರುವ ಶ್ರೀ ಗೋಪಾಲಕೃಷ್ಣ ಸ್ವಾಮಿ ದೇವಾಲಯಕ್ಕೆ ತೆಗೆದುಕೊಂಡು ಹೋಗಿ ಇಟ್ಟು, ಧೂಪ, ಗಂಧ, ಕವಡೆ ಸಾಮ್ರಾಣಿ ಹಾಕಿ, ರಾಯರನ್ನು ಕಾಯುತ್ತಿರಲು, ಬೆಳಿಗ್ಗೆ ಎದ್ದ ರಾಯರು ತಾನು ಎಲ್ಲಿರುವೆನೆಂದು ನೋಡುತ್ತಿರಲು, ಶಿಂಗೇಗೌಡನು ಅತಿ ವಿನಯದಿಂದ ತಮ್ಮ ದರ್ಶನಕ್ಕಾಗಿ ನಾವು ಹೀಗೆ ಮಾಡಿದುದಾಗಿಯೂ, ಅನ್ಯತಾ ಭಾವಿಸಬಾರದೆಂದು ಅರಿಕೆ ಮಾಡಿಕೊಂಡು, ವಿಜಯನಗರದ ಅರಸು ಕೊಟ್ಟಿದ್ದ ಪತ್ರವನ್ನು ಚೋಳರಾಯರಿಗೆ ಅರ್ಪಿಸಿದನು. ಮಹಾರಾಜರ ಅಪ್ಪಣೆ ಪತ್ರವನ್ನು ನೋಡಿ, ಅದರಲ್ಲಿ ಇವರಿಗೆ ಚಾಕರಿ ಕೊಟ್ಟು ಕಳುಹಿಸಿರುವುದನ್ನು ತಿಳಿದು ಚೋಳರಾಯರು ಬಹಳ ಸಂತೋಷ ಪಟ್ಟು, ಆ ಅಣ್ಣ ತಮ್ಮಂದಿರನ್ನು ತನ್ನಲ್ಲಿಯೇ ಕೆಲವು ಕಾಲ ಇರಿಸಿಕೊಳ್ಳುತ್ತಾರೆ.

ಇದೇ ವೇಳೆಯಲ್ಲಿ ಶ್ರೀವರ ತಿರುಮಲರಾಯರು ದೈವಾಧೀನರಾಗುತ್ತಾರೆ. ಅವರ ಪುತ್ರರಾದ ಶ್ರೀರಂಗರಾಯರು ಸಿಂಹಾಸನಾರೂಢರಾಗುತ್ತಾರೆ. ಕೆಲವು ದಿನಗಳ ನಂತರ ಚೋಳರಾಯರು ಶ್ರೀರಂಗರಾಯರಿಗೆ ಒಂದು ಉತ್ತರವನ್ನು ಬರೆದುಕೊಟ್ಟು ಈ ನಾಲ್ಕು ಜನ ಅಣ್ಣ ತಮ್ಮಂದಿರನ್ನು ವಿಜಯನಗರ ಪಟ್ಟಣಕ್ಕೆ ಕಳುಹಿಸುತ್ತಾರೆ. ಅವರು ಪಟ್ಟಣಕ್ಕೆ ಬರುವ ವೇಳೆಗೆ ಶ್ರೀರಂಗರಾಯರೂ ದೈವಾಧೀನರಾಗುತ್ತಾರೆ. ಆಗ ಅವರ ಪುತ್ರರಾದ ಅಚ್ಚುತರಾಯರು ಸಿಂಹಾಸನರೂಢರಾಗಿ ಆಳಲು ಪ್ರಾರಂಭಿಸುತ್ತಾರೆ. ಇದೇ ಸಮಯದಲ್ಲಿ ಸದರಿ ಅಣ್ಣತಮ್ಮಂದಿರು ಚೋಳರಾಯರು ಬರೆದು ಕೊಟ್ಟ ಉತ್ತರ ಪತ್ರವನ್ನು ಮಹಾರಾಜರಿಗೆ ಅರ್ಪಿಸುತ್ತಾರೆ. ಅದನ್ನು ಪರಾಂಬರಿಸಿದ ಮಹಾರಾಜರು ಸ್ವಲ್ಪ ದಿನ ಇಲ್ಲಿಯೇ ಇರುವಂತೆ ಅಪ್ಪಣೆ ಮಾಡುತ್ತಾರೆ. ಅಷ್ಟರಲ್ಲಿಯೇ ಎಲ್ಲಿ ಷಹಷರ ಕಡೆಯಿಂದ ಮಲ್‌ಬಾನ ಎಂಬ ಸರದಾರನು ೧೮ ಲಕ್ಷ ಫೌಜುತೆಗೆದುಕೊಂಡು ಬಂದು ವಿಜಯನಗರಕ್ಕೆ ಮುತ್ತಿಗೆ ಹಾಕುತ್ತಾನೆ. ಆಗ ಅಲ್ಲಿಯೇ ಇದ್ದ ಉಪ್ಪಿನ ಕೊಳಗದ ವಂಶಸ್ಥರಾದ ಶಿಂಗೇಗೌಡ, ದೊಡ್ಡೇಗೌಡರು ಅಪ್ಪಣೆಯಾದರೆ ನಮ್ಮ ಕೈಲಾದ ಮಟ್ಟಿಗೆ ಮಹತ್ತು ಮಾಡುತ್ತೇವೆಂಬುದಾಗಿ ಅರಿಕೆ ಮಾಡಿಕೊಂಡರು. ಆಗ ಮಹಾರಾಜರು ಇವರ ವಂಶಕ್ಕೆ ಕೆಲವು ಫೌಜು ಕಾಲಾಳು ಕೊಟ್ಟು ಲಡಾಯಿಗೆ ಅಪ್ಪಣೆ ಮಾಡಿದರು. ಸದರಿ ಅಣ್ಣತಮ್ಮಂದಿರು ಬಹಳ ಪರಾಕ್ರಮದಿಂದ ಹೋರಾಡಿ, ಶತ್ರುಗಳನ್ನು ಜಯಿಸಿ, ಅವರ ಆಯುಧ ಮುಸ್ತಾಪುಗಳನ್ನು ವಶಪಡಿಸಿಕೊಂಡು ತಂದು ಮಹಾರಾಜರಿಗೆ ಅರ್ಪಿಸಿದರು. ಇವರ ಪರಾಕ್ರಮಕ್ಕೆ ಮೆಚ್ಚಿದ ರಾಜರು "ವಂಭಿಣಿ" "ಹರಿದ್ರ" ಮತ್ತು "ಧ್ವಜ" ಎಂಬ ಆಯುಧಗಳನ್ನು ಇನಾಮಾಗಿ ಕೊಟ್ಟರು.

ಕೆಲವು ದಿನಗಳ ನಂತರ ಹೈದರಾಬಾದ್ ಸಾಹೇಬನೆಂಬ ಸರದಾರನು ಕೆಲವು ಫೌಜುಗಳೊಂದಿಗೆ ಯುದ್ಧಕ್ಕೆ ಬಂದನು. ಮಹಾರಾಜರು ಶಿಂಗೇಗೌಡರನ್ನು ಕರೆಸಿ, ಹಿಂದಿನ ಪರಾಕ್ರಮವನ್ನು ಸ್ಮರಿಸಿ, ಈಗ ಬಂದಿರುವ ಗಂಡಾಂತರವನ್ನು ತಿಳಿಸಿದರು. ಆಗ ಅವರು ಮಹಾರಾಜರ ಅಪ್ಪಣೆ ಮೇರೆಗೆ ಕೆಲವು ಫೌಜುಗಳನ್ನು ತೆಗೆದುಕೊಂಡು ಯುದ್ಧಕ್ಕೆ ಹೋಗಿ, ಶತ್ರುಗಳನ್ನು ಸಂಹರಿಸಿ, ಅವರ ಆಯುಧ ವಗೈರೆಗಳನ್ನು ವಶಪಡಿಸಿಕೊಂಡು ತಂದು ಮಹಾರಾಜರಿಗೆ ಅರ್ಪಿಸುತ್ತಾರೆ. ಇದರಿಂದ ಸಂತೋಷಗೊಂಡ ಮಹಾರಾಜರು ಈ ಅಣ್ಣತಮ್ಮಂದಿರ ಪರಾಕ್ರಮವನ್ನು ಮೆಚ್ಚಿ, ಹಿರಿಯರಾದಂತಹ ಶಿಂಗೇಗೌಡರಿಗೆ "ನಾಗರಮುರಿ" ಎಂಬ ಆಯುಧವನ್ನು ಬಹುಮಾನವಾಗಿ ಕೊಟ್ಟು, ಜೋಡಿಶಾಲ್ ವಗೈರೆ ಕೊಡಿಸಿ, ಅರಮನೆಯಲ್ಲಿ ಔತಣಮಾಡಿಸಿ, ಉಡುಗೊರೆ ಕೊಟ್ಟು ಗೌರವಿಸಿದರು. ಆ ಸಮಯದಲ್ಲಿ ಇವರುಗಳು ನಮಗೆ ಶಾಶ್ವತವಾಗಿ ಇರುವ ಹಾಗೆ ಒಂದು ಅನ್ನ ಸ್ಥಿತಿ ದಯ ಪಾಲಿಸಬೇಕೆಂದು ಅರಿಕೆ ಮಾಡಿಕೊಂಡರು.

ಅಚ್ಚುತರಾಯರು ದಕ್ಷಿಣ ದೇಶದ ಪಾಳೆಗಾರರ ಪೈಕಿ ಮುಮ್ಮಡಿ ಪಟ್ಟಣದ ಮುಮ್ಮಡಿ ಈರವರಪೇಗೌಡರುಗಳು ಬಹುತರ ಮಹತ್ತು ಮಾಡಿದ್ದಾರೆ. ಇವರಿಗೆ ನಿಮ್ಮ ಸೀಮೆಯೊಳಗೆ ಪ್ರಯೋಜನವುಂಟು, ಕೆಲವು ಗ್ರಾಮಗಳನ್ನು ಅಬಾದು ಮಾಡಿಸಿ, ಗಿಡ ಗಂಟೆ ಕಡಿಸಿ, ಕೋಟೆ ಕೊತ್ತಲ ಹಾಕಿಸಿ, ಗ್ರಾಮದೇವತೆ ಆಗುವ ಕಾಲದಲ್ಲಿ ನಮಗೆ ಬರೆದು ತಿಳಿದರೆ ನಾವು ಬರುತ್ತೇವೆ" ಎಂದು ಸೂಚಿಸಿದರು. ಹಾಗೆಯೇ ಇವರಿಗೆ ಅರಮನೆ ಖಜಾನೆಯಿಂದ ಬೇಕಾದ್ದು ಕೊಡುವ ಮೇರೆಗೆ ಅಪ್ಪಣೆಯಾಗಿತ್ತು.

ಸದರಿ ಪತ್ರವನ್ನು ತೆಗೆದುಕೊಂಡು ಉಪ್ಪಿನ ಕೊಳಗದ ವಂಶದವರಾದ ನಾಲ್ಕು ಜನ ಗೌಡರೂ ಮುಮ್ಮಡಿ ಪಟ್ಟಣಕ್ಕೆ ಬಂದು ಈರವರಪೇಗೌಡರನ್ನು ಬೇಟಿಯಾಗಿ ಪತ್ರವನ್ನು ಅರ್ಪಿಸಿದರು. ಅದನ್ನು ಪರಿಶೀಲಿಸಿದ

ಪಾಳೇಗಾರರು ಸದರಿ ಗೌಡರುಗಳಿಗೆ ನಿಮಗೆ ಇಚ್ಛೆಯಿರುವ ಜಾಗದಲ್ಲಿ ಗಿಡಗಂಟೆ ಕಡಿಸಿ, ಕೋಟೆ ಕೊತ್ತಲ ಹಾಕಿಸಿ, ಗ್ರಾಮದೇವತೆ ಮಾಡುವುದಕ್ಕೂ, ಬಾನ ಹೊರುವ ವೇಳೆಯಲ್ಲಿ ಬೇಕಾದ ಕೈವಾಡ ಗೊತ್ತು ಮಾಡುವದಕ್ಕೂ ನಮಗೆ ಹೇಳಿ ಕಳುಹಿಸಿದರೆ ಬರುವುದಾಗಿ ತಿಳಿಸಿದರು. ಅದರಂತೆ ಈ ಅಣ್ಣ ತಮ್ಮಂದಿರು ಕೋಟೆ ಕೊತ್ತಲ ಕಟ್ಟಿಸಿ, ಗ್ರಾಮಗಳ ಬಳಿಯಲ್ಲಿ ಕೆರೆ, ದೇವಸ್ಥಾನಗಳನ್ನು ನಿರ್ಮಿಸಿ, ಮುಮ್ಮಡಿ ಪಾಳೆಯಗಾರರಿಗೆ ವಿಷಯ ತಿಳಿಸಿದರು.

ಈರವರಪೇಗೌಡರು ಸದರಿ ವಿಷಯವನ್ನು ವಿಜಯನಗರದ ಅರಸರಿಗೆ ತಿಳಿಸಿದರು. ಆಗ ಅಚ್ಚುತರಾಯರು ಸದರಿ ಯವನ್ನು ವಿಜಯನಗರದ ಅರಸರಿಗೆ ತಿಳಿಸಿದರು. ಆಗ ಅಚ್ಚುತರಾಯರು ಮುಮ್ಮಡಿ ಪಟ್ಟಣಕ್ಕೆ ಬಂದು ಮೂರು ದಿನಗಳವರೆಗೆ ತಂಗಿದ್ದು ನಾಲ್ಕನೇ ದಿನ ಬೆಳಿಗ್ಗೆ ಈರವರಪೇಗೌಡರ ಜೊತೆಗೂಡಿ ಶಿಂಗೇಗೌಡ ಮೊದಲಾದ ನಾಲ್ಕು ಜನ ಅಣ್ಣತಮ್ಮಂದಿರು ಗಿಡಗಂಟಿ ತೆಗೆದು ಕೋಟೆ ಕೊತ್ತಲ ಕಟ್ಟಿಸಿರುವಲ್ಲಿಗೆ ಬಂದು ನೋಡಿ ಬಹಳ ಸಂತೋಷಪಟ್ಟರು. ಕಟ್ಟಿರುವ ಮೂರು ಗ್ರಾಮಗಳಿಗೂ ಆಯಗಾರರನ್ನು ನೇಮಿಸಿ, ಆ ಗ್ರಾಮಗಳಿಗೆ ತಿಪ್ಪಾಪುರ, ನಾಗೇನಹಳ್ಳಿ, ಸುದ್ಧ ಕುಂಟೆ (ಈ ಮೂರು ಗ್ರಾಮಗಳು ಈಗಿನ ಮಧುಗಿರಿ ತಾಲ್ಲೂಕಿನಲ್ಲಿದೆ) ಎಂದು ಹೆಸರಿಟ್ಟು, ಶಿಂಗೇಗೌಡನನ್ನು ಆ ಊರುಗಳಿಗೆ ಗೌಡನೆಂದು ನೇಮಿಸಿ ಧರ್ಮ ಮಾರ್ಗದಲ್ಲಿ ಸಂಪಾದಿಸಿಕೊಂಡು ಬದುಕುವಂತೆ ಅಪ್ಪಣೆ ಮಾಡಿದರು. ಮೂಲ ಪುರುಷರಾದ ಶಿಂಗೇಗೌಡರ ಮನೆಯಿಂದ ಬಾನ ಹೊರಿಸಿ, ಹಸೀ ಕರಗ ಹೊರಿಸಿ, ಗ್ರಾಮದೇವತೆ ಮಾಡಿಸಿ, ಬ್ರಾಹ್ಮಣರಿಗೆ ವಡೇರ್ಯವರಿಗೆ, ಭಟ್ಟರು ಭಾಗದವರಿಗೆ, ವಿದ್ಯಾಜನರಿಗೆ, ಗುರಿಕಾರರಿಗೆ, ಹರಿಕಾರರಿಗೆ, ಊಳಿಗದವರಿಗೆ ಅವರವರ ಯೋಗ್ಯತಾನುಸಾರ ಊಡುಗೊರೆಗಳನ್ನು ಕೊಡಿಸಿದರು. ಇಲ್ಲಿ ಈ ಮೂರು ಊರುಗಳಿಗೆ ನೇಮಿಸಿದ್ದ ಆಯಗಾರರ ಹೆಸರುಗಳು ಬರುತ್ತವೆ. ಹಾಗೆಯೇ ಸುದ್ಧಕುಂಟೆ ಕೆರೆಯ ಕೆಳಗೆ ಆಯಗಾರರಿಗೆ ಮಾನ್ಯ ಗೊತ್ತು ಮಾಡಿರುವ ವಿವರಗಳು ಬರುತ್ತವೆ.

ತಿಪ್ಪಾಪುರ, ನಾಗೇನಹಳ್ಳಿ ಮತ್ತು ಸುದ್ಧಕುಂಟೆ ಈ ಮೂರು ಗ್ರಾಮಗಳಿಗೆ ಸೇರಿದ ಹೊಲಗಳಲ್ಲಿ ಚಂದ್ರ ಸೂರ್ಯ ಶಾಸನಗಳು, ಗೊರಗು, ಫಾಲಮುದ್ರೆ ಶಾಸನಗಳು, ಲಿಂಗಮುದ್ರೆ ಶಾಸನಗಳು, ತ್ರಿಶೂಲ ಶಾಸನಗಳು, ಪೂರುಗೋಲು ಶಾಸನಗಳು ಹೀಗೆ ಒಟ್ಟು ೬೧ ಶಾಸನಗಳನ್ನು ನಿರ್ಮಾಣ ಮಾಡಿಸಿರುತ್ತೇವೆ. ಹೀಗೆ ಗ್ರಾಮದೇವತೆ ಮಾಡಿಕೊಂಡು, ಆಯಗಾರರನ್ನು ನೋಡಿಕೊಂಡು, ಮೂರು ಗ್ರಾಮಗಳಲ್ಲಿ ಯಾವ ತಕರಾರೂ ಇಲ್ಲದಂತೆ, ತೆರಿಗೆ ವಸೂಲಿ ಮಾಡಿದ ಹಣವನ್ನು ಮುಮ್ಮಡಿ ಪಟ್ಟಣದ ಅರಮನೆಗೆ ತಲುಪಿಸುತ್ತಾ, ಮೂರು ಊರುಗಳ ಗೌಡಿಕೆಯನ್ನು ಅನುಭವಿಸಿಕೊಂಡು ಸುಖದಿಂದ ಇರುವುದು. ಎಂದು ಮುಮ್ಮಡಿ ಪಟ್ಟಣದ ಪಾಳೇಗಾರರಾದ, ಮುಮ್ಮಡಿ ಈರವರಪೇಗೌಡರು, ಮಹಾರಾಜರಾದ ಅಚ್ಚುತರಾಯರ ಅಪ್ಪಣೆ ಮೇರೆಗೆ, ಕುಲದಲ್ಲಿ ಉಪ್ಪಿನ ಕೊಳಗದವರಾದ, ನರಸೇಗೌಡರಿಗೆ ಬರೆಸಿಕೊಟ್ಟ ವಂಶಾವಳಿ ದಾನ ಶಾಸನ. ಯಾವ ಹೊತ್ತಿನಲ್ಲೇ ಆಗಲಿ, ಯಾವ ದಿವಸದಲ್ಲಿಯೇ ಆಗಲಿ, ಏನಾದರೂ ತೊಂದರೆ ಬಂದಲ್ಲಿ ಈ ಶಾಸನ ದಾಖಲೆ ತೋರಿಸಿದಲ್ಲಿ, ಆಗ್ಗೆ ಪ್ರಭುತ್ವ ಮಾಡುವಂತಾ ಪ್ರಭುಗಳು ದಯ ಮಾಡಿಸಿ ನಡೆಸಿಕೊಡುತ್ತಾರೆ.

ಈ ಶಾಸನದ ಮೂಲ ಪ್ರತಿಯನ್ನು ಬಿದಿರನ ಕೊಳವೆಯಲ್ಲಿ ಸುರುಳಿ ಸುತ್ತಿ ಇಡಲಾಗಿತ್ತೆಂದು ಅದನ್ನು ನೋಡಿದವರು ಈಗಲೂ ಹೇಳುತ್ತಾರೆ. ಅದು ಯಾರ ಮನೆಯಲ್ಲಿದೆಯೆಂದು ನಿಖರವಾಗಿ ತಿಳಿದಿಲ್ಲ.

**ಕಾಟೇರು**

ಮಡಕಶಿಲಾ ತಾಲ್ಲೂಕು ರೊಳ್ಳೆ ಗ್ರಾಮದ ಶ್ರೀ ಮಂಜುನಾಥ್‌ರವರಿಂದ ಎರಡು ತಾಮ್ರಶಾಸನಗಳನ್ನು ಸಂಗ್ರಹಿಸಲಾಯಿತು. ಇವುಗಳಲ್ಲಿ ಮೊದಲನೆಯ ಶಾಸನವು ವಿಜಯನಗರ ಅರಸರಾದ ಹರಿಹರ ಮತ್ತು ಬುಕ್ಕರಾಯರ ಕಾಲಕ್ಕೆ ಸಂಬಂಧಿಸಿದ್ದೆಂದು ಊಹಿಸಬಹುದು. ಕಾಟೇರು ಬೆಡಗಿನವರು ಹೇಗೆ ಬಂದರೆಂಬುದು ಈ ಶಾಸನದಿಂದ ತಿಳಿಯುತ್ತದೆ. ಅದರ ಸಾರಾಂಶ ಈ ರೀತಿಯಿದೆ.

''ಸ್ವಸ್ತಿಶ್ರೀ ವಿಜಯಾಭ್ಯುದಯ ಶಾಲಿವಾಹನ ಶಕ ವರ್ಷಗಳು ೧೧೧೭ ಈ ಕಾಲ ಅನುಮಾನದ್ದು ಭಾವನಾಮ ಸಂವತ್ಸರದಲ್ಲಿ ಮಹಾಸ್ವಾಮಿಗಳಾದ ಹರಿಹರ, ಬುಕ್ಕರಾಯರ ಅಪ್ಪಣೆ ಪ್ರಕಾರ ಬೊಮ್ಮನಾಯ್ಕರು ಆಳ್ವಿಕೆ ನಡೆಸುತ್ತಿರಲು, ವಿಜಯನಗರದಿಂದ ಸಕಲ ಕೈವಾಡದವರ ಸಮೇತ ಬಂದ ಉಪ್ಪಿನ ಕೊಳಗದ ಕಾಟೇರು ಗೋತ್ರದ ನಾಡಿಗ ವೀರಮುದ್ದೇಗೌಡನು, ನಮಗೆ ಜನ ಬಂದಿದ್ದೇವೆ. ನಮಗೆ ಸ್ಥಳ ನಿಷ್ಕರುಷೆ ಮಾಡಿಕೊಡಿ ಎಂದು ಕೇಳಿಕೊಂಡನು. ಆಗ ಬೋಮ್ಮನಾಯಕನು ಉತ್ತಮ ಸ್ಥಳವೊಂದನ್ನು ವಿಚಾರಿಸಿ, ಮುಹೂರ್ತವಿಟ್ಟು ಮದ ಸಮುದ್ರವೆಂಬ ಗ್ರಾಮ ನಿರ್ಮಾಣ ಮಾಡಿ ಆ ಸ್ಥಳಕ್ಕೆ ಕಾಟೇ ಗೋತ್ರದ ವೀರ ಮುದ್ದೇಗೌಡರಿಗೆ ಗೌಡಿಕೆ ನಿಷ್ಕರುಷೆ ಮಾಡಿಕೊಟ್ಟು ಅದಕ್ಕೆ ಶಾನುಭೋಗ ಸಿರಾ ನಾಡ ತಿಮ್ಮರಸಯ್ಯ, ತಳವಾರ ಓಬಳಿಗ, ಕಮ್ಮಾರ, ಕೆಲಸಿ, ಅಗಸ ಮುಂತಾದ ಕಾಮಟಿಗಾರರನ್ನು ನೇಮಿಸಿಕೊಟ್ಟರು.

ತದನಂತರದಲ್ಲಿ ಬುಕ್ಕರಾಯರ ಕುಮಾರರಾದಂಥ ಬ್ಬಪರೆ ರಾಯರವರ ಆಳ್ವಿಕೆಯಲ್ಲಿ ಬೊಮ್ಮನಾಯಕರ ಕುಮಾರರಾದ ಕಾಮಾನಾಯಕರು ನಮಗೆ ಸ್ಥಳ ಸಾಲದು ದಕ್ಷಿಣ ದೇಶದಲ್ಲಿ ಕೆಲವು ಅಬಾದು ಮಾಡುವ ಬಗ್ಗೆ ವಿಜಯನಗರದ ಅರಸದಿಂದ ಅಪ್ಪಣೆ ಕೈಗೊಂಡು ಬರಲು, ಮದಸಮುದ್ರದ ಕಾಟೆ ವೀರ ಮುದ್ದೇಗೌಡನ ಮೊಮ್ಮಗ ನಾಡಿಗಾ ಕಾಡೀ ಸಿಂಗರಿಗೌಡ, ಶಾನುಭೋಗ ಸಿರಾನಾಡ ತಿಮ್ಮರಸಯ್ಯನ ಮಗ ತಿಪ್ಪರಸಯ್ಯ ಹಾಗೂ ಕೆಲವು ಕೈವಾಡದವರು ಬಂದು ಸ್ವಾಮಿ ನಾವು ಸಹ ನೀವಿದ್ದಲ್ಲಿಯೇ ಇರುತ್ತೇವೆಂದು, ನಮಗೆ ಅಲ್ಲಿಯೇ ಒಂದು ಸ್ಥಳ ನಿಷ್ಕರುಷೆ ಮಾಡಿಕೊಡಬೇಕಾಗಿ ಅರಿಕೆ ಮಾಡಿಕೊಂಡರು. ಅದರಂತೆ ಮಲ್ಲಿಗೆ ಮಡುಗಿಗೆ ದಕ್ಷಿಣದಲ್ಲಿ ಕರಡಿಗೊಲ್ಲರ ದಾಸ ದೊಡ್ಡ ಎಂಬುವವನು ಹಟ್ಟಿಕಟ್ಟಿ ಕೊಂಡು ಇದ್ದನು. ಆ ಸ್ಥಳವನ್ನು ಕೇಳಿಕೊಂಡರು. ಅದಕ್ಕೆ ಕಾಮಾನಾಯಕರು ಅಪ್ಪಣೆ ಕೊಟ್ಟರು. ಸ್ವಸ್ತಿಶ್ರೀ ವಿಜಯಾಭ್ಯುದಯ ಶಾಲಿವಾಹನ ಶಕ ವರುಷಂಗಳು ೧೨೨೬ನೇ ನಳ ಸಂವತ್ಸರದ ಮಾಗ ಶುದ್ಧ ೫ ನೇ ಸೋಮವಾರದಲ್ಲಿ ಗೊಲ್ಲರ ಹಟ್ಟಿಗೆ ಮೂಡಲಾಗಿ ಗ್ರಾಮ ನಿರ್ಮಾಣ ಮಾಡಿ, ಕೋಟೆ ಕಟ್ಟಿ ಅದಕ್ಕೆ 'ಗೋವಿಂದ ಪುರ' ಎಂಬ ಹೆಸರಿಟ್ಟರು ತದನಂತರ ಆಂಜನೇಯಸ್ವಾಮಿ ದೇವಸ್ಥಾನ ನಿರ್ಮಾಣ ಮಾಡಿ ದೇವರ ಪ್ರತಿಷ್ಠೆ ಮಾಡಿಸಿ, ಪೂಜೆ ಮಾಡಿಕೊಂಡು ಇರುತ್ತಿದ್ದರು. ತುರಾಯ ಮನೆ ದೇವತೆ ಲಕ್ಷ್ಮೀ ದೇವಿಯನ್ನು ಊರ ಮಧ್ಯದಲ್ಲಿ ಪ್ರತಿಷ್ಠಾಪಿಸಿ ಆ ದೇವರ ಸೇವೆ ಮಾಡಿಕೊಂಡು ಇದ್ದರು. ಈ ಊರಿಗೆ ಚತುಸ್ಸೀಮೆಗಳನ್ನು ನಿಷ್ಕರುಷೆ ಮಾಡಿದರು. ಊರಿನ ಮೂಡುಗಡೆ ಬಾಗಿಲಲ್ಲಿ ಕಾಗೆ ಗೂಬೆ ಹೊಕ್ಕ ಕಾರಣ ಆ ಬಾಗಿಲನ್ನು ಬಿಟ್ಟು ದಕ್ಷಿಣ ದಿಕ್ಕಿನಲ್ಲಿ ಊರ ಬಾಗಿಲಿಟ್ಟು ಗೋವಿಂದಪುರವೆಂಬ ಹೆಸರನ್ನು ತೆಗೆದು ''ರೊಳ್ಳೆ'' ಯೆಂಬ ಹೆಸರಿಟ್ಟರು. ಆ ಗ್ರಾಮದಲ್ಲಿ ಇದ್ದಂತ ಸರ್ವರೂ ಸುಖದಿಂದ ಇದ್ದರು. ಇದಕ್ಕೆ ಯಾರಾದರೂ ತಪ್ಪು ನಡೆದರೆ ಅವರ ಕುಲ ದೇವತೆ ಲಕ್ಷ್ಮೀ ದೇವಿ ಗುಡಿ ಮುಂದೆ ರಾಯದತ್ತ ಶಾಸನದ ಕಲ್ಲುಂಟು ''ಸ್ವದತಂ ದ್ವಿಗುಣಂ ಪುಣ್ಯಂ ಪರದತ್ತಾಗು ಪಾಲನಂ ಪರದತ್ತಪ ಹೋರಣ ಸ್ವದತ್ತಂ ನಿಷ್ಪಲಂ ಭಾವೇತೂ||''

ರೊಳ್ಳೆ ಗ್ರಾಮದಲ್ಲಿ ಸಿಕ್ಕಿದ ಎರಡನೆಯ ಶಾಸನವು ಶ್ರೀರಂಗರಾಯರ ಕಾಲದಲ್ಲಿ ಬರೆಯಲ್ಪಟ್ಟುದು. ರೊಳ್ಳೆ ಗ್ರಾಮದ ಗೌಡಿಕೆಗೆ ಉಂಟಾದ ವಿವಾದವನ್ನು ಬಗೆಹರಿಸಿದ ವಿಷಯವನ್ನು ಒಳಗೊಂಡಿದೆ. ಅದರಲ್ಲಿ ಎರಡು ರೇಖುಗಳು ಮಾತ್ರ ಸಿಕ್ಕಿವೆ. ಅವುಗಳ ಮಧ್ಯದಲ್ಲಿ ಮತ್ತೊಂದು ಇದ್ದ ಸಾಧ್ಯತೆಯೂ ಇದೆ ಈ ಶಾಸನದ ಸಾರಾಂಶವೆಂದರೆ.

"ಶ್ರೀ ರಾಮ": ಶ್ರೀ:- || ಶುಭಮಸ್ತು ||

ಸ್ವಸ್ತಿಶ್ರೀ ವಿಜಯಾಭ್ಯುದಯ ಶಾಲಿವಾಹನ ಶಕ ವರ್ಷಂಗಳು ೧೫೭೮ನೆಯ ವಿಳಂಬಿನಾಮ ಸಂವತ್ಸರದ ಮಾಗ ಶುದ್ಧ ೧೫ ರಲ್ಲಿ ಶ್ರೀ ಮದಾಜಾಧಿರಾಜ, ರಾಜ ಪರಮೇಶ್ವರ, ಶ್ರೀ ವೀರ ಪ್ರತಾಪ, ಶ್ರೀ ವೀರ ಶ್ರೀರಂಗರಾಯ ದೇವ ಮಹಾರಾಯರೆಯನವರು ಪೃಥ್ವಿ ಸಾಮ್ರಾಜ್ಯಂಗೈಯುತ್ತಿರಲು, ಶ್ರೀಮತ್ ಹರತಿ ಸರಜರಾಯಪ್ಪ ರಾಜರವರು, ರೊಳ್ಳೆ ಗ್ರಾಮದ, ಉಪ್ಪಿನ ಕೊಳಗದ ಮಸ್ತಿ ಮುದ್ದಯ್ಯನ ಮೊಮ್ಮಗ ಚಿಕ್ಕಮುದ್ದಯ್ಯಗೆ ಕೊಟ್ಟ ಗೌಡಿಕೆ ಜಯರೇಖೆಯ ಕ್ರಮವೆಂತೆಂದರೆ, ಅನ್ನದಾನಿಗೌಡನಿಗೂ, ನಿನಗೂ ವ್ಯವಹಾರವಾಗಿ ಇರಲಾಗಿ, ಸೋಲು ಗೆಲುವು ನಿಧಾನಿಸಿ, ರೊಳ್ಳೆ ಸ್ಥಳದ ಯಜಮಾನರು, ನಾರಸಿಂಹಶೆಟ್ಟರು, ತಿಮ್ಮಪ್ಪ, ನರಸಪ್ಪ, ಪುಟ್ಟಯ್ಯ, ಸ್ಥಳದ ಶಾನುಬೋಗ ವೆಂಕಟಪ್ಪ, ತಳವಾರ ತಮ್ಮ, ಅಗಸರ ಚಿಕ್ಕ, ಕಮ್ಮಾರ ಮುದ್ದಯ್ಯ ಮೊದಲಾದ ಹನ್ನೆರಡು ಆಯಗಾರರೂ ಸಹ ಸಮ್ಮತಿಸಿಕೊಂಡು, ಧರ್ಮಸ್ಥಾನದಲ್ಲಿ ಅನ್ನದಾನಿಗೌಡನಿಗೆ ಸೋಲು ಮಾಡಿ, ಉಪ್ಪಿನ ಕೊಳಗದ ಮುದ್ದಯ್ಯನ ಮಗ ಚಿಕ್ಕಮುದ್ದಯ್ಯಗೆ ಗೌಡಿಕೆ ಉಂಟು ಎಂದು ತೀರ್ಮಾನಿಸಿ ಜಯರೇಖೆ ಕೊಟ್ಟೆವು ಎಂದು ನಮಗೆ ತಿಳುಹಲಾಗಿ, ಅದೇ ಮರ್ಯಾದೆಯಲ್ಲಿ ನೀನು ರೊಳ್ಳೆ ಗ್ರಾಮದ ಗೌಡಿಕೆಯನ್ನು ನಿನ್ನ ಪುತ್ರ ಪೌತ್ರಾವರಾಂಪಯ್ಯಲು ಆ ಚಂದ್ರಾರ್ಕ ಸ್ಥಾಯಿಯೂ ಅನುಭವಿಸಿಕೊಂಡು ಸುಖದಲ್ಲಿ ಇಹುದು ಎಂದು ಕೊಟ್ಟ ಜಯರೇಖೆ ಪತ್ರಿಕೆ ಶ್ರೀ ರಾಮ"

ಮೇಲಿನ ಮೂರೂ ಶಾಸನಗಳನ್ನು ಅವಲೋಕಿಸಿದಾಗ ಒಕ್ಕಲಿಗರು ಗ್ರಾಮಗಳ ಆಡಳಿತದಲ್ಲಿ ಸಕ್ರಿಯ ಪಾಲ್ಗೊಳ್ಳುವುದಲ್ಲದೆ ನಾಡಿನ ಸರ್ವತೋಮುಖ ಅಭಿವೃದ್ಧಿಗೆ ಹೇಗೆ ಶ್ರಮಿಸುತ್ತಿದ್ದರೆಂಬುದು ತಿಳಿಯುತ್ತದೆ. ಯುದ್ಧ ಕಾಲದಲ್ಲಿ ಯುದ್ಧದಲ್ಲಿ ವೀರಾಗ್ರಣಿಗಳಂತೆ ಹೋರಾಡಿ ನಾಡ ರಕ್ಷಣೆ ಮಾಡುತ್ತಿದ್ದರು. ಉಳಿದಂತೆ ವ್ಯವಸಾಯದ ಜೊತೆಗೆ ಗ್ರಾಮಗಳ ಆಡಳಿತವನ್ನು ವ್ಯವಸ್ಥಿತವಾಗಿ ನಡೆಸುತ್ತಿದ್ದರು. ಗ್ರಾಮಗಳಲ್ಲಿದ್ದ, ಕುಂಬಾರ, ಕಮ್ಮಾರ, ತಳವಾರ, ಕೆಲಸಿ, ಚಮ್ಮಾರ ಮುಂತಾದ ಗ್ರಾಮೀಣ ಕಸುಬುದಾರರಿಗೆಲ್ಲಾ ಆಶ್ರಯಧಾತರಾಗಿದ್ದು, ಸುಭದ್ರ ನಾಡಿನ ಆಧಾರ ಸ್ತಂಭಗಳೆನಿಸಿದ್ದರು.

* * * * *

# ಅಧ್ಯಾಯ -೭

## ಮೈಸೂರು ಮತ್ತು ಕೋಲಾರದ ಒಕ್ಕಲಿಗರು ಹಾಗೂ ಒಕ್ಕಲಿಗರ ಸಂಘಗಳು

೭.೧ ಮೈಸೂರು ಜಿಲ್ಲಾ ಒಕ್ಕಲಿಗರ ಸಂಘ

೭.೨. ಮೈಸೂರು ಸಂಘವು ನಡೆದು ಬಂದ ಒಂದು ಪಕ್ಷಿನೋಟ

೭.೩. ಕೋಲಾರ ಜಿಲ್ಲೆಯ ಒಕ್ಕಲಿಗರ ಚಾರಿತ್ರಿಕ ಹಿನ್ನೆಲೆ

## ೭.೧. ಮೈಸೂರು ಜಿಲ್ಲೆ ಒಕ್ಕಲಿಗರ ಸಂಘ

ಮೈಸೂರು ಜಿಲ್ಲೆಯಲ್ಲಿ ಅಪಾರವಾದ ಜನಸಂಖ್ಯೆಯನ್ನು ಹೊಂದಿರುವ ಒಕ್ಕಲಿಗ ಜನಾಂಗದ ನಡುವೆ, ಸ್ನೇಹ, ಸಹಕಾರ, ಸಂಘಟನೆಗಳನ್ನು ರೂಪಿಸುವ ಸಲುವಾಗಿ ಅಂದಿನ ಕೆಲವು ಪ್ರಾತಃ ಸ್ಮರಣೀಯ ಹಿರಿಯರು ತುಂಬಾ ಶ್ರಮವಹಿಸಿ ಒಕ್ಕಲಿಗರ ಸಂಘವನ್ನು ಅಸ್ತಿತ್ವಕ್ಕೆ ತಂದರು. ಹಳ್ಳಿಗಾಡಿನ ಮಕ್ಕಳಿಗೆ ವಿದ್ಯಾಭ್ಯಾಸಕ್ಕೆ ಅನುಕೂಲವಾಗಲಿ ಎಂಬ ಸದುದ್ದೇಶದಿಂದ ವಿದ್ಯಾರ್ಥಿನಿಲಯ ಸ್ಥಾಪಿಸುವ ಸಲುವಾಗಿ ಅಂದಿನ 'ಮೈಸೂರು ನಗರಾಭಿವೃದ್ಧಿ ಸಮಿತಿ'ಯಿಂದ ಈಗಿರುವ ಸಂಘದ ವಿಶಾಲವಾದ ನಿವೇಶನವನ್ನು ಪಡೆದು ದಾನ ಮತ್ತು ಧರ್ಮದ ಮೂಲಕ ಹಣ ಸಂಗ್ರಹಿಸಿ ಅತ್ಯಂತ ಶ್ರದ್ಧೆ ಮತ್ತು ಪ್ರೀತಿಯಿಂದ ಸಂಘವನ್ನು ಕಟ್ಟಿ ಬೆಳೆಸಲಾಯಿತು.

ಮುಂದೆ ಶ್ರೀ ಜಿ.ಕೆ.ವರದಪ್ಪನವರ ಅಧ್ಯಕ್ಷತೆಯಲ್ಲಿ ಅಸ್ತಿತ್ವಕ್ಕೆ ಬಂದ ಈ ಸಮಿತಿ ಒಂದು ಸುಸಜ್ಜಿತ ಸಮುದಾಯ ಭವನವನ್ನು ಕಟ್ಟಿಸಲೇಬೇಕೆಂಬ ಸದುದ್ದೇಶದಿಂದ ೧೯೮೮ರ ಆಗಸ್ಟ್ ೨೪ನೇ ತಾರೀಖು ಬಾಲಗಂಗಾಧರನಾಥ ಮಹಾಸ್ವಾಮಿಗಳ ಅಧ್ಯಕ್ಷತೆಯಲ್ಲಿ ಭವನದ ನಿರ್ಮಾಣ ಕಾರ್ಯವನ್ನು ಕೈಗೆತ್ತಿಕೊಂಡಿತು. ಅಂದಿನಿಂದ ಹಂತ, ಹಂತವಾಗಿ ಈ ಭವನವನ್ನು ಸುಸಜ್ಜಿತಗೊಳಿಸಲಾಗಿದೆ. ಹಾಗೂ ವಿದ್ಯಾರ್ಥಿಗಳಿಗೆ ಮತ್ತಷ್ಟು ಹೊಸ ಕೊಠಡಿಗಳನ್ನು ನಿರ್ಮಿಸಿ, ಹೆಚ್ಚಿನ ಸಂಖ್ಯೆಗೆ ಅವಕಾಶ ಮಾಡಿಕೊಡಲಾಗಿದೆ.

ಮಂಡಳಿ ಅತ್ಯಂತ ದೃಢವಾದ ಹೆಜ್ಜೆಗಳನ್ನು ಸಾವಧಾನವಾಗಿ ಇಡುತ್ತಾ ಸಾಗಿ ಬಂದಿದೆ. ಚಿನ್ನಪ್ಪರೆಡ್ಡಿ ಆಯೋಗದ ವಿರುದ್ಧ, ಜನಾಂಗದ ಹೋರಾಟ ನಡೆದಾಗ ಸಂಘವೇ ಮುಂಚೂಣಿಯಲ್ಲಿ ನಿಂತು ಹೋರಾಡಿತು. ಮುಂದೆ ಆದಿಚುಂಚನಗಿರಿ ಮಹಾಸ್ವಾಮಿಗಳ ಪಟ್ಟಾಭಿಷೇಕ ಪಡೆದು ೨೫ ವರ್ಷಗಳು ತುಂಬಿದ ಆ ಸದಾವಕಾಶವನ್ನು ಉಪಯೋಗಿಸಿಕೊಂಡು ಸಂಘದ ಅಧ್ಯಕ್ಷರ ನೇತೃತ್ವದಲ್ಲಿಯೇ ರಜತ ಮಹೋತ್ಸವ ಸಮಾರಂಭವನ್ನು ನಡೆಸಲಾಯಿತು. ಆ ಕಾರ್ಯಕ್ರಮ ಇಡೀ ಜಿಲ್ಲೆಯ ಜನಾಂಗದ ಜನತೆಯಲ್ಲಿ ಹೊಸ ಚೈತನ್ಯ ಮೂಡಿಸಿತೆಂದರೆ ತಪ್ಪಾಗಲಾರದು.

ಜನಾಂಗದವರ ನಡುವೆ ಒಗ್ಗಟ್ಟನ್ನು ರೂಪಿಸುವ ಸಲುವಾಗಿ ನಾನಾ ಸರ್ಕಾರಿ ಅಂಗಸಂಸ್ಥೆಗಳಲ್ಲಿ, ಕಾರ್ಖಾನೆಗಳಲ್ಲಿ ನಗರ ಮತ್ತು ತಾಲ್ಲೂಕು ಮಟ್ಟದಲ್ಲಿ ಸಂಘಗಳನ್ನು ಸ್ಥಾಪಿಸಲು ಉದ್ದೇಶಿಸಿ ನಂಜನಗೂಡು,

ಕೊಳ್ಳೆಗಾಲ, ಹೆಚ್.ಡಿ.ಕೋಟೆ, ಕೆ.ಆರ್. ನಗರ ಮತ್ತು ಮೈಸೂರು ತಾಲ್ಲೂಕುಗಳಲ್ಲಿ ಸಂಘಟನೆ ಮಾಡಲಾಯಿತು. ಇದೇ ರೀತಿ ಕೆ.ಎಸ್.ಆರ್.ಟಿ.ಸಿ, ಬಿ.ಇ.ಎಂ.ಎಲ್ ಮತ್ತು ವಿಕ್ರಾಂತ್ ಕಾರ್ಖಾನೆಗಳಲ್ಲಿಯೂ ಜನಾಂಗದ ಸಂಘಗಳನ್ನು ಸ್ಥಾಪಿಸಲಾಗಿದೆ. ನಮ್ಮ ಸಲಹೆ ಮತ್ತು ಮಾರ್ಗದರ್ಶನಗಳ ಫಲವಾಗಿ ಮೈಸೂರು ತಾಲ್ಲೂಕು ಒಕ್ಕಲಿಗರ ಸಂಘ, ಬಿ.ಇ.ಎಂ.ಎಲ್. ಒಕ್ಕಲಿಗರ ಸಂಘ ಮತ್ತು ಕರ್ನಾಟಕ ರಾಜ್ಯ ಕೇಂದ್ರ ಒಕ್ಕಲಿಗರ ಸಂಘದವರು ತಮ್ಮದೇ ಸ್ವಂತ ನಿವೇಶನಗಳನ್ನು ಪಡೆದಿದ್ದಾರೆ.

ಜಿಲ್ಲೆಯೊಳಗೆ ಅಲ್ಪಸಂಖ್ಯಾತರಾಗಿರುವ ಕಡೆ ನಮ್ಮವರ ಮೇಲೆ ಮಾನಸಿಕ ಹಿಂಸೆಗಳ ಹಾಗೂ ದೈಹಿಕ ಆಕ್ರಮಣಗಳು ನಡೆದಾಗ ನಮ್ಮ ಸಂಘ ತುಂಬಾ ಪರಿಣಾಮಕಾರಿಯಾಗಿ ಪ್ರತಿನಿಧಿಸಿ ಜನಾಂಗದ ಹಿತರಕ್ಷಣೆಯನ್ನು ಮಾಡಲಾಯಿತು. ಹೀಗಾಗಿ ತೊಂದರೆಗೆ ಒಳಗಾದ ಯಾರು ಬೇಕಾದರೂ ಸಂಘವನ್ನು ಸಂಪರ್ಕಿಸಬಹುದೆಂಬ ಮನೋಭಾವನೆ ಮೂಡುವಂತಹ ವಾತಾವರಣವನ್ನು ರೂಪಿಸಲಾಗಿದೆ.

ಇದೆಲ್ಲಕ್ಕಿಂತ ಶೈಕ್ಷಣಿಕ ಮತ್ತು ಬೌದ್ಧಿಕ ಬೆಳವಣಿಗೆಗೆ ಆದ್ಯ ಗಮನವನ್ನು ನೀಡಬೇಕೆಂಬ ಉದ್ದೇಶದಿಂದ ಬೆಂಗಳೂರಿನ ಕೃಷಿಕ ಸರ್ವೋದಯ ಫೌಂಡೇಶನ್ ಅವರ ಜೊತೆ ಸ್ಪರ್ಧಾತ್ಮಕ ಪರೀಕ್ಷೆಗಳಿಗೆ ಕುಳಿತುಕೊಳ್ಳುವ ವಿದ್ಯಾರ್ಥಿಗಳಿಗೆ ಅನುಕೂಲವಾಗಲಿ ಎಂಬ ಉದ್ದೇಶದಿಂದ ಆ ಸಂಸ್ಥೆಗೆ ದಾನವನ್ನು ನೀಡಲಾಗುತ್ತಿದೆ. ಇದೇ ರೀತಿ ಈ ಜನಾಂಗದ ಮಕ್ಕಳಲ್ಲಿನ ಪ್ರತಿಭೆಯನ್ನು ಹೊರ ಹೊಮ್ಮಿಸುವ ಸಲುವಾಗಿ ಎಸ್.ಎಸ್.ಎಲ್.ಸಿ ಮತ್ತು ಪಿ.ಯು.ಸಿ ತರಗತಿಗಳಲ್ಲಿ ಅತ್ಯುತ್ತಮ ಶ್ರೇಣಿಯನ್ನು ಪಡೆದಿರುವ ಮಕ್ಕಳನ್ನು ಸಂಘಕ್ಕೆ ಬರಮಾಡಿಕೊಂಡು ಪ್ರೋತ್ಸಾಹಿಕ ಬಹುಮಾನ ಹಾಗೂ ನೆನಪಿನ ಕಾಣಿಕೆಗಳನ್ನು ನೀಡಿ ಪ್ರೋತ್ಸಾಹಿಸಲಾಗುತ್ತಿದೆ. ಆ ಕಾರ್ಯಕ್ರಮಗಳಿಗೆ ಮೈಸೂರು ಜಿಲ್ಲೆಯಲ್ಲಿ ಸೇವೆ ಸಲ್ಲಿಸುತ್ತಿರುವ ನಾನಾ ಹಂತದ ಸರ್ಕಾರಿ ಅಧಿಕಾರಿಗಳನ್ನು ಬರಮಾಡಿಕೊಂಡು ವಿದ್ಯಾರ್ಥಿಗಳಿಗೆ ಸಲಹೆ ಮತ್ತು ಮಾರ್ಗದರ್ಶನ ನೀಡಲಾಗುತ್ತಿದೆ. ಇದಿಷ್ಟೇ ಅಲ್ಲದೆ ಪ್ರತಿಯೊಂದು ಮಗುವಿನ ತಂದೆ-ತಾಯಿಯರನ್ನು ಸಮಾರಂಭಕ್ಕೆ ಬರಮಾಡಿಕೊಂಡು ಸಂತಸದ ವೇಳೆಯನ್ನು ಕಳೆಯುವಂತೆ ಮಾಡುವ ವ್ಯವಸ್ಥೆ ಕಲ್ಪಿಸಲಾಗಿದೆ. ಅಲ್ಲದೆ ತುಂಬಾ ಕಡುಬಡತನದಿಂದ ವಿದ್ಯಾಭ್ಯಾಸ ಮಾಡಲು ತೊಂದರೆಯಾಗುತ್ತಿರುವ ವಿದ್ಯಾರ್ಥಿಗಳಿಗೆ ಪ್ರತಿ ತಿಂಗಳೂ ಉತ್ತೇಜನ ವಿದ್ಯಾರ್ಥಿ ವೇತನ ನೀಡಲಾಗುತ್ತಿದೆ. ಕನ್ನೇಗೌಡ ಕೊಪ್ಪಲಿನ ಇತಿಹಾಸದಲ್ಲೇ ಎಸ್.ಎಸ್.ಎಲ್.ಸಿ ಯಲ್ಲಿ ಅತ್ಯಂತ ಹೆಚ್ಚು ಅಂಕ ಪಡೆದು ಪಾಸು ಮಾಡಿದ ಒಬ್ಬ ವಿದ್ಯಾರ್ಥಿಗೆ ಪ್ರತಿಭಾ ಪುರಸ್ಕಾರದ ಜೊತೆಗೆ ಆಕೆಯ ಒಂದು ವರ್ಷದ ವಿದ್ಯಾಭ್ಯಾಸ ಖರ್ಚನ್ನು ಸಂಘವೇ ಭರಿಸಿದೆ.

ಹೀಗೆ ಹಲವಾರು ಕಾರ್ಯಕ್ರಮಗಳನ್ನು ಕಾಲಕಾಲಕ್ಕೆ ಹಮ್ಮಿಕೊಳ್ಳುತ್ತಲೇ ಬರಲಾಗುತ್ತಿದೆ. ಅನೇಕ ಅಡೆತಡೆಗಳಿಂದ ಯೋಜಿಸಿದಷ್ಟು ಕೆಲಸ ಕಾರ್ಯಗಳನ್ನು ಸಾಧಿಸಲಾಗಲಿಲ್ಲ. ಆದರೆ ಈಗ ಸಂಘದ ಅಭಿವೃದ್ಧಿಯ ಎಲ್ಲಾ ಕಾರ್ಯಗಳು ಬಹುಮಟ್ಟಿಗೆ ಮುಗಿದಿವೆ. ಸಂಘದ ಇಂದಿನ ಸಶಕ್ತತೆ ಜನಾಂಗದ ಅಭ್ಯುದಯಕ್ಕೆ ಅನುಕೂಲ ಮಾಡಿಕೊಡುತ್ತದೆ ಎಂಬುದರಲ್ಲಿ ಯಾವ ಅನುಮಾನವಿಲ್ಲ. ಸಂಘವು ಸಾಗಿಬಂದಿರುವ ಹಾದಿಯ ಹೆಜ್ಜೆಗಳು ತುಂಬಾ ಪುಟ್ಟಪುಟ್ಟ ಹೆಜ್ಜೆಗಳಾದರೂ ಅವು ಅತ್ಯಂತ ನಿಯಮಬದ್ಧವಾದ ಲೆಕ್ಕಾಚಾರದ ಆತ್ಮ ವಿಶ್ವಾಸದ ಪ್ರಾಮಾಣಿಕತೆಯ ಹೆಜ್ಜೆಗಳಾಗಿವೆ.

ಸಂಘದ ಆರಂಭದಿಂದಲೂ, ಸಂಘದ ಅಭಿವೃದ್ಧಿಗಾಗಿ ದಾನ, ವಂತಿಕೆ, ಸದಸ್ಯತ್ವ ಮುಂತಾದವುಗಳ ಮೂಲಕ ಸಹಾಯ ಮಾಡಿದ ನೂರಾರು ಹಿರಿಯರು, ನಮ್ಮೊಡನೆ ಸಹಕರಿಸಿ ಆಶೀರ್ವದಿಸಿದ್ದಾರೆ. ಇವರೆಲ್ಲರ ಶ್ರಮದ

ಪ್ರೀತಿಯ ಕೊಡುಗೆಯ ಫಲವೇ ಈ ಭವ್ಯ ಭವನ. ಈ ಸಂಘಕ್ಕೆ ಸದಸ್ಯತ್ವ ಪಡೆಯುವುದಕ್ಕೆ ಪೂರ್ಣ ಮುಕ್ತವಾಗಿರಬೇಕು ಎಂಬ ಉದ್ದೇಶದಿಂದ ತೀರಾ ಇತ್ತೀಚಿನ ತನಕ ಸದಸ್ಯತ್ವದ ನೋಂದಣಿ ಕಾರ್ಯವನ್ನು ಮುಕ್ತವಾಗಿಟ್ಟಿದ್ದೆವು. ಆದರೆ ಹೇಳಿಕೊಳ್ಳು ಪ್ರಮಾಣದಲ್ಲಿ ಸದಸ್ಯತ್ವ ಪಡೆಯಲಿಲ್ಲ.

ಜನಾಂಗದ ಕುಟುಂಬಗಳಿಗೆ ಅನುಕೂಲವಾಗಲಿ ಎಂಬ ಉದ್ದೇಶದಿಂದ ಒಕ್ಕಲಿಗರ ವಿವಾಹ ವೇದಿಕೆಯನ್ನು ಇಲ್ಲಿ ರೂಪಿಸಲಾಗಿದೆ. ಆದರೆ ನಿಷ್ಠಾವಂತ ಕಾರ್ಯಕರ್ತರ ಕೊರತೆಯಿಂದ ಅದು ಯಶಸ್ವಿಯಾಗಿಲ್ಲ.

ಹಾಲಿ ಅಧ್ಯಕ್ಷರಾದ ಶ್ರೀ ಜಿ.ಕೆ.ವರದಪ್ಪನವರ ವೈಯಕ್ತಿಕ ಶ್ರಮ ಹಾಗೂ ದಾನವನ್ನು ಕೃತಜ್ಞತೆಯಿಂದ ನೆನೆದು ಗೌರವಿಸಬೇಕಾಗಿದೆ. ಅವರು ಬೆಂಗಳೂರಿನ ಕೇಂದ್ರ ಒಕ್ಕಲಿಗರ ಸಂಘದ ಸದಸ್ಯರಾಗಿದ್ದ ಅವಧಿಯಲ್ಲಿ ಅವರಿಗೆ ದೊರೆತಿದ್ದ ಆರ್ಥಿಕ ಮೂಲಗಳಿಂದ ಬಂದ ಹಣವನ್ನು ಸಂಪೂರ್ಣವಾಗಿ ಸಂಘಕ್ಕೆ ದಾನ ನೀಡಿ ಇದರ ಇಂದಿನ ಬೆಳವಣಿಗೆಗೆ ಕಾರಣರಾಗಿದ್ದಾರೆ. ಇದೇ ರೀತಿ ಬೆಂಗಳೂರು ಕೇಂದ್ರ ಒಕ್ಕಲಿಗರ ಸಂಘದ ಹಾಲಿ ಸದಸ್ಯರಾಗಿರುವ ಮೈಸೂರಿನ ಮಹೇಶ ನರ್ಸಿಂಗ್ ಹೋಮಿನ ಮಾಲೀಕರಾದ ಡಾ.ಕೆ.ಮಹದೇವರವರು ಅಪಾರವಾದ ಹಣದ ಮೂಲವನ್ನು ದೊರಕಿಸಿಕೊಟ್ಟಿದ್ದಾರೆ. ಒಟ್ಟಿನಲ್ಲಿ ಸಂಘವು ಸ್ಥಾಪನೆಯಾದ ದಿವಸದಿಂದಲೂ ಹಲವಾರು ಗಣ್ಯರು, ಹಿರಿಯರು, ಹಿತೈಷಿಗಳು ತುಂಬು ಹೃದಯದಿಂದ ಸಹಾಯದ ಹಸ್ತ ನೀಡಿ ಮಾರ್ಗದರ್ಶನ ನೀಡಿದ್ದಾರೆ. ಬೆಂಗಳೂರಿನ ಕೇಂದ್ರ ಒಕ್ಕಲಿಗರ ಸಂಘದವರು ಮೈಸೂರಿನಲ್ಲಿ ನಿವೇಶನಕ್ಕಾಗಿ ಅರ್ಜಿ ಸಲ್ಲಿಸಲು, ನಿವೇಶನವನ್ನು ಮಂಜೂರು ಮಾಡಿಸಲು ಹಾಗೂ ರಿಯಾಯತಿ ದರದಲ್ಲಿ ದೊರೆಯುವಂತೆ ಮಾಡಲು ಕೇಂದ್ರ ಒಕ್ಕಲಿಗ ಸಂಘದ ಸದಸ್ಯರಾದ ಶ್ರೀ ಹೆಚ್.ಕೆ.ರಮೇಶ್‌ರವರು ಅಪಾರವಾದ ಶ್ರಮ ವಹಿಸಿದ್ದಾರೆ. ಇವರು ಸಹ ಆರ್ಥಿಕ ನೆರವನ್ನು ನೀಡಿದ್ದಾರೆ. ಇದೇ ರೀತಿ ಮತ್ತೊಬ್ಬ ಯುವ ಪ್ರತಿನಿಧಿಯಾದ ಶ್ರೀ ಪಿ.ವೆಂಕಟೇಶ್‌ರವರೂ ಸಹ ಸಹಕರಿಸಿದ್ದಾರೆ.

ಒಟ್ಟಿನಲ್ಲಿ ಇದು ನೂರಾರು ಕೈಗಳು ನೀಡಿದ ಸಹಕಾರ ಹಸ್ತದಿಂದ ರೂಪುಗೊಂಡಿರುವ ಪ್ರಯತ್ನವಾಗಿದೆ. ಪ್ರಸ್ತುತ ಸಂಘ ಒಂದು ಬಲಿಷ್ಠ ತಳಹದಿಯ ಮೇಲೆ ನಿಂತಿದೆ. ಇಲ್ಲಿಯ ತನಕ ದುಡಿದದ್ದು ಉಳಿಸಿದ್ದು ಎಲ್ಲವನ್ನೂ ತೊಡಗಿಸಿ ಮಾರ್ಗವನ್ನು ರೂಪಿಸಲಾಗಿದೆ. ಮುಂದೆ ಮೈಸೂರು ಒಕ್ಕಲಿಗರ ಸಂಘ ಒಂದು ಮಹತ್ವದ ಸಾಂಸ್ಕೃತಿಕ ಸಂಘವಾಗಿ ಮುನ್ನಡೆಯುತ್ತದೆ.

**೭.೨. ಮೈಸೂರು ಸಂಘವು ನಡೆದು ಬಂದ ಒಂದು ಪಕ್ಷಿ ನೋಟ**

೦೧. ದಿನಾಂಕ.೨೮.೫.೧೯೯೮ನಮ್ಮ ಸಂಸ್ಥೆಯ ಮುಂಭಾಗದಲ್ಲಿ ವಾಣಿಜ್ಯ ಸಂಕೀರ್ಣಗಳನ್ನು ನಿರ್ಮಿಸಲು ಪ್ರಾರಂಭಿಸಿತು.

೦೨. ದಿನಾಂಕ.೧೮.೦೮.೧೯೯೮ರಲ್ಲಿ ಸುವರ್ಣ ಮಹೋತ್ಸವ ಸ್ವಾತಂತ್ರ್ಯ ಸಮಾರಂಭದ ಅಂಗವಾಗಿ ಶ್ರೀ ಚಂದ್ರಮೌಳೇಶ್ವರ ವಿದ್ಯಾ ಸಂಸ್ಥೆಯ ಬಡ ವಿದ್ಯಾರ್ಥಿಗಳಿಗೆ ಸಂಸ್ಥೆಯಿಂದ ಸಮವಸ್ತ್ರವನ್ನು ಕೊಡಲಾಯಿತು.

೦೩. ದಿನಾಂಕ.೧೮.೧೨.೧೯೯೮ರಲ್ಲಿ ಬೆಂಗಳೂರು ಒಕ್ಕಲಿಗರ ಸಂಘಕ್ಕೆ ಸಹಾಯ ಮಾಡುವಂತೆ ಕೋರುವ ಬಗ್ಗೆ ಮನವಿಯನ್ನು ಕೊಡಲಾಯಿತು.

೦೪. ದಿನಾಂಕ.೨೭.೦೨.೧೯೯೯ರಂದು ಕೆ.ಜಿ.ಕೊಪ್ಪಲ್ ಸ್ಮಶಾನ ಅಭಿವೃದ್ಧಿಯ ಬಗ್ಗೆ ನಗರ ಪಾಲಿಕೆ ಆಯುಕ್ತರಿಗೆ ಮನವಿಯನ್ನು ನೀಡಲಾಯಿತು.

೦೫. ದಿನಾಂಕ.೨೮.೦೩.೧೯೯೯ ರಿಂದ ೩೯.೦೩.೧೯೯೯ರ ವರೆಗೆ ರಾಜ್ಯ ಮಟ್ಟದ ವಾಲಿಬಾಲ್ ಪಂದ್ಯಾವಳಿಯನ್ನು ನಡೆಸಲಾಯಿತು.

೦೬. ದಿನಾಂಕ.೨೬.೦೬.೧೯೯೯ರಂದು ಅಪೋಲೋ ಆಸ್ಪತ್ರೆಯಲ್ಲಿ ಸಂಸ್ಥೆಯ ಯುವಕ/ಯುವತಿಯರನ್ನು ಸೇರಿಸಲು ಮನವಿಯನ್ನು ಶ್ರೀ ಆದಿ ಚುಂಚನಗಿರಿ ಪೀಠಾಧ್ಯಕ್ಷರಾದ ಬಾಲಗಂಗಾಧರನಾಥ ಸ್ವಾಮೀಜಿಯವರಿಗೆ ಸಲ್ಲಿಸಲಾಯಿತು. ಈ ಮನವಿಗೆ ಒಪ್ಪಿ ಈ ಸಂಸ್ಥೆಯ ಮುಖಾಂತರ ಹಲವಾರು ಯುವಕ/ಯುವತಿಯರನ್ನು ತೆಗೆದುಕೊಂಡಿರುತ್ತಾರೆ.

೦೭. ದಿನಾಂಕ.೧೮.೦೮.೧೯೯೯ರಂದು ಕಾರ್ಗಿಲ್ ಯುದ್ಧದಲ್ಲಿ ಮಡಿದ ಯೋಧರಿಗೆ ಸಂಸ್ಥೆಯ ವತಿಯಿಂದ ಅವರ ಊರುಗಳಿಗೆ ಹೋಗಿ ಅವರ ಮನೆಯ ಬಾಗಿಲಿಗೆ ನೆರವನ್ನು ನೀಡಲಾಯಿತು.

೦೮. ದಿನಾಂಕ.೨೩.೦೩.೨೦೦೦ರಂದು ನಗರ ಪಾಲಿಕೆಯ ವತಿಯಿಂದ ಉಚಿತ ಆರೋಗ್ಯ ಶಿಬಿರವನ್ನು ಸಂಸ್ಥೆಯು ಸಾರ್ವಜನಿಕ ಅನುಕೂಲಕ್ಕಾಗಿ ಯೋಜಿಸಲಾಯಿತು.

೦೯. ದಿನಾಂಕ.೧೬.೦೫.೨೦೦೦ರಂದು ಎ.ಸಿ.ಚಂದ್ರೇಗೌಡರವರನ್ನು ಸೇವೆಯಿಂದ ತೆಗೆಯುವಂತೆ ಸಾರ್ವಜನಿಕರಿಂದ ತೊಂದರೆಯನ್ನು ಹೆದರಿಸಬೇಕಾಗಿತ್ತು. ಅದಕ್ಕೆ ಸಂಸ್ಥೆಯು ಅವರ ಸಹಾಯಕ್ಕೆ ನಿಂತು, ಮುಖ್ಯ ಮಂತ್ರಿಗಳನ್ನು ಬೇಟಿ ಮಾಡಿ ಮನವಿಯನ್ನು ಸಲ್ಲಿಸಿ, ಅದಕ್ಕೆ ಅವರಿಂದ ಅನುಕೂಲವಾಗುವಂತಹ ಕೆಲಸವನ್ನು ಮಾಡಿಸಲಾಯಿತು.

೧೦. ದಿನಾಂಕ.೧೬.೦೫.೨೦೦೦ರಂದು ಟಿ.ನರಸೀಪುರದಲ್ಲಿ ಒಕ್ಕಲಿಗರಿಗೆ ತೊಂದರೆ ಆದಾಗ ಸಂಸ್ಥೆಯ ಮುಖ್ಯಮಂತ್ರಿಗಳನ್ನ ಭೇಟಿ ಮಾಡಿ ಮನವಿಯನ್ನು ಸಲ್ಲಿಸಿತು ಮತ್ತು ಪತ್ರಿಕಾ ಹೇಳಿಕೆಯನ್ನು ಕೊಟ್ಟು ಸಹಾಯ ಮಾಡಿತು.

೧೧. ದಿನಾಂಕ.೩೯.೦೯.೨೦೦೦ರಂದು ಮೈಸೂರು ವಿಶ್ವವಿದ್ಯಾನಿಲಯದ ಕುಲಪತಿ ನೇಮಕ ಮಾಡು ಬಗ್ಗೆ ಮುಖ್ಯಮಂತ್ರಿಗಳಿಗೆ ಒಂದು ಮನವಿ ಪತ್ರವನ್ನು ಕೊಟ್ಟು ಒಕ್ಕಲಿಗರನ್ನು ನೇಮಿಸುವಂತೆ ಕೇಳಿಕೊಂಡಿತ್ತು.

೧೨. ದಿನಾಂಕ ೧೯.೧೦.೨೦೦೦ರಂದು ಡೆಂಗೇ ಜ್ವರ ಕಾಣಿಸಿಕೊಂಡಾಗ ಸಂಸ್ಥೆಯು ಸಾರ್ವಜನಿಕರಿಗೆ ಅನುಕೂಲವಾಗುವಂತೆ ಜಿಲ್ಲಾ ಆರೋಗ್ಯ ಅಧಿಕಾರಿಗಳಿಗೆ ಪತ್ರ ಬರೆದು ಫಾಂಗಿಂಗ್ ವ್ಯವಸ್ಥೆ ಮಾಡುವಂತೆ ಕೇಳಿದಾಗ ಅವರು ಅದಕ್ಕೆ ಸ್ಪಂಧಿಸಿ ಎಲ್ಲರಿಗೂ ಅನುಕೂಲವಾಗುವಂತೆ ಮಾಡಿದರು.

೧೩. ದಿನಾಂಕ.೧೯.೧೦.೨೦೦೦ರಂದು ಬಿ.ಜಿ.ಎಸ್.ಅಪೋಲೋ ಆಸ್ಪತ್ರೆಯ ವಿಷಯವಾಗಿ ಹೆಚ್.ವಿಶ್ವನಾಥ್‌ರವರು ಆಸ್ಪತ್ರೆಗೆ ನಿವೇಶನವನ್ನು ನೀಡದಂತೆ ಸರ್ಕಾರಕ್ಕೆ ನೀಡಿರುವ ಹೇಳಿಕೆಯ ಬಗ್ಗೆ ಸಂಸ್ಥೆಯು ಜನಾಂಗದ ಸಭೆಯನ್ನು ಕರೆದು ಈ ವಿಷಯದ ಬಗ್ಗೆ ಚರ್ಚಿಸಿ ಮುಖ್ಯ ಮಂತ್ರಿಗಳಿಗೆ ಮತ್ತು ಪ್ರಧಾನ ಮಂತ್ರಿಗಳಿಗೆ; ಜನಾಂಗದ ಎಲ್ಲಾ ಹಿರಿಯ ರಾಜಕಾರಣಿಗಳಿಗೆ ಮನವಿಯನ್ನು ಕಳಿಸಿಕೊಟ್ಟಿರುತ್ತದೆ.

೧೪. ದಿನಾಂಕ.೨೪.೧೨.೦೦ರಂದು ಎಂ.ಶಿವಮಾದಯ್ಯನವರ ಬಗ್ಗೆ ಭೂದಾಖಲೆಗಳು ಜಂಟಿ ನಿರ್ದೇಶಕರಿಗೆ ತೇಜೋವಧೆಗೆ ಪ್ರಯತ್ನಿಸಿದ ಬಗ್ಗೆ ಪತ್ರಿಕಾ ಹೇಳಿಕೆಯನ್ನು ಕೊಡಲಾಯಿತು.

೧೫. ದಿನಾಂಕ.೨೬.೧೨.೨೦೦೦ ಚಾಮುಂಡಿ ಬೆಟ್ಟದ ಕೆಳಭಾಗದ ಆದಿ ಚುಂಚನಗಿರಿ ಮಠದ ಜಾಗದ ವಿಷಯಕ್ಕೆ ಸಂಬಂಧಿಸಿದಂತೆ ಬೇರೆ ಜನಾಂಗದ ಮುಖಂಡರುಗಳು ಈ ಜಾಗಕ್ಕೆ ಸಂಬಂಧಿಸಿದಂತೆ ತಕರಾರುಗಳನ್ನು ಮಾಡುತ್ತಿದ್ದರು. ಇದರ ಬಗ್ಗೆ ಹಗಲು ರಾತ್ರಿ ಎನ್ನದೆ ಹೋರಾಟಮಾಡಿ ಆ ಜಾಗವನ್ನು ಶ್ರೀ ಆದಿಚುಂಚನಗಿರಿ ಮಠಕ್ಕೆ ದೊರಕಿಸಿಕೊಟ್ಟೆವು.

೧೬. ದಿನಾಂಕ.೨೫.೦೧.೨೦೦೧ರಂದು ಕುವೆಂಪು ಶಾಲೆಯ ಬಗ್ಗೆ ವಿಷಯಕ್ಕೆ ಸಂಬಂಧಿಸಿದಂತೆ ವ್ಯವಸ್ಥೆಯನ್ನು ಪರಿಶೀಲಿಸಿ ಶಾಲೆಗೆ ತೊಂದರೆ ಆಗದಂತೆ ನೋಡಿಕೊಳ್ಳುವಂತೆ ಮಾಡಲಾಯಿತು.

೧೭. ದಿನಾಂಕ. ೨೧.೧೨.೨೦೦೧ರಂದು ಚಾಮರಾಜನಗರ ಜಿಲ್ಲೆಯ ತಳಿನೂರು ಗ್ರಾಮದ ಒಕ್ಕಲಿಗರ ಕುಟುಂಬಕ್ಕೆ ರಕ್ಷಣೆ ಕೊಡಬೇಕೆಂದು ಸಂಬಂಧಪಟ್ಟ ಅಧಿಕಾರಿಗಳಿಗೆ ಅರ್ಜಿಸಲ್ಲಿಸಲಾಯಿತು.

೧೮. ದಿನಾಂಕ.೧೮.೦೧.೨೦೦೨ರಂದು ಕೆ.ಜಿ.ಕೊಪ್ಪಲ್ ಶಾಲೆಗೆ ನೆರವು ನೀಡುವ ಬಗ್ಗೆ ಮುಖ್ಯೋಪಾಧ್ಯಾಯರಿಗೆ ಪತ್ರವನ್ನು ಬರೆದು ಧನಸಹಾಯ ನೀಡಲಾಯಿತು.

೧೯. ದಿನಾಂಕ.೨೫.೦೨.೨೦೦೨ರಂದು ಸಂಸ್ಥೆಯವತಿಯಿಂದ ಬಡ ಹುಡುಗಿಗೆ ಧನ ಸಹಾಯ ಮಾಡಲಾಯಿತು.

೨೦. ದಿನಾಂಕ.೨೫.೦೨.೨೦೦೨ರಂದು ನಮ್ಮ ಸಂಸ್ಥೆಯ ಮೈಸೂರು ನಗರದಲ್ಲಿ ಕಾವೇರಿ ನೀರಿನ ಸಮಸ್ಯೆ ಬಗ್ಗೆ ಒಂದು ತಿಂಗಳ ಕಾಲ ಪ್ರತಿಭಟನೆಯ ಅಂಗವಾಗಿ ರಸ್ತೆ ತಡೆ ಚಳುವಳಿ ಹಾಗೂ ಮಹಿಳಾ ಮತ್ತು ಮಕ್ಕಳು ರೈಲು ತಡೆ ಚಳುವಳಿ, ಕೆ.ಆರ್.ಸರ್ಕಲ್‌ನಲ್ಲಿ ಪಂಜಿನ ಮೆರವಣಿಗೆ, ಪಶುಗಳಿಂದ ಪ್ರತಿಭಟನಾ ಮೆರವಣಿಗೆ ಇನ್ನೂ ಮುಂತಾದ ಅನೇಕ ರೀತಿಯ ಹೋರಾಟಗಳನ್ನು ಹಮ್ಮಿಕೊಂಡಿತ್ತು.

೨೧. ದಿನಾಂಕ.೨೭.೦೩.೨೦೦೨ರಂದು ಬಿ.ಇ.ಎಂ.ಎಲ್.ಗೃಹ ನಿರ್ಮಾಣ ಸಂಘದವರು ರೈತರಿಗೆ ನಿವೇಶನವನ್ನು ಕೊಡದಂತೆ ತೊಂದರೆಯನ್ನು ಮಾಡುತ್ತಿದ್ದರು, ಅದಕ್ಕೆ ಸಂಸ್ಥೆಯು ಉಗ್ರ ಪ್ರತಿಭಟನೆಯನ್ನು ಮಾಡಿ ನ್ಯಾಯ ಬದ್ಧವಾಗಿ ರೈತರಿಗೆ ಅನುಕೂಲವಾಗುವಂತೆ ಸಹಾಯ ಮಾಡಲಾಯಿತು.

೨೨. ದಿನಾಂಕ.೧೫.೧೧.೨೦೦೨ರಂದು ಆದಿಚುಂಚನಗಿರಿ ಮಠ ಸ್ವಾಮಿಗಳ ಹುಟ್ಟುಹಬ್ಬದ ಪ್ರಯುಕ್ತ ಮೈಸೂರು ಜಿಲ್ಲಾ, ತಾಲ್ಲೂಕು, ಗ್ರಾಮ ಮಟ್ಟದಿಂದ ಜನರನ್ನು ಸೇರಿಸಿ ಸಮಾರಂಭವನ್ನು ಯಶಸ್ವಿಯಾಗಿ ನಡೆಯಲು ಸಹಕರಿಸಿತು.

೨೩. ದಿನಾಂಕ.೧೮.೧೨.೨೦೦೨ರಂದು ಕೆ.ಜಿ.ಕೊಪ್ಪಲ್‌ನಲ್ಲಿ ಭೈರವ ಜ್ಯೋತಿಯ ಮೆರವಣಿಗೆಯನ್ನು ಬೀದಿ ಬೀದಿಗಳ ಮುಖಾಂತರ ತೆಗೆದುಕೊಂಡು ಹೋಗಲು ಸಹಕರಿಸಿತು.

೨೪. ದಿನಾಂಕ.೨೫.೦೪.೨೦೦೩ರಂದು ಸಂಸ್ಥೆಯಲ್ಲಿ ರಾಷ್ಟ್ರನಾಯಕರುಗಳ ಫೋಟೋಗಳನ್ನು ಅನಾವರಣ ಮಾಡಲಾಯಿತು.

೨೫. ದಿನಾಂಕ.೨೮.೦೫.೨೦೦೩ರಂದು ಸಂಸ್ಥೆಯು ಗುಮ್ಮನಹಳ್ಳಿ ಮತ್ತು ಮರಸೆ ಗ್ರಾಮದ ವಿಷಯದ ಬಗ್ಗೆ ಮುಖ್ಯಮಂತ್ರಿಗಳಿಗೆ ಮನವಿ ಮತ್ತು ಪತ್ರಿಕಾ ಹೇಳಿಕೆಯನ್ನು ಕೊಟ್ಟು ಮತ್ತು ಖುದ್ದಾಗಿ ಭೇಟಿಮಾಡಿ ವಿಷಯವನ್ನು ಚರ್ಚಿಸಿ ಜನಾಂಗಕ್ಕೆ ಅನುಕೂಲವಾಗುವಂತೆ ಸಹಾಯ ಮಾಡಲಾಯಿತು.

೨೬. ದಿನಾಂಕ.೩೦.೦೬.೨೦೦೩ರಂದು ಸಂಸ್ಥೆಯ ಡಿ.ಕೃಷ್ಣರವರ ಜಮೀನು ವಿಷಯಕ್ಕೆ ಸಂಬಂಧಿಸಿದಂತೆ ಮಾಜಿ ಶಾಸಕರಾದ ಕೆಂಪೇಗೌಡರ ಮಕ್ಕಳನ್ನು ಕರೆಸಿ ಇವರಿಗೆ ಬರಬೇಕಾದ ೮ ಗುಂಟೆ ಜಮೀನನ್ನು ಬಿಟ್ಟುಕೊಡುವಂತೆ ಸಂಸ್ಥೆಯ ಮಧ್ಯಸ್ಥಿಕೆಯಲ್ಲಿ ಸಹಾಯ ಮಾಡಲಾಯಿತು.

೨೭. ದಿನಾಂಕ.೩೦.೦೬.೨೦೦೩ರಂದು ಕೆ.ಜಿ.ಕೊಪ್ಪಲ್‌ನ ರೈಲ್ವೇಗೇಟ್ ಮುಚ್ಚಿರುವ ಬಗ್ಗೆ ರೈಲು ಅಧಿಕಾರಿಗಳನ್ನು ಬೇಟಿ ಮಾಡಿ ಇದರ ಬಗ್ಗೆ ಕೂಲಂಕುಶವಾಗಿ ಚರ್ಚಿಸಿ ಸಾರ್ವಜನಿಕರಿಗೆ ಅನುಕೂಲವಾಗುವಂತೆ ಸಹಾಯ ಮಾಡಲಾಯಿತು.

೨೮. ದಿನಾಂಕ.೧೮.೦೮.೨೦೦೩ರಂದು ಅಪೋಲೋ ಆಸ್ಪತ್ರೆಯ ಮೊದಲನೆಯ ವರ್ಷಾಚರಣೆಯ ಪ್ರಯುಕ್ತ ಮುಖ್ಯ ಮಂತ್ರಿಗಳಾದ ಎಸ್.ಎಂ.ಕೃಷ್ಣರವರನ್ನು ನಮ್ಮ ಸಂಸ್ಥೆಯ ಹತ್ತಿರ ಬಂದಾಗ ಗೌರವ ವಂದನೆ ಮಾಡಲಾಯಿತು.

೨೯. ದಿನಾಂಕ.೧೯.೧೦.೨೦೦೩ರಂದು ನಮ್ಮ ಸಂಸ್ಥೆಯ ಉಚಿತ ಕಣ್ಣಿನ ತಪಾಸಣೆ ಶಿಬಿರವನ್ನು ಏರ್ಪಡಿಸಲಾಯಿತು, ಇದರಿಂದ ಸಾರ್ವಜನಿಕರಿಗೆ ಅನುಕೂಲವಾಯಿತು ಮತ್ತು ಗಣ್ಯ ವ್ಯಕ್ತಿಗಳಿಗೆ ಸನ್ಮಾನ ಸಮಾರಂಭ ನಡೆಸಲಾಯಿತು. ಮತ್ತು ಊಟದ ವ್ಯವಸ್ಥೆಯನ್ನು ಮಾಡಲಾಯಿತು. ಇದರಿಂದ ಸುಮಾರು ೩೦೦ಜನ ಸಾರ್ವಜನಿಕರಿಗೆ ಅನುಕೂಲವಾಯಿತು.

೩೦. ದಿನಾಂಕ.೨೬.೧೨.೨೦೦೩ರಂದು ಸುತ್ತೂರು ಶ್ರೀಗಳಿಗೆ ನಮ್ಮ ಸಂಸ್ಥೆಯಿಂದ ಗೀತೋಪೊದೇಶ, ನೆನಪಿನಕಾಣಿಕೆ, ಶಾಲು, ಹಣ್ಣು ಹಂಪಲು ನೀಡಿ ಸನ್ಮಾನಿಸಲಾಯಿತು.

೩೧. ದಿನಾಂಕ.೨೦.೦೧.೨೦೦೪ರಂದು ೧೦ನೇ ವಾರ್ಷಿಕೋತ್ಸವದ ಪ್ರಯುಕ್ತ ಸಂಸ್ಥೆಗೆ ಸಹಾಯಮಾಡಿರುವ ಇಬ್ಬರಿಗೆ ಗೌರವ ಪೂರ್ವಕವಾಗಿ ಸನ್ಮಾನಿಸಲಾಯಿತು.

೩೨. ದಿನಾಂಕ.೨೩.೦೨.೨೦೦೪ರಂದು ನೀರಿನ ಸಮಸ್ಯೆಗಳ ಬಗ್ಗೆ ಉಗ್ರವಾದ ಪ್ರತಿಭಟನೆಯನ್ನು ಮಾಡಿ ಜಿಲ್ಲಾ ಉಸ್ತುವಾರಿ ಮಂತ್ರಿಗಳನ್ನು ಬೇಟಿ ಮಾಡಿ ಹಾಗೂ ಆಯುಕ್ತರನ್ನು ಬೇಟಿ ಮಾಡಿ ಮನವಿ ಪತ್ರವನ್ನು ಸಲ್ಲಿಸಲಾಯಿತು.

೩೩. ದಿನಾಂಕ.೨೮.೦೩.೨೦೦೪ರಂದು ಸಂಸ್ಥೆಯಿಂದ ಸಾರ್ವಜನಿಕರಿಗೆ ಅನುಕೂಲವಾಗುವಂತೆ ಗ್ರಂಥಾಲಯವನ್ನು ಸ್ಥಾಪಿಸುವ ಬಗ್ಗೆ ತೀರ್ಮಾನಿಸಲಾಯಿತು.

೩೪. ದಿನಾಂಕ.೨೩.೦೫.೨೦೦೪ರಂದು ಸಂಸ್ಥೆಯು ಬೆಂಗಳೂರು ಒಕ್ಕಲಿಗರ ಸಂಘಗಳಿಗೆ ಸದಸ್ಯತ್ವ ಕೊಡುವಂತೆ ಮನವಿಯನ್ನು ಕೊಡಲಾಯಿತು.

೩೫. ದಿನಾಂಕ.೨೨.೧೨.೨೦೦೪ರಂದು ಸಂಸ್ಥೆಯು ಕರ್ನಾಟಕ ಸರ್ಕಾರದ ಮಂತ್ರಿಮಂಡಲದಲ್ಲಿ ಒಕ್ಕಲಿಗರಿಗೆ ಪ್ರಾತಿನಿದ್ಯ ಕೊಡುವಂತೆ ಕೋರಲಾಯಿತು.

೩೬. ದಿನಾಂಕ.೨೨.೯೬.೨೦೦೪ರಂದು ಸಂಸ್ಥೆಯು ಕೆ.ಜಿ.ಕೊಪ್ಪಲ್‌ನಲ್ಲಿ ನೀರಿನ ಸಮಸ್ಯೆ ಬಗ್ಗೆ ವಾಣಿ ವಿಲಾಸ ಅಭಿಯಂತರು ಶ್ರೀ ತಿಮ್ಮೇಗೌಡರನ್ನು ಬೇಟಿಮಾಡಿ ಮಾನವಿಯನ್ನು ಸಲ್ಲಿಸಿತು, ಅದಕ್ಕೆ ಅವರು

ಓಗೊಟ್ಟು ಹುಣಸೂರು ರಸ್ತೆಯಿಂದ ನ್ಯೂ ಕಾಂತರಾಜ ಅರಸ್ ರಸ್ತೆವರೆಗೆ ಸರ್ವೆ ಮುಖಾಂತರ ನಮ್ಮ ೨೩ನೇ ವಾರ್ಡಿಗೆ ನೀರನ್ನು ತರುವಲ್ಲಿ ಸಂಘವು ಮುಖ್ಯಪಾತ್ರವಹಿಸಿದೆ.

೩೭. ದಿನಾಂಕ೨೧.೦೧.೨೦೦೫ರಂದು ಸಂಕ್ರಾಂತಿ ಹಬ್ಬ ದಿನ ಸಂಸ್ಥೆಯು ೫ಜನ ಗಣ್ಯ ವ್ಯಕ್ತಿಗಳಿಗೆ ಸನ್ಮಾನ ಸಮಾರಂಭ ಮಾಡಲಾಯಿತು.

೩೮. ದಿನಾಂಕ.೨೬.೦೩.೨೦೦೫ರಂದು ಸಂಸ್ಥೆಗೆ ಮೈಸೂರು ನಗರಾಭಿವೃದ್ಧಿ ಪ್ರಾಧಿಕಾರದಿಂದ ನಿವೇಶನವನ್ನು ಪಡೆಯುವ ಬಗ್ಗೆ ದಾಖಲಾತಿಗಳನ್ನು ಒದಗಿಸಿ ನೋಂದಣಿ ಶುಲ್ಕವನ್ನು ಪಾವತಿಸಿ ಕನ್ನಡ ಮಾಧ್ಯಮ ಶಾಲೆಯನ್ನು ತೆರೆಯುವುದಕ್ಕೆ ಸಹಾಯವಾಗುವಂತೆ ಸಂಸ್ಥೆಯು ಪ್ರಾಧಿಕಾರದ ಜೊತೆ ಚರ್ಚಿಸಿ ಇದಕ್ಕೆ ಅನುಕೂಲವನ್ನು ಮಾಡಿಕೊಟ್ಟಿತು.

೩೯. ಪ್ರತಿ ವರ್ಷವೂ ಆಗಸ್ಟ್ ೧೫ರಂದು ಸ್ವಾತಂತ್ರ್ಯ ದಿನಾಚರಣೆಯನ್ನು ಮಾಡುತ್ತಾ ಬರಲಾಗುತ್ತಿದೆ.

೪೦. ಪ್ರತಿ ವರ್ಷವೂ ಕನ್ನಡ ರಾಜ್ಯೋತ್ಸವವನ್ನು ಆಚರಿಸಲಾಗುತ್ತಿದೆ.

೪೧. ಪ್ರತಿ ವರ್ಷವೂ ನಾಡ ಹಬ್ಬಗಳನ್ನು ಆಚರಿಸಿಕೊಂಡು ಬರಲಾಗುತ್ತಿದೆ.

೪೨. ಇನ್ನೂ ಅನೇಕ ಸಾರ್ವಜನಿಕ ಸೇವೆಯಲ್ಲಿ ಸಂಸ್ಥೆಯು ಭಾಗವಹಿಸಿರುತ್ತದೆ.

### ೭.೩. ಕೋಲಾರ ಜಿಲ್ಲೆಯ ಒಕ್ಕಲಿಗರ ಚಾರಿತ್ರಿಕ ಹಿನ್ನೆಲೆ

ಸಂಘಗಳ ಮುಖಾಂತರ ಪ್ರತಿದಿನ ಲಕ್ಷಲೀಟರುಗಳಿಗೂ ಹೆಚ್ಚು ಹಾಲು ಸಂಗ್ರಹವಾಗುತ್ತಿದೆ. ಅಂತೆ ಹಿಪ್ಪುನೇರಳೆ ಬೆಳೆಸದ ರೇಷ್ಮೆ ಹುಳು ಸಾಕದ ಊರೇ ಈ ಜಿಲ್ಲೆಯಲ್ಲಿ ಇಲ್ಲವೆಂದರೆ ಉತ್ಪ್ರೇಕ್ಷೆಯೇನಲ್ಲ. ಆದರೆ ಈ ಗುಡಿ ಕೈಗಾರಿಕೆಯಲ್ಲಿ ಬಹಳಷ್ಟು ರೈತ ಕುಟುಂಬಗಳು ತೊಡಗಿಸಿಕೊಳ್ಳಲು ಇನ್ನೂ ಸಾಧ್ಯವಾಗಿರುವುದಿಲ್ಲ. ಇದಕ್ಕೆ ಹಲವು ಹತ್ತು ಎಡರು-ತೊಡರುಗಳು ರೈತರನ್ನು ಕಾಡುತ್ತಿವೆ.

ಕೋಲಾರ ಜಿಲ್ಲೆಯಲ್ಲಿ ರಾಗಿ, ಭತ್ತ, ನೆಲಗಡಲೆ ಹಾಗೂ ಅಲ್ಪಪ್ರಮಾಣದಲ್ಲಿ ಹಿಪ್ಪುನೇರಳೆಯನ್ನು ಮಳೆಯ ಆಶ್ರಯದಲ್ಲಿ ರೈತರು ಬೆಳೆಯುತ್ತಾರೆ. ಈರುಳ್ಳಿ, ಆಲೂಗಡ್ಡೆ, ಟೋಮೆಟೋ, ಮುಸುಕಿನ ಜೋಳ, ಮೆಣಸಿನಕಾಯಿ, ಕಬ್ಬು, ಹಿಪ್ಪುನೇರಳೆ ಮುಂತಾದ ಆರ್ಥಿಕ ಬೆಳೆಗಳನ್ನು ಬಹುಪಾಲು ಕೊಳವೆಬಾವಿಗಳ ಆಶ್ರಯದಲ್ಲಿ ಬೆಳೆಯುವ ಸಾಹಸ ಮಾಡುತ್ತಾರೆ.

ಮಳೆ ಸಾಕಷ್ಟು ಮತ್ತು ಹದವಾಗಿ ಸುರಿದರೆ ಕಡುಬಡವನೂ ವರ್ಷಕ್ಕೆ ಸಾಕಾಗುವಷ್ಟು ರಾಗಿಯನ್ನು ತನ್ನ ಹೊಲದಲ್ಲಿ ಬೆಳೆದುಕೊಳ್ಳುತ್ತಾನೆ. ಅದೃಷ್ಟವಿದ್ದು ಕೆರೆಗಳು ತುಂಬಿದರೆ ಭತ್ತವೂ ಕಾಣಿಸಿಕೊಳ್ಳುತ್ತದೆ. ಆದರೆ ಕರೆಂಟಿನ ಮಂಗನಾಟದಿಂದಾಗಿ ಇರುವ ನೀರನ್ನು ಬೆಳೆಗೆ ಹಾಯಿಸಲು ರೈತ ಭಗೀರಥ ಯತ್ನವನ್ನೇ ನಡೆಸಬೇಕು.

ರೈತನ ಇಷ್ಟೆಲ್ಲ ಸಾಹಸಗಳ ಫಲಿತವಾದರೂ ಏನು? ಕೈಗಾರಿಕೆಗಳಿಂದ ಹೊರಗೆ ಬರುವಾಗಲೇ ಅದರ ಉತ್ಪನ್ನ ಬಳಕೆದಾರನು ತೆರಬೇಕಾದ ದರದ ಮುದ್ರೆಯನ್ನು ಹೊತ್ತೇ ಬರುತ್ತದೆ. ರೈತನಿಗೆ ಇಂಥ ರಕ್ಷಣೆ ಎಲ್ಲಿಂದ ಬರಬೇಕು? ತನ್ನ ಕುಟುಂಬದ ಸದಸ್ಯರೆಲ್ಲರ ಶ್ರಮ, ಬಂಡವಾಳ ಮತ್ತು ಬದುಕನ್ನು ಭೂಮಿಗೆ ಇಟ್ಟು ಬೆಳೆದ ಫಸಲಿಗೆ ಎಂಥ ರಾಜಮರ್ಯಾದೆ.!

ಈಗ ಟೊಮೆಟೋ ಬೀದಿಬದಿಯ ಕಸವಾಗಿದೆ ಈರುಳ್ಳಿ ಮತ್ತು ಆಲೂಗಡ್ಡೆ ರಾಶಿ ಪೆಂಡೆಗಳಲ್ಲಿಯೇ ಕೊಳೆಯ ಹತ್ತಿದೆ! ಕೋಸು, ಕ್ಯಾರೆಟ್ ಮುಂತಾದುವನ್ನು ತೋಟಗಳಲ್ಲಿಯೇ ಹಾಳು ಬಿಡಲಾಗಿದೆ. ಇಂಥ ಅಧ್ವಾನದ ಪರಿಸ್ಥಿತಿಯಿಂದಾಗಿ ಈಗ ರೈತ ಕಂಗಾಲಾಗಿದ್ದಾನೆ. ತನ್ನ ಕುಟುಂಬವನ್ನು ಪೋಷಿಸಲಾಗದ, ಹೊಸ್ತಿಲು ಭಾವಿಸಲಾಗುತ್ತಿತ್ತು. ಇಂದಿನ ಪರಿಸ್ಥಿತಿಯೇ ಬೇರೆ. ಎಷ್ಟೋ ಜನ ಒಕ್ಕಲಿಗರು ತಮ್ಮ ಜಮೀನುಗಳನ್ನು ಆರು ಕಾಸಿಗೂ ಮೂರುಕಾಸಿಗೂ ಮಾರಿದ್ದಾರೆ. ಉಳ್ಳವರ ಸೌಧ, ಎಸ್ಟೇಟು, ಕೈಗಾರಿಕೆ ಮತ್ತು ವಿಶ್ರಾಂತಿಧಾಮಗಳಿಗೆ ಬೇಕಾಬಿಟ್ಟಿಕೊಳ್ಳೆಯಾಗುತ್ತಿವೆ.

ಇಷ್ಟೆಲ್ಲ ಲತ್ತೆಗಳ ನಡುವೆಯೂ ರೈತ ಈಗಲೂ ಭೂತಾಯಿಯ ಮೇಲಿನ ಪ್ರೀತಿಯನ್ನು ತೊರೆಯದಿರುವುದು ದೇಶದ ಪುಣ್ಯವೆಂದೇ ಹೇಳಬೇಕು. ಕಾರಣ ಅದು ಅವನ ರಕ್ತಗತವಾದುದು ದಾವಂತ ಮಣ್ಣಿಗೂ ಅವನಿಗೂ ತಲತಲಾಂತರದಿಂದ ಬೆಳೆದು ಬಂದಿರುವ ಅವಿನಾಭಾವ ಬಾಂಧವ್ಯ.

ಇಂಥ ಬೇಸಾಯದಲ್ಲಿ ಬೆಂದು ಬಸವಳಿಯುತ್ತಿರುವ ಕಾಯಕವನ್ನು ನಂಬಿಕೊಂಡಿರುವ ರೈತರಲ್ಲಿ ಒಕ್ಕಲಿಗರೇ ಪ್ರಧಾನ. ಇಡೀ ಕುಟುಂಬದ ಸದಸ್ಯರೆಲ್ಲ ಅತ್ಯಂತ ಶ್ರದ್ಧೆ ಮತ್ತು ದಿನನಿತ್ಯದ ಕಸುಬಾಗಿ ವ್ಯವಸಾಯವನ್ನೇ ನಂಬಿಕೊಂಡು ಬದುಕು ಸವೆಸುತ್ತಿದ್ದಾರೆ.

೧೯೭೩-೭೪ರಲ್ಲಿ ಕೋಲಾರ ಜಿಲ್ಲೆಯಲ್ಲಿ ಒಟ್ಟು ಜನಸಂಖ್ಯೆ೬.೬೫ ಲಕ್ಷ ಇದ್ದು ಒಕ್ಕಲಿಗರ ಸಂಖ್ಯೆ ೧.೮೫ಲಕ್ಷ ಆಗಿದ್ದು ಮೊದಲ ಸ್ಥಾನದಲ್ಲಿದ್ದಿತು. ನಂತರದ ಸ್ಥಾನ ಇವರಿಗೆ ಬೆಂಬಲವಾಗಿ ಹೊಲಗಳಲ್ಲಿ ದುಡಿಯುತ್ತಿದ್ದ ಶ್ರಮಿಕವರ್ಗ ಹರಿಜನರದು. ಈಗಲೂ ಒಕ್ಕಲಿಗರದೇ ಜಿಲ್ಲೆಯಲ್ಲಿ ಪ್ರಧಾನ ಸ್ಥಾನ. ಆದರೆ ಅವರ ಬೆಂಬಲಕ್ಕಿದ್ದ ಶ್ರಮಿಕ ವರ್ಗ ಮಾತ್ರ ಒಕ್ಕಲಿಗರನ್ನು ದೂರ ಮಾಡಿಕೊಂಡಿದ್ದಾರೆ.

ನೇಗಿಲ ಹಿಡಿದು ಹೊಲದೊಳು ಉಳುವಾ

ಯೋಗಿಯ ನೋಡಲ್ಲಿ

ಫಲವನ್ನು ಬಯಸದೆ

ಅತಿಸುಖಕೆಳಸದೆ

ದುಡಿವನು ಗೌರವಕಾಶಿಸದೆ

ಇದು ರಾಷ್ಟ್ರಕವಿ ಕುವೆಂಪು ಬಹಳ ಹಿಂದೆಯೇ ರೈತನ ಆತ್ಮೋನ್ನತಿಯ ಸಂಕೇತವಾಗಿ ಬರೆದ ಹಾಡು. ಈಗ ಕುವೆಂಪು ಆಶಯಕ್ಕೆ ವಿರುದ್ಧಾರ್ಥ ಬರುವಂತೆ ಈ ಸಮಾಜ ರೈತ ಸಮುದಾಯವನ್ನು ನಡೆಸಿಕೊಳ್ಳುತ್ತಿರುವುದು ಅತ್ಯಂತ ಶೋಚನೀಯ ಸಂಗತಿಯಾಗಿದೆ.

ವರ್ತಮಾನದಲ್ಲಿ ಇಂಥ ದಾರುಣ ಪರಿಸ್ಥಿತಿಯನ್ನು ಎದುರಿಸುತ್ತಿರುವ ರೈತ ಭವಿಷ್ಯದಲ್ಲಿ ಇನ್ನು ಏನೆಲ್ಲ ಆತಂಕಗಳನ್ನು ಎದುರಿಸಬೇಕಾಗಿದಿಯೋ? ಬಲ್ಲವರಾರು? ಕಾಲವೇ ಇದನ್ನು ನಿರ್ಣಯಿಸುತ್ತದೆ. ನೇಗಿಲು ಹಿಡಿದು ದುರ್ಬಲಗೊಂಡಿರುವ ಈ ಕೈಗಳಲ್ಲಿ ಹಿಂದೆ, ಖಡ್ಗವನ್ನು ಹಿಡಿದು ೩೦೦ ವರ್ಷಗಳಿಗೂ ಹೆಚ್ಚು ಕಾಲ ಕೋಲಾರ ಮತ್ತಿತರ ಪಕ್ಕದ ನಾಡನ್ನು ಸೇರಿದಂತೆ ಒಕ್ಕಲಿಗ ರಾಜ್ಯವನ್ನು ಆಳಿದ್ದಾನೆ ಎಂಬುದು ಚಾರಿತ್ರಿಕ ಸತ್ಯ. ಆದರೆ ಈ

ಬಗ್ಗೆ ಹೆಚ್ಚು ಪ್ರಚಾರವೇ ಸಿಕ್ಕಿಲ್ಲ. ಈ ನಿಟ್ಟಿನಲ್ಲಿ ಪ್ರಮುಖ ಅಂಶಗಳ ಬಗ್ಗೆಯಾದರೂ ಸಂಕ್ಷಿಪ್ತವಾಗಿ ಜನರ ಮನಸ್ಸಿಗೆ ತಲುಪಿಸಬೇಕು ಎಂಬುದೇ ಈ ಲೇಖನದ ಆಶಯ.

ಕೋಲಾರ ಜಿಲ್ಲೆಯಲ್ಲಿ ಗೌಡರ ಆಳ್ವಿಕೆ ಆರಂಭವಾಗುವ ಮುನ್ನ ಅನೇಕ ರಾಜಮಹಾರಾಜರುಗಳು ಆಗಿಹೋಗಿದ್ದಾರೆ. ಕ್ರಿ.ಶ.ಪ್ರಾರಂಭದ ಪೂರ್ವದಿಂದಲೂ ಪಾಲಾರ್ ನದಿಯ ಪೂರ್ವಭಾಗದಲ್ಲಿ ಆಳ್ವಿಕೆ ನಡೆಸಿದ್ದರು.

ಬಾಣರ ನಂತರ ಗಂಗರಸರು ಕೋಲಾರ ಪ್ರಾಂತ್ಯವನ್ನು ಆಳಿದರು. ಕರ್ನಾಟಕದಲ್ಲಿ ಗಂಗರ ಮೂಲ ಪುರುಷರಾದ ದಡಿಗ ಮಾಧವರೆಂಬ ಸೋದರರು ಕಡಪ ಜಿಲ್ಲೆಯ ಗಂಗಪೆರೂರು ಎಂಬಲ್ಲಿ ಜೈನ ಮುನಿ ಸಿಂಹನಂದಾಚಾರ್ಯರ ಆಶೀರ್ವಾದದಂತೆ ರಾಜ್ಯವಾಳಲು ಆರಂಭಿಸಿ ಸೇನೆಯನ್ನು ಕಟ್ಟಿಕುವಳಾಳದ ಬಾಣರನ್ನು ಸದೆ ಬಡೆದರು. ಇವರು ಕ್ರಿ.ಶ.೨ನೇ ಶತಮಾನದಿಂದ ಹಿಡಿದು ೧೧ನೇ ಶತಮಾನದವರೆಗೂ ಮೈಸೂರು ದೇಶದ ಬಹುಭಾಗವನ್ನು ಆಳಿದರು.

ಕುವಳಾಳ (ಕೋಲಾರ) ಒಂದು ಶತಮಾನದ ಕಾಲ ಇವರ ರಾಜಧಾನಿಯಾಗಿದ್ದಿತು.

ಆನಂತರ ರಾಜೇಂದ್ರಚೋಳ ಕ್ರಿ.ಶ ೧೦೦೦ಳರಲ್ಲಿ ಕೋಲಾರ ಪ್ರಾಂತ್ಯವನ್ನು ಗಂಗರಿಂದ ಪಶಪಡಿಸಿಕೊಂಡ, ಆದರೆ ಬಹುಬೇಗ ಹೊಯ್ಸಳರು ಪ್ರಬಲರಾಗಿ ಚೋಳರನ್ನು ಕೋಲಾರದಿಂದ ಓಡಿಸಿದರು. ಹೀಗಾಗಿ ಗಂಗರಸರಂತೆ ಕೋಲಾರ ಪ್ರಾಂತ್ಯ ಹೊಯ್ಸಳರ ಆಳ್ವಿಕೆಗೂ ಒಳಗಾಗಿದ್ದಿತು. ಅಂತೆ ಇಲ್ಲಿಯ ಒಕ್ಕಲಿಗರು ಗಂಗ ಸಾಮ್ರಾಜ್ಯದ ಮತ್ತು ಹೊಯ್ಸಳರಾಜರ ಬಹುಮುಖ್ಯ ಪ್ರಜೆಗಳಾಗಿದ್ದರು. ಹೊಯ್ಸಳರ ಅನೇಕ ದಂಡನಾಯಕರು ಒಕ್ಕಲಿಗರ ಪಂಗಡಗಳಿಗೆ ಸಂಬಂಧಪಟ್ಟವರೆಂದು ಸಂಶೋಧಕರು ಅಭಿಪ್ರಾಯಪಡುತ್ತಾರೆ. ಸಾಲದುದಕ್ಕೆ ಗಂಗ-ಹೊಯ್ಸಳ ಮನೆತನಗಳ ಅವಧಿಯಲ್ಲಿ ಒಕ್ಕಲಿಗರು ಗೌಡ ಹುದ್ದೆಯಿಂದ ಅವರ ಪ್ರದೇಶದ ಬಹುಭಾಗವನ್ನು ಆಡಳಿತಾತ್ಮಕವಾಗಿ ನಿಯಂತ್ರಿಸಿದ್ದರೆಂಬುದು ಚಾರಿತ್ರಿಕ ಸತ್ಯ. ಈ ಅಸಾಮಾನ್ಯ ಪರಂಪರೆಯ ಶಿಖರಸಾದೃಶ್ಯ ಮನೆತನದವರಾಗಿದ್ದಾರೆ.

**ಆವತಿನಾಡ ಪ್ರಭುಗಳು ಹಾಗೂ ಅವರ ಪರಂಪರೆ**

**ಆವನತಿನಾಡ ಪ್ರಭುಗಳು**

ಆವತಿನಾಡ ಪ್ರಭುಗಳ ಇತಿಹಾಸ, ಮನೆತನದ ಭವ್ಯತೆ ಒಂದು ಆದರ್ಶ ಕಥನ. ಎಲ್ಲಿಂದಲೋ ಬಂದು ಕಾಣದ ಊರಲ್ಲಿ ಅಪರಿಚಿತರ ಮಧ್ಯೆ ಧೈರ್ಯ ಸಾಹಸಗಳ ಬೆಂಬಲದಿಂದ ರಾಜ್ಯವನ್ನು ಸ್ಥಾಪಿಸಿ ಕೋಲಾರ, ಬೆಂಗಳೂರು ಮತ್ತು ತುಮಕೂರು ಜಿಲ್ಲೆಗಳ ಕೆಲ ಪ್ರಾಂತ್ಯಗಳನ್ನು ಒಳಗೊಂಡ ಪ್ರದೇಶದಲ್ಲಿ ದಕ್ಷ ಆಡಳಿತವನ್ನು ನಡೆಸಿದ್ದೇ ಅಲ್ಲದೆ ಯುದ್ಧಗಳಲ್ಲೂ ಭಾಗವಹಿಸಿ ಚರಿತ್ರೆಯ ಪುಟಗಳಲ್ಲಿ ಸೇರಿ ಅಮರರಾಗಿದ್ದಾರೆ.

ಈ ಗೌಡರಸರ ಆಳ್ವಿಕೆಯ ಬೀಜ ಅಂಕುರವಾದದ್ದು ಹೀಗೆ. ಗಂಗರಸರ ಸಾಮಂತರಾಗಿದ್ದ ರಣಭೈರೇಗೌಡರಿಗೆ ದೊಡ್ಡಾಂಬೆ ಎಂಬ ಸೌಂದರ್ಯವತಿ ಮಗಳಿದ್ದಳು. ಗಂಗರ ಆಳ್ವಿಕೆ ಅಳಿದ ಮೇಲೂ ರಣಭೈರೇಗೌಡರು ಕಂಚಿಯ ಯಣಮಂಜಿ ಪುತ್ತೂರಿನಲ್ಲಿಯೇ ಉಳಿದಿದ್ದರು. ಪುತ್ತೂರನು 'ಅತ್ತೂರು' ಎಂದು ಊಹಿಸಲಾಗಿದೆ. ಅಲ್ಲಿ ದುಷ್ಟ ಸೆಲ್ವನಾಯಕನೆಂಬುವನು ದೊಡ್ಡಾಂಬೆಯ ಚೆಲುವಿಗೆ ಸೋತು ಅವಳನ್ನು ತನಗೆ ಲಗ್ನ ಮಾಡಿಕೊಡಿರೆಂದು ಕಾಡಿಸತೊಡಗಿದನು. ಅನ್ಯ ಜಾತಿಯನೊಬ್ಬನಿಗೆ ತನ್ನ ಮುದ್ದುಮಗಳನ್ನು ಕೊಡಲು ಒಪ್ಪದ ಭೈರೇಗೌಡ ತನ್ನ

ಕುಟುಂಬದ ಪರಿವಾರ ಸಮೇತ, ರಾತ್ರೋರಾತ್ರಿ ಪುತ್ತೂರನ್ನು ಬಿಟ್ಟು ಹೊರಟರು. ಪ್ರವಾಹದೋಪಾದಿಯಲ್ಲಿ ಹರಿಯುತ್ತಿರುವ ಪಾಲಾರ್ ನದಿಯ ದಡವನ್ನು ಮುಟ್ಟುವಷ್ಟರಲ್ಲೇ ಇವರನ್ನು ಬೆನ್ನಟ್ಟಿ ಬರುತ್ತಿರುವ ಶೆಲ್ವ ನಾಯಕನ ಸೈನ್ಯ ಕಾಣಿಸಿತು. ಏನೂ ಮಾಡಲೂ ತೋಚದೆ ಕಳವಳ ಪಡುತ್ತಿದ್ದ ಸಮಯದಲ್ಲಿ ಸಾಧ್ವಿದೊಡಾಂಬೆ ತುಂಬಿ ಹರಿಯುತ್ತಿರುವ ಗಂಗಾಮಾತೆಗೆ ತನ್ನ ಓಲೆಗಳನ್ನು ಅರ್ಪಿಸಿ ದಾರಿ ಬಿಡುವಂತೆ ಪ್ರಾರ್ಥಿಸಿಕೊಂಡಳಂತೆ. ಆಗ ನದಿ ಇಬ್ಭಾಗವಾಗಿ ದಾರಿ ಬಿಟ್ಟಂತೆ ಶೆಲ್ವ ನಾಯಕನು ನದಿಯನ್ನು ಸಮೀಪಿಸುವ ಹೊತ್ತಿಗೆ ಗೌಡರ ಪರಿವಾರ ಆಚೆ ದಡ ಸೇರಿಯಾಗಿತ್ತು. ನದಿ ಮೊದಲಿನಂತೆ ತುಂಬಿ ಹರಿಯತೊಡಗಿದ್ದಿತು.

ಹೀಗೆ ಬಂಡಿಗಳಲ್ಲಿ ಊರು ಬಿಟ್ಟು ಬಂದು ಏಳು ಜನ ಸೋದರರು ದೇವನಹಳ್ಳಿ ಸಮೀಪದ ಆವತಿಯಲ್ಲಿ ನೆಲೆ ನಿಂತರು. ಅವರು ನೆಲೆಸಿದ ಸ್ಥಳಕ್ಕೆ 'ಆವತಿ' ಎಂಬ ಹೆಸರು ಬರಲು ಒಂದು ಐತಿಹ್ಯ ಪ್ರಚಲಿತದಲ್ಲಿದೆ. ನಂದಿದುರ್ಗದ ಸಮೀಪದ ತಿಮ್ಮರಾಯಸ್ವಾಮಿ ಗುಡ್ಡದ ಬಳಿ ಬಂದು ಇವರು ಇಳಿದುಕೊಂಡರು. ರಣಭೈರೇಗೌಡರಿಗೆ ಅಲ್ಲಿಯೇ ನೆಲಸಲು ಆದೇಶಿಸಿ ಕನಸು ಬಿದ್ದಿತಂತೆ ಅಂತೆಯೇ ಏಳೂ ಜನ ಸೋದರರು ಬೆಟ್ಟದ ಬುಡದಲ್ಲಿ ಏಳು ಗುಡಿಸಲುಗಳನ್ನು ಕಟ್ಟಿವಾಸಿಸತೊಡಗಿದರು. ಹೀಗೆ ನೆಲೆ ಗೊಂಡಿರುವಾಗ ದಾರಿಯ ಬದಿಯಲ್ಲಿರುವ ಅತ್ತಿಮರಕ್ಕೆ ತೊಟ್ಟಿಲು ತೂಗು ಹಾಕಲಾಗಿದ್ದಿತು. ಆ ತೊಟ್ಟಿಲಲ್ಲಿ ರಣಭೈರೇಗೌಡರ ಮಗು ಮಲಗಿ ನಿದ್ರಿಸುತ್ತಿತ್ತು. ಈ ಮಗುವಿನ ಮುಖದ ಮೇಲೆ ಬಿಸಿಲು ಬೀಳುತ್ತಿದ್ದು. ಅದನ್ನು ನಿವಾರಿಸುವಂತೆ ಸರ್ಪವೊಂದು ಮರದ ಮೇಲೆ ಹೆಡೆ ಬಿಚ್ಚಿ ನೆರಳನ್ನು ಮಾಡಿದ್ದಿತು. ಇದನ್ನು ಕಂಡ ದಾರಿ ಹೋಕ ಬ್ರಾಹ್ಮಣ ಅಚ್ಚರಿ ಸೂಚಿಸಿದ್ದೇ ಅಲ್ಲದೆ, ಮುಂದೆ ಈ ಮಗು ಹೆಸರಾಂತ ದೊರೆಯಾಗುತ್ತಾನೆ ಎಂದು ಭವಿಷ್ಯ ನುಡಿದನಂತೆ ಹಾವು ಅತ್ತಿಮರದ ಮೇಲಿದ್ದು ಮಗುವಿನ ಮುಖಕ್ಕೆ ನೆರಳು ಮಾಡಿದ್ದರಿಂದ ಆ ಸ್ಥಳಕ್ಕೆ 'ಹಾವತ್ತಿ' ಎಂದು ಹೆಸರಾಯಿತು. ಕಾಲಾಂತರದಲ್ಲಿ 'ಆವತಿ' ಎಂದು ಜನಗಳ ಬಾಯಲ್ಲಿ ರೂಢಿಗೊಂಡಿತು.

ಆವತಿನಾಡ ಪ್ರಭುಗಳು ಕಂಚಿಯ ಹತ್ತಿರದಿಂದ ಬಂದವರೆಂದು ಹೇಳುವುದಕ್ಕೆ ಸಾಂಪ್ರದಾಯಿಕ ಹೇಳಿಕೆಗಳನ್ನು ಬಿಟ್ಟರೆ ಯಾವುದೇ ರೀತಿಯ ಆಕರಗಳು ದೊರೆತಿಲ್ಲ. ಹೀಗಾಗಿ ಸಂಶೋಧಕರಲ್ಲಿ ಸಹಮತ ಮೂಡುತ್ತಿಲ್ಲ. ಇತ್ತೀಚಿನ ಅಭಿಪ್ರಾಯಗಳ ಪ್ರಕಾರ ಇಂದಿನ ಮುಳಬಾಗಿಲು ತಾಲ್ಲೂಕು ಅಂದಿನ ಯಣಮಂಜಿ ಪುತ್ತೂರು ಆಗಿತ್ತು. ಇದೇ ತಾಲ್ಲೂಕಿನ ಉತ್ತನೂರು ಅಂದಿನ ಅತ್ತೂರು ಆಗಿತ್ತೆಂದು ಸಂಶೋಧಕರು ಅಭಿಪ್ರಾಯ ಪಡುತ್ತಾರೆ. ಈ ಸ್ಥಳದಲ್ಲಿ ನೆಲೆಸಿದ್ದ ಒಕ್ಕಲಿಗರು ಕೋಲಾರ ತಾಲ್ಲೂಕಿನಲ್ಲಿರುವ ಸೀತಿಭೈರವನ ಆರಾಧಕರಾಗಿದ್ದರು. ಕನ್ನಡದ ಜೊತೆಗೆ ತೆಲುಗು ಮಾತನಾಡುತ್ತಿದ್ದ ಇವರು, ಮೊರಸು ಒಕ್ಕಲಿಗರೆಂದು ಅಭಿಪ್ರಾಯಪಡಲಾಗಿದೆ. ಮೊರಸುನಾಡಿನ ಜನಾಂಗದವರಾದುದರಿಂದ ಮೊರಸು ಒಕ್ಕಲಿಗರೆಂಬ ಹೆಸರು ಇವರಿಗೆ ಬಂದಿರುತ್ತದೆ.

ಸಂಶೋಧಕರ ಅಭಿಪ್ರಾಯದ ಜಾಡನ್ನು ಹಿಡಿದು ಹೊರಟಾಗ ಇದಕ್ಕೆ ಪೂರಕವಾಗಿ ಇನ್ನೂ ಹಲವಾರು ಅಂಶಗಳು ನಮ್ಮ ಗಮನವನ್ನು ಸೆಳೆಯುತ್ತವೆ.

ದಕ್ಷಿಣ ಭಾರತದಲ್ಲಿ ಪ್ರಮುಖವಾಗಿ ಮೂರು ಕ್ಷೇತ್ರಗಳಲ್ಲಿ ವರದರಾಜಸ್ವಾಮಿ ದೇವಾಲಯಗಳನ್ನು ನಿರ್ಮಿಸಲಾಗಿದೆ. ಅವುಗಳಲ್ಲಿ ಮುಳಬಾಗಿಲು ತಾಲ್ಲೂಕು ಉತ್ತನೂರು ಒಂದು. ಅಂದರೆ ತಮಿಳು ನಾಡಿನ ಕಂಚಿಯ ವರದರಾಜಸ್ವಾಮಿ, ಮಾಲೂರು ತಾಲ್ಲೂಕಿನ ಟೇಕಲ್ ವರದರಾಜ ಸ್ವಾಮಿ ಮತ್ತು ಮೂರನೆಯದು ಉತ್ತಮ ಕಂಚಿಯ ವರದರಾಜಸ್ವಾಮಿ. ಇದೇ ಇಂದು ಉತ್ತನೂರಾಗಿ ಉಳಿದಿದೆ. ಈ ಮೂರೂ

ದೇವಾಲಯಗಳಲ್ಲಿನ ದೇವತಾಮೂರ್ತಿಗಳು ಪಶ್ಚಿಮಾಭಿಮುಖವಾಗಿಯೇ ಇರುತ್ತವೆ. ಉತ್ತನೂರಿನಲ್ಲಿ ಊರಿನ ಪೂರ್ವದಲ್ಲಿ ವರದರಾಜಗುಡಿ ಹಾಗೂ ಪಶ್ಚಿಮದಲ್ಲಿ ಉತ್ತಮೇಶ್ವರನ ಗುಡಿಯೂ ಇರುತ್ತದೆ. ಅಲ್ಲದೆ ಕಂಚಿಯಲ್ಲಿರುವಂತೆ ಉತ್ತನೂರಿನಲ್ಲಿಯೂ ಒಂದು ಸಾವಿರ ದೇವ ಗುಡಿಗಳಿದ್ದವಂತೆ ಆದರೀಗ ಅವುಗಳಲ್ಲಿ ಬಹಳಷ್ಟು ಜನರ ಅನಾದಾರಣೆ ಮತ್ತು ಕ್ರೌರ್ಯಕ್ಕೆ ಬಲಿಯಾಗಿ ಉಳಿದು ಕೊಂಡಿರುವುದು ಬಹಳ ಕಡಿಮೆ.

ಈ ಗ್ರಾಮದ ಪಾಸಲೆಯಲ್ಲಿ ಮೊರಸು ಒಕ್ಕಲಿಗರಿಗೇ ಪ್ರಾಧಾನ್ಯ. ಬೆರಳು ಒಕ್ಕಲಿಗರು, ಹೊಸದ್ಯಾವರು ಒಕ್ಕಲಿಗರೆಂದೂ ಸಹ ಕರೆಯಲ್ಪಡುವ ಇವರ ಮನೆಯ ಸೊಸೆಯಂದಿರು ವರ್ಷಕ್ಕೊಮ್ಮೆ ನಡೆಸುವ ಹೊಸದ್ಯಾವರದ ಪ್ರಮುಖ ಕೇಂದ್ರಗಳಲ್ಲಿ ಒಂದಾದ ಒಲ್ಲಂಬಳ್ಳಿ ಗ್ರಾಮ ಈ ಊರಿಗೆ ಬಹಳ ಸಮೀಪವೇ ಬೆರಳು ಒಕ್ಕಲಿಗರ ಹೆಣ್ಣುಮಕ್ಕಳು ಸಂಪ್ರದಾಯ ಪಾಲಿಸುವಲ್ಲಿ ಬಹಳ ಮಡಿವಂತಿಕೆಯನ್ನು ಆಚರಿಸುತ್ತಾರೆ. ಹಿಂದೆ ಬೇರೆ ಪಂಗಡಗಳ ಮನೆಯಲ್ಲಿ ಊಟವನ್ನು ನೀರನ್ನೂ ಸಹ ಕುಡಿಯುತ್ತಿರಲಿಲ್ಲ. ಒಳಪಂಗಡಗಳಲ್ಲಿ ವಿವಾಹವೂ ಬಹಳ ಕಟ್ಟುನಿಟ್ಟಾಗಿ ನಿಷೇಧಗೊಂಡಿದ್ದಿತು. ಹೀಗಿರುವಾಗ ಅನ್ಯಜಾತಿಯನೊಬ್ಬ ಈ ಮನೆಯ ಹೆಣ್ಣು ಮಗಳನ್ನೂ ಬಯಸುವುದೆಂದರೇನು.?

ಉತ್ತನೂರು ಸಮೀಪವೇ ಹರಪನಾಯಕನ ಕೋಟೆ ಎಂಬ ಊರಿದ್ದು, ಅಲ್ಲಿ ಹಿಂದೆ ನಾಯಕರ ಪಾಳ್ಯವೂ ಇದ್ದಿತಂತೆ. ಚಿಕ್ಕಬಳ್ಳಾಪುರದಲ್ಲಿ ಗೌಡರ ಹೆಣ್ಣು ಮಗಳು ವೀರತಿಮ್ಮವ್ವನ ವೀರಗಾಥೆಯೊಂದು ಪ್ರಚಲಿತದಲ್ಲಿದ್ದು ಈ ಕಥೆಯಲ್ಲೂ ಈ ಬಗ್ಗೆ ವಿವರಗಳು ಸಿಗುತ್ತವೆ. ಪುತ್ತೂರು ಪ್ರದೇಶದಲ್ಲಿ ಯಾಕಲ ದೊರೆಯೊಬ್ಬ ಆಳುತ್ತಿದ್ದನಂತೆ. ಕಂದಾಯ ವಸೂಲಿಗೆಂದು ಆ ದೊರೆ ಊರಿಗೆ ಬಂದಾಗ ಗೌಡರ ಚಂದದ ಹೆಣ್ಣುಮಗಳು ಅವರ ಕಣ್ಣಿಗೆ ಬೀಳುತ್ತಾಳೆ. ಆಗ ಗೌಡರನ್ನು ಭೇಟಿ ಮಾಡಿ ದೊರೆಯ ಮಗನಿಗೆ ಮಗಳನ್ನು ಕೊಡಲು ಕೇಳುತ್ತಾನೆ.

ಆದರೆ ಗೌಡರಿಂದ ಒಪ್ಪಿಗೆ ದೊರೆಯದಿರಲು ಬಲವಂತದಿಂದ ಒಪ್ಪಿಸಿ ನಿಶ್ಚಿತಾರ್ಥದ ದಿನವನ್ನು ಗೊತ್ತುಪಡಿಸಿಯೇ ಹೋಗುತ್ತಾನೆ. ಗೌಡರು ನಿಶ್ಚಿತಾರ್ಥದ ದಿನದಂದು ಮನೆಯನ್ನು ತಳಿರುತೋರಣಗಳಿಂದ ಸಿಂಗರಿಸಿ, ತಮ್ಮ ಸಾಕುನಾಯಿಗೆ ಹೆಣ್ಣಿನ ವೇಷವನ್ನು ತೊಡಿಸಿ, ಅದನ್ನು ಮನೆಯ ಮುಂದೆ ಚಪ್ಪರದಡಿ ಕಟ್ಟಿಹಾಕಿ ಯಾರಿಗೂ ತಿಳಿಸದೆ ಹಾಡಿ ಬಿಟ್ಟರಂತೆ ಗಂಡಿನ ಕಡೆಯವರು ಬಂದಾಗ ಇಡೀ ಮನೆಯೇ ಖಾಲಿ. ಆಗ ಅಲ್ಲಿ ಕಟ್ಟಿಹಾಕಿದ್ದ ಭೈರೇರಾಯನ ವಾಹನ ನಾಯಿಯನ್ನು ಬಿಟ್ಟಾಗ ಅದು ಓಡಿದ ದಾರಿಯಲ್ಲೇ ಗೌಡರ ಕುಟುಂಬವನ್ನು ಬೆನ್ನಟ್ಟಿದರಂತೆ ಅನಂತರ ಹೊಳೆದಾಟುವ ಪ್ರಸಂಗ ಬರುತ್ತದೆ.

ಒಟ್ಟಾಗಿ ಆವತಿನಾಡ ಪ್ರಭುಗಳ ತೆಲುಗು, ಕನ್ನಡ ಭಾಷಾ ಪಾಂಡಿತ್ಯ, ಆಚಾರ, ಸಂಪ್ರದಾಯಗಳನ್ನು ಗಣನೆಗೆ ತಂದುಕೊಂಡಾಗ ಈಗಿನ ಉತ್ತನೂರೇ ಆಗಿನ ಪುತ್ತೂರು ಆಗಿದ್ದಿರಬೇಕೆಂಬ ಊಹೆಗೆ ಹೆಚ್ಚಿನ ಪುಷ್ಟಿದೊರಕುತ್ತದೆ. ಪಾಲಾರ್ ನದಿಯೂ ಸಹ ಮುಳಬಾಗಿಲು ಕೋಲಾರ ರಸ್ತೆಯಲ್ಲಿ ತಂಬಿಹಳ್ಳಿಯ ಬಳಿ ಅಡ್ಡಸಿಗುತ್ತದೆ.

ಆದರೂ ಸಹ 'ಇದಮಿತ್ಥಂ' ಎಂದು ಕಡ್ಡಿತುಂಡು ಮಾಡಿದಂತೆ ಹೇಳುವುದು ತಪ್ಪಾದೀತು. ಮುಳಬಾಗಿಲಿನಿಂದ ಆವತಿ ೫೦ ಮೈಲಿಗಳಿಗೂ ಕಡಿಮೆ ಅಂತರದಲ್ಲಿದ್ದು, ಶಿಲ್ಪ ನಾಯಕನು ಇವರ ಇರವನ್ನು ಪತ್ತೆ ಹಚ್ಚಿ ದಾಳಿ ಮಾಡುವುದು ಕಷ್ಟವಾಗಿರಲಿಲ್ಲ. ಸೋಜಿಗವೆಂದರೆ ಟೇಕಲ್ ಕಡೆಯ ಕೊಮ್ಮನಹಳ್ಳಿ ಎಂಬ ಗ್ರಾಮದಿಂದ ಒಕ್ಕಲಿಗರು ಓಡಿ ಬಂದು ಬೆಟ್ಟದ ಬಳಿ ಕೆಲವು ಗ್ರಾಮಗಳಲ್ಲಿ ನೆಲೆ ನಿಂತಿದ್ದಾರೆ. ಇವರೂ ಸಹ ಮೇಲಿನ ಕಥೆಯನ್ನೇ ಹೋಲುವಂತ ಪ್ರಸಂಗವನ್ನು ಹೇಳುವುದಿದೆ. ನದಿ ಮಾತ್ರ ಮಾರ್ಕಂಡೇಯ ಎಂಬುದೊಂದೇ ಮೂಲ ವ್ಯತ್ಯಾಸ. ಹೀಗಾಗಿ

ಇಂತದೊಂದು ಸಂಚಾರಿ ಐತಿಹ್ಯ ಚಾಲ್ತಿಯಲ್ಲಿದೆ ಎಂಬ ಅಭಿಪ್ರಾಯ ವ್ಯಕ್ತವಾಗಿರುತ್ತದೆ. ಆದರೆ ಮೊರಸು ಒಕ್ಕಲಿಗರ ಶ್ರದ್ಧಾಪೂರ್ವ ರೂಢಿ ಸಂಪ್ರದಾಯಗಳು ಮತ್ತು ವೈವಾಹಿಕ ಸಂಬಂಧಗಳ ವಿಚಾರದಲ್ಲಿ ಆಚರಿಸುತ್ತಿದ್ದ ಕುಟುಂಬ ನಿಷ್ಠೆಗಳಿಗೆ ಸಹ ಸಮಾಜದಿಂದ ಕಿರಿಕಿರಿ ಉಂಟಾದಾಗ ಇಂಥ ಅಹಿತಕರ ಘಟನೆಗಳು ನಡೆದಿರಬೇಕು.

ರಣಭೈರೇಗೌಡ ಮತ್ತವನ ಸೋದರರು ಆವತಿಗೆ ಯಾವಾಗ ಬಂದರು ಎಂಬುದು ಖಚಿತವಾಗಿ ತಿಳಿದು ಬಂದಿಲ್ಲ. ವಂಶವೃಕ್ಷದ ಇತಿಹಾಸ, ಶೃಂಖಲಾ ಬದ್ಧವಾಗಿರುವದಿಲ್ಲ. ದಿವಂಗತ ಬಿ.ಎಲ್.ರೈಸ್ ಅವರು ಇವರ ಇತಿಹಾಸವನ್ನು ಹೊಸಕೋಟೆಯ ೧೧೭ನೇ ಶಾಸನವನ್ನು ಉಲ್ಲೇಖಿಸಿ ಕ್ರಿ.ಶ.೧೩೬೭ರಿಂದ ಎಂದು ಗಣನೆಗೆ ತೆಗೆದುಕೊಂಡಿದ್ದಾರೆ. ಅಂತೂ ೧೪ನೇ ಶತಮಾನದ ಉತ್ತರಾರ್ಧದಲ್ಲಿ ಅವರು ಬಂದಿರುವುದಾಗಿ ಗುರುತಿಸಲಾಗುತ್ತಿದೆ.

ಆವತಿಯಲ್ಲಿ ನೆಲೆಸಿದ ಏಳು ಸಹೋದರರ ಕಾಲಾಂತರದಲ್ಲಿ ಬೇರೆಯಾಗಲು ನಿರ್ಧರಿಸಿದುದು ಒಂದು ಐತಿಹಾಸಿಕ ಘಟನೆ. ಹಿರಿಯನಾದ ರಣಭೈರೇಗೌಡ ಆವತಿಯಲ್ಲೇ ಉಳಿದುಕೊಂಡ. ಮುಂದೆ ಈತನ ಮಗನೇ ದೇವನಹಳ್ಳಿ ದೊಡ್ಡಬಳ್ಳಾಪುರ ಮತ್ತು ಚಿಕ್ಕಬಳ್ಳಾಪುರ ಸಂಸ್ಥಾನಗಳನ್ನು ಸ್ಥಾಪಿಸಿದ ಕೀರ್ತಿಗೆ ಪಾತ್ರನಾದ.

ಇನ್ನೊಬ್ಬ ಸಹೋದರ ಸಣ್ಣ ಬೈರೇಗೌಡ ಹೊಳುವನ ಹಳ್ಳಿ (ಅಥವಾ ತೋರಿಂಪುರ) ಪ್ರಾಂತ್ಯದ ಕಡೆ ತೆರಳಿ ಕೊರಟಗೆರೆ ಪ್ರಾಂತ್ಯ ಸ್ಥಾಪನೆಗೊಳ್ಳಲು ಕಾರಣನಾದ. ತಮ್ಮೇಗೌಡ ಜಂಗಮಕೋಟೆ ಬಳಿ ಸುಗಟೂರು ಸಂಸ್ಥಾನ ಸ್ಥಾಪಿಸಿದರು. ಉಳಿದ ಮೂವರ ಗಮ್ಯಸ್ಥಾನದ ವಿವರಗಳ ಆಕರಗಳು ದೊರೆಯುವುದಿಲ್ಲ. ಆದರೆ ಏಳನೆಯವನಾದ ಜಯಗೌಡ ಯಲಹಂಕ ಸಂಸ್ಥಾನದಲ್ಲಿ ನೆಲೆಗೊಂಡು ವಿಜಯನಗರ ಅರಸರ ಜಹಗೀರನಾಗಿ ಆಳಿದ. ಈ ಯಲಹಂಕ ಪ್ರಭುಗಳ ಇತಿಹಾಸವಂತೂ ಲೋಕಪ್ರಸಿದ್ಧ.

## ಒಕ್ಕಲಿಗರ ವಿದ್ಯಾರ್ಥಿ ನಿಲಯ ನಡೆದು ಬಂದ ದಾರಿ

ಕೋಲಾರ ಜಿಲ್ಲೆಯ ಜನಸಂಖ್ಯೆಯಲ್ಲಿ ಒಕ್ಕಲಿಗರ ಜನಾಂಗವು ಬಹಳಷ್ಟು ಸಂಖ್ಯೆಯಲ್ಲಿ ಇದ್ದರೂ ಸಹ ಸಮಾಜದ ವಿದ್ಯಾರ್ಥಿಗಳಿಗೆ ಕೋಲಾರದ ನಗರದಲ್ಲಿ ವ್ಯಾಸಂಗ ಮಾಡಲು ಯಾವುದೇ ರೀತಿಯಾದ ಅನುಕೂಲ ಇರಲಿಲ್ಲ. ಜಿಲ್ಲೆಯ ತಾಲ್ಲೂಕು ಕೇಂದ್ರಗಳಲ್ಲಿ ಕಾಲೇಜಿನ ವಿದ್ಯಾಭ್ಯಾಸಕ್ಕೆ ಕೋಲಾರ ನಗರಕ್ಕೆ ಬರುವ ಅನಿವಾರ್ಯತೆ ಇದ್ದರೂ ಸಹ ವಿದ್ಯಾರ್ಥಿಗಳಿಗೆ ಊಟ ಮತ್ತು ವಸತಿಗೆ ಯಾವುದೇ ರೀತಿಯಾದ ಅನುಕೂಲತೆ ಇರಲಿಲ್ಲ. ವಿದ್ಯಾರ್ಜನೆಗೆ ಕೋಲಾರ ನಗರಕ್ಕೆ ಬರುವ ವಿದ್ಯಾರ್ಥಿಗಳ ಬವಣೆಯನ್ನು ಮನಗಂಡು ಮಾಲೂರು ತಾಲ್ಲೂಕು, ಹುಲಿಮಂಗಲ ಹೊಸಕೋಟೆಯ ಮಾಜಿ ಸಚಿವರಾದ ದಿ.ಹೆಚ್.ಸಿ.ಲಿಂಗಾರೆಡ್ಡಿ, ಕೋಲಾರ ತಾಲ್ಲೂಕು ಅರಾಭಿಕೊತ್ತನೂರಿನ ದಿ.ಎನ್.ಚಂದ್ರೇಗೌಡ, ಕೆಂಬೋಡಿ ಗ್ರಾಮದ ದಿ.ಆರ್.ವೆಂಕಟಪ್ಪ ಅರಹಳ್ಳಿ ಗ್ರಾಮದ ದಿ.ನಂಜೇಗೌಡ ಇನ್ನು ಹಲವಾರು ಮಹನೀಯರು ಕೋಲಾರ ಜಿಲ್ಲಾ ಕೇಂದ್ರದಲ್ಲಿ ಒಕ್ಕಲಿಗರ ವಿದ್ಯಾರ್ಥಿನಿಲಯವನ್ನು ಸ್ಥಾಪಿಸಲು ಯೋಚಿಸಿ ೧೯೪೦ರಲ್ಲಿ ಕುರುಬರಪೇಟೆಯ ಆಂಜನೇಯ ಸ್ವಾಮಿ ದೇವಸ್ಥಾನದ ಪಕ್ಕ ರಾಮಚಂದ್ರಪ್ಪನವರ ಮಹಡಿ ಮನೆಯ ಮೇಲೆ ವಿದ್ಯಾರ್ಥಿ ನಿಲಯವನ್ನು ಪ್ರಾರಂಭಿಸಿದರು. ನಿಲಯದ ಉಸ್ತುವಾರಿಯನ್ನು ಮಾಲೂರು ತಾಲ್ಲೂಕು ಹುಂಗೇನಹಳ್ಳಿ ಗ್ರಾಮದ ಕಂದಾಯ ಇಲಾಖೆಯಲ್ಲಿ ನಿವೃತ್ತ ಅಧಿಕಾರಿಯಾಗಿದ್ದ ಶ್ರೀನಿವಾಸಯ್ಯ ನೋಡಿಕೊಳ್ಳುತ್ತಿದ್ದರು. ನಿಲಯದಲ್ಲಿ ಪ್ರಥಮ ತಂಡದ ವಿದ್ಯಾರ್ಥಿಗಳಲ್ಲಿ ನಾನ ಒಬನಾಗಿದ್ದು ನನ್ನ ಜೊತೆ ಹುಂಗೇನಹಳ್ಳಿ ಮಾಜಿ ಶಾಸಕರಾದ ಹೆಚ್.ದ್ಯಾವೀರಪ್ಪ, ಮುನಿಚೌಡಪ್ಪ, ಐತರಸನಹಳ್ಳಿ ಎ.ನಾರಾಯಣಗೌಡ, ಅರಾಭಿಕೊತ್ತನೂರು ಎನ್.ಸೋಮಪ್ಪ, ರಾಜಪ್ಪ, ಸಂತೇಹಳ್ಳಿಯ

ಲಕ್ಷ್ಮೀನಾರಾಯಣಗೌಡ, ಮೊದಲಾದವರು ಆಶ್ರಯವನ್ನು ಪಡೆದಿದ್ದವು. ನಂತರ ನಿಲಯದ ಕಟ್ಟಡವನ್ನು ಗೌರಿ ಪೇಟೆಗೆ ವರ್ಗಾಯಿಸಲಾಯಿತು.

ಸಮಾಜದ ವಿದ್ಯಾರ್ಥಿಗಳ ಸಂಖ್ಯೆಯಲ್ಲಿ ಹೆಚ್ಚಳ ಕಂಡು ಬಂದಿದ್ದರಿಂದ ನಿಲಯಕ್ಕೆ ಒಂದು ಸ್ವಂತ ಕಟ್ಟಡವನ್ನು ಹೊಂದಲು ಜಿಲ್ಲೆಯ ಒಕ್ಕಲಿಗ ಸಮುದಾಯದ ಮುಖಂಡರಾದ ಮುಳಬಾಗಲು ತಾಲ್ಲೂಕು ಅಲಂಗೂರು ಗ್ರಾಮದ ಚಂಗೇಗೌಡರು, ಕೋಲಾರ ತಾಲ್ಲೂಕು ಶೆಟ್ಟಿಹಳ್ಳಿಯ ರಾಮೇಗೌಡರು, ಮಾಲೂರು ತಾಲ್ಲೂಕು ಸಂತೇಹಳ್ಳಿ ಗ್ರಾಮದ ವೆಂಕಟಸ್ವಾಮಿ ಗೌಡರು, ವೇಮರೆಡ್ಡಿ, ಚಿಂತಾಮಣಿ ತಾಲ್ಲೂಕು ಕಾಗತಿ ಗ್ರಾಮದ ಶ್ರೀರಾಮರೆಡ್ಡಿಯವರು, ಕೋಲಾರ ತಾಲ್ಲೂಕು ಅಲೇರಿ ಗ್ರಾಮದ ಹಿರಣ್ಯಗೌಡರು ಇನ್ನು ಇತರೇ ಸಮಾಜದ ಮುಖಂಡರ ನೇತೃತ್ವದಲ್ಲಿ ಒಂದು ಸಮಿತಿ ರಚಿಸಿ ಅಂದು ಕೋಲಾರ ನಗರದಲ್ಲಿ ಕೃಷಿ ಇಲಾಖೇಯ ನಿರ್ದೇಶಕರಾಗಿದ್ದ ಎನ್.ಎಸ್.ಸುಬ್ಬಣ್ಣನವರ ಸಹಕಾರ ಮತ್ತು ಸಲಹೆಗಳನ್ನು ಪಡೆದು ಕೋಲಾರ ನಗರದ ಕೋಟೆಯಲ್ಲಿದ್ದ ದಿ.ಪೂರ್ಣಯ್ಯನವರ ಛತ್ರವನ್ನು ಈಗಿನ ಹಳೆಯ ನಿಲಯದ ಕಟ್ಟಡ ಒಕ್ಕಲಿಗರ ವಿದ್ಯಾರ್ಥಿ ನಿಲಯಕ್ಕೆ ಪಡೆಯಲು ಯಶಸ್ವಿಯಾದರು. ಈ ಒಂದು ಸಾಹಸದ ಕಾರ್ಯಕ್ಕೆ ಅಂದಿನ ಮೈಸೂರು ರಾಜ್ಯದ ಸ್ಥಳೀಯ ಸಂಸ್ಥೆಗಳ ಮಂತ್ರಿಗಳಾಗಿದ್ದ ದಿ.ಗುಂಡಪ್ಪ ಗೌಡರ ಸಹಾಯ ಸ್ಮರಣೀಯವಾದಂತಹದ್ದು. ೧೯೪೧ನೇ ಇಸವಿಯಲ್ಲಿ ಸದರಿ ಪೂರ್ಣಯ್ಯನವರ ಛತ್ರವು ಒಕ್ಕಲಿಗರ ವಿದ್ಯಾರ್ಥಿನಿಲಯವಾಗಿ ಮಾರ್ಪಟ್ಟಿದ್ದು ಇಂದಿಗೂ ಸದರಿ ಹಳೆಯ ಕಟ್ಟಡವನ್ನು ಕಾಣಬಹುದಾಗಿದೆ. ಸದರಿ ಕಟ್ಟಡದಲ್ಲಿ ಪ್ರಥಮ ತಂಡದ ವಿದ್ಯಾರ್ಥಿಗಳಾಗಿ ಶ್ರೀಯುತರುಗಳಾದ ಕೆ.ಮುನಿಸ್ವಾಮಿಗೌಡ ಎ.ಪಿ.ಚೌಡಪ್ಪ, ಬಿ.ಮುನಿಯಪ್ಪ, ಎಸ್.ಗೋವಿಂದಗೌಡ ಮೊದಲಾದವರು ಸೇರಿದ್ದರು. ನಿಲಯದ ವ್ಯವಸ್ಥಾಪಕರಾಗಿ ಅರಾಭಿಕೊತ್ತನೂರು ಗ್ರಾಮದ ಎಸ್.ಚಂದ್ರೇಗೌಡರು ಮಾಜಿ ಸಚಿವರಾದ ಲಿಂಗಾರೆಡ್ಡಿಯವರ ನೇತೃತ್ವದಲ್ಲಿ ಉತ್ತಮವಾಗಿ ವಿದ್ಯಾರ್ಥಿನಿಲಯವನ್ನು ನಡೆಸಲು ಯಶಸ್ವಿಯಾದರು. ನಂತರ ಒಕ್ಕಲಿಗರ ವಿದ್ಯಾರ್ಜನೆಯನ್ನು ಮಾಡಿರುತ್ತಾರೆ. ಅವರುಗಳಲ್ಲಿ ಕೆಲವರ ಹೆಸರುಗಳು ನನಗೆ ಜ್ಞಾಪಕವಿರುತ್ತದೆ. ಅವರುಗಳೆಂದರೆ ಬಂಗಾರಪೇಟೆ ತಾಲ್ಲೂಕು ಜಕಾರಸನ ಕೊಪ್ಪದ ಕುಂಬಾರ ಕೋಮಿನ ಶ್ರಿ ಬಿ.ನಾರಾಯಣಪ್ಪ ಕೋಲಾರ ತಾಲ್ಲೂಕು ತಲಗುಂದ ಗ್ರಾಮದ ಕುರುಬ ಜನಾಂಗಕ್ಕೆ ಸೇರಿದ ಟಿ.ನರಸಪ್ಪ ರಾಜಕಲ್ಲಹಳ್ಳಿ ಗ್ರಾಮದ ಗಾಣಿಗೆ ಜನಾಂಗದ ಎನ್.ಚೌಡಪ್ಪ, ಹೊಗಳಗೆರೆಯ ಕುರುಬ ಕೋಮಿನ ಗೋಪಾಲಗೌಡ, ಇನ್ನು ಸಾಕಷ್ಟು ಸಂಖ್ಯೆಯ ವಿದ್ಯಾರ್ಥಿಗಳು ಎಂದರೆ ತಪ್ಪಾಗಲಾರದು. ಕೋವು ಸೌಹಾರ್ದತೆಗೆ ಈ ವಿದ್ಯಾರ್ಥಿ ನಿಲಯದ ಪರಂಪರೆ ದೇಶಕ್ಕೆ ಒಂದು ಕೊಡುಗೆಯಾಗಿದೆ.

ಒಕ್ಕಲಿಗರ ವಿದ್ಯಾರ್ಥಿ ನಿಲಯವು ವಿದ್ಯಾರ್ಥಿಗಳ ವ್ಯಾಸಂಗದ ಒಂದು ಮುಖವಾದರೆ, ಮತ್ತೊಂದು ಮುಖ ಭಾರತ ಸ್ವಾತಂತ್ರ್ಯ ಸಂಗ್ರಾಮದ ಕೋಲಾರ ಜಿಲ್ಲೆಯ ಕೇಂದ್ರ ಬಿಂದುವಾಗಿದ್ದುದು. ಅಂದಿನ ವಿದ್ಯಾರ್ಥಿ ನಿಲಯದ ಅಧ್ಯಕ್ಷರಾಗಿದ್ದ ಹೆಚ್.ಸಿ.ಲಿಂಗಾರೆಡ್ಡಿ, ಕಾರ್ಯದರ್ಶಿಯಾಗಿದ್ದ ಎಸ್.ಚಂದ್ರೇಗೌಡರು, ಕೆಂಬೋಡಿಯ ಆರ್.ವೆಂಕಟಪ್ಪನವರು ರಾಷ್ಟ್ರೀಯ ಕಾಂಗ್ರೆಸ್ ಪಕ್ಷದ ಮುಖೇನ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಸಕ್ರೀಯವಾಗಿ ಭಾಗವಹಿಸುತ್ತಿದ್ದರಿಂದ ಅವರ ಪ್ರಭಾವವು ವಿದ್ಯಾರ್ಥಿನಿಲಯದ ವಿದ್ಯಾರ್ಥಿಗಳ ಮನಸ್ಸಿನಲ್ಲಿ ನಾಟಿ ವಿದ್ಯಾರ್ಥಿಗಳು ಸಹ ಸ್ವಾತಂತ್ರ ಸಂಗ್ರಾಮದಲ್ಲಿ ಸಕ್ರಿಯವಾಗಿ ಭಾಗವಹಿಸುವಂತೆ ಮಾಡಿತು. ೧೯೪೭ರಲ್ಲಿ ಗಾಂಧೀಜಿಯವರ ನೇತೃತ್ವದಲ್ಲಿ ಕ್ವಿಟ್ ಇಂಡಿಯಾ ಚಳುವಳಿ ಪ್ರಾರಂಭವಾದಾಗ ಅನೇಕ ನಾಯಕರನ್ನು ಬಂಧಿಸಿದ್ದು, ಮಾಜಿ

ಸಚಿವರುಗಳಾದ ದಿ.ಜಿ.ನಾರಾಯಣಗೌಡರು, ದಿ.ಎಂ.ವಿ.ಕೃಷ್ಣಪ್ಪನವರು, ದಿ.ಹೆಚ್.ಸಿ.ಲಿಂಗಾರೆಡ್ಡಿಯವರು ಬ್ರಿಟೀಷರ ದಬ್ಬಾಳಿಕೆಯನ್ನು ಖಂಡಿಸಿ ಸ್ವಾತಂತ್ರ್ಯ ಸಂಗ್ರಾಮದ ಚಳುವಳಿಯ ಚಟುವಟಿಕೆಗಳನ್ನು ಮುಂದುವರೆಸಲು ಒಕ್ಕಲಿಗರ ವಿದ್ಯಾರ್ಥಿ ನಿಲಯವನ್ನು ಕೇಂದ್ರ ಬಿಂದುವನ್ನಾಗಿ ಪರಿವರ್ತಿಸಿದರು. ಇದು ಸ್ವಾತಂತ್ರ್ಯ ಸಂಗ್ರಾಮದ ಕೇಂದ್ರಬಿಂದುವಾಗಿತ್ತು. ಒಕ್ಕಲಿಗರ ವಿದ್ಯಾರ್ಥಿ ನಿಲಯವು ಇನ್ನೂ ಅನೇಕ ದೇಶಭಕ್ತರಾದ ವಕೀಲ ಕೆ.ಆರ್.ಶ್ರೀನಿವಾಸನ್, ಹೆಚ್.ಸಿ.ರೆಡ್ಡಿ, ಎಂ.ಟಿ.ಕೃಷ್ಣಪ್ಪ, ಜಿ.ನಾರಾಯಣಗೌಡ, ಕೆ.ಪಟ್ಟಾಭಿರಾಮನ್ ಮೊದಲಾದ ಮುಖಂಡರನ್ನು ಆಕರ್ಷಿಸಿ ವಿದ್ಯಾರ್ಥಿನಿಲಯದ ವಿದ್ಯಾರ್ಥಿಗಳಾದ ನಾನು, ಐತರಾಸನಹಳ್ಳಿ ಎ.ನಾರಾಯಣಗೌಡ, ಶ್ರೀನಿವಾಸಪುರ ತಾಲ್ಲೂಕು ಬಲ್ಲಿಮರಿ ಗ್ರಾಮದ ಪಿ.ನಾರಾಯಣರೆಡ್ಡಿ, ದಳಸನೂರು ಗ್ರಾಮದ ಕೃಷ್ಣೇಗೌಡ ಇನ್ನೂ ಅನೇಕ ವಿದ್ಯಾರ್ಥಿಗಳು ಸ್ವಾತಂತ್ರ್ಯ ಸಂಗ್ರಾಮದ ಸೇನಾನಿಗಳಾಗಿ ಹೊರಹೊಮ್ಮಿದ್ದೆವು.

ದಿ.ಹೆಚ್.ಸಿ.ಲಿಂಗಾರೆಡ್ಡಿ ಮತ್ತು ದಿ.ಎನ್.ಚಂದ್ರೇಗೌಡರ ನಂತರ ನಿಲಯದ ಉಸ್ತುವಾರಿಯನ್ನು ಆಗ ವಕೀಲರಾದ ಜನ್ನಘಟ್ಟದ ಕೆ.ಜಿ.ವೆಂಕಟರಮಣಪ್ಪ (ನಿವೃತ್ತ ಜಿಲ್ಲಾ ನ್ಯಾಯಾಧೀಶರು) ಅತಿ ಶಿಸ್ತು ಬದ್ಧ ಉಸ್ತುವಾರಿಯನ್ನು ನಡೆಸಿ ನಿಲಯದ ವಿದ್ಯಾರ್ಥಿಗಳನ್ನು ಶಿಸ್ತಿನ ಮತ್ತು ಆದರ್ಶ ವಿದ್ಯಾರ್ಥಿಗಳಾಗಲು ಅವರ ಶ್ರಮವು ಇಂದಿಗೂ ಸಹ ಅಚ್ಚಳಿಯದಂತೆ ನಮ್ಮ ಮನಸ್ಸಿನಲ್ಲಿ ಉಳಿದಿದೆ. ನಂತರ ಮಾಜಿ ಶಾಸಕರಾದ ಹೆಚ್.ಬಿ.ದ್ಯಾವೀರಪ್ಪನವರು ಶಿಕ್ಷಕರಾಗಿದ್ದ ಲಕ್ಕೂರು ಶ್ರೀ ಬಿ.ಮುನಿಯಪ್ಪನವರು ಕೆಲಕಾಲ ವಿದ್ಯಾರ್ಥಿ ನಿಲಯದ ವ್ಯವಸ್ಥಾಪಕರಾಗಿ ತಮ್ಮ ಸೇವೆಯನ್ನು ಸಲ್ಲಿಸಿರುತ್ತಾರೆ. ನಿಲಯದ ಅಭಿವೃದ್ಧಿಗಾಗಿ ಒಕ್ಕಲಿಗರ ಸಂಘದ ಸಮಿತಿಯೊಂದು ಕೂಡಿ ಸಮಾಜದ ಶುಭ ಸಮಾರಂಭಗಳ ಸಮಯದಲ್ಲಿ ವಿದ್ಯಾಭ್ಯಾಸದ ಪ್ರಾಮುಖ್ಯತೆಯನ್ನು ತಿಳಿಸಿ ಚಂದಾ ಮುಖಾಂತರ ಹಣ ಸಂಗ್ರಹಿಸಿ ಕಟ್ಟಡದ ದುರಸ್ತಿಯನ್ನು ಮಾಡಿಸಲಾಯಿತು.

ಮಾಜಿ ಶಾಸಕರು ಮತ್ತು ಈಗಿನ ಕೋಲಾರ ಜಿಲ್ಲಾ ಒಕ್ಕಲಿಗರ ವಿದ್ಯಾಭಿವೃದ್ಧಿ ಸಂಘದ ಅಧ್ಯಕ್ಷರಾದ ಶ್ರೀ ಎಸ್.ಗೋವಿಂದಗೌಡರು ವಿದ್ಯಾರ್ಥಿ ನಿಲಯದ ವ್ಯವಸ್ಥಾಪಕರ ಹುದ್ದೆಯನ್ನು ವಹಿಸಿಕೊಂಡು ಬಹಳಷ್ಟು ಅವಧಿ ಅಂದರೆ ಅವರು ಶಾಸಕರಾಗಿ ಚುನಾಯಿತರಾಗುವವರೆಗೂ ತಮ್ಮ ಸೇವೆಯನ್ನು ಸಲ್ಲಿಸಿರುತ್ತಾರೆ. ಸದರಿಯವರು ವ್ಯವಸ್ಥಾಪಕರಾಗಿದ್ದ ಅವಧಿಯಲ್ಲಿ ಬಹಳಷ್ಟು ವಿದ್ಯಾರ್ಥಿಗಳು ನಿಲಯದಲ್ಲಿ ವಿದ್ಯಾರ್ಜನೆಯನ್ನು ಮಾಡಿರುತ್ತಾರೆ. ಶ್ರೀ ಎಸ್.ಗೋವಿಂದಗೌಡರು ಶಾಸಕರಾದ ನಂತರ ನಿಲಯದ ಉಸ್ತುವಾರಿಯನ್ನು ದಿ.ಕೆ.ಮುನಿಯಪ್ಪನವರು ವಹಿಸಿಕೊಂಡು ಶಿಸ್ತುಬದ್ಧ ವಿದ್ಯಾರ್ಥಿಗಳನ್ನು ರೂಪಿಸಲು ಕಾರಣವಾಗಿರುತ್ತಾರೆ. ಶ್ರೀಯುತರು ಒಕ್ಕಲಿಗರ ವಿದ್ಯಾಭಿವೃದ್ಧಿ ಸಂಘದ ಅಧ್ಯಕ್ಷರಾದ ಮಾನ್ಯ ಡಿ.ವೆಂಕಟರಾಮೇಗೌಡರು ಅಲ್ಪಕಾಲ ನೋಡಿಕೊಂಡಿರುತ್ತಾರೆ. ನಂತರ ನಿಲಯದ ವ್ಯವಸ್ಥಾಪಕರಾಗಿ ವಕೀಲರಾದ ಮತ್ತು ಕೋಲಾರ ಜಿಲ್ಲಾ ಒಕ್ಕಲಿಗರ ವಿದ್ಯಾಭಿವೃದ್ಧಿ ಸಂಘದ ಈಗಿನ ಕಾರ್ಯದರ್ಶಿಗಳಾದ ಶ್ರೀ ಕೆ.ವಿ.ಶಂಕರಪ್ಪನವರನ್ನು ೧೯೭೭ರ ಸಾಲಿನಲ್ಲಿ ನೇಮಿಸಿದ್ದು ಇದುವರೆಗೂ ನಿಲಯದ ಉಸ್ತುವಾರಿಯನ್ನು ಅವರೇ ಮುಂದುವರೆಸುತ್ತಿದ್ದಾರೆ.

ಮಾಜಿ ಶಾಸಕರಾದ ಎಸ್.ಗೋವಿಂದಗೌಡ ಮತ್ತು ದಿ.ಕೆ.ಮುನಿಯಪ್ಪನವರ ನೇತೃತ್ವದಲ್ಲಿ ವಿದ್ಯಾರ್ಥಿನಿಲಯ ಕಾರ್ಯಚಟುವಟಿಕೆಗಳು ಅದರಲ್ಲಿ ಕ್ರೀಡಾ ಚಟುವಟಿಕೆಗಳು ಅತ್ಯುನ್ನತ ಮಟ್ಟದಲ್ಲಿ ನಡೆಯುತ್ತಿದ್ದವು. ವಿದ್ಯಾರ್ಥಿ ನಿಲಯದ 'ನೇಗಿಲ ಯೋಗಿ' ಎಂಬ ಬ್ಯಾಸ್ಕೆಟ್ ಬಾಲ್ ತಂಡವು ಮೇಲ್ಕಂಡವರ ನೇತೃತ್ವದಲ್ಲಿ ಜಿಲ್ಲೆಯಲ್ಲಿ ಅತಿ ಉತ್ತಮವಾದ ತಂಡವಾಗಿದೆ. ಶ್ರೀ ಕೆ.ವಿ.ಶಂಕರಪ್ಪನವರು ನಿಲಯದ ವ್ಯವಸ್ಥಾಪಕರಾಗಿ ನೇಮಕವಾದ ನಂತರ

ನಿಲಯದ ಕಟ್ಟಡವು ಶಿಥಿಲವಾದದ್ದನ್ನು ಮನಗಂಡು ಕೆ.ಮುನಿಯಪ್ಪ, ಎಸ್.ಗೋವಿಂದಗೌಡ, ಬೆಳಗಾನಹಳ್ಳಿ ವಿ.ವೆಂಕಟೇಶ ಮತ್ತು ಸಂಘದ ಸಮಿತಿಯಾದ ಮತ್ತು ಇತರೇ ದಾನಿಗಳ ಸಹಾಯದಿಂದ ನಿಲಯದ ಕಟ್ಟಡವನ್ನು ದುರಸ್ತಿಮಾಡಿಸಿ ೧೯೯೮ರವರೆಗೂ ಹಳೆಯ ಕಟ್ಟಡದಲ್ಲೇ ವಿದ್ಯಾರ್ಥಿ ನಿಲಯವನ್ನು ನಡೆಸಲಾಗುತ್ತಿತ್ತು. ಮೇಲ್ಕಂಡ ಮಹನೀಯರಲ್ಲದೆ ಒಕ್ಕಲಿಗರ ವಿಧ್ಯಾಭಿವೃದ್ಧಿ ಸಂಘದ ಅಧ್ಯಕ್ಷರಾಗಿದ್ದ ದಿ.ವಿ.ಸೀತಪ್ಪ, ಕಾರ್ಯಕಾರಿ ಸಮಿತಿ ಸದಸ್ಯರುಗಳಾದ ಎ.ಸಿ.ಯದುರಾಯಗೌಡ, ಕೆ.ಮುನಿಸ್ವಾಮಿಗೌಡ, ಎನ್.ಪಾಪಣ್ಣ ಇನ್ನೂ ಇತರೆ ಸಮಿತಿ ಸದಸ್ಯರನ್ನು ಈ ಸಂದರ್ಭದಲ್ಲಿ ಸ್ಮರಿಸುವುದು ನಮ್ಮಗಳ ಆದ್ಯ ಕರ್ತವ್ಯ. ನೂತನ ನಿಲಯದ ಕಟ್ಟಡವು ನಿರ್ಮಾಣವಾದ ನಂತರ ಸ್ವಯಂ ಪ್ರೇರಿತರಾಗಿ ನಿಲಯದ ಉಸ್ತುವಾರಿಯನ್ನು ನೋಡಿಕೊಳ್ಳುತ್ತಿರುವ ನಿವೃತ್ತ ತಹಶೀಲ್ದಾರ್ ಕೆ.ಎಂ.ವೆಂಕಟಸ್ವಾಮಿಯವರ ಮತ್ತು ನಿವೃತ್ತ ಶಿಕ್ಷಕರಾದ ಕೃಷ್ಣಮೂರ್ತಿಯವರ ಸೇವೆಯನ್ನು ಸಹ ನಾವು ಸ್ಮರಿಸಬೇಕಾಗಿದೆ.

ವಿದ್ಯಾರ್ಥಿಗಳು ವ್ಯಾಸಂಗ ಮಾಡಲು ಉತ್ತಮವಾದ ಕಟ್ಟಡವು ಇಲ್ಲದೆ ಇರುವುದನ್ನು ಮನಗಂಡು ಕೋಲಾರ ಜಿಲ್ಲಾ ಒಕ್ಕಲಿಗರ ವಿದ್ಯಾಭಿವೃದ್ಧಿ ಸಂಘದ ಕಾರ್ಯಕಾರಿ ಸಮಿತಿಯು ನೂತನ ವಿದ್ಯಾರ್ಥಿ ನಿಲಯವನ್ನು ನಿರ್ಮಾಣ ಮಾಡುವ ನಿರ್ಣಯವನ್ನು ಕೈಗೊಂಡು ದಿನಾಂಕ.೦೫.೦೫.೧೯೯೭ರಂದು ನೂತನ ಕಟ್ಟಡದ ಶಂಕುಸ್ಥಾಪನೆಯನ್ನು ಜಗದ್ಗುರು ಶ್ರೀ ಶ್ರೀ ಶ್ರೀ ಬಾಲಗಂಗಾಧರನಾಥ ಸ್ವಾಮೀಜಿಯವರ ಅಮೃತ ಹಸ್ತದಿಂದ ನೆರವೇರಿಸಲ್ಪಟ್ಟಿತು. ಸದರಿ ಕಟ್ಟಡವು ಪೂರ್ಣಗೊಂಡಿದ್ದು ದಿನಾಂಕ.೨೭.೦೪.೨೦೦೩ರಂದು. ಪ್ರಾರಂಭೋತ್ಸವ ಸಮಾರಂಭವನ್ನು ಏರ್ಪಡಿಸಿರುವುದು ವಿದ್ಯಾರ್ಥಿ ನಿಲಯದ ಹಳೆಯ ವಿದ್ಯಾರ್ಥಿಗಳಿಗೆ ಮತ್ತು ಸಮುದಾಯದ ಎಲ್ಲಾ ಕುಲಬಾಂಧವರಿಗೂ ಸಂತೋಷದ ಸಂಗತಿಯಾಗಿರುತ್ತದೆ. ಇದೇ ಸಂದರ್ಭದಲ್ಲಿ ವಿದ್ಯಾರ್ಥಿ ನಿಲಯದ ಸುವರ್ಣ ಮಹೋತ್ಸವವನ್ನು ಆಚರಿಸುತ್ತಿರುವುದು ಸಹ ಸೂಕ್ತವಾಗಿರುತ್ತದೆ.

ಕೋಲಾರ ಒಕ್ಕಲಿಗರ ವಿದ್ಯಾರ್ಥಿ ನಿಲಯದಲ್ಲಿ ವ್ಯಾಸಾಂಗ ಮಾಡಿದಂತಹ ವಿದ್ಯಾರ್ಥಿಗಳು ರಾಜಕೀಯದ ಪಟುಗಳಾಗಿ ಉತ್ತಮ ಆಡಳಿತಾಧಿಕಾರಿಗಳಾಗಿ, ವಕೀಲರಾಗಿ, ಶಿಕ್ಷಕರಾಗಿ, ವೈದ್ಯರಾಗಿ, ಇಂಜಿನಿಯರ್‌ಗಳಾಗಿ ಪ್ರಗತಿಪರ ರೈತರಾಗಿ ಹೊರಹೊಮ್ಮಿರುವುದು ಹೆಮ್ಮೆಯ ವಿಷಯವಾಗಿರುತ್ತದೆ. ನಿಲಯದಲ್ಲಿ ವಿದ್ಯಾರ್ಜನೆಯಲ್ಲದೆ ವಿಧ್ಯಾರ್ಥಿಯು ಸರ್ವತೋಮುಖ ಬೆಳವಣಿಗೆಗೆ ಬೇಕಾದ ಕ್ರೀಡೆ, ಸಾಂಸ್ಕೃತಿಕ ಮತ್ತು ಆಧ್ಯಾತ್ಮಿಕ ಚಟುವಟಿಕೆಗಳಿಗೂ ಗಮನವನ್ನು ನೀಡಿದ್ದು, ಜಿಲ್ಲೆಯಲ್ಲಿ ಉತ್ತಮ ವಿದ್ಯಾರ್ಥಿ ನಿಲಯವೆಂದು ಹೆಸರು ಗಳಿಸಿರುವುದು ಸಂತೋಷದ ಸಂಗತಿಯಾಗಿರುತ್ತದೆ. ನಿಲಯದ ಉಸ್ತುವಾರಿಯನ್ನು ವಹಿಸಿದ್ದ ಎಲ್ಲಾ ಮಹನಿಯರಿಗೂ ನಿಲಯದ ಸರ್ವತೋಮುಖ ಅಭಿವೃದ್ಧಿಗೆ ಸಹಕರಿಸಿದ ಮತ್ತು ನೂತನ ಕಟ್ಟಡವನ್ನು ನಿರ್ಮಾಣಮಾಡಲು ಸಹಾಯ ಹಸ್ತವನ್ನು ನೀಡಿದ ಎಲ್ಲಾ ದಾನಿಗಳಿಗೂ ನನ್ನ ನಮನಗಳನ್ನು ಅರ್ಪಿಸುವುದು ಆದ್ಯ ಕರ್ತವ್ಯವಾಗಿರುತ್ತದೆ.

ಕನಿಷ್ಠ ಸೌಲಭ್ಯವುಳ್ಳ ವಿದ್ಯಾರ್ಥಿ ನಿಲಯದ ಆಶ್ರಯವನ್ನು ಪಡೆದು ಉನ್ನತ ಮತ್ತು ಉತ್ತಮ ಮಟ್ಟದಲ್ಲಿ ಇರುವ ನಿಲಯದ ಎಲ್ಲಾ ಹಳೆಯ ವಿದ್ಯಾರ್ಥಿಗಳು ನಿಲಯದ ಮುಂದಿನ ಅಭಿವೃದ್ಧಿ ಬಗ್ಗೆ ಚಿಂತನೆಯನ್ನು ಮಾಡಿ ಸಹಾಯ ಹಸ್ತವನ್ನು ನೀಡಿದ್ದೇ ಆದರೆ ಸಮಾಜದ ಮುಂಬರುವ ವಿದ್ಯಾರ್ಥಿಗಳಿಗೆ ದಾರಿ ದೀಪವಾಗುವುದರಲ್ಲಿ ಯಾವುದೇ ಅತಿಶಯ ಇರಲಾರದು. ಇದು ಎಲ್ಲರ ಕರ್ತವ್ಯವೂ ಆಗಿರುತ್ತದೆ.

* * * * *

# ಅಧ್ಯಾಯ - ೮

## ಕರ್ನಾಟಕದಲ್ಲಿ ಕಂಡುಬರುವ ಒಕ್ಕಲಿಗರ ಸಮಗ್ರ ನೋಟ

೮.೧. ಕೊಡಗಿನಲ್ಲಿ ಒಕ್ಕಲಿಗರು

೮.೨. ಸುಳ್ಯ ಪರಿಸರದ ಒಕ್ಕಲಿಗರು

೮.೩. ನಾಮಧಾರಿ ಒಕ್ಕಲಿಗರು

## ೬.೧. ಕೊಡಗಿನಲ್ಲಿ ಒಕ್ಕಲಿಗರು

ಒಂದೂವರೆ ಶತಮಾನದ ಹಿಂದೆ ಗೌಡ ಜನಾಂಗದವರು ಹೇಗಿದ್ದರು? ಅಮರ ಸುಳ್ಯ ದಂಗೆಯ ನಂತರದ ನೂರಐವತ್ತು ವರ್ಷಗಳಲ್ಲಿ ಬ್ರಿಟಿಷ್ ವಿರೋಧಿಗಳೆಂದು ಗುರುತಿಸಿಕೊಂಡ ನಂತರ ಅವರು ಎಷ್ಟು ಅವನತಿಯನ್ನು ಕಂಡರು. ಮುಂದೆ ಸ್ವಾತಂತ್ರ್ಯ ಸಿಕ್ಕಿದ ನಂತರದ ೬೦ ವರ್ಷಗಳಲ್ಲಿ ಗೌಡ ಜನಾಂಗ ಸಾಧಿಸಿದ ಮುನ್ನಡೆ ಇವುಗಳನ್ನು ವಿಶ್ಲೇಷಿಸುವುದು ಅಗತ್ಯವಾಗಿದೆ. ಇದಕ್ಕಾಗಿ ಕೊಡಗಿನ ಮತ್ತು ಅಮರ ಸುಳ್ಯ ದಂಗೆಯ ಚರಿತ್ರೆಯನ್ನು ತಿಳಿದುಕೊಳ್ಳಬೇಕಾಗುತ್ತದೆ.

### ಚರಿತ್ರೆಗೆ ಸೇರಿಹೋದ ಘಟನೆಗಳು ಸಂಭವಿಸಿದ ಪಕ್ಷಿನೋಟ

ಮಾನವ ಜೀವನಕ್ಕೆ ದುರ್ಗಮವಾದ ಅಂದಿನ ಕೊಡಗಿನ ಬಗ್ಗೆ ಹೈದರಾಲಿಗೆ ಆಸಕ್ತಿ ಉಂಟಾಯಿತು. ಮಲಬಾರಿಗೆ ಹೋಗಲು ಅತ್ಯಂತ ಹತ್ತಿರದ ಮತ್ತು ಅನುಕೂಲಕರವಾದ ದಾರಿ ಇದಾಗಿರುವುದೇ ಈ ಆಸಕ್ತಿಗೆ ಮೂಲಕಾರಣ. ಮೊದಲಾದರೆ ಬಿದನೂರಿಗೆ ಉತ್ತರ ಕನ್ನಡದ ಮೂಲಕವಾಗಿಯೋ ಅಥವಾ ಕೊಯಮತ್ತೂರು ಪಾಲ್‌ಘಾಟ್‌ಗಳ ಮೂಲಕವಾಗಿಯೋ ಮಲಬಾರಿಗೆ ಹೋಗಬೇಕಾಗಿತ್ತು. ಮೊದಲು ಕೊಡಗನ್ನು ಗೆಲ್ಲಬೇಕೆಂದು ಹೈದರ್ ನಿರ್ಧರಿಸಲು ಇದೇ ಕಾರಣ. ಆಗ ಕೊಡಗಿನ ವಿಸ್ತೀರ್ಣ ಅಂದಾಜು ೬೬೨ ಚದರ ಮೈಲು ಜನ ಸಂಖ್ಯೆ ಹತ್ತು ಸಾವಿರ ಮೀರಿರಲಾರದು.

### ಚರಿತ್ರೆಕಾರರ ಪ್ರಕಾರ ಆಗಿನ ಕೊಡಗಿನ ವರ್ಣನೆ

'ಈ ಆಶ್ಚರ್ಯಕರವಾದ ಕಾಡು ಸೀಮೆಯನ್ನು ಕುರಿತು ನಾನು ಏನನ್ನು ಹೇಳಬಲ್ಲೆ, ಅದರ ಹೆಸರು ಹೇಳುವಾಗಲೇ ಲೇಖನಿಯು ನಡುಗುತ್ತದೆ. ಅದರ ಬಿದಿರಮೆಳೆಗಳು ಅಬಿಸೀನಿಯವನ ಕುರಿ ಉಣ್ಣೆ ಕೂದಲಿನ ಗುಂಗುರುಗಳಂತೆ ನುಗ್ಗಲ ಸಾಧ್ಯವಾಗಿದೆ. ದೊಡ್ಡ ದಾರಿಗಳೂ, ಸಣ್ಣ ದಾರಿಗಳೂ ಆಕಾಶದಲ್ಲಿ ನಕ್ಷತ್ರಗಳ ಮಧ್ಯೆ ನುಸುಳಿದಂತಿವೆ. ಈ ದೇಶದ ಗುಡ್ಡಗಳನ್ನೂ ಕಣಿವೆಗಳನ್ನೂ ಹಾದು ಹೋಗುವುದಕ್ಕೆ ಆಗುವುದೇ ಇಲ್ಲ. ತಗ್ಗು ಭೂಮಿಯಲ್ಲಿ ಭತ್ತದ ಬೆಳೆಯು ಎದೆಯಷ್ಟು ಎತ್ತರಕ್ಕೆ ನಿಂತಿರುತ್ತದೆ. ಸೂರ್ಯನು ಸ್ವತಃ ಶಾಖವುಳ್ಳವನಾದರೂ ಇಲ್ಲಿ ಚಳಿಗೆ ಹೆದರಿ ಪ್ರತಿದಿನವೂ ಮೋಡಗಳಿಂದ ತನ್ನನ್ನು ಮುಚ್ಚಿಕೊಂಡು ಇಲ್ಲಿಂದ ಅವಸರವರವಾಗಿ ಹೋಗಿಬಿಡುತ್ತಾನೆ.

ಪ್ರತಿ ರಾತ್ರಿಯು ಚುರುಕಾಗಿ ಪ್ರಯಾಣ ಮಾಡುವ ಚಂದಿರನು ಆಕಾಶದ ನೀಲಿ ಬಣ್ಣದ ಮುಸುಕಿನಲ್ಲಿ ತನ್ನ ಮುಖವನ್ನು ಮುಚ್ಚಿಕೊಳ್ಳುತ್ತಾನೆ. ಬೇಸಿಗೆಯಲ್ಲಿ ಹೀಗಾಗದರೆ ಮಳೆಗಾಲದಲ್ಲಿ ದೇವರೇ ನಮ್ಮನ್ನು ಕಾಪಾಡಬೇಕು. ಮಳೆಗಾಲದ ಆರು ತಿಂಗಳುಗಳಲ್ಲಿ ಈ ದೇಶದಲ್ಲೆಲ್ಲಾ ಮಳೆಯು ಸುರಿದು ದುಃಖದಿಂದ ಇರುವ ಕಣ್ಣುಗಳಲ್ಲಿ ನೀರು ತುಂಬಿಕೊಂಡಿರುವಂತೆ ಭೂಮಿಯೆಲ್ಲಾ ನೀರಿನಿಂದ ತುಂಬಿಕೊಂಡಿರುತ್ತದೆ. ಸಾಯಂಕಾಲದಿಂದ ತೊಡಗಿ ಸೂರ್ಯೋದಯವಾಗಿ ಎರಡು ಗಂಟೆಗಳವರೆಗೆ ಹಿಮವು ಗುಡ್ಡಗಳನ್ನೂ, ಕಣಿವೆಗಳನ್ನು ಮುಚ್ಚಿಕೊಂಡಿರುತ್ತದೆ. ಅನೇಕ ಎತ್ತರವಾದ ದೃಢಕಾಯರಾದ ಚಟುವಟಿಕೆಯಿಂದ ಕೂಡಿದ ತರುಣರು ಚಳಿಯಿಂದ ಅವರ ಅಂಗಾಂಗಗಳ ಬಿಸಿಯನ್ನು ಕಳೆದುಕೊಂಡು ರಾತ್ರಿ ಹೊತ್ತಿನಲ್ಲಿ ತಮ್ಮ ಸಣ್ಣ ಗುಡಿಸಲಿನಲ್ಲಿ ಕಾಲುಗಳು ಎದೆಗೆ ಮುಟ್ಟುವಂತೆ ಬಿಲ್ಲಿನ ಹಾಗೆ ಶರೀರವನ್ನು ಮುದುಡಿಕೊಂಡು ಮಲಗುತ್ತಾರೆ. ಆರು ತಿಂಗಳುಗಳವರೆಗೆ ರೈತರು ತಲೆಯಿಂದ ಕಾಲಿನವರೆಗೂ ಹಳೆ ಕಂಬಳಿ ಅಥವಾ ದಪ್ಪ ಬಟ್ಟೆಯಿಂದ ಮುಚ್ಚಿಕೊಂಡು ಒಂಭತ್ತು, ಹತ್ತು ಗಂಟೆಗಳ ಕೆಲಸಮಾಡುತ್ತಿರುತ್ತಾರೆ. ಈ ಸಮಯದಲ್ಲಿ ಮರದ ಎಲೆಗಳ ಮತ್ತು ಕೊಂಬೆಗಳಲ್ಲಿರುವ ಜಿಗಣೆಗಳು ಅವರನ್ನೂ, ಅವರ ದನ ಕರುಗಳನ್ನೂ, ಕಚ್ಚಿ ತಮಗೆ ಬೇಕಾದಷ್ಟು ರಕ್ತವನ್ನು ಹೀರಿದ ಮೇಲೆಯೇ ಅವರ ಮೈಯನ್ನು ಬಿಡುತ್ತವೆ. ಇಲ್ಲಿನ ಚಳಿಯನ್ನು ವಿವರಿಸುವಾಗ ಬರೆಯುವುದಕ್ಕೆ ಮೊದಲೇ ಲೇಖನಿ ಹಿಡಿದ ಕೈ ಗಡ್ಡೆಗಟ್ಟಿದ ಸಮುದ್ರದೊಳಗೆ ಕೈಯನ್ನು ಮುಳಿಗಿಸಿದರೆ ಹೇಗೋ ಹಾಗೇ ಮರಗಟ್ಟುತ್ತದೆ. ಈ ಹವೆಯನ್ನು ವಿವರಿಸುವ ನಾಲಗೆಯು ತುಟಿಗಳ ಒಳಗಡೆ ಮುಚ್ಚಿಕೊಂಡು ಇದ್ದರೂರ, ಹೆದರಿಕೆಯಿಂದಲೂ, ಆಶ್ಚರ್ಯದಿಂದಲೂ, ಮಂಜುಗಡ್ಡೆಯ ಹಾಗೆ ಗಟ್ಟಿಯಾಗುತ್ತದೆ.' ಎಂದು ಎನ್.ಎಸ್.ದೇವಿಪ್ರಸಾದ್‌ರವರು ತಮ್ಮ ಅಮರ ಸುಳ್ಯ ಸ್ವಾತಂತ್ರ್ಯ ಸಮರ ಎಂಬ ಐತಿಹಾಸಿಕ ಕೃತಿಯಲ್ಲಿ ಉಲ್ಲೇಖಿಸಿದ್ದಾರೆ.

ಇಂತಹ ಕೊಡಗಿಗೆ ಹೈದರಾಲಿಯು ಕೇರಳದ ವಯನಾಡಿಗೆ ಸೇರಿದ ಭೂಪ್ರದೇಶವನ್ನು ಸೇರಿಸುತ್ತಾನೆ. ಆಗ ಕೊಡಗಿನ ವಿಸ್ತೀರ್ಣವು ೧೫೫೮ ಚದರ ಮೈಲು ಆಗುತ್ತದೆ.

೧೮೦೭ರಲ್ಲಿ ದೊಡ್ಡ ವೀರರಾಜ ಬರೆಸಿದನೆನ್ನಲಾದ ರಾಜೇಂದ್ರನಾಮೆ ಒಂದು ಕಟ್ಟುಕಥೆಗಳ ಸಂಗ್ರಹ. ಇದರಲ್ಲಿ ೧೭೫ ವರ್ಷ ೨ ತಿಂಗಳು ೭ ದಿನಗಳ ಹಾಲೇರಿ ಮನೆತನದ ಚರಿತ್ರೆ ಬರೆಸಲ್ಪಟ್ಟಿದೆ. ಇದಕ್ಕೆ ಸಾಕ್ಷಿ ಆಧಾರಗಳಾಗಿ ಶಿಲಾಶಾಸನ, ತಾಮ್ರ ಪತ್ರ, ಕೋಟೆ, ಕೊತ್ತಲಗಳು ನೆರೆರಾಜ್ಯದ ಬರವಣಿಗೆ!, ರಾಬರ್ಟ್ ಅಬರ್‌ಕ್ರಾಂಬಿ ಇದನ್ನು ಇಂಗ್ಲಿಷ್‌ಗೆ ತರ್ಜುಮೆ ಮಾಡಿದನೆನ್ನಲಾಗಿದೆ. ಆದರೆ ಮೂಲ ಕೃತಿ ಇಂಗ್ಲಿಷ್‌ನಲ್ಲಿ ತಯಾರಾಗಿ ಅದು ಕನ್ನಡಕ್ಕೆ ಅನುವಾದಿಸಲ್ಪಟ್ಟಿರಬಹುದೆಂದು ಒಪ್ಪುವುದು ಹೆಚ್ಚು ಸಮಂಜಸವೆನ್ನಿಸುತ್ತದೆ. ಕೊಡಗಿಗೊಂದು ಚರಿತ್ರೆ ತಯಾರಿಸುವುದು ಬ್ರಿಟಿಷರಿಗೆ ಬೇಕಾಗಿತ್ತು. ಈ ಚರಿತ್ರೆ ಬರೆಸಲ್ಪಟ್ಟ ಕಾಲದಲ್ಲಿ, ದೊಡ್ಡ ವೀರರಾಜ ಪತ್ನಿ ವಿಯೋಗದಿಂದ ಮತಿಭ್ರಮಣೆ ಹೊಂದಿದ್ದನೆಂದು ಹೇಳಲಾಗಿದೆ. ಎರಡು ಶತಮಾನಗಳ ಚರಿತ್ರೆ ಸಂಗ್ರಹಿಸುವುದು ಆತನಿಗೆ ಇಂತಹ ಸ್ಥಿತಿಯಲ್ಲಿ ಸಾಧ್ಯವಿಲ್ಲದ ವಿಚಾರ. ಕೊಡಗನ್ನು ಕೇವಲ ಮೂರು ರಾಜರು ೧೭೮೩ರಿಂದ ೧೮೩೪ರ ತನಕ ಆಳಿದರು ಎಂಬುದನ್ನು ಮಾತ್ರ ಒಪ್ಪಿಕೊಳ್ಳಬಹುದು.

ಒಮ್ಮೆ ಮಲಬಾರಿಗೆ ದಾರಿಯ ಅವಶ್ಯಕತೆಗಾಗಿ ಕರ್ನಾಟಕದ ಚರಿತ್ರೆಯಲ್ಲಿ ಗಮನಹರಿಸಲ್ಪಟ್ಟ ಕೊಡಗು ಮತ್ತೆ ತಲಚೇರಿಯಲ್ಲಿದ್ದ ಬ್ರಿಟಿಷ್ ಅಧಿಕಾರಿಗಳ ಗಮನ ಸೆಳೆಯಿತು. ಶ್ರೀರಂಗಪಟ್ಟಣ ಮತ್ತು ಈಸ್ಟ್ ಇಂಡಿಯಾ ಕಂಪೆನಿಯ ಸ್ವಾಧೀನದಲ್ಲಿದ್ದ ತಲಚೇರಿಯ ನಡುವೆ ಅವರಿಗೊಂದು ಆಶ್ರಯ ಬೇಕಿತ್ತು. ಅರಣ್ಯ ಪ್ರದೇಶದ

ಪ್ರಯೋಜನ ಪಡೆದುಕೊಂಡು ಕೆಲವರನ್ನು ಗೆರಿಲ್ಲಾ ಯುದ್ಧ ತಂತ್ರದಲ್ಲಿ ತರಬೇತು ಕೊಟ್ಟು ಹೈದರಾಲಿ ಮತ್ತು ಟಿಪ್ಪುಸುಲ್ತಾನನ ಆಳ್ವಿಕೆಯ ಸಂದರ್ಭದಲ್ಲಿ ತೊಂದರೆ ಕೊಡುವುದಕ್ಕೆ ನಿಯೋಜಿಸಿದರು. 'ಟಿಪ್ಪು ಸುಲ್ತಾನನು ಹಿಂದೂ ವಿರೋಧಿ ಮುಸ್ಲಿಂ' ಎಂಬ ಪ್ರಚಾರಕ್ಕಾಗಿಯೇ ಮೇಕಂಜಿ ಎಂಬ ಸೇನಾಧಿಕಾರಿಯನ್ನು ನೇಮಿಸಿದ್ದರು.

ಮೂರನೇ ಮೈಸೂರು ಯುದ್ಧ ೧೭೮೯ ಡಿಸೆಂಬರ್‌ನಲ್ಲಿ ಪ್ರಾರಂಭವಾಯಿತು. ಅದೇ ಸಮಯ ಪಿರಿಯಪಟ್ಟಣ ಕೋಟೆಯೊಳಗೆ ಬಂಧನದಲ್ಲಿದ್ದ ಕೊಡಗು ರಾಜವಂಶಕ್ಕೆ ಸೇರಿದ ದೊಡ್ಡ ವೀರರಾಜ, ಅಪ್ಪಾಜಿ, ಮತ್ತು ಲಿಂಗರಾಜ ತಪ್ಪಿಸಿಕೊಂಡರೆಂದು ಹೇಳಲಾಗಿದೆ. ಟಿಪ್ಪು ಸೋತು ೧೭೯೨ರ ಮಾಚ್ ತಿಂಗಳಲ್ಲಿ ಮಾಡಿಕೊಂಡ ಸಂಧಾನ ಮಾತುಕತೆಯಲ್ಲಿ ಬ್ರಿಟಿಷರು ಕೊಡಗು ಬೇಕೆಂದು ಹಠಹಿಡಿದರು. ಅದು ಶ್ರೀರಂಗಪಟ್ಟಣಕ್ಕೆ ಒಂದು ಬಾಗಿಲಿದ್ದ ಹಾಗಿತ್ತು. ಹೆಚ್ಚೆಂದರೆ ಅಲ್ಲಿಂದ ರಾಜಧಾನಿಗೆ ಒಂದು ದಿನದ ಪ್ರಯಾಣ. ಕೊಡಗು ತನ್ನ ರಾಜಧಾನಿಗೆ ತುಂಬಾ ಸಮೀಪದಲ್ಲಿರುವುದಿರಿಂದ ಅದನ್ನು ಸಲ್ಲಿಸುವುದು ಸಾಧ್ಯವಿಲ್ಲವೆಂದೂ ಅದನ್ನು ಕೈಬಿಡಬೇಕೆಂದೂ ಹೇಳಿದನು. ಕೊಡಗಿನ ಪ್ರಶ್ನೆ ಸಾಕಷ್ಟು ಕಾಟ ಕೊಟ್ಟಿತು. ಕೊಡಗು ಟಿಪ್ಪುವಿಗೆ ಅನಿವಾರ್ಯವಾಗಿದ್ದರೆ, ವಿಜಯಿಯಾಗಿದ್ದ ಕಾರನ್‌ವಾಲಿಸನಿಗೆ ಪ್ರತಿಷ್ಠೆಯ ಪ್ರಶ್ನೆಯಾಗಿತ್ತು. ಕೊಡಗನ್ನು ಬಿಡುವುದಿಲ್ಲ ಎಂದು ಟಿಪ್ಪುವು ಪಟ್ಟು ಹಿಡಿದನು.

ಮತ್ತೆ ಮಾರ್ಚ್ ೧೫ರಂದುಕೊಡಗಿನ ಬೇಡಿಕೆಯನ್ನು ದಯವಿಟ್ಟು ಕೈ ಬಿಡಬೇಕೆಂದು ಮನವಿ ಮಾಡಿಕೊಂಡರು. ಅದೊಂದು ವಿಚಾರದ ಮೇಲೆ ಇಡೀ ಒಪ್ಪಂದವೇ ಮುರಿದು ಬಿದ್ದು ಹೋಗಬಹುದು ಎಂದು ಸೂಚನೆಯನ್ನು ಕೊಟ್ಟರು. ಒಂದು ವೇಳೆ ಸೈನ್ಯದ ಕಾರ್ಯಾಚರಣೆಗಳು ಮತ್ತೆ ಪ್ರಾರಂಭವಾದರೆ ಒತ್ತೆಯಾಗಿ ಕೊಟ್ಟಿರುವ ರಾಜಕುಮಾರರನ್ನು ಹಿಂದಕ್ಕೆ ಕಳುಹಿಸುತ್ತಾರೆಯೇ ಎಂದು ವಕೀಲರು ಕೇಳಿದರು. ಆದರೆ ಕಾರನ್‌ವಾಲಿಸನು ಅವರನ್ನು ತನ್ನ ಬಳಿಯೇ ಉಳಿಸಿಕೊಳ್ಳಲಾಗುತ್ತದೆ ಎಂದು ಉತ್ತರವಿತ್ತನು."

ಕೊನೆಗೆ ಟಿಪ್ಪು ಅವರ ಬೇಡಿಕೆಗಳಿಗೆ ಸಮ್ಮತಿಸಿದನು. ಇಬ್ಬರು ಮಕ್ಕಳನ್ನು ವಹಿಸಿಕೊಟ್ಟು, ಒಂದು ಕೋಟಿಗೂ ಹೆಚ್ಚು ಹಣವನ್ನು ತೆತ್ತಾಗಿದ್ದ ಈ ಹಂತದಲ್ಲಿ ಅವನು ಬಹಳ ಅಸಹಾಯಕನಾಗಿದ್ದನು. ಮಾರ್ಚ್ ೧೬ ರಂದು ವಕೀಲರು ಟಿಪ್ಪುವಿನ ಸಮ್ಮತಿಯನ್ನು ವರದಿಮಾಡಿದರು.[೬]

ಕಾರನ್‌ವಾಲಿಸನು ಕೊಡಗಿನ ವಿಷಯ ಪಟ್ಟು ಹಿಡಿದುದಕ್ಕೆ ಕಾರಣ ಅಲ್ಲಿಯ ರಾಜನೊಂದಿಗೆ ಒಪ್ಪಂದ ಮಾಡಿಕೊಂಡದ್ದೇನೂ ಅಲ್ಲ. ಆದರೆ ಮಲಬಾರ್ ಕರಾವಳಿಯಲ್ಲಿ ತಾವು ಹೊಸದಾಗಿ ಸಂಪಾದಿಸಿರುವ ಭಾಗಕ್ಕೆ ಸುಭದ್ರವಾದ ಒಂದು ಗಡಿಯನ್ನು ಹಾಕಿಕೊಳ್ಳಬೇಕಾಗುತ್ತದೆ. ಘಟ್ಟದ ಮೇಲಿನ ಯಾವುದೇ ಶಕ್ತಿಯಿಂದ ಅದನ್ನು ರಕ್ಷಿಸಬೇಕಾಗಿರುವುದರಿಂದ ಅವನಿಗೆ ಕೊಡಗು ಅಗತ್ಯವಾಗಿತ್ತು.

೧೭೯೨ರಲ್ಲಿ ವೀರರಾಜೇಂದ್ರ ಪೇಟೆಯನ್ನು ಬ್ರಿಟಿಷರು ಸ್ಥಾಪಿಸಿದರು. (ವಿರಾಜ್‌ಪೇಟೆ)೧೭೯೫ ಏಪ್ರಿಲ್‌ನಲ್ಲಿ ಹೊಸದಾಗಿ ಕಟ್ಟಿಸಿದ ನಾಲ್ಕು ನಾಡು ಅರಮನೆಯಲ್ಲಿ ವೀರರಾಜ ವಾಸಿಸತೊಡಗಿದನು.[೭]

ಇಂದಿಗೆ ನಾಲ್ಕು ನಾಡು ಅರಮನೆಗೆ ೨೧೨ ವರ್ಷಗಳಾದರೂ ಗಟ್ಟಿಮುಟ್ಟಾಗಿಯೇ ಇದೆ. ಆದರೆ ಸುತ್ತು ಮುತ್ತಲ ಜಿಲ್ಲೆಗಳಲ್ಲಿ ಇದಕ್ಕಿಂತ ಹಳೆಯದಾದ ಭವ್ಯವಾದ ಮನೆಗಳನ್ನು ಜಮೀನ್ದಾರರು, ಪಟೇಲರು ಹೊಂದಿದ್ದಾರೆ. ದೊಡ್ಡ ವೀರರಾಜನ ಹಿಂದಿನ ಆತನ ವಂಶಸ್ಥರ ಯಾವುದೇ ಮನೆ, ಕೋಟೆ ಇತ್ಯಾದಿಗಳ ಕುರುಹುಗಳು ಕೂಡಾ ಉಳಿದಿಲ್ಲ.

ಮೈಸೂರು ಒಪ್ಪಂದದ ಒಂದು ವರ್ಷದ ನಂತರ ಕ್ರಿ.ಶ.೧೭೯೩ರಲ್ಲಿ ರಾಬರ್ಟ್ ಅಬರ್‌ಕ್ರಾಂಬಿಯು ಕಂಪೆನಿ ಸರಕಾರಕ್ಕೆ ವಾರ್ಷಿಕ ರೂ.೨೪,೦೦೦ ಕಪ್ಪ ಸಲ್ಲಿಸಬೇಕೆಂದು ಕರಾರು ಮಾಡಿಕೊಂಡು ಕೊಡಗನ್ನು ವೀರರಾಜೇಂದ್ರನಿಗೆ ಬಿಟ್ಟು ಕೊಟ್ಟನು.

೧೭೯೨ರಲ್ಲಿಯೇ ವೀರರಾಜೇಂದ್ರಪೇಟೆ ಮತ್ತು ಚರ್ಚ್ ನಿರ್ಮಾಣ. ೧೭೯೩ರಲ್ಲಿ ಕರಾರು ಪತ್ರ. ೧೭೯೫ರಲ್ಲಿ ಅರಮನೆ ನಿರ್ಮಾಣ, ೧೮೦೭ರಲ್ಲಿ ರಾಜವಂಶದ ಚರಿತ್ರೆಯ ರಚನೆ. ಇದರಲ್ಲಿರುವ ವಿಚಾರದ ಸತ್ಯಾಂಶದ ಬಗ್ಗೆ ಸಾಕಷ್ಟು ಸಂಶಯ ಹುಟ್ಟುವುದು ಸಹಜ.

ಬಯಲು ಸೀಮೆ ಮತ್ತು ಕರಾವಳಿಗಳ ನಡುವಿನ ಮಲೆನಾಡು ಐಗೂರು ನಾಯಕರ ಆಳ್ವಿಕೆಯಲ್ಲಿತ್ತು. ಅವರು ವಿಜಯನಗರದ ಸಾಮಂತರಾಗಿದ್ದರು. ಕೊನೆಯಲ್ಲಿ ಟಿಪ್ಪು ಸುಲ್ತಾನನ ಬೆಂಬಲಿಗರಾಗಿದ್ದರು. ಮಲೆನಾಡು ಪ್ರದೇಶದ ಮೇಲೆ ಬ್ರಿಟಿಷರಿಗೆ ಸಂಪೂರ್ಣ ಹಿಡಿತ ಸಿಕ್ಕಿರಲಿಲ್ಲ. ಎಳೆಯ ವಯಸ್ಸಿನ ವೆಂಕಟಾದ್ರಿನಾಯಕರನ್ನು ಸೆರೆ ಹಿಡಿದು ಗಲ್ಲಿಗೇರಿಸುತ್ತಾರೆ. ಇದರ ವಿವರ ಐಗೂರು ವೆಂಕಟಾದ್ರಿನಾಯಕನ ಲಾವಣಿಯಲ್ಲಿ ಸಿಗುತ್ತದೆ.[೮]

ಹದಿನೆಂಟನೇ ಶತಮಾನದೊಂದಿಗೆ ಟಿಪ್ಪು ಸುಲ್ತಾನನ ಅಧ್ಯಾಯ ಕೊನೆಗೊಳ್ಳುತ್ತದೆ. ಮುಂದೆ ಬ್ರಿಟಿಷರಿಗೆ ವಿರೋಧಿಗಳಾಗಿ ಮುಂದುವರೆದ ಆತನ ಸಾಮಂತರನ್ನು ಸೆರೆ ಹಿಡಿಯಲು ಪ್ರಯತ್ನಿಸುತ್ತಾರೆ. ಐಗೂರಿನ ವೆಂಕಟಾದ್ರಿನಾಯಕನನ್ನು ಸೆರೆಹಿಡಿಯಲು ವೆಲ್ಲೆಸ್ಲಿ ಸೈನ್ಯಕ್ಕೆ ಸಾಧ್ಯವಾಗುವುದಿಲ್ಲ.[೯] ಕೊನೆಗೆ ಪೂರ್ಣಯ್ಯನ ದಂಡು ಬಂದು ಮೋಸದಿಂದ ಆತನನ್ನು ಸೆರೆಹಿಡಿದದ್ದು ಲಾವಣಿರೂಪದಲ್ಲಿ ಪ್ರಕಟವಾಗಿದೆ. ೧೦.೦೨.೧೮೦೨ರಲ್ಲಿ ಆತನನ್ನು ಗಲ್ಲೆಗೇರಿಸಿದ ಘಟನೆ ಆತನ ಪ್ರಜೆಗಳಿಗೆ ನೋವನ್ನುಂಟುಮಾಡಿತ್ತು.[೧೦] ಮುಂದೆ ಅಮರ ಸುಳ್ಯ ದಂಗೆಗೆ ಅದೇ ಮುಖ್ಯ ಕಾರಣವಾಯಿತು.

೧೮೦೪ರಲ್ಲಿ ಐಗೂರು ರಾಜ್ಯದಲ್ಲಿದ್ದ ಅಮರ ಸುಳ್ಯ ಸೀಮೆ ಮತ್ತು ಏಳು ಸಾವಿರ ಸೀಮೆಗಳನ್ನು ಅನಮನೆ ಸೀಮೆ ಎಂದು ಕರೆಯಲ್ಪಡುತ್ತಿದ್ದ ಕೊಡಗಿಗೆ ಸೇರಿಸಲಾಯಿತು. ಆತನ ರಾಜ್ಯದ ಜನರು ಕೊಡಗಿನ ಅರಸರ ಆಳ್ವಿಕೆಯನ್ನು ಬಹಳ ಕಾಲ ಸ್ವೀಕರಿಸಿದಂತೆ ಕಂಡು ಬರುವುದಿಲ್ಲ.[೧೧] ಚಿಕ್ಕವೀರರಾಜನ ತಂಗಿ ಗಂಡ ಚನ್ನಬಸಪ್ಪ, ರಾಜನ ವಿರುದ್ಧ ಜನರನ್ನು ಸಂಘಟಿಸತೊಡಗುತ್ತಾನೆ. ಚಿಕ್ಕವೀರರಾಜನನ್ನು ಹದ್ದುಬಸ್ತಿನಲ್ಲಿಡಲು ಬ್ರಿಟಿಷರು ಚೆನ್ನಬಸಪ್ಪನನ್ನು ಬೆಂಬಲಿಸಿದಂತೆ ಕಂಡು ಬರುತ್ತದೆ.[೧೨] ಅದೇ ಕಾಲದಲ್ಲಿ ಬ್ರಿಟಿಷರು ಭಾರತದ ಎಲ್ಲಾ ಕಡೆ ರಾಜರನ್ನು ಒಂದಲ್ಲ ಒಂದು ರೀತಿಯಲ್ಲಿ ಎದುರು ಹಾಕಿಕೊಂಡಿರುತ್ತಾರೆ. ೧೮೩೧ರಲ್ಲಿ ಮೈಸೂರಿನ ಅರಸರ ಪದಚ್ಯುತಿಯಾಗುತ್ತದೆ. ಮುಮ್ಮಡಿ ಕೃಷ್ಣರಾಜ ಒಡೆಯರ ಸಂಬಂಧಿಕನಾದ ಅರಪುರದ ಬಸಪ್ಪಾಜಿಯ ಅರಮನೆ ಗುಪ್ತಾಲೋಚನೆಯ ಕೇಂದ್ರವಾಗುತ್ತದೆ. ಇನ್ನೊಂದು ಕೇಂದ್ರವಾದ ತಿರುಚಿನಾಪಳ್ಳಿಯೊಂದಿಗೆ ಇವರಿಗೆ ನಿಕಟ ಸಂಬಂಧ ಏರ್ಪಡುತ್ತದೆ. ಅಷ್ಟರಲ್ಲಿಯೇ ಹುಲಿಕೊಂದ ನಂಜಯ್ಯನೆಂಬವನು ದೂರದ ಹೈದರಾಬಾದ್, ದೆಹಲಿ, ಲಾಹೋರ್‌ಗಳನ್ನು ಸಂಪರ್ಕಿಸಿ ಬರುತ್ತಾನೆ. ಇಡೀ ಭಾರತದ ಉದ್ದ ಅಗಲದಲ್ಲಿ ಬ್ರಿಟಿಷರ ಎದುರು ದಂಗೆ ಏಳಲು ಜನರು ಸಿದ್ಧರಾಗುತ್ತಾರೆ.[೧೩]

ಬ್ರಿಟಿಷರನ್ನು ಎದುರಿಸಿದ ಚಿಕ್ಕವೀರರಾಜ ತನ್ನವರಿಂದಲೆ ಮೋಸಕ್ಕೆ ಬಲಿಯಾಗಿ ಸೋಲುತ್ತಾನೆ. ಆತನನ್ನು ಗಲ್ಲಿಗೇರಿಸುವುದು, ಕೊಲ್ಲುವುದು ಅಥವಾ ಕೊಡಗಿನಲ್ಲೇ ಸೆರೆಯಲ್ಲಿಡುವುದು ತೊಂದರೆ ಎಂದು ತಿಳಿದು ಆತ

ಸ್ವ ಇಚ್ಛೆಯಿಂದ ಕಾಶಿಗೆ ಹೋದನೆಂಬ ನಾಟಕ ೧೮೩೪ರ ಮೇ ತಿಂಗಳಲ್ಲಿ ಅಭಿನಯಿಸಲ್ಪಡುತ್ತದೆ. ಸ್ವಾಮಿ ಭಕ್ತನಾದ ದಿವಾನ ಪೊನ್ನಪ್ಪ ಬೆಂಗಳೂರು ತನಕ ಚಿಕ್ಕವೀರರಾಜನೊಡನೆ ಹೋಗುತ್ತಾನೆ. ಬ್ರಿಟಿಷ್ ಆಳ್ವಿಕೆಗೆ ಜನ ಬೆಂಬಲ ಕೊಡಗಿನಲ್ಲಿ ಸಿಗದ ಕಾರಣ ಪೊನ್ನಪ್ಪನನ್ನು ಹಿಂದೆ ಕರೆಸಿಕೊಳ್ಳಬೇಕಾಗುತ್ತದೆ.[೧೪]

ಆಗಿನ ಕಾಲದ ಜನರಲ್ಲಿ ರಾಜ ಭಕ್ತಿ ಬಹಳವಾಗಿತ್ತು. ದಂಗೆಯ ಸೂತ್ರಧಾರಿಗಳು ಇದನ್ನು ತಮ್ಮ ಅನುಕೂಲಕ್ಕೆ ಬಳಸಿಕೊಂಡರು. ಅಪ್ಪಾಜಿ ಅರಸನ ಮಗ ವೀರಪ್ಪ ಜೀವಂತ ಇದ್ದಾನೆ ಎಂಬ ಪ್ರಾಚಾರ ಪ್ರಾರಂಭವಾಯಿತು. ಅಪರಂಪಾರನೆಂಬ ಸನ್ಯಾಸಿಯೊಬ್ಬ ಕಾಣಿಸಿಕೊಳ್ಳುತ್ತಾನೆ. ಹುಲಿಕೊಂದ ನಂಜಯ್ಯ ಆತನೊಡನೆ ಸೇರಿಕೊಳ್ಳುತ್ತಾನೆ. ಕೂಜುಗೋಡು ಮನೆಯಲ್ಲಿ ಇವರು ಆಶ್ರಯ ಪಡೆಯುತ್ತಾರೆ. ಆದರೂ ೧೮೩೫ರಲ್ಲಿ ಅಪರಂಪಾರನನ್ನು ಮಂಜರಾಬಾದಿನಲ್ಲಿ ಬಂದಿಸುತ್ತಾರೆ. ಅದೇ ಕೆಲಸವನ್ನು ಮುಂದುವರಿಸಲು ವೀರಪ್ಪನ ಇನ್ನೊಬ್ಬ ಮಗನೆಂದು ಕಲ್ಯಾಣಪ್ಪನನ್ನು ತಯಾರು ಮಾಡುತ್ತಾರೆ. ಮುಂದಿನ ವರ್ಷ ಆತನ ಹೆಸರಿನಲ್ಲಿ ಜನ ಸಂಘಟಿತರಾಗತೊಡಗುತ್ತಾರೆ. ೧೮೩೬ರಲ್ಲಿ ಕಲ್ಯಾಣಪ್ಪನನ್ನು ಬೈತೂರಿನಲ್ಲಿ ಸೆರೆಹಿಡಿಯುತ್ತಾರೆ. ಆಗ ಕಲ್ಯಾಣಪ್ಪನ ಹೆಸರಲ್ಲಿ ಇನ್ನೊಬ್ಬನನ್ನು ಪರಿಚಯಿಸುವ ನಿರ್ಧಾರಕ್ಕೆ ಬರುತ್ತಾರೆ. ಪುಟ್ಟ ಬಸಪ್ಪ ಎಂಬಾತನನ್ನು ಹುಲಿಕೊಂದ ನಂಜಯ್ಯ ಆರಿಸಿ ಪೂಮಲೆ ಬೆಟ್ಟದಲ್ಲಿ ಆತನನ್ನು ಇರಿಸಿಕೊಂಡು ನಾನಾ ಭಾಗದ ಜನರಿಗೆ ಆತನನ್ನು ಕಲ್ಯಾಣಪ್ಪನೆಂದು ಪರಿಚಯಿಸುತ್ತಾನೆ.[೧೫]

ಪ್ರಾಭಾವಿ ಮುಖಂಡ ಕೆದಂಬಾಡಿ ರಾಮಯ್ಯಗೌಡನ ಮುಂದಾಳತ್ವದಲ್ಲಿ ಮಾರ್ಚ್ ೩೦ರಂದು ಬೆಳ್ಳಾರೆಯಲ್ಲಿ ೨೦೦೦ ಸಶಸ್ತ್ರ ಜನರು ಸೇರಿ ಖಜಾನೆಯನ್ನು ವಶಕ್ಕೆ ತೆಗೆದುಕೊಳ್ಳುತ್ತಾರೆ.[೧೬] ಅದೇ ದಿನ ೨೦೦ ಸೈನಿಕರ ತಂಡ ಕುಂಚಡ್ಕ ತಿಮ್ಮ ಮತ್ತು ಕುಡೆಕಲ್ಲು ಪುಟ್ಟ ಇವರ ಮುಂದಾಳತ್ವದಲ್ಲಿ ಕಾಸರಗೋಡಿಗೆ ಹೋಗುತ್ತದೆ. ಅವರು ಏಪ್ರಿಲ್ ಎರಡರಂದು ಕಾಸರಗೋಡು, ಮೂರರಂದು ಕುಂಬ್ಳೆ, ನಾಲ್ಕರಂದು ಮಂಜೇಶ್ವರಗಳನ್ನು ತಮ್ಮ ವಶಕ್ಕೆ ತೆಗೆದುಕೊಳ್ಳುತ್ತಾರೆ. ಅಲ್ಲಿ ತಮ್ಮ ಸರಕಾರದ ತಹಶೀಲ್ದಾರರಿಗೆ ಅಧಿಕಾರ ವಹಿಸಿ, ಎಲ್ಲಾ ಸರಕಾರಿ ನೌಕರರಿಗೆ ಸಂಬಳ ವಿತರಿಸಿ, ತಮ್ಮ ಸರಕಾರಕ್ಕೆ ವಿಧೇಯರಾಗಿರುವುದಾಗಿ ಮುಚ್ಚಳಿಕೆ ಬರೆಸಿಕೊಳ್ಳುತ್ತಾರೆ. ಹಿಂದೆಯೇ ನಿಶ್ಚಯಿಸಿದ ಪ್ರಕಾರ ಎಪ್ರಿಲ್ ಐದರಂದು ಮಂಗಳೂರು ತಲುಪುತ್ತಾರೆ.[೧೭]

ಅದೇ ಮಾರ್ಚ್ ೩೦ರಂದು ೨೦೦ ಸೈನಿಕರ ಇನ್ನೊಂದು ತಂಡ ಬಿಸ್ಲೆ ಮಾರ್ಗವಾಗಿ ಮಡಿಕೇರಿ ಕಡೆ ಹೊರಟಿರುತ್ತದೆ. ದಾರಿಯಲ್ಲಿ ಸಿಕ್ಕಿದ ಎಲ್ಲಾ ಸರಕಾರಿ ಕಚೇರಿಗಳನ್ನು ಖಜಾನೆಗಳನ್ನು ಸ್ವಾಧೀನಪಡಿಸಿಕೊಳ್ಳುತ್ತಾ, ವಿರೋಧಿಸಿದವರನ್ನು ಸೆರೆಹಿಡಿಯುತ್ತಾ, ತಮ್ಮ ಕಡೆಯ ಅಧಿಕಾರಿಗಳನ್ನು ನೇಮಿಸುತ್ತಾ ಮುಂದುವರಿಯುತ್ತಾರೆ.[೧೮]

ಅದೇ ಮಾರ್ಚ್ ೩೦ ರಾತ್ರಿ ಬೆಳ್ಳಾರೆಯ ಘಟನೆಯ ವರದಿ ಕಲೆಕ್ಟರ್ ಲೆವಿನಿಗೆ ತಲುಪುತ್ತದೆ. ಮರುದಿನ ಬೆಳಿಗ್ಗೆ ೧೬೧ ಸೈನಿಕರೊಂದಿಗೆ ಹೊರಟು ಪುತ್ತೂರಿಗೆ ತಲುಪುವಾಗ ರಾತ್ರಿಯಾಗಿರುತ್ತದೆ. ಮರುದಿನ ನೋಡುವಾಗ ೧೨೦೦ಕ್ಕೂ ಮೀರಿ ಸಶಸ್ತ್ರ ಜನರು ಆತನನ್ನು ಸುತ್ತುವರಿದುದನ್ನು ಕಂಡು ಕಂಗಾಲಾಗುತ್ತಾನೆ. ಏಪ್ರಿಲ್ ೨ರ ರಾತ್ರಿ ಮಂಗಳೂರಿಗೆ ಪಲಾಯನ ಮಾಡುತ್ತಾನೆ. ಅಲ್ಲಿ ನೋಡಿದರೆ ನಾಗರಿಕರು ಬ್ರಿಟಿಷರಿಗೆ ಅಸಹಕಾರ ಹಾಗೂ ಎದುರಾಳಿಗಳಿಗೆ ಭವ್ಯ ಸ್ವಾಗತ ನೀಡಿ ಅವರೊಂದಿಗೆ ಸೇರಿಕೊಂಡಿರುವುದು ಕಂಡು ಬರುತ್ತದೆ.[೧೯]

ಎಪ್ರಿಲ್ ೫ರಂದು ಬಾವುಟಗುಡ್ಡದಲ್ಲಿ ಹಾರುತ್ತಿದ್ದ ಬ್ರಿಟಿಷರ ಧ್ವಜವನ್ನು ಇಳಿಸಿ ತಮ್ಮ ಧ್ವಜಾರೋಹಣ ಮಾಡುತ್ತಾರೆ. ಬ್ರಿಟಿಷ್ ಪ್ರಜೆಗಳಿಗೆ ಓಡಿ ಹೋಗಲು ಧೈರ್ಯಸಾಲದೆ ಕಂಟೋನ್‌ಮೆಂಟಿನ ಭದ್ರನೆಲೆಯಲ್ಲಿ ಅವಿತುಕೊಳ್ಳುತ್ತಾರೆ. ಮರುದಿನ ಹೊನ್ನಾವರದಿಂದ ಅರವತ್ತು ಸೈನಿಕರು ಮದ್ದು ಗುಂಡುಗಳೊಂದಿಗೆ ಬಂದ

ಮೇಲೆ ಬ್ರಿಟಿಷ್ ಪ್ರಜೆಗಳನ್ನು ಅವರು ಸುತ್ತುವರಿದು ಬಹಳ ಸಾಹಸದಿಂದ ಹಡಗು ಹತ್ತಿಸಿ ಕಣ್ಣಾನೂರಿಗೆ ಕಳುಹಿಸುತ್ತಾರೆ.

ಬ್ರಿಟಿಷರ ಸೈನ್ಯದಲ್ಲಿ ಸುಬೇದಾರನಾಗಿದ್ದ ಗುಡ್ಡೆ ಅಪ್ಪಯ್ಯ ಅವರ ವಿರೋದಿಗಳೊಂದಿಗೆ ಸೇರಿದ್ದು ಅವರಿಗೆ ದೊಡ್ಡ ಆತಂಕವಾಗುತ್ತದೆ. ಅಪ್ಪಯ್ಯನ ಸಹೋದರ ಗುಟ್ಟೆ ತಮ್ಮಯ್ಯ ಅರಸರ ಕಾಲದಲ್ಲಿ ಸುಳ್ಯದಲ್ಲಿ ಪಾರುಪತ್ಯಗಾರನಾಗಿದ್ದು ಅರಸರ ಪದಚ್ಯುತಿ ನಂತರ ದಂಗೆಯನ್ನು ರೂಪಿಸುವವರೊಡನೆ ಸೇರಿಕೊಂಡಿದ್ದನು. ಗುಡ್ಡೆ ಅಪ್ಪಯ್ಯನು ಮೇಲ್‌ಕೊಡಗಿಗೆ ಹಿಂತಿರುಗಿ ನಾಕುನಾಡು ಸುಬೇದಾರ ಮಾದಯ್ಯನ ದಂಗೆಯಲ್ಲಿ ಭಾಗವಹಿಸಲು ಪ್ರಚೋದಿಸುತ್ತಾನೆ. ಅವನ ಸ್ನೇಹಿತರಾದ ಇತರ ಸುಬೇದಾರರು ಮಡಿಕೇರಿಗೆ ದಾಳಿ ಇಡುವಾಗ ಸಹಕರಿಸಲು ಒಪ್ಪಿಕೊಳ್ಳುತ್ತಾರೆ. ಈ ವಿಚಾರವನ್ನು ಹೇಳಲು ಕುಂದಳ್ಳಿಯಲ್ಲಿ ಬಂದು ಇಳಿದುಕೊಂಡಿರುವ ಕೂಜುಗೂಡು ಅಪ್ಪಯ್ಯ ಮತ್ತು ಮಲ್ಲಪ್ಪ ಸಹೋದರರಲ್ಲಿಗೆ ಗುಡ್ಡೆ ಅಪ್ಪಯ್ಯ ಹೋಗುತ್ತಾನೆ. ಅವರು ಕೊಡಗಿನ ಸುಬೇದಾರ ಅಪ್ಪಚ್ಚುನನ್ನು ಸೆರೆಡಿಯುತ್ತಾರೆ.[೨೦]

ಇತ್ತ ಕೊಡಗಿನಲ್ಲಿ ಕ್ಯಾ| ಲಾಹಾರ್ಡಿಗೆ ಬೋಪು ದಿವಾನನ ಸಂಬಂಧಿಕರು ತಮ್ಮನ್ನು ವಿರೋಧಿಸಲು ಹೊರಟಿರುವುದು ಗೊತ್ತಾಗಿ ಆತನ್ನು ಗದರಿಸುತ್ತಾನೆ. ಅವರ ಮನವೊಲಿಸುವ ಭರವಸೆಯ ಮಾತುಕೊಟ್ಟು ಮಾದಯ್ಯನಲ್ಲಿಗೆ ಹೋಗುತ್ತಾನೆ. ಅವನನ್ನು ಆಮಿಷಕ್ಕೆ ಬಲಿ ಬೀಳಿಸಿ ನಿಷ್ಕೆ ಬದಲಾಯಿಸುವಂತೆ ಮಾಡುತ್ತಾನೆ. ಕೊನೆಗೂ ಬ್ರಿಟಿಷರ ಕುತಂತ್ರ ಸಫಲವಾಗುತ್ತದೆ. ಕೊಡಗಿನ ಸೈನ್ಯದ ಬರುವಿಕೆಯ ನಿರೀಕ್ಷೆಯಲ್ಲಿದ್ದ ಕುಕ್ಕನೂರು ಚಿಣ್ಣಯ್ಯ, ಪೆರಾಜೆ ಕೃಷ್ಣಯ್ಯ, ಕರಣೀಕ ಸುಬ್ಬಯ್ಯ ಮೊದಲಾದವರು ಅವರನ್ನು ಸ್ವಾಗತಿಸುತ್ತಾರೆ. ಆಗ ಇವರನ್ನು ಸುಲಭವಾಗಿ ಸೆರೆಹಿಡಿಯುತ್ತಾರೆ. ಇದೇ ನಾಟಕ ಕುಂದಳ್ಳಿಯಲ್ಲಿ ನಡೆಯುತ್ತದೆ.[೨೧]

ಆದರೆ ಅಪ್ಪಚ್ಚು ಮೊದಲಾದ ಕೊಡಗು ಸೈನ್ಯದ ಅಧಿಕಾರಿಗಳು ಇವರಲ್ಲಿ ಒತ್ತೆಯಾಳುಗಳಾಗಿದ್ದ ಕಾರಣ ಇವರೊಂದಿಗೆ ಒಪ್ಪಂದಕ್ಕೆ ಬರಬೇಕಾಗುತ್ತದೆ. ಆದರೂ ಸೆರೆಸಿಕ್ಕಿದ ನಾಲ್ಕು ಜನರನ್ನು ಗಲ್ಲಿಗೇರಿಸುತ್ತಾರೆ. ಮೇ ೨೭ರಂದು ಲಕ್ಷ್ಮಪ್ಪ ಬಂಗರಸ, ಮೇ, ೩೦ರಂದು ಉಪ್ಪಿನಂಗಡಿ ಮಂಜ, ಜೂನ್ ೧೯ರಂದು ಪುಟ್ಟ ಬಸವ, ಅಕ್ಟೋಬರ್ ೩೧ರಂದು ಗುಡ್ಡೆ ಅಪ್ಪಯ್ಯನನ್ನು ಗಲ್ಲಿಗೇರಿಸುತ್ತಾರೆ. ಕೈದಿಗಳ ಪೈಕಿ ಪುಟ್ಟಯ್ಯ, ಮುಂಗಣ್ಣ, ಬಂಗಾರಿ ಜೈಲಿನಲ್ಲಿ ಮೃತರಾಗುತ್ತಾರೆ. ಪೌಜುಧಾರಿ ಅದಾಲತ್‌ನಲ್ಲಿ ಮರಣದಂಡನೆಗೆ ಗುರಿಯಾಗಿದ್ದ ಐದು ಜನರಿಗೆ ಮಾತ್ರ ವಿನಾಯಿತಿ ಸಿಗುತ್ತದೆ.[೨೨] ಕುಕ್ಕನೂರು ಚಿಣ್ಣ ಮತ್ತು ಪೆರಾಜೆಯ ಕೃಷ್ಣಯ್ಯರಿಬ್ಬರಿಗೆ ಮಾತ್ರ ಜೀವಾವಧಿ ಶಿಕ್ಷೆ ಆದಂತೆ ತಿಳಿದು ಬರುತ್ತದೆ. ಮದ್ರಾಸ್ ಪತ್ರಾಗಾರದಲ್ಲಿ ಸುರಕ್ಷಿತವಾಗಿ ಕೈದಿಗಳ ವಿಚಾರಣೆ ದಾಖಲೆಗಳು ಈ ದಂಗೆಯ ಬಗ್ಗೆ ಇನ್ನಷ್ಟು ಸತ್ಯಾಂಶಗಳನ್ನು ನೀಡಬಲ್ಲವು.[೨೩]

ದಿವಾನ್ ಲಕ್ಷ್ಮೀನಾರಾಯಣ ಒಳಸಂಚಿನಲ್ಲಿ ಭಾಗಿಯಾಗಿದ್ದನೆಂಬ ಅನುಮಾನದಿಂದ ಸೆರೆಮನೆ ಸೇರಬೇಕಾಯಿತು. ಆತನ ಹೆಂಡತಿಯ ಸಹೋದರ ಕೃಷ್ಣಯ್ಯ ಮತ್ತು ಮಗಳ ಗಂಡ ಕರಣಿಕ ಸುಬ್ಬಯ್ಯ ಶಿಕ್ಷೆಗೊಳಗಾಗುತ್ತಾರೆ. ದಿವಾನರ ತಮ್ಮ ರಾಮಪ್ಪಯ್ಯ ಇವರಿಬ್ಬರ ಪರಮ ಮಿತ್ರ. ಆತನೂ ದಂಗೆಯ ಒಳಸಂಚಿನಲ್ಲಿ ಭಾಗಿಯಾಗಿದ್ದ. ಆತ ಕೊಲ್ಲಲ್ಪಟ್ಟು ಇದು ದಂಗೆಯ ನಾಯಕ ರಾಮಯ್ಯ ಗೌಡನ ಅಪ್ಪಣೆಯಂತೆ ನಡೆದಿದೆ ಎಂಬ ಪ್ರಚಾರ ಉಂಟಾಗುತ್ತದೆ. ಆದರೂ ಕೂಡಾ ಬ್ರಿಟಿಷರ ಒಡೆದು ಆಳುವ ಈ ತಂತ್ರಕ್ಕೆ ಯಾರು ಬಲಿಯಾಗದೆ ಒಗ್ಗಟ್ಟು ಕಾಯ್ದುಕೊಂಡರು.[೨೪]

'ಕೊಡಗು ಬಂಡಾಯವೆಂದು ಕರೆಯಲ್ಪಡುವುದು ನಿಜವಾಗಿ ಹೇಳುವುದಾದರೆ ಗೌಡರ ಮೇಲ್ಬೀಳುವಿಕೆ. ಇವರು ಕೊಡಗರನ್ನು ಹೋಲುವ ಸ್ವಭಾವವನ್ನು ಹೊಂದಿದ್ದು, ಘಾಟಿಯ ಪಶ್ಚಿಮ ಇಳಿಜಾರು ಪ್ರದೇಶದಲ್ಲಿರುವ ಜನಾಂಗ' ೧೮೭೦ರಲ್ಲಿ ಮುದ್ರಿಸಲ್ಪಟ್ಟ ರೆವರೆಂಡ್ ಜಿ.ರಿಕ್ತರ್‌ನ ಗಜೆಟಿಯರ್ ಆಫ್ ಕೂರ್ಗ್‌ನಲ್ಲಿ ಈ ರೀತಿಯ ಅಭಿಪ್ರಾಯದ ಪ್ರಥಮ ವಾಕ್ಯದೊಂದಿಗೆ ಅಮರ ಸುಳ್ಯ ದಂಗೆಯನ್ನು ವಿವರಿಸಿದ್ದಾನೆ.

ಅಂದಿನ ಕಾಲದಲ್ಲಿ ಕೊಡಗರು ಮತ್ತು ಗೌಡರೊಳಗೆ ಒಂದು ರೀತಿಯಲ್ಲಿ ಕದನವೇ ನಡೆದಿತ್ತು. ಇದರ ಪರಿಣಾಮ ಶತಮಾನಗಳ ಕಾಲ ಮುಂದುರಿಯುತ್ತಾ ಬಂದಿದೆ. ಕೊಡಗರು ಬ್ರಿಟಿಷರಿಗೆ ಇಡೀ ಭಾರತದಲ್ಲಿಯೇ ಅತ್ಯಂತ ನಂಬಿಗಸ್ತ ಜನಾಂಗವೆನ್ನಿಸಿಕೊಂಡರು. ಆದ ಕಾರಣವೇ ಸೈನ್ಯದಲ್ಲಿ ಅತೀ ಉನ್ನತ ಪದವಿಗೆ ಉತ್ತರಾಧಿಕಾರಿಗಳಾಗುವುದು ಮತ್ತು ಸೈನ್ಯದಲ್ಲಿ ಅನೇಕ ಗಣ್ಯ ಪದವಿಗಳನ್ನು ಗಿಟ್ಟಿಸಿಕೊಳ್ಳುವುದು ಸಾಧ್ಯವಾಯಿತು. ಗೌಡ ಜನಾಂಗದವರಿಗೆ ಬ್ರಿಟಿಷ್ ಆಳ್ವಿಕೆಯ ಕೊನೆದಿನಗಳಲ್ಲಿ ಪೋಲೀಸ್ ಕಾನ್‌ಸ್ಟೇಬಲ್, ಪೇದೆ, ಹಳ್ಳಿ ಶಾಲೆ ಮೇಸ್ಟರ ಚಾಕರಿ ಕೊಡುವ ಉದಾರತೆ ತೋರಿಸಿದರು. ಇದರಿಂದ ನೂರಹತ್ತು ವರ್ಷಗಳಲ್ಲಿ ಎರಡು ಜನಾಂಗಗಳ ಸಾಮಾಜಿಕ ಸ್ಥಾನಮಾನಗಳಲ್ಲಿ ಗಮನಾರ್ಹ ಅಂತರ ಹೆಚ್ಚಿತು.

ಇಡೀ ಭಾರದಲ್ಲಿ ಹಿಂದೂ ಮುಸ್ಲಿಮರು ಬೇಧವನ್ನು ಮರೆತು ೧೮೫೭ರಲ್ಲಿ ಬ್ರಿಟಿಷರ ವಿರುದ್ಧ ಹೋರಾಡಿದರು. ಸಿಪಾಯಿದಂಗೆ ಎಂದು ಪ್ರಸಿದ್ಧವಾಗಿರುವ ಭಾರತದ ಈ ಪ್ರಥಮ ಸ್ವಾತಂತ್ರ್ಯ ಸಮರದಲ್ಲಿ ಕೊಡಗರು ಏನು ಮಾಡಿದರು? ಕೊಡವರ ಬೈಬಲ್, ಭಗವದ್ಗೀತೆ ಎಂಬುದಾಗಿ ಹೇಳಲ್ಪಡುತ್ತಿರುವ ಪಟ್ಟೋಲೆ ಪಳಮೆಯಲ್ಲಿ ಸಿಗುವ ವಿವರ ಹೀಗಿದೆ:

೧೮೫೭ರಲ್ಲಿ ಹಿಂದು ದೇಶದಲ್ಲಿ ಎದ್ದ ದೊಡ್ಡ ದಂಗೆಯಲ್ಲಿ, ಕೊಡಗರು ಇಂಗ್ಲಿಷ್ ಸರಕಾರಕ್ಕೆ ರಾಜ ಭಕ್ತಿಯನ್ನು ತೋರಿಸಿ ಕತ್ತಿ, ಕೋವಿ ಸಮೇತ ೫೦೦ ಮಂದಿ ಕೊಡಗರು ಪೆರ್‍ಯಾಪಟ್ಟಣದಲ್ಲಿ ಕಾದಿದ್ದರು. ದಂಗೆಯು ಅಡಗಿದ ಮೇಲೆ ಹಿಂತಿರುಗಿ ಬಂದರು.

ತದನಂತರ ಕೊಡಗು ಕಮೀಷನರಾಗಿದ್ದು ಜನರಲ್ ಕಬ್ಬನ್ ಸಾಹೇಬರು ಯುದ್ಧ ಸನ್ನದ್ಧರಾಗಿರುವಂತಹ ಕೊಡಗ ವೀರನೊಬ್ಬನ ನಕ್ಷೆ ಸಮೇತವಾದ ದೊಡ್ಡ ಬಿರುದಿನ ಮುದ್ರೆಯೊಡನೆ ಈ ಕೆಳಗಿನ ಇಸ್ತಹಾರವನ್ನು ಇಂಗ್ಲಿಷ್, ಮತ್ತು ಕನ್ನಡದಲ್ಲಿ ಪ್ರಸಿದ್ಧಗೊಳಿಸಿದರು.

'ಈ ಚಿಕ್ಕ ಜನಾಂಗದವರ ಉನ್ನತವಾದ ಲಕ್ಷಣವಾದ ಘನದಲ್ಲೂ, ರಾಜ ಭಕ್ತಿಯನ್ನೂ, ಧೀರತ್ವವನ್ನೂ ನೆನಸಿಕೊಂಡು ಮತ್ತು ಬ್ರಿಟಿಷ್ ಸರಕಾರದ ಸಹಾಯದಲ್ಲಿ ವಿಶೇಷವಾದ ರಾಜ ಕಾರ್ಯವನ್ನು ಮಾಡಿರುವುದನ್ನು ಆಲೋಚಿಸಿಕೊಂಡು ಇಡಿಯಾ ಸರಕಾರವು ನನ್ನಲ್ಲಿಟ್ಟ ಅಧಿಕಾರ ಶಕ್ತಿಯಿಂದ, ಆಯುಧಗಳನ್ನು ಹಿಡಿಯಬಾರದೆಂಬ ಕಾನೂನು ಈ ಪ್ರತಾಪವುಳ್ಳ ಕೊಡಗು ಜನರಿಗೆ ಲಗಾವು ಆಗುವುದಿಲ್ಲವೆಂದು ಎಲ್ಲರಿಗೂ ಅರಿಯುವಂತೆ ಪ್ರಸಿದ್ಧಗೊಳಿಸುವುದು ನನಗೆ ಸಂತೋಷಕರವಾದ ಕೆಲಸವಾಗಿರುತ್ತದೆ.

26" February 1871 (Sd)M.Cubbon

Commissioner

೧೯೨೦ನೇ ಇಸವಿಯಲ್ಲಿ ಆಯುಧದ ಕಾನೂನುಗಳನ್ನು ಪುನಃ ಬದಲಾಯಿಸಿದಾಗ ಆಯುಧಗಳನ್ನು ಹಿಡಿಬಾರದೆಂಬ ಪೂರ್ವದಂತೆಯೇ ಕೊಡಗು ಜನರಿಗೆ ಲಗಾವು ಆಗಬಾರದೆಂದು ಆಗ ಕೊಡಗಿನ ಡಿಸ್ಟ್ರಿಕ್ಟ್ ಮ್ಯಾಜಿಸ್ಟ್ರೇಟರಾಗಿದ್ದ ಎಫ್.ಎಲ್.ಬ್ರಿಗ್ ಸ್ಟಾಕ್ ಸಾಹೇಬರು ಹಠತ್ತಾಗಿ ಬರೆದ ಮೇರೆಗೆ ಆಗ ಚೀಫ್ ಕಮೀಷನರಾಗಿದ್ದ ಎಚ್.ವಿ.ಕಾಬ್ ಸಾಹೇಬರು ಮಂಜೂರು ಮಾಡಿಸಿದರು.[೨೬]

ಮೇಲಿನ ವಿವರಣೆಯಿಂದ ಅರ್ಥವಾಗುವುದೇನೆಂದರೆ ಶಸ್ತ್ರ ನಿರ್ಬಂಧ ಕಾಯಿದೆಯಲ್ಲಿ ವಿನಾಯಿತಿ ಸಿಗಲು ೧೮೩೭ ಮತ್ತು ೧೮೫೭ರಲ್ಲಿ ಅವರು ಶಸ್ತ್ರ ಹಿಡಿದು ಬ್ರಿಟಿಷರ ಪರವಾಗಿ ಭಾರತೀಯರ ವಿರುದ್ಧವಾಗಿದ್ದುದೇ ಕಾರಣವೆಂಬುದು ಸ್ಪಷ್ಟವಾಗುತ್ತದೆ. ಇದು ಸ್ವಾತಂತ್ರ್ಯ ಸಿಕ್ಕ ಅರ್ಧ ಶತಮಾನ ಕಳೆದರೂ ಜಾರಿಯಲ್ಲಿರುವುದು ಸರಿಯೇ?

ಬಾಂಬೆ ಕಮಿಟಿಯ ಹಿಸ್ಟ್ರಿ ಆಫ್ ಫ್ರೀಡಮ್ ಮೂವ್‌ಮೆಂಟ್‌ನಲ್ಲಿ ಹೀಗೆ ಬರೆದಿದ್ದಾರೆ:

''ಕೆನರಾ ಜಿಲ್ಲೆಯಲ್ಲೆಲ್ಲಾ ಹರಡಿ ನೆರೆಹೊರೆಯ ಪ್ರಾಂತ್ಯಗಳಿಗೂ ಹರಡುತ್ತಿದ್ದ ವಿಶಾಲ ವ್ಯಾಪ್ತಿಯ ಪ್ರಭಾವಶಾಲಿ ಬಂಡಾಯವನ್ನು ಆರು ವಾರಗಳಲ್ಲಿ ತಣ್ಣಗೆ ಮಾಡಲಾಯಿತು. ಕಾರ್ಯಸಿದ್ಧಿಗೂ, ಬಂಡಾಯವನ್ನು ಸಂಪೂರ್ಣವಾಗಿ ಮಟ್ಟ ಹಾಕಲಿಕ್ಕೂ ಮುಖ್ಯವಾಗಿ ಕೊಡಗಿನ ದಿವಾನ ಬೋಪನ್ ಕಾರಣನಾದ ಈ ಮಹಾತ್ಕಾರ್ಯ ಸಾಧನೆಯಲ್ಲಿ ವಿಶೇಷ ಸೇವೆ ಸಲ್ಲಿಸಿದ ದಿವಾನ ಬೋಪನ್ ಮತ್ತು ಅವನ ಪಕ್ಷದವರಿಗೆ ಬಂಡಾಯಗಾರರಿಂದ ವಶಪಡಿಸಿಕೊಂಡ ಭಂಡಾರವನ್ನೆಲ್ಲಾ ಬಹುಮಾನವಾಗಿ ಕೊಡಲಾಯಿತು.''[೨೭]

'ನಿಜವಾಗಿಯೂ ಇದು ಜನರ ಬಂಡಾಯ; ಜನರು ಸರಕಾರವನ್ನು ಪ್ರತಿಭಟಿಸಿ ನಿಂತ ದಂಗೆ, ಜನರೊಂದಿಗೆ ಸರಕಾರದ ಅಧಿಕಾರಿಗಳೂ, ಗ್ರಾಮಾಧಿಕಾರಿಗಳೂ ಸೇರಿದ್ದರೆಂದು ನಂಬಲಾಗಿದೆ. ಈ ಬಂಡಾಯದ ಕಾಲಪೂರ್ತಿ ಕೊಡಗಿನ ಜನರು ಸರಕಾರದ ಭಕ್ತರಾಗಿ ವರ್ತಿಸಿದರೆಂಬುದೊಂದು ಮಾತ್ರ ನಿರಾಶೆಯನ್ನುಂಟು ಮಾಡತಕ್ಕ ವಿಷಯ. ಈ ಕಾರಣದಿಂದಲೇ ದಿವಾನ ಬೋಪನ್ ಬಂಡಾಯದ ನಾಯಕರನ್ನು ಹುಡಿಕಿಹಿಡಿದು, ಅವರ ದ್ರೋಹ ಕೃತ್ಯಗಳ ಹುಟ್ಟಡಗಿಸಲು ಸಮರ್ಥನಾದ. ಈ ಬಂಡಾಯದ ನಾಯಕರನ್ನೆಲ್ಲ ಬಂಧಿಸಿ, ವಿಚಾರಣೆಗೆ ಗುರಿಪಡಿಸಿ, ಅವರಿಗೆ ಶಿಕ್ಷೆ ವಿಧಿಸುವುದು ಸಾಧ್ಯವಾಯಿತು.[೨೮]

ದಂಗೆಯ ವಿಚಾರಣೆ ನಡೆಸಿದ ಕಾಟನ್ ರಿಪೋರ್ಟ್‌ನಲ್ಲಿಯ ಅನುಬಂಧದಲ್ಲಿ ಪುಟ ೨೯೭. ೨೯೮, ೨೯೯ರಲ್ಲಿ ಕಾಣಿಸಿಕೊಳ್ಳುವ ಎರಡು ಪತ್ರಗಳಲ್ಲಿ ಸಿಕ್ಕುವ ವಿವರಗಳ ಪ್ರಕಾರ:- ದಿವಾನ ಬೋಪು ೭೦೦ ಕೊಡಗರೊಂದಿಗೆ ಘಟ್ಟದ ಕೆಳಗಿನ ಪ್ರದೇಶವಾದ ಸಂಪಾಜೆಗೆ ೨೦.೧೨.೧೮೩೭ರಂದು ಬಂದಿಳಿದನು. ಮುಂದೆ ಪೆರಾಜೆಯ ಕಡೆ ಮುಂದುವರಿದನು. ಅಲ್ಲಿಗೆ ಸುಭೇದಾರ ಅಚ್ಚು, ೨೦೦ ಕೊಡಗರೊಂದಿಗೆ ಬಂದು ಸೇರಿಕೊಂಡನು. ಇವರಿಗೆ ಸುಮಾರು ೧೫೦ ದಂಗೆಕೋರರು ಎದುರಾಗುತ್ತಾರೆ. ನಾಲ್ವರು ಸತ್ತು ಬಿದ್ದಾಗ ಚದರಿ ಓಡಿಹೋಗುತ್ತಾರೆ. ಕೆಲವರು ಓಡಿದರೆ ಒಬ್ಬನು ಮಾತ್ರ ಸೆರೆ ಸಿಕ್ಕುತ್ತಾನೆ ಅಷ್ಟು ದೊಡ್ಡ ಸೈನ್ಯಕ್ಕೆ ಆಹಾರ ವ್ಯವಸ್ಥೆ ಇಲ್ಲದ ಕಾರಣ ತಾವುನಾಡಿಗೆ (ಭಾಗಮಂಡಲಕ್ಕೆ) ಹಿಂತಿರುಗುತ್ತಾರೆ. ಬ್ರಿಟಿಷ್ ಆಡಳಿತಕ್ಕೆ ಮೊದಲು ಕೊಡಗರು ಬಂಡಾಯಗಾರರ ಬೇಟೆಯಾಡಿದ್ದನ್ನು ಮೇಲ್ಕಾಣಿಸಿದ ವಿವರಣೆಯಿಂದ ಅರ್ಥವಾಗುತ್ತದೆ.[೨೯]

ಬಂಡಾಯಗಾರರೆಂದರೆ ಯಾರು? ದಂಗೆಯಲ್ಲಿ ತೆರೆದುಕೊಂಡು ಭಾಗಿಗಳಾಗಿದ್ದ ಕೆಳಕೊಡಗು ಮತ್ತು ಬಂಟ್ವಾಳ ತಾಲೂಕಿನ ಒಟ್ಟು ಗಂಡಸರ ಸಂಖ್ಯೆ ಸುಮಾರು ೩೦,೦೦೦ ಸಾವಿರವಿದ್ದು ಅದರಲ್ಲಿ ಸುಮಾರು ಎಂಟು ಅಥವಾ ಹತ್ತುಸಾವಿರದಷ್ಟು ಜನರು ಮ್ಯಾಚ್‌ಲಾಕ್ (Matchlocks) ಮತ್ತಿತರ ದೇಶೀಯ ಶಸ್ತ್ರಗಳೊಂದಿಗೆ ಸಕ್ರಿಯವಾಗಿ ಭಾಗವಹಿಸಿರಬಹುದೆಂದು ನಂಬಬಹುದಾಗಿದೆ.

ಕೆಳಕೊಡಗು ಅದರಲ್ಲೂ ಬಂಟ್ವಾಳ ತಾಲೂಕಿನಲ್ಲಿ ಗಂಡಸರ ಸಂಖ್ಯೆ ೩೦,೦೦೦ ಇದ್ದಿತು. ಅದರಲ್ಲಿ ೮,೦೦೦ ದಿಂದ ೧೦,೦೦೦ ಜನರು ನಾಡು ಕೋವಿ ಇತ್ಯಾದಿ ಆಯುಧ ಹಿಡಿದು ಸಕ್ರಿಯವಾಗಿ ದಂಗೆಯಲ್ಲಿ ಭಾಗವಹಿಸಿದರೆಂದು ತಿಳಿದುಬರುತ್ತದೆ.[೩೦]

ಸಂಪಾಜೆ, ಅರಂತೋಡು, ಪೆರಾಜೆ ಮುಂತಾದ ಗ್ರಾಮಗಳಲ್ಲಿದ್ದವರು ಆಗ ನೂರಕ್ಕೆ ನೂರು ಗೌಡರು. ಈ ರೀತಿ ಬ್ರಿಟಿಷರಿಂದಾಗಿ ಕೊಡಗರು ಮತ್ತು ಗೌಡರು ಕಾದಾಡಿದರು. ವೈರಿಗಳಾದರು. ಬ್ರಿಟಿಷರ ನಂಬಿಕೆ ಗಳಿಸಿದವರು ಉನ್ನತ ಪದವಿ ಗಿಟ್ಟಿಸಿಕೊಂಡರು. ವಿರೋಧ ಗಳಿಸಿಕೊಂಡವರು ಅಧಃಪತನದ ಪಾತಾಳ ತಲುಪಿದರು.

೧೮೫೫ರಲ್ಲಿ ರೆವರೆಂಡ್ ಮೂಗ್ಲಿಂಗ್‌ನು ಪ್ರಕಟಿಸಿದ ಕೂರ್ಗ್ ಮೆಮೂಯರ್‌ನಲ್ಲಿ ಕೊಡಗಿನಲ್ಲಿ ಗೌಡ ಜನಾಂಗ ಇದೆ ಎನ್ನುವುದನ್ನು ಗುರುತಿಸಲು ನಿರಾಕರಿಸಿದಂತಿದೆ. ಕೊಡಗಿನ ಚರಿತ್ರೆ ಅಂದರೆ ಕೊಡಗರ ಚರಿತ್ರೆ ಎಂಬಂತೆ ಚಿತ್ರಿಸಲಾಗಿದೆ.

'ಇಡೀ ಕೊಡಗು ಜನಸಂಖ್ಯೆ ೨೫,೦೦೦ ಅಥವಾ ೨೬,೦೦೦ ಇರಬಹುದೆಂದು ಅಂದಾಜಿಸಲಾಗಿದೆ. ಹಿಂದಿನ ದಿವಸಗಳಲ್ಲಿ ಅವರ ಸಂಖ್ಯೆ ೪,೦೦೦ ಅಥವಾ ೫,೦೦೦ ಒಟ್ಟಾರೆ ಇದ್ದಿರ ಬಹುದೆನ್ನಿಸುತ್ತದೆ. ಕಳೆದ ೨೦ ವರ್ಷಗಳಲ್ಲಿ ಅವರ ಸಂಖ್ಯೆ ಬಹಳ ಹೆಚ್ಚತೊಡಗಿತು. ಈಗ ನಿರಂಕುಶ ರಾಜನಿಂದ ಅವರು ಕೊಲ್ಲಲ್ಪಡುವಾದಾಗಲೀ, ಯುದ್ಧದಲ್ಲಿ ನಾಶವಾಗುವುದಾಗಲಿ ಇಲ್ಲವಾಗಿದೆ.'[೩೧]

೧೭೯೯ರಲ್ಲಿ ಜೇಮ್ಸ್ ಸ್ಟೀನವ್ಸ್‌ಗೆ ದೊಡ್ಡವಿರರಾಜನು ಬರೆದ ಪತ್ರದಲ್ಲಿ ಆಗ ಇದ್ದಿರಬಹುದಾದ ಕೊಡಗರ ಸಂಖ್ಯೆ ಬಗ್ಗೆ ಬೆಳಕು ಬೀರುತ್ತದೆ:

'ಇದರ ನಂತರ ನನ್ನ ಜನ ಲೂಟಿ ಮಾಡಿದ್ದರೆ ನಾನು ಹೊಣೆಯಾಗಿ ತಕ್ಕ ಪ್ರತಿಫಲ ಸಲ್ಲಿಸುತ್ತೇನೆ. ಕಂಪೆನಿ ಯುದ್ಧದ ಕ್ಯಾಂಪ್‌ಗಳಿಗೆ ನನ್ನ ಜನರ ಹೆಂಗಸರು, ಮಕ್ಕಳು, ಭತ್ತ ಕುಟ್ಟಿ ತರುತ್ತಿದ್ದುದು ತಮಗೆ ತಿಳಿದ ವಿಚಾರ. ಒಟ್ಟಲ್ಲಿ ನನಗೆ ಬೇಕಾದ್ದು ನನ್ನ ೬೦೦೦ ಅಥವಾ ೭೦೦೦ ಕೊಡಗರ ಹೊಟ್ಟೆ ಬಟ್ಟೆಯ ಅವಶ್ಯಕತೆಗಳು ಮತ್ತು ಸತ್ತವರ ಸಂಬಂಧಿಕರ ಹಾಗೂ ಗಾಯಾಳುಗಳ ರಕ್ಷಣೆ ಮಾತ್ರ ಆಗಿರುತ್ತದೆ.'[೩೨]

ದೊಡ್ಡವೀರರಾಜನೊಂದಿಗೆ ಇದ್ದ ೬೦೦೦ ರಿಂದ ೭೦೦೦ ಕೊಡಗರ ಸಂಖ್ಯೆ ೧೮೩೭ರ ತನಕ ಹೆಚ್ಚಾಗಲೇ ಇಲ್ಲ. ಮುಂದಿನ ೨೦ ವರ್ಷಗಳಲ್ಲಿ ಹೆಚ್ಚಾಗಲು ಕಾರಣವೇನು? ೧೮೭೦ರಲ್ಲಿ ಗೌಡರು ಕೊಡಗರನ್ನು ಹೋಲುವುದಾಗಿ ರಿಕ್ತನ್‌ನು ದಾಖಲಿಸಿದ್ದಾನೆ. ಈಗಲೂ ಕೊಡಗಿನಲ್ಲಿ ಗೌಡರನ್ನು ಮತ್ತು ಕೊಡಗರನ್ನು ಪ್ರತ್ಯೇಕವಾಗಿ ಗುರುತಿಸುವುದು ಕಷ್ಟ. ನಾಲ್ಕು ನಾಡು, ಎಡೆ ನಾಲ್ಕು ಪ್ರದೇಶದಲ್ಲಿರುವವರು ಮಾತ್ರ ನಿಜವಾದ ಕೊಡಗರಾಗಿದ್ದು- ಕಿಗ್ಗಟ್ ನಾಡಿನವರು ಶತಮಾನಗಳ ಹಿಂದೆ ವಕ್ಕಲಿಗರಾಗಿದ್ದಿರಬಹುದು.

೧೭೯೨ರಲ್ಲಿ ಮೈಸೂರು ಒಪ್ಪಂದದಲ್ಲಿ ಬಹಳ ಒತ್ತಡ ಹೇರಿ ಕೊಡಗನ್ನು ಸ್ವಾಧೀನಪಡಿಸಿಕೊಂಡ ಬ್ರಿಟಿಷರು, ವೀರರಾಜೇಂದ್ರ ಎಂಬ ಹೆಸರಿಟ್ಟು ಒಬ್ಬಾತನ ವಶಕ್ಕೆ ಕೊಡಗನ್ನು ಕೊಟ್ಟರು. ಹೀಗೆ ಕೊಡುವ ಮೊದಲೇ ವೀರರಾಜೇಂದ್ರ ಪೇಟೆ ಕಟ್ಟಿಸಿದರು. ಆತನಿಗೆ ೧೭೯೫ರಲ್ಲಿ ಅಂದರೆ ಮೂರು ವರ್ಷಗಳ ನಂತರ ನಾಲ್ಕು ನಾಡು ಅರಮನೆ ಕಟ್ಟಿಸಿಕೊಟ್ಟರು. ಜಮ್ಮ ರೈತರು ಮೂವರಲ್ಲಿ ಒಬ್ಬನಂತೆ ರಾಜನ ಸೇವೆಯಲ್ಲಿ ಇರಬೇಕಾಗಿತ್ತು. ಈ ಸೇವೆಗಾಗಿ ಸಾಗುವಳಿ ರೈತರು ಕೊಡವ ಕಂದಾಯದ ಅರ್ಧದಷ್ಟು ಜಮ್ಮ ರೈತರಿಗೆ ರಿಯಾಯಿತಿ ನೀಡಲಾಗಿತ್ತು. ಇದು ಇಂದಿಗೂ ಸಮಸ್ಯೆಯಾಗಿ ಉಳಿದಿವೆ. ಇಂದಿನ ರಾಜ್ಯಸರ್ಕಾರ ಜಮ್ಮ ರೈತರಿಗೆ ರಿಯಾಯತಿಯನ್ನು ಹಿಂತೆಗೆದುಕೊಂಡು ಆದೇಶ ಹೊರಡಿಸಿದ್ದಾರೆ.

ಈ ಕುರಿತು ಮೊಗ್ಲಿಂಗ್ ಈ ರೀತಿ ದಾಖಲಿಸಿದ್ದಾನೆ :-

'ಬಹಳ ಈಚಿನ ದಿನಗಳವರೆಗೂ, ದೊಡ್ಡ ಸಂಖ್ಯೆಯ ಸಶಸ್ತ್ರ ಜನರನ್ನು ತನ್ನ ಸುತ್ತಲೂ ರಾಜರು ಇಟ್ಟುಕೊಳ್ಳುವುದು ವಾಡಿಕೆಯಾಗಿತ್ತು. ರಾಜನ ಪಾಕ ಶಾಲೆಯಲ್ಲಿ ಪ್ರತಿ ದಿನವೂ ಸಾವಿರದಷ್ಟು ಕೊಡಗರಿಗೆ ಊಟ ಕೊಡುತ್ತಿದ್ದರು. ಎನ್ನಲಾಗಿದೆ.'[೬೬]

ರಾಜರ ಕಾಲದಲ್ಲಿ ಅರೆಕಾಲಿಕ ಸೇವೆಯಲ್ಲಿದ್ದ ಜಮ್ಮ ರೈತರನ್ನು ಕೊಡಗರೆಂದು ಗುರುತಿಸಿ ಕೊಂಡಿದ್ದು, ಅವರು ಬ್ರಿಟಿಷರ ಕಡೆ ತಮ್ಮ ನಿಷ್ಠೆಯನ್ನು ಬದಲಾಯಿಸಿದಾಗ ಕೊಡಗರ ಸಂಖ್ಯೆ ಕಡಿಮೆ ಇದ್ದಿತು. ಇದನ್ನು ಸರಿಪಡಿಸುವುದಕ್ಕೆ ಬ್ರಿಟಿಷರು ಆದ್ಯತೆ ನೀಡಿದರು. ಅದಕ್ಕಾಗಿ ಕೊಡವರಿಗೆ ಕೊಡಲ್ಪಡುವ ಸವಲತ್ತುಗಳ ಆಮಿಷದ ಮೂಲಕ ಗೌಡರು ಪ್ರಭಾವಿತರಾಗಿ ಕೊಡವ ಜನಾಂಗದೊಳಗೆ ಸೇರಿಕೊಳ್ಳುವುದರಲ್ಲಿ ಆಸಕ್ತರಾಗತೊಡಗಿದರು. ಉತ್ತರ ಕೊಡಗಿನಲ್ಲಿಯ ವಕ್ಕಲಿಗರಲ್ಲಿ ಕೊಡವರಾದವರು ಇವರ ಸುತ್ತಲಿನ ಒಕ್ಕಲಿಗರೊಂದಿಗೆ ವಿವಾಹ ಸಂಬಂಧ ಇಂದಿಗೂ ಮುಂದುವರಿಸಿದ್ದಾರೆ.

ವಸಾಹತು ಶಾಹಿ ಆಳ್ವಿಕೆಯ ಸಂದರ್ಭ ಕೊಡವ ಜನಾಂಗಕ್ಕೆ ಸೇರಿಸಲ್ಪಟ್ಟವರಲ್ಲಿ ವರ್ಗೀಕರಣಗಳಿವೆ.

ಸಣ್ಣ ಕೊಡವ, ಅಮ್ಮ ಕೊಡವ, ಜಮ್ಮ ಕೊಡವ, ಬಡ್ಡು ಕೊಡಗ ಅಥವಾ ಜಡ್ಡ್ ಕೊಡವ ಎಂದು ಕರೆಯಲ್ಪಡುತ್ತಿರುವುದು. ಅಲ್ಲದೇ ಬ್ರಿಟೀಷರೊಂದಿಗೆ ಒಡನಾಟದಲ್ಲಿದ್ದ ಅತೀ ಚಿಕ್ಕ ಗುಂಪನ್ನು 'ರಾಯಲ್ಸ್' ಎಂದು ಕರೆಯುತ್ತಾರೆ. ಶ್ರೀಮಂತ, ಮಧ್ಯಮ ದರ್ಜೆಯವರೊಳಗೆ ಅಸಹನೆ ಶತಮಾನಗಳ ನಂತರವೂ ಪ್ರತಿಯೊಂದು ಮನೆತನಗಳ ಮೇಲಿನ ಪೂರ್ವಗ್ರಹ ಹಾಗೆಯೇ ಉಳಿದಿದೆ.

ಅಮರ ಸುಳ್ಯದ ೫೮೦ ಚದರ ಮೈಲು ವಿಸ್ತೀರ್ಣದ ಪುತ್ತೂರು, ನೆಟ್ಟಣ, ಅಡೂರು, ಅಮರ, ಸುಳ್ಯ, ಪಂಜ, ಬೆಳ್ಳಾರೆ, ಏನೆಕಲ್ಲು, ದೇವರಹಳ್ಳಿಗಳೆಂಬ ಎಂಟು ಮಾಗಣೆಗಳನ್ನು ಕೊಡಗಿನಿಂದ ಬೇರ್ಪಡಿಸಬೇಕಾಯಿತು. ಈ ಪ್ರದೇಶದಲ್ಲಿ ಗೌಡರ ಸಂಖ್ಯೆ ಇಂದಿಗೂ ಅತಿ ಹೆಚ್ಚಾಗಿ ಕಂಡುಬರುತ್ತದೆ.

'ಕಿಗ್ಗಟ್‌ನಾಡಿನ ಕೊಡಗರು ಸ್ವಲ್ಪ ಮಟ್ಟಿಗೆ ಬಡಗ ಕನ್ನಡಿಗರ ಸಂಪ್ರದಾಯವನ್ನು ಒಪ್ಪಿಕೊಂಡಿದ್ದಾರೆ. ನೂತನ ಜೋಡಿ ಮೊದಲು ವಧುವಿನ ಮನೆಯಲ್ಲಿ ಆಹ್ವಾನಿತ ನೆಂಟರು, ಬಂಧುಗಳು ಅವರನ್ನು ಅಭಿನಂದಿಸುತ್ತಾರೆ. ಅವರ ಮನೆಯಲ್ಲಿಯೂ, ಇದರ ಪುನರಾವರ್ತಿ ನಡೆಯುತ್ತದೆ. ಸೇರಿದ ಕೂಟ ಮಾತ್ರ ಬದಲಾಗಿರುತ್ತದೆ. ಆದರೆ ನಿಜವಾದ ಕೊಡಗು ಪದ್ಧತಿ ಕಟ್ಟುನಿಟ್ಟಿನಿಂದ ನಡೆಯುವುದು ಕೂರ್ಗ್‌ಪ್ರೊಫೆಸರ್ (ಮೂಲ ಕೊಡಗು) ಅಥವಾ

ಮೆಂದಲ್‌ನಾಡು ಉತ್ತರಭಾಗ ಮೇಲಿನ ಪ್ರದೇಶದಲ್ಲಿದ್ದು ಕಿಗ್ಗಟ್ ನಾಡು ಭೌಗೋಳಿಕವಾಗಿ ಮಾತ್ರವೇ ಅಲ್ಲ, ಹತ್ತು ಹಲವು ಕಾರಣಗಳಿಂದಾಗಿ ಮೆಂದಲ್‌ನಾಡಿಗಿಂತ ಕೆಳಗಿದೆ.'[೩೪]

೧೮೦೪ರಲ್ಲಿ ಅಮರ ಸುಳ್ಯ ಮತ್ತು ಏಳು ಸಾವಿರ ಸೀಮೆ (ಈಗಿನ ಸೋಮವಾರಪೇಟೆ ತಾಲೂಕು) ಕೊಡಗಿಗೆ ಜೋಡಿಸಲ್ಪಟ್ಟಿತು. ಇದರಲ್ಲಿ ಕೊಡಗರು ಇರಲಿಲ್ಲ. ಮೂಗ್ಲಿಂಗ್ ಹೇಳುವಂತೆ ಇಪ್ಪತ್ತು ವರ್ಷಗಳಲ್ಲಿ ಕೊಡಗರು ಸಂಖ್ಯೆ ಐದು ಪಟ್ಟು ಹೇಗೆ ಏರಿತು ವಿಶ್ಲೇಷಿಸಿಬೇಕಾಗಿದೆ. ರ. ರಿಕ್ತರನ ಕೊಡಗರ ಬಗ್ಗೆ ಹೀಗಿ ಹೇಳಿದ್ದಾನೆ.

'ಪಾಡಿ ನಾಲ್ಕು ನಾಡಿನಲ್ಲಿ ಮಲೆಯಾಳಿ ಮೂಲವು ವಿಶೇಷವಾಗಿ ಕಾಣಸುತ್ತದೆ. ಹಾಗೆ ತಾವುನಾಡು, ಬೇಂಗ ನಾಡು ಮತ್ತು ಸೂರ್ಲಭಿ ಮತ್‌ನಾಡುಗಳಲ್ಲಿ ತುಳುಗೌಡರ ಮತ್ತು ಬಂಟರ ಪ್ರಭಾವ ಅನುಭವಕ್ಕೆ ಬರುತ್ತದೆ. ಕೊಡಗರು ಮಿಶ್ರ ಜನಾಂಗ ಎನ್ನುವುದಕ್ಕೆ ಹೆಚ್ಚಿನ ಆದಾರ ಬೇಕೆನ್ನುವುದದಾರೆ, ಅದರ ಮುಖ ಲಕ್ಷಣದ ವ್ಯತ್ಯಾಸ ಕಾಕೇಸಿಯನ್ ಮತ್ತು ಮಂಗೋಲಿಯನ್ನರ ನಡುವೆ ಇರುವಷ್ಟು ಹಾಗೂ ಮೈಬಣ್ಣ ಬೆಳ್ಳಗೆ ಅಥವಾ ಕಪ್ಪಗೆ.[೩೫]

ಬೇರೆ ಬೇರೆ ಜಾತಿ,ಜನಾಂಗ, ಪಂಗಡಗಳಿಂದ ಕೊಡಗರನ್ನಾಗಿ ೧೯ನೇ ಮತ್ತು ೨೦ನೇ ಶತಮಾನಗಳಲ್ಲಿ ಸ್ವೀಕರಿಸಿದ ಉದಾಹರಣೆಗಳಿವೆ. ರೇ. ರಿಕ್ತರ್ ಪ್ರಕಾರ.

ಕೊಡಗು ಜನಾಂಗಕ್ಕೆ ಅಪರಿಚಿತರನ್ನು ಆಹ್ವಾನಿಸಿ ಸೇರಿಸಿಕೊಳ್ಳುವುದನ್ನು ಈಗಿನ ತಲೆಮಾರಿನ ಜನರು ನೆನಪಿಸಿಕೊಳ್ಳುತ್ತಾರೆ. ಕಿಗ್ಗಟ್ ನಾಡಿನಲ್ಲಿ ಆರು ಕುಟುಂಬಗಳನ್ನು ಹತ್ತು ವರ್ಷಗಳ ಹಿಂದೆ ಮುಖ್ಯ ಶಿರಸ್ತೇದಾರ ನಂಜಪ್ಪನು ಕೊಡಗರಾಗಿ ಸ್ವೀಕರಿಸಿದ್ದು ಆತನ ಮರಣನಂತರ, ಉಳಿದ ಕೊಡಗು ಜನರು ತಮ್ಮ ಜಾತಿಯಿಂದ ಅವರನ್ನು ಹೊರಹಾಕಿದರು. ಇದರ ತೀರ್ಮಾನವು ಬಾಕಿ ಇದ್ದರೂ ಪ್ರಾಯಶಃ ಇದು ಕೇವಲ ಸಮಯದ ಪ್ರಶ್ನೆ ಎನ್ನಬಹುದಾಗಿದೆ ಹೊರತು, ಕೊಡಗರ ಹೊಂದಾಣಿಕೆ ಇಲ್ಲದ ಕುಪ್ರಸಿದ್ಧ ವ್ಯವಸ್ಥೆಯಲ್ಲಿ, ಸಮಾನ ಮೂಲದ ಬುಡಕಟ್ಟಿನವರನ್ನು ಒಂದು ಜನಾಂಗವನ್ನಾಗಿ ಮೈಗೂಡಿಸಿಕೊಳ್ಳುವುದು ರೂಢಿಯಾಗಿರುತ್ತದೆ.[೩೬]

ಕಾವೇರಿ ಹಬ್ಬದೂಟ ವಿವರಣೆಯ ಕೊನೆಯಲ್ಲಿ ಗೋವಿನ ಕತೆಯ ಪೂರ್ಣ ಸಾರಾಂಶ ಹೇಳಲಾಗಿದೆ. ಓದು ಬರಹ ತಿಳಿದವರ ಮನೆಗಳಲ್ಲಿ ಗೋವಿನಪದದ ಪುಸ್ತಕವನ್ನು ತೆಗೆದು ಹಾಡುತ್ತಾರೆ ಮತ್ತು ಕುಟುಂಬದ ಇತರ ಸದಸ್ಯರು ಆಲಿಸುತ್ತಾರೆ.[೩೭] ರ. ರಿಕ್ತರ್‌ನು ದಾಖಲಿಸಿರುವ ಈ ಅಂಶಗಳಿಂದಾಗಿ ದಕ್ಷಿಣಕೊಡಗಿನ ಕೊಡಗರಲ್ಲಿ ಬಹುತೇಕ ಜನರು ವಕ್ಕಲಿಗರಾಗಿದ್ದು ಕಳೆದ ಒಂದೆರೆಡು ಶತಮಾನಗಳಲ್ಲಿ ಕೊಡಗರಾದರೇ? ಎನ್ನುವ ಅನುಮಾನ ಹುಟ್ಟಿಸುತ್ತದೆ.

ಒಡೆದು ಆಳುವ ನೀತಿಗೆ ಹೆಸರಾದ ಬ್ರಿಟಿಷರು ಗೌಡ ಜನಾಂಗವನ್ನು ಕೊಡಗರಾಗಿ ವಿಭಜಿಸಿದರು. ಕೊಡಗಿನಲ್ಲಿರುವ ಗೌಡರಿಗೂ ಕೊಡಗಿನಲ್ಲಿ ಗುಣಸ್ವಭಾವದಲ್ಲಿ, ಆಚಾರ ವಿಚಾರಗಳಲ್ಲಿ ಆಯಾ ಆಕಾರದಲ್ಲಿ ಹೆಚ್ಚೇನು ವ್ಯತ್ಯಾಸವಿಲ್ಲ. ಇವರನ್ನು ಪ್ರತ್ಯೇಕವಾಗಿ ಗುರುತಿಸಲು ಹೊರ ಪ್ರದೇಶದವರಿಗೆ ಯಾಕೆ ಇಲ್ಲಿಯವರೆಗೆ ಸಾಧ್ಯವಾಗುವುದಿಲ್ಲ. ಕೇವಲ ೨೦ ವರ್ಷಗಳಲ್ಲಿ ತಮ್ಮ ಸಂಖ್ಯೆಯನ್ನು ಐದು ಪಾಲು ಹೆಚ್ಚಿಸಿಕೊಂಡ ರಹಸ್ಯವೇ ಇದಕ್ಕೆ ಕಾರಣ.

ಈ ರೀತಿಯಲ್ಲಿ ಅತೀ ದೊಡ್ಡ ಸಂಖ್ಯೆಯಲ್ಲಿದ್ದ ಗೌಡ ಜನಾಂಗದ ಅನೇಕರು ಕೊಡವರಾದರು. ಉಳಿದ ಗೌಡರು ನೀವು ಕನ್ನಡ ಜಿಲ್ಲೆಯಿಂದ ಬಂದವರೆಂಬ ಪ್ರಚಾರಕ್ಕೆ ತುತ್ತಾದರು. ಹತ್ತು ಬಾರಿ ಹೇಳಿದ ಸುಳ್ಳು

ಸತ್ಯವೆಂದು ಸ್ವೀಕರಿಸಲ್ಪಡುತ್ತದೆ. ಚರಿತ್ರೆಯ ಯಾವು ಪುಟದಲ್ಲೂ ಯಾವುದೇ ರಾಜ ಗೌಡರನ್ನು ಕನ್ನಡ ಜಿಲ್ಲೆಯಿಂದ ಕರೆಯಿಸಿದ ವಿಚಾರ ಇಲ್ಲ.

೧೯೯೩ರಲ್ಲಿ ಡಾ.ಸೂರ್ಯನಾಥ ಕಾಮತ್ ಮುಖ್ಯ ಸಂಪಾದಕರಾಗಿ ಕರ್ನಾಟಕ ಸರಕಾರ ಕೊಡಗು ಜಿಲ್ಲೆಯ ಗ್ಯಾಜೆಟಿಯರ್ ಪ್ರಕಟಿಸಿದೆ. ಅದರ ಪುಟ ಸಂಖ್ಯೆ ೬೬ರಲ್ಲಿ ಹೀಗಿದೆ. '೧೦ನೆಯ ಶತಮಾನಕ್ಕೆ ಮೊದಲು ಗುಡ್ಡ ಬೆಟ್ಟಗಳಿಂದಲೂ, ಅಡವಿಗಳಿಂದಲೂ ದುರ್ಗಮವಾದ ಪ್ರದೇಶವಾಗಿದ್ದ ಕೊಡಗು ಬೆಟ್ಟ ಕುರುಬರು, ಜೇನು ಕುರುಬರು, ಯರವರು ಮುಂತಾದ ಬುಡಕಟ್ಟು ಜನರಿಂದ ತುಂಬಿದ್ದು ಇದೇ ಕಾಲ ಖಂಡದಲ್ಲಿ. ಈಗ ಕೊಡವರು ಕೂರ್ಗ್ಸ್ ಎಂದು ಪರಿಚಿತರಾದ ಜನಾಂಗದವರೂ ಗೌಡ ಜನಾಂಗದವರೂ ಇಲ್ಲಿ ನೆಲೆ ನಿಂತರು ಎಂಬುದಾಗಿ ದಾಖಲಿಸಿದ್ದಾರೆ.'[೩೮]

ಇಂತಹ ಅಮೂಲ್ಯ ದಾಖಲೆಯನ್ನು ಬದಿಗೊತ್ತಿ ೧೬ನೇ ಶತಮಾನದಲ್ಲಿ ವಿಜಯನಗರದಿಂದ ಬಂದವರು ಅಥವಾ ೮ನೇ ಶತಮಾನದಲ್ಲಿ ಕನ್ನಡ ಜಿಲ್ಲೆಯಿಂದ ಕರೆಯಿಸಿಕೊಂಡವರೆಂದು ಹೇಳಿಕೊಳ್ಳುವುದು ನಮ್ಮ ಐತಿಹಾಸಿಕ ಮೌಢ್ಯತೆಯನ್ನು ತೋರಿಸಿಕೊಡುತ್ತದೆ.

ಋಷಿ ಮುನಿಗಳ ತಪೋವನವಾಗಿದ್ದ ತಲಕಾವೇರಿಯ ಸುತ್ತುಮುತ್ತ ನೆಲೆಸಿದ ನಾಗರಿಕರಲ್ಲಿ ಗೌಡರು ಪ್ರಥಮ ಎನ್ನುವುದಕ್ಕೆ ತಲಕಾವೇರಿ ಮತ್ತು ಭಾಗಮಂಡಲದ ಭಂಗಡೇಶ್ವರ ದೇವಸ್ಥಾನಗಳ ಮುಕ್ತೇಸರಿಕೆ ಗೌಡ ಜನಾಂಗದವರಾದ ಕೋಡಿ ಮತ್ತು ಬಳ್ಳಡ್ಕ ಮನೆಯವರಿಗೆ ಸೇರಿರುವುದೇ ಸಾಕ್ಷಿ.

ಬಹುತೇಕ ಗ್ರಾಮಗಳ ಪಟೇಲಿಕೆ ಹಾಗೂ ಗ್ರಾಮ ದೇವಸ್ಥಾನಗಳ ಮುಕ್ತೇಸರಿಕೆಗಳನ್ನು ಬ್ರಿಟಿಷ್ ಆಡಳಿದಲ್ಲಿಯೂ ಬದಲಾಯಿಸುವುದು ಸಾಧ್ಯವಾಗಲಿಲ್ಲ. ಆದರೇ ಪಟೇಲರ ಸಂಬಳ ಮತ್ತು ದೇವಸ್ಥಾನಗಳ ತಸ್ತೀಕು ಹಣವನ್ನು ಅತೀ ಕಡಿಮೆಯಾಗಿಸಿ ಕಿರುಕುಳ ಕೊಡುವುದರಲ್ಲಿಯೇ ಬ್ರಿಟಿಷ್ ಸರಕಾರ ತೃಪ್ತಿಪಟ್ಟುಕೊಂಡಿತು.

ಗ್ರಾಮಗಳಲ್ಲಿ ಶಾನುಭೋಗರಾಗಿದ್ದ ದೇವಸ್ಥಾನಗಳಲ್ಲಿ ಅರ್ಚಕರಾಗಿದ್ದ ಸ್ಥಾನಿಕ ಬ್ರಾಹ್ಮಣರಿಗೆ ವಸಾಹತುಶಾಹಿ ಆಡಳಿತದಲ್ಲಿ ಅತ್ಯಂತ ಹೀನಸ್ಥಿತಿ ಬಂದೊದಗಿದ್ದನ್ನು ಕಾಣಬಹುದು. ಚಿಕ್ಕವೀರರಾಜನ ದಿವಾನರಲ್ಲಿ ಒಬ್ಬನಾಗಿದ್ದ ಲಕ್ಷ್ಮೀನಾರಣಯ್ಯ ಸೆರೆಮನೆಗೆ ತಳ್ಳಲ್ಪಟ್ಟನು. ಆತನ ಬಂಧುಬಳಗ ಕರಿನೀರಿನ ಶಿಕ್ಷೆ ಮೊದಲಾದ ಸಂಕಷ್ಟಕ್ಕೆ ಒಳಗಾದರು. ಆತನ ತಮ್ಮ ರಾಮಪ್ಪಯ್ಯ ತನ್ನವರಿಗೆ ಶತ್ರುವಾಗಿ ಸೆರೆ ಹಿಡಿಯಲ್ಪಟ್ಟು ಶಿರಶ್ಛೇಧನಕ್ಕೆ ಒಳಗಾದನು.

ಬ್ರಿಟಿಷರ ಪರವಹಿಸಿದ್ದಕ್ಕಾಗಿ ಶತಮಾನಕ್ಕೂ ಹೆಚ್ಚು ಕಾಲ ಸರ್ವ ವಿಧದ ಸಹಾಯ ಸಹಕಾರ ಸೌಕರ್ಯಗಳ ಲಾಭ ಪಡೆದ ಕೊಡವ ಜನಾಂಗ ಇತ್ತೀಚಿನ ದಿನಗಳಲ್ಲಿ ಸರಕಾರದ ಮುಂದೆ ಈ ಕೆಳಗಿನ ಅರ್ಥಹೀನ ಬೇಡಿಕೆಗಳನ್ನು ಇಟ್ಟು ಬೀದಿಗಿಳಿದು ಹೋರಾಟಕ್ಕೆ ತೊಡಗಿದೆ.

೦೧. ಕೊಡಗಿನ ನೆಲ ಕೊಡವರದೆಂದು ಘೋಷಿಸಬೇಕು.

೦೨. ಕೊಡವ ಲೋಕಸಭೆಯನ್ನು ಎಂಟನೆ ಪರಿಚ್ಛೇಧಕ್ಕೆ ಸೇರ್ಪಡೆಗೊಳಿಸಬೇಕು.

೦೩. ಕೊಡವರಿಗೆ ಲೋಕಸಭೆ, ರಾಜ್ಯಸಭೆಗಳಲ್ಲಿ ಒಂದೊಂದು ಸ್ಥಾನ ಕಾಯ್ದಿರಿಸಬೇಕು.

೦೪. ಕೊಡವರು ಅಲ್ಪ ಸಂಖ್ಯಾತ, ಪರಿಶಿಷ್ಟ ವರ್ಗದವರೆಂದು ಗುರುತಿಸಬೇಕು.

೦೫. ಕೊಡವ ಭಾಷೆಯನ್ನು ಪಠ್ಯಕ್ರಮದಲ್ಲಿ ಸೇರಿಸಬೇಕು.

೦೬. ಕೊಡವರಿಗೆ ಸಿಖ್ಖರಂತೆ ವಿಶೇಷ ಜನಾಂಗವೆಂಬ ಮಾನ್ಯತೆ ನೀಡಬೇಕು.

೦೭. ಜಮ್ಮ ಭೂಮಿಯ ಒಡೆತನ ಸಂಪೂರ್ಣ ಕೊಡವರದಾಗಬೇಕು.

೦೮. ಅವರವರ ಭೂಮಿಯಲ್ಲಿರುವ ಮರದ ಹಕ್ಕು ಕೊಡಬೇಕು.

೦೯. ಕೊಡವರ ಐನ್ ಮನೆಗಳನ್ನು ಸಂರಕ್ಷಿಸಿಡಬೇಕು.

೧೦. ಕೊಡವರಿಗೆ ವಿಶ್ವವ್ಯಾಪಿ ಸಂವಿಧಾನಾತ್ಮಕ ರಕ್ಷಣೆ ಸಿಗಬೇಕು.

೧೧. ಕಾಫಿಗೆ ಬೆಂಬಲ ಬೆಲೆ ನೀಡಬೇಕು.

ಬ್ರಿಟಿಷರ ವಿರೋಧಗಳಿಸಿದವರಿಗೆ ಸ್ವಾತಂತ್ರ್ಯ ಬಂದು ಅರ್ಧ ಶತಮಾನ ಕಳೆದರೂ ಸಂಘಟಿತರಾಗಿ ತಮ್ಮ ಬೇಕು ಬೇಡಿಕೆಗಳನ್ನು ಕೇಳಿಕೊಳ್ಳುವ ಸಾಮರ್ಥ್ಯ ಇಲ್ಲದಿರುವುದು ಅತ್ಯಂತ ವಿಷಾದನೀಯ ವಿಚಾರ.

**೭.೩. ಸುಳ್ಯ ಪರಿಸರದ ಒಕ್ಕಲಿಗರು**

ದಕ್ಷಿಣ ಕನ್ನಡ ಜಿಲ್ಲೆಯ ಸುಳ್ಯ ತಾಲೂಕು, ಪುತ್ತೂರು ಮತ್ತು ಬೆಳ್ತಂಗಡಿ ತಾಲೂಕುಗಳಲ್ಲಿ ಸುಮಾರು ಎರಡೂವರೆ ಲಕ್ಷದಷ್ಟು ಗೌಡರು ವಾಸಿಸುತ್ತಿದ್ದಾರೆ. ಈ ಗೌಡರ ಬಗೆಗೆ ೧೯೮೦-೧೯೮೩ರಲ್ಲಿ ನಡೆಸಿದ ಕ್ಷೇತ್ರಕಾರ್ಯ ಮತ್ತು ಸಂಗ್ರಿಹಿಸಿದ ಮಾಹಿತಿಗಳ ಆಧಾರದಿಂದ ವಿವರಣಾತ್ಮಕವಾದ ಪ್ರಬಂಧವನ್ನು ಸಿದ್ಧಪಡಿಸಲಾಗಿದೆ.

ಭಾಷಿಕವಾಗಿ ಮೇಲೆ ಹೇಳಿದ ಗೌಡರನ್ನು ಅರೆಭಾಷಿಕ ಗೌಡರೆಂದೂ, ತುಳು ಗೌಡರೆಂದೂ ಎರಡು ರೀತಿಯಿಂದ ವಿಭಜಿಸಬಹುದಾಗಿದೆ. ಕೊಡಗು ಜಿಲ್ಲೆಯ ಭಾಗಮಂಡಲ ಪರಿಸರದಲ್ಲಿ ವಾಸಿಸುತ್ತಿರುವ ಬಹುತೇಕ ಗೌಡರು ಅರೆಭಾಷಿಕರಾಗಿದ್ದರೂ ಅಲ್ಲಿನ ಬಹುಸಂಖ್ಯಾತ ಕೊಡಗರು ಅವರನ್ನು 'ತುಳು ಗೌಡ'ರೆಂದೇ ಗುರುತಿಸುತ್ತಾರೆ.

**ಮೂಲ ಮತ್ತು ಪ್ರಸರಣ**

ಸುಳ್ಯ ಪರಿಸರಕ್ಕೆ ಗೌಡರು ಅಲ್ಲಿನ ಮೂಲನಿವಾಸಿಗಳಲ್ಲ. ಹಾಗೆಯೇ ಪುತ್ತೂರು, ಬೆಳ್ತಂಗಡಿ ಮತ್ತು ಭಾಗಮಂಡಲ ಪರಿಸರಗಳಿಗೂ ಕೂಡಾ. ಅರೆಭಾಷಿಕ ಮತ್ತು ತುಳ ಭಾಷೆಯನ್ನಾಡುವ ಎಲ್ಲ ಗೌಡರುಗಳೂ ಕೂಡಾ ಅವರು ಈಗ ವಾಸಿಸುತ್ತಿರುವ ಪ್ರದೇಶಗಳಿಗೆ ಹಾಸನ ಜಿಲ್ಲೆಯ ಐಗೂರು ಪರಿಸರದಿಂದ ವಲಸೆ ಬಂದಿದ್ದಾರೆ. ಈ ವಲಸೆಯು ಎಂದು ನಡೆಯಿತೋ ನಿಖರವಾಗಿ ಹೇಳಲು ಸಾಧ್ಯವಿಲ್ಲವಾದರೂ ಅದು ೧೫-೧೬ನೇ ಶತಮಾನದಲ್ಲಿ ನಡೆಯಿತು ಎಂದು ಹೇಳಲು ಮೌಖಿಕ ಆಧಾರಗಳಿವೆ.

ಮುಖ್ಯವಾದ ಆಧಾರವೆಂದರೆ ಪಂಜ-ಎಣ್ಮೂರು ಪರಿಸರವನ್ನು ಕೇಂದ್ರವಾಗಿರಿಸಿಕೊಂಡು ಬೆಳೆದ ಕೋಟಿ-ಚೆನ್ನಯ್ಯ ಪಾಡ್ದನದಲ್ಲಿ ಯಾವುದೇ ಗೌಡರ ಉಲ್ಲೇಖವಿಲ್ಲದಿರುವುದು. ಬ್ಯಾರಿಗಳು, ಕ್ರೈಸ್ತರ, ಜೈನರ, ಬಂಟರ ಉಲ್ಲೇಖವಿರುವ ಈ ಪಾಡ್ದನವು ಡಾ.ಬಿ.ಎ.ವಿವೇಕ ರೈಗಳ ಪ್ರಕಾರ "೧೬ನೇ ಶತಮಾನದ ಬಳಿಕದ ರಚನೆ" (ತುಳು ಜನಪದ ಸಾಹಿತ್ಯ ೧೯೮೫ :೨೩೩) ಇದನ್ನು ಒಪ್ಪಿಕೊಂಡರೆ ಕನಿಷ್ಠ ಈ ಕಾಲದಲ್ಲಿ ಗೌಡರು ಈಗಿನಂತೆ ಪ್ರಬಲರಂತೂ ಆಗಿರಲಿಲ್ಲ ಎಂದು ಹೇಳಬಹುದಾಗಿದೆ.

ಎರಡನೇ ಆಧಾರವೆಂದರೆ ಐಗೂರು ಪರಿಸರದಲ್ಲಿ ಅಲ್ಲಿನ ಸ್ಥಳೀಯ ಅರಸನೊಬ್ಬ ಕಟ್ಟಿದ 'ಹೊಸಕೋಟೆ ಕೆಂಚಮ್ಮ'ನ ದೇವಸ್ಥಾನ. ಸ್ಥಳೀಯ ಜನಪದ ದೈವವಾಗಿದ್ದ ಕೆಂಚಮ್ಮಳನ್ನು ಕೆಂಚಾಂಬಿಕೆ ಎಂದು ಮಾಡಿ ಸಾಕಷ್ಟು ದೊಡ್ಡದಾದ ದೇವಸ್ಥಾನವೊಂದನ್ನು ಕ್ರಿ.ಶ.೧೬೦೪ರಲ್ಲಿ ಕಟ್ಟಿಸಲಾಯಿತು. ಹೇಮಾವತಿ ನದಿ ದಂಡೆಯಲ್ಲಿರುವ ಈ ಕೆಂಚಾಂಬಿಕೆಯು ಐಗೂರು ಪರಿಸರದ ಗೌಡರಿಗೆ ಮನೆ ದೈವವೂ ಹೌದು. ಸುಳ್ಯ ಪರಿಸರದ ಅನೇಕ ಗೌಡರು ಈಗಲೂ 'ಕೆಂಚಾಂಬಿಕೆ'ಗೆ ಹರಕೆ ಒಪ್ಪಿಸುತ್ತಾರೆ. ಪಂಜದ ಹತ್ತಿರವಿರುವ ಪ್ರಖ್ಯಾತ ಎನಡ್ಕ ಮನೆಯವರು ಅವರ ಮನೆಯ ಅಂಗಳದಲ್ಲಿ 'ಕೆಂಚಾಂಬಿಕೆ'ಗೆ ಒಂದು ಗುಡಿ ಕಟ್ಟಿಸಿ ಈಗಲೂ ಪೂಜೆ ಮಾಡುತ್ತಾರೆ. ಈ ಕೆಂಚಾಂಬಿಕೆಯ ವಿವರವಾದ ಅಧ್ಯಯನವು ಸುಳ್ಯ ಪರಿಸರದ ಗೌಡರ ಮೂಲದ ಬಗೆಗೂ, ಅವರು ಕ್ರಿ.ಶ.೧೬೦೪ರ ಆನಂತರ ಸುಳ್ಯ ಕಡೆಗೆ ವಲಸೆ ಬಂದಿರುವುದರ ಬಗೆಗೂ ನಮಗೆ ಒಳನೋಟಗಳನ್ನು ನೀಡಬಲ್ಲವುಗಳಾಗಿವೆ.

ಮೂರನೇ ಆಧಾರವೆಂದರೆ ಸಕಲೇಶಪುರ ತಾಲೂಕಿನ ಕೂಡು ರಸ್ತೆಯ ಬಳಿಯಲ್ಲಿರುವ 'ಒಣಗೂರು ಸಬ್ಬಮ್ಮ' ದೈವ. ಈ ದೈವವು ಜನಪದ ದೈವದ ಸ್ವರೂಪದಲ್ಲಿದ್ದು ೧೫-೧೬ನೇ ಶತಮಾನದಲ್ಲಿ ಪ್ರಖ್ಯಾತಿಗೆ ಬಂದದ್ದನ್ನು ಆ ಪರಿಸರದ ಮೌಖಿಕ ರಚನೆಗಳು ಪ್ರಸ್ತುತಪಡಿಸುತ್ತವೆ. ಸುಳ್ಯ ಪರಿಸರದ ಗೌಡರು ಮದುವೆಯ ಸಂದರ್ಭದಲ್ಲಿ ಒಣಗೂರು ಸಬ್ಬಮ್ಮನಿಗೆ ಕಾಳು ಮೆಣಸಿನ ಹರಕೆಯನ್ನು ತೆಗೆದಿರಿಸುತ್ತಾರೆ. ಇದು ಹಿಂದಿನ ದೈವ ಸಂಬಂಧವನ್ನು ಸಾಬೀತು ಪಡಿಸುವ ಒಂದು ಆಧಾರವಾಗಿದೆ. ಇವೆಲ್ಲವನ್ನು ಗಮಿಸಿದರೆ ಸುಳ್ಯ ಪರಿಸರಕ್ಕೆ ಗೌಡರುಗಳು ಹಾಸನ ಜಿಲ್ಲೆಯ ಐಗೂರು ಪರಿಸರದಿಂದ ಸು.೧೫-೧೬ನೇ ಶತಮಾನದಲ್ಲಿ ವಲಸೆ ಬಂದರು ಎಂದು ಸದ್ಯಕ್ಕೆ ಊಹಿಸಬಹುದು.

ಈ ವಲಸೆಗೆ ಕಾರಣಗಳೇನೆಂಬುದಕ್ಕೆ ಕೂಡಾ ಲಿಖಿತ ಆಧಾರಗಳಿಲ್ಲ. ಸುಳ್ಯ ಪರಿಸರದ ಗೌಡರು ನಿರೂಪಿಸುವ 'ಕೆಂಡದ ಮಳೆ'ಯ ಕತೆಯು ಐಗೂರು ಪರಿಸರದಲ್ಲಿ ಬಂದಿರಬಹುದಾದ 'ಭೀಕರ ಬರಗಾಲ'ವನ್ನು ಸೂಚಿಸುತ್ತದೆ. ಹೇಮಾವತಿ ನದಿ ಬತ್ತಿ ಹೋದದ್ದನ್ನೂ ಅದು ಸಂಕೇತಿಸುತ್ತದೆ. ಕೂಡು ರಸ್ತೆಯಲ್ಲಿ ಪ್ರಚಲಿತದಲ್ಲಿರುವ 'ಐಗೂರಪ್ಪನ ಲಾವಣಿ'ಯು ಅತ್ಯಂತ ಕ್ರೂರನಾದ 'ರಂಗಪ್ಪ ನಾಯಕ' ಉಂಟುಮಾಡಿದ ಅನಾಹುತಗಳನ್ನು ಚಿತ್ರಿಸುತ್ತದೆ. ಆತನ ಕ್ರೌರ್ಯದಿಂದ ಪಾರಾಗಲು ಗೌಡರು ಆ ಕಡೆಯಿಂದ ಘಟ್ಟದ ಕೆಳಗೆ ಇಳಿದು ಬಂದಿರಲೂಬಹುದು.

ಈ ವಲಸೆಯು ಎರಡು ಹಾದಿಗಳಲ್ಲಿ ನಡೆದಿದೆ. ಒಂದು ವಲಸೆಯು ಐಗೂರು ಪರಿಸರದಿಂದ ಒಣಗೂರಿಗಾಗಿ ಬಿಸಿಲೆ ಗಾಟಿಯ ಮೂಲಕ ಕುಳ್ಕುಂದ-ಸುಬ್ರಹ್ಮಣ್ಯಕ್ಕೆ ಬಂದು ಕುಮಾರಧಾರಾ ನದಿಯ ಎಡ ಮತ್ತು ಬಲ ದಂಡೆಯ ಮೂಲಕ ಮುಂದುವರಿದಿದೆ. ಇನ್ನೊಂದು ಪ್ರಸರಣವು ಐಗೂರು ಪರಿಸರದಿಂದ ಒಣಗೂರಿಗಾಗಿ ಸಕಲೇಶಪುರದ ಮೂಲಕ ಮೂಡಿಗೆರೆಗೆ ಮುಂದುವರಿದು ಚಾರ್ಮಾಡಿ ಘಾಟಿಯ ಮೂಲಕ ಬೆಳ್ತಂಗಡಿ ಪರಿಸರಕ್ಕೆ ಸರಿದು ನೇತ್ರಾವತಿ ನದಿ ದಂಡೆಯಲ್ಲಿ ಮುಂದುವರಿಯಿತು. ಈ ಪ್ರಸರಣ ಸುಂದರ ಕಥಾನಕವು ಏನೆಕಲ್ಲಿನ ಬಚ್ಚ ನ್ಯಾಕನ ಪಾಡ್ದನದಲ್ಲಿಯೂ ಅದ್ಭುತವಾಗಿ ಪುನರ್ ಸೃಷ್ಟಿಗೊಂಡಿದೆ. ಬಚ್ಚ ನ್ಯಾಕ ಭೂತದ ಪ್ರಸರಣವು ವಾಸ್ತವವಾಗಿ ಬಿಸಲೆ ಘಟ್ಟದ ಮೂಲಕ ಇಳಿದು ಬಂದ ಗೌಡರ ಪ್ರಸರಣದ ಕತೆಯೇ ಆಗಿದೆ. ಹಾಗೆ ಶಿರಾಡಿ ಭೂತದ ಪ್ರಸರಣವು ಚಾರ್ಮಾಡಿ ಪರಿಸರದ ಮೂಲಕ ಕರಾವಳಿಗೆ ಇಳಿದು ಬಂದ ಗೌಡರುಗಳ ಕತೆಯೇ ಆಗಿದೆ.

ಗೌಡರುಗಳು ಕರಾವಳಿಗೆ ವಲಸೆ ಬಂದಾಗ ಸುಳ್ಯ ಪರಿಸರದ ಬಹುತೇಕ ಭೂಮಿಯು ಜೈನರ ಒಡೆತನಕ್ಕೆ ಸೇರಿತ್ತು. ಮಲೆಕುಡಿಯರು ಕುಮೇರಿ ಬೇಸಾಯ ಮಾಡುತ್ತಾ ಬೆಟ್ಟಗಳಲ್ಲಿ ವಾಸಿಸುತ್ತಿದ್ದರು. ಮ್ಯಾಲರು,

ಅಜಲಾಯರು, ಕೊರಗರು ಮತ್ತಿರ ಸಮುದಾಯಗಳು ಭೂಮಾಲೀಕರ ದಿನಗೂಲಿಗಳಾಗಿ ಮಾರ್ಪಾಡು ಹೊಂದಿದ್ದರು. ಗೌಡರು ಈ ಪರಿಸರದಲ್ಲಿ ವಲಸೆ ಬಂದು ಅಲ್ಲಲ್ಲಿ ನಲೆಸಿಕೊಂಡಾಗ ಈ ಸಮುದಾಯಗಳು ವಲಸೆಗೆ ಹೇಗೆ ಪ್ರತಿಕ್ರಿಯೆ ವ್ಯಕ್ತಪಡಿಸಿದವು ಎಂದು ವಿವರಿಸಲು ಬೇಕಾದ ಸಾಮಾಗ್ರಿಗಳು ಸದ್ಯ ನಮ್ಮಲ್ಲಿಲ್ಲ. ಆಗಲೇ ದಿನಗೂಲಿಗಳಾಗಿ ಪರಿವರ್ತನೆ ಹೊಂದಿದ ದಲಿತ ವರ್ಗದಿಂದ ಅಂಥ ಪ್ರತಿಭಟನೆಯೇನೂ ಬಂದಿರಲಾರದು. ಆದರೆ ಭೂಮಾಲಿಕ ವರ್ಗದಿಂದ ತೀವ್ರವಾದ ಪ್ರತಿಭಟನೆ ಬಂದಿರಲೇಬೇಕು. ಸುಬ್ರಹ್ಮಣ್ಯ ಪರಿಸರದಲ್ಲಿ ಇಂದಿಗೂ ಪ್ರಚಲಿತದಲ್ಲಿರುವ 'ಪುರುಷ ಭೂತ'ದ ಪಾಡ್ದನದಲ್ಲಿ ಈ ಬಗೆಗೆ ಕೆಲವು ಸೂಚನೆಗಳು ದೊರಕುತ್ತವೆ.

ಹಾಗೆಯೇ ಕಿನ್ನಿಮಾಣಿ-ಪೂಮಾಣಿ ಭೂತಗಳ ಪಾಡ್ದನ ಮತ್ತು ನಾಯೆರ್ ಭೂತದ ಪಾಡ್ದನಗಳಲ್ಲಿಯೂ ಕೆಲವು ಮಾಹಿತಿಗಳಿವೆ. ಈ ಮಾಹಿತಿಗಳು ಮೂಲತಃ ಭೂಮಾಲಕರಾದ ಜೈನರಿಗೂ, ವಲಸೆಗಾರರಾಗಿದ್ದ ಗೌಡರಿಗೂ ನಡೆದ ಸಂಘರ್ಷವನ್ನು ಸೂಕ್ಷ್ಮವಾಗಿ ದಾಖಲಿಸಿವೆ. ''ಕತ್ತಲು ಬೆಳಗಾಗುವುದರೊಳಗಾಗಿ ವೈರಿಗಳ ರಕ್ತವನ್ನು ಬೀದಿಯಲ್ಲಿ ಹರಿಸಿ'' ಪುರುಷ ಭೂತವು ಇಂದಿಗೂ ಗೌಡರಿಗೆ ಮುಖ್ಯ ದೈವ. ಕಂದ್ರಪ್ಪಾಡಿಯಲ್ಲಿರುವ ಪುರುಷ ಭೂತದ ಗುಡಿಯ ಸನಿಹದಲ್ಲಿ ಅನೇಕ ಜೈನ ಅವಶೇಷಗಳು ಪತ್ತೆಯಾಗಿವೆ. ಏನಿದ್ದರೂ ಗೌಡರ ವಲಸೆ ಮತ್ತು ಸುಳ್ಯ ಪರಿಸರದಲ್ಲಿ ಅವರ ನೆಲೆಸುವಿಕೆ ಅತ್ಯಂತ ಸುಗಮವೇನೂ ಆಗಿರಲಿಲ್ಲ ಎಂದಷ್ಟೆ ಸದ್ಯಕ್ಕೆ ಹೇಳಬಹುದು. ಅದು ಸಂಘರ್ಷದ, ರಕ್ತ ಹೀರುವಿಕೆಯ, ಆಗ ಜನಪ್ರಿಯವಾಗಿದ್ದ ಗೌಡೇತರ ದೈವಗಳ ಕೊಡಿಮರ ಕತ್ತರಿಸುವ ಮಹಾನ್ ಸಾಹಸಗಾಥೆಯಾಗಿತ್ತು.

**ಅಮರ ಸುಳ್ಯ ಕಾಟಾಕಾಯಿ**

ಹೀಗೆ ಐಗೂರು ಪರಿಸರದಿಂದ ಸುಳ್ಯ ಪರಿಸರಕ್ಕೆ ವಲಸೆ ಬಂದ ಗೌಡರ ಅಸ್ತಿತ್ವವನ್ನು ಸಾಬೀತುಪಡಿಸುವ ಘಟನೆಯೊಂದು ೧೮೩೭-೧೮೩೮ರ ನಡೆವೆ ನಡೆಯಿತು. ಅದೀಗ ಅಮರ ಸುಳ್ಯದ ಕಾಟಕಾಯಿಯೆಂದು ಪ್ರಸಿದ್ಧಿ ಪಡೆದಿದೆ.

ಕ್ರಿ.ಶ.೧೭೯೯ರಲ್ಲಿ ಶ್ರೀರಂಗಪಟ್ಟಣ ಪತನವಾದಾಗ ಬ್ರಿಟಿಷರು ಕರಾವಳಿಗೆ ಪ್ರವೇಶಿಸಿದರು. ಮುಂದೆ ಅವರು ಕೊಡಗನ್ನು ವಶಪಡಿಸಿಕೊಂಡರು. ಹೊಸ ಬಗೆಯ ಆಡಳಿತ ವ್ಯವಸ್ಥೆಯನ್ನು ಅವರು ತಮ್ಮ ಆಡಳಿತಕ್ಕೊಳಪಟ್ಟ ಪ್ರದೇಶದಲ್ಲಿ ಚಾಲನಗೆ ತಂದರು. ಅದರಲ್ಲಿ ಮುಖ್ಯವಾದದ್ದೆಂದರೆ ಅವರು ತಂದ ತೆರಿಗೆ ಪದ್ಧತಿ. ಜನರು ತಾವು ಬೆಳೆದ ವಸ್ತುಗಳನ್ನು ಮಧ್ಯವರ್ತಿಗಳಿಗೆ ಮಾರಾಟ ಮಾಡಿ, ಅದನ್ನು ಹಣವಾಗಿ ಪರಿವರ್ತಿಸಿ ಟ್ರಜರಿಗಳಲ್ಲಿ ಪಾವತಿಸಿ, ರಶೀದಿ ಪಡೆಯಬೇಕಾಗಿತ್ತು. ಇದಕ್ಕಾಗಿ ಬ್ರಿಟಿಷರು ಬೆಳ್ಳಾರೆಯಲ್ಲಿ ಟ್ರಜರಿಯನ್ನು ಸ್ಥಾಪಿಸಿದರು. ಈ ವ್ಯವಸ್ಥೆಯು ಸುಳ್ಯ ಪರಿಸರದಲ್ಲಿ ಆಗ ತಾನೇ ಪ್ರಬಲರಾಗುತ್ತಿದ್ದ ಗೌಡರುಗಳಿಗೆ ಇಷ್ಟವಾಗಲಿಲ್ಲ. ಅದುವರೆಗೆ ಗೌಡರು ತಾವು ಬೆಳೆದದ್ದನ್ನು ಕೊಡಗರಸರಿಗೆ ನೀಡಿ ಕೃತಕೃತ್ಯರಾಗುತ್ತಿದ್ದರು. ಕೆದಂಬಾಡಿ ರಾಮ ಗೌಡ, ಅಣ್ಣುಗೌಡ ಮೊದಲಾದವರು ಸುಳ್ಯ ಪರಿಸರದಲ್ಲಿಯೂ, ಗುಡ್ಡಮನೆ ಅಪ್ಪಯ್ಯ ಗೌಡ ಮೊದಲಾದರು ಭಾಗಮಂಡಲ ಪರಿಸರದಲ್ಲಿಯೂ, ಬ್ರಿಟಿಷರ ತೆರಿಗೆ ಪದ್ಧತಿಯನ್ನು ವಿರೋಧಿಸಿ, ಕೊಡಗನ್ನು ಮತ್ತೆ ಅರಸರ ಆಳ್ವಿಕೆಯಡಿಗೆ ತರಲು ಜನರನ್ನು ಸಂಘಟಿಸಲು ಆರಂಭಿಸಿದರು. ಕೊಡಗು ಅರಸೊತ್ತಿಗೆ ಅರ್ಹವಾಗಿ ಸೇರಬೇಕಾಗಿರುವುದು 'ಪುಟ್ಟ ಬಸಪ್ಪ' ಎಂಬವನಿಗೆ ಎಂದು ಸಾರಿದ ಗೌಡ ನೇತಾರರು ಪುಟ್ಟ ಬಸಪ್ಪನನ್ನು 'ಸ್ವಾಮಿ ಅಪರಂಪರ' ಎಂಬ ಹೆಸರಿನಲ್ಲಿ ಜನರ ಮುಂದೆ ತಂದು ನಿಲ್ಲಿಸಿದರು. ಸ್ವಾಮಿ ಅಪರಂಪರನನ್ನು ವಿರೋಧಿಸಿದ ಜನರನ್ನು ಗೌಡರು

ಹಿಂದಿಕ್ಕಿದರು. ಈ ನಡುವೆ ಬ್ರಿಟಿಷರಿಗೆ ಸಹಾಯಕರಾಗಿ ನಿಂತಿದ್ದ ಕೊಡಗರು ಗೌಡರ ಚಟುವಟಿಕೆಗಳನ್ನು ರಾಜ ದ್ರೋಹವೆಂಬಂತೆ ವರ್ಣಿಸಿದರು. ಕೊಡಗರ ಸಹಾಯದಿಂದ ಬ್ರಿಟಿಷರು ಗೌಡರನ್ನು ಮಟ್ಟಹಾಕಲು ನಿರ್ಧರಿಸಿದರು. ಸ್ವಾಮಿ ಅಪರಂಪರನ್ನು ಬಂಧಿಸಲಾಯಿತು. ಆದರೆ ಗೌಡರು 'ಕಲ್ಯಾಣ ಸ್ವಾಮಿ' ಎಂಬವರನ್ನು ನೇತಾರರೆಂದು ಮುಂದೆ ಮಾಡಿದರು. ಈ ಹೋರಾಟದ ಅತ್ಯಂತ ನಿರ್ಧಾರದ ಕ್ಷಣಗಳಲ್ಲಿ ಗೌಡರು ಸುಳ್ಯ ಪರಿಸರದಲ್ಲಿ ಬ್ರಿಟಿಷರಿಗೆ ಸಹಾಯಕರಾಗಿದ್ದ ಅನೇಕರನ್ನು ಕೊಂದರು. ಬೆಳ್ಳಾರೆ ಟ್ರಜರಿಯನ್ನು ನಾಶ ಮಾಡಿಸಿದರು. ಪುತ್ತೂರು, ಪಾಣೆಮಂಗಳೂರುಗಳನ್ನು ವಶಪಡಿಸಿಕೊಂಡಾಗ ಗೌಡರಿಗೆ ಆ ಕಡೆಯಿಂದ ಧರ್ಮಸ್ಥಳದ ಹೆಗ್ಗಡೆಯವರ ಆಶೀರ್ವಾದ ದೊರಕಿತು. ವಿಟ್ಲದ ದೊಂಬ ಹೆಗ್ಗಡೆಯವರ ಸೈನಿಕ ಬೆಂಬಲವೂ ದೊರಕಿತು. ಇವರೆಲ್ಲರ ಸಹಾಯದಿಂದ ಗೌಡರು ಮಂಗಳೂರು ತಲುಪಿ, ಬಾವುಟಗುಡ್ಡೆಯಲ್ಲಿರುವ ಬ್ರಿಟಿಷರನ್ನು ಓಡಿಸಿ, ಮಂಗಳೂರನ್ನು ತಮ್ಮ ವಶಕ್ಕೆ ತೆಗೆದುಕೊಂಡರು. ಆದರೆ ಮುಂದೆ ಒಂದು ವಾರದಲ್ಲಿ ಅಂದರೆ ೧೮೩೭ರ ಆಗಸ್ಟ್ ತಿಂಗಳಿನಲ್ಲಿ ಬ್ರಿಟಿಷರು ಮತ್ತೆ ಮಂಗಳೂರನ್ನು ವಶಪಡಿಸಿಕೊಂಡರು. ಹೋರಾಟದ ಮುಂಚೂಣಿಯಲ್ಲಿದ್ದ ಅನೇಕ ಗೌಡರನ್ನು ಗಲ್ಲಿಗೇರಿಸಲಾಯಿತು. ಭಾಗಮಂಡಲ ಪರಿಸರದಲ್ಲಿ ದಂಗೆಯೆದ್ದ ಗೌಡರನ್ನು ಅಲ್ಲಿಯೇ ಮಟ್ಟ ಹಾಕಲಾಯಿತು. ಕೆಲವರನ್ನು ಮಡಿಕೇರಿಯಲ್ಲಿ ಗಲ್ಲಿಗೇರಿಸಲಾಯಿತು.

ಈ ದಂಗೆಯು ಗೌಡ ಸಮುದಾಯದ ಮೇಲೆ ಮುಂದೆ ಬಗೆ ಬಗೆಯ ಪರಿಣಾಮವನ್ನು ಬೀರಿತು. ಮುಖ್ಯವಾಗಿ ಬ್ರಿಟಿಷರ ಅವಕೃಪೆಗೆ ಒಳಗಾದದ್ದರಿಂದ ಮುಂದೆ ಸ್ವಾತಂತ್ರ್ಯ ಸಿಗುವವರೆಗೆ ಅವರಿಗೆ ಯಾವುದೇ ಅಭಿವೃದ್ಧಿ ಅವಕಾಶಗಳನ್ನು ನಿರಾಕರಿಸಲಾಯಿತು. ಗೌಡ ಸಮುದಾಯವು ಆರ್ಥಿಕವಾಗಿ, ಶೈಕ್ಷಣಿಕವಾಗಿ ನಿನ್ನೆ ಮೊನ್ನೆಯವರೆಗೆ ಹಿಂದುಳಿಯಲು ಕಾರಣ ಅವರು ವಸಾಹತು ಆಡಳಿತ ಪದ್ಧತಿಗೆ ವಿರೋಧವಾಗಿದ್ದದ್ದೇ ಆಗಿದೆ. ಬ್ರಿಟಿಷರನ್ನು ಬೆಂಬಲಿಸಿದ ಕೊಡಗ ಮತ್ತು ಕೊಂಕಣಿ ಸಮುದಾಯದ ಜನರು ಸಾಕಷ್ಟು ಅಭಿವೃದ್ಧಿ ಹೊಂದಿದ್ದನ್ನು ಇಲ್ಲಿ ನೆನೆಸಿಕೊಳ್ಳಬಹುದು.

**ಕುಟುಂಬ ಪದ್ಧತಿ ಮತ್ತು ಒಳಾಡಳಿತ**

ಕೃಷಿ ಕೆಲಸ ಮಾಡುವ ಸಮುದಾಯಗಳು ಮೂಲತಃ ಮಾತೃ ಪ್ರಾಧಾನ ಕುಟುಂಬ ವ್ಯವಸ್ಥೆಯನ್ನು ಅಂಗೀಕರಿಸಿರುತ್ತವೆ. ಆದರೆ ಗೌಡ ಸಮುದಾಯ ಮಾತ್ರ ಇದಕ್ಕೊಂದು ಅಪವಾದ. ಈ ಸಮುದಾಯವು ಪಿತೃ ಪ್ರಧಾನ ಕುಟುಂಬ ವ್ಯವಸ್ಥೆಗೆ ಸೇರಿದೆ. ಇಲ್ಲಿ 'ಬಳಿ' ಮತ್ತು 'ಆಸ್ತಿ ಅಧಿಕಾರ'ವು ತಂದೆಯಿಂದ ಹಿರಿಯ ಮಗನಿಗೆ ಇಳಿದು ಬರುತ್ತದೆ.

ಪ್ರಸ್ತುತ ನಾಲ್ಕಾರು ಅಪವಾದಗಳನ್ನು ಹೊರತುಪಡಿಸಿದರೆ ಸುಳ್ಯ ಪರಿಸರದ ಗೌಡರು 'ವಿಭಕ್ತ ಕುಟುಂಬ' ವ್ಯವಸ್ಥೆಗೆ ಒಳಪಟ್ಟಿದ್ದಾರೆ. ಆದರೆ ಮೂರು ಅಥವಾ ನಾಲ್ಕು ತಲೆಮಾರುಗಳ ಹಿಂದೆ ಅವರೆಲ್ಲ 'ಅವಿಭಕ್ತ ಕುಟುಂಬವನ್ನೇ' ಅನುಸರಿಸುತ್ತಿದ್ದರು. ಗೌಡರ ಅವಿಭಕ್ತ ಕುಟುಂಬ ವ್ಯವಸ್ಥೆಯಲ್ಲಿ ಆಸ್ತಿಯ ಅಧಿಕಾರ ಮತ್ತು ನ್ಯಾಯಾಧಿಕಾರವು ವಯಸ್ಸಿನಲ್ಲಿ ಹಿರಿಯನಾದವನಿಗೆ ಹೋಗುತ್ತಿತ್ತು ಅವನನ್ನು ಕುಟುಂಬದ ಸದಸ್ಯರು 'ಪಟ್ಟೆದಾರ' ಎಂದು ಕರೆಯುತ್ತಿದ್ದರು. ಪಟ್ಟೆದಾರ ಇರುವ ಮನೆಯೇ 'ಐನ್ ಮನೆ' ಅಥವಾ ಮೂಲ ಮನೆ. ಐನ್ ಮನೆಯಲ್ಲಿ ಕುಟುಂಬದ ದೈವ ಇರುತ್ತದೆ. ಕುಟುಂಬದ ಎಲ್ಲ ಸದಸ್ಯರಿಗೂ ಸಮಾನ ಹಕ್ಕು ಇರುವ 'ಉಂಬೊಳೆಗೆ' (ಅನ್ನ ಮಾಡುವ ಕೋಣೆ, ಊಟದ ಕೋಣೆ) ಇರುತ್ತದೆ. ಈ ಅನ್ನ ಮಾಡುವ ಕೋಣೆಯೇ ಅವಿಭಕ್ತ ಕುಟುಂಬದ

ನೂರಾರು ಸದಸ್ಯರನ್ನು ಏಕಸೂತ್ರದಲ್ಲಿ ಹಿಡಿದಿಡುವ ಮಾಂತ್ರಿಕ ಶಕ್ತಿಯಾಗಿರುತ್ತದೆ. 'ಬಾಡೆ' ಎಂಬುದು ಕುಟುಂಬದ ಎಲ್ಲ ಸದಸ್ಯರೂ ಕುಳಿತು ಚರ್ಚಿಸಬಹುದಾದ ಸಭಾಂಗಣವಾಗಿರುತ್ತದೆ. ಬಾಡೆಯಲ್ಲಿಯೇ 'ನೆಲ್ಲಕ್ಕಿ ದೀಪ' ಇರುತ್ತದೆ.

ಬಾಡೆಯ ಪಕ್ಕದಲ್ಲಿ 'ಕಯ್ಯಾಲೆ' ಇದ್ದು ಅದರಲ್ಲಿ 'ಐಮರ' ಇರುತ್ತದೆ ಐಮರದಲ್ಲಿ ಕುಳಿತು ಪಟ್ಟೆದಾರನು ಕುಟುಂಬದ ಸಮಸ್ಯೆಗಳಿಗೆ ಪರಿಹಾರ ನೀಡುತ್ತಾನೆ.

ಕುಟುಂಬದ ಸಮಸ್ಯೆಗಳನ್ನು ಮನೆಯೊಳಗಡೆ ಪರಿಹರಿಸಲಾಗದಿದ್ದಲ್ಲಿ ಅದು ಸಹಜವಾಗಿ ಮನೆಯ ಹೊರಗಡೆ ಚಲಿಸುತ್ತದೆ. ಪಟ್ಟೆದಾರನು ಊರು ಗೌಡನ ಸಹಯೋಗಿಯಾಗಿರುವ 'ಬುದ್ಧಿವಂತ'ನ ಮೂಲಕ 'ಊರುಗೌಡ'ನನ್ನು ಸಂಪರ್ಕಿಸಬಹುದು. ಊರುಗೌಡರ ಮೇಲ್ವಿಚಾರಣೆಗೆ 'ಮಾಗಣೆಗೌಡರು' ಇರುತ್ತಾರೆ. ಮಾಗಣೆ ಗೌಡರುಗಳು ಕಟ್ಟೆಮನೆ ಗೌಡರ ಆದೇಶಕ್ಕೆ ಒಳಪಡುತ್ತಾರೆ. ಕಟ್ಟೆಮನೆ ಗೌಡರು ಶೃಂಗೇರಿ ಧರ್ಮಸಂಸ್ಥಾನದ ಅಂಕಿತಕ್ಕೆ ಒಳಪಡುತ್ತಾರೆ. ಸುಳ್ಯ ಪರಿಸರದ ಗೌಡರ ನಡುವೆ ಹೀಗೆ ಸುಮಾರು ೩೬ ಊರ ಗೌಡರುಗಳೂ, ಅಷ್ಟೇ ಸಂಖ್ಯೆಯಲ್ಲಿ ಬುದ್ಧಿವಂತರೂ ಇರುವುದನ್ನು ಗಮನಿಸಬಹುದು. ಪ್ರತಿ ೪ ಊರು ಗೌಡರಿಗೆ ಒಬ್ಬ ಮಾಗಣೆ ಗೌಡರ ಹಾಗೆ ಒಟ್ಟು ೩೬ ಊರು ಗೌಡರಿಗೆ ೯ ಮಾಗಣೆ ಗೌಡರು ಇದ್ದಾರೆ. ಈ ಒಂಬತ್ತು ಮಾಗಣೆ ಗೌಡರಿಗೆ 'ಬಲ್ನಾಡು' ಮನೆಯವರು ಕಟ್ಟೆಮನೆ ಗೌಡರಾಗಿದ್ದಾರೆ. ಗೌಡರ ಈ ಒಳಾಡಳಿತ ವ್ಯವಸ್ಥೆಯು ವಸಾಹತೀಕರಣ ಅನಂತರ ಶಿಥಿಲವಾಗುತ್ತಾ ಬಂದು ಸ್ವಾತಂತ್ರ್ಯಾ ನಂತರ ಪೂರ್ತಿಯಾಗಿ ನಿಷ್ಕ್ರಿಯಗೊಂಡಿತು. ಇಷ್ಟಿದ್ದರೂ ಇಂದಿಗೂ ಈ ಅಧಿಕಾರವನ್ನು ನಿರ್ವಹಿಸಿದ ಮನೆತನಗಳನ್ನು ನಾವು ಸುಳ್ಯ ಪರಿಸರದಲ್ಲಿ ಕಾಣಬಹುದಾಗಿದೆ.

ಗೌಡರ ಕುಟುಂಬ ಪದ್ಧತಿಯನ್ನು ಬಲಗೊಳಿಸುವ ಮತ್ತು ವಿಸ್ತರಿಸುವ ಕೆಲಸದಲ್ಲಿ ನಿರ್ಣಾಯಕ ಪಾತ್ರ ವಹಿಸುವುದು ಗೌಡರಲ್ಲಿ ಇಂದಿಗೂ ಶಕ್ತಿಶಾಲಿಯಾಗಿ ಉಳಿದು ಬಂದಿರುವ 'ಬಳಿ ಪದ್ಧತಿ' ಈ ಬಳಿ ಪದ್ಧತಿಯನ್ನು 'ಗೋತ್ರ ಪದ್ಧತಿ' ಯೊಂದಿಗೆ ಸಮೀಕರಿಸಿಕೊಂಡು ಬರುತ್ತಿರುವುದು ಹೌದಾದರೂ, ಮೂಲತಃ ಬಳಿ ಪದ್ಧತಿಯೇ ಬೇರೆ, ಗೋತ್ರ ಪದ್ಧತಿಯೇ ಬೇರೆ. ಅವೆರಡೂ ನಿರ್ವಹಿಸುವ ಕಾರ್ಯಗಳು ಕೂಡಾ ಬೇರೆ ಬೇರೆ. ಗೌಡರಲ್ಲಿ 'ಬಳಿ'ಯು ತಂದೆಯಿಂದ ಮಕ್ಕಳಿಗೆ ಇಳಿದು ಬರುತ್ತದೆ. ಗೌಡರಲ್ಲಿ ಪ್ರಚಲಿತದಲ್ಲಿರುವ ''ಹತ್ತು ಕುಟುಂಬ ಹದಿನೆಂಟು ಗೋತ್ರ'' ಎಂಬ ಮಾತನ್ನು ಆಧರಿಸಿ ಕೆಲವು ವಿದ್ವಾಂಸರು ಗೌಡರಲ್ಲಿ ೧೮ ಬಳಿಗಳು ಇವೆಯೆಂದು ಸಾಧಿಸಲು ಪ್ರಯತ್ನಿಸಿದ್ದಾರೆ. ಆದರೆ ವಾಸ್ತವವಾಗಿ ಇಂದಿಗೆ ಗೌಡರಲ್ಲಿ ಕೇವಲ ೧೨ ಬಲಿಗಳು ಮಾತ್ರ ಅಸ್ತಿತ್ವದಲ್ಲಿವೆ ಅವುಗಳೆಂದರೆ.

೦೧. ನಂದರ ಭಳಿ

೦೨. ಬಂಗಾರದ ಬಳಿ

೦೩. ಹೆಮ್ಮನ ಬಳಿ

೦೪. ಮೂಲರ ಬಳಿ

೦೫. ನಾಯರ ಬಳಿ

೦೬. ಚಾಲ್ಯರ ಬಳಿ

೦೭. ಗುಂಡರ ಬಳಿ

೦೮. ಕಬರ್ ಬಳಿ

೦೯. ಚಿತ್ತರ ಬಳಿ

೧೦. ಗೌಡರ ಬಳಿ

೧೧. ಬಳಸನ್ನ ಬಳಿ

೧೨. ಗೋಳಿ ಬಳಿ

ಕೆಲವು ಬಳಿಗಳಿಗೆ ಬೇರೆ ಕೆಲವು ಹೆಸರುಗಳಿರುವುದು. ಕೆಲವು ಬಳಿಗಳಲ್ಲಿ ಮತ್ತೆ ಉಪ ಪ್ರಬೇಧಗಳಿರುವುದು ಇವುಗಳ ಸಂಖ್ಯೆಯನ್ನು ಹೆಚ್ಚಿಸುವಂತೆ ಮಾಡಿವೆ. ಆದರೆ ಮೇಲೆ ಹೇಳಿದ ೧೨ ಬಳಿಗಳಿಂದ ಹೊರತಾದ ಬೇರಾವ ಗೌಡರೂ ಇಲ್ಲಿ ಗಮನಕ್ಕೆ ಬರುವುದಿಲ್ಲ.

ಬೇರೆ ಬೇರೆ ಕಾರಣಗಳಿಂದಾಗಿ ಈ ಬಳಿಗಳ ಹೆಸರು ನಿಷ್ಪನ್ನಗೊಂಡಿವೆ. ಅರಸಾಡಳಿತ, ವಾಸ್ತವ್ಯ, ವೃತ್ತಿ ಮತ್ತಿತರ ಕಾರಣಗಳನ್ನು ನಾವು ಸುಲಭವಾಗಿಯೇ ಊಹಿಸಬಹುದಾಗಿದೆ.

ಈ ೧೨ ಬಳಿಗಳಲ್ಲಿ ನಂದರ ಬಳಿ, ಬಂಗಾರ ಬಳಿ, ಹೆಮ್ಮನ ಬಳಿ ಮತ್ತು ಮೂಲರ ಬಳಿಗಳು ಗೌಡರ ಒಟ್ಟು ಸಂಖ್ಯೆಯಲ್ಲಿ ಶೇಕಡಾ ೪೦ರಷ್ಟು ಜನರನ್ನು ಆಕ್ರಮಿಸಿಕೊಂಡಿದೆ. ಉಳಿದ ಬಳಿಗಳ ಜನರು ಸಣ್ಣ ಸಂಖ್ಯೆಯಲ್ಲಿ ತಾಲೂಕಿನಾದ್ಯಂತ ಹರಡಿಕೊಂಡಿದ್ದಾರೆ.

**ಗೌಡರ ಜೀವನಾವರ್ತನದ ಆಚರಣೆಗಳು**

ಸುಳ್ಯ ಪರಿಸರದ ಗೌಡರಲ್ಲಿ ಪ್ರಚಲಿತದಲ್ಲಿರುವ ಜೀವನಾವರ್ತನದ ಆಚರಣೆಗಳನ್ನು ಸೂಕ್ಷ್ಮವಾಗಿ ವಿಶ್ಲೇಷಿಸಿದರೆ ಗೌಡ ಸಂಸ್ಕೃತಿಯ ಬಗೆಗೆ ನಮಗೆ ಅಪೂರ್ವವಾದ ಒಳನೋಟಗಳು ದೊರೆಯುತ್ತವೆ. ಬ್ರಾಹ್ಮಣೇತರ ಸಂಸ್ಕೃತಿಗಳ ಬಗೆಗೆ ಒಂದು ಬಗೆಯ ತಿಳುವಳಿಕೆಯೂ ಮೂಡುತ್ತದೆ.

ಗೌಡರ ಜೀವನಾವರ್ತನದ ಆಚರಣೆಗಳಲ್ಲಿ 'ಮಗುವಿನ ಜನನ' ಮುಖ್ಯವಾಗಿದೆ. ಒಕ್ಕಲಿಗ ಕೆಲಸ ಮಾಡುವ ಗೌಡರಿಗೆ ಮಗುವಿನ ಜನನವು ಹೊಸದಾದ ಕೃಷಿಕನೊಬ್ಬನು ಕುಟುಂಬಕ್ಕೆ ಸೇರ್ಪಡೆಹೊಂದುವ ಒಂದು ಮಹಾನ್ ಘಟನೆಯಾಗಿದೆ. ಈ ಹೊಸಬನ/ ಳ ಸೇರ್ಪಡೆಯು ಮಗು ಹುಟ್ಟಿದ ದಿನದಿಂದ ಮುಂದಿನ ೧೬ ದಿನಗಳ ವರೆಗೆ ನಿರಂತರವಾಗಿ ನಡೆಯುತ್ತದೆ. ಮಗು ಹುಟ್ಟಿದ ೭ನೇ ದಿವಸಕ್ಕೆ 'ಅಮೆ' ನಡೆಯುತ್ತದೆ. ೧೬ನೇ ದಿವಸ ಮಗುವಿಗೆ ಹೆಸರಿಟ್ಟು, ತೊಟ್ಟಿಲಿಗೆ ಹಾಕುತ್ತಾರೆ. ಮುಂದೆ ೪೮ ದಿನಗಳ ವರೆಗೆ ಮಗುವಿನ ತಾಯಿಯ 'ಬಾಣಂತನ' ಮಾಡಲಾಗುತ್ತದೆ. ಮುಂದೆ ಅನ್ನ ಪ್ರಾಶನ, ಕಿವಿ ಚುಚ್ಚುವುದು ಇತ್ಯಾದಿ ಆಚರಣೆಗಳು ವಿಧಿವತ್ತಾಗಿ ನಡೆಯುತ್ತವೆ. ಮಗುವನ್ನು ತಾಯಿಯ ಗರ್ಭದಿಂದ ಹೊರತರುವ, ಸಾಕುವ, ಬಾಣಂತಿ ಸಾಕಣೆ ಮಾಡುವ 'ಸೂಲಗಿತ್ತಿ'ಗೆ ಮಾಂತ್ರಿಕ ಶಕ್ತಿ ಇದೆಯೆಂದು ಗೌಡರು ಭಾವಿಸುತ್ತಾರೆ. ಈ ಸೂಲಗಿತ್ತಿಯರು ೪೮ ದಿವಸಗಳ ಕಾಲ ಬಾಣಂತಿ ಸಾಕಣೆ ಮಾಡುವ ಕ್ರಮವು 'ಜನಪದ ವೈದ್ಯ'ದ ಶಕ್ತಿಗೆ ಅತ್ಯುತ್ತಮ ಉದಾಹರಣೆಯಾಗಿದೆ.

ಹುಡುಗಿ ಮೊದಲ ಬಾರಿಗೆ ಮುಟ್ಟಾದಾಗ ಆಚರಿಸುವ ಆಚರಣೆಗಳೆಲ್ಲ 'ಫಲೋತ್ಪತ್ತಿ' ಆಚರಣೆಗಳಾಗಿವೆ. ಆಕೆಗೆ ಕೊಡುವ ತಿಂಡಿ-ತಿನಿಸುಗಳು, ೫ ಅಥವಾ ೭ ದಿನದಂದು ಮಾಡುವ ವಿಧಿ ಕ್ರಿಯೆಗಳೆಲ್ಲ ಆಕೆಯ

ಫಲವಂತಿಕೆಯನ್ನು ಹೆಚ್ಚಿಸುವಂತಹುಗಳಾಗಿವೆ. ಈ ಆಚರಣೆಗಳಲ್ಲಿ ಸೋದರ ಮಾವನಿಗೆ ಇರುವ ಅಧಿಕಾರವು ಮೂಲತಃ ಆತನಿಗಿದ್ದ ಲೈಂಗಿಕ ಒಡೆತನವನ್ನೇ ಸಂಕೇತಿಸುತ್ತದೆ. ಗೌಡರು ಮದುವೆಯನ್ನು ಬದುಕಿನ ಅತ್ಯಂತ ಮುಖ್ಯ ಘಟ್ಟವೆಂದು ಮಾನ್ಯ ಮಾಡಿದ್ದಾರೆ. ಕುಟುಂಬ ಮತ್ತು ಸಮಾಜದ ವ್ಯಾಪ್ತಿಯನ್ನು ನಿರ್ಧರಿಸಲು ಪ್ರಮುಖ ಮಾನದಂಡವಾಗಿ ಮದುವೆ ಅವರಲ್ಲಿ ಅನುಷ್ಠಾನಕ್ಕೆ ಬರುತ್ತದೆ.

ಗೌಡರ ಮದುವೆಯ ಮೊದಲ ಹಂತ ಆರಂಭವಾಗುವುದು 'ಬಳಿ'ಯ ಆಯ್ಕೆಯಲ್ಲಿ. ಪ್ರಸ್ತುತ ಗೌಡರಲ್ಲಿ ಬಳಕೆಯಲ್ಲಿರುವ ೧೨ ಬಳಿಗಳಲ್ಲಿ ವರನು ತನ್ನ ಗೋತ್ರವನ್ನು ಬಿಟ್ಟು, ತನಗೆ ಸರಿ ಹೊಂದುವ 'ಬಳಿ'ಯೊಂದನ್ನು ಆಯ್ದುಕೊಳ್ಳಬೇಕಾಗುತ್ತದೆ. ಇಂಥ ಆಯ್ಕೆಯಲ್ಲಿ ವರನ ತಂದೆ ಮತ್ತು ತಾಯಿಯರ ಬಳಿಯನ್ನೇ ಲಕ್ಷ್ಯಕ್ಕೆ ತೆಗೆದುಕೊಳ್ಳುತ್ತಾರೆ. ಆಸ್ತಿಯ ಒಡೆತನ ಹಾಗೆ ಬಳಿಯೂ ತಂದೆಯಿಂದ ಮಗನಿಗೆ ಇಳಿದು ಬರುವುದರಿಂದ, ತಂದೆಯ 'ಬಳಿ'ಯ ಹುಡುಗಿಯನ್ನು ಮದುವೆಯಾಗುವಂತಿಲ್ಲ. ಆದರೆ ತಂದೆಯ ತಂಗಿಯನ್ನು ಬೇರೆ ಕಡೆಗೆ ಕೊಟ್ಟಿರುವುದರಿಂದ ಆಕೆಯಲ್ಲಿ ಹುಟ್ಟಿದ ಹೆಣ್ಣನ್ನು ಮತ್ತೆ ಮನೆಗೆ ಮದುವೆ ಮೂಲಕ ತರಬಹುದು; ಮಗಳನ್ನು ಕೊಡಬಹುದು. ಅದೇ ಪ್ರಕಾರ ಮಗಳನ್ನು ತಾಯಿಯ ಸಹೋದರನೇ ಮದುವೆ ಮಾಡಿಕೊಳ್ಳಬಹುದು. ಇಲ್ಲವೇ ಸೋದರಮಾವನ ಮಗನಾದರೂ ಮದುವೆ ಆಗಬಹುದು. ಇಲ್ಲಿ ಮೂಲ ನಿಷೇಧ ಇರುವುದು 'ಒಂದೇ ಬಳಿಯಲ್ಲಿ ಮದುವೆಯಾಗಕೂಡದು' ಎಂಬುದು ಮಾತ್ರ ಒಂದೇ ಬಳಿಯವರೆಲ್ಲ ಸಹೋದರ ಸಹೋದರಿಯರಾದ್ದರಿಂದ ಮತ್ತು ಅದು ತಂದೆಯಿಂದ ನೇರವಾಗಿ ಇಳಿದು ಬಂದಿರುವುದರಿಂದ ಅಲ್ಲಿ ಮದುವೆ ನಿಷಿದ್ಧವಾಗುತ್ತದೆ. ಇಲ್ಲಿ ತಾಯಿಯ ಬಳಿಯ ವಧುವಾದರೆ ಅದಕ್ಕೆ ಪ್ರಾಶಸ್ತ್ಯ ಹೆಚ್ಚು. ತಂದೆಯ ಆಯ್ಕೆಯೇ ಮಗನ ಆಯ್ಕೆಯೂ ಆಗುತ್ತದೆ. ಬಳಿಯ ಈ 'ಆಯ್ಕೆ' ಹೆಣ್ಣಿನ ಆಯ್ಕೆಯನ್ನೂ ಸಮರ್ಥಿಸುತ್ತದೆ. ಅಕ್ಕನ ಮಗಳನ್ನು ಅಣ್ಣನಾದರೂ ಮದುವೆಯಾಗಬಹುದು ಇಲ್ಲವೇ ಅಣ್ಣನ ಮಗನಾದರೂ ಮದುವೆಯಾಗಬಹುದು. ಅಂದರೆ ಒಂದು ಹೆಣ್ಣಿನ ಮೇಲೆ ಆಕೆಯ ಸೋದರ ಮಾವ ಮತ್ತು ಸೋದರ ಮಾವನ ಮಗನಿಗೂ ಸಮಾನ ಮದುವೆಯ ಹಕ್ಕು ಇರುವುದು ಕಂಡುಬರುತ್ತದೆ. ತನಗೆ ಮದುವೆ ಆಗಲಾಗದ ಸಂದರ್ಭದಲ್ಲಿ ಹಕ್ಕನ್ನು ಮುಂದಿನ ತಲೆಮಾರಿಗೆ ದಾಟಿಸಿ, ಆಕೆಯನ್ನು ಒಳತರುವ ಕ್ರಮವಿದು. ಗೌಡರ ಮದುವೆಯ ಶೇಖಡಾ.೩೦ರಷ್ಟು ಭಾಗವನ್ನು ನಂದರ, ಹೆಮ್ಮನ ಬಂಗಾರ ಮತ್ತು ಮೂಲರ ಬಳಿಗಳೇ ಹಂಚಿಕೊಂಡಿದ್ದೂ, ಅಲ್ಲಿ ಕ್ವಚಿತ್ತಾಗಿ ಒಂದೇ ಬಳಿಯಲ್ಲಿ ಮದುವೆಯಾದದ್ದೂ ಇದೆ.

ತಂದೆಯ ತಂಗಿಯ ಕಡೆಯಿಂದ (ಆಕೆಯ ಬಳಿ ಬೇರೆಯಾಗುತ್ತದೆ) 'ಹೆಣ್ಣನ್ನು ತರುವುದು' ಮತ್ತು ತಾಯಿಯ ಸಹೋದರನ ಕಡೆಗೆ 'ಹೆಣ್ಣನ್ನು ಕೊಡುವುದು' ಗೌಡರಲ್ಲಿ ಪುನರಾವರ್ತನೆಗೊಳ್ಳುವ ಘಟನೆ ಇಲ್ಲಿ 'ಕೊಡುವ' ಮತ್ತು 'ತರುವ' ಎಂಬ ಎರಡು ಕನಿಷ್ಠ ಗುಂಪುಗಳ ಅವಶ್ಯಕತೆಯಿದೆ. ಇದನ್ನು ಹೆಣ್ಣಿನ ಕಡೆ ಮತ್ತು ಗಂಡಿನ ಕಡೆ ಎಂದು ಗೌಡರು ಕರೆಯುತ್ತಾರೆ.

ಮದುವೆಯಲ್ಲಿ ಗಂಡನ ಕಡೆಯವರೇ ಹುಡುಗಿ ನೋಡಲು (ಗೊಡೆ ನೋಡ್ದು) ಹೋಗುತ್ತಾನೆ. ಹಾಗೆ ಹೋಗುವಾಗ ಎರಡು ವಿಭಿನ್ನ ಗುಂಪುಗಳ ಮಧ್ಯ ಸಮಾಲೋಚನೆ ನಡೆಸಲು ಮಧ್ಯವರ್ತಿಯೊಬ್ಬನನ್ನು ಆಯ್ಕೆ ಮಾಡುತ್ತಾರೆ. ಇವನಿಗೆ 'ದಲ್ಲಾಳಿ' ಎಂದು ಹೆಸರು. ಈ ದಲ್ಲಾಳಿ ಎರಡೂ ಕಡೆಗಳ ಪರಿಚಯಸ್ಥನಾಗಿರಬೇಕು. ಈತ ಎರಡು ಗುಂಪಿನ ಜನರ ಭೇಟಿ ಸಂದರ್ಭದಲ್ಲಿ ಸಮತೋಲನವನ್ನು ಕಾಪಾಡಿಕೊಳ್ಳುತ್ತಾನೆ. ಹುಡುಗಿ

ಒಪ್ಪಿಗೆಯಾದರೆ ಆನಂತರ 'ಹುಡುಗಿ ಕಡೆ' ಯವರು 'ಹುಡುಗನ ಕಡೆ' ಮನೆ ನೋಡಲು (ಹೈದನ ಮನೆ ನೋಡ್ಪು) ಬರುತ್ತಾರೆ. ಪರಸ್ಪರ ಊಟೋಪಚಾರಗಳು ಸಂದಾಯವಾದ ಅನಂತರ, ವಧುವಿನ ಮನೆಯಲ್ಲಿ ಮದುವೆ ದಿನ ಮತ್ತು 'ಮುಹೂರ್ತ'ವನ್ನು ನಿಗದಿಪಡಿಸುತ್ತಾರೆ.

ಈ ಮದುವೆ ದಿನ ನಿರ್ಧಾರ ಮತ್ತು ಮೂಹೂರ್ತದ ನಿರ್ಧಾರವನ್ನು 'ಮನೆಯ ಜಗಲಿಯಲ್ಲಿ' ಅಥವಾ ಗೌಡಕನ್ನಡದಲ್ಲಾದರೆ 'ಕೈಯ್ಯಾಲೆ'ಯಲ್ಲಿಯೇ ಮಾಡಬೇಕು. ಕೈಯ್ಯಾಲೆ ಅಥವಾ ಜಗಲಿ ಮನೆಯ ಒಳಗೂ ಅಲ್ಲದ, ಹೊರಗೂ ಅಲ್ಲದ ಮಧ್ಯದ ಸ್ಥಳ. ದಲ್ಲಾಳಿಯ ಹಾಗೆ ಸಮತೋಲನವುಳ್ಳ ಜಾಗ. ಹೊರಗಿನವರನ್ನು ಒಳಗೆ ಬರಮಾಡಿಕೊಳ್ಳುವ ಮೊದಲು ಕುಳ್ಳಿರಿಸುವ ಜಾಗ. ಅಂದರೆ, ಜಗಲಿಯು ಸಂಸ್ಕೃತಿಯ ಅಂತರಂಗ ಮತ್ತು ಬಹಿರಂಗಗಳ ಮಧ್ಯದ, ಅವೆರಡರ ಮಧ್ಯೆ ಸಂಬಂಧ ಕಲ್ಪಿಸಲು ಸಹಾಯಕವಾಗುವ ಸ್ಥಳ. ಹೆಣ್ಣು ಇನ್ನೂ ಮನೆಯೊಳಕ್ಕೆ ಬಂದಿಲ್ಲವಾದ್ದರಿಂದ ಮದುವೆ ಇರುವ ಎಲ್ಲಾ ಗೌಡರ ಮನೆಯಲ್ಲಿಯೂ 'ಜಗಲಿ' ಇದ್ದೇ ಇರಬೇಕು. ಇದು ಅವರ ವಾಸ್ತುವಿನ ಮೂಲ ಘಟಕಗಳಲ್ಲಿ ಒಂದಾಗಿದೆ. ಅವಿಭಕ್ತ ಕುಟುಂಬ ಪದ್ಧತಿ ಇರುವಲ್ಲಿ ಮೂಲ ಮನೆ (ತರವಾಡಿನ ಮನೆ, ಐನ್ ಮನೆ)ಯಲ್ಲಿಯೇ ಜಗಲಿ ಇದ್ದು, ಅಲ್ಲಿ ಮದುವೆ ನಿರ್ಧಾರಗಳಾಗುತ್ತವೆ. ಜಗಲಿ ಇಲ್ಲದೆ ಗೌಡರಲ್ಲಿ ಮದುವೆ ನಡೆಯದು.

ಮದುವೆ ದಿನ ನಿರ್ಧಾರದ ಅನಂತರ ಮತ್ತು ವಧುವಿನ ಮನೆಯಲ್ಲಿ ಪ್ರತ್ಯೇಕವಾಗಿಯೇ ತಯಾರಿ ನಡೆಯುತ್ತದೆ. ಎರಡೂ ಕಡೆಯ ಆಚರಣೆಗಳೂ ಮನೆಯೊಳಗಡೆ, ಅಡುಗೆ ಮನೆಯಲ್ಲಿ (ಗೌಡ ಕನ್ನಡದಲ್ಲಿ ತೊಂಬಾರ ಊಟ ಮಾಡುವ ಒಳಗಿನ ಸ್ಥಳ) ನಡೆಯುತ್ತದೆ. ಅಡುಗೆ ಮನೆಯಲ್ಲಿ ಹಾಕಿಟ್ಟಿರುವ 'ಕಿನ್ನಿಕಂಬವೇ' ಅತ್ಯಂತ ಪವಿತ್ರ ಜಾಗವಾಗಿರುತ್ತದೆ. ಈ ಸ್ಥಳದಲ್ಲಿ ಮುದುಮಗನನ್ನೋ, ಮದುಮಗಳನ್ನೋ ಕುಳ್ಳಿರಿಸುವುದರಿಂದ ಅವರಿಗೆ 'ಪ್ರತ್ಯೇಕ ಅಸ್ತಿತ್ವವೊಂದು' ಸಿದ್ಧವಾಗುತ್ತದೆ. ಮೈಗೆ ಅರಿಶಿಣ ತಿಕ್ಕಿ ಕೊರಳಿಗೆ ಮಹೂರ್ತದ ಮಣಿ ಕಟ್ಟಿದ ಅನಂತರ ಮದುಮಗಳು ಮನೆಯ ವಾತಾವರಣವನ್ನು ಬಿಟ್ಟು ಹೊರಗೆ ಹೋಗಬಾರದೆಂಬ ನಿಷೇಧವಿದೆ. ಅರಶಿಣ ತಿಕ್ಕಿದ ಅನಂತರ ಅವರು 'ಹಸಿ ಮೈ' ವ್ಯಕ್ತಿಗಳಾಗುತ್ತಾರೆ.

ಸಾಮಾನ್ಯವಾಗಿ ಮದುವೆಯ ಹಿಂದಿನ ದಿನ ನಡೆಯುವ ಎಲ್ಲಾ ಆಚರಣೆಗಳೂ ಮದುಮಗಳನ್ನು ಸಾಮಾನ್ಯ ಜೀವನಕ್ರಮದಿಂದ ಪ್ರತ್ಯೇಕಿಸುವುದರಿಂದ ಮಾತ್ರ ಸಾಮಾನ್ಯ ಜೀವನಕ್ರಮದಲ್ಲಿ ಅವರು 'ಅಸಾಮಾನ್ಯ'ರಾಗಿ ಪ್ರತ್ಯೇಕ ಸ್ಥಾನವನ್ನು ಗಳಿಸಿಕೊಳ್ಳುತ್ತಾರೆ. ಇದು ಸ್ಪಷ್ಟವಾಗಲು ಅವರಿಗೆ ಸ್ನಾನ ಮಾಡಿಸುತ್ತಾರೆ. ಬಿಳಿ ಬಟ್ಟೆ ಉಡಿಸುತ್ತಾರೆ, ಗಂಡಿಗೆ ಕ್ಷೌರಮಾಡಿಸುತ್ತಾರೆ. ಪಟ್ಟೆ ಬಾಸಿಂಗ ಕಟ್ಟುತ್ತಾರೆ. ಮುಂಡಾಸು ಕಟ್ಟುತ್ತಾರೆ ಮತ್ತು ಆಗಾಗ ಶೋಭಾನೆಗಳನ್ನು ಹಾಡಿ ಅವರನ್ನು ಪುರಾಣಗಳ ಎತ್ತರಕ್ಕೆ ಕೊಂಡೊಯ್ಯುತ್ತಾರೆ. ವ್ಯಕ್ತಿಗಳನ್ನು ಪ್ರತ್ಯೇಕಿಸಿದ ಹಾಗೆ ಸಮಯವನ್ನೂ ಪ್ರತ್ಯೇಕಿಸಿ 'ಮುಹೂರ್ತ'ವನ್ನು ನಿರ್ಧರಿಸುತ್ತಾರೆ. ಸ್ಥಳವನ್ನು ಪ್ರತ್ಯೇಕಿಸಿ 'ಧಾರಾಮಂಟಪ'ವನ್ನು ಮಾಡುತ್ತಾರೆ. ಮುಹೂರ್ತಕ್ಕೆ ಮಹತ್ವ ಇದ್ದ ಹಾಗೆ ಧಾರಾ ಮಂಟಪಕ್ಕೂ ಇರುವುದರಿಂದ ಅದನ್ನು ವಿಶೇಷವಾಗಿ ಶೃಂಗರಿಸುತ್ತಾರೆ. 'ವ್ಯಕ್ತಿ' 'ಮುಹೂರ್ತ' ಮತ್ತು 'ಸ್ಥಳ' ಒಂದು ನಿರ್ದಿಷ್ಟ ಉದ್ದೇಶಕ್ಕೆ ಬದ್ಧವಾಗಿಯೇ ಸಮಾನವಾದ ಮಹತ್ವವನ್ನು ಪಡೆದು ಒಟ್ಟು ಮದುವೆಯಲ್ಲಿ ಪಾವಿತ್ರ್ಯವನ್ನು ಪಡೆದಿರುತ್ತದೆ.

ಧಾರಾ ಮಂಟಪಕ್ಕೆ ಹೆಣ್ಣು ಮನೆಯೊಳಗಿನಿಂದ ಬಂದು ಪ್ರವೇಶವಾದರೆ, ಗಂಡು ಚಪ್ಪರದ ಹೊರಗಿನಿಂದ ಒಳಗೆ ಬರುತ್ತಾನೆ. ಗಂಡಿನ ಮನೆಯಲ್ಲಿಯೇ ಮದುವೆಯಾಗುವುದಿದ್ದರೂ ಆತ ಮನೆಯನ್ನು ತತ್ಕಾಲಿಕ್ಕೆ ಹೆಣ್ಣಿನ

ಕಡೆಯವರಿಗೆ ಬಿಟ್ಟುಕೊಟ್ಟು, ತಾನು ಹೊರಗಿನಿಂದ ಬರುತ್ತಾನೆ. ಅಂದರೆ ಗಂಡು ಮನೆಯಿಂದ ಹೊರಗಡೆಗೆ ಹೋಗಿ ಹೆಣ್ಣನ್ನು ತರುತ್ತಾನೆ. ಹೀಗೆ ತರುವಾಗ ಎರಡೂ ಕಡೆಯ ಹಿರಿಯರು ಚಪ್ಪರದಡಿಯಲ್ಲಿ ಒಟ್ಟು ಸೇರಿ ವೀಳ್ಯ ಕೊಟ್ಟು ಪರಸ್ಪರ ಒಪ್ಪಂದ ಮಾಡಿಕೊಳ್ಳುತ್ತಾರೆ. ಈ ಒಪ್ಪಂದ ೧೨ ವಿಧದಲ್ಲಿ ನಡೆಯುತ್ತದೆ-ಅವುಗಳೆಂದರೆ

೦೧. ಹೆಣ್ಣು ಮಾತಾಡುವುದು : (೫ ಕವಳಿಗೆ ಎಲೆ ಮತ್ತು ಅಡಿಕೆ)

೦೨. ಬಳಿ ನಿರ್ಣಯ ಮಾಡುವುದು : (೫ ಕವಳಿಗೆ ಎಲೆ ಮತ್ತು ಅಡಿಕೆ)

೦೩. ಹೆಣ್ಣನ್ನು ಒಪ್ಪಿಕೊಳ್ಳುವುದು : (೫ ಕವಳಿಗೆ ಎಲೆ ಮತ್ತು ಅಡಿಕೆ)

೦೪. ಲಗ್ನ ನಿಶ್ಚಯಿಸುವುದು : (೫ ಕವಳಿಗೆ ಎಲೆ ಮತ್ತು ಅಡಿಕೆ)

೦೫. ದೇವರಿಗೆ ಗೌರವ : (೫ ಕವಳಿಗೆ ಎಲೆ ಮತ್ತು ಅಡಿಕೆ)

೦೬. ಹಿರಿಯರಿಗೆ ಗೌರವ : (೫ ಕವಳಿಗೆ ಎಲೆ ಮತ್ತು ಅಡಿಕೆ)

೦೭. ಬಂಧುಗಳಿಗೆ ಗೌರವ : (೫ ಕವಳಿಗೆ ಎಲೆ ಮತ್ತು ಅಡಿಕೆ)

೦೮. ತಂದೆಗೆ ಗೌರವ : (೫ ಕವಳಿಗೆ ಎಲೆ ಮತ್ತು ಅಡಿಕೆ)

೦೯. ತಾಯಿಗೆ ಗೌರವ : (೫ ಕವಳಿಗೆ ಎಲೆ ಮತ್ತು ಅಡಿಕೆ)

೧೦. ಅಚ್ಚುಕಟ್ಟಾಗಿ ಮದುವೆ ಆಗುವುದರ ಬಗ್ಗೆ : (೫ ಕವಳಿಗೆ ಎಲೆ ಮತ್ತು ಅಡಿಕೆ)

೧೧. ಬಣ್ಣ ಬಂಗಾರದ ಗೌರವ : (೫ ಕವಳಿಗೆ ಎಲೆ ಮತ್ತು ಅಡಿಕೆ)

೧೨. ಎಲ್ಲರಿಗೂ ಗೌರವ : (೫ ಕವಳಿಗೆ ಎಲೆ ಮತ್ತು ಅಡಿಕೆ)

ಮದುವೆಯಂಥ ಮುಖ್ಯ ಘಟನೆ ಎಲ್ಲರನ್ನೂ ಒಳಗೊಳ್ಳುವ, ಗೌರವ ಸೂಚಿಸುವ ಕೆಲಸ ಆದ ನಂತರ ಧಾರಾಕಾರ್ಯ ನಡೆಯುತ್ತದೆ. ಧಾರೆಗೋಸ್ಕರ ಮದುಮಗ ಚಪ್ಪರದೊಳಗೆ ಬರುತ್ತಿದ್ದಂತೆ ಮುತ್ತೈದೆಯರು ೫ ಅಕ್ಕಿ ಆರತಿ ಮಾಡುತ್ತಾರೆ. ಅವುಗಳೆಂದರೆ.

೦೧. ತಾಯಿ ಅಕ್ಕಿ ಆರತಿ

೦೨. ಕಟ್ಟೆಮನೆ ಅಕ್ಕಿ ಆರತಿ

೦೩. ಗ್ರಾಮ ಗೌಡನ ಅಕ್ಕಿ ಆರತಿ

೦೪. ಗ್ರಾಮದ ಅಕ್ಕಿ ಆರತಿ ಮತ್ತು

೦೫. ಕುರ್ದಿ ನೀರಿನ ಅಕ್ಕಿ ಆರತಿ

ಅಕ್ಕಿಯ ಆರತಿಯ ಮೂಲಕ ಮದುವೆಯ ಸಮಾರಂಭಕ್ಕೆ ಬಂದ ಎಲ್ಲರನ್ನೂ ಗೌರವಿಸಲಾಗುವುದು. ನೇರವಾದ ನೋಟಕ್ಕೆ ಅದು ಮದುಮಗನಿಗೆ ಸಂದಾಯವಾದರೂ ಪರೋಕ್ಷವಾಗಿ ಅದು ಇಡೀ ಊರನ್ನೇ ಒಳಗೊಳ್ಳುತ್ತದೆ. ಅನಂತರ ಧಾರಾ ಮಂಟಪದೊಳಗೆ ಇರಿಸಲಾದ ಅಕ್ಕಿಯ ಮೇಲೆ ವರನನ್ನು ನಿಲ್ಲಿಸುತ್ತಾರೆ. ವಧುವೂ ಅಕ್ಕಿಯ ಮೇಲೆ ನಿಲ್ಲುತ್ತಾಳೆ ಇಬ್ಬರ ಮಧ್ಯೆ ಪರದೆಯನ್ನು ಹಿಡಿದು ಮುಹೂರ್ತಕ್ಕಾಗಿ ಕಾಯುತ್ತಾರೆ. ನಿಗದಿ ಪಡಿಸಿದ ಸಮಯದಲ್ಲಿ ವರನ ಕೈ ಮೇಲೆ ಮಧುವಿನ ಕೈಯನ್ನು ಇಟ್ಟು, ವಧುನಿನ ತಂದೆ, ನೀರೆರೆದು ಧಾರೆ ಮಾಡಿಕೊಡುತ್ತಾನೆ. ಪ್ರತ್ಯೇಕಿಸಲಾದ ಕಾಲ, ಸ್ಥಳ ಮತ್ತು ಗಂಡು ಹೆಣ್ಣುಗಳು, ಒಂದು ಹಂತದಲ್ಲಿ ಐಕ್ಯರಾಗುವುದಕ್ಕೆ ಮುಖ್ಯವಾದ ಎರಡು ಉದ್ದೇಶಗಳಿವೆ.

ಅ. ಈ ದಂಪತಿಗಳ ಭವಿಷ್ಯದಲ್ಲಿ ಒಳಿತಾಗಲಿ ಎಂಬ ಮಂಗಳ ಕಲ್ಪನೆ. ಇದು ಅಲೌಕಿಕ ಸ್ವರೂಪದಲ್ಲಿಲ್ಲ. ಮುಂದಿನ ದಾಂಪತ್ಯದಲ್ಲಿ ಕೆಡುಕುಂಟಾಗದಿರಲಿ ಎಂಬ ಸದಾಶಯ ಹೊಸ ತಲೆಮಾರಿನ ಜೀವನ ಕ್ರಮಕ್ಕೆ ಸಂಬಂಧಿಸಿದೆ.

ಆ. ಧಾರೆ ಹೊಯ್ಯುವ ಘಟನೆಯ ಅನಂತರ ಮಧೂವವರು ಹೆಂಡತಿ ಮತ್ತು ಗಂಡರಾಗಿ ಮಾರ್ಪಾಡುವುದರಿಂದ ವಂಶಾಭಿವೃದ್ಧಿಗೆ ಅನುಮತಿ ದೊರೆತಂತಾಗುತ್ತದೆ. ಪರೋಕ್ಷವಾಗಿ ಆಸ್ತಿಗೆ ಉತ್ತರಾಧಿಕಾರಿಯ ನೇಮಕಾತಿ ನಡೆದಂತೆಯೂ ಆಗುತ್ತದೆ. ಒಕ್ಕಲಿಗರ ಮೂಲವೃತ್ತಿ ಒಕ್ಕಲುತನ ಅಥವಾ ಅಕ್ಕಿಗೆ ಸಂಬಂಧಿಸಿರುವುದರಿಂದ, ಮೂಹೂರ್ತದಲ್ಲಿ ಅಕ್ಕಿಗೆ ಒಡೆಯನನ್ನು ಅಧಿಕೃತವಾಗಿ ಒಪ್ಪಿಕೊಳ್ಳಲಾಗುತ್ತದೆ. ನೆರೆದವರೆಲ್ಲರೂ ಇದಕ್ಕೆ ಸಾಕ್ಷಿಗಳಾಗುತ್ತಾರೆ. ಇದು ಮೂಹೂರ್ತಕ್ಕೆ ಇರುವ ಆರ್ಥಿಕ ಮತ್ತು ಸಾಮಾಜಿಕ ಆಯಾಮವಾಗಿದೆ.

ಮುಹೂರ್ತದ ಸಂದರ್ಭದಲ್ಲಿ ಅನಪೇಕ್ಷಿತ ಘಟನೆ ಏನಾದರೂ ನಡೆದರೆ ಅದರಿಂದ ದಾಂಪತ್ಯಕ್ಕೆ ಕೇಡು ಸಂಭವಿಸುತ್ತದೆ ಎಂಬ ನಂಬಿಕೆಯಲ್ಲಿಯೂ ಭವಿಷ್ಯದ ಬಗೆಗೆ ತೀವ್ರತಮವಾದ ಕಾಳಜಿ ವ್ಯಕ್ತವಾಗುತ್ತದೆ.

ಮದುವೆಯಾದನಂತರ ವಧೂವರರನ್ನು ಮಂಟಪದೊಳಕ್ಕೆ ಕುಳ್ಳಿರಿಸಿ ಅವರ ಮೈಮೇಲೆ ಅಕ್ಕಿಯನ್ನು ತಳೆಯತ್ತಾರೆ. ಮೊಣಕಾಲಿನ ಗಂಟು, ಮೊಳಕೈಗಂಟು, ಭುಜದ ಸಂದುಗಳಿಗೆ ಅಕ್ಕಿಯನ್ನು ತಾಗಿಸಿ ಕೊನೆಗೆ ನೆತ್ತಿಯ ಮೇಲೆ ಅಕ್ಕಿಯನ್ನು ಚೆಲ್ಲುತ್ತಾರೆ. ಕೆಲವು ಸಂದರ್ಭದಲ್ಲಿ ಅಕ್ಕಿಯನ್ನು ಬಾಯಿಗೆ ಇಟ್ಟು ತಿನ್ನಿಸುವುದೂ ಇದೆ. ಇಲ್ಲಿ ಜೀವಧಾತುವಾಗಿರುವ ಮತ್ತು ಉತ್ಪಾದನಾ ಘಟಕವಾಗಿರುವ ಅಕ್ಕಿಯ ಅನಂತ ಶಕ್ತಿಯನ್ನು ನವದಂಪತಿಗಳಿಗೆ ದಾಟಿಸುವ ಸಾಂಕೇತಿಕ ಅಭಿವ್ಯಕ್ತಿಯಿದೆ. ಇದನ್ನು ಒಟ್ಟು ಮದುವೆಯಲ್ಲಿ ಅಕ್ಕಿಗೆ ಇರುವ ಸ್ಥಾನವನ್ನು ಲಕ್ಷಿಸಿ ಇನ್ನಷ್ಟು ವಿವರಿಸಲು ಸಾಧ್ಯ ಉಂಟು.

ವಿವಾಹದ ಹಿಂದಿನ ದಿನ ವಧುವನ್ನು ಸಿಂಗರಿಸುವಾಗ ಆಕೆ ಉಟ್ಟ ಸೀರೆಯ ಒಂದು ತುದಿಗೆ ಒಂದು ಮುಷ್ಟಿಯಷ್ಟು ಅಕ್ಕಿಯನ್ನು ಕಟ್ಟುತ್ತಾರೆ. ಇದಕ್ಕೆ 'ಮಡಿಲಕ್ಕಿ' ಎಂದು ಹೆಸರು. ಇದನ್ನು ಕಟ್ಟುವಾಗ ಹೆಂಗಸರು ಶೋಭಾನೆ ಪದಗಳನ್ನು ಹಾಡುತ್ತಾರೆ. ಈ ಹಾಡುಗಳು 'ಮಡಿಲಕ್ಕಿ' ಪದಗಳೆಂದೇ ಜನಪ್ರಿಯವಾಗಿವೆ. ಧಾರೆಯಾದ ನಂತರ ವಧುವು ಗಂಡನ ಮನೆಗೆ ಹೋದ ಮೇಲೆ, ಈ ಮಡಿಲಕ್ಕಿಯನ್ನು ಬೇಯಿಸಿ ಗಂಡನಿಗೆ ಉಣ ಬಡಿಸಬೇಕು. ಇಲ್ಲಿ 'ಅಕ್ಕಿ'ಯು ವಿವಾಹದೊಂದಿಗೇ ಅನುಷ್ಠಾನದ ಅರ್ಥ ಪಡೆದಿರುವುದನ್ನು ಗಮನಿಸಬಹುದು. ಧರಾಮಂಟಪಕ್ಕೆ ಮದುಮಕ್ಕಳು ಸುತ್ತು ಬರುವಾಗಲೂ, ಮಂಟಪದ ಮೇಲ್ಬದಿಗೆ ಅಕ್ಕಿಯನ್ನು ತಳೆಯುವಲ್ಲಿಯೂ ಇದೇ ಅರ್ಥವಿದೆ. ಅಕ್ಕಿ ಇಲ್ಲದೆ ಗೌಡರಲ್ಲಿ ಮದುವೆ ಇಲ್ಲ. ಈ ಅರ್ಥದಲ್ಲಿ ಮದುವೆಯು ಅಕ್ಕಿಯ ಒಡೆತನವನ್ನು ಮತ್ತು ಅಕ್ಕಿಯ ಅನಂತ ಶಕ್ತಿಯನ್ನು, ಹೊಸ ತಲೆಮಾರಿಗೆ ವರ್ಗಾಯಿಸುವ ಒಂದು ಪ್ರಕ್ರಿಯೆಯಾಗುತ್ತದೆ.

ಧಾರೆಯಾದ ನಂತರ ಮದುಮಕ್ಕಳು ಮನೆತನದ ಹಿರಿಯರ ಕಾಲು ಸ್ಪರ್ಶಿಸುವ ಮೂಲಕ ಗೌರವ ಸೂಚಿಸಬೇಕು. ಇದಕ್ಕೆ 'ಮರ್ಯಾದೆ ಕೊಡುವುದು' ಎಂದು ಹೆಸರು. ಈ 'ಮರ್ಯಾದೆ ಕೊಡುವ' ಕ್ರಿಯೆಯ ಮೂಲಕ ಪ್ರತ್ಯೇಕಿಸಲ್ಪಟ್ಟು ಮದುವೆಯಾದ ದಂಪತಿಗಳು ಮತ್ತೆ ಸಹಜ ಜೀವನ ಕ್ರಮಕ್ಕೆ ಹಿಂದಿರುಗುತ್ತಾರೆ. ಅಲ್ಲದೆ ಹಿರಿಯ ತಲೆಮಾರಿನ ಮೂಲಕ ಇಳಿದು ಬಂದ ಪರಂಪರೆಯ ಅವಿಭಾಜ್ಯ ಅಂಗವಾಗುತ್ತಾರೆ. 'ಕಾಲು ಹಿಡಿಯುವುದು' ಹಿಂದಿನ ತಲೆಗಳೊಡನೆ ತಾವು ಸೇರಿಕೊಳ್ಳುವುದನ್ನು ಸಂಕೇತಿಸುತ್ತದೆ. ದೇಹದಲ್ಲಿ ಕನಿಷ್ಠವಾದುದು

ಕಾಲು ಮತ್ತು ಗರಿಷ್ಠವಾದುದು ತಲೆ. ಹಿರಿಯ ಕಾಲಿಗೆ ಕಿರಿಯರು ತಮ್ಮ ತಲೆಯನ್ನು ಮುಟ್ಟಿಸುವುದರ ಮೂಲಕ, ಹಿರಿಯರ ಕನಿಷ್ಠಕ್ಕೆ ತಮ್ಮ ಹರಿಷ್ಠವು ಸಮ ಎಂದು ಸೂಚಿಸಲಾಗುತ್ತದೆ. ಈ ಮದುವೆಯ ಹಿಂದಿನ ದಿನ ಮದುಮಗನ ಸಹಿತವಾಗಿ ಮನೆಯ ಹಿರಿಯರು, ಈಗಾಗಲೇ ಸತ್ತು ಹೋಗಿರುವ ೧೬ ತಲೆಮಾರಿನ ಗೌರವ ಸೂಚಿಸುವ ಸಲುವಾಗಿ 'ಕೊಲೆಗಳಿಗೆ ಇಡುವ' ಕಾರ್ಯಕ್ರಮವನ್ನು ನೆರವೇರಿಸುತ್ತಾರೆ. ಈ ಕಾರ್ಯಕ್ರಮವು ಕೂಡಾ ಜೀವಂತ ಇರುವವರು ಈಗಾಗಲೇ ಆಸ್ತಿಯನ್ನು ಆಳಿ ಸತ್ತುಹೋದ ಹಿರಿಯರ ಪರಂಪರೆಯನ್ನು ಮುಂದುವರಿಸುವ ಆಶಯವುಳ್ಳದ್ದಾಗಿದೆ. ಹಿರಿಯರಿಂದ ಮದುವೆಯ ಪರಂಪರೆ ಮೂಲಕ ಹೊಸ ತಲೆಮಾರಿಗೆ ದಾಟಿಬರುತ್ತದೆ. ಮದುವೆ ಇಲ್ಲದೆ ಪರಂಪರೆ ದಾಟಿ ಬರಲು ಸಾಧ್ಯವಿಲ್ಲ. ಇದರ ಜೊತೆಗೆ ಮದುವೆ ಮೂಲಕ ಪರಂಪರೆಯ ಜವಾಬ್ದಾರಿ ಹೊತ್ತ ಮದುಮಗ, ತನ್ನ ಮನೆಯೊಳಕ್ಕೆ ನುಗ್ಗುವ ಮುನ್ನ ತಂಗಿಯ ಮಗನಿಗೆ ತನ್ನ ಮಗಳನ್ನು ಕೊಡುತ್ತೇನೆಂಬ ಭರವಸೆ ಕೊಡುವುದರ ಮೂಲಕ, ಇನ್ನೂ ಹುಟ್ಟದ ಮಗುವಿಗೆ ಭವಿಷ್ಯದ ಬಗ್ಗೆಯೂ ತೀರ್ಮಾನ ತೆಗೆದುಕೊಳ್ಳುತ್ತಾನೆ. ಇದನ್ನು ಒಟ್ಟಿನಿಂದ ಗಮನಿಸಿದರೆ ಗೌಡರ ಮದುವೆ ಕನಿಷ್ಠ ೧೯ ತಲೆಮಾರುಗಳ ಬಗ್ಗೆ ನಿರ್ಣಾಯಕವಾದ ಮಾತುಗಳನ್ನು ಮೌನವಾಗಿಯೇ ಹೇಳುತ್ತದೆ.

**ಧಾರೆಯಾದ ನಂತರ ಎರಡು ಆಚರಣೆಗಳಿವೆ.**

೦೧. ಭೂಮಿಕ್ಕುವ ಶಾಸ್ತ್ರ ೦೨. ನಾಗೋಲಿಶಾಸ್ತ್ರ

ಮೊದಲನೆಯದು 'ಭೂಮಿಗೆ ಇಕ್ಕುವ' ಆಚರಣೆಗೆ ಸಂಬಂಧಿಸಿದೆ. ಇಲ್ಲಿ ವದು ವರರು ಹಾಲು ಮತ್ತು ತುಪ್ಪವನ್ನು ಕೈ ಬೆರಳುಗಳ ಮೂಲಕ ಭೂಮಿಗೆ ಸಿಂಪಡಿಸಬೇಕು. ಈ ಮೂಲಕ ಅಕ್ಕಿಯನ್ನು ಅಥವಾ ಆಹಾರವನ್ನು ಬೆಳೆಯುವ ಭೂಮಿಗೆ ಗೌರವ ಸಲ್ಲಿಸಲಾಗುವುದು. 'ನಾಗೋಲಿ ಶಾಸ್ತ್ರ'ದಲ್ಲಿ ವಧೂವರರು ಪರಸ್ಪರ ಅರಸಿನ ನೀರನ್ನು ಸಿಂಪಡಿಸಿಕೊಂಡು, ಒದ್ದೆಯಾಗಿ ಆನಂತರ ಹಾಲು ಬರುವಂಥ ಹಾಲೆ ಮರದ ಗಿಡವನ್ನು ತಂದು ನೆಲದಲ್ಲಿ ನೆಟ್ಟು ಅದಕ್ಕೆ ಗೊಬ್ಬರವನ್ನು ಹೊತ್ತು ತಂದು ಹಾಕುತ್ತಾರೆ. ವಂಶಾಭಿವೃದ್ಧಿ ಮತ್ತು ಆಹಾರ ಪೂರೈಕೆಯ ಎರಡು ಆಶಯಗಳು ಇಲ್ಲಿ ಅದ್ಭುತವಾಗಿ ಮೇಳವಿಸಿದೆ.

ಮದುವೆಯ ನಿಮಿತ್ತವಾಗಿ ಹಾಕುವ 'ಊಟ' ದಿಂದಾಗಿ ಹೆಣ್ಣಿನ ಕಡೆ ಮತ್ತು ಗಂಡಿನ ಕಡೆಯವರು ಒಂದೇ ಆಹಾರ ಸೇವಿಸುವ ಒಂದಾಗುವ ಭಾವಕ್ಕೆ ಪಕ್ಕಾಗುತ್ತಾರೆ. ಅಂದರೆ ತಮ್ಮಲ್ಲಿದ್ದ ಭಿನ್ನತೆಯನ್ನು ಮರೆತು ಊಟದ ಮಟ್ಟಿಗೆ 'ಕುಟುಂಬ'ದವರಾಗುತ್ತಾರೆ. ಮದುವೆಯಿಂದ ಊಟವನ್ನು ಪ್ರತ್ಯೇಕಿಸಲಾಗದ ಸ್ಥಿತಿ ಇದೆ.

ಮದುವೆಯ ಬಗೆಗಿನ ಈ ನಿಷ್ಠೆ ಗೌಡರಲ್ಲಿ ಬಳಕೆಯಲ್ಲಿರುವ 'ಕೊಲೆ ಮದುವೆ'ಯಲ್ಲಿ ಇನ್ನಷ್ಟು ನಿಚ್ಚಳವಾಗಿ ಅಭಿವ್ಯಕ್ತಿ ಹೊಂದಿದೆ. ಮದುವೆಯಾಗದೆ ಸತ್ತ ಹುಡುಗ, ಮತ್ತು ಮದುವೆಯಾಗದೆ ಸತ್ತ ಹುಡುಗಿ-ಇವರನ್ನು ಆಯ್ದು, ಜೀವಂತ ವ್ಯಕ್ತಿಗಳಿಗೆ ಹೇಗೆ ಮದುವೆ ಮಾಡುತ್ತಾರೋ ಅದೇ ರೀತಿ (ಬಳಿ ಸಂಬಂಧ, ಹುಡುಗಿ ನೋಡುವುದು, ನಿಶ್ಚಯ, ಧಾರ, ಊಟ ಇತ್ಯಾದಿ) ಮದುವೆ ಮಾಡುತ್ತಾರೆ. ಸತ್ತವರನ್ನು ಮೂರ್ತಗೊಳಿಸಲು, ಹಾಲೆಮರದ ಅಥವಾ ಬೈಹುಲ್ಲಿನ, ಅಥವಾ ಬಾಳೆಗಿಡದ ತೊಗಟೆಯಿಂದ ವಧೂವರರ ಆಕೃತಿಯನ್ನು ಮಾಡುತ್ತಾರೆ. ಮನೆ ಅಥವಾ ಹಲಗೆಯಲ್ಲಿ ಚಿತ್ರ ಬರೆಯುವ ಕ್ರಮವೂ ಇದೆ. ಮನೆಯ ಒಳಗೂ ಅಲ್ಲದ ಹೊರಗೂ ಅಲ್ಲದ 'ಸೂರಡಿ' (ಸೂರಿನ ಅಡಿ, ಮಾಡಿನಿಂದ ನೀರು ಬೀಳುವ ಜಾಗ)ಯಲ್ಲಿ ಧಾರೆ ನಡೆಯುವುದೊಂದು ವಿಶೇಷ. ಗೌಡ ಸಂಸ್ಕೃತಿಯಲ್ಲಿ ಮದುವೆಗಿರುವ ಸ್ಥಾನವನ್ನು 'ಕೊಲೆ ಮದುವೆ' ಸಾಂಕೇತಿಕವಾಗಿ ವಿವರಿಸುತ್ತಾರೆ.

ಒಟ್ಟಿನಿಂದ ಗೌಡರ ಮದುವೆ ಕ್ರಮವು ಆ ಸಮುದಾಯದ ಸಾಂಸ್ಕೃತಿಕ ದೃಷ್ಟಿಕೋನವನ್ನು ಸಾಂಕೇತಿಕವಾಗಿ, ಸಮರ್ಥವಾಗಿ ಅಭಿವ್ಯಕ್ತಿಸುತ್ತದೆ.

ಜೀವನಾವರ್ತನದ ಆಚರಣೆಗಳಲ್ಲಿ ಮದುವೆಯ ಅನಂತರ ಬರುವುದು 'ಸೀಮಂತ'. ಹೆಣ್ಣು ಗರ್ಭಿಣಿಯಾದಾಗ ಆಕೆಯನ್ನು ತವರು ಮನೆಗೆ ಕರೆಯಿಸಿಕೊಂಡು ಊಟ-ತಿಂಡಿ ಉಡುಗೆ ಕೊಟ್ಟು, ಗಂಡು ಮಗುವಿಗಾಗಿ ಪ್ರಾರ್ಥಿಸುವುದು ಸೀಮಂತ ಆಚರಣೆಯ ಪ್ರಧಾನ ಆಶಯವಾಗಿದೆ. ಗೌಡರು ಪಿತೃ ಪ್ರಧಾನ ಕುಟುಂಬ ವ್ಯವಸ್ಥೆಗೆ ಸೇರಿರುವುದನ್ನು ನಿರ್ವಿವಾದವಾಗಿ ಸಾಬೀತುಪಡಿಸುವ ಆಚರಣೆ ಇದು. ಜೀವನಾವರ್ತನದ ಆಚರಣೆಗಳಲ್ಲಿ ಕೊನೆಯದು 'ಸಾವು' ಗೌಡರಲ್ಲಿ ಇದು 'ಬೊಜ್ಜ' ಎಂದು ಪ್ರಚಲಿತದಲ್ಲಿದೆ. ಇದರ ಸ್ಥೂಲ ವಿವರ ಇಂತಿದೆ.

ಸಾವನ್ನು ಸಮೀಪಿಸಿದ ವ್ಯಕ್ತಿಯನ್ನು ಮೊದಲು ಜಗಲಿಯಲ್ಲಿ ಮಲಗಿಸುತ್ತಾರೆ. ಆತ ಉಸಿರಾಡಲು ಕಷ್ಟಪಡುತ್ತಿರುವಂತೆ, ಗೊರ ಗೊರ ಸದ್ದು ಮಾಡಿದರೆ ಆಗ ಸೇರಿದ ಜನರು ''ದೊಡ್ಡ ಜೀವ ಹೋಗಿದೆ, ಸಣ್ಣ ಜೀವ ಮಾತ್ರ ಉಳಿದಿದೆ'' ಎನ್ನುತ್ತಾರೆ. ತಕ್ಷಣ ಕುಟುಂಬದ ಸದಸ್ಯರಿಗೆಲ್ಲಾ ಸುದ್ದಿ ಕಳಿಸುತ್ತಾರೆ. ಬಂದವರೆಲ್ಲ ತುಳಸಿಯ ಎಲೆಯಿಂದ ಆತನ ಬಾಯಿಗೆ ನೀರು ಕೊಡುತ್ತಾರೆ. ಇದನ್ನು 'ಬಾಯಿಗೆ ನೀರು ಕೊಡ್ದು' ಎನ್ನುತ್ತಾರೆ. ಬಾಯಿಗೆ ನೀರು ಕೊಡುವ ಮುನ್ನ ವ್ಯಕ್ತಿ ಸತ್ತರೆ, ಆತ ಮುಂದಿನ ದಿನಗಳಲ್ಲಿ ರಣವಾಗಿ ಜನರನ್ನು ಭಯಾನಕವಾಗಿ ಕಾಡುತ್ತಾನೆ ಎಂಬ ನಂಬಿಕೆ ಜನರಲ್ಲಿದೆ.

ವ್ಯಕ್ತಿ ತೀರಿಕೊಂಡರೆ, ಅದನ್ನು ಖಾತ್ರಿಪಡಿಸಿಕೊಂಡ ಅನಂತರ ಇನ್ನೊಮ್ಮೆ ಕುಟುಂಬದ ಸದಸ್ಯರಿಗೆ, ಮೃತನ ಆಪ್ತರಿಗೆ ಮತ್ತು ಊರಿನ ಪ್ರಮುಖರಿಗೆ ಸುದ್ದಿ ತಿಳಿಸಲಾಗುವುದು. ಕೆಲವೆಡೆ ಆಕಾಶಕ್ಕೆ ಮೂರು ಗುಂಡುಗಳನ್ನು ಹಾರಿಸಲಾಗುತ್ತದೆ. ಶವಕ್ಕೆ ಬಿಳಿ ಬಟ್ಟೆ ಹೊದಿಸುತ್ತಾರೆ. ಮತ್ತು ಶವದ ತಲೆಭಾಗದಲ್ಲಿ ಒಂದು ದೊಣ್ಣೆಯನ್ನು ಅಡ್ಡಲಾಗಿ ದಾಟಿಸುತ್ತಾರೆ. ಶವದ ತಲೆ ತೆಂಕು ದಿಕ್ಕಿಗೆ ಇರುವಂತೆ ಮಾಡಿ ಮಲಗಿಸುತ್ತಾರೆ ಮೂಡಣ ದಿಕ್ಕಿಗೆ ಇರುವ ಮನೆಬಾಗಿಲಲ್ಲಿ ಮೃತನ ಆಪ್ತೇಷ್ಟರೆಲ್ಲ ಸೇರುತ್ತಾರೆ. ಶವದ ತಲೆ ಭಾಗದಲ್ಲಿ ಮೇಲ್ಬದಿಗೆ ಮನೆಯ ಛಾವಣಿಯಲ್ಲಿ ತೂತು ಕೊರೆದು ಆ ತೂತಲ್ಲಿ ಒನಕೆಯೊಂದನ್ನು ದಾಟಿಸುತ್ತಾರೆ. ಮೃತನ ಆತ್ಮವು ಛಾವಣಿಯ ತೂತಲ್ಲಿ ಆಕಾಶಕ್ಕೆ ಸಾಗುತ್ತದೆ ಎಂದು ಅವರು ವ್ಯಾಖ್ಯಾನಿಸುತ್ತಾರೆ. ಇಷ್ಟರಲ್ಲಿ ಮನೆತುಂಬ 'ನಾರಾಯಣಾ, ನಾರಾಯಣಾ', ಎಂಬ ಉದ್ಘೋಷ ಕೇಳಿಸುತ್ತದೆ. ಶವಕ್ಕೆ ಪ್ರದಕ್ಷಿಣೆಗೆ ಬರುವವರೂ ನಾರಾಯಣಾ ನಾರಾಯಣಾ ಎನ್ನುತ್ತಿರುತ್ತಾರೆ. ಶವದ ಶಿರೋಭಾಗದಲ್ಲಿ ಒಳ್ಳೆಣ್ಣೆ ದೀಪ ಉರಿಸಿಡುತ್ತಾರೆ. ಕಾಲಿನ ಬದಿಯಲ್ಲಿ ಒಂದು ಮಡಕೆ ಓಡನ್ನು ಇರಿಸಿ ಅದರಲ್ಲಿ ಕೆಂಡ ಹಾಕುತ್ತಾರೆ.

ಎಲ್ಲರೂ ಸೇರಿದ ಅನಂತರ, ಹೆಣವನ್ನು ಮನೆಯ ಹೊರಗಡೆಗೆ ತಂದು, ಹಲಗೆಯೊಂದರ ಮೇಲೆ ಮಲಗಿಸುತ್ತಾರೆ. ಮೃತನ ಅತ್ಯಂತ ಹತ್ತಿರದ ಸಂಬಂಧಿಗಳು ಶವದ ಮೈಗೆ ಎಣ್ಣೆ ಅರಸಿನ ತೀಡುತ್ತಾರೆ. ಅನಂತರ ಬಿಸಿ ನೀರಿಲ್ಲಿ ಸ್ನಾನ ಮಾಡಿಸಿ, ಹೊಸ ಬಟ್ಟೆ ಉಡಿಸುತ್ತಾರೆ. ತಲೆಗೆ ಮುಂಡಾಸು ಕಟ್ಟುತ್ತಾರೆ. ಮದುಮಗನಂತೆ ಸಿಂಗರಿಸುತ್ತಾರೆ. ಈ ಹಂತದಲ್ಲಿ ಇತರರು ತಂದ ಬಿಳಿಬಟ್ಟೆಗಳನ್ನೆಲ್ಲ ಒಂದಾದ ಮೇಲೊಂದರಂತೆ ಶವಕ್ಕೆ ಹೊದಿಸುತ್ತಾರೆ.

ಮೃತನ ಮನೆಯಲ್ಲಿ ಹೀಗೆ ಶವದ ಶೃಂಗಾರ ನಡೆಯುತ್ತಿರುವಾಗ ಇನ್ನೊಂದೆಡೆ, ಮನೆಯ ಪಕ್ಕದ ಗುಡ್ಡದಲ್ಲಿ ಊರವರೆಲ್ಲ ಒಟ್ಟು ಸೇರಿ, ಹೆಣಸುಡಲು ಬೇಕಾದ ಒಣ ಸೌದೆಯನ್ನು ಸಂಗ್ರಹಿಸಿ, ಒಂದೆಡೆ ರಾಶಿಹಾಕುತ್ತಾರೆ. ಈ

ಸೌದೆ ರಾಶಿಯ ಪಕ್ಕದಲ್ಲಿ ಹೆಣಸುಡುತ್ತಾರೆ ಮತ್ತು ಈ ಜಾಗವನ್ನು 'ಸುಡ್ಮುಳಿ' ಎಂದು ಕರೆಯಲಾಗುತ್ತದೆ. ಸೌದೆ ರಾಶಿಯನ್ನು ಸಿದ್ಧ ಪಡಿಸಿದ ಜನರೆಲ್ಲ ಅನಂತರ ಶವದ ಬಳಿ ಬರುತ್ತಾರೆ. ಬಂದು ಬಿದಿರಿನಿಂದ ಮಾಡಿದ 'ಚಟ್ಟ'ವನ್ನು ತಯಾರಿಸುತ್ತಾರೆ. ಅನಂತರ ಶವವನ್ನು ಚಟ್ಟದ ಮೇಲೆ ಮಲಗಿಸುತ್ತಾರೆ. ಆಗ ಶವದ ಹಣೆಯಲ್ಲಿ ಬೆಳ್ಳಿಯ ನಾಣ್ಯಗಳನ್ನು ಎದೆಯಲ್ಲಿ ವೀಳ್ಯದೆಲೆಯನ್ನು ಇರಿಸುತ್ತಾರೆ. ತಲೆಯ ಭಾಗದಲ್ಲಿ ಸ್ವಲ್ಪ ಅಕ್ಕಿಯನ್ನೂ, ಕಾಲಿನ ಭಾಗದಲ್ಲಿ ಬೇಯಿಸಿದ ಭತ್ತವನ್ನು ಇಡುತ್ತಾರೆ. ಅನಂತರ ತೆಂಗಿನ ಕಾಯಿಯೊಂದನ್ನು ಮೆಟ್ಟಲಿಗೆ ಅಪ್ಪಳಿಸಿ ಪುಡಿಮಾಡುತ್ತಾರೆ. ಎಲೆ ಅಡಿಕೆಯನ್ನು ಶವದ ಬಾಯಲ್ಲಿ ಇಡುತ್ತಾರೆ. ತೆಂಗಿನ ಚಿಪ್ಪಿನಲ್ಲಿ ದೀಪ ಉರಿಸಿ, ಚಟ್ಟದ ಮೇಲೆ ಇಡುತ್ತಾರೆ.

ಈಗ ಹೆಣಕ್ಕೆ ಹೊದಿಸಿದ ಬಟ್ಟೆಗಳಲ್ಲಿ ಒಂದನ್ನು ತೆಗೆದು ಅಡ್ಡಲಾಗಿ ಹರಿಯುತ್ತಾರೆ. ಹೀಗೆ ಹರಿದ ತುಂಡನ್ನು ವೃತ್ತಾಕಾರದ ಮಾಲೆಯಂತೆ ಮಾಡಿ ಮೃತನ ಸಂಸ್ಕಾರದ ಹೊಣೆ ಹೊತ್ತವನ ಕೊರಳಿಗೆ (ಸಾಮಾನ್ಯವಾಗಿ ಮೃತನ ಹಿರಿಯ ಮಗ) ಹಾಕುತ್ತಾರೆ. ಇದನ್ನು 'ಕುಂಟಿ ಹರಿಯುವುದು' ಎನ್ನುತ್ತಾರೆ. ಕೆಲವೆಡೆ ಇದನ್ನು 'ದಳ್ಯ ಹಾಕುವುದು' ಎನ್ನುತ್ತಾರೆ. ಅದೇ ಬಟ್ಟೆಯ ತುಂಡುಗಳನ್ನು ಆತ ತನ್ನ ಕೈ ಬೆರಳಿಗೆ, ಕಾಲಿನ ಬೆರಳಿಗೆ ಕಟ್ಟಿಕೊಳ್ಳುತ್ತಾನೆ. ಉಳಿದ ಬಟ್ಟೆಯನ್ನು ಸೊಂಟಕ್ಕೆ ಸುತ್ತಿಕೊಳ್ಳುತ್ತಾನೆ. ಹೀಗೆ ಅಂತ್ಯ ಸಂಸ್ಕಾರದ ಕ್ರಿಯೆಗಳಿಗೆ ಅಧಿಕೃತನಾದ ವ್ಯಕ್ತಿಯನ್ನು 'ಸುದ್ದಕ್ಕೆ' ನಿಂತವ ಇಲ್ಲವೇ 'ಕುಂಟಿ ಹಿಡ್ದಂವ' ಎಂದು ಕರೆಯುತ್ತಾರೆ. ಈ ವ್ಯಕ್ತಿ ಮುಂದೆ ೧೬ ದಿವಸಗಳ ಕಾಲ ಕೆಲವು ಬಗೆಯ ನಿಯಮಗಳಿಗೆ ಒಳಪಟ್ಟು ಬದುಕುತ್ತಾನೆ. ಮುಖ್ಯವಾಗಿ ಆತ ಅಕ್ಕಿಯಿಂದ ಮಾಡಿದ, ಉಪ್ಪು ಹಾಕಿದ ಆಹಾರವನ್ನು ಸೇವಿಸಬಾರದು, ಸಂಭೋಗದಿಂದ ದೂರ ಇರಬೇಕು, ರಾಗಿಯಿಂದ ಮಾಡಿದ ಮುದ್ದೆ ಮಾತ್ರ ಸೇವಿಸಬೇಕು ಇತ್ಯಾದಿ ನಿಯಮಗಳಿರುತ್ತವೆ.

ಚಟ್ಟವನ್ನು 'ಸುಡ್ಮುಳಿ'ಯತ್ತ ಸಾಗಿಸುತ್ತಾರೆ. ಚಟ್ಟದ ಮುಂಭಾಗದಲ್ಲಿ ಅಂದರೆ ಶವದ ಕಥೆ ಇರುವಲ್ಲಿ ಮೃತನ ಕುಟುಂಬದವರು ಚಟ್ಟವನ್ನು ಹಿಡಿಯುತ್ತಾರೆ. ಹಿಂಭಾಗದಲ್ಲಿ ಊರವರು ಹಿಡಿಯುತ್ತಾರೆ. ಶವ ಸಾಗಿಸುವಾಗ ಅರ್ಧಹಾದಿಯಲ್ಲಿ ಚಟ್ಟ ಹೊತ್ತವರು ಹೆಗಲು ಬದಲಾಯಿಸಬೇಕಾದರೆ, ಅಥವಾ ಹೆಣವನ್ನು ಹೆಗಲಿನಿಂದ ಇಳಿಸಬೇಕೆಂದಾದರೆ ಅದಕ್ಕೆ ಅವಕಾಶವಿದೆ. ಹಾಗೆ ಮಾಡಿದಾಗ ಹೆಣ ಇಳಿಸಿದ ಸ್ಥಳದಲ್ಲಿ ಐದು ವೀಳ್ಯದೆಲೆ ಮತ್ತು ಒಂದು ಅಡಿಕೆ ಇರಿಸಿ, ಕೈ ಮುಗಿಯಬೇಕಾಗುತ್ತದೆ. ಸುದ್ದಕ್ಕೆ ನಿಂತವನು ಎರಡು ಮೊಣಕಾಲೂರಿ ಕುಳಿತುಕೊಳ್ಳಬೇಕಾಗುತ್ತದೆ. ಇದಕ್ಕೆ 'ಇರ್ಮುಡಿ ಹಾಕುವುದು' ಎನ್ನುತ್ತಾರೆ.

ಸುಡ್ಮುಳಿಯಲ್ಲಿ ಹೆಣ ಇರಿಸಿ, ಸೌದೆಯಿಂದ ಮುಚ್ಚಿ, ಮೂರು ಸುತ್ತು ಬಂದು ಬೆಂಕಿ ಕೊಡುತ್ತಾರೆ. ಚಟ್ಟವನ್ನೂ ಮುರಿದು ಬೆಂಕಿಗೇ ಹಾಕುತ್ತಾರೆ. ಈ ಬೆಂಕಿಗೆ 'ಕಾಟ' ಎಂದು ಹೆಸರು. ಕಾಟದಲ್ಲಿ ಹೆಣ ಉರಿಯುವಾಗ ಶವದ ಮೈಯನ್ನು ಯಾವ ವಸ್ತುವೂ ಕೂಡಾ ಬಂಧಿಸಬಾರದೆಂಬ ನಂಬಿಕೆ ಇದೆ. ಹಾಗಾಗಿ ಕೈಯಲ್ಲಿ ಉಂಗುರವಿದ್ದರೆ, ಸೊಂಟದಲ್ಲಿ ಉಡುದಾರವಿದ್ದರೆ, ಕಾಲಿನಲ್ಲಿ ಬಳೆ ಇದ್ದರೆ ಅದನ್ನು ತೆಗೆದು ಬಿಡುತ್ತಾರೆ. ಇಲ್ಲವೇ ತುಂಡರಿಸುತ್ತಾರೆ. ಶವವು ಬೆಂಕಿಯಲ್ಲಿ ಉರಿಯುತ್ತಲೇ ಸೇರಿದವರು ಮುಂದಿನ ಕ್ರಿಯೆಗಳ ಬಗ್ಗೆ ಮಾತಾಡುತ್ತಾರೆ. ಮುಂದೆ ಐದು, ಏಳು, ಒಂಭತ್ತು ಅಥವಾ ೧೧ನೇ ದಿವಸ ನಡೆಸಬೇಕಾದ 'ಬೊಜ್ಜದ'ಬಗ್ಗೆ ಅಂತಿಮ ತೀರ್ಮಾನ ತೆಗೆದುಕೊಳ್ಳುತ್ತಾರೆ. ಅನಂತರ ಎಲ್ಲರೂ ಹಿಂದಿರುಗಿ ಬಂದು, ಸ್ನಾನಮಾಡಿ, ತಮ್ಮ ಮನೆಗಳಿಗೆ ತೆರಳುತ್ತಾರೆ. ಮೊದಲ ದಿನದ ಈ ಕೆಲಸಗಳನ್ನು 'ಕಾಟಕ್ಕಿಸುದು' ಎನ್ನುತ್ತಾರೆ. ಇದರ ಮರುದಿನ 'ಕೊಳ್ಳಿ ಕೊಡುವುದು'

ನಡೆಯುತ್ತದೆ. ಈ ದಿವಸ ಮೃತನ ಕುಟುಂಬದಲ್ಲಿನ ಕೆಲವರು ತಂಬಿಗೆ ಹಾಲು ಮತ್ತು ಗಂಡಿತುಪ್ಪ ತೆಗೆದುಕೊಂಡು ಸುಡ್ಕುಳಿಯ ಹತ್ತಿರ ಹೋಗುತ್ತಾರೆ. ಹಾಲು ಮತ್ತು ತುಪ್ಪವನ್ನು ಕಾಟಕ್ಕೆ ಸುರಿದು, ಹೊತ್ತಿ ಉರಿಯದೇ ಉಳಿದ ಸೌದೆ ಮತ್ತು ಬಸ್ಮವಾಗದೆ ಉಳಿದಿರಬಹುದಾದ ಶವದ ಭಾಗಗಳನ್ನು ಒಟ್ಟು ಸೇರಿಸಿ ಅದಕ್ಕೆ ಪುನಃ ಬೆಂಕಿ ಕೊಡುತ್ತಾರೆ ಮತ್ತೆ ಸ್ನಾನ ಮಾಡಿ ತಮ್ಮ ಮನೆಗಳಿಗೆ ತೆರಳುತ್ತಾರೆ. ಇದಕ್ಕೆ 'ಕೊಳ್ಳಿಕೊಡುವುದು' ಎಂಬ ಹೆಸರಿದೆ ಮುಂದೆ 'ಮೂರರ ಸುದ್ದ' ನಡೆಯುತ್ತದೆ. ಆ ದಿವಸ ಮೃತನ ಮನೆಗೆ ಕ್ಷೌರಿಕ ಬರುತ್ತಾನೆ. ಆತನ ಮೃತನ ಕುಟುಂಬದವರ ತಲೆಯನ್ನು ಮತ್ತು ಮೀಸೆಯನ್ನು ನುಣ್ಣಗೆ ಬೋಳಿಸುತ್ತಾನೆ. ಇದನ್ನು 'ತಲೆ ಪಳಿ ತೆಗೆದು' ಎನ್ನುತ್ತಾರೆ. ಆ ದಿವಸ ಮಡಿವಾಳನೂ ಬರುತ್ತಾನೆ, ಮಡಿವಾಳನು ಎಳನೀರನ್ನು ಚಿಮುಕಿಸಿ 'ಸುಡ್ಕುಳಿ'ಯನ್ನು ಶುದ್ಧಗೊಳಿಸುತ್ತಾನೆ. ಅನಂತರ ಆತ ಶವವನ್ನು ಸುಟ್ಟ ಸ್ಥಳದಲ್ಲಿರುವ ಬೂದಿಯನ್ನು ತಲೆಯ ಭಾಗ, ನಡುವಿನ ಭಾಗ ಮತ್ತು ಕಾಲಿನ ಭಾಗ ಎಂದು ಮೂರು ಭಾಗ ಮಾಡುತ್ತಾನೆ. ಕಾಟದ ನಡುವೆ ಸುಮಾರು ಎರಡು ಅಡಿ ಹೊಂಡ ತೆಗೆದು, ಅದರಲ್ಲಿ ಮೊದಲು ಕಾಲಿನ ಕಡೆಯ ಬೂದಿಯನ್ನೂ ಅನಂತರ ನಡುವಿನ ಬೂದಿಯನ್ನೂ, ಕೊನೆಗೆ ತಲೆಯಭಾಗದ ಬೂದಿಯನ್ನೂ ತುಂಬುತ್ತಾನೆ. ಉಳಿದ ಬೂದಿಯನ್ನೂ ಹೊಂಡದ ಮೇಲ್ಬದಿಯಲ್ಲಿ ಮಡಕೆಯಾಕಾರದಲ್ಲಿ ಮೆತ್ತುತ್ತಾನೆ. ಈಗ ಈ ಜಾಗವನ್ನು 'ದೂಪೆ' ಎಂದು ಕರೆಯುತ್ತಾರೆ. ದೂಪೆಯ ದಕ್ಷಿಣ ಭಾಗದಲ್ಲಿ ಒಂದೆರಡು ಪುಟ್ಟ ಮೆಟ್ಟಿಲುಗಳನ್ನೂ ಮಾಡುತ್ತಾನೆ. ಕೊನೆಯಲ್ಲಿ ದೂಪೆಯ ಸುತ್ತ ಸರಳಿ ಗಿಡದ ಒಂದೆರಡು ಗಿಡಗಳನ್ನು ಅಥವಾ ನೆಕ್ಕಿ ಮರದ ಗಿಡಗಳನ್ನು ನೆಟ್ಟು ಮಾಡಿವಾಳ ಹಿಂದಿರುಗುತ್ತಾನೆ. ಜನರೂ ಹಿಂದಿರುಗುತ್ತಾರೆ. ಇದನ್ನು 'ಮೂರರ ಸುದ್ದ' ಎಂದು ಕರೆಯುತ್ತಾರೆ.

ವ್ಯಕ್ತಿಯು ಮೃತಪಟ್ಟ ಒಂಭತ್ತನೇ ದಿನದಂದು ಸಾಮಾನ್ಯವಾಗಿ ಬೊಜ್ಜ ಆಚರಿಸುತ್ತಾರೆ. ಅಂತ್ಯ ಸಂಸ್ಕಾರದ ವಿಧಿಗಳಲ್ಲಿ ಇದುವೇ ಅತ್ಯಂತ ಮುಖ್ಯವಾದ ಆಚರಣೆಯಾಗಿದೆ.

ಬೊಜ್ಜದ ಹಿಂದಿನ ದಿನ ರಾತ್ರಿ ಅಂದರೆ ಸಾವಿನ ಎಂಟನೇ ದಿವಸದಂದು ರಾತ್ರಿ 'ಮಿಂಚಿಲೂಟ' ಎಂಬ ಕಾರ್ಯಕ್ರಮವಿದೆ. ಆ ದಿವಸ ಕುಟುಂಬದವರೆಲ್ಲ ಸಹಭೋಜನ ಒಂದರಲ್ಲಿ ಭಾಗವಹಿಸಿ, 'ನೀರ್ ನೆರಳಿಗೆ ಇಸುದು' ಎಂಬ ಕಾರ್ಯಕ್ರಮವೊಂದರಲ್ಲಿ ತಮ್ಮನ್ನು ತೊಡಗಿಸಿಕೊಳ್ಳುತ್ತಾರೆ. ಈ ಕಾರ್ಯಕ್ರಮಕ್ಕೆ ಎಳನೀರು, ಅರಸಿನದ ನೀರು, ಬೆಲ್ಲದ ನೀರು, ಕಳ್ಳು, ನೂಲು, ಬೂದಿ, ದೀಪ ಒಂದು ಚೆಂಬು ನೀರು ಮತ್ತು ಮಸಿ ತುಂಡು ಬೇಕಾಗುತ್ತದೆ.

ವ್ಯಕ್ತಿಯ ಹೆಣವನ್ನು ಮಲಗಿಸಿದ ಜಾಗದಲ್ಲಿ ಮೊದಲು ತೆಳುವಾಗಿ ಬೂದಿಯನ್ನು ಹರಡುತ್ತಾರೆ. ಶವದ ತಲೆ ಇದ್ದ ಜಾಗದಲ್ಲಿ ನೀರು ಕಾಣುವಂತೆ ಕೆತ್ತವಾದ ಎಳನೀರೊಂದನ್ನು ಇರಿಸುತ್ತಾರೆ. ಕಾಲನ ಜಾಗದಲ್ಲಿ ಒಂದು ಚೆಂಬು ನೀರು ಇರಿಸುತ್ತಾರೆ. ಅನಂತರ ಉದ್ದವಾದ ಒಂದು ನೂಲಿನ ತುದಿಗೆ ಅರಸಿನ ತುಂಡನ್ನು ಕಟ್ಟಿ, ಆ ಅರಸಿನದ ತುದಿಯನ್ನು ಎಳನೀರಿಗೆ ತಾಗುವಂತೆ ಇರಿಸುತ್ತಾರೆ. ಮಸಿ ತುಂಡನ್ನು ಕೂಡಾಹೀಗೆಯೇ ಕಟ್ಟಿ ಚೆಂಬಿನಲ್ಲಿರುವ ನೀರಿಗೆ ತಾಗಿಸಿ ಕಟ್ಟುತ್ತಾರೆ. ಅನಂತರ ಒಂದು ಕುಂಬಳಕಾಯನ್ನು ಕಡಿದು, ತುಂಡರಿಸಿ, ಅದಕ್ಕೆ ಕೈಮುಗಿದು ಎಲ್ಲರೂ ಹಿಂದಿರುಗುತ್ತಾರೆ. ಸುದ್ದಕ್ಕೆ ನಿಂತಾತ ಮಾತ್ರ ತಲೆಗೆ ಬಿಳಿ ಬಟ್ಟೆ ಹೊದ್ದುಕೊಂಡು, ಒಂಟಿಕಾಲಲ್ಲಿ ನಿಂತು, ಮೃತನನ್ನು ಉದ್ದೇಶಿಸಿ "ನೀರ್ ನೆರ್ಲಿಗೆ ಇಸೊಳೊ, ಬಂದ್ ಹೋಗಿ" ಎಂದು ಮೊದಲ ಸಲ ಕರೆಯುತ್ತಾನೆ. ಇದನ್ನು 'ಮುರ್ಯೊಹೊರ್ದು' ಎನ್ನುತ್ತಾರೆ. ಆನಂತರ ಬಂದು ನೋಡಿದಾಗ ಎಳನೀರು

ಮತ್ತು ಚೆಂಬಿನಲ್ಲಿ ಇಟ್ಟಿರುವ ನೀರು ಕಡಿಮೆಯಾಗುವುದನ್ನು ಜನರು ಗುರುತಿಸುತ್ತಾರೆ. ನೀರಿಗೆ ತಾಗಿ ಕೊಂಡಿದ್ದ ಅರಸಿನದ ಕೊಂಬು ಮತ್ತು ಮಸಿ ತುಂಡು ಈಗ ನೀರಿನಿಂದ ಬೇರ್ಪಟ್ಟಿದೆ ಎನ್ನಲಾಗುತ್ತದೆ. ಮೃತನ ಆತ್ಮ ಬಂದು ನೀರನ್ನು ಕುಡಿದಿರುವುದೇ ಇದಕ್ಕೆ ಕಾರಣ ಎಂಬ ವಿವರಣೆಯನ್ನು ನೀಡಲಾಗುತ್ತದೆ.

ಅನಂತರ ಸೂರ್ಯೋದಯವಾಗುತ್ತಲೇ ಮೃತನ ಕುಟುಂಬಸ್ಥರು 'ಸುದ್ಕುಳಿ' ಜಾಗಕ್ಕೆ ಹೋಗುತ್ತಾರೆ. ಅಲ್ಲಿರುವ ದೂಪೆಯ ಸುತ್ತ ಬಿದಿರಿನ ಬೇಲಿಯನ್ನು ಕಟ್ಟುತ್ತಾರೆ. ಇದಕ್ಕೆ 'ಕೋಟೆ' ಎಂದು ಹೆಸರು. ಕೋಟೆಯ ದಕ್ಷಿಣ ಮತ್ತು ಉತ್ತರ ದಿಕ್ಕಿಗೆ ಎರಡು ಪುಟ್ಟ ಬಾಗಿಲುಗಳನ್ನು ರಚಿಸಿ, ಆ ಬಾಗಿಲುಗಳಿಗೆ ಬಾಳೆಯನ್ನು ಕಟ್ಟುತ್ತಾರೆ. ಅನಂತರ ದೂಪಿಯ ಸುತ್ತ ಮಾವಿನೆಲೆಯ ತೋರಣವನ್ನು ಕಟ್ಟುತ್ತಾರೆ. ಇಷ್ಟಾಗುವಾಗ ಮನೆಯಲ್ಲಿ 'ಕೂಳಿಗೆ ಇಡುವ' ಕಾರ್ಯಕ್ರಮ ನಡೆಯುತ್ತದೆ. ಇದು ಮನೆಯ ಜಗಲಿಯಲ್ಲಿ ನಡೆಯುವ ಕಾರ್ಯಕ್ರಮವಾಗಿದೆ. ಜಗಲಿಯಲ್ಲಿ ಮಣೆಯೊಂದನ್ನು ಇರಿಸಿ, ಅದಕ್ಕೆ ಬಿಳಿ ಬಟ್ಟೆ ಹೊದಿಸಿ ಅದರ ಮೇಲೆ ಸುದ್ದಕ್ಕೆ ನಿಂತಾತನನ್ನು ಕುಳ್ಳಿರಿಸುತ್ತಾರೆ. ಆತನ ಎಡಬದಿಗೆ ದೀಪವೊಂದನ್ನು ಉರಿಸಿಡುತ್ತಾರೆ. ಅನಂತರ ಊರ ಪ್ರಮುಖರು ಆತನ ತಲೆಗೆ ಅಕ್ಕಿ ತಳಿಯುವರು. ಹೀಗೆ ತಳಿದ ಅಕ್ಕಿಯನ್ನು ಸಂಗ್ರಹಿಸಿ, ಅನ್ನ ಮಾಡುತ್ತಾರೆ. ಆ ಅನ್ನವನ್ನು ಬಿಳಿ ಬಟ್ಟೆಯಲ್ಲಿ ಗಂಡು ಕಟ್ಟಿಕೊಂಡು, ಸುದ್ದಕ್ಕೆ ನಿಂತಾತನು ದೂಪೆಯ ಬಳಿಗೆ ಬರುತ್ತಾನೆ. ಬಂದು ದೂಪೆಗೆ ಅಪ್ರದಕ್ಷಿಣಾಕಾರದಲ್ಲಿ ಮೂರು ಸುತ್ತು ತಿರುಗಿ, ದೂಪೆಯ ದಕ್ಷಿಣ ದಿಕ್ಕಿನಲ್ಲಿ 'ಇರ್ಮುಡಿ' ಹಾಕಿ ಕುಳಿತುಕೊಳ್ಳುತ್ತಾನೆ. ಅನಂತರ ತಾವು ತಂದ ತಿಂಡಿಗಳನ್ನೆಲ್ಲ ದೂಪೆಯ ಇದಿರಿಗೆ ಇಡುತ್ತಾರೆ. ಇಟ್ಟು ಕೈಮುಗಿದಾಗ ಬಂದವರಲ್ಲಿ ಒಬ್ಬಾತ ಹೀಗೆ ಹೇಳುತ್ತಾನೆ.

''ದೇವ್ರ್ ಹೆಂಗೆ ಬರ್ದನೋ ಹಾಂಗೆ ಬೊದ್ಕಿದೆ. ಮನಗೆ ಒಳ್ಳೆದ್ ಮಾಡ್ದೆ. ಕುಟುಮದವರ ಒಳ್ಳೆದ್ ಲಿ ನೊಡ್ಕಂಡೆ, ಬೇಕಾದ ಬೊದ್ಕ್ ಮಾಡಿ, ಮಕ್ಕಳಿಗೆ, ಮರಿಗಳಿಗೆ ಉಳಿಸಿದೆ. ಎಲ್ಲವೂ ಸೈ ಎಂದು ಹೇಳುವಂಗೆ ಬಾಳ್ವೆ ಮಾಡ್ದೆ. ಇಂದಿಗೆ ನಿಂಗೆ ಈ ಮಣ್ಣಿನ ಋಣ ತೀರ್ತ್, ನಿನ್ನ ಹೆಸರ್ಲಿ ನಾವು ನಾಕ್ ಜನ ಇಂದ್ ಇಲ್ಲಿಗೆ ಬಂದೊಳೊ. ನಾನು ತಂದದರ ನೀವು ತಕೊಂಕು, ಸ್ವರ್ಗಕ್ಕೆ ಹೋಗಿ''. ಅನಂತರ ಎಲ್ಲರೂ ದೂಪೆಗೆ ಕೈಮುಗಿದು ಮನೆಗೆ ಹಿಂದಿರುಗುತ್ತಾರೆ. ಹಿಂದೆ ಬರುವಾಗ ಯಾರೂ ದೂಪೆಯ ಕಡೆ ತಿರುಗಿ ನೋಡಬಾರದೆಂಬ ನಿಷೇಧವಿದೆ. ಮನೆ ಪ್ರವೇಶಿಸುವ ಮುನ್ನ ಮಡಿವಾಳ ಇವರನ್ನು ಶುದ್ಧಗೊಳಿಸುತ್ತಾನೆ. ಅನಂತರ ಮನೆಯೊಳಗೆ ಅಡುಗೆ ಮನೆಯಲ್ಲಿ ಇರುವ ಕನ್ನಿಕಂಬದ ಬುಡದಲ್ಲಿ. 'ಕೊಲೆಗಿಡುವ' ಶಾಸ್ತ್ರ ನಡೆಯುತ್ತದೆ. ಕನ್ನಿಕಂಬದ ಇದಿರಲ್ಲಿ ೧೬ ಬಾಳೆ ಎಲೆಗಳನ್ನು ಹಾಸಿ, ಅದಕ್ಕೆ ರೊಟ್ಟಿ, ಕೋಳಿ ಮಾಂಸ ಹಾಕಿ ಕೈಮುಗಿದು ಮೃತನನ್ನೂ ಕರೆದು ಆಹಾರ ಸ್ವೀಕರಿಸಲು ಕೇಳಿಕೊಳ್ಳುವರು.

ಅನಂತರ ಎಲ್ಲೂ 'ಬೊಜ್ಜದೂಟ' ಮಾಡುತ್ತಾರೆ. ಸಾಮಾನ್ಯವಾಗಿ ಈ ಊಟಕ್ಕೆ ಬರುವವರು ಬರುವಾಗಲೇ 'ಸರಕು' ತರುತ್ತಾರೆ. ಸರಕಿನಲ್ಲಿ ಅಕ್ಕಿ ತರಕಾರಿ ಮತ್ತು ಕೆಲವು ಬಗೆಯ ತಿಂಡಿ ಇರುತ್ತದೆ. 'ಸರಕ'ನ್ನು ಬೊಜ್ಜದೂಟಕ್ಕೆ ಬಳಸುತ್ತಾರೆ. ಈ ಬೊಜ್ಜದೂಟದಲ್ಲಿ ಕಡುಬು ಮತ್ತು ಬಾಳೆ ಕಾಯಿಯಿಂದ ಮಾಡಿದ ಪಲ್ಯ ಕಡ್ಡಾಯವಾಗಿ ಇರಲೇ ಬೇಕು. ಉಳಿದಂತೆ ಅವರವರ ಆರ್ಥಿಕ ಸ್ಥಿತಿಗೆ ಅನುಗುಣವಾದ ಊಟ ಸಿದ್ಧಪಡಿಸುತ್ತಾರೆ. ಕುಟುಂಬದೊಳಗೆ ಮನಸ್ತಾಪವಿದ್ದರೆ, ಅದು ಈ ದಿನ ಇತ್ಯರ್ಥವಾಗುತ್ತದೆ.

ವ್ಯಕ್ತಿಯು ಮೃತಪಟ್ಟ ಹದಿನಾರನೇ ದಿವಸದಂದು 'ಹದಿನಾರರ ಕೊಲೆ' ಎಂಬ ಕಾರ್ಯಕ್ರಮ ನಡೆಯುತ್ತದೆ. ಸತ್ತವನು 'ಕೊಲೆ'ಯರೂಪದಲ್ಲಿ ಇರುತ್ತಾನೆಂಬ ನಂಬಿಕೆ ಗೌಡರಲ್ಲಿದೆ. ಅಡುಗೆ ಮನೆಯಲ್ಲಿ ಮತ್ತೆ ಹಿಂದಿನಂತೆ ಕನ್ನಿಕಂಬದ ಇದುರು ೧೬ ಎಲೆ ಹಾಕುತ್ತಾರೆ. ಒಂದು ಎಲೆಯನ್ನು ಇನ್ನೊಂದು ಸಾಲಿನಲ್ಲಿ ಇರಿಸುತ್ತಾರೆ. ಎಲ್ಲದಕ್ಕೂ ರೊಟ್ಟಿ ಕೋಳಿ ಅಥವಾ ಹಂದಿಮಾಂಸ, ಹಾಕಿ ಕೈ ಮುಗಿಯುತ್ತಾರೆ. ಆಹಾರವನ್ನು ಸ್ವೀಕರಿಸಲು 'ಕೊಲೆ'ಯನ್ನು ಆಹ್ವಾನಿಸುತ್ತಾರೆ. ಸ್ವಲ್ಪ ಹೊತ್ತು ಎಲ್ಲರೂ ಬಾಳೆ ಎಲೆಗೆ ಬೆನ್ನು ಹಾಕಿ ನಿಲ್ಲುತ್ತಾರೆ. ಅನಂತರ ಎಲೆಗೆ ಇನ್ನೊಮ್ಮೆ ಕೈ ಮುಗಿದು, ಇನ್ನೊಂದು ಸಾಲಿನಲ್ಲಿ ಇರಿಸಲಾದ ಬಾಳೆ ಎಲೆಯನ್ನು ೧೬ ಎಲೆಗಳೊಂದಿಗೆ ಜೋಡಿಸಿ, ೧೬ ಎಲೆಗಳಿಂದ ಒಂದನ್ನು ತೆಗೆದು ಬಿಡುತ್ತಾರೆ. ಅನಂತರ ಎಲ್ಲರೂ ಸಾಮೂಹಿಕವಾಗಿ ಮಾಂಸದೂಟ ಮಾಡುತ್ತಾರೆ. ಬಹುಮಟ್ಟಿಗೆ ಇದು ಮೃತನಿಗೆ ಮಾಡುವ ಕೊನೆಯ ಆಚರಣೆ. ದೀಪಾವಳಿಯಂದು ಅಡುಗೆ ಕೋಣೆಯಲ್ಲಿ ಕನ್ನಿಕಂಬದ ಬುಡದಲ್ಲಿ ಎಲೆಹಾಕಿ ಅದಕ್ಕೆ ಅರಳು ಹಾಕಿ, ಬಾಳೆ ಹಣ್ಣು ಇರಿಸಿ, ದೀಪ ಉರಿಸಿ, ಕುಟುಂಬ ಸಮಸ್ತರೆಲ್ಲ ಕೈಮುಗಿಯುತ್ತಾರೆ. ಅನಂತರ ಮೃತನ ಹೆಸರಲ್ಲಿ ಎಲ್ಲರೂ ಊಟ ಮಾಡುತ್ತಾರೆ.

ಹೀಗೆ ಸಾವನ್ನು ಗೌಡರು ಅತ್ಯಂತ ಮುಖ್ಯವಾದ ಘಟ್ಟವೆಂದು ಭಾವಿಸುತ್ತಾರೆ. ಅದಕ್ಕೆ ಸಂಬಂಧಿಸಿದ ಎಲ್ಲ ಕ್ರಿಯೆಗಳನ್ನು ಅತ್ಯಂತ ಜಾಗ್ರತೆಯಿಂದ ನಿರ್ವಹಿಸುತ್ತಾರೆ. ಮೃತನು 'ಕೊಲೆ'ಯ ರೂಪದಲ್ಲಿರುತ್ತ ಮನೆ ಮಂದಿಗಳನ್ನು ರಕ್ಷಿಸುತ್ತಿರುತ್ತಾನೆ ಎಂದು ಅವರು ನಂಬುತ್ತಾರೆ. ಈ ಕಾರಣದಿಂದ ಮನೆಯಲ್ಲಿ ನಡೆಯುವ ವಿಶೇಷ ಭೋಜನದ ಸಂದರ್ಭಗಳಲ್ಲಿ, ಬಾಳೆ ಎಲೆಯಲ್ಲಿ 'ಕೊಲೆ'ಗೆ ಆಹಾರವಿಡುವ ಕ್ರಮವಿದೆ. 'ಕೊಲೆ'ಗೆ ಏನಾದರೂ ಅಸಮಾಧಾನವಾದರೆ, ಅದು ತನಗೆ ಪ್ರಿಯರಾದವರ ಮೈಮೇಲೆ ಉಗುರಿನ ಗುರುತು ಮಾಡಿ ಅಸಮಾಧಾವನ್ನು ಪ್ರಕಟಿಸುತ್ತದೆ ಎಂದೂ ಜನ ಭಾವಿಸುತ್ತಾರೆ. ಮದುವೆಯಾಗದೆ ಸತ್ತವರು, ಕೊಲೆಯಾಗಿ ಮಾರ್ಪಟ್ಟ ಅನಂತರವೂ ತಮ್ಮ ಮದುವೆಗಾಗಿ ಜನರನ್ನು ಪೀಡಿಸುವುದಿದೆ. ಆಗ ಜನರು 'ಕೊಲೆ ಮದುವೆ' ಮಾಡುತ್ತಾರೆ. ಮೃತ ಪಟ್ಟ ವ್ಯಕ್ತಿಯನ್ನು ನಿಜವಾದ ಅರ್ಥದಲ್ಲಿ ಗೌಡರು ಕಳೆದುಕೊಂಡಿದ್ದರೂ, ಕನಿಷ್ಠ ೧೬ ದಿವಸಗಳ ಕಾಲ ಮೃತನು ಕೊಲೆಯ ರೂಪದಲ್ಲಿ ತಮ್ಮೊಡನೆಯೇ ಇರುತ್ತಾನೆಂದು ಭಾವಿಸುತ್ತಾರೆ. ಹಾಗೆ ಭಾವಿಸುವುದರಿಂದಲೇ ಸತ್ತುಹೋದ ವ್ಯಕ್ತಿಗೆ, ಸಾಯದಿರುವ ವ್ಯಕ್ತಿಗೆ ಏನೆಲ್ಲ ಬೇಕೋ ಅದನ್ನೆಲ್ಲ ಒದಗಿಸುತ್ತಿರುತ್ತಾರೆ. ನೀರು, ಆಹಾರ ಮತ್ತು ಸ್ಥಳವೊಂದನ್ನು ಮೃತನಿಗೂ ಕೊಡಲಾಗುವುದು. "ನೀರ್ ನೆರ್ಲಿಗೆ ಇಸುದು" ಎಂಬ ಕಾರ್ಯಕ್ರಮದಲ್ಲಿ ಮೃತನು ನೀರು ಕುಡಿಯುವುದನ್ನು ಜನರು ಖಾತ್ರಿ ಪಡಿಸಿಕೊಳ್ಳುತ್ತಾರೆ. ಸುಡ್ಮುಳಿ ಮತ್ತು ಬೋಜ್ಜದೂಟದಲ್ಲಿ ಆಹ್ವಾನವನ್ನಿಟ್ಟು, ಅದನ್ನು ಸೇವಿಸಲು ಆಹ್ವಾನಿಸುತ್ತಾರೆ. ಮೃತನ ಶವವನ್ನಿರಿಸಿದ ಜಾಗದಲ್ಲಿ ಬೂದಿ ಹರಡಿ, ಅದರ್ಲಿ ಮೃತನ ಹೆಜ್ಜೆ ಗುರುತುಗಳನ್ನು ಕಾಣುತ್ತಾರೆ. ಮೃತನು ಮನೆಯೊಳಗೆ ನಡೆದಾಡಿದ ಸಪ್ಪಳವನ್ನು, ಸ್ನಾನಮಾಡಿದ ಸಪ್ಪಳವನ್ನು ಮನೆಯವರು ಕೇಳಿಸಿಕೊಂಡು ತಮ್ಮ ಆಪ್ತರಿಗೆ ಅದನ್ನು ವರದಿ ಮಾಡುತ್ತಾರೆ. ಹೀಗೆ ಮೃತನು ತೀರಿಕೊಂಡ ಸ್ವಲ್ಪದಿನದಿಂದ ೧೬ ದಿವಸಗಳವರೆಗೆ ಮೃತನಿಗೆ ಮನೆಯೊಳಗಡೆ ಸ್ಥಾನ ಕಲ್ಪಿಸಲಾಗಿದೆ.

'ಹದಿನಾರರ ಕೊಲೆ'ಯಂದು ನಡೆಸುವ ಕ್ರಮಗಳನ್ನು ಈಗಾಗಲೇ ವಿವರಿಸಲಾಗಿದೆ. ಆದಿನ ಒಟ್ಟು ೧೬ ಎಲೆಗಳನ್ನು ಒಂದು ಸಾಲಲ್ಲಿ ಇರಿಸಿ, ಇನ್ನೊಂದು ಎಲೆಯನ್ನು ಬೇರೆ ಸಾಲಲ್ಲಿ ಇರಿಸುತ್ತಾರೆ. ಈ ಎಲೆಗಳಲ್ಲಿ ಆಹಾರ ಇರಿಸಿ, ಕೈಮುಗಿದು, ಕೊನೆಯಲ್ಲಿ ೧೬ರಿಂದ ಒಂದು ಎಲೆಯನ್ನು ಹೊರತೆಗೆಯುತ್ತಾರೆ ಮತ್ತು ಬೇರೆ

ಸಾಲಲ್ಲಿ ಇರಿಸಿದ ಎಲೆಯನ್ನು ಮೇಲಿನ ಸಾಲಿಗೆ ಸೇರಿಸಿ, ೧೬ ಎಲೆಗಳನ್ನು ಉಳಿಸಿಕೊಳ್ಳುತ್ತಾರೆ. ಇದಕ್ಕಾಗಿಯೇ ಈ ಕಾರ್ಯಕ್ರಮವನ್ನು 'ಹದ್ನಾರಕ್ಕೆ ಸೇರ್ಸುದು' ಎಂದೂ ಕರೆಯುತ್ತಾರೆ. ಮತ್ತೆ ಕೆಲವರು ಇದನ್ನು 'ಕಾರ್ನೂರಿಗೆ ಇಸುದು' ಎನ್ನುತ್ತಾರೆ. 'ಕಾರ್ನೂರು' ಎಂದರೆ 'ಕಾರಣವರ್' ಎಂದೇ ಅರ್ಥ. ಗತಿಸಿದ ಹಿರಿಯನನ್ನು ಈ ಪದ ಸಂಕೇತಿಸುತ್ತದೆ. ಈ ಒಟ್ಟು ಚಟುವಟಿಕೆಗಳಲ್ಲಿ ಮೊದಲನೇ ಸಾಲಲ್ಲಿ ಇರುವ ೧೬ ಎಲೆಗಳು ಈಗಾಗಲೇ ಗತಿಸಿದ ೧೬ ಜನ ಹಿರಿಯರನ್ನು ಸಂಕೇತಿಸಿದರೆ, ಬೇರೆ ಸಾಲಿನಲ್ಲಿರುವ ಎಲೆಯು ಈಗ ಸತ್ತಿರುವ ವ್ಯಕ್ತಿಯನ್ನು ಸಂಕೇತಿಸುತ್ತದೆ. ಆಚರಣೆಯಲ್ಲಿ ಈಗ ಸತ್ತಿರುವವರನ್ನು ಹದಿನಾರು ಹಿರಿಯರೊಂದಿಗೆ ಸೇರಿಸಿಬಿಡಲಾಗುತ್ತದೆ. ಆಗ ಒಟ್ಟು ಸಂಖ್ಯೆ ಹದಿನೇಳಾಗುತ್ತದೆ. ತಕ್ಷಣ ಹಿರಿಯರನ್ನು ಸಂಕೇತಿಸುವ ಎಲೆಯೊಂದನ್ನು ಹೊರತೆಗೆದು ಒಟ್ಟು ಹದಿನಾರು ಎಲೆಗಳನ್ನು ಉಳಿಸಿ, ಕೈಮುಗಿಯಲಾಗುತ್ತದೆ.

ಅಂದರೆ ಸತ್ತವರಲ್ಲಿ ಒಟ್ಟು ಹದಿನಾರು ಜನರಿಗೆ ಮಾತ್ರ ಉಳಿಯಲು ಅವಕಾಶ ನೀಡಲಾಗಿದೆ. ಹೀಗೆ ಮನೆಯಲ್ಲಿ ಯಾರಾದರೂ ಸತ್ತರೆ ಪ್ರತಿ ಬಾರಿಯೂ ಹದಿನಾರನ್ನು ಸ್ಥಾಯಿಯಾಗಿ ಇರಿಸಿಕೊಂಡು, ಸತ್ತವನನ್ನು ಹೊಸದಾಗಿ ಸೇರಿಸುತ್ತ, ಹಳಬರಲ್ಲಿ ಒಬ್ಬನನ್ನು ಹೊರಗೆಲೆಯುತ್ತಾ ಇರುತ್ತಾರೆ. ಇದು ಗಂಡಸರಿಗೂ ಹೆಂಗಸರಿಗೂ ಸಮಾನವಾಗಿರುವುದರಿಂದ, ಸತ್ತವರ ೧೬ರ ಮುಂದಿನ ಹದಿನಾರು ದಿನಗಳವರೆಗೆ ಮನೆಯಲ್ಲಿ 'ಕೊಲೆ'ಯ ರೂಪದಲ್ಲಿದ್ದು, ೧೬ನೆಯ ದಿವಸದಂದು ಆಗಲೇ ತೀರಿಕೊಂಡ ಹದಿನಾರು ಜನರೊಂದಿಗೆ ಸೇರಿಕೊಂಡು, ಮನೆಯಿಂದ ಅದೃಶ್ಯನಾಗಿಬಿಡುತ್ತಾನೆ.

ಹದಿನಾರು ಕೊಲೆಗಳೊಂದಿಗೆ ಸೇರಿಸಲ್ಪಟ್ಟ ಮೃತನು ಮುಂದೆ ಆ ಕುಟುಂಬದಲ್ಲಿ ಹದಿನಾರನೇ ಸಾವು ಸಂಭವಿಸುವವರೆಗೆ ಅಂತ್ಯಕ್ರಿಯೆಗಳಲ್ಲಿ ಭಾಗವಹಿಸುತ್ತಾ ಮೃತನ ಮನೆಯವರು ನೀಡಿದ ಆಹಾರವನ್ನು ಸ್ವೀಕರಿಸುತ್ತಾ ಇರುತ್ತಾನೆ. ಮನೆಯಲ್ಲಿ ಹದಿನಾರನೇ ಸಾವು ಸಂಭವಿಸಿದ ನಂತರದ ಹದಿನಾರನೇ ದಿವಸಕ್ಕೆ ಆತನ ಅಸ್ತಿತ್ವವನ್ನು ಪೂರ್ತಿ ಅಳಿಸಿ ಹಾಕಲಾಗುತ್ತದೆ. ಮುಂದೆ ಎಂದೂ ಆತ ತನ್ನ ಕುಟುಂಬದೊಂದಿಗೆ ಯಾವ ಬಗೆಯ ಸಹಚರ್ಯವನ್ನು ಕೂಡಾ ಬೆಳೆಸಿಕೊಳ್ಳುವುದಿಲ್ಲ. ಬದುಕಿರುವವರ ಸಮಸ್ಯೆಯೊಂದು ಇಲ್ಲಿ ನೆಗೆದು ತೋರುತ್ತದೆ. ಅವರ್‍ಯಾರಿಗೂ ಆ ಮನೆಯಲ್ಲಿ ನಡೆಯಬಹುದಾದ ಹದಿನಾರನೇ ಸಾವನ್ನು ತರ್ಕಿಸಲು ಸಾಧ್ಯವಿಲ್ಲ. ಹಾಗಾಗಿ ಮೃತನನ್ನು ಹದಿನಾರು ದಿವಸಗಳ ಕಾಲ 'ಕೊಲೆ'ಯ ರೂಪದಲ್ಲಿ ಪ್ರತಿನಿಧಿಸಿಕೊಂಡು, ಹದಿನಾರನೇ ದಿವಸದಂದು ಈಗಾಗಲೇ ಸತ್ತವರೊಂದಿಗೆ ಸೇರಿಸಿ ಬಿಟ್ಟು ಕೈತೊಳೆದುಕೊಳ್ಳಲಾಗುತ್ತದೆ.

ಹೀಗೆ 'ಕೊಲೆ'ಯ ಸ್ಥಾಪನೆಯಾಗುವುದು ವ್ಯಕ್ತಿಯು ಸತ್ತಂದಿನಿಂದ ಮತ್ತು ಕೊಲೆಯ ಅಸ್ತಿತ್ವ ಪೂರ್ತಿ ನಿರಸನಗೊಳ್ಳುವುದು ಸತ್ತ ಹದಿನಾರನೇ ದಿನಕ್ಕೆ, ಈ ಹದಿನಾರು ದಿನಗಳನ್ನು 'ಮಧ್ಯಂತರ ಜಗತ್ತು' ಎಂದು ಕರೆಯಬಹುದು. ಇದು ನಿಜವಾಗಲೂ ಇದ್ದ ಮತ್ತು ಪೂರ್ತಿ ಇಲ್ಲವಾಗುವ ಸ್ಥಿತಿಯ ನಡುವಣದ ದಿನಗಳು. ನೈಜ ಮತ್ತು ಭ್ರಮೆಯ ಹದವಾದ ಬೆರಕೆಯಲ್ಲಿ ಈ ಭ್ರಾಮಕ ಲೋಕ ನಿರ್ಮಾಣವಾಗುತ್ತದೆ. ಕಾಲ, ವ್ಯಕ್ತಿ ಮತ್ತು ಸ್ಥಳಗಳು ಐಕ್ಯಗೊಂಡು ಈ ಮಧ್ಯಂತರ ಜಗತ್ತಿನ ಸೀಮಾರೇಖೆಗಳನ್ನು ಸ್ಥಾಪಿಸುತ್ತವೆ. ಸಾವು ಸಂಭವಿಸಿದಲ್ಲಿಂದ ಮುಂದೆ ೧೬ನೇ ದಿವಸದವರೆಗೆ ಕಾಲವನ್ನು ಮೈಲಿಗೆಯಾಗಿಸಿ, ಅಪವಿತ್ರಗೊಳಿಸಲಾಗುವುದು. ಗಡ್ಡ–ಮೀಸೆ ಬೋಳಿಸಿ, ಬಿಳಿಬಟ್ಟೆ ಉಡಿಸಿ, ಮೃತನ ಕುಟುಂಬದವರನ್ನು ಇತರರಿಂದ ಪ್ರತ್ಯೇಕಿಸಿ, ಮೈಲಿಗೆಯನ್ನು ಕಳೆದುಕೊಳ್ಳಲು ಸಿದ್ಧಗೊಳಿಸಲಾಗುವುದು. ಮಡಿವಾಳನೂ ಮೈಲಿಗೆ ಕಳೆಯುವ ಪ್ರಕ್ರಿಯೆಯಲ್ಲಿ ಭಾಗವಹಿಸುತ್ತಾನೆ.

ಮನೆಯೊಳಗಿನ ಅಡುಗೆ ಮನೆಯಲ್ಲಿರಿಸಲಾದ ಕನ್ನಿಕಂಬವನ್ನು ಕೇಂದ್ರವಾಗಿರಿಸಿಕೊಂಡು ಇಡೀ ಮನೆಯ ಜಾಗವನ್ನು ಸಾವಿನ ಆವರಣವೆಂದು ಪರಿಗಣಿಸಲಾಗುವುದು. ವ್ಯಕ್ತಿಗಳು ಸೇವಿಸುವ ಆಹಾರದಲ್ಲಿಯೂ ಅಂಥ ವ್ಯತ್ಯಾಸಗಳಿರುತ್ತವೆ. ೧೬ನೇ ದಿವಸದಂದು ಈ ಮಧ್ಯಂತರ ಜಗತ್ತಿನ ಸೀಮಾರೇಖೆಗಳು ಅಳಿಸಿ ಹೋಗುತ್ತವೆ.

ಮಧ್ಯಂತರ ಜಗತ್ತಿನಲ್ಲಿ ಬಳಲಾಗುವ ಎಲ್ಲ ವಸ್ತುಗಳು ವಾಸ್ತವ ಲೋಕಕ್ಕೆ ಸೇರಿದವೇ ಆಗಿವೆ. ಆದರೆ ಅವನ್ನು ಇರುವ ರೀತಿಯಲ್ಲಿ ಬಳಸುವುದಿಲ್ಲ. ಬದಲಾಗಿ ತಿರುವು ಮುರುವಾಗಿಸಿ ಬಳಸಲಾಗುವುದು. ಅಡಿಮೇಲಾಗಿಸಿದ ಅಂಗಿ, ಎಡಗೈ ಬಳಕೆ, ಅಪ್ರದಕ್ಷಿಣೆ, ದಕ್ಷಿಣ ದಿಕ್ಕಗೆ ಪ್ರಾಶಸ್ತ್ಯ ಇತ್ಯಾದಿಗಳನ್ನು ಇಲ್ಲಿ ನೆನಪಿಸಿಕೊಳ್ಳಬಹುದು. ೧೬ನೇ ದಿವಸದ ಅನಂತರ ಮತ್ತೆ ಅವೆಲ್ಲ ವಾಸ್ತವ ಲೋಕಕ್ಕೆ ಹಿಂದಿರುಗುತ್ತವೆ.

ಸಾವು ಒಂದು ನೈಜ ಘಟನೆ. ಸತ್ತ ವ್ಯಕ್ತಿಯು ನೈಜ ಲೋಕದೊಂದಿಗಿನ ತನ್ನ ಎಲ್ಲ ಸಂಬಂಧಗಳನ್ನು ಮತ್ತೆಂದೂ ಸ್ಥಾಪಿಸಿಕೊಳ್ಳಲಾರದ ರೀತಿಯಲ್ಲಿ ಕಡಿದುಕೊಂಡಿರುತ್ತಾನೆ. ಇದರಿಂದಾಗಿ ಆತ ಬದುಕಿದ್ದಾಗ ಏರ್ಪಡಿಸಿಕೊಂಡಿದ್ದ ಸಂಬಂಧಗಳೆಲ್ಲ ಸಾವಿನಲ್ಲಿ ಅಸ್ತವ್ಯಸ್ತಗೊಳ್ಳುತ್ತವೆ. ಕುಟುಂಬದ ನಿಯಾಮಕತೆಗಳೆಲ್ಲ ಸಡಿಲಿಹೋಗಿ ಅಲ್ಲಿ ವಿಚಿತ್ರವಾದಿ ಏರು ಪೇರು ಉಂಟಾಗುತ್ತದೆ. ಇಂಥ ಬಿಕ್ಕಟ್ಟಿನ ಗಳಿಗೆಯಲ್ಲಿ ನೈಜಲೋಕ ಕಳೆದುಕೊಂಡದ್ದನ್ನು, ಸೈದ್ಧಾಂತಿಕವಾಗಿ ಪುನರ್ ನಿರ್ಮಿಸಿಕೊಂಡು, ಹೊಂದಾಣಿಕೆ ಮಾಡಿಕೊಳ್ಳಲಾಗುವುದು. ಸಂಸ್ಕೃತಿಯೊಂದಕ್ಕೆ ಸಾವಿನ ಸಂದರ್ಭದಲ್ಲಿ ಮಧ್ಯಂತರ ಜಗತ್ತು ಬೇಕಾದ್ದೇ ಈ ಪುನರ್ ಹೊಂದಿಣಿಕೆಗಾಗಿ. ಇದು ಕುಟುಂಬವೊಂದರಲ್ಲಿ ಸಾವಿನ ಕಾರಣವಾಗಿ ಕಾಣಿಸಿಕೊಂಡ ಅಸ್ತವ್ಯಸ್ತತೆಯನ್ನು ತಾತ್ಕಾಲಿಕವಾಗಿ ಪರಿಹರಿಸುತ್ತದೆ. ಆರ್ಥಿಕ, ಸಾಮಾಜಿಕ ಮತ್ತು ರಾಜಕೀಯ ಏರುಪೇರುಗಳನ್ನು ಒಂದು ರಾಜೀಸೂತ್ರದ ಮೂಲಕ ಅದು ಶಮನಗೊಳಿಸುತ್ತದೆ. ಮುಂದೆ ಕಳಕೊಂಡಾಗ ಉಂಟಾದ ಸ್ಥಿತಿಯೇ ಒಂದು ವ್ಯವಸ್ಥೆಯಾಗಿ ಮಾರ್ಪಟ್ಟು ಸಮಸ್ಯೆ ಇತ್ಯರ್ಥಗೊಳ್ಳಬಹುದು. ಇಲ್ಲವೇ ಬೇರೊಬ್ಬ ವ್ಯಕ್ತಿ ಆ ಸ್ಥಾನವನ್ನು ಆಕ್ರಮಿಸಿಕೊಂಡು ಕೊರತೆಯನ್ನು ತುಂಬಬಹುದು. ಏನಿದ್ದರೂ ಸಾವು ಉಂಟು ಮಾಡಿದ ಒಂದು ಬಗೆಯ ಶೂನ್ಯವನ್ನು ಮಧ್ಯಂತರ ಜಗತ್ತು ತುಂಬಿಕೊಡುತ್ತದೆ ಎಂಬುದು ಸದ್ಯಕ್ಕೆ ಮುಖ್ಯವಾದ ಸಂಗತಿಯಾಗಿದೆ. ಕುಟುಂಬವೊಂದರ ಸ್ವಾಸ್ಥ್ಯದ ಉಳಿಕೆಗೆ ಇಂಥ ಪರಿಕಲ್ಪನೆಗಳು ಅವಶ್ಯಕ.

ಈಗಾಗಲೇ ಸ್ಪಷ್ಟಪಡಿಸಿರುವಂತೆ ಸತ್ತ ಮೇಲೆಯೂ ಕುಟುಂಬದ ಅಲೌಕಿಕ ಸದಸ್ಯನಾಗಿ ಮುಂದುವರೆಯುವ ಶಕ್ತಿಯೇ 'ಕೊಲೆ ಪದ್ಧತಿ'. ಗೌಡರು ಹೀಗೆ ಅಸ್ತಿತ್ವದಲ್ಲಿರುವ ಕೊಲೆಗಳ ಸಂಖ್ಯೆಯನ್ನು ಒಟ್ಟು ೧೬ ಎಂದು ಭಾವಿಸುತ್ತಾರೆ. ಈ ಕೊಲೆಗಳಿಗೆ ಬ್ರಾಹ್ಮಣೇತರರೆಲ್ಲಾ ಇರುವಂತೆ ತೋರುತ್ತದೆ. ಈ 'ಹದಿನಾರು' ಸಂಖ್ಯೆಯ ಮಹತ್ವವನ್ನು ಮತ್ತು ಅದರ ಔಚಿತ್ಯವನ್ನು ವಿವರಿಸುವುದು ಕಷ್ಟ. ಮೃತನ 'ಕೊಲೆ' ಅಸ್ತಿತ್ವದಲ್ಲಿರುವುದು ಹದಿನಾರು ದಿನಗಳ ಕಾಲ, ಅಂದರೆ ಹದಿನೈದು ಪೂರ್ಣದಿನಗಳು ಮತ್ತು ಹದಿನಾರನೇ ದಿವಸದಂದು ಅದರ ಅಸ್ತಿತ್ವ ನಶಿಸುತ್ತದೆ. ಕುಟುಂಬದಲ್ಲಿ ವಾಸಿಸುತ್ತಿರುವ ಹಿರಿಯ ಕೊಲೆಗಳ ಒಟ್ಟು ಸಂಖ್ಯೆಯೂ ಹದಿನಾರೇ. ಬಹುಶಃ ಈ ಸಂಖ್ಯೆಯು ಚಂದ್ರನ ಹದಿನೈದು ದಿನಗಳವರೆಗಣ ವೃದ್ಧಿ ಅಥವಾ ಕ್ಷಯವನ್ನು ಆಧರಿಸಿ ಬೆಳೆಸಿಕೊಂಡು ಬಂದ ಸೈದ್ಧಾಂತಿಕ ಕಲ್ಪನೆ ಎಂದು ತೋರುತ್ತದೆ. ಚಂದ್ರನ ಪೂರ್ಣ ವೃದ್ಧಿ ಅಥವಾ ಪೂರ್ಣಕ್ಷಯವನ್ನು ಹದಿನೈದು ದಿವಸಗಳ ಒಂದು ಪೂರ್ಣ ಘಟಕವೆಂದು ಭಾವಿಸಿದರೆ, ಆಗ ಹದಿನಾರನೆ ದಿವಸವು ಹೊಸತಾದ, ಹಳೆಯದಕ್ಕಿಂತ ಪೂರ್ತಿ ಬೇರೆಯದಾದ ಮತ್ತು ಪ್ರತ್ಯೇಕಿತ ಕಾಲವಾಗಿ ಬಿಡುತ್ತದೆ. ಕಾಲದ ಬಗೆಗಿನ ಈ ಸೈದ್ಧಾಂತಿಕ ಕಲ್ಪನೆಯು

'ಕೊಲೆ'ಯ ಹದಿನಾರು ದಿನಗಳ ಅಸ್ತಿತ್ವವನ್ನು ಆಗುಮಾಡಿದೆ ಮತ್ತು ಮಧ್ಯಂತರ ಜಗತ್ತಿನ ಸೀಮಾರೇಖೆಗಳನ್ನು ಹದಿನಾರು ದಿನಗಳಿಗೆ ಸ್ಥಾಪಿಸಿದೆ. ಚಂದ್ರನನ್ನು ಆಧರಿಸಿ ಕಾಲದ ಕಲ್ಪನೆಯನ್ನು ರೂಢಿಸಿಕೊಂಡು ಬಂದ ಜನಸಮುದಾಯಗಳಲ್ಲಿ ಹದಿನಾರಕ್ಕೆ ಪ್ರಾಮುಖ್ಯತೆ ಬರಲು, ಚಂದ್ರನ ವೃದ್ಧಿ ಮತ್ತುಕ್ಷಯಗಳೇ ಕಾರಣವಾಗಿವೆ. ಈ ಅರ್ಥದಲ್ಲಿ ಬ್ರಾಹ್ಮಣರಲ್ಲಿರುವ ಪಿತೃ ಕಲ್ಪನೆ ಮತ್ತು ಗೌಡರಲ್ಲಿರುವ 'ಕೊಲೆ'ಗಳ ಕಲ್ಪನೆಯನ್ನು ಭಿನ್ನ ಭಿನ್ನವಾಗಿಯೇ ಅರ್ಥ ಮಾಡಿಕೊಳ್ಳಬೇಕಾದ ಅಗತ್ಯವಿದೆ.

ಗೌಡರ ಅಂತ್ಯ ಸಂಸ್ಕಾರದ ವಿಧಿಗಳಲ್ಲಿ ಮೃತನ ರಕ್ತ ಬಾಂಧವರೇ ನಿರ್ಣಾಯಕ ಸ್ಥಾನ ವಹಿಸುತ್ತಾರೆ. ಈ ಅರ್ಥದಲ್ಲಿ ಇದು ಸಮಾಜಗಳು ರೂಪುಗೊಳ್ಳುವುದಕ್ಕೂ ಮುನ್ನ ಇದ್ದ ಬಂಧುತ್ವದ ವ್ಯವಸ್ಥೆಯನ್ನು ಸಂಕೇತಿಸುತ್ತದೆ. ಹೆಣವನ್ನು ಎತ್ತುವಲ್ಲಿಂದ ಆರಂಭವಾದರೆ ಹದಿನಾರರ 'ಕೊಲೆ'ಯವರೆಗೆ ಎಲ್ಲ ಆಚರಣೆಗಳಲ್ಲೂ ಮೃತನ ತಮ್ಮ ಇಲ್ಲವೇ ಮಗನೇ ಮುಖ್ಯ ಪಾತ್ರವಹಿಸುತ್ತಾನೆ. ದೈಹಿಕವಾಗಿ ಆತ ಕೆಲವು ಬಗೆಯ ಕೆಲಸಗಳನ್ನು ಮಾಡಲು ಅಸಮರ್ಥನಾದಾಗಲೂ, ಸಾಂಕೇತಿಕವಾಗಿ ಆತನ ಕೈ ಮುಟ್ಟಿಸಿ, ಇತರರು ಆ ಕೆಲಸವನ್ನು ಮಾಡುತ್ತಾರೆ. ಉಳಿದಂತೆ ಸಾವಿನ ಸಂದರ್ಭಗಳಲ್ಲಿ ಬಳಕೆಯಾಗುವ ಬಿದಿರು ಮತ್ತು ಬಾಳೆ ಕೂಡಾ ಬಂಧುತ್ವದ ಭಾಗವಹಿಸುವಿಕೆಯನ್ನು ಇನ್ನಷ್ಟು ನಿಖರಗೊಳಿಸುತ್ತವೆ.

ಶವವನ್ನು ಸುಡ್ಮಳಿಗೆ ಕೊಂಡೊಯ್ಯುವಾಗ ಮಾಡುವ 'ಚಟ್ಟ'ವನ್ನು ಬಿದಿರಿನಿಂದಲೇ ಮಾಡಬೇಕೆಂಬ ನಂಬಿಕೆಯಿದೆ. ಹಾಗೆ ದೂಪೆಯೆದುರು ಬಾಳೆಯನ್ನು ನೆಡುತ್ತಾರೆ. ಮತ್ತು 'ಬೊಜ್ಜ' ದೂಟದಲ್ಲಿ ಬಾಳೆಕಾಯಿಯನ್ನು ಕಡ್ಡಾಯವಾಗಿ ಬಳಸುತ್ತಾರೆ. ಇಲ್ಲಿ ಬಿದಿರು ಮತ್ತು ಬಾಳೆ ಎರಡೂ ಸಮಾನಾರ್ಥದಲ್ಲಿ ಬಳಕೆಯಾದಂತಿದೆ. ಅದೆಂದರೆ ಕುಲದ ಬಗೆಗಣ ಅತೀವ ಶ್ರದ್ಧೆ. ಬಿದಿರಿಗೆ ಒಂದು ಬೃಹತ್ತಾದ ಬುಡವಿದ್ದು ಅದೇ ಬುಡದಿಂದ ಇತರ ಬಿದಿರುಗಳು ಕವಲೊಡೆಯುತ್ತವೆ. ಬಾಳೆಗಾದರೂ ಅಷ್ಟೆ ಅದರ ಬುಡದಿಂದಲೇ ಅನೇಕ 'ಪಿಳ್ಳೆ'ಗಳು ಕವಲೊಡೆಯುತ್ತವೆ. 'ಒಂದೇ ಬುಡದಿಂದ ಹೊರಟ ಅನೇಕ ಕವಲುಗಳು' ಎಂಬ ಕಲ್ಪನೆಯು ಮಾನವನ 'ಕುಲ'ದ ಕಲ್ಪನೆಯನ್ನು ಚೆನ್ನಾಗಿ ಹೋಲುತ್ತದೆ. ಹೀಗೆ ನೋಡಿದಾಗ ಬಿದಿರು ಮತ್ತು ಬಾಳೆಗಳು ಕುಲದ ಬಗೆಗಣ ಮಾನವನ ಶ್ರದ್ಧೆಗೆ ಬಲಿಷ್ಠವಾದ ರೂಪಕವಾಗಿರುವಂತೆ ತೋರುತ್ತದೆ. ಗೌಡರ ಬಂಧುತ್ವದ ರೀತಿ-ನೀತಿಗಳು ಮತ್ತು ಅವರೆಲ್ಲ ತಮ್ಮ ಮೂಲಮನೆಗಳ ಬಗೆಗೆ ಹೊಂದಿರುವ ಭಾವುಕವಾದ ಸಂಬಂಧಗಳು ಅಂತಿಮವಾಗಿ ಕುಲದ ಬಗೆಗೆ ಅವರ ಶ್ರದ್ಧೆಯನ್ನೇ ವಿಷಾದೀಕರಿಸುತ್ತದೆ.

**ವಾರ್ಷಿಕಾವರ್ತನದ ಆಚರಣೆಗಳು**

ಸುಳ್ಯ ಪರಿಸರದ ಗೌಡರ ವಾರ್ಷಿಕಾವರ್ತನದ ಆಚರಣೆಗಳು ಒಟ್ಟು ತುಳುನಾಡಿನ ಇತರ ಸಮುದಾಯಗಳ ವಾರ್ಷಿಕಾವರ್ತನದೊಂದಿಗೆ ಹೆಣೆದುಕೊಂಡಿವೆ. ಈ ಆಚರಣೆಗಳಲ್ಲಿ ಗೌಡರದ್ದೇ ಆದ ಅನನ್ಯವಾದ ಆಚರಣೆಗಳಿಲ್ಲವಾದ್ದರಿಂದ ಅದನ್ನು ಸಂಕ್ಷಿಪ್ತವಾಗಿ ವಿವರಿಸಲಾಗಿದೆ.

ವಾರ್ಷಿಕ ಆವರ್ತನದಲ್ಲಿ ಅಕ್ಕಿಯನ್ನು ಬೆಳೆಸುವುದು ಕರಾವಳಿಯ ಅನೇಕ ಆಚರಣೆಗಳಿಗೆ ಸಾಮಾನ್ಯಕಾರಣವಾಗಿದೆ. ಅಕ್ಕಿ ಹಸಿವನ್ನು ತೀರಿಸುತ್ತದೆ. ಈ ಅರ್ಥದಲ್ಲಿ ಒಕ್ಕಲುತನವೇ ಇಲ್ಲಿನ ಪ್ರಧಾನ ವೃತ್ತಿಯಾಗಿದೆ. ಅಕ್ಕಿ ಬೆಳೆಯುವಾಗ ಪ್ರಾರ್ಥನೆ, ಭತ್ತವನ್ನು ಮನೆಗೆ ತಂದಾಗ ಸಂಭ್ರಮ ಅಕ್ಕಿಯೇ ಬೆಳೆಯದ

ಕಾಲ ಬರಗಾಲ, ಅದು ಗದ್ದೆಯಲ್ಲಿ ಬೆಳೆಯುತ್ತಿದ್ದರೆ ಉತ್ಸಾಹ-ಹೀಗೆ ಗೌಡ ವಾರ್ಷಿಕ ಜೀವನ ಕ್ರಮವನ್ನು ಅಕ್ಕಿ ನಿಯಂತ್ರಿಸುತ್ತದೆ. ಅದರ ಸ್ಥೂಲ ವಿವರ ಈ ಕೆಳಗಿನಂತಿದೆ.

**ಪಗ್ಗು (ಏಪ್ರಿಲ್-ಮೇ)**

ಗದ್ದೆಯಲ್ಲಿ ಭತ್ತವನ್ನು ಬಿತ್ತುವುದು. ಇದನ್ನು 'ಕೈ ಬಿತ್ತು ಹಾಕುವುದು' ಎನ್ನುತ್ತಾರೆ. ಇಲ್ಲಿ ಭತ್ತ ಬೆಳೆಯುವ ಗದ್ದೆಗೆ ಗೌರವ ಸಂದಾಯವಾಗುತ್ತದೆ.

**ಬೇಷ (ಮೇ-ಜೂನ್)**

ಕೃಷಿ ಕೆಲಸದ ಆರಂಭ. ಗದ್ದೆಗೆ ಬಿತ್ತನ್ನು ಹರಹುವುದು, ಕೈ ಬಿತ್ತು ಹಾಕುವುದು ಇಲ್ಲಿಯೂ ಮುಂದುವರಿದುಕೊಂಡು ಬರುತ್ತದೆ. ಹಿಂದಿನ ತಿಂಗಳ ಉತ್ಸಾಹವೇ, ಭಕ್ತಿಯೇ ಇಲ್ಲಿಯೂ ಮುಂದುವರಿದುಕೊಂಡು ಬರುತ್ತದೆ.

**ಕಾರ್ತೆಲ್ (ಜೂನ್-ಜುಲೈ)**

ಮಳೆಗಾಲ ಆರಂಭವಾಗಿರುತ್ತದೆ. ಭೀಕರ ಮಳೆ ಸುರಿಯುವುದರಿಂದ ಜನರು ಹೊರಗಡೆ ಓಡಾಡುವಂತಿರಲಿಲ್ಲ. ಮನೆಯೊಳಗಡೆ ಕುಳಿತು ಮನೆ ದೆವ್ವಗಳಿಗೆ ಹರಿಕೆ ಒಪ್ಪಿಸುತ್ತಾರೆ. ಮನೆ ದೆವ್ವಗಳಿಗೆ ಒಪ್ಪಿಸುವ ಹರಿಕೆಯ ಆಶಯ ಮತ್ತು ಗದ್ದೆಯಲ್ಲಿರುವ ಬೆಳೆಯನ್ನು ಮತ್ತು ಗುಡ್ಡೆಗೆ ಹೋಗಿರುವ ಪಶುಗಳನ್ನು ರಕ್ಷಿಸುವುದೇ ಆಗಿದೆ.

**ಆಟಿ (ಜುಲೈ-ಆಗಸ್ಟ್)**

ಹೊಸ ಬೆಳೆ ಇನ್ನೂ ಬೆಳೆದಿರುವುದಿಲ್ಲ. ಸುಗ್ಗಿಯ ಅಕ್ಕಿ ಮುಗಿವ ಕಾಲ. ಆದ್ದರಿಂದ ಜನರಿಗೆ ಉಣ್ಣಲು, ತಿನ್ನಲು ಬಹಳ ಕಷ್ಟವಾದ ಕಾಲ, ಸಂಕಟದ ಕಾಲ. ಅಕ್ಕಿಯ ಬದಲು ಬೇಯಿಸಿದ ಹಲಸಿನ ಬೀಜ ತಿನ್ನುವಂಥ ಬಡತನ ಆವರಿಸಿಕೊಂಡಿರುವುದರಿಂದ ಈ ತಿಂಗಳು ಅನಿಷ್ಟದ ಕಾಲ ಎಂದು ಗೌಡರು ಭಾವಿಸುತ್ತಾರೆ.

**ಸೋಣ (ಆಗಸ್ಟ್-ಸೆಪ್ಟಂಬರ್)**

ಹೊಸ ಬೆಳೆ ಕಟಾವಿಗೆ ಸಿದ್ಧವಾಗಿರುವುದರಿಂದ ಜೀವನದಲ್ಲಿ ಮತ್ತೆ ಉತ್ಸಾಹ ಕುದುರಿದೆ. ಹೊಸ ಅಕ್ಕಿಯನ್ನು ಮನೆಗೆ ತರುವ ಸಂಭ್ರಮದಲ್ಲಿ 'ಹೊಸ್ತ್' ಆಚರಣೆ ಮನೆ ತುಂಬಿಸುವುದು ನಡೆಯುತ್ತದೆ.

**ನಿರ್ನಾಲ್ (ಸೆಪ್ಟಂಬರ್-ಅಕ್ಟೋಬರ್)**

ಗದ್ದೆಯಲ್ಲಿ ಬೆಳೆಯನ್ನು ಕಟಾವು ಮಾಡಲಾಗುತ್ತದೆ. ಭತ್ತ ಮನೆಯಲ್ಲಿರುತ್ತದೆ. ಇದೇ ಕಾಲದಲ್ಲಿ ಕಾವೇರಿ ನದಿಯಲ್ಲಿ ಸಂಕ್ರಮಣದ ದಿನದಂದು ಹೆಚ್ಚುವುದೆಂಬ ಆಚರಣೆ. ಇದು ಜೀವನ ಸಮೃದ್ಧಿಯನ್ನು ಸಾಂಕೇತಿಕವಾಗಿ ಹೇಳುತ್ತದೆ. ಬಡತನ ಪೂರ್ತಿ ಮರೆಯಾಗುವ ಕಾಲವಿದು.

**ಬೊಂತೆಲ್ (ಅಕ್ಟೋಬರ್-ನವಂಬರ್)**

ಹಿಂದಿನ ತಿಂಗಳ ಉತ್ಸಾಹ, ಸಂಭ್ರಮ ಇಲ್ಲಿಯೂ ಮುಂದುವರಿದುಕೊಂಡು ಬರುತ್ತದೆ. ದೀಪಾವಳಿ ಆಚರಣೆಗೆ ಮಹತ್ವ ಸಂದಾಯವಾಗುತ್ತದೆ. ಅದೇ ಸಂದರ್ಭದಲ್ಲಿ ಗೋಪೂಜೆ, ಜಾನುವಾರು ಜಾತ್ರೆ ನಡೆಯುತ್ತದೆ. ವಾಸ್ತವವಾಗಿ

ಗದ್ದೆ ಉಳುವ ಎತ್ತುಗಳಿಗೂ ಈಗ ವಿರಾಮದ ಕಾಲವಾಗಿರುತ್ತದೆ. ಮತ್ತು ಇದೇ ತಿಂಗಳಿನಿಂದ ಮತ್ತ ಗದ್ದೆಯ ಆರಂಭವಾಗುವುದರಿಂದ ಎತ್ತುಗಳ ಕೊನೆ ಕೊನೆಗೆ ಮತ್ತೆ ಕೆಲಸಕ್ಕೆ ಸಿದ್ಧವಾಗಬೇಕಾಗುತ್ತದೆ.

**ಜಾರ್ದೆ (ನವಂಬರ್-ದಶಂಬರ್)**

ಸುಗ್ಗಿ ಬೆಳೆ ಕೆಲಸಗಳು ಮತ್ತೆ ಆರಂಭವಾಗುತ್ತವೆ. 'ಗದ್ದೆ ಗೋರಿಯ ಸಂಭ್ರಮ' ಇರುತ್ತದೆ. ಎತ್ತುಗಳನ್ನು ಮಾರಾಟ ಮಾಡಲು, ಎತ್ತುಗಳನ್ನು.ಕೊಳ್ಳಲು ಅನುಕೂಲವಾಗುವಂತೆ ಜಾನುವಾರು ಜಾತ್ರೆಗಳು ಈ ತಿಂಗಳಲ್ಲಿ ನಡೆಯುತ್ತವೆ.

**ಪೆರಾರ್ದೆ (ದಶಂಬರ್-ಜನವರಿ)**

ಸುಗ್ಗಿ ಬೆಳೆ ಕೆಲಸದ ಜೊತೆ ಮದುವೆ ಇತ್ಯಾದಿ ಸಮಾರಂಭಗಳಿಗೆ ತಯಾರಿ. ಮನೆಯ ಛಾವಣಿ ಹೊದಿಸುವುದು, ಇತ್ಯಾದಿ ದೈನಂದಿನ ಅವಶ್ಯಕತೆಗಳ ಕೆಲಸ ನಡೆವ ಕಾಲವಿದು.

**ಪೊನ್ನಿ (ಜನವರಿ-ಫೆಬ್ರವರಿ)**

ಭೂಮಿಯಲ್ಲಿ ಭತ್ತ ಮೊಳಕೆಯೊಡೆಯುವಂತೆ ಭೂಮಿ ತಾಯಿಯ ಪೂಜೆ ಮಾಡುವ ಖಿಡ್ಡಾಸ ಆಚರಣೆ, ನೆಲವೂ ಫಲವತಿಯಾಗುವ ಕಲ್ಪನೆಯಲ್ಲಿ ಭತ್ತ ಬೆಳೆಯುವ ವಾಸ್ತವ ಅಡಗಿದ್ದು, ಸಾಂಕೇತಿಕ ಆಚರಣೆಗೆ ಎಡೆ ಮಾಡಿಕೊಟ್ಟಿದೆ.

**ಮಾಯಿ – ಸುಗ್ಗಿ (ಫೆಬ್ರವರಿ–ಏಪ್ರಿಲ್)**

ಸುಗ್ಗಿ ಬೆಳೆ ಮನೆಗೆ ಬರುವ ಕಾಲ, ಸಮೃದ್ಧಿಯ ಕಾಲ. ಅಕ್ಕಿಯನ್ನು ಮನೆಯಲ್ಲಿ ಶೇಖರಸಿಟ್ಟು ಸಂತೋಷದ ಅಂಗವಾಗಿ ಅನೇಕ ನಮೂನೆಯ ಕುಣಿತ ಮತ್ತು ಹಾಡುಗಳು ಸೃಷ್ಟಿಯಾಗಿವೆ.

ಹೀಗೆ ಪ್ರಚಲಿತದಲ್ಲಿರುವ ಗೌಡರ ವಾರ್ಷಿಕ ವೃತ್ತದಲ್ಲಿ ಅಕ್ಕಿಗೆ ಪ್ರಧಾನ ಸ್ಥಾನ ಸಂದಾಯವಾಗಿದೆ. ಗೌಡರಲ್ಲಿ ಹಾಡುಗಳು ಮತ್ತು ಕಥನ ಕವನಗಳು ಇವನ್ನು ಅತ್ಯಂತ ಮುತುವರ್ಜಿಯಿಂದ ದಾಖಲಿಸಿವೆ. ಗದ್ದೆ ಬೈಲು, ಮಜಲು, ಬೆಟ್ಟು ಭಾಗ್ಯಾತು, ಕುಮೇರಿ ಮೊದಲಾದ ಬೆಳೆ ಸಂಬಂಧಿಯಾದ ಸ್ಥಳಗಳಿಗೂ ಇಲ್ಲಿ ಮಹತ್ವ ಸಂದಾಯವಾಗುತ್ತದೆ.

**ಧಾರ್ಮಿಕ ಆಚರಣೆಗಳು**

ಸುಳ್ಯ ಪರಿಸರದ ಗೌಡರು ಬಹುತೇಕವಾಗಿ ತಿರುಪತಿ ವೆಂಕಟರಮಣನ ಭಕ್ತರು. ವಾರ್ಷಿಕಾವರ್ತನೆ ಮತ್ತು ಜೀವನಾವರ್ತನದ ಆಚರಣೆಗಳ ಸಂದರ್ಭದಲ್ಲಿ ಅನೇಕರು ವೆಂಕಟರಮಣ ದೇವರಿಗೆ 'ಮುಡಿಪು' ಕಟ್ಟಿಡುತ್ತಾರೆ. ಈ ಮುಡಿಪಿನಲ್ಲಿ ಶೇಖರಣೆಯಾದ ಹಣವನ್ನು ಎಂದಾದರೊಮ್ಮೆ ತಿರುಪತಿಗೆ ಕಳಿಸಿಕೊಡುತ್ತಾರೆ. ವೆಂಕಟರಮಣನ ಆರಾಧನೆಯ ಅಂಗವಾಗಿ ಗೌಡರು 'ಹರಿಸೇವೆ'ಯನ್ನು ಮಾಡುತ್ತಾರೆ. ಹರಿ ಸೇವೆಯಲ್ಲಿ ನಡೆಯುವ ಮಾಂಸ-ಮದ್ಯ ಸೇವನೆಯು ತಿರುಪತಿ ವೆಂಕಟರಮಣ ದೇವರ ಬಗ್ಗೆ ಬಗೆಯ ತಿಳುವಳಿಕೆಯನ್ನು ಕೊಡುವಷ್ಟು ಸಮರ್ಥವಾಗಿದೆ. ಆತ ಮೂಲತಃ ಯಾವುದೋ ಬುಡಕಟ್ಟುವಿಗೆ ಸೇರಿದ ದೈವವಾಗಿರಬೇಕು.

ಸುಳ್ಯ ಪರಿಸರದ ಗೌಡರು ಕುಲದೈವನಾಗಿ ವೆಂಕಟರಮಣನನ್ನು ಆರಾಧಿಸುವಂತೆ ಸ್ಥಳೀಯ ದೈವಗಳನ್ನು ಭಯ ಭಕ್ತಿಗಳಿಂದ ಆರಾಧಿಸುತ್ತಾರೆ. ಈ ದೈವಗಳ ಆರಾಧನಾ ಕ್ರಮವು ತುಳುನಾಡಿನ ಭೂತಾರಾಧನೆಗಿಂತ ಬೇರೆಯಾಗೇನೂ ಇಲ್ಲ. ಕಾರ್ಯತ್ತೋಡಿಯ ಜಾಲಾಟ, ಕಂದ್ರಪ್ಪಾಡಿಯ ಪುರುಷ ಭೂತ ಮತ್ತು ಏನೆಕಲ್ಲಿನ ಬಚ್ಚ ನ್ನಾಕ ದೈವಗಳ ಆರಾಧನೆ ಮಾತ್ರ ಸ್ವಲ್ಪ ವಿಶಿಷ್ಟವಾಗಿದೆ. ಅದರಲ್ಲಿಯೂ 'ಪುರುಷ ಭೂತ'ದ ಪಾಡ್ದನವು ಕನ್ನಡದಲ್ಲಿದ್ದು ಅನನ್ಯವಾಗಿದೆ.

ಸುಳ್ಯ ತಾಲೂಕಿನ ಗೌಡರು ಬೇರೆ ಬೇರೆ ಪ್ರದೇಶಗಳಲ್ಲಿ ಆರಾಧಿಸುವ ದೈವಗಳ ಬಗೆಗೆ ಚಿತ್ರ ೧೨ರಲ್ಲಿ ಮಾಹಿತಿ ನೀಡಲಾಗಿದೆ.

ಪ್ರದರ್ಶನ ಕಲೆಗಳು ಕರಾವಳಿಯಲ್ಲಿ ಧಾರ್ಮಿಕತೆಯನ್ನು ಆವರಿಸಿಕೊಂಡೇ ಬೆಳೆದಿವೆ. ಸುಳ್ಯ ಪರಿಸರದಲ್ಲಿ ಜನಪ್ರಿಯವಾಗಿರುವ 'ಸಿದ್ಧವೇಶ'ವು ಒಂದು ಧಾರ್ಮಿಕ ವಿಧಿ ಕ್ರಿಯೆಯೂ ಹೌದು, ಪ್ರದರ್ಶನ ಕಲೆಯೂ ಹೌದು. ಈ ಕಲೆಯು ಸುಳ್ಯ ಪರಿಸರದ ಗೌಡರನ್ನು ಹೊರತು ಪಡಿಸಿದರೆ, ಬೇರಾವುದೇ ಕಡೆ ಇರುವುದು ನನ್ನ ಗಮನಕ್ಕೆ ಬಂದಿಲ್ಲವಾದಕಾರಣ ಇದನ್ನು ಗೌಡರ ಅನನ್ಯವಾದ ಕಲೆ ಎನ್ನಬಹುದು. ಈ ಕಾರಣಕ್ಕೆ ಸಿದ್ಧವೇಶವನ್ನು ಸ್ವಲ್ಪ ವಿವರವಾಗಿ ಗಮನಿಸುವುದು ಅವಶ್ಯಕವಾಗಿದೆ.

ಸುಳ್ಯ ಪುತ್ತೂರು ಮತ್ತು ಬೆಳ್ತಂಗಡಿ ಪರಿಸರದಲ್ಲಿ ವಾಸಮಾಡುತ್ತಿರುವ ಗೌಡರು ಸುಗ್ಗಿ ಹುಣ್ಣಿಮೆಯ ಸಂದರ್ಭದಲ್ಲಿ 'ಸಿದ್ಧವೇಶ' ಕುಣಿಯುತ್ತಾರೆ. ನಿಗದಿಪಡಿಸಿದ ದಿನ ಹಳ್ಳಿಯ ಹಿರಿಯ ಗೌಡನೊಬ್ಬನ ನೇತೃತ್ವದಲ್ಲಿ ಆಸಕ್ತ ಗೌಡ ಯುವಕರು ಊರಿನ ಭೂತದ ಚಾವಡಿಯಲ್ಲೋ, ಪ್ರತಿಷ್ಠಿತ ಗೌಡನೊಬ್ಬನ ಮನೆಯಂಗಳದಲ್ಲೋ ಒಟ್ಟು ಸೇರುತ್ತಾರೆ. ಸಿದ್ಧವೇಶ ಕುಣಿಯುವ ದಿನಗಳನ್ನು ನಿರ್ಧರಿಸುತ್ತಾರೆ. ಉತ್ಸಾಹಿಗಳಾದ ಆರು ಅಥವಾ ಏಳು ಗೌಡ ಯುವಕರು ಕುಣಿತಕ್ಕೆ ನಿಲ್ಲುತ್ತಾರೆ. ಅತ್ಯಂತ ಹಾಸ್ಯ ಪ್ರಜ್ಞೆ ಇರುವ ಒಬ್ಬಾತನು 'ಬ್ರಾಹ್ಮಣ'ನ ವೇಷ ಹಾಕಲು ಸಿದ್ಧನಾಗುತ್ತಾನೆ. ವೃದ್ಧರಾದವರಲೊಬ್ಬ 'ದಾಸಯ್ಯ'ನ ವೇಷವನ್ನೂ ಅತ್ಯಂತ ಉತ್ಸಾಹಿಯೂ ಕ್ರಿಯಾಶೀಲನೂ ಆಗಿರುವಾತನು 'ಸನ್ಯಾಸಿ'ಯ ವೇಷ ಹಾಕಲೂ ತಯಾರಾಗುತ್ತಾನೆ.

ಸಿದ್ಧವೇಷ ಕುಣಿತ ಯುವಕರು, ಕುಣಿತದ ದಿನ ಬಂದಾಗ ತಲೆಗೆ ಕೆಂಪು ಬಣ್ಣದ ಮುಂಡಾಸನ್ನು ಕಟ್ಟಿ, ಅದರ ಒಂದು ತುದಿಯನ್ನು ಬಲಗಿವಿಯ ಮೇಲಿನಿಂದ ಭುಜಕ್ಕೆ ಇಳಿಬಿಡುವರು. ತುಂಬಾ ದೊಗಳೆ ಆಗಿರುವ ಅಂಗಿಯೊಂದನ್ನು ಧರಿಸಿ, ಸೊಂಟಕ್ಕೆ ಕಚ್ಚೆಹಾಕುತ್ತಾರೆ. ಅಂಗಿಯ ಮೇಲಿನಿಂದ ಸೊಂಟಕ್ಕೆ ಗಟ್ಟಿಯಾಗಿ 'ದಟ್ಟಿ'ಯೊಂದನ್ನು ಕಟ್ಟುತ್ತಾರೆ. ಈ 'ದಟ್ಟಿ' ದೇಹಕ್ಕೆ ಬಿಗುವನ್ನು ಒದಗಿಸಿದರೆ, ಬಲಗಡೆಗೆ ಇಳಿಬಿಟ್ಟ ಮುಂಡಾಸು ಕುಣಿತಕ್ಕೆ ಸೊಗಸಾದ ಲಯವನ್ನು ಸಿದ್ಧಿಸಿಕೊಡುತ್ತದೆ. ದಾಸಯ್ಯನು ಕೆಂಪು ಶಾಲು ಹೊದ್ದು, ಕೈಯಲ್ಲಿ ಶಂಖ ಮತ್ತು ಜಾಗಟೆಯನ್ನು ಹಿಡಿಯುತ್ತಾನೆ; ಬಿಳಿ ಪಂಚೆ ತಂದು ಕಚ್ಚೆ ಹಾಕಿಕೊಳ್ಳುತ್ತಾನೆ. ಬ್ರಾಹ್ಮಣ ವೇಷಧಾರಿ ಕೂಡಾ ಬಿಳಿ ಪಂಚೆಯಲ್ಲಿ ಕಚ್ಚೆ ಹಾಕಿ, ತಲೆಗೆ ಜುಟ್ಟು ಕಟ್ಟಿ ಗೋಣಿ ನಾರಿನ ಹಗ್ಗದಿಂದ ದೊಡ್ಡದಾದ ಜನಿವಾರಮಾಡಿ ಧರಿಸಿಕೊಳ್ಳುತ್ತಾನೆ. ಆ ಜನಿವಾರಕ್ಕೆ ಬಲವಾದ ಗಂಟೊಂದನ್ನು ಹಾಕಿರುತ್ತಾನೆ. ಮೈಗೆ ಗಂಧ, ಹಣೆಗೆ ನಾಮ, ಹಾಕಿ ಬ್ರಾಹ್ಮಣ ವೇಷಧಾರಿಯು ತಯಾರಾಗುತ್ತಾನೆ. ಇದರಲ್ಲಿ ಅತಿ ಮುಖ್ಯವಾದ ವೇಷ ಸನ್ಯಾಸಿಯದ್ದು. ಒಣಗಿದ ಬಾಳೆ ಎಲೆಗಳನ್ನು ತಂದು ಇಡೀ ದೇಹಕ್ಕೆ ಕಟ್ಟಿ,ದೇಹ ಮರೆಯಾಗುವಂತೆ ಮಾಡುತ್ತಾರೆ. ಕಂಗಿನ ಹಾಳೆಯನ್ನು ಶಂಕುವಿನಾಕಾರದಲ್ಲಿ ಮಡಿಸಿ, ತಲೆಗೆ ಬೋರಲಾಗಿ ಇಟ್ಟುಕೊಂಡು, ತಲೆಯನ್ನು ಮರೆಸುತ್ತಾರೆ. ಹಸಿ ಬಾಳೆ

ಎಲೆಯನ್ನು ತಂದು ಗರಗಸದಂತೆ ಕತ್ತರಿಸಿ ಮುಖಕ್ಕೆ ಅಡ್ಡವಾಗಿ ಕಟ್ಟಿ, ಇಡೀ ಮುಖವನ್ನು ಮರೆಮಾಡುತ್ತಾರೆ. ತೆಳ್ಳಗಿನ ನಾಲ್ಕಾರು ಬೆತ್ತಗಳನ್ನು ಜೋಡಿಸಿ ಹಗ್ಗದಿಂದ ಸುತ್ತಿ ಸೊಂಟದ ಮುಂಭಾಗದಲ್ಲಿ ಕಟ್ಟಿ ನಿಗುರಿ ನಿಂತ ಶಿಶ್ನವನ್ನು ಸೃಷ್ಟಿಸುತ್ತಾರೆ. ಊರೊಳಗೆ ಓಡಾಡುವಾಗ ಪೋಕರಿಗಳು ಶಿಶ್ನಕ್ಕೆ ಕೈ ಹಾಕುವರೆಂಬ ಕಾರಣಕ್ಕೆ ಶಿಶ್ನದ ತುದಿಗೆ ಮುಳ್ಳನ್ನು ಕಟ್ಟುತ್ತಾರೆ. ಅನಂತರ ಸನ್ಯಾಸಿಯ ಕೈಗೆ ಒಂದು ದೊಣ್ಣೆಯನ್ನು ಕೊಡುತ್ತಾರೆ. ಕೆಲವು ಭಾರಿ ಭಸ್ಮದ ಪಾತ್ರೆಯನ್ನು ಸನ್ಯಾಸಿ ಹಿಡಿಯುತ್ತಾನೆ. (ಸಿದ್ಧವೇಶದ ಸನ್ಯಾಸಿಗೆ ಚಿತ್ರ ೧೩ ನೋಡಿರಿ) ಇವಿಷ್ಟು ವೇಷಭೂಷಣಗಳು, ಅತ್ಯಂತ ವಿರಳವಾದುವು.

ಎಲ್ಲ ಸಿದ್ಧವಾದ ಮೇಲೆ ಈ ಸನ್ಯಾಸಿಯನ್ನು ಸಾಲಿನ ಮಧ್ಯದಲ್ಲಿ ನಿಲ್ಲಿಸಿಕೊಂಡು ರಾತ್ರಿಯಾಗುತ್ತಲೇ, ಊರು ಸುತ್ತಲು ಹೊರಡುತ್ತಾರೆ. ಎಲ್ಲರೂ 'ಡಿಂಬಿಸಾಲೆ' ಎಂಬ ಸೊಲ್ಲನ್ನು ಹೇಳುತ್ತಾ ನಡೆಯುತ್ತಾರೆ. ತಾವು ಕುಣಿತ ಆರಂಭ ಮಾಡಲಿರುವ ಮನೆ ಹತ್ತಿರ ಬಂದಾಗ, ಸನ್ಯಾಸಿಯನ್ನು ಮನೆಯ ಪಕ್ಕದಲ್ಲಿ ಅಡಗಲು ಹೇಳುತ್ತಾರೆ. ಉಳಿದವರೆಲ್ಲ ಅಂಗಳಕ್ಕೆ ಹೋಗಿ, ಶಬ್ದಮಾಡಿ ಮನೆಯವರನ್ನು ಎಬ್ಬಿಸುತ್ತಾರೆ. ಬೆಳಕಿಗಾಗಿ ದೀಪವೊಂದನ್ನು ಅಂಗಳದ ಮಧ್ಯದಲ್ಲಿ ಇಟ್ಟು ಕುಣಿಯುವ ಮಂದಿ, ವೃತ್ತಾಕಾರದಲ್ಲಿ ಅದರ ಸುತ್ತ ನಿಲ್ಲುವರು. ಒಬ್ಬಾತ ಸೊಲ್ಲನ್ನು ಆರಂಬಿಸುತ್ತಾನೆ.

ಸಿದ್ದುಲಿಂಗ ಮುದ್ದುಲಿಂಗ। ಸಿದ್ಧವೇಸೋ ॥

ನಾವು ಯಾವೂರು ಯಾವ ತಳ। ಸಿದ್ಧವೇಸೋ ॥

ನಾವು ಕಾಶೀಯ ತಳದವ್ರು। ಸಿದ್ಧವೇಸೋ ॥

ಎಂದು ಹಾಡುವಾಗ, ಕುಣಿಯುವ ಗುಂಪು 'ಸಿದ್ಧವೇಸೋ' ಎಂಬ ಸೊಲ್ಲನ್ನು ಪುರಾವರ್ತಿಸುತ್ತ ೪ ಹೆಜ್ಜೆಗಳಲ್ಲಿ ವೃತ್ತಾಕಾರವಾಗಿ ಸುತ್ತುತ್ತಿರುತ್ತಾರೆ. ಪ್ರತಿ ನಾಲ್ಕನೇ ಹೆಜ್ಜೆಗೆ ಕುಣಿತದವರು ವೃತ್ತದ ಮಧ್ಯಕ್ಕೆ ಚಾಚಿಕೊಂಡು ಕೇಂದ್ರಿಕೃತವಾಗುತ್ತಾರೆ. ಅದೇ ಸಂದರ್ಭದಲ್ಲಿ ಎರಡೂ ಕೈಗಳನ್ನು ಬಲವಾಗಿ ತಾಡಿಸಿ ಚಪ್ಪಾಳೆಯ ಸ್ವರ ಹೊರಡಿಸುತ್ತಾರೆ. ಹೀಗೆ ಹಾಡು ಕುಣಿತ ಮುಂದುವರಿಯುತ್ತಿದ್ದಾಗ, ೨೨ನೇ ಸೊಲ್ಲಿನಲ್ಲಿ ನಾವು 'ಶೃಂಗೇರಿ ಮಠದಿಂದ' ಎಂಬ ಸಾಲು ಬರುತ್ತದೆ ಇದಕ್ಕೆ ಗುಂಪು 'ಸಿದ್ಧವೇಸೋ' ಎಂಬ ಸೊಲ್ಲನ್ನು ಸೇರಿಸುತ್ತಿದ್ದಂತೆ ಅದುವರೆಗೆ ಅಡಗಿ ಕುಳಿತ್ತಿದ್ದ ಸನ್ಯಾಸಿ ಥಟ್ಟನೆ ಅಂಗಳದಲ್ಲಿ ಪ್ರತ್ಯಕ್ಷನಾಗುತ್ತಾನೆ. ದೊಣ್ಣೆಯನ್ನು ನೆಲಕ್ಕೆ ಊರುತ್ತಾ ಕುಂಟನಂತೆ ಹೆಜ್ಜೆ ಹಾಕಿ, ಲಂಘಿಸಿಕೊಂಡು ಬರುವ ಸನ್ಯಾಸಿಯು ಕುಣಿತದವರ ವೃತ್ತವನ್ನು ಭೇದಿಸಿ ಒಳಗೆ ಸರಿಯುತ್ತಾನೆ. ಅದೇ ಸಂದರ್ಭದಲ್ಲಿ ಬ್ರಾಹ್ಮಣನು ಅಂಗಳದ ಬಲ ಬದಿಗೂ, ದಾಸಯ್ಯನು ಅಂಗಳದ ಎಡ ಬದಿಯೂ ಬಂದು ಕುಳಿತುಕೊಳ್ಳುತ್ತಾರೆ.

ಇಡೀ ಅಂಗಳ ಇಲ್ಲಿನ ಕಲಾವಿದರಿಂದ ತುಂಬುತ್ತದೆ. ಹಾಗೆ ತುಂಬಿದಾಗಲೂ ತುಂಬ ಶಿಸ್ತುಬದ್ಧವಾಗಿಯೇ ಕುಣಿತ ಮುಂದುವರಿಯುತ್ತದೆ.

ಸನ್ಯಾಸಿ ವೃತ್ತದೊಳಗೆ ಪ್ರವೇಶಿಸುತ್ತಿದ್ದಂತೆ ಕುಣಿತದವರು ತಮ್ಮ ಗಾತ್ರವನ್ನು ಕುಗ್ಗಿಸಿ, ದೇಹವನ್ನು ಬಗ್ಗಿಸಿ, ಕುಣಿತದ ವೇಗವನ್ನು ಹೆಚ್ಚಿಸುತ್ತಾರೆ. ಅದೇ ಪ್ರಮಾಣದಲ್ಲಿ ತನ್ನ ವೇಗವನ್ನು ಹೆಚ್ಚಿಸಿಕೊಂಡ ಸನ್ಯಾಸಿಯು ವೃತ್ತದೊಳಗೇ ಕುಂಟುತ್ತಾ ಅಹಹಾ...ಕುಹೂ...ಎಂದು ಅಸಂಬದ್ಧ ಪ್ರಲಾಪ ಮಾಡುತ್ತಾ ಅಡ್ಡಾದಿಡ್ಡಿಯಾಗಿ

ಸುತ್ತುತ್ತಿರುತ್ತಾನೆ. ಕುಣಿತದವರ ಹಾಡಿನ ಆಖನೇ ಸೊಲ್ಲಿನಲ್ಲಿ ಬರುವ "ನಮ್ಮ ಕೈಯನ್ನಾದ್ರೂ ತುಂಬಿ ಕಳುಹಿ" ಎಂಬಲ್ಲಿಗೆ ಹಾಡು ಮುಕ್ತಾಯವಾಗುತ್ತದೆ. ಕುಣಿತವೂ ನಿಲ್ಲುತ್ತದೆ. ಕುಣಿಯುವ ಮಂದಿ ಗುಂಪಾಗಿ ನಿಂತು ಕೊನೆಗೆ ಅಂಗಳದ ಬದಿಗೆ ಸರಿದು ಮುಖ್ಯ ಸ್ಥಳವನ್ನು ಸನ್ಯಾಸಿಗೆ ಬಿಟ್ಟು ಕೊಡುತ್ತಾರೆ.

ಇಷ್ಟರಲ್ಲಿ ದಾಸಯ್ಯನು ಶಂಖವನ್ನು ಊದುತ್ತ, ಜಾಗಟೆ ಬಡಿಯುತ್ತ ಸದ್ದು ಮಾಡುತ್ತಿರುತ್ತಾನೆ. ಬ್ರಾಹ್ಮಣನು ಜನಿವಾರದ ಗಂಟನ್ನು ಹಿಡಿದುಕೊಂಡು, ಅದನ್ನು ನೀವುತ್ತಾ, ಪೂಜೆ ಮಾಡುವವನಂತೆ ನಟಿಸುತ್ತಾನೆ. ಬಾಯಲ್ಲಿ ಮಂತ್ರ ಹೇಳುವವನ ರೀತಿಯಲ್ಲಿ ವಟಗುಟ್ಟುತ್ತಿರುತ್ತಾನೆ. ಇವರಿಬ್ಬರ ಮಧ್ಯೆ ನಿಲ್ಲುವ ಸನ್ಯಾಸಿಯು ಬ್ರಾಹ್ಮಣ ಮತ್ತು ದಾಸಯ್ಯನ ಕಡೆ ತಿರುಗಿ ಅವರಿಬ್ಬರನ್ನು ಲೇವಡಿ ಮಾಡಲು ಆರಂಭಿಸುತ್ತಾನೆ. ಬ್ರಾಹ್ಮಣನ ಮಂತ್ರವನ್ನು ತಾನೂ ಅನುಕರಿಸುವ, ದಾಸಯ್ಯನ ಶಂಕದ ಧ್ವನಿಯನ್ನು ತನ್ನ ಕಂಠದಿಂದ ಹೊರಡಿಸುವ ಸನ್ಯಾಸಿ ಅವರನ್ನು ಅಣಕಿಸುವುದು ಸ್ಪಷ್ಟವಾಗಿದೆ. ಕೊನೆಗೆ ಬ್ರಾಹ್ಮಣ ಮತ್ತು ದಾಸಯ್ಯರನ್ನು ಅಂಗಳದ ಸುತ್ತ ಓಡಿಸುತ್ತಾನೆ. ನಿಗುರಿ ನಿಂತಂತಿದ್ದ ತನ್ನ ಶಿಶ್ನವನ್ನು ಅವರಿಬ್ಬರಿಗೂ ಮುಟ್ಟಿಸಲು ಯತ್ನಿಸುತ್ತಾ ಅವರನ್ನು ಅವಮಾನಿಸುತ್ತಾನೆ. ಸ್ವಲ್ಪ ಹೊತ್ತು ಹೀಗೆ ನಡೆದ ಅನಂತರ ಬ್ರಾಹ್ಮಣ ಮತ್ತು ದಾಸಯ್ಯ ಅಂಗಳದ ಬದಿಗೆ ಸರಿದು ರಂಗದಿಂದ ಮರೆಯಾಗುತ್ತಾರೆ.

ಈಗ ಅಂಗಳದಲ್ಲಿ ಸನ್ಯಾಸಿ ಒಬ್ಬನೇ ಇರುತ್ತಾನೆ. ಆತ ತನ್ನ ಹಿಂದಿನ ಚೇಷ್ಟೆಗಳನ್ನೆಲ್ಲ ಪುನರಾವರ್ತಿಸುತ್ತಾನೆ. ಅಹಹಾ... ಊಹೂಹೂ... ಎಂದು ಕೂಗುವುದು,ಕುಂಟುವುದು, ಬಾಯಿ ತೆರೆದು ಆರ್ಭಟಿಸುವುದು, ಅತ್ತಂತೆ ಮಾಡುವುದು, ಭಿಕ್ಷೆ ಬೇಡುವುದು ಇತ್ಯಾದಿ ಅಭಿನಯಗಳನ್ನು ಮಾಡುತ್ತಾನೆ. ಶಿಶ್ನವನ್ನು ಕೈಯಲ್ಲಿ ಹಿಡಿದುಕೊಂಡು "ಎದ್ದು ನಿಂತಿದೆ... ಸಾಟಿ ಇಲ್ಲ... ಒಂದೇ ಕುತ್ತಿಗೆ ಒಂಬತ್ತು ಮಕ್ಕಳಾಗಬೇಕು." ಎಂದು ಹೇಳುತ್ತಾನೆ. ಮತ್ತ ಸ್ವಲ್ಪ ಕುಣಿದು 'ಹೊಳೆ ಬದಿಗೆ ಹೋಗಬೇಕು..ಲಕ್ಷಿ (ಶಿಶ್ನ) ಪೂಜೆ ಮಾಡಬೇಕು' ಎನ್ನುವನು. ಪ್ರೇಕ್ಷಕರಾಗಿರುವ ಮನೆ ಹೆಂಗಸರೆಲ್ಲ ನಾಚುವಂತೆ ಶಿಶ್ನವನ್ನು ಆಡಿಸುತ್ತಾನೆ. ಇಷ್ಟರಲ್ಲೇ ಅಂಗಳದಿಂದ ಮರೆಯಾಗಿದ್ದ ಬ್ರಾಹ್ಮಣ, ದಾಸಯ್ಯ ಮತ್ತು ಕುಣಿತದವರು ಅಂಗಳಕ್ಕೆ ಬರುತ್ತಾರೆ. ಇವರ ಕೆಲಸಗಳಿಂದ ಸಂಪ್ರೀತರಾದ ಮನೆಮಂದಿ ಏನನ್ನಾದರೂ (ಹೆಚ್ಚಾಗಿ ಭತ್ತ) ಕೊಟ್ಟರೆ ಅದನ್ನು ಬಗಲಿಗೇರಿಸಿಕೊಂಡು ಮುಂದಿನ ಮನೆಗೆ ನಡೆಯುತ್ತಾರೆ. ಹೀಗೆ ದಾರಿ ನಡೆಯುವಾಗ ಸಿದ್ಧವೇಶದ ಇನ್ನೊಂದು ತಂಡ ಎದುರಾಗಬಾರದು. ಎದುರಾದರೆ ಸಿದ್ಧರ ಬಗೆಗೆ, ಮಠಗಳ ಬಗೆಗೆ ಪ್ರಶ್ನೋತ್ತರಗಳಾಗುತ್ತವೆ. ಸರಿಯಾದ ಉತ್ತರಗಳು ಬಾರದಿದ್ದರೆ ಹೊಡೆದಾಟವಾಗುತ್ತದೆ. ಹಾಗಾಗಿ ಎರಡೂ ತಂಡಗಳು ಮುಖಾಮುಖಿಯಾಗುವುದನ್ನು ತಪ್ಪಿಸಿಕೊಳ್ಳುತ್ತವೆ. ಸುಗ್ಗಿ ಹುಣ್ಣಿಮೆಯ ದಿನದಂದು ಈ ಕುಣಿತ ನಿಲ್ಲುತ್ತದೆ. ಆ ದಿನ ತಂಡದವರೆಲ್ಲ ಒಟ್ಟು ಸೇರಿ ಮೊದಲು ಒಟ್ಟು ಸೇರಿದ ಜಾಗದಲ್ಲಿ 'ಪುರುಷರ ಪೂಜೆ' ಮಾಡುತ್ತಾರೆ. ಕೋಳಿ ಕೊಯ್ದು, ರೊಟ್ಟಿ, ಹೆಂಡ ಕೊಟ್ಟು ತಾವೂ ಉಂಡೂ ಆ ದಿನವನ್ನು ಸಂಭ್ರಮದಿಂದ ಕಳೆಯುತ್ತಾರೆ.

ಇಲ್ಲಿನ ವಿವರಗಳನ್ನು ಸೂಕ್ತವಾಗಿ ಗಮನಿಸಿದರೆ ಇಡೀ ಸಿದ್ಧವೇಶದಲ್ಲಿ 'ಸನ್ಯಾಸಿ'ಗೆ ಪ್ರಮುಖ ಸ್ಥಾನ ಸಂದಾಯವಾಗಿದೆ. ಈ ಸನ್ಯಾಸಿ ಸಿದ್ಧವೇಶದತ್ತಿ ಕುಣಿವ 'ಸಿದ್ಧರ' ಇಲ್ಲವೇ 'ಪುರುಷ ಮಕ್ಕಳ' ವೃತ್ತವನ್ನು ಭೇದಿಸಿ ಒಳಹೋಗಬಲ್ಲ, ಆತನಿಗೆ ಸಿದ್ಧರೆಲ್ಲರೂ ತಲೆಬಾಗುತ್ತಾರೆ. ಬ್ರಾಹ್ಮಣ ಮತ್ತು ದಾಸಯ್ಯನನ್ನು ಅಂಗಳದಲ್ಲಿ ಓಡಾಡಿಸುವುದಲ್ಲದೆ ಅವರನ್ನು ಅವಮಾನಿಸುವ ಕೆಲಸವನ್ನು ಸನ್ಯಾಸಿ ಮಾಡುತ್ತಾನೆ. ಅಂಗಳದಲ್ಲಿ ಬೇಕಾದಂತೆ

ಕುಣಿಯುವ, ಮಾತನಾಡುವ, ಓಡಾಡುವ, ಕಿರುಚುವ, ಕುಂಟುವ ಅವಕಾಶ ಇರುವುದು ಸನ್ಯಾಸಿಗೆ ಮಾತ್ರ. ಅಂಗಳದ ಮೇಲೆ ಅವನ ಹಿಡಿತ ಪೂರ್ಣ ಪ್ರಮಾಣದ್ದು. ಇದು ಅಭ್ಯಾಸ ಯೋಗ್ಯವಿಚಾರವಾಗಿದೆ.

ಸಿದ್ಧವೇಶದ ಸನ್ಯಾಸಿಯ ಬಾಹ್ಯ ವಿವರಗಳು, ಚಲನವಲನಗಳು ಮಾತುಗಾರಿಕೆಯ ಶೈಲಿ ಮತ್ತು ಆ ಪಾತ್ರದ ಗುಣ ಧರ್ಮವನ್ನು ಪರೀಕ್ಷಿಸಿದರೆ, ಅದು ಮಧ್ಯಕಾಲೀನ ಕರ್ನಾಟಕದಲ್ಲಿ ಅತ್ಯಂತ ಜನಪ್ರಿಯವಾಗಿರುವ ಲಕುಲೀಶ, ಪಾಶುಪತ ಸನ್ಯಾಸಿಗಳನ್ನೇ ಪೂರ್ತಿಯಾಗಿ ಹೋಲುತ್ತದೆ. 'ಲಕುಲ'ಕ್ಕೆ 'ದೊಣ್ಣೆ' ಎಂಬ ಅರ್ಥವಿದೆ. ಸಿದ್ಧವೇಶದ ಸನ್ಯಾಸಿಯ ಕೈಯಲ್ಲಿ ದೊಣ್ಣೆ ಇಲ್ಲದೆ ಹೊರಗೆ ಹೊರಡಲಾರ. ಮೇಲಾಗಿ ಲಾಕುಳ ಶೈವರು ನಗ್ನರಾಗಿದ್ದುಕೊಂಡು ಕಾಮುಕರಂತೆ ವರ್ತಿಸುತ್ತಿದ್ದರೆಂಬುದನ್ನು ಹೂಯೆನ್‌ತ್ಸಾಂಗನು ತನ್ನ ಬರಹದಲ್ಲೆ ದಾಖಲು ಮಾಡಿದ್ದಾನೆ. ಲಾಕುಳ ಪರಂಪರೆಗೆ ಇನ್ನೊಂದು ಹೆಸರಾದ ಕಾಳಾಮುಖರಲ್ಲಿ ಅತಿಮಾರ್ಗಿಗಳಿದ್ದರು. ಅವರು ಸುಂದರ ಸ್ತ್ರೀಯರ ಮುಂದೆ ಕಾಮಚೇಷ್ಟೆಗಳನ್ನು ಮಾಡುವುದಲ್ಲದೆ, ಬ್ರಾಹ್ಮಣರನ್ನು ಅವಮಾನಿಸುತ್ತಿದ್ದರು. ಎಂದು ಬ್ರಿಗ್ಸ್‌ೇ ಹೇಳಿರುವುದೂ ಮೇಲಿನದಕ್ಕೆ ಪೂರಕವಾಗಿದೆ. ಕಾಳಮುಖ ಪರಂಪರೆಯ ಗುರುಗಳನ್ನು 'ಗೊರವ'ರೆಂದೂ ಕರೆಯುತ್ತಾರೆ. ಸಿದ್ಧವೇಶ ಕುಣಿಯುವ ಗೌಡರು ಗೊರವನ ಪೂಜೆಯನ್ನು ಮಾಡುತ್ತಾರೆ. ಇದು ಶೈವ ಪರಂಪರೆಗೂ ಸಿದ್ಧವೇಶಕ್ಕೂ ಗೌಡರಿಗೂ ಇರುವ ಸಂಬಂಧವನ್ನು ಗುರುತಿಸಲು ಸಹಾಯಮಾಡುವ ಪ್ರಮುಖ ಅಂಶ. ವಾಸ್ತವವಾಗಿ ಒಕ್ಕಲಿಗರು ಲಾಕುಳ ಶೈವರ ಗಾಢವಾದ ಪ್ರಭಾವಕ್ಕೆ ಒಳಗಾಗಿದ್ದಾರೆ. ಕದರಿ ಬೆಟ್ಟದಲ್ಲಿರುವ ಲಕುಲೀಶನು ಕೈಯಲ್ಲಿ ದೊಣ್ಣೆ ಹಿಡಿದಿದ್ದು, ಸಿದ್ಧರ ಆರಾಧ್ಯ ದೈವವಾಗಿದ್ದಾನೆ. ಗೌಡರು ಕದ್ರಿಗೂ ವಿಶೇಷ ಗೌರವ ಸಲ್ಲಿಸುತ್ತಾರೆ. ಬಯಲು ಸೀಮೆಯ ಆರಾಧ್ಯ ದೈವವಾಗಿದ್ದಾನೆ. ಗೌಡರು ಕದ್ರಿಗೂ ವಿಶೇಷ ಗೌರವ ಸಲ್ಲಿಸುತ್ತಾರೆ. ಬಯಲು ಸೀಮೆಯ ಒಕ್ಕಲಿಗರು ಆದಿಚುಂಚನಗಿರಿಗೆ ಗೌರವ ಸಲ್ಲಿಸುವುದೂ ಇದಕ್ಕೆ ಪೂರಕವಾದ ಅಂಶ.

ಹೀಗೆ ಸಿದ್ಧವೇಶದ ಸನ್ಯಾಸಿಯನ್ನು ಸುಲಭವಾಗಿ ಲಾಕುಳಶೈವ ಪರಂಪರೆಯ ಸನ್ಯಾಸಿಯೆಂದು ಹೇಳಿ ಬಿಡಬಹುದು. ಆದರೆ ಸಿದ್ಧವೇಶದಲ್ಲಿನ 'ಸಿದ್ಧ' ಪದಕ್ಕೂ, ಸಿದ್ಧವೇಶಕ್ಕಿರುವ ಇನ್ನೊಂದು ಹೆಸರಾದ 'ಪುರುಷರ ಮಕ್ಕಳ ಕುಣಿತ'ದ 'ಪುರುಷ' ಪದಕ್ಕೂ ಈ ಲಾಕುಳ ಸನ್ಯಾಸಿಗೂ ಇರುವ ಸಂಬಂಧವನ್ನು ಇಷ್ಟು ಸುಲಭವಾಗಿ ಹೇಳಲಾಗದು. 'ಸಿದ್ಧ' ಪದಕ್ಕೆ 'Prooved substantiated' ಎಂಬ ಅರ್ಥವಿದೆ. ಇದು 'ಸಿದ್ಧಿ'–ಸಿದ್ಧಾಂತ ಎಂಬ ಪದಗಳೊಡನೆ ಸಂಬಂಧಹೊಂದಿದೆ. ಇದಕ್ಕೆ 'Established end' ಎಂಬುದು ಮೊನೆಯರ್‌ನ ವ್ಯಾಖ್ಯಾನ. 'ಪರಿಪೂರ್ಣ', 'ಪಕ್ವವಾದ', 'ಸಾಧನೆ'ಯ ಗುರಿಮುಟ್ಟಿದೆ, ಎಂಬ ಅರ್ಥದಲ್ಲಿ 'ಸಿದ್ಧ' ಪದವು ಪ್ರಯೋಗವಾಗಿದೆ.

ಇಂಥ ಯೋಗಾಭ್ಯಾಸದಲ್ಲಿ ನಿರತರಾಗಿರುವ 'ಜೋಗಿಗಳು ಅಥವಾ ಸಿದ್ಧರನ್ನು ಕರ್ನಾಟಕದಲ್ಲಿ ನಾವಿಂದೂ ಕಾಣುತ್ತೇವೆ. ಅವರು ಅನೇಕ ಮಠಗಳನ್ನು ಕಟ್ಟಿಸಿದ್ದು, ಅವು 'ಸಿದ್ಧ ಮಠ' ಇಲ್ಲವೇ 'ಜೋಗಿಮಠ' ಎಂದು ಜನಪ್ರಿಯವಾಗಿವೆ. ಕದರಿ ಮಠ, ವಿಟ್ಲದ ಮಠ, ಮರ್ಕಂಜ ಮಠ, ಆದಿಚುಂಚನಗಿರಿ ಮಠ–ಇವಕ್ಕೆ ಕೆಲವು ಉದಾಹರಣೆಗಳು. ಸಿದ್ಧವೇಶದ ಹಾಡಿನಲ್ಲಿ ಬರುವ ೧೪ ಮಠಗಳ ಹೆಸರಿನಲ್ಲಿ ಕನಿಷ್ಠ ಹತ್ತಾದರೂ ಸಿದ್ಧರ ಮಠಗಳೇ ಆಗಿವೆ.

ಈ ಸಿದ್ಧರ ಮಠದ ಶಿಷ್ಯರಾದ ಜೋಗಿಗಳು ಪಾಶುಪತ ಶೈವರೆಂಬುದು ಈಗಾಗಲೇ ಒಪ್ಪಿತವಾದ ವಿಚಾರ. ಕಾಲಭೈರವ ಇವರ ಕುಲದೇವರು. ಡಾ.ಚಿದಾನಂದ ಮೂರ್ತಿಯವರ ಪ್ರಕಾರ ಕಾಲಭೈರವ ಆರಾಧನೆ ಮೂಲತಃ ಕಾಪಾಲಿಕರದ್ದು. ಮಧ್ಯಕಾಲೀನ ಕರ್ನಾಟಕದ ರಾಜಕೀಯ ಧಾರ್ಮಿಕ ಬೆಳವಣಿಗೆಯ ಪರಿಣಾಮವಾಗಿ ಕಾಪಾಲಿಕರು

ಮತ್ತು ಕಾಳಾಮುಖರು ಪರಸ್ಪರ ಪ್ರಭಾವಕ್ಕೆ ಒಳಗಾಗಿರಬೇಕು. ಕಾಪಾಲಿಕರ ಕಾಲಭೈರವನು ಪಾಶುಪತರ ಆರಾಧನೆಯನ್ನು ಪಡೆಯುತ್ತಾ ಬಂದದ್ದಕ್ಕೆ ಅನೇಕ ಶಾಸನಗಳು ಸಾಕ್ಷಿ ಹೇಳುತ್ತವೆ. ಗೌಡರೂ ಕಾಲಭೈರವನನ್ನು ಕೆಂಚರಾಯನೆಂಬ ಹೆಸರಿನಲ್ಲಿ ಆರಾಧಿಸಿಕೊಂಡು ಬರುತ್ತಿದ್ದಾರೆ. 'ಕಾಶಿಗೆ ಹೋದರೆ ವಿಶ್ವನಾಥನನ್ನು ನೋಡದಿದ್ದರೂ ಕಾಲಭೈರವನನ್ನು ನೋಡಬೇಕು' ಎಂಬ ಹೇಳಿಕೆಯೊಂದು ಗೌಡರಲ್ಲಿ ಬಳಕೆಯಲ್ಲಿದೆ.

ಇದರೊಂದಿಗೆ ಸಿದ್ಧ ವೇಷದವರನ್ನು 'ಪುರುಷರ ಮಕ್ಕಳು' ಎಂದು ಕರೆಯುವುದನ್ನು ಲಕ್ಷಿಸಬೇಕು. ಜೋಗಿಗಳನ್ನು ಪುರುಷರೆಂದೇ ಕರೆಯುವ ಸಂಪ್ರದಾಯ ವಾಡಿಕೆಯಲ್ಲಿದೆ. ಜೊತೆಗೆ ಸುಳ್ಯದ ಪರಿಸರದಲ್ಲಿ ಗೌಡರಿಂದ ಆರಾಧನೆಗೆ ಒಳಪಡುವ ಪುರುಷ ಭೂತವು ಕೂಡಾ ಇಲ್ಲಿ ಉಲ್ಲೇಖಾರ್ಹ. ಈ ಭೂತವು ತಾನು ಕಾಶಿಗೆ ಹೋಗಿ ಕಾಲಭೈರವನನ್ನು ಪೂಜಿಸಿ ಬರುತ್ತೇನೆಂದು ಹೇಳುತ್ತದೆ. ಜೊತೆಗೆ ಭಾಗಮಂಡಲದಲ್ಲಿ ಸೂಳೆಯರ ಮೇಳ ಮಾಡಿಸಿದನೆಂದೂ ಹೇಳಿಕೊಳ್ಳುತ್ತದೆ. ಪಾಡ್ದನದಲ್ಲಿ 'ಕಾಶೀಮಠ, ಕದ್ರಿಮಠ, ವಿಟ್ಲೇಲ ಮಠ'ದ ಉಲ್ಲೇಖವೂ ಬರುತ್ತದೆ. ಮ್ಯಾನರ್ ಸಂಗ್ರಹಿಸಿದ 'ಮುಡದೇರ್ ಕಾಲಭೈರವ' ಪಾಡ್ದನದಲ್ಲಿ ನಾಲ್ವರು ಪುರುಷರೊಂದಿಗೆ ಅವರ ಕುಲದೈವ ಕಾಲ ಭೈರವನೂ ಬಂದದ್ದರ ವರ್ಣನೆಯಿದೆ. ಇವಿಷ್ಟೂ ವಿವರಗಳೂ 'ಜೋಗಿಗಳ–ಪುರುಷರ–ಕಾಲ ಭೈರವರ'ಸಂಬಂಧದ ಬಗೆಗೆ ಖಚಿತವಾದ ಸುಳಿವು ನೀಡುತ್ತವೆ.

ಮಧ್ಯಕಾಲೀನ ಕರ್ನಾಟಕದಲ್ಲಿ ನಾಥಸಿದ್ಧ ಪರಂಪರೆಗೆ 'ಸಿದ್ಧಮತ', 'ಸಿದ್ಧಮಾರ್ಗ' ಎಂಬ ಹೆಸರಿತ್ತು. ಈ ನಾಥಸಿದ್ಧರು ಕರ್ನಾಟಕದ ಎಲ್ಲ ಜಾತಿ ಜನಾಂಗದವರನ್ನು ತನ್ನ ತೆಕ್ಕೆಗೆ ಒಗ್ಗಿಸಿಕೊಂಡಿದ್ದರು. ಸಿದ್ಧವೇಷದಲ್ಲಿನ 'ಸಿದ್ಧ' ಪದವು ಈ ನಾಥಸಿದ್ಧವನ್ನೇ ಸಂಕೇತಿಸುವುದು ಸ್ಪಷ್ಟವಾಗಿದೆ. ಪುರುಷ ಭೂತ, ಮುಡದೇರ್ ಕಾಲಭೈರವರಲ್ಲಿನ ಉಲ್ಲೇಖವು ಈ ನಾಥಸಿದ್ಧರ ಪರಂಪರೆಗೆ ಸಾಕ್ಷಿಯಾಗಿದೆ. ಹಾಗಾಗಿ ಸಿದ್ಧವೇಶ ಕುಣಿಯುವವರನ್ನು 'ಪುರುಷ ಮಕ್ಕಳು' ಎಂದು ಕರೆಯುವುದು ಸಹಜವೇ ಆಗಿದೆ. ಆದರೆ 'ಪುರುಷರ ಮಕ್ಕಳೂ', 'ಲಾಕುಳ ಶೈವರು' ಬೇರೆ ಬೇರೆ ಎಂಬುದನ್ನು ಮರೆಯುವಂತಿಲ್ಲ. ಸಿದ್ಧವೇಶದಲ್ಲಿ ಅವು ಒಂದೆಂಬಂತೆ ಕಂಡರೂ ಪುರುಷ ಭೂತವನ್ನು ಗಮನಿಸಿ ಈ ಕೆಳಗಿನ ವ್ಯತ್ಯಾಸವನ್ನು ಗುರುತಿಸಬಹುದು. ಈ ವ್ಯತ್ಯಾಸಗಳು ನಾಥಸಿದ್ಧರಿಗೂ ಕಾಳಾಮುಖ ಇಲ್ಲವೇ ಲಾಕುಳ ಶೈವರಿಗೂ ಇರುವ ವ್ಯತ್ಯಾಸಗಳಿಗೆ ಸೂಚನೆಯಾಗಬಹುದು.:

೦೧. ಲಾಕುಳ ಶೈವ ಅಥವಾ ಕಾಳಾಮುಖ ಸನ್ಯಾಸಿಗಳು ದಿಗಂಬರರು. ಸಿದ್ಧವೇಶದ ಸನ್ಯಾಸಿಯಲ್ಲಿ ಇದು ಸ್ಪಷ್ಟ. ನಾಥಸಿದ್ಧರ ಪ್ರತಿನಿಧಿ ಎಂಬಂತೆ ತೋರುವ ಪುರುಷಭೂತವು ಲಂಗೋಟಿ ಧರಿಸುತ್ತದೆ.

೦೨. ಲಾಕುಳ ಶೈವ ಸನ್ಯಾಸಿಗಳು ಮಾಂಸಾಹಾರಿಗಳು. ಆದರೆ ನಾಥಸಿದ್ಧರು ಸಸ್ಯಾಹಾರಿಗಳು. ಇದು ಕೂಡ ಆನಂತರದ ಕಾಲಘಟ್ಟದಲ್ಲಿ ಬರುವಂಥದ್ದು. ಏಕೆಂದರೆ ಪುರುಷಭೂತವು ಭಂಗಿ ಸೇದುತ್ತದೆ. ಮಿಗಿಲಾಗಿ ಈ ಸಿದ್ಧರು ಕೂಡಾ ಪುರೋಹಿತಶಾಹಿಯನ್ನು ಪ್ರತಿಭಟಿಸಿ ನಮ್ಮ ಜಾತಿಯವರೇ ಆಗಿದ್ದಾರೆ. ಆದರೆ ಕಾಲಾಂತರದಲ್ಲಿ ಅದು ಮತ್ತೆ ಮಾಂಸಾಹಾರವನ್ನು ಬಿಟ್ಟುಕೊಟ್ಟು ಹೆಚ್ಚು ವಿಶಿಷ್ಟವಾಗಿದೆ.

೦೩. ಲಾಕುಳ ಶೈವರು ಕಾಮವನ್ನೇ ಭಗವದಾರಾಧನೆಯ ಮಾರ್ಗಕ್ಕೆ ಮಾಧ್ಯಮವನ್ನಾಗಿ ಬಳಸಿದ್ದರು. ನಾಥಸಿದ್ಧರ ತಾತ್ವಿಕತೆ ಈ ರೀತಿಯದಲ್ಲವಾದರೂ, ಇವರೂ ಲಾಕುಳ ಶೈವರ ಪ್ರಭಾವಕ್ಕೆ ಬಿದ್ದಂತಿದೆ. ಪುರುಷಭೂತವು ಭಾಗಮಂಡಲದಲ್ಲಿ ಸೂಳೆಯರ ಮೇಳ ಮಾಡಿಸಿದ್ದೇ ಇದಕ್ಕೆ ಸಾಕ್ಷಿ.

೧೪. ನಾಥಸಿದ್ಧರಲ್ಲಿ ಸ್ತ್ರೀಯರಿಗೆ ಕೂಡಾ ಸಮಾನವಾದ ಸ್ಥಾನವಿತ್ತು. ಪುರುಷ ಭೂತಕ್ಕೆ 'ಜವುಳಿ ಜಂಗಮ'ಳೆಂಬ ತಂಗಿ ಇರುವ ಉಲ್ಲೇಖವೂ ಆ ಭೂತದ ಪಾಡ್ದನದಲ್ಲಿದೆ. ನಾಥಸಿದ್ಧರಲ್ಲಿ ಜೋಗಿಣಿಯರಿದ್ದುದನ್ನು ವಿದ್ವಾಂಸರು ಗುರುತಿಸಿದ್ದಾರೆ. ಕಾಳಾಮುಖರಲ್ಲಿ ಸ್ತ್ರೀಯರಿದ್ದುದಕ್ಕೆ ಶಾಸನಾಧಾರಗಳಿದ್ದರೂ ಸಿದ್ಧವೇಶದಲ್ಲಿ ಅದಕ್ಕೆ ಆಧಾರಗಳಿಲ್ಲ. ಹೀಗೆ ಸಿದ್ಧವೇಶದ ಕುಣಿತದಲ್ಲಿ ನಾಥಸಿದ್ಧರೂ ಮತ್ತು ಲಾಕುಳ ಶೈವರು ಒಟ್ಟು ಸೇರಿರುವುದನ್ನು ಕಾಣುತ್ತೇವೆ. ಹೀಗೆ ಒಟ್ಟು ಸೇರಿದ್ದು ಯಾವಾಗ ಮತ್ತು ಅದಕ್ಕೆ ಕಾರಣಗಳೇನೆಂಬುದನ್ನು ವಿವರಿಸಲು ಬೇಕಾದಷ್ಟು ಮಾಹಿತಿಗಳು ಲಭ್ಯವಿಲ್ಲ. ೧೦ರಿಂದ ೧೪ನೇ ಶತಮಾನದ ಮಧ್ಯೆ ಕರ್ನಾಟಕದಲ್ಲಿ ನಡೆದ ಧಾರ್ಮಿಕ ಕ್ರಾಂತಿಯ ಯಾವುದೋ ಹಂತದಲ್ಲಿ ಇದು ನಡೆದಿರಬಹುದು.

ಸಿದ್ಧವೇಶದಲ್ಲಿ ದಾಸಯ್ಯ ಮತ್ತು ಬ್ರಾಹ್ಮಣರ ನಿರಾಕರಣೆಯಿದೆ. ಇದು ವೈಷ್ಣವ ಮತ್ತು ಪುರೋಹಿತಶಾಹಿ ಪರಂಪರೆಯ ನಿರಾಕರಣೆಯೂ ಹೌದು. ಉಚ್ಚವರ್ಗದ ಪಾಂಡಿತ. ಪೂರ್ಣ ವಿಚಾರ ಪರಂಪರೆಗೆ ವಿರುದ್ಧವಾಗಿ ವಿಜೃಂಭಿಸಿದ ವೈದಿಕೇತರ ಸಂಪ್ರದಾಯದ ಪಳೆಯುಳಿಕೆಯಾಗಿ ಇಂದು ಸಿದ್ಧವೇಶ ಉಳಿದಿದೆ. ಇಂದಿಗೂ ಬ್ರಾಹ್ಮಣರಿಂದ ತಿರಸ್ಕೃತವಾದ ಜಾತಿಯ ಜನಗಳೇ ಲಾಕುಳ, ಭೈರವ, ಕಾಳಾಮುಖ, ಕಾಪಾಲಿಕ ಮತ್ತು ಪಾಶುಪತ ಮತಗಳಲ್ಲಿರುವುದನ್ನು ನಾವು ಕಾಣುತ್ತೇವೆ.

ಆಳುವ ವರ್ಗದ ವಿರುದ್ಧ ಸಿಡಿದೆದ್ದು ನಿಂತ ಸಾಮಾನ್ಯ ಜನರ ಧರ್ಮವದು. ಜನಪದದಲ್ಲಿ ಉಳಿದುಬಂದಿರುವ ಈ ತಾತ್ತ್ವಿಕತೆಯು ಮಧ್ಯಕಾಲೀನ ರಹಸ್ಯ ತಾಂತ್ರಿಕ ಪಂಥಗಳ ಬಗೆಗೆ ವಿಶೇಷ ಬೆಳಕು ಚೆಲ್ಲುತ್ತದೆ.

**ಸಿದ್ಧವೇಶದ ಹಾಡುಗಳು**

ದುಂಬಿಸಾಲೆ ದುಂಬಿಸಾಲೆ
ಸಿದ್ದುಲಿಂಗ ಮುದ್ದುಲಿಂಗ — ಸುದ್ದ ಬೇಸೋ
ನಾವು ಯಾವ ಊರು ಯಾವ ತಾಳ — "
ನಾವು ಕಾಶಿಯ ತಳದವರು — ಸುದ್ದ ಬೇಸೋ
ನಾವು ಕಾಶಿಯ ತಳದಿಂದ — "
ನಾವು ಕದಿರೆಯ ಮಠಕ್ಕಾಗಿ — "
ನಾವು ಕದಿರೆಯ ಮಠದಿಂದ — "
ನಾವು ಬಿದಿರೆಯ ಮಠಕ್ಕಾಗಿ — "
ನಾವು ಬಿದಿರೆಯ ಮಠದಿಂದ — "
ನಾವು ಗಾಳಿಯ ಮಠಕ್ಕಾಗಿ — "
ನಾವು ಗಾಳಿಯ ಮಠದಿಂದ — "
ನಾವು ಗೋಳಿಯ ಮಠಕ್ಕಾಗಿ — "
ನಾವು ಗೋಳಿಯ ಮಠದಿಂದ — "

ನಾವು ವಿಟ್ಲೇಲ ಮಠಕ್ಕಾಗಿ ,,
ನಾವು ವಿಟ್ಲೇಲ ಮಠದಿಂದ ,,
ನಾವು ಬಗೂರು ಮಠಕ್ಕಾಗಿ ,,
ನಾವು ಬಗೂರು ಮಠದಿಂದ ,,
ನಾವು ಅಂಬೆಯ ಮಠಕ್ಕಾಗಿ ,,
ನಾವು ಅಂಬೆಯ ಮಠದಿಂದ ,,
ನಾವು ತುಂಬೆಯ ಮಠಕ್ಕಾಗಿ ,,
ನಾವು ತುಂಬೆಯ ಮಠದಿಂದ ,,
ನಾವು ನೆಕ್ಕಿಯ ಮಠಕ್ಕಾಗಿ ,,
ನಾವು ನೆಕ್ಕಿಯ ಮಠದಿಂದ ,,
ನಾವು ನೇರಳೆ ಮಠಕ್ಕಾಗಿ ,,
ನಾವು ನೇರಳ ಮಠದಿಂದ ,,
ನಾವು ಶೃಂಗೇರಿ ಮಠಕ್ಕಾಗಿ ,,
ನಾವು ಶೃಂಗೇರಿ ಮಠದಿಂದ ,,
(ಸನ್ಯಾಸಿ ಪ್ರವೇಶ)
ನಾವು ಹೂವೆಂಗಿ ಮಠಕ್ಕಾಗಿ ,,
ನಾವು ಹೂವೆಂಗಿ ಮಠದಿಂದ ಸುದ್ದ ಬೇಸೋ
ನಾವು ಗುರುಪುರ ಮಠಕ್ಕಾಗಿ ,,
ನಾವು ಗುರುಪುರ ಮಠದಿಂದ ,,
ನಾವು ಹಳ್ಳಿಗೆ ಬಿದ್ದೆವಮ್ಮ ,,
ನಾವು ಪುರ್ಸರಾಯರ ಹೆಸರು ಹೇಳಿ ,,
ನಾವು ಹತ್ತು ತಾಯಿ ಮಕ್ಕಳಯ್ಯ ,,
ನಾವು ಒಂದೇ ತಾಯಿ ಮಕ್ಕಳಂತೆ ,,
ನಾವು ದೇವ್ರಮುಂದೆ ಆಡಿಕೊಂಡು ,,
ನಾವು ಬಚ್ಚಿಬಳಲಿ ಬಂದೆವಮ್ಮ ,,
ನಮ್ಮ ಹುಲ್ಲು ಕತ್ತಿ ಹನುಮಪ್ಪಯ್ಯ ,,

ನಮ್ಮ ಗುಂಡು ಕಲ್ಲು ಗುರುವಪ್ಪಯ್ಯ ,,

ನಮ್ಮ ಚಟ್ಟೆ ಬತ್ತ ಓಟ್ಟೆ ಸಂಕರ ,,

ನಮ್ಮ ಬಾರುಕೋಲು ಬಸವಯ್ಯ ,,

ನಾವು ಇನ್ನೊಂದೆಡೆ ಹೋಗಬೇಕು ,,

ನಮ್ಮ ಕೈಯನ್ನಾದರೂ ತುಂಬಿ ಕಳಿಸಿ ,,

ನಾವು ವರುಷಕ್ಕೊಮ್ಮೆ ಬರುವರಯ್ಯ ,,

ನಾವು ತಾರಾವು ಮಾರಾವಲ್ಲ ,,

ನಾವು ಹತ್ತಕ್ಕೊಂದು ತಾರಪೂರ ,,

ನಮ್ಮ ಎಂಟಕ್ಕೊಂದು ಘಂಟೆಸರ ,,

**ಸಮಾರೋಪ**

ಹೀಗೆ ಒಟ್ಟನಿಂದ ಸುಳ್ಯ ಪರಿಸರದ ಗೌಡರು ತಮ್ಮದೇ ಆದ ವಿಶಿಷ್ಟ ಚರಿತ್ರೆ ಮತ್ತು ವರ್ತಮಾನಗಳಿಂದ ಇತರ ಸಮುದಾಯಗಳಿಗಿಂತ ಭಿನ್ನವಾಗಿ ಆದರೆ ಆ ಸಮುದಾಯಗಳೊಡನೆ ಹೊಂದಾಣಿಕೆ ಮಾಡಿಕೊಂಡು ಬದುಕುತ್ತಿದ್ದಾರೆ. ತುಳು ನಾಡಿಗೆ ಹೊರಗಿನಿಂದ ಬಂದರೂ ತುಳುನಾಡಿನ ಸಾಂಸ್ಕೃತಿಕ ವಿವರಗಳೊಡನೆ ಸಂಘರ್ಷವಿಲ್ಲದೆ ಹೀಗೆ ಹೊಂದಾಣಿಕೆ ಮಾಡಿಕೊಂಡು ಬದುಕಿದ ಈ ಸಮುದಾಯದ ಅಧ್ಯಯನವು ಮನುಕುಲದ ಚರಿತ್ರೆ ವರ್ತಮಾನ ಮತ್ತು ಮರು ಹೊಂದಾಣಿಕೆಗಳ ಬಗೆಗೆ ನಮ್ಮ ತಿಳುವಳಿಕೆಯನ್ನು ಅಗಾಧವಾಗಿ ಹೆಚ್ಚಿಸಬಲ್ಲದು.

**೭.೩ ನಾಮಧಾರಿ ಒಕ್ಕಲಿಗರು**

ನಾಮಧಾರಿ ಒಕ್ಕಲಿಗರ ಪಂಗಡವು ಕರ್ನಾಟಕದ ಒಕ್ಕಲಿಗ ಜಾತಿಯ ಅತಿ ದೊಡ್ಡ ಪಂಗಡಗಳಲ್ಲಿ ಎರಡನೆಯದು. ಇವರು ಶಿವಮೊಗ್ಗ ಜಿಲ್ಲೆಯ ತೀರ್ಥಹಳ್ಳಿ, ಹೊಸನಗರ ತಾಲ್ಲೂಕು, ಚಿಕ್ಕಮಗಳೂರು ಜಿಲ್ಲೆಯ ಕೊಪ್ಪ, ನರಸಿಂಹ ರಾಜಪುರ, ಶೃಂಗೇರಿ ಮತ್ತು ಮೂಡಿಗೆರೆ ತಾಲ್ಲೂಕು, ದಕ್ಷಿಣ ಕನ್ನಡ ಜಿಲ್ಲೆಯ ಪುತ್ತೂರು, ಸುಳ್ಯ, ಬೆಳ್ತಂಗಡಿ ತಾಲ್ಲೂಕುಗಳಲ್ಲಿ ವ್ಯಾಪಕವಾಗಿಯೂ, ಬಯಲುಸೀಮೆಯ ಕಡೂರು, ಬೇಲೂರು, ನಾಗಮಂಗಲ, ಕುಣಿಗಲ್, ಪಿರಿಯಾಪಟ್ಟಣ, ಹುಣಸೂರು, ಕೆ.ಆರ್.ನಗರ, ಹೆಗ್ಗಡೆದೇವನ ಕೋಟೆ, ಹಾಸನ ಮತ್ತು ಕೊಡಗು ಜಿಲ್ಲೆಯ ಕೆಲವೆಡೆಗಳಲ್ಲಿ ಮತ್ತು ಕೇರಳದ ವೈನಾಡಿನಲ್ಲಿ ಅಲ್ಲಲ್ಲಿ ಕಂಡುಬರುತ್ತಾರೆ.

ಒಕ್ಕಲಿಗ ಜಾತಿಯ ಇತರ ಒಳಪಂಗಡಗಳ ಜನರು ಹೇಳಿಕೊಳ್ಳುವಂತೆ, ತಾವು ಉತ್ತರದ ಕಡೆಯಿಂದ ಬಂದವರೆಂದೂ ತಮ್ಮ ಮೂಲಪುರುಷ ಆದಿಗೌಡನೆಂದೂ ಹೇಳಿಕೊಳ್ಳುತ್ತಾರೆ. ಇದರ ಸಮರ್ಥನೆಗಾಗಿ ಒಂದು ಕತೆ ಹೇಳುತ್ತಾರೆ. ಈ ಕತೆ ಒಕ್ಕಲಿಗರ ವಂಶಾವಳಿ ಹೇಳುವ ಹೆಳವರ ಕತೆಯನ್ನು ಬಹುಮಟ್ಟಿಗೆ ಹೋಲುತ್ತದೆ. ''ಹಿಂದೆ ಆದಿಗೌಡನೆಂಬುವವನಿದ್ದ. ಅವನಿಗೆ ಏಳು ಮಂದಿ ಗಂಡು ಮಕ್ಕಳೂ, ಸುಂದರಿಯಾದ ಒಬ್ಬ ಮಗಳೂ ಇದ್ದರು. ಕೀಳು ಜಾತಿಯವನೊಬ್ಬ ಮಗಳನ್ನು ಮದುವೆ ಮಾಡಿ ಕೊಡಬೇಕೆಂದು ಗೌಡನ ಮೇಲೆ ಒತ್ತಡ ಹೇರಿದ.

ಗೌಡನಿಗೆ ಪಾರಾಗಲು ದಾರಿಯಿಲ್ಲದೆ ತನ್ನ ಕುಟುಂಬದೊಂದಿಗೆ ಆ ಸ್ಥಳ ಬಿಟ್ಟು ದಕ್ಷಿಣದತ್ತ ವಲಸೆ ಬಂದ. ಮಾರ್ಗದಲ್ಲಿ ನದಿಯೊಂದನ್ನು ದಾಟಿ ಬಂದು ಒಂದೆಡೆಯಲ್ಲಿ ನೆಲೆ ನಿಂತ. ಮುಂದೆ ಈ ಗೌಡನ ಮಕ್ಕಳೇ ಒಕ್ಕಲಿಗರಾಗಿ ಬೆಳೆದರು". ಈ ಕತೆಯ ಇನ್ನೊಂದು ಪಾಠಾಂತರ ಹೀಗಿದೆ: ಆದಿಗೌಡನ ಮಕ್ಕಳು ಕಿತ್ತಾಡುತ್ತಿದ್ದುದನ್ನು ಗಮನಿಸಿದ ಭಗವಂತ ಒಂದು ದಿನ ಗೌಡನಿಗೆ ಕಾಣಿಸಿಕೊಂಡ. ಆ ಏಳೂ ಜನರು ತಮಗೆ ಇಷ್ಟವಾದ ಒಂದೊಂದು ವಸ್ತುವನ್ನು ತರಲು ಹೇಳಿದ. ಒಬ್ಬೊಬ್ಬ ಒಂದೊಂದು ವಸ್ತುವನ್ನು ತಂದು ತೋರಿಸಿದರು. ನೇಗಿಲು ತಂದು ತೋರಿಸಿದವನಿಗೆ ಉಳುಮೆ ಮಾಡಿ ಜೀವಿಸಲು ಸೂಚಿಸಿದ. ಮುಂದೆ ಆತನ ವಂಶದವರೇ ವ್ಯವಸಾಯಗಾರರಾದರು. ಒಕ್ಕಲಿಗರಾದರು. ಇನ್ನೊಂದು ಕತೆಯ ಪ್ರಕಾರ ಒಕ್ಕಲಿಗರ ಹುಟ್ಟಿಗೆ ಶಿವನೇ ಕಾರಣ. ಹಿಂದೆ ಶಿವ ಭೂಮಿ ಉಳುವ ಕಾಯಕ ಮಾಡುತ್ತಿದ್ದ. ಪ್ರತಿದಿನ ಅವನ ಹೆಂಡತಿ ಕೆಲಸ ಮಾಡುತ್ತಿದ್ದ ಕಡೆಗೇ ಊಟ ತಂದುಕೊಡುತ್ತಿದ್ದಳು. ಒಂದು ದಿನ ಹೊತ್ತಿಗೆ ಸರಿಯಾಗಿ ಊಟ ತಂದು ಕೊಡಲಾಗಲಿಲ್ಲ. ಶಿವನಿಗೆ ಹಸಿವು ತಡೆಯದಾಯಿತು. ತನ್ನ ಬೆವರಿನಿಂದ ಒಂದು ಗಂಡು, ಒಂದು ಹೆಣ್ಣು ಸೃಷ್ಟಿಸಿದ. ಅವರು ಶಿವನ ಆದೇಶದಂತೆ ಊಟ ತಂದುಕೊಟ್ಟರು. ಅವರ ಸಹಾಯವನ್ನು ಕೃತಜ್ಞತೆಯಿಂದ ನೆನೆದ ಶಿವ 'ಏನಾದರೂ ವರ ಬೇಡಿಕೊಳ್ಳಿ' ಎಂದ. ಆಗ ಅವರು 'ಹೊಟ್ಟೆಪಾಡು ನಡೆಸಲು ಒಂದು ದಾರಿ ತೋರಿಸಬೇಕು'. ಎಂದು ಕೇಳಿಕೊಂಡರು. ಶಿವತಾನು ಹಿಡಿದ ಮೇಳಿಯನ್ನೇ ನೀಡಿ ಒಕ್ಕಲುತನ ಮುಂದುವರಿಸಿಕೊಂಡು ಹೋಗಲು ಸೂಚಿಸಿದ. ಇವರೇ ಒಕ್ಕಲಿಗರು.

ಮೊದಲ ಕತೆ ಹನ್ನೆರಡನೆಯ ಶತಮಾನದ ಧಾರ್ಮಿಕ ಕ್ರಾಂತಿಯ ಹಿನ್ನೆಲೆಯಲ್ಲಿ ಹುಟ್ಟಿಕೊಂಡಿರುವ ಸಾಧ್ಯತೆಯಿದೆ. ಆದರೆ ಗೌಡನೇ ಇವರ ಮೂಲಪುರುಷ ಎಂದು ಒಪ್ಪಿಕೊಳ್ಳಲು ಚಾರಿತ್ರಿಕ ಆಧಾರಗಳು ಸಾಲವು. ಎರಡನೆಯ ಮತ್ತು ಮೂರನೆಯ ಕತೆಗಳು ಇಡಿಯಾಗಿ ವ್ಯವಸಾಯ ವೃತ್ತಿಯನ್ನು, ಒಕ್ಕಲಿಗರನ್ನು ಕುರುತಿವೆಯೇ ಹೊರತು ನಾಮಧಾರಿ ಒಕ್ಕಲಿಗರ ಮೂಲದ ಬಗ್ಗೆ ಏನನ್ನು ಹೇಳುವುದಿಲ್ಲ.

ನಾಮಧಾರಿ ಒಕ್ಕಲಿಗರ ಪ್ರಾಚೀನತೆಯನ್ನು ಸ್ಥಾಪಿಸಲು ಖಚಿತ ಆಧಾರಗಳಿಲ್ಲ. ಆದರೂ ಜೈನಧರ್ಮದ ಪ್ರಾಬಲ್ಯ ಕುಗ್ಗಿದ ದಿನಗಳಲ್ಲಿ, ಹನ್ನೆರಡನೆಯ ಶತಮಾನದ ಧಾರ್ಮಿಕ ಕ್ರಾಂತಿಯಿಂದಾಗಿ ಹೊಸತಾಗಿ ಹುಟ್ಟಿಕೊಂಡ ಒಂದು ಪಂಗಡ ಇದಾಗಿರಬಹುದು. ರಾಮಾನುಜಾಚಾರ್ಯರ ಉಪದೇಶದಿಂದ ಹೊಯ್ಸಳ ಚಕ್ರವರ್ತಿ ಬಿಟ್ಟಿದೇವ ವಿಷ್ಣುವರ್ಧನ ಎಂಬ ಹೆಸರಿನಲ್ಲಿ ವೈಷ್ಣವನಾಗಿ ಮತಾಂತರ ಹೊಂದಿದ ಮೇಲೆ ಮೇಲುಕೋಟೆ ಮತ್ತು ಬೇಲೂರುಗಳು ಶ್ರೀ ವೈಷ್ಣವ ಮತದ ಪ್ರಚಾರಕೇಂದ್ರಗಳಾದ ಮೇಲೆ ಆ ಸುತ್ತಿನ ಒಕ್ಕಲಿಗ ಕುಟುಂಬಗಳು ಜೈನ ಮತದಿಂದ ವೈಷ್ಣವ ಮತಕ್ಕೆ ತಮ್ಮ ನಿಷ್ಠೆಯನ್ನು ಬದಲಾಯಿಸಿ ನಾಮಾಧಾರಿಗಳಾಗಿರಬೇಕು.

ನಾಮಧಾರಿಗಳಲ್ಲಿ ವೈಷ್ಣವ ಮತ್ತು ಶೈವ ಎರಡೂ ಸಂಪ್ರದಾಯದ ಗುಂಪುಗಳಿವೆ. ಮಲೆನಾಡಿನ ಭಾಗಗಳಲ್ಲಿ ನೆಲೆಸಿರುವವರೆಲ್ಲ ಪ್ರಧಾನವಾಗಿ ವೈಷ್ಣವ ಸಂಪ್ರದಾಯದವರೆನಿಸಿದರೆ ಬಯಲುಸೀಮೆ ಕಡೆಯವರು ಶೈವ ಮೂಲದವರು ಎಂದು ಗುರುತಿಸಲ್ಪಟ್ಟಿದ್ದಾರೆ. ಎರಡೂ ಗುಂಪುಗಳು ಒಂದೇ ಪ್ರದೇಶದಲ್ಲಿ ನೆಲೆಸಿರುವ ನಿದರ್ಶನಗಳೂ ಇವೆ. ವೈಷ್ಣವ ಮೂಲಕ್ಕೆ ಆರೋಪಿಸಿಕೊಳ್ಳುವವರು ತಿರುಪತಿ ತಿಮ್ಮಪ್ಪ, ಮೇಲುಕೋಟೆ ಚಲುವರಾಯಸ್ವಾಮಿ, ಧರ್ಮಸ್ಥಳದ ಮಂಜುನಾಥ ಈ ಮುಂತಾದ ದೇವರುಗಳನ್ನು ಮನೆದೇವರಾಗಿ ಒಪ್ಪಿಕೊಂಡಿದ್ದಾರೆ ಶೈವ ಸಂಪ್ರದಾಯದವರು ಕಾಲಭೈರವನನ್ನು ಮನೆದೇವರಾಗಿ ಸ್ವೀಕರಿಸಿದ್ದಾರೆ. ಶೈವ ಸಂಪ್ರದಾಯದವರು ಹಣೆಗೆ ವಿಭೂತಿ ಧರಿಸಿದರೆ, ವೈಷ್ಣವ ಗುಂಪಿನವರು ಹಣೆಯ ಮೇಲೆ ನಾಮ ಹಾಕಿಕೊಳ್ಳುತ್ತಾರೆ.

ಗಂಧ ವಿಭೂತಿ ಧರಿಸುವ ಇನ್ನೊಂದು ಗುಂಪೂ ಇದೆ. ಅವರು ಹೆಗ್ಗಡೆ ಮನೆತನದವರು. ಕೆಲವು ಮನೆತನಗಳು ತಿರುಪತಿ ತಿಮ್ಮಪ್ಪನಿಗಾಗಲೀ ಕಾಲಭೈರವನಿಗಾಗಲೀ ನಡೆದುಕೊಳ್ಳದೆ ಕಿಗ್ಗದ ಋಷ್ಯಶೃಂಗನಿಗೆ ನಡೆದುಕೊಳ್ಳುತ್ತಾರೆ. ಸುಬ್ರಹ್ಮಣ್ಯನಿಗೆ ನಡೆದುಕೊಳ್ಳುವ ಮನೆಗಳಲ್ಲಿ ಸಾಮಾನ್ಯವಾಗಿ ಮನೆಯ ನಾಲ್ಕು ಮೂಲೆಗಳಿಗೆ ನಾಗರಕಲ್ಲುಗಳನ್ನು ಸ್ಥಾಪಿಸಿರುತ್ತಾರೆ.

ಹೀಗೆ ವೈಷ್ಣವ, ಶೈವ ಎಂದು ಪ್ರಧಾನವಾಗಿ ಎರಡು ಬೇರೆ ಬೇರೆ ಗುಂಪುಗಳಿದ್ದರೂ ಪರಸ್ಪರರ ನಡುವೆ ಅನಾದಿಯಿಂದಲೂ ರಕ್ತ ಸಂಬಂಧಗಳು ನಡೆಯುತ್ತ ಬಂದಿವೆ. ಎರಡೂ ಗುಂಪಿನವರು ಶಿವ ಮತ್ತು ವಿಷ್ಣುವನ್ನು ಸಮಾನವಾಗಿ ಪೂಜಿಸುತ್ತಾರೆ. ಆದರೆ ಸದ್ಯದ ಸಮೀಕ್ಷೆಯಂತೆ ವೈಷ್ಣವಾರಾಧಕರ ಸಂಖ್ಯೆಯೇ ಹೆಚ್ಚು. ಹೀಗೆ ವೈಷ್ಣವ ಗುಂಪಿನವರ ಸಂಖ್ಯೆ ಹೆಚ್ಚಲು ವೈಷ್ಣವ ಹೆಬ್ಬಾರರು, ಓಷ್ಟಮಯ್ಯಗಳು, ದೊಂಬಿದಾಸರು ಇನ್ನು ಮುಂತಾದವರು ವೈಷ್ಣವ ಪಂಥದ ಪ್ರಚಾರ ಕಾರ್ಯವನ್ನು ಬಿರುಸಿನಿಂದ ನಡೆಸಿದುದೇ ಕಾರಣವೆಂದು ಹೇಳಲಾಗಿದೆ. ವೈಷ್ಣವ ಹೆಬ್ಬಾರರು ಹೊಯ್ಸಳ ರಾಜರ ಆಶ್ರಯಹೊಂದಿ ಪ್ರಬಲರಾಗಿದ್ದುದರಿಂದ ವೈಷ್ಣವ ಒಕ್ಕಲುಗಳು ಹೆಚ್ಚಲು ಸಾಧ್ಯವಾಯಿತು. ತಮಿಳುನಾಡಿನ ಶ್ರೀರಂಗ ಮತ್ತು ಕಾಂಜೀವರಂ ಕಡೆಯಿಂದ ವಲಸೆ ಬಂದ ವೈಷ್ಣವ ಹೆಬ್ಬಾರರು ಆಗಿನ ಮೈಸೂರು ರಾಜ್ಯದ ಕಡಬ (ತುಮಕೂರು ಜಿಲ್ಲೆ), ಗ್ರಾಮ (ಹಾಸನ ಜಿಲ್ಲೆ), ಶ್ರೀರಂಗಪಟ್ಟಣ (ಮಂಡ್ಯ ಜಿಲ್ಲೆ), ಮೋಳೂರು (ಬೆಂಗಳೂರು ಜಿಲ್ಲೆ), ಬೇಲೂರು (ಹಾಸನ ಜಿಲ್ಲೆ) - ಈ ಐದು ಸ್ಥಳಗಳಲ್ಲಿ ನೆಲೆಸಿ ತಮ್ಮ ಸುತ್ತಿನ ಜನರಿಗೆ ವೈಷ್ಣವ ಮತದಲ್ಲಿ ಒಲವು ಹುಟ್ಟಿಸಿದುದು ಅವರ ಸಂಖ್ಯೆ ಹೆಚ್ಚಲು ಸಹಾಯಕವಾಯಿತು.

ಪಶ್ಚಿಮ ಘಟ್ಟದ ಮಲೆಪ್ರಾಂತವಾದ ಗಂಗಾಮೂಲ, ಕಳಸ ಮತ್ತು ನೆರಿಯಗಳನ್ನು ಹೊಯ್ಸಳ ಚಕ್ರವರ್ತಿಗಳಿಂದ ಗುತ್ತಿಗೆ ಪಡೆದು ಮೂವರು ಹೆಬ್ಬಾರರು ಆಳುತ್ತಿದ್ದರೆಂದು ಶಾಸನಗಳು ಹೇಳುತ್ತವೆ[೯]. ಇದರಿಂದ ಹೆಬ್ಬಾರರ ಆಳ್ವಿಕೆಗೆ ಮೊದಲೇ ಒಕ್ಕಲಿಗರು ಜೈನ ಧರ್ಮಾನುಯಾಯಿಗಳಾಗಿದ್ದರು ಎನ್ನಬಹುದು. ಜೈನರಾಗಿದ್ದವರು ನಾಮಧಾರಿಗಳಾಗಿ ಪರಿವರ್ತನೆ ಹೊಂದಿದವರು ಎಂಬುದಕ್ಕೆ ಇಂದಿಗೂ ಉಳಿದಿರುವ ಸಾಕ್ಷ್ಯಾಧಾರಗಳಿವು. ಬಯಲು ಸೀಮೆಯ ನಾಮಧಾರಿಗಳು ಮಧ್ಯಮಾಂಸ ಸೇವಿಸದಿರುವುದು, ಪಿತೃಪಕ್ಷ ಮತ್ತಿತರ ಹಬ್ಬಾಚರಣೆಗಳಲ್ಲಿ 'ಜೈನೆಡೆ' ಎಂದು ಮೀಸಲು ಎಡೆ ಇಡುವುದು, ಸೂರ್ಯಾಸ್ತಕ್ಕೆ ಮೊದಲು ಊಟ ಮಾಡುವುದು, ಭಾನುವಾರ ಮಜ್ಜಿಗೆ ಕಡೆಯದಿರುವುದು, ಮನೆಗೆ ಅರುವತ್ತು ತುಂಬಿದಾಗ 'ಅಣುವ್ರತ' ಆಚರಿಸುವುದು. ಜೈನ ಮನೆತನದ ಹೆಸರುಗಳನ್ನು ಉಳಿಸಿಕೊಂಡಿರುವುದು ಇತ್ಯಾದಿ.

ನಾಮಧಾರಿ ಒಕ್ಕಲಿಗರು ಜೈನ ಮತ್ತು ವೀರಶೈವ ಧರ್ಮವನ್ನು ಒಪ್ಪಿಕೊಂಡಿದ್ದರು ಎಂಬುದಕ್ಕೆ ಸಮರ್ಥನೆಯಾಗಿ ಜನರಲ್ಲಿ ಪ್ರಚಲಿತವಿರುವ ಒಂದು ಕತೆ ಹೀಗಿದೆ. ಒಮ್ಮೆ ಭಾರೀ ಮಳೆ ಬಂದಿತು. ನದಿ ಹೊಳೆಗಳಿಂದ ವಿಪರೀತ 'ಮೀನು ಹತ್ತಿದವು'. ಭಾರೀ ಗಾತ್ರದ ಮೀನುಗಳನ್ನು ಕಂಡ ಕೆಲವು ಒಕ್ಕಲಿಗರಿಗೆ ಅವನ್ನು ಹಿಡಿದು ತಿನ್ನುವ ಆಸೆಯಾಯಿತು ಆಗ ಅವರು ಕಟ್ಟಿಕೊಂಡಿದ್ದ ಜನಿವಾರ, ಲಿಂಗಗಳನ್ನು ನೇರಳೆ ಮರಕ್ಕೆ ನೇತುಹಾಕಿ ಮೀನು ಹಿಡಿಯತೊಡಗಿದರು. ಇದನ್ನು ಗಮನಿಸಿದ ಜಾತಿ ಮುಖಂಡರು ಮೀನು ಹಿಡಿದವರನ್ನು ಜಾತಿಯಿಂದ ಹೊರ ಹಾಕಿದರು. ಅನಂತರ ಮಾಂಸಾಹಾರ ತಿನ್ನುವವರದೇ ಒಂದು ಗುಂಪಾಯಿತು. ಕ್ರಮೇಣ ಮಾಂಸಾಹಾರಿಗಳ ಸಂಖ್ಯೆಯೇ ಅಧಿಕವಾಯಿತು. ಅಪ್ಪಟ ಸಸ್ಯಾಹಾರಿಗಳು ಮಲೆನಾಡು ಪ್ರಾಂತ್ಯದಿಂದ ಬಯಲುಸೀಮೆ ಮತ್ತು ಕೊಡಗು ಪ್ರದೇಶಗಳಿಗೆ ವಲಸೆ ಹೋದರು ಇದು ವಕ್ತೃವೊಬ್ಬ ನೀಡಿದ ವಿವರಣೆ.

ಆದರೆ ಕೊಡಗು ಮತ್ತು ದಕ್ಷಿಣ ಕನ್ನಡ ಪ್ರದೇಶಗಳಲ್ಲಿ ನೆಲೆಸಿರುವ ನಾಮಧಾರಿ ಒಕ್ಕಲಿಗರು ತಮ್ಮ ಪೂರ್ವಿಕರು ಐಗೂರು ಸೀಮೆಯಿಂದ ಬಂದವರೆಂದು ಹೇಳಿಕೊಳ್ಳುತ್ತಾರೆ. ಇದಕ್ಕೆ ಸ್ಪಷ್ಟ ಆಧಾರಗಳಿಲ್ಲ. ಕೊಡಗಿನ ಗೌಡರ ಪರಿಚಯ ಮಾಡಿಕೊಡುವಾಗ ಪೂಜಾರಿಯ ಮೊನ್ನಪ್ಪ ಅವರು ವ್ಯಕ್ತಪಡಿಸಿರುವ ಅಭಿಪ್ರಾಯಗಳು ಇಲ್ಲಿ ಗಮನಾರ್ಹವಾಗಿವೆ. 'ನಾಮಧಾರಿ ಒಕ್ಕಲಿಗರು ಇಕ್ಕೇರಿ ವಂಶದ ಆಳ್ವಿಕೆಯ ಕಾಲದಲ್ಲಿ ಐಗೂರಿನ (ಹಾಸನ ಜಿಲ್ಲೆ) ಸುತ್ತಮುತ್ತಲಿರುವ ಸ್ಥಳಕ್ಕೆ ಬೇರೆ ಕಡೆಯಿಂದ ಬಂದು ನೆಲೆಸಿದ ಕೆಲವು ಸಮಯದಲ್ಲಿ ದಕ್ಷಿಣ ಕನ್ನಡ ಪ್ರದೇಶಗಳಿಗೆ ಹೋಗಿ ನೆಲೆಸಿರಬಹುದು. ಕ್ರಿ.ಶ.೧೧೪೮ರ ಕಲ್ಯಾಣ ಚಾಲುಕ್ಯರ ಶಾಸನ ಮತ್ತು ವಿಜನಗರದ ಉತ್ತರ ದಕ್ಷಿಣ ಕರಾವಳಿಯ ಶಾಸನಗಳಲ್ಲಿ ಬರುವ ತೊಳಹಾರ, ತೊಳಪ್ಪ, ತುಳುವರ ಗೌಡರಾದರೆ, ದಕ್ಷಿಣ ಕನ್ನಡ ಜಿಲ್ಲೆ ಮತ್ತು ಕೊಡಗಿನಲ್ಲಿ ವಾಸವಾಗಿರುವ ಗೌಡರು ದಕ್ಷಿಣ ಮತ್ತು ಉತ್ತರ ಕರಾವಳಿ ಹಾಗೂ ಬೆಳಗಾಂ ಜಿಲ್ಲೆಯಲ್ಲಿ ವಾಸವಾಗಿದ್ದರೆಂದು ಅನುಮಾನಿಸಬಹುದು'. ಆದರೆ ಐಗೂರು ನಾಮಧಾರಿಗಳ ಮೂಲಸ್ಥಾನವಾಗಿರಲು ಸಾಧ್ಯವೇ ಇಲ್ಲ. ಈ ನಾಮಧಾರಿ ಒಕ್ಕಲಿಗರು ವಿಜಯನಗರ ಪತನಾನಂತರ ಮಹಮ್ಮದೀಯರ ಧಾಳಿಯ ಭಯದಿಂದ ಕರ್ನಾಟಕದ ಉದ್ದಗಲಕ್ಕೂ ವಲಸೆ ಹೋಗಿರಬಹುದಾದ ಸಾಧ್ಯತೆ ಇದೆ. ಇಂಥ ಸಂದರ್ಭದಲ್ಲಿ ಕೊಡಗಿಗೆ ಹೋದ ಗುಂಪಿಗೆ ಕೊಡಗಿನ ರಾಜರು ಆಶ್ರಯ ನೀಡಿ ಜಮ್ಮ ಜಹಗೀರು ಉಂಬಳಿ ಕೊಟ್ಟು ಅಲ್ಲೇ ನೆಲೆಯೂರುವಂತೆ ಅವಕಾಶ ಕಲ್ಪಿಸಿರಬೇಕು. ಕೊಡಗಿನ ಭಾಗದಲ್ಲಿ ನೆಲೆಸಿರುವ ಗೌಡರನ್ನು ತುಳುಗೌಡರೆಂದೂ ಕರೆಯುವುದುಂಟು. ಹೀಗೆ ಕರೆಯಲು ಕಾರಣ ಇವರ ಪೂರ್ವಿಕರು ಪಶ್ಚಿಮ ಘಟ್ಟಗಳ ತುಳುನಾಡಿನಿಂದ ಬಂದು ನೆಲೆಸಿದುದೇ ಆಗಿದೆ. ಎಂದು ಅಭಿಪ್ರಾಯಪಡಲಾಗಿದೆ[೬]. ತುಳುನಾಡಿನಿಂದ ಬಂದದ್ದರಿಂದ ತುಳುಗೌಡರೆಂದು ಕರೆದದ್ದು ಸರಿ. ಆದರೆ ಅವರು ತುಳುನಾಡಿನ ಮೂಲನಿವಾಸಿಗಳಲ್ಲ.

ದಕ್ಷಿಣ ಕನ್ನಡ ಜಿಲ್ಲೆಯ ಸುಳ್ಯ, ಪುತ್ತೂರು ತಾಲ್ಲೂಕುಗಳಲ್ಲಿ ನಾಮಧಾರಿ ಒಕ್ಕಲಿಗರು ವ್ಯಾಪಕವಾಗಿ ನೆಲೆಸಿದ್ದಾರೆ. ಇವರು ಕೂಡ ಮೊದಲಿಗೆ ಮಲೆನಾಡು ಪ್ರಾಂತಗಳಲ್ಲಿ ನೆಲೆಸಿದ್ದು ಕ್ರಮೇಣ ಬೇರೆ ಬೇರೆ ಕಾರಣಗಳಿಂದಾಗಿ ಅಲ್ಲಿಂದ ವಲಸೆ ಹೊರಟು ದಕ್ಷಿಣ ಕನ್ನಡದಲ್ಲಿ ಬಂದು ನೆಲೆಸಿರಬೇಕು. ಏಕೆಂದರೆ ಈ ತಾಲ್ಲೂಕುಗಳಲ್ಲಿ ನೆಲೆಸಿರುವ ನಾಮಧಾರಿಗಳ ಮನೆಮಾತು ಕನ್ನಡ ತುಳುವಲ್ಲ. ಹಾಲೇರಿ ಅರಸರ ಕಾಲದಲ್ಲಿ ಕೊಡಗಿನ ದೊಡ್ಡ ವೀರರಾಜೇಂದ್ರ ಇವರನ್ನು ಕೊಡಗಿಗೆ ಕರೆಸಿಕೊಂಡನೆಂದು ಆಧಾರಗಳು ಹೇಳುತ್ತವೆ[೭]. ಕೊಡಗನ್ನು ಲಿಂಗಾಯಿತ ಅರಸರು ಆಳುತ್ತಿದ್ದ ಕಾಲದಲ್ಲಿ ಇಕ್ಕೇರಿ ಸಂಸ್ಥಾನದ ಐಗೂರು, ಸುಳ್ಯ, ಅಮರ ಸೀಮೆಗಳಲ್ಲಿ ಲಿಂಗಾಯಿತ ಪಾಳೆಯಗಾರರಿದ್ದರು. ಅವರಿಗೂ ಕೊಡಗಿನ ಲಿಂಗರಾಜರಿಗೂ ಬಾಂಧವ್ಯವಿತ್ತು. ಅಮರ ಮತ್ತು ಸೀಮೆಗಳು ಕೊಡಗಿಗೆ ಸೇರಿದವಾಗಿದ್ದರೂ ರಾಜನು ಅವನ್ನು ದಕ್ಷಿಣ ಕನ್ನಡ ಜಿಲ್ಲೆಗೆ ಬಿಟ್ಟುಕೊಟ್ಟು, ಸಂಪಾಜೆ ಮತ್ತು ಪೆರಾಜೆ ಎಂಬ ಊರುಗಳನ್ನು ಕೊಡಗಿಗೆ ಸೇರಿಸಿಕೊಂಡ[೮]. ಆ ಸಂದರ್ಭದಲ್ಲಿ ರಾಜನು ಸುದ್ದಿ ರವಾನೆಗಾಗಿ ಹಾಗೂ ಸಣ್ಣ ಪುಟ ಕೆಲಸ ಕಾರ್ಯಗಳನ್ನು ನಿರ್ವಹಿಸುವುದಕ್ಕಾಗಿ ನಾಮಧಾರಿ ಗೌಡರನ್ನು ಬಳಸಿಕೊಂಡ. ಇವರ ಪ್ರಾಮಾಣಿಕ ಸೇವೆ ನಿಷ್ಠೆಗಳು ರಾಜನ ಮೆಚ್ಚಿಗೆ ಗಳಿಸಿದವು. ಅಮರ,ಸುಳ್ಯಗಳಿಂದ ಕೊಡಗಿಗೆ ಸಂಸಾರ ಸಮೇತರಾಗಿ ಬಂದಲ್ಲಿ ಅವರಿಗೆ ಜಮ್ಮ ಜಹಗೀರುಗಳನ್ನು ಉಂಬಳಿಯಾಗಿ ನೀಡುವುದಾಗಿ ವಾಗ್ದಾನ ನೀಡಿದ. ಅಂತೆಯೇ ಐಗೂರು ಮತ್ತು ಇಕ್ಕೇರಿ ಸಂಸ್ಥಾನಗಳಿಂದ ಕನ್ನಡ ಮಾತನಾಡುವ ಒಕ್ಕಲಿಗರು ಬಂದು ನೆಲೆಸಿದರು. ಲಿಂಗರಾಜ ಕೊಟ್ಟ ವಾಗ್ದಾನದಂತೆ ಎಲ್ಲರಿಗೂ ನಿರೂಪ ಶಿಸ್ತುಗಳನ್ನು ನೀಡಿದ[೯].

ಮಲೆನಾಡ ಪ್ರದೇಶಗಳಿಂದಲೇ ಹೆಚ್ಚಾಗಿ ನಾಮಧಾರಿ ಒಕ್ಕಲಿಗರು ಕೊಡಗಿಗೆ ವಲಸೆ ಹೋದರೆಂಬ ಭಾವನೆ ಇದೆ. ಈ ಭಾವನೆಗೆ ಪುಷ್ಟಿಯನ್ನೊದಗಿಸುವ ಆಧಾರಗಳೆಂದರೆ ಅಲ್ಲಿನ ಹೆಂಗಸರು ಮನೆನಾಡಿಗರಂತೆ ಗೊಬ್ಬೆ ಸೀರೆ ಉಡುವುದು, ಮದುವೆಯಲ್ಲಿ ಹುಡುಗಿಗೆ ಬಂಗಾರ ಹಾಗೂ ಹಣ ನೀಡುವುದು ಇತ್ಯಾದಿ.

ಎ.ಕೆ.ಅಯ್ಯರ್ ಅವರು ಒಕ್ಕಲಿಗ ಜಾತಿಯ ಒಳಪಂಗಡಗಳನ್ನು ಕುರಿತು ಬರೆಯುವಾಗ ಕೊಟ್ಟೆ ಒಕ್ಕಲಿಗರು ಮತ್ತು ಕರೆ ಒಕ್ಕಲು ಎಂಬ ಗುಂಪುಗಳನ್ನು ಸೇರಿಸಿಕೊಂಡಿದ್ದಾರೆ[೬]. ಮಳೆಗಾಲದಲ್ಲಿ ಅಡಿಕೆ ಕೊನೆಗಳಿಗೆ ಕೊಳೆ ರೋಗ ಬರದಂತೆ ಮಾಡಲು ಅಡಿಕೆ ಮರದ ಹಾಳೆಕೊಟ್ಟೆಯನ್ನು ಕೊನೆಗಳಿಗೆ ಕಟ್ಟುವ ಕಸಬು ಮಾಡುತ್ತಿದ್ದವರೇ ಕೊಟ್ಟೆ ಒಕ್ಕಲಿಗರು ಎಂದು ಹೆಸರು ಪಡೆದರು. ಇವರು ಒಂದು ಕಾಲದಲ್ಲಿ ನಾಮಧಾರಿ ಒಕ್ಕಲಿಗರೇ ಆಗಿದ್ದು ಈಚೆಗೆ ಈ ಕಸಬನ್ನು ಅವಲಂಬಿಸಿರಬೇಕೆಂದು ಊಹಿಸಲು ಸಾಕಷ್ಟು ಆಧಾರಗಳಿವೆ. ಶೈವ ಸಂಪ್ರದಾಯದ ನಾಮಧಾರಿಗಳಂತೆ ಇವರಿಗೆ ಮದ್ಯಮಾಂಸಗಳು ವರ್ಜ್ಯವಾಗಿರುವುದು. ಇವರಲ್ಲಿ ಬಹುಸಂಖ್ಯಾತರು ವೈಷ್ಣವ ಸಂಪ್ರದಾಯವನ್ನು ಅನುಸರಿಸುತ್ತಿರುವುದು ಈ ಊಹೆಗೆ ಬಲವೊದಗಿಸುತ್ತದೆ. ಸದ್ಯ ಇವರು ಶಿವಮೊಗ್ಗ ಜಿಲ್ಲೆಯ ಸಾಗರ, ಸೊರಬ ತಾಲ್ಲೂಕು ಹಾಗೂ ಉತ್ತರ ಕನ್ನಡ ಜಿಲ್ಲೆಯ ಸಿರ್ಸಿ, ಸಿದ್ದಾಪುರಗಳಲ್ಲಿ ವಿಶೇಷವಾಗಿ ಕಂಡುಬರುತ್ತಾರೆ. ಕರೆ ಒಕ್ಕಲು ಕೂಡ ಕೊಟ್ಟೆ ಒಕ್ಕಲಿಗರಂತೆ ವೈಷ್ಣವ ಸಂಪ್ರದಾಯದವರೇ. ಆದರೆ ಇವರು ಮದ್ಯ ಮಾಂಸಹಾರಿ ಪ್ರಿಯರು. ಇತರ ಒಕ್ಕಲಿಗ ಒಳಪಂಗಡಗಳ ನಡುವೆ ಇವರು ಯಾವುದೇ ಬಗೆಯ ಸಂಬಂಧ ಇಟ್ಟುಕೊಂಡಿಲ್ಲ. ಇವರು ಸಾಗರ ಮತ್ತು ಉತ್ತರ ಕನ್ನಡ ಜಿಲ್ಲೆಯ ಕೆಲವು ಭಾಗಗಳಲ್ಲಿ ಚದುರಿದಂತೆ ನೆಲೆಸಿದ್ದಾರೆ.

ನಾಮಧಾರಿ ಒಕ್ಕಲಿಗರನ್ನು ಮೊದಲು ನಾಡವರು ಎಂದು ಕರೆಯುವ ವಾಡಿಕೆಯಿತ್ತು. ಪ್ರಾಯಶ ದಕ್ಷಿಣ ಕನ್ನಡ ಪ್ರದೇಶದಿಂದ ಮಲೆನಾಡಿನತ್ತ ವಲಸೆ ಬಂದ ಬಂಟರ ಜೊತೆಯಲ್ಲೇ ಈ ಹೆಸರು ಬಂದಿರಬೇಕು. ಬಂಟರು ಮತ್ತು ನಾಡವರು ಪಶ್ಚಿಮ ಕರಾವಳಿಯ ಒಂದು ಕೃಷಿ ವರ್ಗ. 'ಬಂಟರು' ಯಾನೆ 'ನಾಡವರು' ಎಂದು ತಮ್ಮನ್ನು ಕರೆದುಕೊಳ್ಳುತ್ತಾರೆ. ಬಂಟರು ತುಳು ಭಾಷಿಕರು ನಾಡವರು ಕನ್ನಡ ಭಾಷಿಕರು. ಕುಂದಾಪುರ ಪರಿಸರದಲ್ಲೂ ಅಂಕೋಲ ಪರಿಸರದಲ್ಲೂ ತೀರ್ಥಹಳ್ಳಿ,ಶೃಂಗೇರಿ ಪರಿಸರದಲ್ಲೂ ನಾಡವರಿದ್ದು ತೀರ್ಥಹಳ್ಳಿ ಕಡೆಯ ನಾಡವರನ್ನು ನಾಮಧಾರಿಗಳೆಂದೂ ಕರೆಯುತ್ತಾರೆ. ಉತ್ತರ ಕನ್ನಡ ಜಿಲ್ಲೆಯ ನಾಡವರು ಹಿಂದೆ ಕೆಲ ಶತಮಾನಗಳ ಕಾಲ ಜೈನರಾಗಿದ್ದು ಮುಂದೆ ವೈಷ್ಣವರಾದರು. ತೀರ್ಥಹಳ್ಳಿ ಪರಿಸರದ ನಾಡವರೂ ಹಿಂದೆ ಜೈನರಾಗಿದ್ದು ಮುಂದೆ ವೈಷ್ಣವರಾಗಿ ನಾಮಧಾರಿಗಳೆಂದು ಹೆಸರು ಪಡೆದವರು. ಇವರಲ್ಲಿ ಕುಂದಾಪುರ ಪರಿಸರದಿಂದ ವಲಸೆ ಬಂದವರೇ ಹೆಚ್ಚು. ಆದರೆ ಕುಂದಾಪುರ ಕಡೆಯವರು ನಾಡವರೆಂದೇ ಪರಿಚಿತರು. ನಾಮಧಾರಿಗಳೆಂದಲ್ಲ. ಈ ಮೂರೂ ನಾಡವರ ಗುಂಪುಗಳೂ ಬಂಟರೂ ಒಂದು ಮೂಲದವರು. ಹಿಂದೆ ಅಳಿಯ ಸಂತಾನ ಅನುಸರಿಸುತ್ತಿದ್ದವರು. ನಾಮಧಾರಿ ಎಂಬ ಹೆಸರು ಬರಲು ಕಾರಣವಾದ ಕಥೆಯೊಂದು ಕುತೂಹಲಕರವಾಗಿದೆ. 'ಒಕ್ಕಲಿಗರು ಭೂ ಒಡೆತನದ ಹಕ್ಕನ್ನು ಪಡೆದಿರದಿದ್ದ ಕಾಲದಲ್ಲಿ ಅವರಲ್ಲಿ ಅವಿಭಕ್ತ ಕುಟುಂಬ ಪದ್ಧತಿಯಿದ್ದು ಜೀವನ ನಡೆಸುವುದು ದುಸ್ತರವಾಗಿತ್ತು. ನ್ಯಾಯ ರೀತಿಯಲ್ಲಿ ಬಾಳುವೆ ನಡೆಸಲು ಕಷ್ಟವಾಗುತ್ತಿತ್ತು. ಹೊಟ್ಟೆಪಾಡಿಗಾಗಿ ಈ ಜನ ಕಳ್ಳತನ ದರೋಡೆಯನ್ನು ಕೈಗೊಳ್ಳುತ್ತಿದ್ದರು. ಒಂದೊಂದು ಮನೆಯಲ್ಲಿ ಕನಿಷ್ಠ ಐದರಿಂದ ಏಳು ಮಂದಿ 'ತುಂಡು ಹುಡುಗ'ರಿರುತ್ತಿದ್ದರು. ಅವರು 'ಕೊಟು ಕಟ್ಟಿಕೊಂಡು' ರಾತ್ರಿ ವೇಳೆಯಲ್ಲಿ ಮನೆಗಳನ್ನು ಲೂಟಿ ಮಾಡುತ್ತಿದ್ದರು. ಮುಸ್ಲಿಮರ ಆಳ್ವಿಕೆಯ ಕಾಲವದು. ಕಳ್ಳತನಕ್ಕೆ ಕಠಿಣ ಶಿಕ್ಷೆ ವಿಧಿಸಲಾಗುತ್ತಿತ್ತು ಯಾರೇ ಬಂದು ಆ ಹುಡುಗರ

ಮನೆಗಳಿಗೆ ನಾಮಧಾರ್ ಮನೆಗಳು ಎಂದು ಹೆಸರಿಟ್ಟರು.(ನಾಮ್ಧಾರ್ ಎಂದರೆ ಕೇಡಿಗಳು ಎಂದರ್ಥ) ಇವರೇ ನಾಮಧಾರಿಗಳು ಎಂಬ ಈ ಕತೆಯನ್ನು ನಂಬುವುದು ಸಾಧ್ಯವಿಲ್ಲ. ಏಕೆಂದರೆ ಒಕ್ಕಲಿಗರು ರಾಮಾನುಜಾಚಾರ್ಯರ ಶ್ರೀ ವೈಷ್ಣವ ಪಂಥಾನುಯಾಯಿಗಳಾದ ದಿನದಿಂದ ನಾಮಧಾರಿ ಒಕ್ಕಲಿಗರೆನಿಸಿಕೊಂಡರು ಎಂದು ಹೇಳುವುದೇ ಹೆಚ್ಚು ಅರ್ಥಪೂರ್ಣವಾಗಿದೆ.

ಜೈನಧರ್ಮ ಪ್ರಾಬಲ್ಯವಿದ್ದ ಕಾಲದಲ್ಲಿ ಮಲೆನಾಡಿನ ಒಕ್ಕಲಿಗರು ಜೈನ ಭೂಮಾಲೀಕರ ಒಕ್ಕಲುಗಳಾಗಿದ್ದರೆಂದು ಊಹಿಸಲು ಆಧಾರಗಳಿವೆ. ಜೈನಧರ್ಮದ ಪ್ರಾಬಲ್ಯ ಕುಗ್ಗಿ ವೈಷ್ಣವ ಮತ ಹೆಚ್ಚು ಪ್ರಚುರಕ್ಕೆ ಬಂದ ದಿನಗಳಲ್ಲಿ ವ್ಯಾಪಾರ ಉದ್ಯಮದಲ್ಲಿ ನಿಪುರಾಗಿದ್ದ ಜೈನರು ತಮ್ಮ ಜಮೀನು ಮನೆಗಳನ್ನು ಒಕ್ಕಲಿಗರ ವಶಕ್ಕೊಪ್ಪಿಸಿ (ಗೇಣಿಗೆ) ಹೋಗಿರುವ ಸಾಧ್ಯತೆಗಳಿವೆ. ಇಂದಿಗೂ ಜೈನ ವಂಶದವರ ಭೂಮಿ ಮನೆಗಳು ಉಳಿದು ಬಂದಿವೆ. ತೀರ್ಥಹಳ್ಳಿ ತಾಲ್ಲೂಕಿನ ಗುಡ್ಡೇಕೇರಿ ಕಾಡಮ್ಮನವರ ಮನೆ ಜೈನರದ್ದು ಎಂದು ಹೇಳಲಾಗಿದೆ. ಆ ಮನೆಯ ರಚನಾ ವಿನ್ಯಾಸ, ಸುತ್ತಲಿನ ವಾತಾವರಣ ಜೈನ ನಿವಾಸಗಳ ನೆನಪನ್ನು ತಂದುಕೊಡುತ್ತವೆ. ತಪ್ಪು ಮಾಡಿದವರಿಗೆ ಪ್ರಾಯಶ್ಚಿತ್ತ ನೀಡುವ ಸಲುವಾಗಿ ಜೈನರು ನೆಟ್ಟಿದ್ದೆಂದು ಹೇಳಲಾದ 'ಆನೆಕಲ್ಲು' ಈ ಮನೆಯ ಆವರಣದಲ್ಲೇ ಈಗಲೂ ಇದೆ. ಈ ಕಲ್ಲನ್ನು ಸತ್ಯಪ್ರಮಾಣ ಮಾಡಿಸಲು ಇಂದಿಗೂ ಬಳಸಲಾಗುತ್ತಿದೆ.

ನಾಮಧಾರಿ ಒಕ್ಕಲಿಗರು ತಮ್ಮ ಹೆಸರುಗಳ ಮುಂದೆ ಮನೆತನ ಸೂಚಕವಾಗಿ ಗೌಡ, ನಾಯಕ, ಹೆಗ್ಗಡೆ ಎಂಬ ಅಂಕಿತಗಳನ್ನು ಹೊಂದಿದ್ದಾರೆ. ಹೆಂಗಸರು ಗೌಡ್ತಿ, ಹೆಗ್ಗಡ್ತಿ ಎಂಬ ಅಂಕಿತಗಳನ್ನು ಹೊಂದಿದ್ದಾರೆ. ಇವು ಒಂದು ರೀತಿಯಲ್ಲಿ ಅಡ್ಡ ಹೆಸರುಗಳೇ (Surname) ಆಗಿವೆ. ಈ ಅಡ್ಡ ಹೆಸರುಗಳು ಇವರ ಪೂರ್ವಿಕರು ನಿರ್ವಹಿಸುತ್ತಿದ್ದ ಕಸುಬುಗಳಿಂದಲೇ ಬಂದವು ಎಂಬುದು ಈ ಕೆಳಗಿನ ವಿವರಣೆಗಳಿಂದ ಸ್ಪಷ್ಟವಾಗುತ್ತದೆ. ಗೌಡ ಮನೆತನದವರು ಪುರಾತನ ಕಾಲದಿಂದಲೂ ಗ್ರಾಮದ ಮುಖಂಡತ್ವವನ್ನು ಹೊಂದಿದ್ದರು. ಹೆತ್ತ ಮಕ್ಕಳನ್ನು ರಕ್ಷಿಸುವಂತೆ ಇಡೀ ಗ್ರಾಮದವರ ಯೋಗಕ್ಷೇಮ ನೋಡಿಕೊಳ್ಳುತ್ತಿದ್ದರು. ಗ್ರಾಮದ ಭೂಮಿಗೆ ಒಡೆಯರಾಗಿ ಗ್ರಾಮದ ಮುಖಂಡರಾಗಿದ್ದುದರಿಂದ 'ಗೌಡ' ಎಂಬ ಹೆಸರು ಬಂದಿತು. ಹಾಗೆಯೇ ನಾಯಕ ಎಂಬುದರಿಂದ ಕೂಡ ಗ್ರಾಮದ ಮುಂದಾಳು ಎಂಬ ಅರ್ಥ ಹೊರಡುವುದಾದರೂ ಇವರು ಯೋಧವಂಶದವರಾಗಿದ್ದು ತಮ್ಮ ಜನರ ಮೇಲಿನ ದುರಾಕ್ರಮಣಗಳನ್ನು ಹತ್ತಿಕ್ಕುವ ಹೊಣೆ ಹೊತ್ತಿದ್ದರು. ಮೈಸೂರು ಅರಸರ ಆಳ್ವಿಕೆ ಕಾಲದಲ್ಲಿ ಕಳ್ಳಕಾರನ್ನು ಹಿಡಿದು ಕೊಡುವ ಕೆಲಸ ನಿರ್ವಹಿಸುತ್ತಿದ್ದುದರಿಂದ 'ನಾಯಕ' ಎಂಬ ಬಿರುದು ಬಂದಿತೆಂದು ಕೆಲ ವಕ್ತಗಳು ಹೇಳುತ್ತಾರೆ. 'ಹೆಗ್ಗಡೆ' ಎಂಬ ಅಂಕಿತದ ಬಗೆಗೂ ಇಂಥದೇ ವಿವರಣೆಗಳನ್ನು ನೀಡುತ್ತಾರೆ. ಹಿಂದೆ ರಾಜಮನೆತನದ ಕಾರ್ಯಕ್ರಮಗಳು ಯಶಸ್ವಿಯಾಗಿ ನಡೆಸಲು ಮುಂದಾಳತ್ವ ವಹಿಸುತ್ತಿದ್ದುದರಿಂದ ದೊಡ್ಡ ದೇವಾಲಯಗಳ ವಹಿವಾಟು ನಡೆಸಿ ಜನರಿಗೆ ನ್ಯಾಯನೀತಿ ಒದಗಿಸುವ ಕೆಲಸ ನಿರ್ವಹಿಸುತ್ತಿದ್ದುದರಿಂದ ಇವರಿಗೆ ಹೆಗ್ಗಡೆ ಎಂಬ ಬಿರುದು ಬಂದಿರಬೇಕು. ಅನೇಕ ವಕ್ತಗಳ ಪ್ರಕಾರ 'ಹೆಗ್ಗಡೆ' ಎಂಬ ಅಡ್ಡ ಹೆಸರು ದಕ್ಷಿಣ ಕನ್ನಡದ ತೊಂಬಟ್ಟೆಯಿಂದ ಬಂದ ಬಂಟ ಶೆಟ್ಟರ 'ಪಿರಕ' ದವರಿಗೆ ಮಾತ್ರ ಮೀಸಲು. ಅದು ಇತರರಲ್ಲಿ ಹೆಚ್ಚು ಉಪಯೋಗದಲ್ಲಿಲ್ಲ. ಅದೇನೇ ಇರಲಿ ಇವರಿಗೆ ಬಂದಿದ್ದ ಅಡ್ಡ ಹೆಸರುಗಳು ಜಾತಿ ಸೂಚಕಕ್ಕಿಂತ ಗೌರವ ಬಿರುದುಗಳೇ ಆಗಿದ್ದವು. ಕುವೆಂಪು ಅವರು ಮಾತಿನಲ್ಲಿ ಹೇಳುವುದಾದರೆ ಗೌಡ ಕಾರ್ಯಾಂಗವನ್ನೂ, ನಾಯಕ ಸೈನ್ಯಾಂಗವನ್ನೂ, ಹೆಗ್ಗಡೆ ನ್ಯಾಯಾಂಗವನ್ನೂ ಪ್ರತಿನಿಧಿಸುತ್ತವೆ.

ನಾಮಧಾರಿ ಒಕ್ಕಲಿಗರ ಗಂಡಸರ ಹೆಸರುಗಳು ಅಯ್ಯ, ಅಪ್ಪ, ಅಣ್ಣದಿಂದ ಹಾಗೂ ಹೆಂಗಸರ ಹೆಸರುಗಳು ಅಮ್ಮ ಇಂದ ಅಂತ್ಯಗೊಳ್ಳುತ್ತವೆ. ಉದಾಹರಣೆಗೆ : ಶೇಷಯ್ಯ, ಮುದ್ದಯ್ಯ, ಲೋಕಯ್ಯ ಚಿನ್ನಯ್ಯ, ಧರ್ಮಯ್ಯ ದುಗ್ಗಪ್ಪ. ನಾಗಪ್ಪ, ರಂಗಪ್ಪ, ವಾಸಪ್ಪ, ಹೂವಪ್ಪ, ದೇವಪ್ಪ, ಕುಪ್ಪಣ್ಣ ತಿಮ್ಮಣ್ಣ, ಸಿದ್ದಣ್ಣ, ವೆಂಕಣ್ಣ, ತಮ್ಮಣ್ಣ, ಈರಮ್ಮ, ಗಂಗಮ್ಮ, ತುಂಗಮ್ಮ, ಸೀತಮ್ಮ, ರತ್ನಮ್ಮ, ತಿಮ್ಮಮ್ಮ ಇತ್ಯಾದಿ. ಈ ಬಗೆಯ ಹೆಸರುಗಳ ಜೊತೆಗೆ ಕುಲದೇವರ ಮತ್ತು ಹಿರಿಯರ ಹೆಸರುಗಳನ್ನು ಮಕ್ಕಳಿಗಿಡುವ ಸಂಪ್ರದಾಯವೂ ಇದೆ. ಇತ್ತೀಚೆಗೆ ಎಲ್ಲ ಬಗೆಯ ಹೆಸರುಗಳನ್ನೂ ಇಡಲಾಗುತ್ತಿದೆ.

ನಾಮಧಾರಿಗಳು ಒಕ್ಕಲಿಗ ಜಾತಿಯ ಎಲ್ಲ ಒಳಪಂಗಡಗಳೊಂದಿಗೆ ಸಂಬಂಧಿವಿರಿಸಿಕೊಂಡಿರುವರಾದರೂ ಗಂಗಡಿಕಾರರ ನಡುವೆ ಇವರ ಬಾಂಧವ್ಯ ಹೆಚ್ಚು ನಡೆದಿರುವ ನಿದರ್ಶನಗಳಿವೆ. ನಾಮಧಾರಿಗಳಲ್ಲೇ ಶೈವ ವೈಷ್ಣವ ಎಂಬ ಭೇದವಿದ್ದರೂ ಈ ಇಬ್ಬರ ನಡುವೆ ಬಹಳ ಹಿಂದಿನಿಂದ ಮಧುರ ಬಾಂಧವ್ಯವಿದ್ದು ರಕ್ತ ಸಂಬಂಧಗಳೂ ನಡೆದಿವೆ.

ನಾಮಧಾರಿಗಳ ಪ್ರತ್ಯೇಕ ಜನಗಣತಿ ಈವರೆಗೆ ನಡೆದಿಲ್ಲವಾದ್ದರಿಂದ ಇವರ ಜನಸಂಖ್ಯೆ ಎಷ್ಟೆಂಬುದು ಖಚಿತವಾಗಿ ತಿಳಿದು ಬರುವುದಿಲ್ಲ. ೧೯೪೧ರವರೆಗೆ ಮಾತ್ರ ದೊರಕುವ ಜಾತಿವಾರು ಜನಸಂಖ್ಯಾ ವರದಿಯಲ್ಲೂ ನಾಮಧಾರಿಗಳನ್ನು ವಕ್ಕಲಿಗ ಗುಂಪಿನಲ್ಲಿ ಸೇರಿಸಿ ಗಣಿಸಲಾಗಿದೆ. ನಾಮಧಾರಿಗಳು ನೆಲೆಸಿರುವ ಭೂಪ್ರದೇಶಗಳಲ್ಲಿ ಇತರ ಒಕ್ಕಲಿಗ ಒಳಪಂಗಡ ಜನಗಳು ಹೆಚ್ಚಾಗಿ ಕಾಣಬರುವುದಿಲ್ಲವಾದ್ದರಿಂದ ಸದ್ಯ 'ವಕ್ಕಲಿಗ' ಎಂಬ ಹೆಸರಿನಲ್ಲಿ ನಮೂದಾಗಿರುವ ಸಂಖ್ಯೆಯನ್ನೇ ನಾಮಧಾರಿಗಳ ಜನಸಂಖ್ಯೆ ಎಂದು ಪರಿಗಣಿಸಬಹುದು.

೧೯೩೧ರ ಮೈಸೂರು ರಾಜ್ಯದ ಜನಗಣತಿ ವರದಿ ಪ್ರಕಾರ ಶಿವಮೊಗ್ಗ, ಕಡೂರ ಮತ್ತು ಕೊಡಗು ಜಿಲ್ಲೆಗಳ ನಾಮಧಾರಿ ಗೌಡರ ಸಂಖ್ಯೆ ಸುಮಾರು ೭೬,೬೮೫. ಶಿವಮೊಗ್ಗ ಜಿಲ್ಲೆಯ ತೀರ್ಥಹಳ್ಳಿ ಮತ್ತು ಹೊಸನಗರ ತಾಲೂಕುಗಳಲ್ಲಿ ಒಟ್ಟು ೨೫,೧೩೮ ಜನರಿದ್ದರು. ಅವರಲ್ಲಿ ೧೩,೯೪೫ ಗಂಡಸರು, ೧೧,೧೯೩ ಹೆಂಗಸರು. ಆಗಿನ ಕಡೂರು ಜಿಲ್ಲೆಯ ಚಿಕ್ಕಮಗಳೂರು,ಶೃಂಗೇರಿ, ಮೂಡಿಗೆರೆ, ನರಸಿಂಹರಾಜಪುರ ಮತ್ತು ಕೊಪ್ಪ ತಾಲ್ಲೂಕುಗಳಲ್ಲಿ ಸುಮಾರು ೩೭,೫೩೧ ಜನ ನೆಲೆಸಿದ್ದರು. ಅದರಲ್ಲಿ ೧೭,೬೬೨ ಮಂದಿ ಹೆಂಗಸರು. ೧೯,೮೬೯ ಗಂಡಸಿದ್ದರು. ಕೊಡಗಿನಲ್ಲಿ ೧೪,೦೧೬ ಮಂದಿ ನೆಲೆಸಿದ್ದರು. ಅವರಲ್ಲಿ ೭,೮೮೮ ಗಂಡಸರು, ೬,೫೨೮ ಹೆಂಗಸರು. ಪ್ರಸ್ತುತ ಅಧ್ಯಯನದ ಕಾರ್ಯಕ್ಷೇತ್ರವಾಗಿರುವ ತೀರ್ಥಹಳ್ಳಿ ತಾಲ್ಲೂಕು ನಾಮಧಾರಿ ಗೌಡರು ಪ್ರಾಬಲ್ಯವಿರುವ ಪ್ರದೇಶ. ೧೯೩೧ರ ಜನಗಣತಿ ವರದಿ ಪ್ರಕಾರ ಇಲ್ಲಿನ ನಾಮಧಾರಿಗಳ ಸಂಖ್ಯೆ ೨೦,೫೭೬ ಅದರಲ್ಲಿ ೧೧,೩೭೨ ಗಂಡಸರು ೯,೨೦೪ ಹೆಂಗಸರು.

ನಾಮಧಾರಿ ಒಕ್ಕಲಿಗರು ಒಂದು ಕಾಲದಲ್ಲಿ ಜೈನರಾಗದ್ದು ಕ್ರಮೇಣ ಬೇಸಾಯ ವೃತ್ತಿಯನ್ನು ಅವಲಂಬಿಸಿ ಒಕ್ಕಲಿಗರಾದರೆಂದು ಒಂದು ಊಹೆಯಿದೆ.[5] ಆದರೆ ಇದಕ್ಕೆ ಶಾಸನ, ಶಾಸ್ತ್ರಗಳ ಸಮರ್ಥ ಆಧಾರವಿಲ್ಲ. ಸಿಗುವ ಒಂದೇ ಒಂದು ಆಧಾರವೆಂದರೆ ಇವರು ಮದ್ಯಮಾಂಸಗಳನ್ನು ಸೇವಿಸುವುದಿಲ್ಲ ಎಂಬುದು. ಆದರೆ ಈ ಮಾತು ಕೇವಲ ಬಯಲು ಸೀಮೆ ಮತ್ತು ಕೊಡಗು ಜಿಲ್ಲೆಯ ನಾಮಧಾರಿಗಳಿಗೆ ಮಾತ್ರ ಅನ್ವಯಿಸುತ್ತವೆ.

ಉಳಿದೆಡೆಗಳಲ್ಲಿರುವ ನಾಮಧಾರಿಗಳು ಅಪ್ಪಟ ಮದ್ಯಮಾಂಸಾಹಾರಿಗಳು. ಇಷ್ಟಾದರೂ ಇವರು ಜೈನರಾಗಿದ್ದರು ಎಂಬ ಊಹೆಗೆ ಪೂರಕವಾಗಿ ಇನ್ನೊಂದು ಮಾಹಿತಿ ಸಿಗುತ್ತದೆ. ಪಿತೃಪಕ್ಷ ಮತ್ತಿತರ ಮತೀಯ ಹಬ್ಬಾಚರಣೆಗಳಲ್ಲಿ 'ಜೈನೆಡೆ' ಎಂದು ಒಂದು ಮೀಸಲು ಎಡೆಯನ್ನು ಎತ್ತಿಡುವ ಸಂಪ್ರದಾಯ ಮಲೆನಾಡ ನಾಮಧಾರಿಗಳಲ್ಲಿ ಇಂದಿಗೂ ರೂಢಿಯಲ್ಲಿದೆ. ಇದರ ನಿಜವಾದ ಉದ್ದೇಶ ಇನ್ನೂ ತಿಳಿದಿಲ್ಲ. ಈ ಬಗ್ಗೆ ಆಳವಾದ ಸಂಶೋಧನೆ ನಡೆಯಬೇಕಾದುದು ಅಗತ್ಯ.

ನಾಮಧಾರಿಗಳಲ್ಲಿ ವೈಷ್ಣವ ಮತ್ತು ಶೈವ ಎರಡೂ ಸಂಪ್ರದಾಯದ ಗುಂಪುಗಳನ್ನು ಗಮನಿಸುತ್ತೇವೆ.[೯] ಮಲೆನಾಡ ಭಾಗಗಳಲ್ಲಿ ನೆಲೆಸಿರುವವರೆಲ್ಲರೂ ವೈಷ್ಣವ ಸಂಪ್ರದಾಯದವರಾದರೆ ಕೊಡಗು ಜಿಲ್ಲೆ, ನಾಗಮಂಗಲ, ಕುಣಿಗಲ್, ಪಿರಿಯಾಪಟ್ಟಣ, ಕೆ.ಆರ್. ನಗರ, ಹೆಗ್ಗಡದೇವನ ಕೋಟೆಗಳಲ್ಲಿರುವವರು ಶೈವಮೂಲದವರೆಂದು ಹೆಸರಾಗಿದ್ದಾರೆ. ವೈಷ್ಣವ ಗುಂಪಿನವರು ತಿರುಪತಿ ವೆಂಕಟರಮಣ ಸ್ವಾಮಿ, ಮೇಲುಕೋಟೆ ಚಲುವರಾಯಸ್ವಾಮಿ ಮತ್ತು ನರಸಿಂಹ ಸ್ವಾಮಿಗಳನ್ನು ಮನೆದೇವರಾಗಿ ಸ್ವೀಕರಿಸಿದ್ದರೆ ಶೈವಸಂಪ್ರದಾಯದವರು ಕಾಲಭೈರವನನ್ನು ಆರಾಧಿಸುತ್ತಾರೆ. ವೈಷ್ಣವ ಪಂಗಡದವರು ಹಣೆಗೆ ನಾಮವನ್ನೂ ಶೈವ ಪಂಗಡದವರು ವಿಭೂತಿಯನ್ನೂ ಧರಿಸುವುದೊಂದು ವೈಶಿಷ್ಟ್ಯ.

ಅನಂತಕೃಷ್ಣ ಅಯ್ಯರ್ ಅವರು ಒಕ್ಕಲಿಗ ಜಾತಿಯ ಒಂಬತ್ತು ಒಳಪಂಗಡಗಳ ವಿವರಣೆಯನ್ನು ನೀಡುವಾಗ ನಾಮಧಾರಿ ಒಕ್ಕಲಿಗರಲ್ಲೇ ಮತ್ತೊಂದು ಗುಂಪನ್ನು ಹೆಸರಿಸಿದ್ದಾರೆ, ಕೊಟ್ಟೆ ಒಕ್ಕಲಿಗರು ಎಂದು.[೧೦] ಇವರು ಮಳೆಗಾಲದಲ್ಲಿ ಅಡಿಕೆ ಕೊನೆಗಳಿಗೆ ಕಟ್ಟುವ ಕಸುಬು ಮಾಡುತ್ತಿದ್ದುದರಿಂದ ಕೊಟ್ಟೆ ಒಕ್ಕಲಿಗರು ಎಂದು ಹೆಸರಾಗಿದ್ದಾರೆ. ಅಯ್ಯರ್ ಅವರ ಪ್ರಕಾರ ಇವರಲ್ಲಿ ಬಹು ಸಂಖ್ಯಾತರು ವೈಷ್ಣವರು. ಇವರು ಶಿವಮೊಗ್ಗ ಜಿಲ್ಲೆಯ ಸಾಗರ ಸೊರಬ ತಾಲ್ಲೂಕುಗಳಲ್ಲಿ ಮತ್ತು ಉತ್ತರ ಕನ್ನಡ ಜಿಲ್ಲೆಯ ಸಿರ್ಸಿ ಸಿದ್ದಾಪುರಗಳಲ್ಲಿ ವಿಶೇಷವಾಗಿ ಕಂಡುಬರುತ್ತಾರೆ. ಶಿಕಾರಿಪುರ ಹುಚ್ಚರಾಯ ವೆಂಕಟರಮಣನನ್ನು ಪೂಜಿಸುವರು. ಹೆಚ್ಚಾಗಿ ತೋಟಗಳಲ್ಲಿ ಕೆಲಸ ಮಾಡುವವರು. ಆದರೆ ಶೈವ ಸಂಪ್ರದಾಯದ ನಾಮಧಾರಿಗಳಂತೆ ಇವರಿಗೆ ಮದ್ಯ ಮಾಂಸಗಳು ವರ್ಜ್ಯ. ಮಲೆನಾಡ ಅದೇ ಭಾಗಗಳಲ್ಲಿ ಕರೆ (ಕಪ್ಪು ವರ್ಣದ) ಒಕ್ಕಲಿಗರು ಎಂಬ ಇನ್ನೊಂದು ಪಂಗಡದವರು ಕಾಣಸಿಗುತ್ತಾರೆ. ಇವರೂ ವೈಷ್ಣವರು ಮತ್ತು ಮದ್ಯ ಮಾಂಸಹಾರಿಗಳು. ಆದರೆ ಇವರ ಮತ್ತು ಕೊಟ್ಟೆ ಒಕ್ಕಲಿಗರ ನಡುವೆ ಯಾವುದೇ ಬಗೆಯ ಸಂಬಂಧ ಕಂಡುಬರುವುದಿಲ್ಲ ಎಂದು ಅನಂತಕೃಷ್ಣ ಅಯ್ಯರ್ ಅವರು ಬರೆದಿದ್ದಾರೆ.[೧೧]

ಮಲೆನಾಡ ಒಕ್ಕಲಿಗರು ಮುಖ್ಯವಾಗಿ ಶ್ರೀ ವೈಷ್ಣವ ಸಂಪ್ರದಾಯದವರು. ಇವರು ತಮ್ಮ ಹೆಸರುಗಳ ಮುಂದೆ ಮನೆತನಗಳ ಸೂಚಕವಾಗಿ ಹೆಗ್ಗಡೆ, ನಾಯಕ, ಗೌಡ ಎಂದು ಇಟ್ಟುಕೊಳ್ಳುವುದು ವಾಡಿಕೆ. ಮಹಿಳೆಯರನ್ನು ಹೆಗ್ಗಡ್ತಿ, ಒಕ್ಕಲುಗಿತ್ತಿ ಎಂದು ಸಂಬೋಧಿಸುವುದು ಪದ್ಧತಿ.

ಮಲೆನಾಡ ನಾಮಧಾರಿಗಳಲ್ಲಿ ಸುಮಾರು ಹದಿನೆಂಟು ಬಳಿ ಅಥವಾ ಕುಲಗಳಿವೆ. ಅವುಗಳಲ್ಲಿ ಮುಖ್ಯವೆನಿಸುವುದು. ಗಂಗರ ಬಳಿ, ತೋಳನ ಬಳಿ, ಕೌಡ್‌ಚ್ಗಿ ಬಳಿ, ಬಾಳೆ ಬಳಿ. ಅರೆಶಿನ ಬಳಿ, ಹೊನ್ನೆ ಬಳಿ,ಸೆಟ್ಟಿ ಬಳಿ, ಚಂದಿರ ಬಳಿ, ಮಿಗಾನ ಬಳಿ, ಹೊಳೆ ಬಳಿ ಇತ್ಯಾದಿ. ಈ ಬಳಿಗಳನ್ನು ತಾಯಿಯ ಕಡೆಯಿಂದ ಮಾತ್ರ ಗುರುತಿಸಲು ಸಾಧ್ಯ. ಈ ಒಂದೊಂದು ಬಳಿಯೂ ಬೇರೆ ಬೇರೆ ವಸ್ತು, ಪ್ರಾಣಿ, ಸಸ್ಯಗಳನ್ನು ಸಂಕೇತಿಸುತ್ತದೆ.

ಸಂಬಂಧಪಟ್ಟ ವಂಶದವರು ತಮ್ಮ ವಾಂಶಿಕ ಮೂಲದ ಚಿಹ್ನೆಯನ್ನು ಸಂಕೇತಿಸುವ ವಸ್ತುಗಳನ್ನು, ಪ್ರಾಣಿಗಳನ್ನು ಅಥವಾ ಸಸ್ಯಗಳನ್ನು ಉಪಯೋಗಿಸಬಾರದೆಂದು ನಿರ್ಬಂಧವಿದೆ.[೬] ಮತ್ತೊಂದು ಮುಖ್ಯ ಸಂಗತಿಯೆಂದರೆ ಒಂದೇ ಬಳಿಗೆ ಸೇರಿದವರ ನಡುವೆ ರಕ್ತ ಸಂಬಂಧ ಕುದುರುವುದಿಲ್ಲ. ಅಂದರೆ ಇವರಲ್ಲಿ ಸ್ವಗೋತ್ರ ವಿವಾಹವಿಲ್ಲ. ಆದರೆ ಮದುವೆಯ ನಂತರದಲ್ಲಿ ಹೆಣ್ಣು ತನ್ನ ಗಂಡನ ಕುಲತ ಆಚರಣೆಗಳನ್ನು ಅನುಸರಿಸಕೊಂಡು ಹೋಗಬೇಕು.

ಮಲೆನಾಡ ನಾಮಧಾರಿಗಳಲ್ಲಿ ಒಂದು ವಿಶಿಷ್ಟ ಸಾಮಾಜಿಕ ವ್ಯವಸ್ಥೆ ರೂಪುಗೊಂಡಿದ್ದಂತೆ ಕಾಣುತ್ತದೆ. ಇವರು ಧಾರ್ಮಿಕ ವಿಧಿ ನಿಷೇಧಗಳನ್ನು ಗಮನಿಸಿದರೆ ಇವರು ವೈಷ್ಣವರೂ ಹೋದು ಎಂಬುದು ಸಾಬೀತಾಗುತ್ತದೆ. ಇನ್ನೊಂದು ಗಮನಾರ್ಹ ಅಂಶವೆಂದರೆ ಇವರು ವೈದಿಕರು ಅಥವಾ ವೀರಶೈವರಂತೆ ಯಾವುದೇ ಒಂದು ಪಂಥಕ್ಕೆ ಕಟ್ಟುಬಿದ್ದವರಲ್ಲ. ಶಿವ - ವಿಷ್ಣು ಇಬ್ಬರನ್ನೂ ಸಮಾನವಾಗಿ ಪೂಜಿಸುತ್ತಾರೆ. ಶಿವರಾತ್ರಿ-ನವರಾತ್ರಿಗಳನ್ನು ಸಮಾನ ಉತ್ಸಾಹ ಸಂಭ್ರಮಗಳಿಂದ ಆಚರಿಸುತ್ತಾರೆ. ಸ್ತ್ರೀ ದೇವತೆಗಳನ್ನು ಆರಾಧಿಸುವವರು. ಭೂತ ದೆವ್ವಗಳಲ್ಲಿ ಅಪಾರ ನಂಬಿಕೆ. ಇನ್ನೂ ಹೇಳುತ್ತಾ ಹೋದರೆ ಹಿಂದೂ ಸಮಾಜದ, ಎಲ್ಲ ನಂಬಿಕೆ ಸಂಪ್ರದಾಯಗಳನ್ನು ಮೈಗೂಡಿಸಿಕೊಂಡಿರುವ ಜನ ಇವರು ಎನ್ನಬೇಕಾಗುತ್ತದೆ.

ಈ ಜನರ ಆಹಾರಪದ್ಧತಿ, ಕೃಷಿ ವಿಧಾನ, ಜೀವನವೈವಿದ್ಯ ಮುಂತಾದವರನ್ನು ಸಂಪೂರ್ಣವಾಗಿ ಹೋಲುವ ಜನರು ಮಧ್ಯಪ್ರದೇಶ, ಮಹಾರಾಷ್ಟ್ರಗಳಲ್ಲೂ ಕಾಣಬರುತ್ತದೆ. ಅಲ್ಲಿನ ಜನರನ್ನು 'ಕುಂಬಿ'ಯರು ಎಂದು ಕರೆಯುತ್ತಾರಂತೆ. ಮಲೆನಾಡಿನಂತೆ ಅಲ್ಲಿಯೂ ಭೂಮಾಲೀಕರು ಬೇರೆ ಕೃಷಿಕರೇ ಬೇರೆ; ಒಡೆಯರು ಬೇರೆ ಒಕ್ಕಲುಗಳೇ ಬೇರೆ.[೭]

ಮಲೆನಾಡ ನಾಮಧಾರಿಗಳು ನೆಲೆಸಿರುವ ಭೂ ಪ್ರದೇಶದ ರಚನೆ. ಮೇಲ್ಮೈಲಕ್ಷಣ ಮಳೆ ಬೆಳೆ ಮುಂತಾದವುಗಳಲ್ಲಿ ವೈಶಿಷ್ಟ್ಯಗಳಿವೆ.

ಪಶ್ಚಿಮ ಘಟ್ಟಗಳ ಅಂಚಿನ ಪೂರ್ವಕ್ಕೆ ಬಯಲು ಪ್ರದೇಶದವರೆಗೂ ಹಬ್ಬಿರುವ ಕಾಡಿನಿಂದ ಆವೃತ್ತವಾಗಿರುವ ಭೂಪ್ರದೇಶವನ್ನು ಮಲೆನಾಡು ಎಂದು ಕರೆಯುವುದು ಎಲ್ಲರಿಗೂ ತಿಳಿದಿದೆ. ಈ ಭೂಭಾಗ ಅತ್ಯಂತ ಹೆಚ್ಚು ಮಳೆ ಬೀಳುವ ಪ್ರದೇಶವೆಂದು ಪ್ರಸಿದ್ಧಿ ಹೊಂದಿದೆ. ಆದ ಕರ್ನಾಟಕದಲ್ಲೇ ಅತ್ಯಂತ ಕಡಿಮೆ ಜನಸಾಂದ್ರತೆಯ ಪ್ರದೇಶವಿದು.

ಮಲೆನಾಡಿಗರು ವರ್ಷಕ್ಕೊಂದು ಬತ್ತದ ಬೆಳೆ (ನೀರಿನ ಸೌಕರ್ಯ ಇದ್ದೆಡೆಗಳಲ್ಲಿ ಎರಡು ಬೆಳೆ) ತೆಗೆಯುತ್ತಾರೆ. ಅಡಿಕೆ, ಕಬ್ಬು, ವೀಳ್ಯದೆಲೆ, ಮೆಣಸು, ಕಾಫಿ ಮತ್ತಿತರ ದವಸ ಧಾನ್ಯಗಳನ್ನು ಬೆಳೆಯುತ್ತಾರೆ.

ಈ ಮೇಲಿನ ಭೌಗೋಳಿಕ ಕಾರಣಗಳಿಂದಾಗಿ ಈ ಪ್ರದೇಶಕ್ಕೆ ವಿಶಿಷ್ಟವಾದ ಕೆಲವು ಜಾನಪದ ಬಗೆಗಳನ್ನು ಗುರುತಿಸಬಹುದಾಗಿದೆ. ಅವು ಈ ಜನಾಂಗದ ಸಂಸ್ಕೃತಿಯ ವ್ಯಾಪ್ತಿ - ವೈಶಿಷ್ಟ್ಯಗಳನ್ನು ಸಾದರಪಡಿಸುತ್ತವೆ. ಇಲ್ಲಿನ ಪ್ರತಿಯೊಂದು ಗ್ರಾಮದಲ್ಲೂ ಕಾಲ ಕಾಲಕ್ಕೆ ನಡೆಸುವ ಉತ್ಸವ, ಸಮಾರಾಧನೆ, ಜಾತ್ರೆ, ಹಬ್ಬ ಮತ್ತು ವಿವಿಧ ಬಳಿಗಳಲ್ಲಿ ಮಾತ್ರವಲ್ಲ, ಇತರ ಕಟ್ಟಲೆಗಳಲ್ಲೂ ವಿಶಿಷ್ಟತೆ ಇದೆ. ರಕ್ತಾಹಾರ ಸಹಿತವಾದ ಮಾರಿಹಬ್ಬ

ಮತ್ತು ಗ್ರಾಮದ ಗಡಿಯ ಹೊರಗೆ ಮಾರಿ ಓಡಿಸುವ ಸಂಪ್ರದಾಯ ಮಲೆನಾಡಿನಲ್ಲಿ ಸಾಮಾನ್ಯವಾಗಿ ಕಂಡು ಬರುತ್ತದೆ.

'ಊರಿಗೊಂದು ಮನೆ' ಎಂಬಂತೆ ಮನೆಗಳನ್ನು ದೂರ ದೂರದಲ್ಲಿ ಕಟ್ಟಿಕೊಂಡು ವಾಸಿಸುವ ಪದ್ಧತಿ ಇಲ್ಲಿನ ವಿಶೇಷ. ತಮ್ಮ ತಮ್ಮ ಜಮೀನಿಗೆ ಸಮೀಪ ಇರುವೆಡೆಯಲ್ಲಿ ಕಾಡು, ನೀರಿನ ಸೌಕರ್ಯ ಇರುವೆಡೆಯಲ್ಲಿ ಮನೆಗಳನ್ನು ಕಟ್ಟಿಕೊಳ್ಳುವುದು ವಾಡಿಕೆ. ಮನೆ ನಿರ್ಮಿಸಿಕೊಳ್ಳುವ ಮಾದರಿಯಲ್ಲೂ ತಮ್ಮತನವನ್ನು ಉಳಿಸಿಕೊಂಡಿದ್ದಾರೆ. ಇಲ್ಲಿನ ಒಂದೊಂದು ಕುಟುಂಬವೂ ಒಂದೊಂದು ವಠಾರದ ವ್ಯಾಪ್ತಿಯನ್ನು ಹೊಂದಿರುತ್ತದೆ. ದವಸಧಾನ್ಯಗಳನ್ನು ಶೇಖರಿಸಿಡಲು ಕಣಜ, ಪಣತಗಳ ಕೊಟ್ಟಿಗೆ, ಸೌದೆ ಕೊಟ್ಟಿಗೆ, ಗಾಡಿ ಕೊಟ್ಟಿಗೆ, ದನಕರುಗಳ ಕೊಟ್ಟಿಗೆ, ಎತ್ತುಗಳ ಕೊಟ್ಟಿಗೆ, ದರಗೆಲೆ ಕೊಟ್ಟಿಗೆ, ಕುರಿಕೋಳಿಗಳ ಒಡ್ಡಿ, ಹಂದಿ ಒಡ್ಡಿ - ಇನ್ನು ಮುಂತಾದ ಬೇರೆ ಬೇರೆ ಕಟ್ಟಡಗಳಿಂದ ಮನೆಯ ಆವರಣ ಸೃಷ್ಟಿಗೊಂಡಿರುತ್ತದೆ.[೨]

ನಿತ್ಯ ಬಳಕೆಯ ವಸ್ತುಗಳ ರಚನಾ ವಿಧಾನ, ಅಡಿಗೆ ವಿಧಾನ, ತಿಂಡಿ ತಿನಿಸುಗಳನ್ನು ತಯಾರಿಸುವ ಬಗೆ, ವೈದ್ಯೋಪಚಾರ - ಇಂಥ ವಿಷಯಗಳಲ್ಲೂ ಮಲೆನಾಡ ನಾಮಧಾರಿಗಳ ಪ್ರತ್ಯೇಕತೆ ಎದ್ದು ಕಾಣುತ್ತದೆ.

ಈ ಜನರು ಉಡುಗೆತೊಡುಗೆಗಳಲ್ಲಿ, ಆಭರಣ ಅಲಂಕಾರಾದಿಗಳಲ್ಲಿ ಬಹುಪಾಲು ದಕ್ಷಿಣ ಕನ್ನಡ ಜಿಲ್ಲೆಯನ್ನು ಹೋಲುತ್ತಾರೆ. ಹೊಂಬಾಳೆಯ 'ಹಾಳೆಕೊಟ್ಟೆ' ಈ ಸುತ್ತಿನ ಒಕ್ಕಲಿಗ ಸ್ತ್ರೀಯರ ಮಳೆಗಾಲದ ತಲೆದೂಡುಗೆ - ಹೀಗೆ ಒಂದೊಂದು ವಿಚಾರದಲ್ಲೂ ಈ ಸಮಾಜದ ವಿಶೇಷತೆ ಗೋಚರಿಸುತ್ತದೆ.

ಆಹಾರಪದ್ಧತಿ, ಧಾರ್ಮಿಕ ನಡೆನುಡಿ, ಅರ್ಥವ್ಯವಸ್ಥೆ, ವ್ಯವಹಾರ, ವೈದ್ಯ ವಿಧಾನ ಸಮಸ್ತ ವಿಷಯಗಳಲ್ಲೂ ಈ ಜನ ತನ್ನತನವನ್ನು ಉಳಿಸಿಕೊಂಡಿದೆ. ಬೇರೆ ಬೇರೆ ಜಾತಿಗಳಲ್ಲೂ ಚಾಲ್ತಿಯಲ್ಲಿರುವ ಈ ಕೆಲವು ಸಂಪ್ರದಾಯಗಳಲ್ಲಿ ಸಾದೃಶ್ಯಗಳಿರುವಂತೆ ವೈದೃಶ್ಯಗಳೂ ಇದೆ.

ಗುಡ್ಡ ಬೆಟ್ಟಗಳ ತಪ್ಪಲುಗಳಲ್ಲಿ ವಾಸಿಸುವ ವಿಶ್ವದ ಅನೇಕ ದೇಶಗಳ ಮೂಲನಿವಾಸಿಗಳಂತೆ ಮಲೆನಾಡಿನ ಒಕ್ಕಲಿಗರೂ ಸಹ್ಯಾದ್ರಿಯ ಮಡಿಲಲ್ಲಿ ಜೀವನ ನಡೆಸುತ್ತಿದ್ದಾರೆ. ಅಂತೆಯೇ ಅವರ ಸಾಮಾಜಿಕ, ಸಾಂಸ್ಕೃತಿಕ ಹಾಗೂ ಧಾರ್ಮಿಕ ಜೀವನದಲ್ಲಿ ಆದಿವಾಸಿಗಳ ಜೀವನಚಕ್ರದ ಅನುಕರಣೆ ಇದೆ. ಆದರೆ ಆದಿವಾಸಿಗಳಷ್ಟು ಕಠಿಣತಮವಾದ ಯಾವ ಉಪಾಸನೆಗಳನ್ನೂ ಇವರು ಆಚರಿಸುವುದಿಲ್ಲ. ಈ ದೃಷ್ಟಿಯಿಂದ ಮಲೆನಾಡ ಒಕ್ಕಲಿಗರ ಜೀವನಕ್ರಮ ಆದಿವಾಸಿ ಬುಡಕಟ್ಟುಗಳ ಜೀವನಕ್ರಮದಷ್ಟು ಸಂಕೀರ್ಣ ಸ್ವರೂಪದಲ್ಲ.

ಮಲೆನಾಡ ಒಕ್ಕಲಿಗರಲ್ಲಿ ಅನೇಕ ಬಗೆಯ ವಿಚಿತ್ರವಾದ ನಂಬಿಕೆ ಸಂಪ್ರದಾಯಗಳು ರೂಢಿಯಲ್ಲಿವೆ. ವ್ಯಕ್ತಿಯ ಜೀವನದಲ್ಲಿ ಒಮ್ಮೆ ಮಾತ್ರ ಘಟಿಸಬಹುದಾದ ಹುಟ್ಟು, ಪ್ರೌಢಾವಸ್ಥೆ, ಮದುವೆ, ಸಾವು ಮುಂತಾದ ವಿಷಯಗಳಿಗೆ ಸಂಬಂಧಿದಂತೆ, ಕೃಷಿ, ಬೇಟೆ ವಿಧಾನಗಳು, ಧಾರ್ಮಿಕ ವಿಧಿ ನಿಷೇಧಗಳ ಬಗೆಗೆ ಸಂಬಂಧಿಸಿದಂತೆ ಈ ಜನರು ಅನುಸರಿಸುವ ಮತಾಚರಣೆಗಳು ಆ ಸಂಬಂಧವಾಗಿ ರೂಢಿಸಿಕೊಂಡಿರುವ ನಂಬಿಕೆಗಳು ವಿಶ್ವದ ಅನೇಕ ದ್ವೀಪ ಸ್ತೋಮಗಳಲ್ಲಿ ವಾಸಿಸುವ ಮೂಲನಿವಾಸಿಗಳ, ಆದಿವಾಸಿ ಬುಡಕಟ್ಟುಗಳ ಸಂಪ್ರದಾಯ ನಡುವಳಿಕೆಗಳನ್ನು ಹೋಲುತ್ತವೆ.

ಜನನ ಸಂಸ್ಕಾರ ಸಂಬಂಧವಾಗಿ ಇವರಲ್ಲಿ ಪ್ರಚಲಿತವಿರುವ ನಂಬಿಕೆ ಸಂಪ್ರದಾಯಗಳು ಅಸಾಮಾನ್ಯವಾಗಿವೆ. ಮಗು ಹುಟ್ಟಿದ ಗಳಿಗೆಯಲ್ಲಿ ಶುಭವೇನಾದರೂ ಸಂಭವಿಸಿದರೆ ಮಗುವಿಗೆ ಜನನಕ್ಕೆ ಒಳ್ಳೆಯದನ್ನು ಆರೋಪಿಸುವುದು ಇಲ್ಲಿನವರು ಸ್ವಭಾವ. ಅನಾಹುತವೇನಾದರೂ ಸಂಭವಿಸಿದರೆ ಹುಟ್ಟಿದ ಶಿಶುವೇ ಅನಿಷ್ಟಕಾರಿಯಾದುದೆಂದು ಬಗೆಯುತ್ತಾರೆ. ಈ ನಂಬಿಕೆ ವೈಯಕ್ತಿಕ ಮಟ್ಟದಲ್ಲೇ ನಿಲ್ಲುತ್ತದೆಯೇ ಹೊರತು ಸಾರ್ವತ್ರಿಕ ಸ್ವರೂಪ ತಾಳುವುದಿಲ್ಲ. ಏಕೆಂದರೆ ಕಾಕತಾಳೀಯ ನ್ಯಾಯದಿಂದ ಜನ್ಮತಾಳಿದ ನಂಬಿಕೆಯಿದು ಮಗು ಹುಟ್ಟುವಾಗಲೇ ಕೈಯಲ್ಲಿ ಅಥವಾ ಕಾಲಲ್ಲಿ ಆರು ಬೆರಳಿದ್ದರೆ ಆತ ಮುಂದೆ ಅಸಾಮಾನ್ಯ ವ್ಯಕ್ತಿಯಾಗುತ್ತಾನೆಂದು ಭಾವಿಸುವುದಕ್ಕೆ ಕಾರಣ ಆರು ಬೆರಳಿರುವುದು ಇವರ ದೃಷ್ಟಿಯಲ್ಲಿ ಒಂದು ಸಾಮಾನ್ಯ ಸಂಗತಿಯಲ್ಲ. ಅದರ ಬಗೆಗೆ ಆಶ್ಚರ್ಯ ಕುತೂಹಲ ಮನಸ್ಕರಾಗಿ ಸ್ವಾಭಾವಿಕವಾಗಿ ಅಂಥವರನ್ನು ಭಯಭಕ್ತಿಯಿಂದ ಗೌರವಿಸುತ್ತಾರೆ. ಕ್ರಮೇಣ ಆ ವ್ಯಕ್ತಿ ಪೂಜನೀಯವಾಗಿ ಲೋಕ ಪ್ರಸಿದ್ಧನಾಗುವುದುಂಟು. ಮಗು ಜನಿಸಿದ ಮೊದಲ ವಾರದಲ್ಲಿ ನೆತ್ತಿ ಕೂಡಿ ಬಂದರೆ ಗಾಜಿನ ಬಳೆಚೂರಿನಿಂದ ಗಂಡಸ್ಥಲದ ನರ ಹಿಡಿದು ಸುಡುವ ಸಂಪ್ರದಾಯ ಸಾರ್ವತ್ರಿಕವಾಗಿ ಕಂಡು ಬರುತ್ತದೆ. ತಲೆಬಾಧೆ, ಸಿಡಿತ ಮುಂತಾದುವನ್ನು ಕ್ಷಿಪ್ರಗೊಳಿಸಲು ಹೀಗೆ ನರ ಹಿಡಿದು ಸುಡುತ್ತಾರೆನಿಸುತ್ತದೆ. ಇಂಥ ಸಂಪ್ರದಾಯಗಳಲ್ಲಿ ಅವರ ವೈದ್ಯಕೀಯ ಪ್ರಜ್ಞೆಯನ್ನು ಗುರುತಿಸಬಹುದು. ದೃಷ್ಟಿ ನಿವಾರಣೆ, ರಂಚು ಹಿಡಿಸುವುದು ಮುಂತಾದ ಕ್ರಿಯೆಯಲ್ಲೂ ವೈದ್ಯಕೀಯ ಸಂಗತಿಗಳು ಅಡಕಗೊಂಡಿರುವುದನ್ನು ಅಲಕ್ಷಿಸುವಂತಿಲ್ಲ.

ಮಗು ಪ್ರಥಮ ಬಾರಿಗೆ ಮನೆಗೆ ಹೊಸಿಲ ದಾಟಿದ ದಿನ ಹೊಸ್ತಿಲಿಗೆ ಪೂಜೆ ಮಾಡುವ ಪದ್ಧತಿಯುಂಟು. ಮಗುವನ್ನು ದೈವ ಸಮಾನವಾಗಿ ಕಾಣುವುದರಿಂದ ಮತ್ತು ಮುಂದೆ ಭೂತ ದೈವಗಳಿಂದ ಉಂಟಾಗಬಹುದಾದ ಪೀಡೆ ತೊಂದರೆಗಳನ್ನು ತಡೆಗಟ್ಟುವುದಕ್ಕಾಗಿ ಇಂಥ ಪೂಜಾಕಾರ್ಯಗಳನ್ನು ಕೈಗೊಳ್ಳುತ್ತಾರೆ. ಈ ಸಂಪ್ರದಾಯ ಬಯಲು ಸೀಮೆಯ ಗಂಗಡಿಕಾರರಲ್ಲೂ ಇದೆಯಂತೆ. ಸಾರ್ವತ್ರಿಕವಾಗಿ ಕರ್ನಾಟಕದ ಇತರ ಅನೇಕ ಬುಡಕಟ್ಟುಗಳಲ್ಲಿಯೂ ಕಂಡು ಬರುತ್ತದೆ. ಮಗುವಿಗೆ ಮೊದಲ ಸಲ ಊಟ ಮಾಡಿಸುವಾಗ ಸೋದರಮಾವನ ತೊಡೆ ಮೇಲೆ ಕೂರಿಸಿ ಮಾಡಿಸಬೇಕೆಂಬ ಕಟ್ಟಳೆ ಇದೆ. ರಕ್ತ ಸಂಬಂಧಿಗಳ ಪ್ರೀತಿ ವಾತ್ಸಲ್ಯಗಳು ಶಾಶ್ವತವಾಗಿ ಮಗುವಿನ ಮೇಲಿರಲೆಂಬ ಉದ್ದೇಶದಿಂದ ಈ ಕಟ್ಟಳೆ ಸೃಷ್ಟಿಗೊಂಡಿರಬಹುದು. ಆದರೆ ಸೋದರ ಮಾವ ಊಟ ಮಾಡಿದ ಎಂಜಲು ತಟ್ಟೆಯಲ್ಲಿ ಮಗುವಿನ ಕೈ ಅದ್ದಿ ಉಗುರು ತೆಗೆಯುವ ಸಂಪ್ರದಾಯ ಅನಾಗರಿಕವಾದದ್ದೆಂದೇ ಹೇಳಬೇಕಾಗುತ್ತದೆ. ಸಣ್ಣ ಮಕ್ಕಳ ಉಗುರು ತೆಗೆಯುವುದು ಕಷ್ಟ ಸಾಧ್ಯದ, ಸಾಹಸದ ಕೆಲಸವಾದ್ದರಿಂದ ಉಗುರನ್ನು ನೀರಿನಲ್ಲಿ ಅದ್ದಿ ಮೆತ್ತಗೆ ಮಾಡಿಕೊಂಡರೆ ಸುಲಭವಾಗತ್ತದೆಂಬ ಭಾವನೆಯ ಹಿನ್ನೆಲೆಯಲ್ಲಿ ಈ ಕ್ರಿಯೆಯನ್ನು ಆಚರಿಸುತ್ತಿರಬಹುದು.

ಗರ್ಭಿಣಿಗೆ ಐದು ಅಥವಾ ಏಳು ತಿಂಗಳು ತುಂಬಿದಾಗ ಆಚರಿಸುವ 'ಸೀಮಂತ' ವಿಧಿಯ ಉದ್ದೇಶ ಮುಖ್ಯವಾಗಿ ಹರಸುವುದಕ್ಕಲ್ಲ; ಗರ್ಭದಲ್ಲಿದ್ದ ಭೂತ ಪ್ರೇತಗಳನ್ನು ಹೊರಗಟ್ಟುವುದಕ್ಕಾಗಿ. ಭೂತ ಪ್ರೇತಗಳು ಗರ್ಭವನ್ನು ಹೊಕ್ಕಿರುತ್ತವೆ ಎಂಬ ಭಯ ಇವರನ್ನು ಆವರಿಸಿದೆ. ಗರ್ಭದಲ್ಲಿದ್ದ ಶಿಶುವನ್ನು ಭೂತಪ್ರೇತಗಳಿಂದ ರಕ್ಷಿಸುವ ಸಲುವಾಗಿ 'ಸೀಮಂತ'ವನ್ನಾಚರಿಸುವರು. ದೀಕ್ಷಾಸ್ನಾನದಂಥ ಶಾಸ್ತ್ರಗಳ ಉದ್ದೇಶವೂ ಇದೇ ಬಗೆಯ ಅನಿಷ್ಟ

ನಿವಾರಣೆಗಾಗಿಯೇ ಇರಬೇಕು. ಇದೇ ಭಯದ ಹಿನ್ನೆಲೆಯಲ್ಲಿ ಹುಟ್ಟಿದ ನಂಬಿಕೆಗಳೆಂದರೆ ಮೂಲಾನಕ್ಷತ್ರದಲ್ಲಿ ಜನಿಸಿದ ಮಗುವಿನಿಂದ ತಾಯಿ ತಂದೆಯರಲ್ಲೊಬ್ಬರಿಗೆ ಸಾವು ಖಂಡಿತ ಎಂದು ನಂಬುವುದು; ಮೊದಲನೆಯ ಮಗು ಹೆಣ್ಣೇ ಆಗಿರಬೇಕೆಂದು ಭಾವಿಸುವುದು - ಇನ್ನು ಮುಂತಾದವು. ಇಂಥ ನಂಬಿಕೆಗಳು ಬಯಲುಸೀಮೆಯ ಗಂಗಡಿಕಾರರಲ್ಲೂ ಪ್ರಚಲಿತವಿರುವುದಾಗಿ ತಿಳಿಯುತ್ತದೆ.[೬೬]

ಪ್ರಸವದ ಸಮಯದಲ್ಲಿ ಸ್ತ್ರೀಯರು ಅನುಭವಿಸುವ ಕಷ್ಟಗಳಿಗೆ ಪರಿಹಾರೋಪಾಯವಾಗಿ ಕೆಲವು ಆಚರಣೆಗಳನ್ನು ಅನುಸರಿಸುವುದುಂಟು. ವಿಶ್ವದಾದ್ಯಂತ ಕೆಲವೇ ಜನಾಂಗಗಳಲ್ಲಿ ಮಾತ್ರ ಕಂಡು ಬರುವಂಥ ಪ್ರಸೂತಿಕಾ ಧರ್ಮವನ್ನು ಪಾಲಿಸಬೇಕಾದ ವಿಚಿತ್ರ ಕಟ್ಟಳೆ ಈ ಜನಾಂಗದಲ್ಲಿದೆ.[೬೭] ಹೆರಿಗೆಯ ಸಮಯದಲ್ಲಿ ಹೆಂಡತಿಯ ಪಕ್ಕದಲ್ಲಿರಬೇಕು. ಪತ್ನಿಯಂತೆ ಪತಿಯೂ ಸೂತಕದ ನಿಷೇಧಗಳಿಗೆ ಒಳಗಾಗಬೇಕು. ಸೂತಕದ ಅವಧಿ ಮುಗಿಯುವರೆಗೂ ಮನೆಯ ಆವರಣದಲ್ಲೇ ಇರಬೇಕು. ಹೊರಗೆ ಸುಳಿದಾಡುವಂತಿಲ್ಲ. ಬಟ್ಟೆ ಬರೆ ಶುಚಿ ಮಾಡುವಂತಿಲ್ಲ. ವೈವಾಹಿಕ ಜೀವನವನ್ನು ಭದ್ರಪಡಿಸಲು ಈ ನಿಷೇಧಗಳು ಸಾಧನಗಳಿರಬಹುದು. ಒಂದು ವೇಳೆ ನಿಷೇಧಗಳನ್ನು ಅನುಸರಿಸಲಾಗದಿದ್ದರೆ ಜನಿಸಿದ ಮಗುವಿಗೆ ಕೇಡು ಸಮನಿಸುವುದು ನಿಶ್ಚಯ ಎಂದು ಭಾವಿಸಲಾಗುವುದು. ತಾಯಿಯಂತೆಯೇ ತಂದೆಯ ಪ್ರೇಮ ವಾತ್ಸಲ್ಯಗಳು ಮಗುವಿನ ಮೇಲೆ ಶಾಶ್ವತವಾಗಿ ಪರಿಣಾಮ ಬೀರಲು ಇದು ಸಾಧನವಿರಬಹುದು. ಇಲ್ಲಿಯೂ ಇವರ ಕಾತರ ಅನಿಷ್ಟ ನಿವಾರಣೆಯ ಕಡೆಗೇ ಇರುತ್ತದೆಂಬುದನ್ನು ಬೇರೆ ಹೇಳಬೇಕಾಗಿಲ್ಲ. ಹೀಗೆ ಕೆಲವೊಮ್ಮೆ ಈ ಬಗೆಯ ನಂಬಿಕೆ ಸಂಪ್ರದಾಯಗಳು ವೈಯಕ್ತಿಕ ಮತ್ತು ಸಾಂಪ್ರದಾಯಿಕ ಹಂತದಲ್ಲೇ ವಿವರಿಸುವುದುಂಟು.

ಕರ್ನಾಟಕದ ಇತರ ಕೆಲವು ಜಾತಿ ಅಥವಾ ವರ್ಗಗಳಲ್ಲಿರುವಂತೆ ಮಲೆನಾಡ ನಾಮಧಾರಿಗಳಲ್ಲೂ ಋತುಮತಿಯಾದ ಹೆಣ್ಣು ಆ ಅವಧಿಯಲ್ಲಿ ಕೆಲವು ಆಹಾರ ಪದಾರ್ಥಗಳನ್ನು ಸೇವಿಸದಂತೆ ನಿರ್ಬಂಧವಿದೆ. ಈ ಆಹಾರ ನಿಷೇಧ ಪಾಲನೆ ಅಂಡಮಾನ್ ಮತ್ತು ಟ್ರಾಬ್ರಿಯಾಂಡ್ ನಿವಾಸಿಗಳಲ್ಲಿ ಅತ್ಯಂತ ಪ್ರಬಲ ಸ್ವರೂಪದಲ್ಲಿರುವುದನ್ನು ಇಲ್ಲಿ ಸ್ಮರಿಸಬಹುದು.[೬೮]

ಋತುಮತಿಯಾದ ಕನ್ಯೆ ವಾಸದ ಮನೆಯ ಮಗ್ಗುಲಲ್ಲಿ ಏಕಾಂತವನ್ನು ಅನುಭವಿಸಬೇಕೆಂಬ ಕಟ್ಟಳೆ ಇವರ ವಿಶೇಷ. ಕನ್ಯೆ ದೈಹಿಕವಾಗಿ, ಮಾನಸಿಕವಾಗಿ ಬೆಳವಣಿಗೆ ಹೊಂದುವುದರಿಂದ ಸಾಮಾಜಿಕ ವ್ಯವಸ್ಥೆಗಳಿಗನುಗುಣವಾಗಿ ಜವಾಬ್ದಾರಿಯಿಂದ ವರ್ತಿಸಲು ಪ್ರೇರಣೆ ಪಡೆಯಲೆಂದು ಈ ನಿರ್ಬಂಧವನ್ನು ವಿಧಿಸಿರಬಹುದು. ಈ ಸಂಬಂಧ ಇನ್ನೂ ಕೆಲವು ನಂಬಿಕೆಗಳು ಪ್ರಚಲಿತವಿದೆ. ಒಸಗೆ ಸಮಾರಂಭದ ದಿನ ತುಳಸಿಯ ಮುಂದೆ ಕುಲಸಂಕೇತವಾಗಿ ಸ್ಥಾಪಿಸಿದ ಕಳಸಕ್ಕೆ ಹೊತ್ತಿಸಿಟ್ಟ ದೀಪ ಆರಬಾರದು. ಶುಭಕಾರ್ಯದಲ್ಲಿ ದೀಪ ಆರಿಹೋದರೆ ಅಪಶಕುನ ಎಂಬ ತಿಳಿವಳಿಕೆಯ ಹಿನ್ನೆಲೆಯಲ್ಲಿ ಈ ನಂಬಿಕೆ ಹುಟ್ಟಿರಬಹುದು. ಋತುಮತಿಯಾದ ಹೆಣ್ಣುಮಗಳು ಸಂಬಂಧಿಕರ ಸಾವಿನ ಸುದ್ದಿ ಕೇಳಬಾರದೆಂದು ಹೇಳುತ್ತಾರೆ. ಜೀವನದ ಹೊಸ ಭಾವಪ್ರಪಂಚಕ್ಕೆ ಭಯ ವಿಸ್ಮಯಗಳಿಂದ ಕಾಲಿರಿಸಿದ ಕನ್ಯೆ ವ್ಯಾಕುಲಗೊಳ್ಳಬಾರದು, ಅಸಂತೋಷಪಡಬಾರದೆಂಬ ಕಾರಣಕ್ಕಾಗಿ ಈ ನಂಬಿಕೆ ಹುಟ್ಟಿಕೊಂಡಿರಬೇಕು. ಮತ್ತೆ ಕೆಲವು ಅನರ್ಥ ನಿಷೇಧಗಳನ್ನು ಮೀರಿದವರಿಗೆ ಅನರ್ಥಗಳು ಕಾದಿರುತ್ತವೆಯೆಂದೂ ದೈವದ ಶಿಕ್ಷೆಗೆ

ಗುರಿಯಾಗಬೇಕಾಗುತ್ತದೆಂದೂ ನಂಬುತ್ತಾರೆ. ಮನಸ್ಸಿನ ಅಸ್ಥಿರತೆ ಮತ್ತು ಅತಿಮಾನುಷ ಭಯಗಳಿಂದ ಈ ತೆರೆನ ನಂಬಿಕೆಗಳು ಹುಟ್ಟಿಕೊಂಡಿರಬಹುದು. ಅಥವಾ ಆದಿಮಾನವ ಪ್ರಕೃತಿ ವೈಚಿತ್ರ್ಯಗಳನ್ನು ಕಂಡು ಭಯಪಟ್ಟು ಪ್ರಕೃತಿ ಮತ್ತು ತಮ್ಮ ನಡುವೆ ಯಾವುದೋ ಒಂದು ಬಗೆಯ ಭಾವನಾತ್ಮಕತೆಯ ಸಂಬಂಧ ಕಲ್ಪಿಸಿಕೊಂಡು ಇಂಥ ವಿಚಿತ್ರ ನಂಬಿಕೆಗಳ ಉಗಮಕ್ಕೆ ಕಾರಣನಾಗಿರಬೇಕು. ...the belief of primitive man as being due to emotions of surpervise and terror or of awe and wonder aroused by the contemplation of the phenomena of Nature[೧೮] ಎಂಬ ಮಾತು ಇಲ್ಲಿ ಗಮನಾರ್ಹವಾಗುತ್ತದೆ.

ಮನುಷ್ಯನ ಜೀವನದಲ್ಲಿ ಮದುವೆ ಒಂದು ಪ್ರಮುಖ ಸಂದರ್ಭ. ಅದೊಂದು ದೈವಿಕ ಘಟನೆ ಎಂಬ ಕಲ್ಪನೆ ಸಾರ್ವತ್ರಿಕ ಮನ್ನಣೆ ಪಡೆದಿದೆ. ಬೇರೆ ಬೇರೆ ಜನಾಂಗಗಳಲ್ಲಿ ವಿವಿಧ ವಿವಾಹ ಸಂಪ್ರದಾಯಗಳು ಮನೆ ಮಾಡಿಕೊಂಡಿವೆ. ಅವಿವಾಹಿತರ ಮುಖಾವಲೋಕವನ್ನೇ ನಿಷಿದ್ಧವೆಂದು ತಿಳಿಯಲ್ಪಡುತ್ತಿದ್ದ ಕಾಲವೊಂದಿತ್ತು. ಮದುವೆಯಾಗದೆ ಸತ್ತವರ ದೇಹವನ್ನು ಹಿಡಿದು ಅಪ್ಪಳಿಸಲು ಪರಲೋಕದ ಬಾಗಿಲಲ್ಲಿ ಒಂದು ಹೆಬ್ಬಂಡೆಯಿದೆ ಎಂದು ಫಿಜಿ ದ್ವೀಪವಾಸಿಗಳ ಅಚಲ ನಂಬಿಕೆಯಂತೆ. ನೀಲಗಿರಿಯ ತೊದವರು ಅವಿವಾಹಿತೆಯಾಗಿ ಮೃತಿ ಹೊಂದಿದ ಹುಡುಗಿಯ ಶವಕ್ಕೆ ಮೊದಲು ಮದುವೆ ಮಾಡುತ್ತಾರೆ. ಅನಂತರವೇ ಶವಸಂಸ್ಕಾರ. ಮೊರಾಕ್ಕೊದಲ್ಲಿ ವರನ ತಾಯಿ ವಿವಾಹ ವಿಧಿಗಳೆಲೆಲ್ಲಾ ಅಂತ್ಯವಾಗುವ ತನಕ ಒನಕೆ ಹಿಡಿದು ವರನ ಬೆಂಗಾವಲಿಗೆ ನಿಲ್ಲುವ ವಿಶೇಷ ಪದ್ಧತಿಯಿದೆ.[೧೯]

ಮಲೆನಾಡ ಭಾಗದ ಒಕ್ಕಲಿಗರಲ್ಲಿ ಎರಡು ವಿಧದ ಮದುವೆ ಪದ್ಧತಿಗಳು ಜಾರಿಯಲ್ಲಿದ್ದುವಂತೆ.[೨೦] ಕೈಧಾರೆ; ಕನ್ನೆ ಮತ್ತು ಅವಿವಾಹಿತರಿಗಾಗಿ ನಡೆಯುವಂಥ ಮದುವೆ. ಈಗ ಈ ತೆರನ ವಿವಾಹಗಳು ರೂಢಿಯಲ್ಲಿಲ್ಲ. ಕೈಧಾರೆ ಚಾಲ್ತಿಯಲ್ಲಿದ್ದ ಕಾಲದಲ್ಲಿ ಗಂಡು ಹೆಣ್ಣಿನ ಯಜಮಾನರುಗಳು, ಕ್ರಮೇಣ ಇದೇ ಜನಾಂಗದ ಗುರುಗಳು ವಿವಾಹವಿಧಿಗಳನ್ನು ನಡೆಸಿಕೊಡುತ್ತಿದ್ದುದಾಗಿ ಹೇಳುತ್ತಾರೆ. ಆದರೆ ಇಂದಿನ ದಿಗಳಲ್ಲಿ ಜನಾಂಗದ ಗುರುಗಳ ಸ್ಥಾನದಲ್ಲಿ ಸೀಮೆ ಪುರೋಹಿತರು ಅಧಿಕೃತವಾಗಿ ಪ್ರವೇಶ ಪಡೆದಿರುವುದನ್ನು ಗಮನಿಸಬಹುದು.[೨೧] ಮೂಲತಃ ದ್ರಾವಿಡ ವರ್ಗಕ್ಕೆ ಸೇರಿದ ಒಕ್ಕಲಿಗರಿಗೆ ಆರ್ಯ ಸಮಾಜದ ವೈದಿಕ ಸಂಪ್ರದಾಯದ ಪ್ರಭಾವ ಗಾಢವಾಗಿ ಪರಿಣಾಮ ಬೀರಿದುದರ ಫಲದಿಂದ ಪುರೋಹಿತರು ಇವರ ವಿಧ್ಯುಕ್ತ ಕ್ರಿಯೆಗಳಲ್ಲಿ ಭಾಗವಹಿಸಲು ಶುರುಮಾಡಿರಬೇಕು. ಇದಕ್ಕೆ ಸ್ಪಷ್ಟ ಆಧಾರಗಳಿಲ್ಲ.

ಮಲೆನಾಡ ನಾಮಧಾರಿಗಳಲ್ಲಿ ವಿಧವಾ ವಿವಾಹವಿಲ್ಲ. ಅದಕ್ಕೆ ಬದಲಾಗಿ 'ಕೂಡಾವಳಿ' ಪದ್ಧತಿ ಇದೆ. ವಿಧುರ ವಿಧವೆಯರ ನಡುವೆ ಮಾತ್ರ ಏರ್ಪಡುವ ಸಂಬಂಧವದು. ವಿಧುರ, ಇಚ್ಛಿಸಿದರೆ ಕನ್ಯೆಯನ್ನೇ ಆಯ್ಕೆ ಮಾಡಿಕೊಂಡು ಮದುವೆಯಾಗಬಹುದು. ಆದರೆ ವಿಧವೆಗೆ ಈ ಅವಕಾಶವಿಲ್ಲ. ಕೊಡಗಿನ ನಾಮಧಾರಿಗಳಲ್ಲಿ ವಿಧವೆಗೆ ಮರು ಮದುವೆಯುಂಟು. ಆಕೆ ಒಂದು ಮಗುವಿನ ತಾಯಿಯಾಗಿದ್ದರೆ ಸತ್ತ ಗಂಡ ಹಿರಿಯ ಸೋದರನನ್ನೇ ಮದುವೆಯಾಗಬಹುದು. ಬೇರೆ ಯಾರನ್ನಾದರೂ ಮದುವೆಯಾದರೆ ಸತ್ತ ಗಂಡನ ಕುಟುಂಬದವರು ಆಕೆಯ ಮನೆಯಲ್ಲಿ ನೀರು ಸಹ ಕುಡಿಯುವುದಿಲ್ಲ.[೨೨]

ಶಾಸ್ತ್ರೋಕ್ತ ರೀತಿಯಲ್ಲಿ ಇವರು ನೆರವೇರಿಸುವ ವಿವಾಹ ಮತ್ತು ಈ ಸಂಬಂಧವಾದ ಉಪವಾಸ ವಿಧಿಗಳು ನೂರಾರು ನಂಬಿಕೆಗಳಿಂದ ಕೂಡಿವೆ. ಮಲೆನಾಡಿಗರ ಪ್ರಕಾರ ವಧೂವರರ ಮೇಲೆ ಅಕ್ಷತೆ ಎರಚುವುದು ಒಂದು ಶ್ರೇಷ್ಠವಿಧಿ. ಅಕ್ಕಿ ಫಲಶಕ್ತಿಯ ಸಂಕೇತವಾದ್ದರಿಂದ ಈ ವಿಧಿಯನ್ನು ಆಚರಿಸುತ್ತಿರಬೇಕು. ದಂಪತಿಗಳು ಅಕ್ಕಿಯಂತಹ ಫಲವನ್ನು ಪಡೆಯಲೆಂಬ ಹಾರೈಕೆ ಈ ಕ್ರಿಯೆಯಲ್ಲಿ ಅಡಕವಾಗಿದೆ. ವಧೂವರರಿಗೆ ಅರಿಸಿನ ಎಣ್ಣೆ ಹಚ್ಚುವ ಮತ್ತೊಂದು ವಿಧಿಯೂ ತೀರ ಅನರ್ಥವಾದುದೇನೂ ಅಲ್ಲ. ಪ್ರೇಕ್ಷಕರಿಗೆ ದಂಪತಿಗಳು ಸುಂದರವಾಗಿ ಕಾಣಲಿ ಎಂದು ಹಾಗೆ ಮಾಡುತ್ತಾರೆನಿಸುತ್ತದೆ. ಅರಿಸಿನಕ್ಕೆ ಚರ್ಮವನ್ನು ನುಣುಪುಗೊಳಿಸುವ ಮತ್ತು ಹೊಳಪುಗೊಳಿಸುವ ಸಾಮರ್ಥ್ಯವಿದೆ ಎಂಬುದನ್ನು ಅವರು ಅರಿತಿದ್ದಂತೆ ಕಾಣುತ್ತದೆ. ಆದರೆ ಗಂಡನ ಪಾದ ತೊಳೆದು ಹಾಲು ಕುಡಿಯುವ ಶಾಸ್ತ್ರ ನಿಜಕ್ಕೂ ಅಸಹ್ಯಕರವಾಗಿ ಕಾಣುತ್ತದೆ. ಹೆಣ್ಣು ಗಂಡಿನ ಅಂಕೆಯಲ್ಲಿರಬೇಕೆಂಬ ಉದ್ದೇಶದಿಂದ ಮತ್ತು ಪತಿಯ ಬಗ್ಗೆ ಆಕೆಯಲ್ಲಿ ಭಕ್ತಿ ಭಾವನೆ ಸ್ಫುರಿಸಬೇಕೆಂದು ಈ ಕ್ರಿಯೆಯನ್ನು ಆಚರಿಸುತ್ತಿರಬಹುದು.

ಸಾವಿನ ಬಗೆಗೆ ಮಲೆನಾಡ ನಾಮಧಾರಿಗಳು ತಾಳಿರುವ ನಂಬಿಕೆಗಳು ಮತ್ತು ಆ ಸಂಬಂಧವಾಗಿ ಅನುಸರಿಸುವ ವಿಧಿಗಳು ವಿಚಿತ್ರವೂ ರೋಚಕವೂ ಗಂಭೀರವೂ ಆಗಿವೆ. ಮಾನವ ಸತ್ತನಂತರ ಪ್ರೇತವಾಗುಳಿಯುತ್ತಾನೆ ಅಥವಾ ಮತ್ತೆ ಹುಟ್ಟಿ ಬರುತ್ತಾನೆ ಇಲ್ಲವೆ ಸ್ವರ್ಗದಲ್ಲಿದ್ದುಕೊಂಡು ತಿರೆಯುವರ ಯೋಗಕ್ಷೇಮಗಳನ್ನು ವಿಚಾರಿಸಿಕೊಳ್ಳುತ್ತಾನೆಂಬ ನಂಬಿಕೆ ಅನೇಕ ಮರಣೋತ್ತರ ಸಂಸ್ಕಾರಗಳಿಗೆ ಪ್ರೇರಕವಾಗಿದೆ.[೨೩]

ಇವರಲ್ಲಿ ಜನ್ಮಾಂತರ ಕಲ್ಪನೆ ಬಲವಾಗಿದೆ. ಮರಣಾನಂತರದ ಜೀವನಕ್ಕೆ ಪೂರ್ವಸಿದ್ಧತೆಯಾಗಿ ಕೆಲವೊಂದು ವಿಧಿಗಳನ್ನು ಮತ್ತು ರಹಸ್ಯ ಜ್ಞಾನವನ್ನು ಕಲಿತುಕೊಳ್ಳುವ ಅಭ್ಯಾಸವೂ ಇದೆ. ಮರಣವಪ್ಪಿದಾಗ ಶವದೊಂದಿಗೆ ಸಮಾಧಿ ಮಾಡುವ ವಸ್ತುಗಳ ಗುಣಮಟ್ಟ ಮತ್ತು ಅನುಸರಿಸುವ ಸಂಸ್ಕಾರ ಕ್ರಿಯೆಗಳನ್ನು ಮರಣಾನಂತರದ ಜೀವನ ಅವಲಂಬಿಸಿರುತ್ತದೆ ಎಂಬ ಅರಿವು ಇವರಲ್ಲಿದೆ. ಈ ಅಭಿಪ್ರಾಯ ವಿಶ್ವದಾದ್ಯಂತ ಸಾರ್ವತ್ರಿಕವಾಗಿ ಕಂಡು ಬರುತ್ತದೆ.[೨೪]

ವ್ಯಕ್ತಿ ಸತ್ತಾಗ ಮೃತನ ಕುಟುಂಬದವರು ರಕ್ತ ಸಂಬಂಧಿಗಳು ಅತೀವ ಸಂಕಟದಿಂದ ಶವವನ್ನು ಅಪ್ಪಿಕೊಂಡು ಅಳುವುದೂ ಇವರಲ್ಲಿ ಒಂದು ಧಾರ್ಮಿಕ ಕ್ರಿಯೆಯಾಗಿ ಕಂಡು ಬರುತ್ತದೆ.

ಮತ್ತೊಂದು ಕುತೂಹಲಕರ ಸಂಗತಿಯೆಂದರೆ ಶವ ಸಂಸ್ಕಾರದ ಸಮಯದಲ್ಲಿ ಸುಡುಗಾಡಿಗೆ ಹೋದ ಮೃತನ ಪತ್ನಿ ಅಥವಾ ಸಂಬಂಧಿಕರಲ್ಲೊಬ್ಬರಿಗೆ ದುಃಖ ಉಮ್ಮಳಿಸಿ ಆವೇಶ ಬಂದು ಹುಚ್ಚೆದ್ದು ಕುಣಿದರೆ ವ್ಯಕ್ತಿಯ ಆತ್ಮ ಕುಣಿಯುತ್ತಿದ್ದವರ ಮೈ ಏರಿದೆ ಎಂದು ಭಾವಿಸುವುದು. ಈ ನಂಬಿಕೆ ಬಿಳಿಗಿರಿರಂಗನ ಬೆಟ್ಟದ ತಪ್ಪಲಲ್ಲಿ ವಾಸಿಸುವ ಸೋಲಿಗರಲ್ಲೂ ಇದೆಯೆಂದು ತಿಳಿದು ಬರುತ್ತದೆ.[೨೫]

ಶ್ರಾದ್ಧದ ದಿನ ಕಾಗೆಗಳು ಎಡೆಯನ್ನು ಎಂಜಲು ಮಾಡಲಿಲ್ಲವೆಂದರೆ ಸತ್ತವ್ಯಕ್ತಿ ಬದುಕಿದ್ದಾಗ ಧರ್ಮಿಷ್ಠನಾಗಿರಲಿಲ್ಲವೆಂದು ನಂಬುವುದುಂಟು. ಹೆಣವನ್ನು ಸುಡುಗಾಡಿಗೆ ಹೊತ್ತುಕೊಂಡು ಹೋಗುವಾಗ ಮಾರ್ಗದಲ್ಲಿ ಅಲ್ಲಲ್ಲಿ ಇಳಿಸಿ ಹಿಂದಿನವರು ಮುಂದೆ, ಮುಂದಿನವರು ಹಿಂದೆ ಹೆಗಲು ಬದಲಾಯಿಸಿ ಹೊತ್ತುಕೊಂಡು

ಹೋಗುವ ಪದ್ಧತಿ ಇದೆ. ಇದು ಒಂದು ವಿಧದಲ್ಲಿ ಸಾಂಕೇತಿಕವಾಗಿರುತ್ತದೆ. ಈ ಎರಡೂ ನಂಬಿಕೆಗಳು ಮಂಡ್ಯ ಸುತ್ತಿನ ಗಂಗಡಿಕಾರರಲ್ಲೂ ಪ್ರಚಲಿತವಿರುವಂತೆ ತಿಳಿಯುತ್ತದೆ.[೧೬]

ಆಹಾರ ಸಂಗ್ರಹಣಾ ವಿಚಾರದಲ್ಲೂ ಮಲೆನಾಡ ನಾಮಧಾರಿಗಳು ಅರಣ್ಯವಾಸಿಗಳಾದ ಆದಿವಾಸಿಗಳ ಜೀವನಕ್ರಮವನ್ನು ಅನುಕರಿಸಿದಂತೆ ತೋರುತ್ತದೆ. ವಿರಾಮದ ದಿನಗಳಲ್ಲಿ ಗಂಡಸರು ತಂಡೋಪತಂಡವಾಗಿ ಕಾಡುಗಳಿಗೆ ಹೋಗಿ ಜೇನುತುಪ್ಪ, ನಸರಿ ತುಪ್ಪ ಹಾಗೂ ಕೆಲವು ಜಾತಿಯ ಬೇರು ಬಳ್ಳಿ ಗೆಡ್ಡೆ ಮತ್ತು ಸೊಪ್ಪುಗಳನ್ನು ಸಂಗ್ರಹಿಸುವ ಹವ್ಯಾಸವಿಟ್ಟುಕೊಂಡಿದ್ದಾರೆ. ಬೇಟೆಗೆ ಹೋದ ಸಂದರ್ಭದಲ್ಲೂ ಆಹಾರ ಸಂಗ್ರಹಣಾ ಸಾಹಸ ಕಾರ್ಯಗಳಿಗೆ ಕೈ ಹಚ್ಚುವುದುಂಟು.

ಇಂದಿನ ದಿನಗಳಲ್ಲಿ ಮೃಗಬೇಟೆ ಒಂದು ಬಗೆಯ ಮನೋರಂಜಕ ಆಟವಾಗಿ ಪರಿಣಮಿಸಿದ್ದರೂ ಮಲೆನಾಡ ಭಾಗಗಳಲ್ಲಿ ಹಳೆಯ ಬೇಟೆ ಸಂಪ್ರದಾಯಗಳೇ ಜೀವಂತವಾಗಿ ಉಳಿದುಕೊಂಡು ಬಂದಿರುವುದು ಆಶ್ಚರ್ಯವಾಗಿ ಕಾಣುತ್ತದೆ. ಇದಕ್ಕೆ ಪ್ರಬಲ ಕಾರಣ ಇಲ್ಲಿನ ಜನರು ತಮ್ಮ ಆಹಾರದಲ್ಲಿ ಬದಲಾವಣೆಯನ್ನು ಬಯಸುವುದು ಒಂದಾದರೆ ಮತ್ತೊಂದು ಹಳೆಯ ಬೇಟೆಗಳ ತಂತ್ರಗಳೇ ಬೇಟೆಯಾಡಲು ಸುಲಭವಾಗಿ ಕಾಣುತ್ತಿರುವುದು. ತಮ್ಮ ಬಿಡುವಿಲ್ಲದ ಕೆಲಸದ ವೇಳೆಯಲ್ಲೇ ವಿರಾಮ ಮಾಡಿಕೊಂಡು ಆಗಾಗ ಬೇಟೆಯಾಡುವುದು ಇವರಿಗೆ ವಿನೋದದ ವಿಷಯವೂ ಹೌದು. ಪೈರು ರಕ್ಷಣಾ ವಿಧಾನವೂ ಹೌದ. ಅತಿವೃಷ್ಟಿ ಅನಾವೃಷ್ಟಿಗಳಿಂದಾಗಿ ಬೆಳೆ ಕೈ ಕೊಟ್ಟಾಗ ಉದರ ಪೋಷಣೆಯ ಪ್ರಮುಖ ಸಾಧನವನ್ನಾಗಿಯೂ ಬೇಟೆಯನ್ನು ರೂಢಿಸಿಕೊಳ್ಳುವ ಸಾಧ್ಯತೆಗಳುಂಟು.

ಮಲೆನಾಡ ಒಕ್ಕಲಿಗರಲ್ಲಿ ಉಳಿವೆಲ್ಲ ನಂಬಿಕೆ ಸಂಪ್ರದಾಯಗಳಿಗಿಂತ ಗಾಢವಾಗಿ ಮತ್ತು ಹೆಚ್ಚು ಆಳವಾಗಿ ಬೇರೂರಿರುವ ನಂಬಿಕೆ ಸಂಪ್ರದಾಯಗಳೆಂದರೆ ವ್ಯವಸಾಯ ಸಂಬಂದವಾದ ನಂಬಿಕೆಗಳು. ಇವು ಇಲ್ಲಿನ ಜನರ ಬದುಕನ್ನು ಒಂದಲ್ಲ ಒಂದು ರೂಪದಲ್ಲಿ ಆವರಿಸುವುದನ್ನು ಕಾಣುತ್ತೇವೆ. ಗ್ರಾಮದೇವತೆಗಳ ಹಬ್ಬವನ್ನಾಚರಿಸಿದರೆ ಮಳೆ ಬರುತ್ತದೆ ಎಂದು ನಂಬುತ್ತಾರೆ. ಕಪ್ಪೆಗಳು ದೀರ್ಘವಾಗಿ ಗಟ್ಟಿಯಾಗಿ ವಟಗುಟ್ಟಿದರೆ ಬಹುಬೇಗನೆ ಮಳೆ ಬರುತ್ತದೆಂದು ಭಾವಿಸುವುದುಂಟು. ಪಶ್ಚಿಮ ದಿಕ್ಕಿನಿಂದ ಗಾಳಿ ಬೀಸಿದರೆ ಮಳೆ ಬರುವುದಿಲ್ಲವಂತೆ. ಇದೇ ಬಗೆಯ ನಂಬಿಕೆಗಳು ಅಮೇರಿಕೆಯಲ್ಲೂ ಇರುವುದಾಗಿ ತಿಳಿದು ಬರುತ್ತದೆ.[೧೭]

ಕೃಷಿ ಪ್ರಧಾನವಾದ ಎಲ್ಲ ರಾಷ್ಟ್ರ, ಜನಾಂಗಗಳಲ್ಲೂ ಸ್ತ್ರೀ ಪುರುಷರು ಅವರವರ ದೈಹಿಕ ಪ್ರಕೃತಿಗನುಗುಣವಾಗಿ ಕೆಲಸ ಕಾರ್ಯಗಳನ್ನು ನಿಸರ್ಗದತ್ತ ರೀತಿಯಲ್ಲಿ ಹಂಚಿಕೊಂಡಿರುವುದು ಕಂಡು ಬರುತ್ತದೆ.[೧೮] ಅಂತೆಯೇ ಮಲೆನಾಡ ನಾಮಧಾರಿಗಳಲ್ಲೂ ಶ್ರಮದ ಸಾಹಸದ ಕೆಲಸಗಳನ್ನು ಗಂಡಸರು ನಿರ್ವಹಿಸಿದರೆ ಸುಲಭ ಸಾಧ್ಯವಾದ ಕೆಲಸಗಳನ್ನು ಹೆಂಗಸರು ಮಾಡುತ್ತಾರೆ. ತೋಟ ಗದ್ದೆ ಕೃಷಿ ಮಾಡುವಾಗ, ಪಶುಸಂಗೋಪನೆ ಮಾಡುವಾಗ ಗಂಡಸರಿಗಿಂತ ಸ್ತ್ರೀಯರೇ ಹೆಚ್ಚು ಶ್ರಮವನ್ನೂ ಜವಾಬ್ದಾರಿಯನ್ನೂ ಹೊರುತ್ತಾರೆಂಬುದನ್ನು ಅಲಕ್ಷಿಸುವಂತಿಲ್ಲ.

ಹಕ್ಕಿ ಪಕ್ಕಿಗಳು ಪೈರನ್ನು ನಾಶ ಮಾಡದಿರಲೆಂದು ಗದ್ದೆಗಳಲ್ಲಿ ಬೆದರುಗೊಂಬೆಗಳನ್ನು ನೆಡುವುದು ವಾಡಿಕೆ. ಪೈರಿಗೆ ಕೀಟ ತಗುಲಿದಾಗ ಮೈದಾನ ಪ್ರದೇಶದಲ್ಲಿ ಹುಲುಸಾಗಿ ಬೆಳೆದ 'ಕರಡೆಹುಲಿ' ಗೆ ಮತ್ತು ಹೊಲಗದ್ದೆಗಳ ಇಕ್ಕೆಲದಲ್ಲೂ ಬೆಳೆದಿದ್ದ ಬಿದಿರು ಹಿಂಡುಲುಗಳಿಗೆ ಬೆಂಕಿ ಹೊತ್ತಿಸುವುದರ ಮೂಲಕ ಕೀಟಗಳನ್ನು ಧೂಳಿ

ಮಾಡುತ್ತಾರೆ. ಬೆಳೆ ಸಮೃದ್ಧಿಯಾಗಿ ಹುಲುಸಾಗಿ ಬೆಳೆದಾಗ ದೃಷ್ಟಿದೋಷ ನಿವಾರಣೆಗಾಗಿ ಸುಣ್ಣ ಬಳಿದ ಗಡಿಗೆಯನ್ನು ತೂಗು ಹಾಕುವುದುಂಟು. ಮಘೆ ಮತ್ತು ಉತ್ತರ ಮಳೆಯ ಸಂದರ್ಭದಲ್ಲಿ ಸುಟ್ಟ ಬಿದಿರು ಕೋಲುಗಳನ್ನು ರಾತ್ರಿ ಸಮಯದಲ್ಲಿ ಬೆತ್ತಲೆಯಲ್ಲಿ ಕೊಂಡೊಯ್ದು ಗದ್ದೆಯಲ್ಲಿ ನೆಡುವ ಸಂಪ್ರದಾಯವೂ ಇದೆ. ಇದನ್ನು 'ಎರಕಲು ಗೂಟ ಹಾಕುವುದು' ಎಂದು ಕರೆಯುತ್ತಾರೆ. ಈ ಕ್ರಿಯೆಯನ್ನು ಆಚರಿಸಿದರೆ ಪೈರಿಗೆ ಉಂಟಾದ 'ದೃಷ್ಟಿ' ನಿವಾರಣೆಗೊಳ್ಳುತ್ತದೆಂದು ಭಾವಿಸುವರು. ಗೌರಿ ಹಬ್ಬದ ಮರುದಿನ (ಈ ದಿನವನ್ನು ಇಲಿವಾರ ಎಂದು ಕರೆಯುತ್ತಾರೆ) ಗದ್ದೆಗೆ ನೀರು ಕಟ್ಟಬಾರದೆಂದು ಹೇಳುತ್ತಾರೆ. ಇದಕ್ಕೆ ಕಾರಣ ಇಲಿಗಳ ಹಾವಳಿ ಹೆಚ್ಚಾಗುತ್ತದೆಂಬ ಭಯವಿರಬಹುದು.

ಬೆಳೆದ ಪೈರಿನಲ್ಲಿ ಮೊದಲ ಬಾರಿಗೆ ತೆನೆ ಸಿಕ್ಕರೆ ಕೆಲವು ಉಪಾಸನೆಗಳನ್ನು ಅನುಷ್ಠಾನಗೈಯುವುದುಂಟು. 'ಕವಿಬಂದುಳಿಕೆ' ಯನ್ನು ವಿಧ್ಯುಕ್ತವಾಗಿ ಪೂಜಿಸಿ ತಂದು ಪಣತದಲ್ಲಿಡುವರು. ಅದರ ಉದ್ದೇಶ ಧ್ಯಾನದ ಪಣತ ಬರಿದಾಗಬಾರದು. ದವಸಧ್ಯಾನಗಳು ಕಾಲಿಯಾಗಬಾರದು ಎಂದು. ಪೈರು 'ಹೊಡೆ' ಬಂದ ಕಾಲದಲ್ಲಿ ಹುಲಿ ಬಾಲವನ್ನು ಪೈರಿಗೆ ಅಪ್ಪಳಿಸಿಕೊಂಡು ಹೋದರೆ ದವಸ ಹೆಚ್ಚಾಗುತ್ತದೆಂದು ನಂಬುವರು. ಈ ನಂಬಿಕೆಯ ಹಿನ್ನೆಲೆ ಇಲ್ಲಿ ಸ್ಪಷ್ಟಪಡುವುದಿಲ್ಲ.

ಮಲೆನಾಡ ಪ್ರತಿಯೊಂದು ಸೀಮೆಯಲ್ಲೂ ಒಂದೊಂದು ಕುಲದೇವತೆಯಿದೆ ಆ ಕುಲದೇವತೆಗಳನ್ನು ಆಯಾ ಸೀಮೆಯ ಇದೇ ಜನಾಂಗದ ಅರ್ಚಕ ಕುಟುಂಬದವರೇ ಆರಾಧಿಸುವ ಪದ್ಧತಿ ಇದೆ. ಈ ವೃತ್ತಿ ಅವರಿಗೆ ಅನುವಂಶಿಕವಾಗಿ ಬಂದ ಆಸ್ತಿ. ಅವರು ಸಾಮಾನ್ಯವಾಗಿ ಸಂಬಂಧಪಟ್ಟ ಕುಲದೇವಿಯ ದೇವಾಲಯದ ಆವರಣದಲ್ಲೇ ವಾಸಿಸುವವರು. ದೇವಿಯ ಭಕ್ತರು ಹರಕೆ ರೂಪದಲ್ಲಿ ದಾನವಾಗಿ ಸಲ್ಲಿಸಿದ್ದ ಭೂಮಿಯನ್ನು ಕೃಷಿ ಮಾಡಿಕೊಂಡಿದ್ದಾರೆ. ಇಷ್ಟೆಲ್ಲಾ ಸವಲತ್ತುಗಳಿರುವುದಲ್ಲದೆ ಕುಲಬಾಂಧವರೆನಿಸಿಕೊಂಡವರು ವರ್ಷಕ್ಕೊಮ್ಮೆ ಇವರಿಗೆ ತಾವು ಬೆಳೆಯುವ ಎಲ್ಲ ದವಸಧಾನ್ಯಗಳನ್ನು ತಂದು ಒಪ್ಪಿಸುವುದುಂಟು. ಅದು ಅವರ ಧರ್ಮವೂ ಹೌದು. ಮತಪದ್ಧತಿಯೂ ಹೌದು. ಕಾಣಿಕೆಯನ್ನು ರಿವಾಜಿನಂತೆ ಸಲ್ಲಿಸಲು ಉಲ್ಲಂಘಿಸಿದವರು ಧಾರ್ಮಿಕ ಸ್ವರೂಪದ ಶಿಕ್ಷೆಗಳಿಗೆ ಗುರಿಯಾಗಬೇಕಾಗುತ್ತದೆ. ಲೆವಿಸ್ಟ್ರಾಸ್ ಅವರು ಉತ್ಪನ್ನಾಂಶಗಳ ಆಧಾರದ ಮೇಲೆ ಎರಡು ಸಾಂಸ್ಕೃತಿಕ ಮಾದರಿಗಳ ನಡುವೆ ಇರುವ ಅನುರೂಪತೆಯನ್ನು ವ್ಯಾಖ್ಯಾನಿಸುವಾಗ ಉದ್ಧರಿಸುವ ವಾಕ್ಯಗಳು ಮೇಲಿನ ಮಾತುಗಳಿ ಪೂರಕವಾಗಿವೆ.

An Australian section produces its women for other sections in the same way as an occupational caste produces goods and services which other castes cannot obtin otherwise than through its agency... The symmetry between occupational castes and totemic groups is an inverted symmetry. The principle on which they are differentiated is taken from culture in one case and from nature in the other (pp. 122-3)[೫೯]

ಕೆಲವು ಶಿಷ್ಟಾಚಾರಗಳು ಇವರ ಬದುಕಿನಲ್ಲಿ ಇಣುಕು ಹಾಕಿವೆ. ಶ್ರಾವಣ ಮಾಸದ ಒಂದು ತಿಂಗಳು ಮಾದ್ಯಮಾಂಸಗಳ ಸೇವನೆ ನಿಷೇಧ. ಅನುಗಾಲವೂ ಶನಿವಾರ ಒಪ್ಪೊತ್ತು ಆಚರಿಸುವುದು ಸೂತಕದ ದಿನಗಳಲ್ಲಿ ನೆರೆಹೊರೆಯವರ ಸಂಗಡ ಬೆರೆಯುದಿರುವುದು ಇನ್ನು ಮುಂತಾದ ಮತ ಪದ್ಧತಿಗಳು ರೂಢಿಯಲ್ಲಿವೆ.

ಮೇಲಿನ ಸಂಪ್ರದಾಯಗಳಲ್ಲಿ ಕೆಲವು ಪೂರ್ವಯೋಜಿತವಾಗಿ ನಿರ್ದಿಷ್ಟ ದಿನಗಳಲ್ಲಿ ಮಾತ್ರ ನಡೆಸುವ ಆಚರಣೆಗಳಾದರೆ ಮತ್ತೆ ಕೆಲವು ವಿರೋಧ ಮತ್ತು ಪ್ರತಿರೋಧಾರ್ಥವಾಗಿ ಚಾಲನಿಸುವ ಆಚರಣೆಗಳು. ಈ ಆಚರಣೆಗಳಿಂದ ರೈತರು ತಮ್ಮ ಬಾಳಿನಲ್ಲಿ ಮಾನಸಿಕ ನೆಮ್ಮದಿ, ಸಂತೋಷಗಳನ್ನು ತಳೆದು ಬದುಕನ್ನು ಹಸನುಗೊಳಿಸಿಕೊಳ್ಳುತ್ತಾರೆ. ಈ ಅರ್ಥದಲ್ಲಿ ಇವು ಗ್ರಾಮೀಣರ ಐಕ್ಯತೆಗೆ, ಶ್ರೇಯೋಭಿವೃದ್ಧಿಗೆ ಮೂಲವಾಗುವುದು ಮಾತ್ರವಲ್ಲ. ಸಾಮಾಜಿಕ ಸಂಘಟನೆಯ ಒಂದು ಲಿಂಗವೂ ಆಗಿವೆ.

ಕುಲಬಾಂಧವರು ಸಾಮೂಹಿಕವಾಗಿ ಒಂದೆಡೆ ಕಲೆಯಬೇಕೆಂಬ ಸದುದ್ದೇಶದಿಂದ ಅದಕ್ಕಾಗಿಯೇ ಅವಕಾಶಗಳನ್ನು ಕಲ್ಪಿಸಿಕೊಂಡು ವಿಶೇಷವಾಗಿ ಔತಣಗಳನ್ನು ಏರ್ಪಡಿಸಿ ಸಂಬಂಧಿಸಿದವರನ್ನು ಆಹ್ವಾನಿಸುವುದು ಇವರಲ್ಲಿ ಒಂದು ಸತ್ಸಂಪ್ರದಾಯವಾಗಿ ಕಂಡು ಬರುತ್ತದೆ. ಜನನ ಹಾಗೂ ನಾಮಕರಣ, ದೀಕ್ಷಾವಿಧಿಗಳನ್ನು ಆಚರಿಸುವ ದಿನಗಳಲ್ಲಿ ಮದುವೆ ಮತ್ತು ಉತ್ತರ ಕ್ರಿಯೆ ಮುಂತಾದ ನಿರ್ದಿಷ್ಟ ಸಂದರ್ಭಗಳಲ್ಲಿ ಹಾಗೂ ಮತ್ತೆ ಕೆಲವು ವಿಶೇಷ ಸಂದರ್ಭಗಳಲ್ಲಿ ಔತಣಕೂಟಗಳನ್ನು ಏರ್ಪಡಿಸುವುದು ವಾಡಿಕೆ.

ಮಲೆನಾಡ ಒಕ್ಕಲಿಗರಲ್ಲಿ ಶಿಶು ಮಾತೃಗರ್ಭದಲ್ಲಿ ಬೆಳೆಯುತ್ತಿರುವಾಗ ಮತ್ತು ಜನಿಸಿದಾಗ ಸಂತೋಷ ಸೂಚಕವಾಗಿ ಔತಣಕೂಟಗಳನ್ನು ವ್ಯವಸ್ಥೆಗೊಳಿಸುವ ಪದ್ಧತಿ ಇದೆ. ಕೆಲವು ಜನಾಂಗಗಳಲ್ಲಿ ಶಿಶು ಮಾತೃಗರ್ಭದಲ್ಲಿ ಬೆಳೆಯುತ್ತಿರುವ ಸಂದರ್ಭದಲ್ಲಿ ಮಾತ್ರ ಆ ಸಂಬಂಧವಾಗಿ ಒಂದು ಔತಣಕೂಟವನ್ನು ಏರ್ಪಡಿಸುವ ಸಂಪ್ರದಾಯವುಂಟು. ಟ್ರಾಬ್ರಿಯಾಂಡ್ ದ್ವೀಪದ ಕೆಲವು ಬುಡಕಟ್ಟುಗಳಲ್ಲಿ ಸ್ತ್ರೀ ಗರ್ಭಿಣಿ ಇದ್ದಾಗಲೇ ವಂಶಬಾಂಧವರನ್ನು ಆಹ್ವಾನಿಸಿ ಊಟ ಕೊಡುವ ಪದ್ಧತಿ ಇದೆಯಂತೆ.[೨೦]

ಜನಪದ ಜೀವನದಲ್ಲಿ ಹೆಣ್ಣು ಪ್ರಾಯಕ್ಕೆ ಬರುವ ಸಂದರ್ಭವೂ ಮಹತ್ವವಾದದ್ದೇ. ಆತ್ಮೀಯ ಸಂಬಂಧಿಗಳೆಲ್ಲರೂ ಹರ್ಷಪಡುವ ಸಂದರ್ಭವದು. ಅಂದು ವಿಶೇಷವಾಗಿ ಅಡಿಗೆಯನ್ನು ಅಣಿಗೊಳಿಸಿ ಬಂಧು ಬಾಂಧವರೊಂದಿಗೆ ಕುಳಿತು ಸಹ ಭೋಜನ ನಡೆಸುವುದುಂಟು. ಅಂಡಮಾನ್ ದ್ವೀಪಗಳ ಕೆಲವು ಬುಡಕಟ್ಟುಗಳಲ್ಲಿ ಗಂಡು ಅಥವಾ ಹೆಣ್ಣು ಲಿಂಗಪ್ರೌಢಿಮೆ ಹೊಂದಿದಾಗ ಆ ಸಂಬಂಧವಾದ ದೀಕ್ಷಾ ವಿಧಿಗಳನ್ನು ಅತ್ಯಂತ ವೈಭವದಿಂದ ಆಚರಿಸುವುದನ್ನು ಇಲ್ಲಿ ಸ್ಮರಿಸಬಹುದಾಗಿದೆ.[೨೧]

ಮದುವೆ ಊಟಗಳು ಸಾಮಾನ್ಯವಾಗಿ ಧಾರ್ಮಿಕವಾಗಿ ಉಪಾಸನ ವಿಧಿಗಳ ಚೌಕಟ್ಟಿನಲ್ಲಿ ಬರುತ್ತವೆ. ಏಕೆಂದರೆ ಈ ಸಂದರ್ಭದಲ್ಲಿ ವಧೂವರರು ಮೊಟ್ಟಮೊದಲ ಬಾರಿಗೆ ರಕ್ತ ಸಂಬಂಧಗಳೊಂದಿಗೆ ಕುಳಿತು ಸಹಭೋಜನ ನಡೆಸಬೇಕೆಂಬ ವಿಧಿಯಿದೆ. ಈ ಮದುವೆ ಔತಣ ಒಂದು ವಿಧದಲ್ಲಿ ಸಾಮೂಹಿಕ ಕೂಟವನ್ನು ಸಂಕೇತಿಸಿದರೆ ಇನ್ನೊಂದು ವಿಧದಲ್ಲಿ ಮುಖ್ಯವಾಗಿ ಸ್ನೇಹಕೂಟವನ್ನು ಪ್ರತಿನಿಧಿಸುತ್ತದೆ. ಫಿಜಿ ದ್ವೀಪದಲ್ಲಿ ವರನು ಅಗತ್ಯವಾಗಿ

ಒಂದು ಔತಣವನ್ನು ಏರ್ಪಡಿಸಿ, ಭೋಜನದ ನಂತರವೇ ಹೆಣ್ಣನ್ನು ತನ್ನ ಮನೆಗೆ ಕರೆದೊಯ್ಯಬೇಕೆಂಬ ಕಟ್ಟಳೆಯಿದೆ.[೨]

ಮಡಿದ ವ್ಯಕ್ತಿಗೆ ಮರಣಾನಂತರ ಜೀವನ ಸುಖಮಯವೂ ಫಲಪ್ರದವೂ ಆಗಿರಲೆಂಬ ಆಕಾಂಕ್ಷೆಯಿಂದ ಅಂತಿಮ ಸಮಾರಾಧನೆಯ ಹೆಸರಿನಲ್ಲಿ ಒಂದು ಭರ್ಜರಿ ಔತಣಕೂಟವನ್ನು ಏರ್ಪಡಿಸುವ ಪದ್ಧತಿ ಮಲೆನಾಡಿಗರಲ್ಲಿದೆ. ಈ ಕಾರ್ಯಕ್ರಮ ಮತ ಪದ್ಧತಿಯಂತೆ ಸೂತಕ ಮುಗಿದ ದಿನದಂದೇ ಜರಗಬಹುದು ಇಲ್ಲವೆ ಪ್ರಶಸ್ತವೆನಿಸಿದರೆ ಬೇರೆ ಯಾವ ದಿನ ಬೇಕಾದರೂ ನಡೆಯಬಹುದು. ಮುಂದೆ ವರ್ಷಕ್ಕೊಮ್ಮೆ ಭಾದ್ರಪದ ಬಹುಳದಂದು ಹಿರಿಯರನ್ನು ನೆನೆಯುವ ಸಲುವಾಗಿ ಪಿತೃಪಕ್ಷವನ್ನು ಆಚರಿಸಲಾಗುವುದು.

ಹೀಗೆ ಎಲ್ಲಾ ಬಗೆಯ ಸಂಪ್ರದಾಯ, ಉಪಾಸನೆ, ವಿಧಿನಿಷೇಧಗಳಲ್ಲೂ ಮಲೆನಾಡ ಒಕ್ಕಲಿಗರ ಪ್ರತ್ಯೇಕತೆ ಎದ್ದು ಕಾಣುತ್ತದೆ. ಈ ಕೋಮಿಗೇ ವಿಶಿಷ್ಟವೆನಿಸಿದ ಎಷ್ಟೋ ಪ್ರಕ್ರಿಯೆಗಳು ಇವರ ಸಂಸ್ಕೃತಿಯನ್ನೂ ಸಾಮಾಜಿಕ ವ್ಯವಸ್ಥೆಯನ್ನು ಶ್ರುತಪಡಿಸುತ್ತವೆ.

ಆದರೆ ಇಲ್ಲಿ ಎಂದು ಅಂಶವನ್ನು ನೆನಪಿನಲ್ಲಿಡಬೇಕು. ಈ ಜನಾಂಗದಲ್ಲಿ ಪ್ರಚಲಿತವಿರುವ ಸಂಪ್ರದಾಯಗಳು, ನಂಬಿಕೆಗಳು ಮತ್ತು ಮೂಢನಂಬಿಕೆಗಳು ಗಂಡಸರಿಗಿಂತ ಸ್ತ್ರೀಯರಲ್ಲಿ ಹೆಚ್ಚು ಮನೆಮಾಡಿಕೊಂಡಿವೆ ಎಂಬುದು. ಸ್ತ್ರೀಯರೇ ಈ ಎಲ್ಲವುಗಲ ರಕ್ಷಕರು, ಬಿತ್ತನೆಗಾರರು, ಬೆಳೆಗಾರರು ಎಂದರೆ ತಪ್ಪಾಗಲಾರದು. ಇಲ್ಲಿ, ಈ ಸಂಬಂಧವಾಗಿ ಪ್ರಸ್ತಾಪಿಸಿರುವ ಟಾನಿಸ್ ಅವರ ಅಭಿಪ್ರಾಯವನ್ನೂ ನಾವೂ ಅನುಮೋದಿಸಬಹುದು.

Superstition and belief in miracles are more natural to the imagination of a women than doubt and inquiry and more congenial to it than clear and strak cognition.[೩೩]

ಮೇಲೆ ನಿರೂಪಿಸಿರುವ ಎಲ್ಲಾ ಸಂಪ್ರದಾಯದ ವಿಧಿ ನಿಷೇದ ಉಪಾಸನೆ ಆಚರಣೆಗಳನ್ನು ನಾಮದಾರಿಗಲು ತಮಗೇ ವಿಶಿಷ್ಟವಾದ ಒಂದು ಉಪಸನಾ ಭಾಷೆಯಲ್ಲಿ ಗುರುತಿಸುತ್ತಾರೆಂಬುದನ್ನು ಇಲ್ಲಿ ಪರಿಲಕ್ಷಿಸಬೇಕಾಗಿದೆ. ದಿನನಿತ್ಯ ಬಳಸುವ ಆಡುಭಾಷೆಯಿಂದ ಭಿನ್ನವಾಗುವ ಈ ಪದ ಪ್ರಯೋಗಗಳು ಎಲ್ಲರಿಗೂ ಪರಿಚಿತವಿರುವುದಿಲ್ಲ. ಆಯಾ ವಿಧಿ ಕ್ರಿಯೆಗಳನ್ನು ನಡೆಸಿಕೊಡುವ ಧಾರ್ಮಿಕ ಪ್ರಭೃತಿಗಳಿಗೆ ಅಥವಾ ಕೋವನ ಮುಂದಾಳುಗಳಿಗೆ ಮಾತ್ರ ಗೊತ್ತಿರುತ್ತದೆ. ಅಂಥ ಪ್ರಯೋಗಗಳಲ್ಲಿ ಕೆಲವನ್ನು ಮಾತ್ರ ಇಲ್ಲಿ ಉದಾಹರಿಸಬಹುದು ಮಲಮತ್ತು, ರಂಟು ಹಿಡಿಸುವುದು, ಈಡು, ಹಿಡಿದಿಬ್ಬಳೂಟ, ಹಿಟ್ಟಕ್ಕಿಸುವುದು, ವೀಳ್ಯ ತಿದ್ದುವುದು ಮುಂತಾಗಿ. ಈ ಒಂದೊಂದು ಶಬ್ದ ರೂಪವು ವಿಸ್ತಾರವಾದ ಅರ್ಥವನ್ನು ಒಳಗೊಂಡಿದೆ ಎಂಬುದನ್ನು ಬೇರೆ ಹೇಳಬೇಕಿಲ್ಲ. ಭಾಷಾ ಬಳಕೆ ಬೆಳವಣಿಗೆಯ ದೃಷ್ಟಿಯಿಂದ, ಪ್ರಾದೇಶಿಕತೆಯ ದೃಷ್ಟಿಯಿಂದ ಈ ಆರ್ಷೇಯ ಪ್ರಯೋಗಗಳು ವಿಶಿಷ್ಟವೆನಿಸುತ್ತವೆ. ಉಪಾಸನಾ ಭಾಷೆಯ ಮಹತ್ವವನ್ನು ಕುರಿತು ಸೆಲಿಗ್‌ಮನ್ ಹೇಳಿರುವ ಮಾತುಗಲು ಇಲ್ಲಿ ಉಲ್ಲೇಖಾರ್ಹವಾಗಿವೆ.

The languae used in Ritual is frequently different from that in everyday use. It may be archaic and still understood by the officiant and / or community or it may be so difference as to be unintelligible. It should be discovered whether the officiants understood it or merely repeat what they have learnt.[೩೪]

ಕೊನೆಯದಾಗಿ, ಸಂಪ್ರದಾಯವೇ ಮಾನವನ ಜೀವನವನ್ನು ನಿರ್ದೇಶಿಸುತ್ತಾದ್ದರಿಂದ ಅದರ ಪರಿಣಾಮ ವ್ಯಾಪ್ತಿಗಳ ಪರಿಧಿಯಲ್ಲೇ ಮನುಷ್ಯ ಬದುಕು ನಡೆಸಬೇಕಾಗುತ್ತದೆ. ನಿಜವಾದ ಅರ್ಥದಲ್ಲಿ ನೀತಿ, ಧರ್ಮಗಳ ಪರಿಕಲ್ಪನೆಯನ್ನು ಮೂಡಿಸಿ ಜನತೆಯಲ್ಲಿ ನೈತಿಕ ಪ್ರಜ್ಞೆ ಮತ್ತು ಧರ್ಮಾಧರ್ಮಗಳ ವಿವೇಚನೆಯನ್ನು ಕೆರಳಿಸುವುದೇ ಸಂಪ್ರದಾಯ ಆದ್ದರಿಂದ

'...Custom in as truly a picture of the moral consciousness of the community as a man's habit are the expression of his individual character[೨೧]' ಎಂಬುದು ಸುಳ್ಳಲ್ಲ. (Wundt, Ethics Eng. tr London 1897. p-164)

**ಟಿಪ್ಪಣಿಗಳು**

೧. ಎಪಿಗ್ರಾಫಿಯಾ ಕರ್ನಾಟಿಕಾ, ಸಂ ೬, ಕಳಸದ ಶಾಸನ ಕ್ರ.ಸಂ. ೩೮, ೬೨

೨. ಕೊಡಗು ಗೌಡ ಸಂಸ್ಕೃತಿ, ಕೊಡಗು ಮತ್ತು ದಕ್ಷಿಣ ಕನ್ನಡ ಗೌಡ ಸಮಾಜ, ಬೆಂಗಳೂರು, ೧೯೭೦ ಭಾಗ, ಪುಟ.೧೮.

೩. ಅದೇ, ಪುಟ.೨೨

೪. ಅದೇ, ಪುಟ.೨೩

೫. ಅದೇ, ಭಾಗ ೨, ಪುಟ.೧೬-೧೭

೬. Sri Sathyan (Ed) Mysore State Gazetteer, Coorg District, Bangalore 1965, P.104.

೭. Anatha Krishna Iyer L.K.The Mysore Tribes and Castes, Vol.IV, P.I and Vol. III, P.504.

೮. Hayavadana Rao. C. Mysore Gazetteer, Vol., P. 246.

೯. ವೀರಶೈವ ಮತದಲ್ಲಿರುವಂತೆ ಇವರಲ್ಲೂ ಪ್ರಸಿದ್ಧಿ ಗುರುಪೀಠಗಳಿವೆ. ದಕ್ಷಿಣ ಕನ್ನಡ ಜಿಲ್ಲೆಯ ಕದರಿ ಮಠ, ಹಾಸನ ಜಿಲ್ಲೆಯ ಕುಂದೂರು ಮಠ, ಮಂಡ್ಯ ಜಿಲ್ಲೆ ಆದಿಚುಂಚನಗಿರಿ ಕ್ಷೇತ್ರಗಳೇ ಈಗ ಸದ್ಯಕ್ಕೆ ಕಂಡುಬರುವ ಅಂಥ ಗುರುಪೀಠಗಳು.

೧೦. Najudradahya H.V. and Anantha Krishna Iyar .L.K.. The Mysore Tribes and Castes. Vol. IV.1931 p.I.

೧೧. Anantha Krishna Iyer L.K. The Mysore Tribes and Castes, vol.III, p. 504.

೧೨. ಲೆವಿಸ್ಟ್ರಾಸ್‌ನ ಗ್ರಂಥದ ಮುನ್ನುಡಿಕಾರರು ಉದ್ಧರಿಸಿರುವ ವಾಕ್ಯಗಳು ಇಲ್ಲಿ ಗಮನಾರ್ಹ.

The connection between man and his totem is mutually beneficiant; the totem protects the man and the man shows his respects for the totem in various ways. by not killing if it an animal and not cutting or gathering if it be a plant (Totemism 1887 p.3) ನೋಡಿ: Claude Levi-Strauss Totemism-Introduction by Roger Poole., p. 19.

೧೩. ವಿವರಗಳಿಗೆ ನೋಡಿ: Hindu Castes and Tribes, p. 323.

೧೪. ಮೂಲತಃ ಎರಡೂ ದೇಶ, ಜನಾಂಗಗಳ ನಾಗರಿಕತೆ, ಸಂಸ್ಕೃತಿ ಭಿನ್ನವಾಗಿದ್ದರೂ ಮಲೆನಾಡ ಒಕ್ಕಲಿಗರು ಊರುಗಳನ್ನು ಕಟ್ಟಿಕೊಳ್ಳುವ ರೀತಿ ಧಾನ್ಯಗಳನ್ನು ಶೇಖರಿಸಿಡಲು ನಿರ್ಮಿಸಿಕೊಳ್ಳುವ ಹಣತದ ಮನೆಗಳ ಮಾದರಿ - ಎಲ್ಲವೂ ಟ್ರಾಬಿಯಾಂಡ್ ನಿವಾಸಿಗಳ ಜೀವನ ಕ್ರಮವನ್ನು ಬಹುಮಟ್ಟಿಗೆ ಹೋಲುತ್ತದೆ. ಗಮನಿಸಿ. Malinowski B.Argonants of Western Pacific The Trobiand Islands, p.55.

೧೫. ಜವರೇಗೌಡ ದೇ. (ಡಾ.), ಜಾನಪದ ಅಧ್ಯಯನ ಪು. ೩೦೬

೧೬. ಹೆಂಡತಿಯ ಸ್ಥಾನದಲ್ಲಿ ಗಂಡ ನಿಂತು ಕೆಲವು ಕೆಲಸಗಲನ್ನು ನಿರ್ವಹಿಸುವ ವಿಚಿತ್ರ ಪದ್ಧತಿಯೆಪಿ ಪ್ರಸೂತಿಕಾ ಧರ್ಮ. ದಕ್ಷಿಣ ಆಫ್ರಿಕದ ಕಾರಬ್ ಜನಾಂಗ, ಜಪಾನಿನ ಐನು ಜನಾಂಗ, ನೀಲಗಿರಿಯ ತೊದವರು, ಅಸ್ಸಾಮಿನ ಖಾಸಿ ಜನಾಂಗಗಳಲ್ಲಿ ಈ ಪದ್ಧತಿಯ ಪ್ರಕಾರ ಪತ್ನಿ ಮಗುವಿಗೆ ಜನ್ಮ ತೆತ್ತ ಕೂಡಲೆ ಪ್ರತಿ ದಿನಿತ್ಯ ಕೆಲಸಗಳನ್ನು ನೋಡಿಕೊಳ್ಳಬೇಕಂತೆ. ಬಾಣಂತಿಯಂತೆ ಮಗುವಿನ ಮಗ್ಗುಲಲ್ಲಿ ಮಲಗಬೇಕು. ಕಲ್ಲಂತೆ ಕೋಣೆಯಲ್ಲಿರಬೇಕು. ಕೆಲವು ನಿಷೇಧಗಳನ್ನು ಪಾಲಿಸಬೇಕು.

೧೭. ನೋಡಿ. Radcliffe Brown A.R. The Andaman Islanders p. 95. Malinowski -B The Argonauts of the Western Pacific p. 49.

೧೮. Radcliffe - Brown, A.R., The Andaman Islanders p. 233.

೧೯. ಉದಯವಾಣಿ - ಸಾಪ್ತಾಹಿಕ, ಸಿ. ಯಚ್. ಗೋಪಾಲಕೃಷ್ಣ ಭಟ್, ಆಫ್ರಿಕಾದ ವಿವಾಹ ವೈಚಿತ್ರ್ಯಗಳು, ೪-೧೨-೧೯೭೭.

೨೦. Ananthakrishna lyar, Mysore Tribes and Castes, Vol. IV. p. 399

೨೧. ತಮ್ಮ ಜೀವನದಲ್ಲಿ ಎಲ್ಲ ಹಂತಗಳಲ್ಲೂ ವಿಶೇಷವಾಗಿ ಆಕಸ್ಮಿಕಗಳೊಂದಿಗೆ ತೀರ ತೊಂದರೆಗಳುಂಟಾದಾಗ ವ್ಯಾಕುಲರಾಗಿ ಭವಿಷ್ಯ ತಿಳಿಯಲು ಮತ್ತು ಆ ಸಂಬಂಧವಾದ ವಿಧಿ ನಿಷೇಧಗಳನ್ನು ಅನುಸರಿಸಲು ಸೀಮೆ ಪುರೋಹಿತರನ್ನು ಸಮೀಪಿಸುವ ಅಭ್ಯಾಸ ಹೆಚ್ಚು ಜ್ಯೋತಿಷ್ಯ, ಪೌರೋಹಿತ್ಯಗಳಿಂದಲೇ ಜೀವನ ನಡೆಸುವ ಪುರೋಹಿತರು ಪಂಚಾಗದ ಸಹಾಯದಿಂದ ಗ್ರಹಗತಿಗಳನ್ನು ನೋಡಿ ಸೂಚಿಸುವುದು ಪದ್ಧತಿ.

೨೨. Krishna Iyer A. The Coorge Tribes and Caste, 1948. p. 71.

೨೩. ಜವರೇಗೌಡ ದೇ. (ಡಾ.), ಜಾನಪದ ಅಧ್ಯಯನ ಪು. ೩೨೯.

೨೪. Seligman B.Z.Notes and Queries on Anthropology p.178.

೨೫. 'ಪ್ರಜಾವಾಣಿ' ಸಾಪ್ತಾಹಿಕ ಪುರವಣಿ, ರೇಣುಕ - ಬಿಳಿಗಿರಿಯ ಮಲೆ ಸೋಲಿಗರು, ೨೭.೧೧.೧೯೭೭

೨೬. ಜವರೇಗೌಡ ದೇ. (ಡಾ.), ಜಾನಪದ ಅಧ್ಯಯನ ೧೯೭೬ ಪು. ೩೦೪.

೨೭. ಜವರೇಗೌಡ ದೇ. (ಡಾ.), ಜಾನಪದ ಅಧ್ಯಯನ ೧೯೭೬ ಪು. ೩೧೨.

೨೮. ನೋಡಿ: Malinowski. B., Argonauts of the Western Pacific, p. 156.

೨೯. Claude Levi-Strauss, Tatemism Translated from the French by Rodney Neetham, 1973, Introduction p.57.

೩೦. James Hastings (Ed) Encyclopuedia of Religion and Ethics, vol.5. 801.

೩೧. Radcliffe - Brown, A.R. The Andaman Isladers, p. 92.

೩೨. James Hastings (Ed) Encyclopaeda of Religion and Ethics, vol.5. 802.

೩೩. Ferdinand Tonnies, Custom: An Essay on social Codes, Tranlated by A.Farrell Borentein. p.75.

೩೪. Seligman B.Z.Notes and Queries on Anthropology p.187.

೩೫. James Hastings (Ed)., Encyclopuedia of Religion and Ethics, vol.4. 375.


* * * * *

## ಅಧ್ಯಾಯ -೯

# ಉಪಸಂಹಾರ

೭.೧. ಸ್ವಾತಂತ್ರ್ಯ ನಂತರ ಒಕ್ಕಲುತನಕ್ಕಾದ ಆಘಾತ

೭.೨. ಒಕ್ಕಲಿಗರ ಆರ್ಥಿಕ ಸಮಸ್ಯೆಗಳು

೭.೩. ಒಕ್ಕಲಿಗರ ವ್ಯವಸಾಯ ಸಮಸ್ಯೆಗಳು

೭.೪. ಒಕ್ಕಲಿಗರ ತೋಟಗಾರಿಕೆ ಸಮಸ್ಯೆಗಳು

೭.೫. ಒಕ್ಕಲಿಗರ ಸಾಮಾಜಿಕ ಸಮಸ್ಯೆಗಳು

೭.೬. ಒಕ್ಕಲಿಗರ ಇಂದಿನ ಸ್ಥಿತಿ, ಮುಂದಿನ ಗತಿ

ಭಾರತದ ರೈತನು ಶತ ಶತಮಾನಗಳಿಂದ ಶೋಷಣೆಗೊಳಗಾಗಿರುವುದು ಸಾಮಾನ್ಯವಾಗಿ ಎಲ್ಲರಿಗೂ ತಿಳಿದಿರುವ ಸತ್ಯ. ಭಾರತದ ಹಳ್ಳಿಗಳ ದುಸ್ಥಿತಿಗೆ ರೈತನ ಬೆಳೆಗೆ ನ್ಯಾಯವಾದ ಬೆಲೆ ಸಿಕ್ಕದಿರುವುದು ಒಂದು ಮುಖ್ಯ ಕಾರಣ. ಇಂದು ಭಾರತೀಯ ಹಳ್ಳಿಯ ರೈತನು ತನ್ನ ಶೋಷಣೆ ಹೇಗಾಗುತ್ತಿದೆ, ತನ್ನ ದುಸ್ಥಿತಿಗೆ ಕಾರಣಗಳೇನು ಎಂಬುದನ್ನು ಕಾಣುತ್ತಿದ್ದಾನೆ. ಪ್ರಜಾಪ್ರಭುತ್ವ ಉಳಿದು ಬೆಳೆಯಬೇಕಾದರೆ, ರೈತನ ಬೆಳೆಗೆ ಸಮಾನ ಬೆಲೆ ದೊರಕುವಂತೆ ಮಾಡಬೇಕಾದುದು ನಮ್ಮ ಸರ್ಕಾರದ ಆದ್ಯ ಕರ್ತವ್ಯ.

''ಉದ್ಯೋಗಗಳಲೆಲ್ಲ ಅತ್ಯಂತ ಮಾನ್ಯ ಕೃಷಿ. ಕೃಷಿಕ ಸ್ವಾಮಿ ಒಬ್ಬ ವೃಷ್ಟಿಕರ್ತ'' ಆರ್.ಎಸ್.ಬರ್ನ್ಸ್

''ಯಾವುದು ಪ್ರಪಂಚಕ್ಕೆ ಅನ್ನ ಕೊಡುತ್ತದೋ ಆ ಕಲೆ ಒಂದು ಉಪಕಾರಸ್ಮರಣೆಯಿಲ್ಲದ ವೃತ್ತಿ'' ವಾಲ್ಟೈರ್

-ಮೇಲಣ ಚಿಂತನ ವಾಕ್ಯಗಳಲ್ಲಡಗಿದೆ ಕೃಷಿಯ ಮಹತ್ವ ಮತ್ತು ರಹಸ್ಯ.

**೭.೧. ಸ್ವಾತಂತ್ರ್ಯ ನಂತರ ಒಕ್ಕಲುತನಕ್ಕಾದ ಆಘಾತ**

ಭಾರತವು ಸ್ವಾತಂತ್ರ್ಯಗಳಿಸಿ ೬೦ ವರ್ಷಗಳು ಸ್ಪಂದಿಸುತ್ತಿದ್ದರೂ ಸಹ ಈ ವೈಜ್ಞಾನಿಕ, ಯುಗದಲ್ಲಿ ಈ ಆಧುನಿಕ ಕಾಲದಲ್ಲಿ ಕ್ರೂರ ಬಡತನದ ದವಡೆಯಲ್ಲಿ ಸಿಕ್ಕಿ ಬಳಲುತ್ತಿದೆ. ಇಂದು ಭಾರತದಲ್ಲಿ ಜನಸಂಖ್ಯಾ ಸ್ಫೋಟವಾಗಿ ೧೦೦ ಕೋಟಿ ಜನರಿದ್ದಾರೆ. ಭೂಭಾರ ಅತಿ ಹೆಚ್ಚಾಗಿದೆ. ಭಾರತದ ಜನರಲ್ಲಿ ಶೇಕಡ.೮೦ರಷ್ಟು ಜನರು ಹಳ್ಳಿಯವರು. ಅವರಲ್ಲಿ ಶೇಕಡ.೭೦ರಷ್ಟು ಜನರು ಒಕ್ಕಲುತನದಿಂದ ಜೀವಿಸುವವರು. ಭಾರತದಲ್ಲಿ ೬,೬೬,೦೦೦ ಹಳ್ಳಿಗಳಿವೆ. ಆವುಗಳಲ್ಲಿ ಜೀವನ ಸಾಗಿಸುವ ಬಹುತೇಕ ಹಳ್ಳಿಯವರು ಮುಖ್ಯವಾಗಿ ಕೃಷಿಕರು ಹಾಗೂ ಕೃಷಿಯನ್ನೇ ಅವಲಂಭಿಸಿರುವ ಗೃಹ ಕೈಗಾರಿಕೆಗಳ ಅವಲಂಭಿತರು. ಇವರ ದುಃಸ್ಥಿತಿಗಳಿಗೆ ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಅನುಸರಿಸುತ್ತಿರುವ ಕೃಷಿ ನೀತಿಗಳು ಮತ್ತು ಮಲತಾಯಿ ಆರ್ಥಿಕ ನೀತಿಗಳು ಮುಖ್ಯ ಕಾರಣಗಳಲ್ಲವೇ ಎಂಬುದನ್ನು ಪ್ರಜಾಪ್ರಭುತ್ವ ಪ್ರೇಮಿಗಳು ತಿಳಿಯಬೇಕು.

ದೇಶದ ಸಕಲ ಜನತೆ ಹಳ್ಳಿಗರೂ ಸೇರಿ ರಾಜಕೀಯ ಪ್ರಜ್ಞೆಯುಳ್ಳವರಾಗಿದ್ದು, ಕೆಳಮಟ್ಟಗಳಲ್ಲಿಯೂ ಅಂದರೆ ಹಳ್ಳಿ ಮತ್ತು ತಾಲ್ಲೂಕು ಮಟ್ಟಗಳಲ್ಲಿಯೂ ಜವಾಬ್ಧಾರಿಯುತ ನಾಯಕತ್ವ ರೂಪುಗೊಂಡು, ಪ್ರಜೆಗಳು ಆರ್ಥಿಕ

ಸ್ವಾತಂತ್ರ್ಯವನ್ನು ಪಡೆದು ದೇಶದ ಮತದಾನದಲ್ಲಿ ಮಾತ್ರವಲ್ಲದೆ ದೇಶದ ಪ್ರಗತಿಗೆ ಅವರ ಪಾಲವನ್ನು ಸೇರಿಸಿದರೆ ಮಾತ್ರ ಭವ್ಯ ಭಾರತವನ್ನು ಕಟ್ಟಲು ಸಾಧ್ಯವಾಗುತ್ತದೆ.

**೨. ಭಾರತದ ಕೃಷಿನೀತಿ**

ಕೃಷಿಕರ ನಾಡಾದ ಭಾರತದಲ್ಲಿ ವ್ಯವಸಾಯ ನೀತಿ ಸರ್ಕಾರದ ನೀತಿಗಳಲ್ಲಿ ಅಗ್ರಸ್ಥಾನ ಪಡೆಯಲೇಬೇಕು. ಅದು ನೇರವಾಗಿ ಗ್ರಾಮೀಣ ಆರ್ಥಿಕ ಮತ್ತು ಸಾಮಾಜಿಕ ಸಮಸ್ಯೆಗಳಿಗೆ ಸಂಬಂಧಿಸಿದ್ದರೂ, ನಿಜವಾಗಿ ಅದು ಇಡೀ ಭಾರತೀಯ ಸಮಾಜಕ್ಕೇ ಸಂಬಂಧಿಸಿದುದಾಗಿದೆ. ಸಕಲ ಜನರ ಆರೋಗ್ಯ, ಸಂಪತ್ತು ಮತ್ತು ಸಂಮೃದ್ಧಿ ಎಲ್ಲವೂ ಬಹುಮಟ್ಟಿಗೆ ವ್ಯವಸಾಯ ಅರ್ಥವ್ಯವಸ್ಥೆಯ ಮೇಲೆ ನಿಂತಿವೆ. ಅದನ್ನೇ ಸ್ಪಷ್ಟವಾಗಿ ಹೇಳುವುದಾದರೆ ಬಡವ, ಬಲ್ಲಿದ, ಎಲ್ಲರಿಗೂ ಬೇಕಾದ ಅಕ್ಕಿ, ಬೇಳೆ, ಹಾಲು, ಸಕ್ಕರೆ, ಕಾಫಿ, ಹತ್ತಿ ಇತ್ಯಾದಿ ನಮ್ಮ ನಿತ್ಯ ಬಳಕೆಯ ವಸ್ತುಗಳ ಬೆಲೆಗಳು ನಮ್ಮ ವ್ಯವಸಾಯ ಮತ್ತು ಆರ್ಥಿಕ ನೀತಿಯನ್ನು ಅವಲಂಬಿಸಿವೆ.

ದೇಶದ ಬಡಜನತೆಗೆ ಆದಷ್ಟು ಕಡಿಮೆ ಬೆಲೆಯಲ್ಲಿ ಆಹಾರವನ್ನು ಒದಗಿಸಬೇಕಾದರೆ, ವ್ಯವಸಾಯದಲ್ಲಿ ಕಡಿಮೆ ಖರ್ಚಿನಲ್ಲಿ ಹೆಚ್ಚು ಉತ್ಪಾದನೆಗೆ ಅವಕಾಶ ಮಾಡಿಕೊಡಬೇಕು. ಹಾಗೆ ಮಾಡದೆ, ರೈತರನ್ನೂ ಅವರ ಹಿಡುವಳಿಯನ್ನೂ ದುಃಸ್ಥಿತಿಯಲ್ಲಿಟ್ಟು, ಒಂದು ಎಕರೆ ಭೂಮಿ ಅದಕ್ಕೆ ಸಾಧ್ಯವಾಗುವುದಕ್ಕಿಂತ ಹೆಚ್ಚು ಜನರನ್ನು ಸಾಕುವಂತೆಯೂ, ಹೆಚ್ಚು ಸಾಲಮಾಡುವಂತೆಯೂ ಮಾಡಿ, ತನ್ಮೂಲಕ ದವಸಧಾನ್ಯಗಳ ಉತ್ಪಾದನಾ ಖರ್ಚು ಹೆಚ್ಚಾಗುವಂತೆ ಮಾಡಿದರೆ, ಬಡಜನರು ತಮ್ಮ ಆದಾಯದಲ್ಲಿ ಹೆಚ್ಚು ಭಾಗವನ್ನು ಖರ್ಚು ಮಾಡಬೇಕಾಗಿರುವ ಆಹಾರ ಪದಾರ್ಥಗಳ ಬೆಲೆ ಹೆಚ್ಚಿ, ದೇಶದ ಬಲ್ಲಿದರೂ, ಬಡಜನರೂ, ರೈತರೂ, ಕಾರ್ಮಿಕರೂ, ಕೆಳ ಮಧ್ಯವರ್ಗದವರು ತಮ್ಮ ಜೀವನ ನಡೆಸಲು ಕಣ್ಣೀರಿನಲ್ಲಿ ಕೈ ತೊಳೆದುಕೊಳ್ಳಬೇಕಾಗುತ್ತದೆ. ಅವರು ಸುಖೀರಾಜ್ಯವನ್ನು ತಲುಪುವ ಬದಲು 'ದುಃಖೀರಾಜ್ಯ'ದ ಪ್ರಜೆಗಳಾಗಿರಬೇಕಾಗುತ್ತದೆ.

ಆರ್ಥಿಕವಾಗಿ ದುರ್ಬಲಗೊಂಡಿರುವ ಮತ್ತು ಸಾಮಾಜಿಕವಾಗಿ ಕುಂಠಿತವಾಗಿರುವ ನಮ್ಮ ಹಳ್ಳಿಗಳು ಹೀಗೆಯೇ ಸೊರಗುತ್ತಿದ್ದು, ದೇಶಕ್ಕೆ ಭಾರವಾಗಿರಬೇಕೋ ಅಥವಾ ಸತ್ತ್ವಪೂರ್ಣವಾಗಿ ಬೆಳೆಯಬೇಕೋ ಎಂಬುದು ಪ್ರಶ್ನೆ. ವಾಸ್ತವವಾಗಿ, ಕೂಲಿ ಸಂಪಾದಿಸುವವರ ಮತ್ತು ಸರ್ಕಾರಿ ನೌಕರರ ಅಭ್ಯುದಯವು ಅವರು ಪಡೆಯುವ ಕನಿಷ್ಠ ಮತ್ತು ಗರಿಷ್ಠ ಕೂಲಿ ಅಥವಾ ಸಂಬಳದ ಮೇಲೆ ಹೇಗೆ ಅವಲಂಬಿಸಿರುವುದೋ ಹಾಗೆಯೇ, ನಮ್ಮ ವ್ಯವಸಾಯವನ್ನು ಅವಲಂಬಿಸಿರುವ ಗ್ರಾಮವಾಸಿಗಳ ಆರ್ಥಿಕ ಹಾಗೂ ಸಾಮಾಜಿಕ ಬೆಳವಣಿಗೆಯೂ ಸಹ ಅವರಿಗೆ ದೊರೆಯುವ ಕನಿಷ್ಠ ಮತ್ತು ಗರಿಷ್ಠ ಪ್ರಮಾಣದ ಭೂಹಿಡುವಳಿಯನ್ನವಲಂಬಿಸಿದೆಯೆಂದು ಹೇಳಿದರೆ ತಪ್ಪಾಗಲಾರದು.

ಮೊದಲನೆಯ ಪಂಚ ವಾರ್ಷಿಕ ಯೋಜನೆಯಲ್ಲಿ ಯೋಜನಾ ಆಯೋಗವು ೫ ಜನರಿರುವ ವ್ಯವಸಾಯಗಾರರ ಕುಟುಂಬಕ್ಕೆ ೩,೬೦೦ ರೂ.ಗಳ ನಿವ್ವಳ ವಾರ್ಷಿಕ ಆದಾಯವನ್ನು ಕೊಡುವಷ್ಟು ಜಮೀನಿರಬೇಕೆಂದು (ಗರಿಷ್ಠ ಮಿತಿ) ಸೂಚಿಸಿತು, ವ್ಯವಸಾಯೇತರ ಕಸಬುಗಳಿಗಾಗಲಿ, ಸರ್ಕಾರಿ ಅಥವಾ ಖಾಸಗಿ ವಲಯದ ನೌಕರರ ಆದಾಯಗಳಿಗಾಗಲಿ ಅಂತಹ ಮಿತಿಯನ್ನು ಹಾಕಲಿಲ್ಲ. ಹೀಗಿರುವಾಗ, ಭಾರತದ ದುಃಸ್ಥಿತಿಯು ಹಳ್ಳಿಗಳಲ್ಲಿ ವಾಸಿಸುವ, ಸ್ವಯಂ ಉದ್ಯೋಗ ಮತ್ತು ಸ್ವಯಂ ಸಹಾಯದಿಂದ ಬಾಳಲೇ ಬೇಕಾಗಿರುವ, ಈ ಒಕ್ಕಲು ಮಕ್ಕಳಿಗೆ ಮಲತಾಯಿ ನೀತಿಯೇಕೆ?

ನಾನಾ ಅಡ್ಡಿ ಆತಂಕಗಳು, ಪ್ರಕೃತಿಯ ವಿಕೋಪಗಳು, ಇವುಗಳನ್ನು ಎದುರಿಸಿ ಬಂಡವಾಳವನ್ನು ಶೇಖರಿಸಿ ಭೂಮಿಗೆ ಹಾಕಿ, ಅದರಲ್ಲಿ ಹೆಚ್ಚಾಗಿ ಉತ್ಪಾದನೆ ಮಾಡಿ ಜನತೆಗೆ ಅನ್ನ, ಬಟ್ಟೆ ಕೊಡಬೇಕಾಗಿರುವ ಒಂದು ಕೃಷಿ ಕುಟುಂಬಕ್ಕೆ ಅಷ್ಟು ಕಡಿಮೆ ಆದಾಯದ ಗರಿಷ್ಠ ಮಿತಿಯನ್ನು ಹಾಕಿದುದು ಸರಿಯೇ ತಪ್ಪೇ ಎಂಬುದನ್ನು, ೬೦ ವರ್ಷಗಳ ನಂತರವಾದರೂ ನಾವು ನಮ್ಮ ಹಳ್ಳಿಯನ್ನು ಈ ದುಃಸ್ಥಿತಿಯಿಂದ ತಿಳಿದುಕೊಂಡು, ತಿದ್ದಿಕೊಂಡು ನಮ್ಮ ಕನಸಿನ ಭವ್ಯ ಭಾರತವನ್ನು ಕಟ್ಟಬೇಕಾಗಿದೆ.

**೩. ಗ್ರಾಮ ಭಾರತದ ಕೆಲವು ವಾಸ್ತವಗಳು**

**ನಮ್ಮ ಹಳ್ಳಿಗಳ ಹೊರಮುಖ:**

ಇಂದಿನ ಪ್ರಪಂಚದಲ್ಲಿ ಹಳ್ಳಿಯೆಂದರೆ, ಅಲ್ಲಿ ಮನುಷ್ಯನು ವಾಸಿಸಲು ಅನುಕೂಲತೆಗಳಿರುವ, ಚೊಕ್ಕಟವಾಗಿರುವ ಸಣ್ಣ ಮನೆಗಳಿರಬೇಕು. ಅಲ್ಲಿ ಚರಂಡಿ ವ್ಯವಸ್ಥೆಯಿದ್ದು, ಉಲ್ಲಾಸಕರವಾದ, ಶಕ್ತಿ ಮತ್ತು ಆಯುಷ್ಯವರ್ಧಕವಾದ ಸೊಂಪಾದ ಗಾಳಿ ಪುಷ್ಕಳವಾಗಿ ನಮ್ಮ ಮುಖದ ಮೇಲೆ ಬೀಸುತ್ತಿರಬೇಕು. ಪ್ರಕೃತಿಯ ಮಡಿಲಲ್ಲಿ ಮಲಗಿರುವ ಹಳ್ಳಿಯು ಧೂಳು, ಗಡಿಬಿಡಿ, ಗಲಾಟೆ, ಹಬೆ, ಕಲುಷಿತ ವಾತಾವರಣ ಇವುಗಳಿಂದ ಜರ್ಝರಿತವಾದ ಪಟ್ಟಣಕ್ಕೆ ವ್ಯತಿರಿಕ್ತವಾಗಿರಬೇಕು, ಅದೊಂದು ಆರೋಗ್ಯಧಾಮವಾಗಿ, ಹತ್ತಿರದ ಪಟ್ಟಣಗಳಲ್ಲಿರುವ ಹಳ್ಳಿಗರ ಬಂಧು ಮಿತ್ರರನ್ನು ವಾರಾಂತ್ಯದಲ್ಲಿ ವಿಶ್ರಾಂತಿಗಾಗಿ ಆಕರ್ಷಿಸುವಂತಿರಬೇಕು ಎಂಬುದು.

ಭಾರತದ ಅನೇಕ ಹಳ್ಳಿಗಳಿಗೆ ಸರಿಯಾದ ರಸ್ತೆಗಳಿಲ್ಲ. ಅನೇಕ ಹಳ್ಳಿಗಳ ರಸ್ತೆಗಳು ಕೊರಕಲು ಬಿದ್ದು ಅವುಗಳನ್ನು ಉಪಯೋಗಿಸುವುದು ಕಷ್ಟವಾಗುತ್ತಿದೆ. ಹಳ್ಳಿಗಳ ಹತ್ತಿರ ಅವುಗಳನ್ನು ಸೇರುವ ದಾರಿಗಳ ಎರಡು ಪಕ್ಕಗಳಲ್ಲೂ ಅಸಹ್ಯಕರವಾದ ಗೊಬ್ಬರದ ಗುಂಡಿಗಳು. ಅವು ಹಳ್ಳಿಯ ಹೊರ ಒಳ ಭಾಗಗಳಲ್ಲಿಯೂ ಹರಡಿಕೊಂಡಿರುವುದನ್ನೇ ನೋಡಬಹುದು. ಹಳ್ಳಿಯ ಆವರಣದಲ್ಲಿ ಲಂಟಾನಾ, ಕಳ್ಳಿ ಮೊದಲಾದ ಕಾಡು ಪೊದೆಗಳು ಅಲ್ಲಲ್ಲಿ ಬೆಳೆದುಕೊಂಡಿರುತ್ತವೆ. ಸಾಮಾನ್ಯವಾಗಿ ಹಳ್ಳಿಯ ಬೀದಿಗಳು ಡೊಂಕುಡೊಂಕಾಗಿ ಇದ್ದು, ಇಕ್ಕಟ್ಟಾಗಿದ್ದು ಕೊಳಕಿನಿಂದ ತುಂಬಿರುತ್ತವೆ. ಕೆಲವು ಕುಟುಂಬಗಳಿಗೆ ದನದ ಕೊಟ್ಟಿಗೆಗಳೇ ಇಲ್ಲದೆ, ತಾವು ವಾಸ ಮಾಡುವ ಮನೆಗಳ ಮುಂದೆ ಗೂಟಗಳನ್ನು ಬಡಿದು ದನಗಳನ್ನು ಕಟ್ಟಿರುವುದು ಸಾಮಾನ್ಯ ದೃಶ್ಯ. ಚಿಕ್ಕ ಮಕ್ಕಳಿಗೆ ಆಟವಾಡಲು ಮೈದಾನವಿಲ್ಲ. ಬೀದಿಯ ಅಕ್ಕಪಕ್ಕದಲ್ಲಿ ಹಳ್ಳಿಯ ಸುತ್ತಮುತ್ತಲ ಪ್ರದೇಶಗಳನ್ನೆಲ್ಲಾ ಕಕ್ಕಸ್ಸಾಗಿ ಬಳಸಲಾಗುತ್ತದೆ. ಅಲ್ಲಲ್ಲಿ ನಾರುತ್ತಿರುವ ಕೊಚ್ಚೆಯ ನೀರಿನ ಗುಂಡಿಗಳನ್ನು ಕಾಣಬಹುದು. ಸಾಮಾನ್ಯವಾಗಿ ಅಲ್ಲಿ ಹೊಲಸು ಮತ್ತು ಕೊಳಕನ್ನೇ ನೋಡುತ್ತೇವೆ. ಒಟ್ಟಿನಲ್ಲಿ, ನಮ್ಮ ದೇಶದಲ್ಲಿ ಕೆಲವು ಇಡೀ ಹಳ್ಳಿಗಳನ್ನು ಕೊಳಚೆ ಪ್ರದೇಶಗಳೆಂದೇ (ಸ್ಲಮ್ಸ್) ಕರೆಯಬಹುದು.

ಟೆನೆಸ್ಸಿ ವ್ಯಾಲಿ ಟ್ರಸ್ಟ್ ಅಧ್ಯಕ್ಷರೂ, ಭಾರತ ಸರ್ಕಾರದ ವಿಶ್ವವಿದ್ಯಾನಿಲಯಗಳ ಆಯೋಗದ ಸದಸ್ಯರೂ ಆಗಿದ್ದ ಮಿ. ಆರ್ಥರ್ ಇ. ಮಾರ್ಗನ್ ರವರು ೧೯೪೭ ರಲ್ಲಿ ಸರ್ಕಾರಕ್ಕೆ ಸಲ್ಲಿಸಿದ ವರದಿಯಲ್ಲಿ 'ಭಾರತದ ಹೆಚ್ಚಿನ ಭಾಗದಲ್ಲಿ ಹಳ್ಳಿ ಬಳಕೆಯಲ್ಲಿಲ್ಲದಂತಿದೆ. (The village has become obsolete) ಮನುಷ್ಯನ ವಾಸಕ್ಕೆ ಯೋಗ್ಯವಾಗಿಲ್ಲ' ಎಂದು ಹೇಳಿದ್ದಾರೆ. ೨೦೦೭ರ ಈ ಆಧುನಿಕ ಕಾಲದಲ್ಲಿ ಆ ಮಾತುಗಳು ಭಾರತದ ಅನೇಕ ಹಳ್ಳಿಗಳಿಗೆ ಇನ್ನೂ ಹೆಚ್ಚಾಗಿ ಅನ್ವಯಿಸುತ್ತವೆ ಎಂದು ಹೇಳಬಹುದು.

**೨. ಗ್ರಾಮಸ್ಥರ ಕುಟುಂಬಗಳಲ್ಲಿ**

ಗ್ರಾಮೀಣ ಸಮಾಜ ಕುಟುಂಬದ ಜೀವನವಾದರೂ ಆರ್ಥಿಕ ಪರಿಸ್ಥಿತಿಯಷ್ಟೇ ಕೆಟ್ಟು ಹೋಗಿದೆ. ಸಾಕಾಗದ ಆಹಾರ ಮತ್ತು ಹರಿದ ಬಟ್ಟೆಗಳನ್ನು ನಾವು ಗಮನಿಸುವುದು ಸರ್ವೇಸಾಮಾನ್ಯ. ಈ ಕೀಳುಮಟ್ಟದ (ಬಡತನದ ಜೀವನ ಮಟ್ಟಕ್ಕಿಂತ ಕಡಿಮೆ) ಆರ್ಥಿಕ ಪರಿಸ್ಥಿತಿಯು ನಮ್ಮ ಮನೆಗಳಲ್ಲಿ ಅಸಹಾಯಕತೆಯ ಮತ್ತು ಅಮಾನುಷ ಪರಿಸ್ಥಿತಿಗಳನ್ನು ತಂದೊಡ್ಡುತ್ತದೆ. ಒಟ್ಟು ಕುಟುಂಬಗಳಲ್ಲಿ ಈ ವಿಷದಹೊಗೆ ಹೇಗೆ ಹಬ್ಬುತ್ತದೆ ಎಂಬುದನ್ನು ತಿಳಿಯುವುದು ಕಷ್ಟವೇನಲ್ಲ. ಕುಟುಂಬದಲ್ಲಿ ಒಬ್ಬರು ತನಗಾಗಿ ಅಥವಾ ಹೆಂಡತಿಗಾಗಿ ಒಂದೆರಡು ರೂಪಾಯಿಗಳನ್ನು ಹೆಚ್ಚಿಗೆ ಖರ್ಚುಮಾಡಬಹುದು. ಸಂಸಾರದ ಹೊಣೆ ಹೊತ್ತ ಹಿರಿಯ ಸಹೋದರನು, ಮಿತವ್ಯಯದ ಕಾತರತೆಯಲ್ಲಿ, ತನ್ನ ಇನ್ನೊಬ್ಬ ಸೋದರ ಅಥವಾ ಅವನ ಹೆಂಡತಿಯು ಹೇಳಿದ ಅಲ್ಪ ಹಣವನ್ನು ಕೊಡದಿರಬಹುದು. ಒಬ್ಬ ಸೋದರನು ತನ್ನ ಮದುವೆಗಾಗಿ ಸ್ವಲ್ಪ ಹೆಚ್ಚು ಖರ್ಚುಮಾಡಬೇಕಾಗಿರಬಹುದು. ಒಂದು ಅನುಕೂಲಸ್ಥಿತಿಯ ಮಧ್ಯಮ ವರ್ಗದ ಅಥವಾ ಒಂದು ಸಂಸ್ಕೃತ ಕುಟುಂಬದಲ್ಲಿ ಇಂತಹ ಸಣ್ಣ ವಿಷಯಗಳನ್ನು ಯಾರೂ ಗಮನಿಸುವುದಿಲ್ಲ. ಆದರೆ, ಅನೇಕ ವೇಳೆ ಇವು ಹಳ್ಳಿಗಳ ಸಣ್ಣ ಹಿಡುವಳಿಗಳುಳ್ಳ ಕುಟುಂಬಗಳ ಮಧುರ ಜೀವನದಲ್ಲಿ ಕಹಿಯನ್ನುಂಟುಮಾಡಿ, ಅವು ಒಡೆಯಲು ಕಾರಣವಾಗುತ್ತವೆ.

ಅಲ್ಲದೆ, ವೈಷಮ್ಯ ಮತ್ತು ವ್ಯಥೆಯಲ್ಲಿರುವ ಸೋದರ ಸಾಮಾನ್ಯವಾಗಿ ಕೆಲಸ ಮಾಡುವುದಿಲ್ಲ. ಅವನ ಹೆಂಡತಿ ಮನೆಯಲ್ಲಿ ಸಹಕರಿಸುವುದಿಲ್ಲ. ಸಣ್ಣ ಹಿಡುವಳಿ ಇರುವಾಗ ಕೆಲಸವಿಲ್ಲದ ಕುಟುಂಬದ ಒಬ್ಬ ಸದಸ್ಯ ತನ್ನ ಮಾವನ ಮನೆಯಲ್ಲಿ ಒಂದೆರಡು ದಿನ ಹೆಚ್ಚಾಗಿ ಉಳಿಯಬಹುದು. ದಿನನಿತ್ಯದ ಹೊಟ್ಟೆಪಾಡಿಗಾಗಿ ಪರದಾಡುವ ಒಂದು ಕುಟುಂಬದಲ್ಲಿ ಇದು ಅಸಮಾಧಾನದ ಬೆಂಕಿಯನ್ನು ಹತ್ತಿಸುವ ಕಿಡಿಯಾಗುತ್ತದೆ. ಕೆಲವು ವೇಳೆ ಕುಟುಂಬದ ಒಬ್ಬ ಸದಸ್ಯನು ಮನೆಯ ಹಿರಿಯನಿಂದ ತನ್ನ ಕೈ ಖರ್ಚಿಗೆ ಹಣ ಪಡೆಯಲಾಗದಿದ್ದಾಗ, ಮನೆಯಲ್ಲಿನ ದವಸವನ್ನು ಕದ್ದು ಮಾರಲೆತ್ನಿಸುತ್ತಾನೆ. ಅದು ಹೇಗಾದರೂ ಎಲ್ಲರಿಗೂ ತಿಳಿಯುತ್ತದೆ. ಇಂತಹ ಕೊನೆಯಿಲ್ಲದ ದುರ್ಭರ ಪರಿಸ್ಥಿತಿಗಳು ಸಹಜವಾಗಿಯೇ ಮಾನವನ ಶಾಂತ ಸ್ವಭಾವವನ್ನು ಹಾಳುಮಾಡಿ, ಸಿಡುಕಿನ ಮನೋಭಾವನೆ ಬೆಳೆಯಲು ಕಾರಣವಾಗುತ್ತವೆ.

**೩. ಹಳ್ಳಿಗಳ ಹೊರಗಡೆಯ ಪರಿಸರ**

ಮನೆಯ ಹೊರಗಡೆ ಹಳ್ಳಿಗಳಲ್ಲಿ ಇದೇ ಪರಿಸರ, ಇದೇ ಚಿಂತಾಜನಕ ಪರಿಸ್ಥಿತಿಯನ್ನು ಕಾಣುತ್ತೇವೆ. ಸಾಕಷ್ಟು ಹಳ್ಳಿಗಳಲ್ಲಿ ಬಹುತೇಕ ಗೋಮಾಳ ಭೂಮಿಯನ್ನು ಸರ್ಕಾರಿ ಅಧಿಕಾರಿಗಳ ಕಾಲದಲ್ಲಿ ಈ ಬಗ್ಗೆ ಇರುವ ನಿಯಮಗಳ ಕಡೆಗೂ ಗಮನ ಕೊಡದೆ ಹಂಚಿದ್ದಾರೆ. ಆದಾಗ್ಯೂ, ಹಳ್ಳಿಯ ಜನ ಗ್ರಾಮ ಸಮಾಜಕ್ಕೆ ಉಳಿದಿರುವ ಅಷ್ಟಿಷ್ಟು ಗೋಮಾಳ ಭೂಮಿಯನ್ನೂ ಆಕ್ರಮಿಸಿಕೊಳ್ಳಲು ಪ್ರಯತ್ನಿಸುತ್ತಿರುವುದನ್ನೂ ನೋಡುತ್ತಿದ್ದೇವೆ. ಕೆರೆ ಏರಿಗಳು, ರಸ್ತೆಗಳು, ಕಾಲುದಾರಿಗಳು, ತೋಪುಗಳು, ಮೀಸಲು ಭೂಮಿ, ಖಾಲಿ ಗ್ರಾಮ ನಿವೇಶನಗಳು ಇವುಗಳನ್ನು ಒತ್ತುವರಿ ಮಾಡುವುದು ಹಳ್ಳಿಗಳಲ್ಲಿ ಇಂದು ಒಂದು ರೀತಿಯ ಅಂಟುಜಾಡ್ಯವಾಗಿ ಬಿಟ್ಟಿದೆ. ಕಾಲುದಾರಿಗೆ ಮತ್ತು ನೀರುಕಾಲುವೆಗಳಿಗೆ ಅಡ್ಡಿಮಾಡುವುದೂ ಸಹ ಕೆಲವರು ವಿವೇಚನೆಯಿಲ್ಲದ ರೈತರ ಒಂದು ರೂಢಿಯಾಗಿದೆ. ಇದರಿಂದ ಸಮಾಜ ಜೀವನಕ್ಕೆ ಕೇಡುಂಟಾಗುವುದರ ಜೊತೆಗೆ, ಮೊದಲೇ ಇರುವ ಕಹಿ ವಾತಾವರಣಕ್ಕೆ ಮತ್ತೊಂದು ಬಟ್ಟಲು ಕಹಿಯನ್ನು ಬೆರೆಸಿದಂತಾಗುತ್ತದೆ. ಹಿಂದೆ ಪವಿತ್ರ ನಿಧಿಯೆಂದು ಕಾದಿಟ್ಟಿದ್ದ 'ಗ್ರಾಮದ ನಿಧಿಗಳು' ದೇವರ

ಒಡವೆಗಳು ಮುಂತಾದವುಗಳು, ಇಂದಿನ ಆಧುನಿಕ ಯುಗದಲ್ಲಿ ಸ್ವೇಚ್ಛೆಯಾಗಿ ದುರುಪಯೋಗವಾಗುತ್ತಿರುವುದನ್ನು ಅನೇಕ ಹಳ್ಳಿಗಳಲ್ಲಿ ಕಾಣಬಹುದು. ಅಂತಹ ಪ್ರಕರಣಗಳು ಕೊನೆಯಿಲ್ಲದ ವಿವಾದಗಳಿಗೆ ಮೂಲಗಳಾಗಿವೆ.

**ಕುಟುಂಬ ವಿಭಜನೆ:**

ಇನ್ನು ಕುಟುಂಬ ವಿಭಜನೆಯಂತೂ ಅತ್ಯಂತ ಚಿಂತಾಜನಕ. ಎರಡು ಎಕರೆಯ ಭೂಮಿ ಮಾಲೀಕನ 'ಕುಟುಂಬದ ಸಂಪತ್ತು' ಒಡೆದಾಗ ನಾವು ಮಾನವೀಯ ಅಧಃಪತನವನ್ನೇ ಕಾಣುತ್ತೇವೆ. ಕೆಲವು ವೇಳೆ ಒಂದು ಹಲಸು ಅಥವಾ ಹುಣಸೆ ಮರವನ್ನು ಇಬ್ಬರು ಸೋದರರು ಹಂಚಿಕೊಳ್ಳುತ್ತಾರೆ. ಸಣ್ಣ ರೈತನ ಮನೆ ಭಾಗವಾದಾಗ ಪಾತ್ರೆಗಳು, ಮಡಕೆಗಳು, ಕುರಿ, ದನ, ಕಂಬಳಿ, ಕೋಳಿ ತಾಯಿಯ ಕೊರಳಿನ ಸರ, ಮನೆಯ ಕೋಣೆಗಳು, ಸಾಲ ಇತ್ಯಾದಿಗಳನ್ನು ಹಂಚಿಕೊಳ್ಳುವುದು ನಿಜಕ್ಕೂ ದುರಂತ ದೃಶ್ಯ. ಅನೇಕ ವೇಳೆ ಅಂತಹ ವಿಭಜನೆ ನಡೆಯುವಾಗ ನರಕವೇ ಸೃಷ್ಟಿಯಾಗುತ್ತದೆ.

ಕೆಲವು ಹಳ್ಳಿಗಳಲ್ಲಿ, ಒಬ್ಬ ಗ್ರಾಮಸ್ಥ ಸಮೃದ್ಧಿಯಾಗಿ ಬಾಳೆ, ತೆಂಗು, ಹಲಸು, ನಿಂಬೆ ಮುತಾದವುಗಳನ್ನು ಬೆಳೆಯುವ ಉತ್ತಮ ತೋಟದ ಭೂಮಿಯನ್ನು ಇಟ್ಟುಕೊಳ್ಳುವುದೂ ಕಷ್ಟವಾಗಿದೆ. ಹಣ್ಣು ಕೊಡುವ ಪ್ರತಿಯೊಂದು ಮರಕ್ಕೂ ಕಳ್ಳತನದ ಹಾವಳಿ ತಪ್ಪಿಸಲು ಮುಳ್ಳು ಸುತ್ತಿರುವುದನ್ನು ಕಾಣಬಹುದು. ರೈತನು ತನ್ನ ವಾಸಸ್ಥಳದಿಂದ ದೂರವಿರುವ ಈ ತುಣುಕು ಭೂಮಿಯನ್ನು ಸಹ ಸಣ್ಣ ಪುಟ್ಟ ಕಳ್ಳತನಗಳ ವಿರುದ್ಧ ಕಾವಲು ನೋಡಿಕೊಳ್ಳಬೇಕಾಗುತ್ತದೆ. ಹಳ್ಳಿಗರು ಪ್ರಾಮಾಣಿಕರಾಗಿದ್ದರೆ ಇದು ಅನಗತ್ಯ. ಇದರಿಂದ ಮನುಷ್ಯನ ಕಾಲ ಮತ್ತು ಶಕ್ತಿಯ ಅಪವ್ಯಯವೆಷ್ಟು? ಎಷ್ಟೋ ವೇಳೆ ನಮ್ಮ ಹಳ್ಳಿಗಳಲ್ಲಿ ಕೋಳಿಗಳನ್ನು ಕದಿಯುವಂತಹ ತುಚ್ಛ ಘಟನೆಗಳೂ ನಡೆಯುತ್ತವೆ. ಇಂತಹ ಅನೇಕ ಕಾರಣಗಳಿಂದ ಹುಟ್ಟಿಕೊಳ್ಳುವ ಒಡಕುಗಳು, ಜಗಳಗಳು, ಹಳ್ಳಿಗಳ ವಾತಾವರಣಕ್ಕೆ ವಿಷವನ್ನು ಬೆರಸುತ್ತವೆ.

**ಹಳ್ಳಿಯ ಜೀವನದಲ್ಲಿ ಪ್ರಾಮಾಣಿಕತೆ:**

ಒಂದು ಕಾಲದಲ್ಲಿ ಸಾಮಾನ್ಯವಾಗಿ ಭಾರತೀಯ ಜೀವನದಲ್ಲಿ ಪ್ರಾಮಾಣಿಕತೆಯ ಮೂಲವೆನಿಸಿಕೊಂಡಿದ್ದವು ನಮ್ಮ ಗ್ರಾಮಗಳು. ಆದರೆ ಇಂದಿನ ಪರಿಸ್ಥಿತಿಯೇ ಬೇರೆಯಾಗಿದೆ. ನಮ್ಮಲ್ಲೂ ಕೆಲವರು ಆಹಾರ ಧಾನ್ಯವನ್ನು ಸರಿಯಾಗಿ ಒಣಗಿಸಿ, ಸ್ವಚ್ಛಮಾಡಿ ಮಾರುವುದಿಲ್ಲ. ಹಾಲಿನಲ್ಲಿ ನೀರು ಸೇರಿಸುವುದು, ಬೆಣ್ಣೆಯಲ್ಲಿ ಹಿಟ್ಟು ಸೇರಿಸುವುದು ಈ ಕೆಲಸಗಳು ಸಾಮಾನ್ಯವಾಗುತ್ತಿವೆ. ಎಲ್ಲಕ್ಕೂ ಮಿಗಿಲಾಗಿ, ನಮ್ಮ ಹಳ್ಳಿಗಳ ಕೆಲವರು ಆಹಾರ ನಿಯಂತ್ರಣ ಕಾಲದಲ್ಲಿ ಸರ್ಕಾರಕ್ಕೆ ಒಪ್ಪಿಸಿದ ಆಹಾರಧಾನ್ಯಗಳಲ್ಲಿ, ಉದ್ದೇಶಪೂರ್ವಕವಾಗಿ, ಮಣ್ಣು ಮತ್ತು ಮರಳನ್ನು ಸೇರಿಸಿ ಮಾರಿದ್ದಾರೆಂದರೆ ಎಂತಹ ದುರಂತ ಹಾಗೂ ನಾಚಿಕೆಗೇಡು

ನಾವೇಕೆ ಇಷ್ಟು ಕೀಳುಮಟ್ಟಕ್ಕೆ ಇಳಿದೆವು? ಗ್ರಾಮೀಣ ಜೀವನದ ಅಡಿಪಾಯವನ್ನು ನಾವೇಕೆ ಹೀಗೆ ಹಾಳು ಮಾಡಿದೆವು? ಎಂಬ ಸಹಜವಾದ ಪ್ರಶ್ನೆಗಳು ಉಂಟಾಗುತ್ತವೆ. ಬಹುಶಃ ಇದಕ್ಕಿಂತ ಬೇರೇನೂ ಕಾರಣ ಕಾಣೆಸದು. ನಾಗರಿಕ ಪ್ರಪಂಚದಲ್ಲಿ ಒಂದು ಜನತೆಯನ್ನು (ನಮ್ಮನ್ನು ಇಟ್ಟಿರುವಂತೆ) ಕೀಳುಮಟ್ಟದಲ್ಲಿಟ್ಟಿರುವಾಗ ಮತ್ತು ಅವರು ತಮ್ಮ ಜೀವನ ಸ್ಥಿತಿಯನ್ನು ಉತ್ತಮಗೊಳಿಸಿಕೊಳ್ಳುವ ಅವಕಾಶಗಳಿಂದ ದೂರ ಇಟ್ಟಾಗ ಸಹಜವಾಗಿಯೇ ಆ ಜನರಲ್ಲಿ ಸಣ್ಣ ಬುದ್ಧಿ, ಮೋಸ ಮತ್ತು ಕಳ್ಳತನದ ಮನೋಭಾವನೆಗಳ ಬೀಜಗಳ ಬಿತ್ತನೆಯಾಗುತ್ತದೆ.

ನಮ್ಮ ಅನೇಕ ಹಳ್ಳಿಗಳಲ್ಲಿ ಇಂತಹ ದುಃಸ್ಥಿತಿಯ ಸುಗ್ಗಿ ನಡೆದಿರುವಾಗ, ಅವು ಈಗ ಇರುವಂತಲ್ಲದೆ ಮತ್ತಿನ್ನಾವ ಸ್ಥಿತಿಯಲ್ಲಿರಲು ಸಾಧ್ಯವಾದೀತು

ನಗರದ ತಮ್ಮ ಸೋದರರ ಜೀವನ ಸ್ಥಿತಿಗೆ ಹೋಲಿಸಿದರೆ, ಅನೇಕ ಅಡ್ಡಿ ಆತಂಕಗಳು, ಪ್ರತಿಕೂಲಗಳು, ಕಷ್ಟಕಾರ್ಪಣ್ಯಗಳಿಂದ ಕೂಡಿ ಜೀವನ ಸಾಗಿಸುತ್ತಿರುವ ಗ್ರಾಮಾಂತರ ಜನ, ಒಟ್ಟಿನಲ್ಲಿ ಇನ್ನೂ ಹಿಂದುಳಿದವರಾಗಿ, ದಲಿತರಾಗಿ ಮತ್ತು ಬಲಿಪಶುಗಳಾಗಿಯೇ ಉಳಿದಿದ್ದಾರೆಂಬುದನ್ನು ಯಾರೂ ಇಲ್ಲವೆನ್ನುವಂತಿಲ್ಲ.

**೫. ಅಜಗಜಾಂತರ ಆರ್ಥಿಕ ಪರಿಸ್ಥಿತಿ**

ಹಳ್ಳಿಗಳ ಮತ್ತು ಪಟ್ಟಣಗಳ ಜನರ ಆರ್ಥಿಕ ಸಾಮಾಜಿಕ ಸ್ಥಿತಿಗಳಲ್ಲಿ ಮತ್ತು ಅವಕಾಶಗಳಲ್ಲಿ ಅಜಗಜಾಂತರ ವ್ಯತ್ಯಾಸಗಳಿವೆ. ಈ ಎರಡು ಕ್ಷೇತ್ರಗಳ ಪೈಕಿ ಒಂದರಲ್ಲಿ ಬಂಡವಾಳ ರಚನೆ ಹಾಗೂ ವಿನಿಯೋಗದ ಅವಕಾಶದ ಬಗ್ಗೆ ತೀವ್ರ ನಿರ್ಬಂಧವಿರುವುದರಿಂದ ಈ ಅಂತರ ಇನ್ನೂ ಹೆಚ್ಚಾಗುತ್ತಾ ಹೋಗುತ್ತಿದೆ.

ಈ ಕೆಳಗೆ ಕಂಡ ವಿಷಯಗಳಲ್ಲಿ ಸರ್ಕಾರವು ಹಳ್ಳಿಗರಿಗೂ ಪಟ್ಟಣಗರಿಗೂ ಒದಗಿಸಿರುವ ಮೂಲಭೂತ ಅಗತ್ಯಗಳು ಮತ್ತು ಸೌಲಭ್ಯಗಳ ಪ್ರಮಾಣವನ್ನು ಹೋಲಿಸಿ ನೋಡಿ.

೧. ಶಿಕ್ಷಣ ಸೌಲಭ್ಯಗಳು

೨. ಕುಡಿಯುವ ನೀರು

೩. ನೈರ್ಮಲ್ಯ ವ್ಯವಸ್ಥೆ ಚರಂಡಿ ಇತ್ಯಾದಿ

೪. ಆರೋಗ್ಯ ಸೇವಾ ವ್ಯವಸ್ಥೆಗಳು

೫. ರಸ್ತೆಗಳು

೬. ಅಂಚೆ ಸೌಲಭ್ಯಗಳು

೭. ಪೋಲಿಸ್ ರಕ್ಷಣೆ

೮. ಒಂದೇ ಸಮನ ವಿಸ್ತರಿಸುತ್ತಿರುವ ಸರ್ಕಾರಿ ನೌಕರಿಯಲ್ಲಿ ಮತ್ತು ಸಾರ್ವಜನಿಕ ಕ್ಷೇತ್ರದ ಕೈಗಾರಿಕೆಗಳು ಮತ್ತು ಇತರ ಉದ್ಯಮಗಳಲ್ಲಿ (ಸುಮಾರು ತಿಂಗಳಿಗೆ ೫೦೦ ರೂ. ಮತ್ತು ಅದರ ಮೇಲೆ ವೇತನವಿರುವ ಹುದ್ದೆಗಳಲ್ಲಿ) ಗ್ರಾಮಾಂತರ ಪ್ರದೇಶಕ್ಕೆ ಕೊಟ್ಟಿರುವ ಪ್ರಾತಿನಿಧ್ಯ.

ಒಂದು ಉದಾಹರಣೆ ಕೊಡುವುದಾದರೆ, ಯಾವುದೇ ನಗರ ಕುಟುಂಬಕ್ಕಿರುವ ಹೆಚ್ಚಿನ ಸೌಕರ್ಯವನ್ನು ತೋರಿಸಲು, ಜನರಿಗೆ ಮಹತ್ತ್ವದ್ದಾದ ಶಿಕ್ಷಣವನ್ನೇ ತೆಗೆದುಕೊಳ್ಳಬಹುದು. ತಮ್ಮ ಮಕ್ಕಳಿಗೆ ವಿಶ್ವವಿದ್ಯಾನಿಲಯದ ಶಿಕ್ಷಣವನ್ನು ಕೊಟ್ಟು ಅವರನ್ನು ವೈದ್ಯರನ್ನಾಗಿ, ಇಂಜಿನಿಯರುಗಳಾಗಿ ಅಥವಾ ಪ್ರೊಫೆಸರುಗಳಾಗಿ ಮಾಡಲು ನಗರ ನಿವಾಸಿಗೆ ಬೇಕಾದಷ್ಟು ಸೌಲಭ್ಯಗಳಿವೆ. ಆದರೆ ಒಬ್ಬ ಮಧ್ಯಮ ವರ್ಗದ ರೈತ ತನ್ನ ಮಕ್ಕಳಿಗೆ ವಿಶ್ವವಿದ್ಯಾನಿಲಯದ ಶಿಕ್ಷಣ ಕೊಡಿಸಬೇಕಾದರೆ. ಸಾಮಾನ್ಯವಾಗಿ, ಅವನು ಅಧಿಕವಾಗಿ ಸಾಲಮಾಡಬೇಕಾಗುತ್ತದೆ. ಊಟ ವಸತಿಗಳಿಗಾಗಿ ನಗರದ ವಿದ್ಯಾರ್ಥಿನಿಲಯಗಳಲ್ಲಿ ಮಕ್ಕಳನ್ನಿಟ್ಟು ಆ ವೆಚ್ಚವನ್ನು ಭರಿಸಬೇಕಾಗುತ್ತದೆ. ನಗರಗಳಲ್ಲಿ ತಮ್ಮ ಮಕ್ಕಳಿಗೆ ಉನ್ನತ ಶಿಕ್ಷಣ ಕೊಡಿಸುವ ಪ್ರಯತ್ನದಲ್ಲಿ ಅನೇಕ ರೈತರು ಮನೆಮಠಗಳನ್ನೇ ಕಳೆದುಕೊಳ್ಳುತ್ತಿರುವುದನ್ನು ನಾವು ನೋಡಬಹುದು.

ಗ್ರಾಮಾಂತರ ಮಕ್ಕಳಿಗಿರುವ ಇನ್ನೊಂದು ಕೊರತೆಯೆಂದರೆ, ಪ್ರಾಥಮಿಕ ಹಾಗೂ ಪ್ರೌಢಶಾಲೆಯ ಹಂತದಲ್ಲಿ ಸರಿಯಾದ ಬೋಧನಾ ಸಿಬ್ಬಂದಿಯಿಲ್ಲದೆ, ಅವರ ಶಿಕ್ಷಣ ಮಟ್ಟ ಕೆಳಮಟ್ಟದಲ್ಲಿರುವುದು. ಸಾಕಷ್ಟು ತರಬೇತಿ ಹಾಗೂ ಪಾಠ ಪ್ರವಚನಗಳಿಗೆ ಅವಕಾಶವಿಲ್ಲದೆ ಹೆಚ್ಚಿನ ಸಂಖ್ಯೆಯ ಮಕ್ಕಳು ಪರೀಕ್ಷೆಗಳಲ್ಲಿ ತೇರ್ಗಡೆ ಹೊಂದುವುದಿಲ್ಲ. ತೇರ್ಗಡೆ ಹೊಂದಿದವರಲ್ಲಿ ಬಹುತೇಕ ಮಕ್ಕಳು ತಾಂತ್ರಿಕ ಕಾಲೇಜುಗಳು ಅಥವಾ ವಿಶ್ವವಿದ್ಯಾನಿಲಯಗಳಿಗೆ ಪ್ರವೇಶ ಪಡೆಯಲು ಅರ್ಹತೆ ಪಡೆಯುವಷ್ಟು ಅಂಕಗಳನ್ನು ಪಡೆಯಲಾಗುವುದಿಲ್ಲ.

ಸರ್ಕಾರದ ಅಂಕಿ ಅಂಶಗಳಂತೆ ನಮ್ಮ ಹಳ್ಳಿಗಳಲ್ಲಿ (ನಾವು ಉತ್ತಮ ಪಡಿಸಬೇಕಾಗಿರುವ ಕೀಳು ದರ್ಜೆಯ, ಮನುಷ್ಯ ವಾಸಯೋಗ್ಯವಾಗಿಲ್ಲದ ಮನೆಗಳೂ ಸೇರಿದಂತೆ) ೧೫ ಕೋಟಿಗಳಿಗಿಂತಲೂ ಹೆಚ್ಚಾದ ಮನೆಗಳ ಕೊರತೆಯಿದೆ. ಇದನ್ನು ಸರಿಪಡಿಸಲು ಸರಾಸರಿ ಒಂದು ಮನೆಗೆ ೧೫,೦೦೦ ರೂಗಳನ್ನು ಖರ್ಚು ಮಾಡಿದರೂ ೮೭,೦೦೦ ಕೋಟಿ ರೂಪಾಯಿಗಳುಬೇಕಾಗುತ್ತವೆ.

ಭಾರತದ ಜನಸಂಖ್ಯೆಯಲ್ಲಿ ವ್ಯವಸಾಯದಿಂದ ಜೀವಿಸುವವರ ಸಂಖ್ಯೆ ನೂರು ವರ್ಷಗಳ ಹಿಂದೆ ಶೇಕಡ ೫೮ ಇತ್ತು. ಈಗ ಅದು ಶೇಕಡ ೭೮ ಆಗಿದೆ. ನಮ್ಮ ದೇಶದಲ್ಲಿ ಪಂಚ ವಾರ್ಷಿಕ ಯೋಜನೆಗಳು ಕಾರ್ಯಗತ ಮಾಡಲ್ಪಟ್ಟಿದ್ದರೂ, ವ್ಯವಸಾಯ ನಿರ ತರ ಸಂಖ್ಯೆ ಶೇಕಡ ೨ ರಷ್ಟೂ ಇಳಿದಿಲ್ಲ. ಅಮೆರಿಕ ದೇಶದಲ್ಲಿ ಇಂದು ಶೇಕಡ ೪ ಜನರು ಮಾತ್ರ ಕೃಷಿಕರಾಗಿದ್ದಾರೆ.

೭. ಹೊರಲಾರದ ಸಾಲದ ಹೊರೆ

ಬೆನ್ನು ಬಾಗಿಸುವಷ್ಟು ಸಾಲದ ಹೊರೆಯನ್ನು ಹೊತ್ತಿರುವ ನಮ್ಮ ರೈತರು ಪ್ರತಿ ವರ್ಷವೂ 'ತಮಗೆ ಮುಂದಿನ ವರ್ಷ ಒಳಿತಾದೀತು' ಎಂಬ ಕೇವಲ ನಿರೀಕ್ಷೆಯಲ್ಲೇ ಬದುಕಿದ್ದಾರೆ. ದಿನ ನಿತ್ಯದ ಕೆಲಸಗಳಿಗೆ ಬೇಕಾಗುವ ಹಣಕ್ಕೂ ಸಹ ರೈತರು ದೊಡ್ಡ ರೈತರೆನಿಸಿಕೊಂಡವರೂ ಸಹ ಬ್ಯಾಂಕುಗಳು, ಖಾಸಗೀ ಸಾಹುಕಾರರು ಅಥವಾ ಸಹಕಾರ ಸಂಘಗಳನ್ನೇ ಆಶ್ರಯಿಸಬೇಕು. ಬ್ಯಾಂಕುಗಳಾದರೂ ಕೃಷಿಗೆ ಸಾಕಷ್ಟು ಪ್ರಮಾಣದಲ್ಲಿ ಸಾಲ ನೀಡಲು ಹಿಂಜರಿಯುತ್ತಿವೆ.

ರೈತರ ಈ ಸಾಲದ ಪರಿಸ್ಥಿತಿಯ ಬಗ್ಗೆ ಒಂದು ಗ್ರಾಮಾಂತರ ಸಮೀಕ್ಷೆಯನ್ನು ನಡೆಸಿದರೆ, ಒಬ್ಬ ರೈತನು ತನ್ನ ಬೆಳೆ ಕೊಯ್ಯುವ ವೇಳೆಗೆ, ಸರಾಸರಿ ಆ ಬೆಳೆಯ ಒಟ್ಟು ಉತ್ಪಾದನೆಯ ಕನಿಷ್ಠ ಶೇಕಡ ೭೦ರಷ್ಟಾದರೂ ಈ ಮೊಬಲಗು ಇಡೀ ರಾಷ್ಟ್ರದಲ್ಲಿ ಒಟ್ಟು ೩೦,೦೦೦ಕೋಟಿ ರೂ ಗಳಾಗುತ್ತದೆ. ಸಾಲ ಮಾಡಿರುತ್ತಾನೆಂಬುದೂ ಭಾರತೀಯ ರೈತರು ಪ್ರತಿವರ್ಷ ತಮ್ಮ ಒಟ್ಟು ಆದಾಯದಲ್ಲಿ ಕೇವಲ ಬಡ್ಡಿಗಾಗಿಯೇ ತರುವ ಹಣ ೧೦,೨೦೦ ಕೋಟಿ ರೂಗಳಿಗೆ ಕಡಿಮೆ ಇರುವುದಿಲ್ಲವೆಂಬುದೂ ತಿಳಿಯುತ್ತದೆ. ರೈತರು ಸರಾಸರಿ ಶೇಕಡ ೧೫ಕ್ಕೆ ಕಡಿಮೆ ಇಲ್ಲದೆ ಬಡ್ಡಿ ತೆರುತ್ತಾರೆಂದು ಲೆಕ್ಕಹಾಕಿದೆ.

ಅಷ್ಟೆ ಅಲ್ಲದೆ ಶೇಕಡ ೯೦ ಭಾಗ ಸಾಲಗಾರರಾಗಿದ್ದು, ರಾಷ್ಟ್ರದಲ್ಲಿ ಸಾಗುವಳಿಯಾದ ಒಟ್ಟು ಭೂಮಿಯಲ್ಲಿ ಶೇಕಡ ೮೦ ಭಾಗ ಮತ್ತು ಕೆಲವು ಸಂದರ್ಭಗಳಲ್ಲಿ ರೈತನ ಮುಂದಿನ ಬೆಳೆಯೂ ಸೇರಿ ಸಾಲಕ್ಕೆ ಆಧಾರವಾಗಿರುವುದೂ ಹಾಗೆ ನಡೆಸುವ ಸಮೀಕ್ಷೆಯಿಂದ ತಿಳಿದು ಬರುತ್ತದೆ.

ಒಂದು ಮುಖ್ಯ ಕಾರಣವಾಗಿದೆ. ಇಂದು ಭಾರತೀಯ ಹಳ್ಳಿಯವರೂ ತನ್ನ ಶೋಷಣೆ ಹೇಗಾಗುತ್ತಿದೆ, ತನ್ನ ದುಃಸ್ಥಿತಿಯ ಕಾರಣಗಳೇನು ಎಂಬುದನ್ನು ಕಾಣುತ್ತಿದ್ದಾನೆ. ಪ್ರಜಾಪ್ರಭುತ್ವ ಉಳಿದು ಬೆಳಗಬೇಕಾದರೆ ರೈತನ ಬೆಳೆಗೆ ಸಮಾನ-ಬೆಲೆ ದೊರಕುವಂತೆ ಮಾಡಬೇಕಾದುದು ನಮ್ಮ ಸರ್ಕಾರದ ಆದ್ಯ ಕರ್ತವ್ಯ.

**೭.೨. ಒಕ್ಕಲಿಗರ ಆರ್ಥಿಕ ಸಮಸ್ಯೆಗಳು**

ಒಂದು ಸಮಾಜದ ಅಥವಾ ಒಂದು ಸಮುದಾಯದ ಸರ್ವತೋಮುಖ ಅಭಿವೃದ್ಧಿಗೆ ಅದರ ಆರ್ಥಿಕ ಅಭಿವೃದ್ಧಿಯು ಕೀಲಿಕೈ ಇದ್ದಂತೆ. ಇಂತಹ ಆರ್ಥಿಕ ರಚನೆಗೆ ಒಂದು ವಿಧದಲ್ಲಿ ಆಯಾ ಸಮುದಾಯದ ಕೆಲವು ಸಾಮಾಜಿಕ ಹಾಗೂ ಸಂಘಟನಾ ವಿಚಾರಗಳೂ ಕಾರಣವಾಗುತ್ತವೆ. ೧.ಸಂಖ್ಯಾಬಲ, ೨.ಸಂಪನ್ಮೂಲಗಳ ಒಡೆತನ, ೩.ಶೈಕ್ಷಣಿಕ ಅಭಿವೃದ್ಧಿ ಹಾಗೂ ೪.ಸಂಘಟನಾ ವ್ಯವಸ್ಥೆ ಇವು ನಾಲ್ಕೂ ಒಂದು ಸಮುದಾಯದ ಆರ್ಥಿಕ ಪರಿಸ್ಥಿತಿಗಳನ್ನು ನಿರ್ಧರಿಸುತ್ತವೆ.

ಒಕ್ಕಲಿಗ ಮತ ಭಾರತ ದೇಶದ ಅಸಂಖ್ಯಾತ ಜಾತಿಗಳಲ್ಲಿ ಒಂದು. ಅಲ್ಲದೆ ಕರ್ನಾಟಕ ರಾಜ್ಯದ ಬಹುಸಂಖ್ಯಾತ ಮತಗಳಲ್ಲೂ ಒಂದು. ಈ ರಾಜ್ಯದ ಒಟ್ಟು ಜನಸಂಖ್ಯೆಯ ಸುಮಾರು ಶೇಕಡ.೧೩ರಷ್ಟು ಜನ ಒಕ್ಕಲಿಗ ಸಮುದಾಯಕ್ಕೆ ಸೇರಿದೆ. 'ಒಕ್ಕಲಿಗ' ಎಂಬ ಪದವು ಅದರ ಮೂಲರೂಪ 'ಒಕ್ಕು' (ತೆನೆಬಡಿದು ಕಾಳುಗಳನ್ನು ಬೇರೆ ಮಾಡು) ಎಂಬ ಕನ್ನಡ ಪದದಿಂದ ಬಂದಿದೆ. ಈ ಅರ್ಥದಲ್ಲಿ ಒಕ್ಕುವವ ಒಕ್ಕಲಿಗ, ಅಂದರೆ, ಕೃಷಿಕ, ಬೇಸಾಯಗಾರ. ರೈತ ೧೮೯೧-೧೮೦೪ಈ ಅವಧಿಯಲ್ಲಿ ಬ್ರಿಟಿಷರು ನಡೆಸಿದ ಮೈಸೂರು ನಾಡಿನ ಜನಗಣತಿಯಲ್ಲಿ ಈ 'ಒಕ್ಕಲಿಗ' ಎಂಬ ಪದವೂ ಸೇರಿದೆ. ಹಿಂದಿನ ಜನಗಣತಿ ಪದ್ಧತಿಯಲ್ಲಿ ಒಕ್ಕಲಿಗರನ್ನು ಒಂದೇ ಪಂಗಡವಾಗಿ ಪರಿಗಣಿಸದೆ, ಕೃಷಿಯನ್ನು ಕೈಗೊಳ್ಳುವ ವಿವಿಧ ಉಪಜಾತಿಗಳನ್ನು ಬೇರೆ ಬೇರೆಯಾಗಿಯೇ ವಿಂಗಡಿಸಲಾಗಿತ್ತು

ಮೂಲತಃ ಅನೇಕ ಉಪಸಮೂಹಗಳು ಅಥವಾ ಉಪಗಣಗಳಿದ್ದವು. ಅವುಗಳಲ್ಲಿ ಮುಖ್ಯವಾಗಿ ಗಂಗಡಿಕಾರ, ಮರಸು, ಕುಂಚಿಟಿಗ, ರೆಡ್ಡಿ, ನಾಮಧಾರಿ, ಹಳ್ಳಿಕಾರ ದಾಸ ಬೆರಳುಕೊಡೋ ಒಕ್ಕಲಿಗ ಮತ್ತು ಮಸಕು ಒಕ್ಕಲಿಗ ಇವು ಈಗ ಈ ಎಲ್ಲಾ ಗುಂಪುಗಳೂ ಏಕೀಯವಾಗಿ ಒಂದು ಸಮುದಾಯವೆಂದು ಪರಿಗಣಿಸಲಾಗಿದೆ. ಈ ಉಪಪಂಗಡಗಳ ನಡುವೆ ಇತ್ತೀಚೆಗೆ ವಿವಾಹ ಸಂಬಂಧಗಳೂ ಏರ್ಪಡುವುದುಂಟು. ಕಡೆಪಕ್ಷ ೧೮೯೧ರಿಂದೀಚೆಗೆ ಈ ಎಲ್ಲಾ ಸಮೂಹಗಳನ್ನೂ ಜನಗಣತಿ ಕಾರ್ಯದಲ್ಲಿ ಒಂದೇ ದೊಡ್ಡ ಸಮುದಾಯವೆಂದು ಪರಿಗಣಿಸಲಾಗಿದೆ. ದಕ್ಷಿಣ ಕನ್ನಡದ 'ಬಂಟ್' ಎಂಬ ಜನಾಂಗವೂ ಸಹ ಈ ವರ್ಗಕ್ಕೆ ಸೇರಲ್ಪಟ್ಟು, ಇತ್ತೀಚೆಗೆ ಬಂಟ್ ಜನಾಂಗದವರೂ ಒಕ್ಕಲಿಗರ ಸಂಘಗಳಲ್ಲಿ ಸದಸ್ಯತ್ವವನ್ನು ಪಡೆಯುತ್ತಿದ್ದಾರೆ.

ಒಕ್ಕಲಿಗರ ಸಮುದಾಯವು ಪ್ರಮುಖವಾಗಿ ಕರ್ನಾಟಕದಲ್ಲಿ ಅದರಲ್ಲೂ ಹಳೇ ಮೈಸೂರು ರಾಜ್ಯದಲ್ಲಿ ಕೇಂದ್ರೀಕರಿಸಿದೆ. ಅಲ್ಲದೆ ದಕ್ಷಿಣ ಭಾರತದಲ್ಲೆಲ್ಲಾ ಹರಡಿಕೊಂಡಿದೆ. ಒಕ್ಕಲಿಗ ಸಮುದಾಯವು ಪ್ರಮುಖವಾಗಿ ಕೃಷಿ ಸಮುದಾಯ. ದೇಶಕ್ಕೆ ಸ್ವಾತಂತ್ರ್ಯ ಬಂದನಂತರ ಈ ಜನತೆಯಲ್ಲಿ ಔದ್ಯೋಗಿಕ ಚಲನೆಯು ಕಂಡುಬಂದಿತು. ಇದಕ್ಕೆ ಪ್ರಮುಖವಾಗಿ ಸಾಕ್ಷರತಾ ಪ್ರಚಾರವೇ ಕಾರಣ. ೧೯೫೬ರಲ್ಲಿ ರಾಜ್ಯದ ಮರು ವಿಂಗಡಣೆ ಹಾಗೂ ಐಕ್ಯತೆಯ ಕಾರಣದಿಂದ ಈ ಜನತೆಯಲ್ಲಿ ಒಂದು ಬಗೆಯ ಸಾಮಾಜಿಕ ಚಲನೆಯೂ ಕಂಡುಬಂದಿತು. ಹೀಗಾಗಿ ಒಕ್ಕಲಿಗ ಸಮುದಾಯ ದೇಶದ ಕೆಲವು ಪ್ರದೇಶಗಳಲ್ಲಿ ಹೆಚ್ಚು ಕೇಂದ್ರೀಕೃತವಾಗಿದೆ. ಮತ್ತೆ ಕೆಲವು ಪ್ರದೇಶಗಳಲ್ಲಿ ವಿರಳವಾಗಿದೆ.

ಕರ್ನಾಟಕದ ಒಟ್ಟು ಒಕ್ಕಲಿಗರ ಸಂಖ್ಯೆ ಹಾಗೂ ವಿವಿಧ ಜಿಲ್ಲೆಗಳಲ್ಲಿ ಅವರ ಹಂಚಿಕೆಯನ್ನು ಕೆಳಗಿನ ಪಟ್ಟಿಯು ಸ್ಪಷ್ಟಪಡಿಸುತ್ತದೆ.

**ವಿವಿಧ ಜಿಲ್ಲೆಗಳಲ್ಲಿ ಒಕ್ಕಲಿಗರ ಹಂಚಿಕೆ**

| ಕ್ರಮ ಸಂಖ್ಯೆ | ಜಿಲ್ಲೆ | ೧೯೮೧ರಲ್ಲಿ ಅಂದಾಜು ಮಾಡಿದಂತೆ | ಶೇಕಡಾವಾರು ಹಂಚಿಕೆ | ೧೯೮೨ರಲ್ಲಿ ಅಂದಾಜು ಮಾಡಿದಂತೆ | ಶೇಕಡಾವಾರು ಹಂಚಿಕೆ |
|---|---|---|---|---|---|
| ೦೧. | ಬೆಂಗಳೂರು | ೮೬,೬೮,೮೧೩ | ೨೫.೦೮ | ೮,೯೬,೬೩೧ | ೨೫.೨೮ |
| ೦೨. | ಚಿಕ್ಕಮಗಳೂರು | ೮೮,೫೬೨ | ೨.೫೬ | ೯೦.೬೨೫ | ೨.೫೬ |
| ೦೩. | ಚಿತ್ರದುರ್ಗ | ೮೭,೬೪೮ | ೨.೫೪ | ೯೦.೦೭೦ | ೨.೫೪ |
| ೦೪. | ಹಾಸನ | ೩,೬೮,೮೯೯ | ೧೦.೬೭ | ೩,೭೭,೩೮೪ | ೧೦.೬೪ |
| ೦೫. | ಕೋಲಾರ | ೩,೨೨,೯೪೧ | ೯.೩೫ | ೩,೨೮,೬೨೫ | ೯.೨೭ |

ಮೇಲಿನ ಪಟ್ಟಿಯ ಅಧ್ಯಯನದಿಂದ ಕೆಲವು ಅಂಶಗಳು ಸ್ಪಷ್ಟವಾಗುತ್ತವೆ. ಮೊದಲನೆಯದಾಗಿ, ಒಕ್ಕಲಿಗರ ಸಂಖ್ಯೆಯು ೧೯೮೧ರಲ್ಲಿ ೩೪,೫೫,೭೯೯ ರಿಂದ ೧೯೮೨ರ ವೇಳೆಗೆ ೩೫,೪೬,೧೭೧ಕ್ಕೆ ಹೆಚ್ಚಿದೆ. ಇದು ಒಂದು ದಶಕದ ಹಿಂದಿನ ಸ್ಥಿತಿ. ಈಗ ೨೦೦೭ರಲ್ಲಿ ಈ ಸಂಖ್ಯೆ ಇನ್ನೂ ಗಣನೀಯ ಪ್ರಮಾಣದಲ್ಲಿ ಹೆಚ್ಚಿರಲೂ ಸಾಧ್ಯ. ಒಕ್ಕಲಿಗರು ಪ್ರಮುಖವಾಗಿ ಬೆಂಗಳೂರು, ಮಂಡ್ಯ, ತುಮಕೂರು, ಹಾಸನ ಮತ್ತು ಕೋಲಾರ ಜಿಲ್ಲೆಗಳಲ್ಲಿ ಹೆಚ್ಚು ಕೇಂದ್ರೀಕೃತವಾಗಿದ್ದಾರೆ. ಈ ಪ್ರದೇಶಗಳಲ್ಲಿ ಒಟ್ಟು ಒಕ್ಕಲಿಗರ ಶೇಕಡ ಹಂಚಿಕೆಯ ಕ್ರಮವಾಗಿ ೨೫.೨೮.೧೬.೮೦, ೧೧.೪೨, ೧೦.೬೪ ಮತ್ತು ೯.೨೭ ಇದೆ. ರಾಜ್ಯಕ್ಕೆ ಹೊಸದಾಗಿ ಸೇರಿದ ಜಿಲ್ಲೆಗಳಲ್ಲಿ ಈ ಸಂಖ್ಯೆ ಇನ್ನೂ ಕಡಿಮೆ. ರಾಯಚೂರು, ದಕ್ಷಿಣ ಕನ್ನಡ, ಕೊಡಗು, ಗುಲ್ಬರ್ಗ ಪ್ರದೇಶಗಳಲ್ಲಿ ಶೇಕಡವಾರು ಹಂಚಿಕೆ ಕ್ರವಾಗಿ ೨.೧೪, ೨.೧೦, ೧.೫೮, ೧.೮೨ ಬೀದರ್ ಮತ್ತು ಉತ್ತರ ಕನ್ನಡ ಜಿಲ್ಲೆಗಳಲ್ಲಿ ಸಂಖ್ಯೆ ತೀರ ವಿರಳ.

**೨. ಆರ್ಥಿಕ ಹಿನ್ನಡೆ**

ಕರ್ನಾಟಕದಲ್ಲಿ ಒಕ್ಕಲಿಗರ ಸಮುದಾಯವು ಬಹು ಸಂಖ್ಯಾತ ಸಮುದಾಯಗಳಲ್ಲಿ ಒಂದಾದರೂ ಈ ಜನಾಂಗವು ಸಾಂಸ್ಕೃತಿಕ, ಸಾಮಾಜಿಕ, ಶೈಕ್ಷಣಿಕ ಹಾಗೂ ಆರ್ಥಿಕ ಸ್ಥಿತಿಗತಿಗಳಲ್ಲಿ ಹಿಂದುಳಿದಿದೆ. ಪ್ರಮುಖವಾಗಿ ಆರ್ದಿಕ ಹಿನ್ನಡೆಯೇ ಇತರ ಎಲ್ಲಾ ಕ್ಷೇತ್ರಗಳ ಹಿನ್ನಡೆಗೂ ಕಾರಣವಾಗಿದೆ. ಇಲ್ಲಿ ಒಕ್ಕಲಿಗ ಸಮಾಜದ ಆರ್ಥಿಕ ಹಿನ್ನಡೆಗೆ ಕಾರಣವಾಗಿರುವ ಅಂಶಗಳನ್ನು ಗುರುತಿಸಿ, ಅವುಗಳ ನಿವಾರಣೆಗೆ ಹಾಗೂ ಈ ಜನತೆಯ ಆರ್ಥಿಕ ಮುನ್ನಡೆಗೆ ಕೆಲವು ಸಲಹೆಗಳನ್ನು ನೀಡುವ ಪ್ರಯತ್ನವನ್ನು ಮಾಡಲಾಗಿದೆ.

ಒಂದು ಸಮಾಜದ ಅಥವಾ ಒಂದು ಸಮುದಾಯದ ಸರ್ವತೋಮುಖ ಅಭಿವೃದ್ಧಿಗೆ ಅದರ ಆರ್ಥಿಕ ರಚನೆಗೆ ಒಂದು ವಿಧದಲ್ಲಿ ಸಮುದಾಯದ ಕೆಲವು ಸಾಮಾಜಿಕ ಹಾಗೂ ಸಂಘಟನಾ ವಿಚಾರಗಳೂ ಕಾರಣವಾಗುತ್ತವೆ. ಒಂದು ಸಮುದಾಯದ ೧.ಸಂಖ್ಯಾಬಲ, ೨.ಸಂಪನ್ಮೂಲಗಳ ಒಡೆತನ, ೩.ಶೈಕ್ಷಣಿಕ ಅಭಿವೃದ್ಧಿ ಹಾಗೂ

೪.ಸಂಘಟನಾ ವ್ಯವಸ್ಥೆ ಇವು ನಾಲ್ಕು ಆ ಸಮುದಾಯದ ಆರ್ಥಿಕ ಪರಿಸ್ಥಿತಿಯನ್ನು ನಿರ್ಧರಿಸುತ್ತವೆ. ಈ ಹಿನ್ನೆಲೆಯಲ್ಲಿ ಕರ್ನಾಟಕದ ಒಕ್ಕಲಿಗರ ಸಮುದಾಯದ ಆರ್ಥಿಕ ಹಿನ್ನಡೆಗೆ ಅಥವಾ ಅವರ ಆರ್ಥಿಕ ಸಮಸ್ಯೆಗಳಿಗೆ ಕಾರಣಗಳನ್ನು ಪರಿಶೀಲಿಸುವುದಾದರೆ

**೧. ಸಂಖ್ಯಾಬಲ**

ಸಂಖ್ಯಾಬಲದ ದೃಷ್ಟಿಯಿಂದ ನೋಡಿದರೆ ಒಕ್ಕಲಿಗರ ಸಮುದಾಯವು ಕರ್ನಾಟಕದ ಬಹುಸಂಖ್ಯಾತ ಸಮುದಾಯಗಳಲ್ಲಿ ಒಂದಾಗಿದೆ. ರಾಜ್ಯದ ಒಟ್ಟು ಜನಸಂಖ್ಯೆಯ ಶೇಕಡ.೧೯ ರಷ್ಟು ಜನತೆಯು ಒಕ್ಕಲಿಗರಾಗಿದ್ದಾರೆ. ಒಕ್ಕಲಿಗರ ಒಟ್ಟು ಸಂಖ್ಯೆಯನ್ನು ಹಾಗೂ ಕರ್ನಾಟಕದ ವಿವಿಧ ಜಿಲ್ಲೆಗಳಲ್ಲಿ ಅವರ ಹಂಚಿಕೆಯನ್ನು ಮೇಲಿನ ಪಟ್ಟಿಯು ಸೂಚಿಸುವಂತೆ ಹಳೆಯ ಮೈಸೂರು ರಾಜ್ಯದಲ್ಲಿ ಇವರ ಸಾಂದ್ರತೆ ಅಧಿಕವಾಗಿದ್ದು, ಇತರ ಭಾಗಗಳಲ್ಲಿ ಅದರಲ್ಲೂ, ರಾಜ್ಯಕ್ಕೆ ಹೊಸದಾಗಿ ಸೇರಿದ ಪ್ರದೇಶಗಳಲ್ಲಿ ತೀರ ವಿರಳವಾಗಿದೆ. ಈ ವಿರಳ ಸಾಂದ್ರತೆಯನ್ನು ಹೊಂದಿದ ಈ ಜಿಲ್ಲೆಗಳಲ್ಲಿ ಒಕ್ಕಲಿಗರು ಹೆಚ್ಚು ತೊಂದರೆಗೆ ಹಾಗೂ ಅನಾನುಕೂಲಗಳಿಗೆ ಒಳಗಾಗಿದ್ದಾರೆ. ಆದರೂ ಒಟ್ಟಾರೆ ರಾಜ್ಯದಲ್ಲಿ ಒಕ್ಕಲಿಗರು ಒಂದು ಬಹುಸಂಖ್ಯಾತ ಪಂಗಡವಾದುದರಿಂದ ರಾಜಕೀಯವಾಗಿ ಪ್ರಭಾವಿತರಾಗಿದ್ದಾರೆ. ಶಾಸನ ಸಭೆ ಹಾಗೂ ರಾಜ್ಯಸಭೆಗಳಲ್ಲಿ ಒಕ್ಕಲಿಗ ಪ್ರತಿದಿನಿಧಿಗಳಿದ್ದು, ಕರ್ನಾಟಕದಲ್ಲಿ ಕೆಲವರು ಮುಖ್ಯಮಂತ್ರಿಗಳಾಗಿ ಆಳ್ವಿಕೆ ಮಾಡಿದ್ದಾರೆ. ಕೆಲವರು ರಾಜ್ಯದ ಮಂತ್ರಿಮಂಡಲದಲ್ಲಿಯೂ ಸ್ಥಾನಗಳನ್ನು ಪಡೆದಿದ್ದಾರೆ. ಕೆಲವರು ಲೋಕಸಭೆಯ ಸದಸ್ಯರೂ ಆಗಿದ್ದಾರೆ. ಹಾಗೂ ಅನೇಕ ಸ್ಥಳೀಯ ಸಂಘ ಸಂಸ್ಥೆಗಳಲ್ಲಿ ಸದಸ್ಯತ್ವವನ್ನೂ ಪಡಿದಿದ್ದಾರೆ. ಸಾಕಷ್ಟು ಪ್ರಮಾಣದಲ್ಲಿ ರಾಜಕೀಯದಲ್ಲಿ ಪ್ರಭಾವಿತರಾದ ವ್ಯಕ್ತಿಗಳು ಒಕ್ಕಲಿಗ ಸಮುದಾಯದಲ್ಲಿದ್ದರೂ ಸಹ ಒಕ್ಕಲಿಗರ ಏಳಿಗೆಗೆ ಅವರ ಆರ್ಥಿಕ ಪ್ರಗತಿಗೆ ತಮ್ಮ ಅಧಿಕಾರವನ್ನು ಸರಿಯಾಗಿ ಬಳಸಿಕೊಳ್ಳದೆ ಇರುವುದು ಈ ಸಮುದಾಯದ ದುರದೃಷ್ಟವೆನ್ನಬಹುದು.

**೨. ಸಂಪನ್ಮೂಲಗಳ ಒಡೆತನ**

ಒಕ್ಕಲಿಗರ ಸಮುದಾಯದ ಸಂಪನ್ಮೂಲಗಳ ಒಡೆತನದ ವಿಚಾರವನ್ನು ಪರಿಗಣಿಸಿದರೆ ಇವರ ಪ್ರಮುಖ ಆಸ್ತಿಭೂಮಿ ಅಥವಾ ಜಮೀನು. ಈ ಜನತೆಯ ಪ್ರಮುಖ ಕಸುಬು ಬೇಸಾಯ. ಬೇಸಾಯ ಹಿಡುವಳಿಗಳು ತೀರಾ ಚಿಕ್ಕವಾಗಿದ್ದು ಆರ್ಥಿಕ ಬೇಸಾಯಕ್ಕೆ ಅನುಕೂಲಕರವಾಗಿಲ್ಲ. ಆಧುನಿಕ ಬೇಸಾಯ ಪದ್ಧತಿಗೆ ಇವು ಒಳಪಡುವುದಿಲ್ಲ. ಈ ದಿಶೆಯಲ್ಲಿ ಸರ್ಕಾರ ಕೈಗೊಂಡಿರುವ ಭೂಸುಧಾರಣಾ ಕ್ರಮಗಳು, ಬೇಸಾಯ ಹಿಡುವಳಿಗಳ ಮೇಲಿನ ಮಿತಿ ಇತ್ಯಾದಿ ಶಾಸನಗಳು ಒಕ್ಕಲಿಗರ ಆರ್ಥಿಕ ಸುಧಾರಣೆಗೆ ಸಾಮಾಧಾನಕರವಾಗಿ ನೆರವಾಗಿಲ್ಲ. ಕೆಲವು ಅಧ್ಯಯನಗಳ ಅಂಕಿ ಅಂಶಗಳ ಪ್ರಕಾರ ಕರ್ನಾಟಕದ ಸುಮಾರು ಶೇಕಡ ೩೩.೪ರಷ್ಟು ರೈತರು ಸಾಧಾರಣ ರೈತರು. ಇವರು ತೀರ ಕಡಿಮೆ ಜಮೀನನ್ನು ಅಂದರೆ ೨೧/೨ ಎಕರೆಗೂ ಕಡಿಮೆ ಜಮೀನನ್ನು ಹೊಂದಿದ್ದಾರೆ. ಈ ವರ್ಗದ ರೈತರ ಸರಾಸರಿ ಭೂಮಾಲಿಕತ್ವ ಕೇವಲ ೧.೨೫ ಎಕರೆ ಎಂದು ಗೊತ್ತಾಗಿದೆ. ಸುಮಾರು ೨೧/೨ ಎಕರೆಗೂ ಹೆಚ್ಚು ಮತ್ತು ೫ ಎಕರೆಗೂ ಕಡಿಮೆ ಜಮೀನನ್ನು ಹೊಂದಿರುವ ಸಣ್ಣ ರೈತರು ಶೇಕಡ ೨೩.೩ರಷ್ಟಿದ್ದಾರೆ. ಇವರ ಸರಾಸರಿ ಜಮೀನು ೩.೭೫ ಎಕರೆಗಳು. ಶೇಕಡ ೨೧.೫ರಷ್ಟು ರೈತರು ೫ ರಿಂದ ೧೦ ಎಕರೆಗಳ ವಿಸ್ತೀರ್ಣದ ಜಮೀನನ್ನು ಹೊಂದಿದ್ದಾರೆ. ಹಾಗೂ ಶೆ.೧೬.೬ರಷ್ಟು ಬೇಸಾಯಗಾರರು ೧೦ ರಿಂದ ೨೫ ಎಕರೆಗಳ ವರೆಗೆ ಜಮೀನಿನ ಮಾಲೀಕತ್ವವನ್ನು ಪಡಿದಿದ್ದಾರೆ. ಒಕ್ಕಲಿಗ ಸಮುದಾಯದ ಹೆಚ್ಚು ಭಾಗ ಸಾಧಾರಣ ಹಾಗೂ ಸಣ್ಣ

ರೈತರ ಗುಂಪಿನಲ್ಲಿ ಸೇರುತ್ತದೆ. ಇವರ ಸರಾಸರಿ ಜಮೀನು ಕ್ರಮವಾಗಿ ೧.೨೫ ಎಕರೆ ಹಾಗೂ ೩.೭೫ ಎಕರೆ ಇದ್ದು ಇದರ ಬೇಸಾಯವು ರೈತರ ಸಾಧಾರಣ ಮಟ್ಟದ ಜೀವನ ನಿರ್ವಹಣೆಗೂ ಸಾಕಷ್ಟು ಆದಾಯವನ್ನು ಒದಗಿಸಲಾರದು.

ಬೇಸಾಯ ಹಿಡುವಳಿಗಳು ಚಿಕ್ಕದಾಗಿರುವುದು ಒಂದು ಅನಾನುಕೂಲವಾದರೆ ಇವುಗಳ ಬೇಸಾಯಕ್ಕೆ ನಿಗರ್ಸವನ್ನೇ ಅವಲಂಬಿಸಬೇಕಾಗಿರುವುದು ಇನ್ನೊಂದು ಅನಾನುಕೂಲ. ಕೆಲವು ತಾಲ್ಲೂಕುಗಳನ್ನು ಬಿಟ್ಟರೆ ಹೆಚ್ಚಿನ ಭಾಗದ ಜಮೀನಿಗೆ ಸಾಕಷ್ಟು ನೀರಾವರಿ ಸೌಲಭ್ಯವಿಲ್ಲ. ಇದರಿಂದಾಗಿ ಜಮೀನಿನ ಮೇಲಿನ ವರಮಾನ ಇನ್ನೂ ಕಡಿಮೆಯಾಗುತ್ತದೆ. ಸಾಲದೆಂಬಂತೆ ಬೇಸಾಯ ವಸ್ತುಗಳ ಮಾರಾಟ ಕೂಡ ರೈತರಿಗೆ ದುರದೃಷ್ಟಕರವಾಗಿಯೇ ಇದೆ. ಈ ವಸ್ತುಗಳ ವ್ಯಾಪಾರ ವಿಧಾನ, ಅಲ್ಲಿ ಅನುಸರಿಸುವ ನೀತಿ ನಿಯಮಗಳು, ಬಹಳ ಹಿಂದಿನಿಂದಲೂ ರೈತರನ್ನು ಶೋಷಿಸುತ್ತಲೇ ಬಂದಿವೆ. ಅವರ ಸರಕುಗಳಿಗೆ ನ್ಯಾಯವಾದ ಬೆಲೆ ದೊರೆಯದೆ ಅವರ ಆರ್ಥಿಕ ಸ್ಥಿತಿಗಳು ಕ್ಷೀಣಿಸುತ್ತಲೇ ಬಂದಿವೆ.

ರೈತರ ಸರಕುಗಳಿಗೆ ನ್ಯಾಯವಾದ ಬೆಲೆ ದೊರೆಯದೆ ಅವರು ವಂಚಿತರಾಗಿರುವುದು ಒಂದು ರೀತಿಯ ಶೋಷಣೆಯಾದರೆ ಇನ್ನೊಂದೆಡೆ ಬೇಸಾಯಕ್ಕೆ ಬೇಕಾಗುವ ಎಲ್ಲ ಸರಕುಗಳ ಅಂದರೆ ಬೀಜ, ಗೊಬ್ಬರಗಳು, ಕ್ರಿಮಿನಾಶಕಗಳು, ರೈತಕಾರ್ಮಿಕರ ಕೂಲಿ ಇತ್ಯಾದಿ ಎಲ್ಲ ಪ್ರಕಾರಗಳ ಬೆಲೆಯೂ ಕಾಲದಿಂದ ಕಾಲಕ್ಕೆ ಏರುತ್ತಲೇ ಬಂದಿದೆ. ಆದರೆ, ಇದಕ್ಕೆ ಸರಿಯಾದ ಆದಾಯ ಅವರಿಗೆ ದೊರೆಯುತ್ತಿಲ್ಲ. ಆಹಾರ ಧಾನ್ಯಗಳ ಹಾಗೂ ಇತರ ಕೃಷಿ ಸರಕುಗಳ ಬೆಲೆಯೂ ಕಾಲದಿಂದ ಕಾಲಕ್ಕೆ ಏರುತ್ತಿದ್ದರೂ, ಎಲ್ಲ ಬೆಲೆಯೂ ರೈತರ ಕೈಸೇರದೆ, ಇದರ ಹೆಚ್ಚಿನ ಅಂಶ ಮಧ್ಯವರ್ತಿಗಳ ಕೈ ಸೇರುತ್ತಿದೆ. ಹೀಗಾಗಿ, ಒಂದೆಡೆ ರೈತನೂ ವಂಚಿತನಾಗುತ್ತಾನೆ, ಮತ್ತೊಂದೆಡೆ, ಬಳಕೆದಾರನೂ ವಂಚಿತನಾಗುತ್ತಾನೆ. ಬಳಕೆದಾರ ಕೊಡುವ ಎಲ್ಲ ಬೆಲೆಯೂ ರೈತರ ಕೈ ಸೇರುವುದಾದರೆ, ಅವನ ಆರ್ಥಿಕ ಸ್ಥಿತಿ ಸುಧಾರಿಸುವುದರಲ್ಲಿ ಸಂಶಯವಿಲ್ಲ. ಆದರೆ, ರೈತ ಶೋಷಿತರಲ್ಲಿ ಶೋಷಿತನಾಗಿದ್ದಾನೆ. ಇವು ಸಾಲದೆಂಬಂತೆ ಈ ರೈತರು ಹುಟ್ಟಿನಿಂದ ಸಾವಿನವರೆಗೆ ಋಣಭಾರದಲ್ಲಿಯೇ ಮುಳುಗಿರುತ್ತಾರೆ. ಧಾರ್ಮಿಕ ಕಾರ್ಯಗಳು, ವಿವಾದಗಳ ಕಾರಣಕ್ಕೆ ಕೋರ್ಟಿಗೆ ತೆರುವ ಹಣ ಇತ್ಯಾದಿ ಅಂಶಗಳು ರೈತರ ಋಣಭಾರವನ್ನು ಹೆಚ್ಚಿಸುತ್ತಲೇ ಬಂದಿವೆ ಮತ್ತು ಅವನ ಆರ್ಥಿಕ ಸ್ಥಿತಿಯನ್ನು ಕ್ಷೀಣಿಸುತ್ತಿವೆ.

**೩. ಶೈಕ್ಷಣಿಕ ಅಭಿವೃದ್ಧಿ**

ಒಂದು ಸಮಾಜದ ಶೈಕ್ಷಣಿಕ ಮಟ್ಟವು ಆ ಸಮಾಜದ ಒಟ್ಟಾರೆ ಅಭಿವೃದ್ಧಿಯ ಮೇಲೆ ತುಂಬಾ ಪರಿಣಾಮ ಬೀರುತ್ತದೆ. ಈ ದೃಷ್ಟಿಯಿಂದ ನೋಡಿದಾಗ ಶೈಕ್ಷಣಿಕವಾಗಿ ಒಕ್ಕಲಿಗರು ಹಿಂದುಳಿದ್ದಾರೆ. ೧೯೫೧ರಲ್ಲಿ ರಾಜ್ಯದ ಸಾಕ್ಷರತಾ ಸರಾಸರಿಯು ಶೇ.೨೦ ಇದ್ದಾಗ, ಈ ಸಮುದಾಯದ ಸಾಕ್ಷರತೆಯು ಶೇ.೧೩.೩ ರಷ್ಟಿತ್ತು. ಈಗ ರಾಜ್ಯದ ಸರಾಸರಿ ಶೇ. ೩೮ ಇದ್ದು, ಒಕ್ಕಲಿಗರ ಸರಾಸರಿ ಸಾಕ್ಷರತೆಯು ಶೇ. ೨೦ಕ್ಕೆ ಹೆಚ್ಚಿರಲೂ ಸಾಕು. ಆದರೆ ತಾಂತ್ರಿಕ ಹಾಗೂ ಸ್ನಾತಕೋತ್ತರ ತರಗತಿಗಳಲ್ಲಿ ಅಧ್ಯಯನ ಮಾಡುತ್ತಿರುವವರ ಸಂಖ್ಯೆ ತೀರ ಅಲ್ಪ.

ಒಕ್ಕಲಿಗರ ಸಮಾಜದ ಶೈಕ್ಷಣಿಕ ಹಿಂದುಳಿಯುವಿಕೆಗೆ ಕೆಲವು ಕಾರಣಗಳುಂಟು. ಈ ವಿಚಾರದ ಮೇಲೆ ಮೈಸೂರು ಸಂಸ್ಥಾನದ ಪ್ರಪ್ರಥಮ ಶಾಲಾ ದಾಖಲಾತಿಗಳ ಸಮಿತಿಯ ಅಧ್ಯಕ್ಷರಾಗಿದ್ದು ಶ್ರೀಮತಿ ಶ್ರೀ ರಂಗಮ್ಮನವರ ಈ

ಹೇಳಿಕೆಯು ಹೆಚ್ಚು ಬೆಳಕು ಬೀರುತ್ತದೆ. '೧೯೬೧ ರಿಂದಲೂ ಉಚಿತ ಮತ್ತು ಕಡ್ಡಾಯ ಶಿಕ್ಷಣ ಯೋಜನೆ ಇದ್ದಾಗ್ಯೂ ಸಹ, ಕೆಲವು ಜಾತಿಯ ಜನರು ತಮ್ಮ ಗುಂಪಿನ ಪ್ರಮಾಣಕ್ಕೆ ತಕ್ಕಂತೆ ಮಕ್ಕಳನ್ನು ಶಾಲೆಗಳಿಗೆ ಕಳಿಸುತ್ತಿಲ್ಲ. ಕೆಲವರ ಆರ್ಥಿಕ ಸ್ಥಿತಿಯೂ ತೀರಾ ಹಿಂದುಳಿದಿದ್ದು, ಮಕ್ಕಳನ್ನು ಶಾಲೆಗೆ ಕಳಿಸುವುದಕ್ಕೂ ಅಶಕ್ತರಾಗಿದ್ದಾರೆ. ಜೊತೆಗೆ ತಮ್ಮ ಕಸಬುಗಳಿಗೇ ತಮ್ಮ ಮಕ್ಕಳನ್ನು ಸೇರಿಸಿಕೊಂಡು, ತಮ್ಮ ಆದಾಯವನ್ನು ಹೆಚ್ಚಿಸಿಕೊಳ್ಳುವುದರ ಕಡೆಗೇ ಅವರ ಒಲವು. ಮುಂದುವರಿದ ಜಾತಿಯ ಜನರು ತಮ್ಮದೇ ಆದ ಶಿಕ್ಷಣ ಸಂಸ್ಥೆಗಳನ್ನೂ, ಉಚಿತ ವಸತಿ ಗೃಹಗಳನ್ನೂ ತೆರೆದು, ತಮ್ಮ ಜಾತಿಯ ವಿದ್ಯಾರ್ಥಿಗಳಿಗೆ ಈ ಸೌಲಭ್ಯಗಳನ್ನು ಒದಗಿಸಿದ್ದಾರಲ್ಲದೆ, ವಿದ್ಯಾರ್ಥಿವೇತನಗಳನ್ನೂ ನೀಡುತ್ತಾರೆ.' ಶ್ರೀಮತಿ ಶ್ರೀ ರಂಗಮ್ಮ ನವರು ಮುಂದುವರಿದು, ಹೀಗೆ ಹೇಳುತ್ತಾರೆ ''ಅನಿಶ್ಚಿತ ಹಾಗೂ ಕಡಿಮೆ ಆದಾಯವುಳ್ಳ ರೈತರು ಹಾಗೂ ಇತರ ಕೆಳದರ್ಜೆಯ ಉದ್ಯೋಗಗಳಲ್ಲಿ ತೊಡಗಿರುವ ಜನತೆಯು ತಮ್ಮ ಮಕ್ಕಳನ್ನು ಜಮೀನಿನ ಮೇಲೆ ಅಥವಾ ಇತರ ಪರಂಪರಾನುಗತವಾಗಿ ಬಂದ ಕಸಬುಗಳಲ್ಲಿ ತೊಡಗಿಸುತ್ತಾರೆ. ಶಾಲೆಗಳು ಪ್ರಾರಂಭವಾದಾಗ ಗಣನೀಯ ಪ್ರಮಾಣದ ಮಕ್ಕಳು ಶಾಲೆಗಳಲ್ಲಿ ತಮ್ಮ ಹೆಸರುಗಳನ್ನು ಹಾಜರಿಪಟ್ಟಿಯಲ್ಲಿ ಸೇರಿಸಿದರೂ, ಕಾಲ ಕಳೆದಂತೆ ಹೆಚ್ಚಿನ ಮಕ್ಕಳು ಶಾಲೆಗಳನ್ನು ಬಿಡುತ್ತಾರೆ. ಈ ಜಿಲ್ಲೆಯ, ಅಂದರೆ ಮೈಸೂರು ಜಿಲ್ಲೆಯ, ಲಿಂಗಾಯಿತ ಮತೀಯರು ಹೆಚ್ಚಿನ ಪ್ರಮಾಣದ ಶಾಲೆಗಳನ್ನು ತಮ್ಮ ಮಠಾಧಿಪತಿಗಳ ಅಧೀನದಲ್ಲಿ ತೆರೆದಿದ್ದಾರೆ. ಹಾಗೆಯೇ ಮುಸ್ಲಿಮರು, ಕ್ರಿಶ್ಚಿಯನ್‌ರು ಹಾಗೂ ಬ್ರಾಹ್ಮಣ ಮತದವರು ತಮ್ಮ ಜಾತಿಗಳ ಶಿಕ್ಷಣ ಸಂಸ್ಥೆಗಳನ್ನು ತೆರೆದಿದ್ದಾರೆ. ಆಯಾ ಮತದ ಪ್ರಮುಖರು ಅವುಗಳ ಆಡಳಿತ ವ್ಯವಸ್ಥೆಯನ್ನು ನೋಡಿಕೊಳ್ಳುತ್ತಾರೆ.''

ಇತರ ಮುಂದುವರಿದ ಸಮುದಾಯಗಳಿಗೆ ಹೋಲಿಸಿದರೆ, ಒಕ್ಕಲಿಗರ ಮಕ್ಕಳಿಗೆ ಒದಗಿಸಿರುವ ಶಿಕ್ಷಣ ಸೌಲಭ್ಯಗಳು ಬಹಳ ಕಡಿಮೆ. ಪ್ರಸ್ತುತ ಕಾರ್ಯೋನ್ಮುಖವಾಗಿರುವ ಶಿಕ್ಷಣ ಸಂಸ್ಥೆಗಳು, ವಸತಿಗೃಹಗಳು, ವಿದ್ಯಾರ್ಥಿ ವೇತನಗಳು ತೀರ ಕಡಿಮೆ. ಇದರ ಪರಿಣಾಮವಾಗಿ ಒಕ್ಕಲಿಗರ ಶೈಕ್ಷಣಿಕ ಮಟ್ಟ ಹಿಂದುಳಿದಿದೆ ಎಂದು ಇಂದು ಒಕ್ಕಲಿಗ ಶಿಕ್ಷಣ ಸಂಸ್ಥೆಗೆ ಪ್ರೋತ್ಸಾಹದಿಂದಾಗಿ ಒಕ್ಕಲಿಗರ ಶೈಕ್ಷಣಿಕ ಪ್ರಮಾಣ ಹೆಚ್ಚಾಗುತ್ತಿದೆ.

**೪. ಸಂಘಟನಾ ವ್ಯವಸ್ಥೆ**

ದಕ್ಷ ಸಂಘಟನಾ ವ್ಯವಸ್ಥೆಯೂ ಸಹ ಒಂದು ಸಮುದಾಯದ ಅಭಿವೃದ್ಧಿಗೆ ಕಾರಣವಾಗುತ್ತದೆ. ಈ ರೀತಿಯಲ್ಲಿ ವಿಚಾರಮಾಡಿದಾಗ ಒಕ್ಕಲಿಗ ಸಮುದಾಯದಲ್ಲಿ ದಕ್ಷ ಸಂಘಟನೆ, ಹಾಗೂ ಮುಂದಾಳುತನದ ಅಭಾವವಿದೆ. ಜನತೆಯನ್ನು ಮುಂದೆ ತರಲು, ಅವರ ಪ್ರಗತಿಗೆ ಶ್ರಮಿಸಲು, ಸಾಕಷ್ಟು ಸಂಘ ಸಂಸ್ಥೆಗಳಿಲ್ಲ. ಒಕ್ಕಲಿಗರ ಸಂಘವು ೧೦೦ ವರ್ಷಗಳಿಂದಲೂ ಅಸ್ತಿತ್ವದಲ್ಲಿದೆಯಾದರೂ, ಅದು ಒಂದು ಮತೀಯ ಸಂಘವು ಮಾಡಬಹುದಾದ ಕಾರ್ಯವನ್ನು ನಿರ್ವಹಿಸುವುದರಲ್ಲಿ ಯಶಸ್ವಿಯಾಗಿಲ್ಲವೆಂದು ಹೇಳಬೇಕಾಗಿದೆ. ಈ ಸಮುದಾಯದ ಅನೇಕರಿಗೆ, ಅದರಲ್ಲೂ ಗ್ರಾಮೀಣರಿಗೆ, ತಮ್ಮದೇ ಆದ ಒಂದು ಸಂಘ ಅಸ್ತಿತ್ವದಲ್ಲಿರುವುದರ ಅರಿವೂ ಸಹ ಇಲ್ಲ. ಈ ಸಂಘದ ಕಾರ್ಯಚಟುವಟಿಕೆಗಳು ಕೇವಲ ಬೆಂಗಳೂರು ನಗರ ನಿವಾಸಿಗಳಿಗೇ ಸೀಮಿತವಾಗಿದೆಯೆಂದರೆ ತಪ್ಪಾಗಲಾರದು. ಅಲ್ಲವೆ, ಸಂಘದ ಸದಸ್ಯತ್ವವೂ ಕೂಡ ಒಟ್ಟು ಒಕ್ಕಲಿಗರಿಗೆ ಹೋಲಿಸಿದರೆ ತೀರಾ ಅಲ್ಪ. ಸಮುದಾಯದ ಕೆಲವು ಪ್ರತಿಷ್ಠಿತ ವ್ಯಕ್ತಿಗಳಷ್ಟೇ ಈ ಸಂಘದಲ್ಲಿ ಸದಸ್ಯತ್ವವನ್ನು ಪಡೆದಿದ್ದಾರೆ. ಈ ಸಂಘವು ತನ್ನ ಮತೀಯರ ಸಾಮಾಜಿಕ ಹಾಗೂ ಆರ್ಥಿಕ ಸಮಸ್ಯೆಗಳನ್ನು ಸರ್ಕಾರದ ಗಮನಕ್ಕೆ ತಂದು, ಅವುಗಳ ಸುಧಾರಣೆ

ಮಾಡಿಕೊಳ್ಳುವ ಪ್ರಯತ್ನವನ್ನು ಸರಿಯಾಗಿ ಮಾಡಬೇಕಾಗಿದೆ. ಜೊತೆಗೆ, ಈ ಸಮುದಾಯದಲ್ಲಿ ಇತರ ಸಮುದಾಯಗಳಂತೆ ಜನತೆಗೆ ಮಾರ್ಗದರ್ಶನ ಮಾಡಲು ಮತೀಯ ಅಧಿಕಾರಿಗಳಾಗಲಿ, ಮುಂದಾಳುಗಳಾಗಲಿ ಸಾಕಷ್ಟು ಇಲ್ಲ. ಈ ಮತೀಯರು ನಿರ್ಲಿಪ್ತರಾಗಿ, ತಾವಾಯಿತು ತಮ್ಮ ಕಸುಬಾಯಿತು ಎಂಬಂತೆ ಜೀವನವನ್ನು ವೈಯಕ್ತಿಕವಾಗಿ ಎದುರಿಸುತ್ತಾರೆಯೇ ಹೊರತು ಸಂಘಟನೆಗೊಳ್ಳುವ ಮನೋಭಾವವಿಲ್ಲ. ಅಲ್ಲದೆ, ಈ ಸಮುದಾಯದ ಉಪಜಾತಿಗಳೂ ಬೇರ್ಪಡೆಯಾಗುವುದರಿಂದ ಇಲ್ಲಿ ಸಾಂಘಿಕ ಮನೋಭಾವದ ಅಭಾವವಿದೆ. ಹೀಗಾಗಿ, ಇತರ ಮತೀಯರಲ್ಲಿ ಹೆಚ್ಚು ಸಾಂಘಿಕತೆ ಬೆಳೆಯುತ್ತಿದ್ದರೆ, ಒಕ್ಕಲಿಗ ಮತೀಯರಲ್ಲಿ ಮಾತ್ರ ಒಗ್ಗಟ್ಟಿನ ಅಭಾವವುಂಟಾಗುತ್ತಿದೆ ಎನ್ನಬಹುದು. ಮತೀಯರ ಐಕ್ಯಮತ್ಯದ ಬಗ್ಗೆ ಇದರಿಂದ ಕಳವಳವುಂಟಾಗಿದೆ.

ಜೇನ್ಸ್ ಮೇನರ್‌ರವರು ಒಕ್ಕಲಿಗರ ಹಾಗೂ ಲಿಂಗಾಯಿತರ ಬಗ್ಗೆ ನಡೆಸಿರುವ ಅಧ್ಯಯನ ವಿಚಾರಗಳು ಇಲ್ಲಿ ಹೆಚ್ಚು ಸಹಕಾರಿಯಾಗಿವೆ." ಅವರ ಹೇಳಿಕೆಯ ಭಾವಾರ್ಥ ಹೀಗಿದೆ. ''೧೯೦೦ರ ಕಾಲದಲ್ಲಿ ಲಿಂಗಾಯಿತ ಮತೀಯರಲ್ಲಿ ಒಕ್ಕಲಿಗರಿಗಿಂತ ಹೆಚ್ಚು ಐಕಮತ್ಯ ಹಾಗೂ ಸಮನ್ವಯತೆ ಇತ್ತು. ವಿರಕ್ತ ಮಠಗಳು, ಆಶ್ರಮಗಳು ಅಧಿಕ ಪ್ರಮಾಣದಲ್ಲಿ ಸ್ಥಳೀಯ ಸಂಸ್ಥೆಗಳಾಗಿದ್ದು, ಲಿಂಗಾಯಿತರ ಸಮನ್ವಯತೆಗೆ ಹೆಚ್ಚು ಪರಿಣಾಮ ಬೀರಿದುವು. ಆ ಕಾಲದಲ್ಲಿ ಈ ವಿರಕ್ತಶ್ರಾಮಗಳೇ ಪ್ರಬಲ ಸ್ಥಳೀಯ ಸಂಸ್ಥೆಗಳಾಗಿದ್ದುವಲ್ಲದೆ, ಆ ಮಠಗಳ ಸ್ವಾಮಿಗಳು ತಮ್ಮ ಶ್ರೇಷ್ಠತೆಯನ್ನೂ, ಪ್ರಖ್ಯಾತಿಯನ್ನೂ ಉಳಿಸಿಕೊಂಡಿದ್ದರು. ಈ ಮಟದ ಗುರುಗಳು ದೇವತೆಗಳಿಗಿಂತಲೂ ಶ್ರೇಷ್ಠ ಎಂದು ವರ್ಣಿಸಲಾಗಿದೆ. ಅಲ್ಲದೆ, ತಮ್ಮ ಮತೀಯರಿಗೆ ಸಾಂದರ್ಭಿಕವಾಗಿ ಮಾರ್ಗದರ್ಶನ ನೀಡುವುದರಲ್ಲಿ, ಬ್ರಾಹ್ಮಣ ಮತದವರೊಡನೆ ತಮ್ಮ ಮತದ ಪ್ರತಿಷ್ಠೆಯನ್ನು ಉಳಿಸುವುದರಲ್ಲಿ. ಶಿಕ್ಷಣ ಕೊಡಿಸುವುದರಲ್ಲಿ ಹಾಗೂ ಇತರ ಸಣ್ಣ ಸಣ್ಣ ಮಠಗಳ ಮೂಲಕ ಪ್ರಬಲ ಸ್ಥಳೀಯ ಸಂಸ್ಥೆಗಳಿಂದ ಮತದ ಪ್ರಚಾರ ಕಾರ್ಯ ಮಾಡುವುದರಲ್ಲಿ ಲಿಂಗಾಯಿತರ ಮಠದ ಗುರುಗಳು ಬಹಳ ಶೀಘ್ರುರಾಗಿದ್ದಾರೆ''. ಜೇಮ್ಸ್ ಮೇನರ್ ಈ ಹೇಳಿಕೆಯಿಂದ ಇತರ ಮತೀಯರು ಶತಮಾನದ ಆದಿಯಿಂದಲೂ ಉತ್ತಮ ಸಂಘಟನೆ ಹಾಗೂ ಮುಂದಾಳತ್ವದಲ್ಲಿ ಮುಂದಿದ್ದರೆಂದು ತಿಳಿದು ಬರುತ್ತದೆ. ಆದರೆ, ಈ ಬಗೆಯ ಸಾಂಘಿಕತೆ ಒಕ್ಕಲಿಗರಲ್ಲಿ ಮೊದಲಿನಿಂದಲೂ ಇರಲಿಲ್ಲ. ಈಗಲಾದರೂ ಈ ದಿಶೆಯಲ್ಲಿ ಪ್ರಗತಿಯ ಸೂಚನೆಗಳಿವೆಯೇ?

**೩. ಒಕ್ಕಲಿಗರ ಬಡತನದ ಮಟ್ಟ**

ಮೇಲೆ ಹೇಳಿರುವ ಕಾರಣಗಳಿಂದ ಒಕ್ಕಲಿಗರು ಸಾಮಾಜಿಕ. ಆರ್ಥಿಕ ಹಾಗೂ ಶೈಕ್ಷಣಿಕ ವಿಚಾರಗಳಲ್ಲಿ ಹಿಂದುಳಿದಿದ್ದಾರೆ. ಸಾಮಾಜಿಕ ಮತ್ತು ಆರ್ಥಿಕ ಬದಲಾವಣೆಯ ಅಧ್ಯಯನ ಸಂಸ್ಥೆಯು ಕರ್ನಾಟಕದ ಜನತೆಯಲ್ಲಿ ಬಡತನ ಮತ್ತು ಅಸಮಾನತೆ ಎಂಬ ವಿಚಾರದ ಮೇಲೆ ನಡೆಸಿರುವ ಅಧ್ಯಯನವು ಕೆಲವು ಸಂಗತಿಗಳನ್ನು ತಿಳಿಸುತ್ತದೆ. ಈ ಸಂಸ್ಥೆಯು ದಾಂಡೇಕರ್ ರಾಥ್‌ರವರ ಅಧ್ಯಯನವನ್ನು ಅನುಸರಿಸಿ, ದಾರಿದ್ರ್ಯ ಮಟ್ಟದಲ್ಲಿ ಸೇರುವ ಜನತೆಯ ಶೇಕಡಾವಾರು ಸಂಖ್ಯೆಯನ್ನು ಖಚಿತಪಡಿಸಿದ್ದಾರೆ. ಈ ಅಧ್ಯಯನದಲ್ಲಿ ಒಕ್ಕಲಿಗರ ಸಮುದಾಯದ ಆರ್ಥಿಕ ಪರಿಸ್ಥಿತಿಯನ್ನು ಅಳೆಯುವ ಅಂಕಿ ಅಂಶಗಳೂ ದೊರೆಯುತ್ತವೆ.

ಕೆಳಗಿನ ಪಟ್ಟಿಯು ವಿವಿಧ ಜಿಲ್ಲೆಗಳಲ್ಲಿ ದರಿದ್ರ ಮಟ್ಟದಲ್ಲಿ ಸೇರುವ ಒಕ್ಕಲಿಗರ ಶೇಕಡಾವಾರು ಸಂಖ್ಯೆಯನ್ನು ಗ್ರಾಮೀಣ ಹಾಗೂ ನಗರ ಪ್ರದೇಶಗಳಿಗೆ ಪ್ರತ್ಯೇಕವಾಗಿ ಸೂಚಿಸುತ್ತದೆ.

ಗ್ರಾಮೀಣ ಹಾಗೂ ನಗರ ಪ್ರದೇಶಗಳಲ್ಲಿ ಒಕ್ಕಲಿಗರ ಬಡತನದ ಶೇಕಡಾವಾರು ಹಂಚಿಕೆ

| ಜಿಲ್ಲೆ | ಗ್ರಾಮೀಣ | ನಗರ |
|---|---|---|
| ಬೆಂಗಳೂರು | ೨೨.೫೬ | ೨೯.೧೮ |
| ಬೆಳಗಾಂ | ಇಲ್ಲ | ೬೮.೭೦ |
| ಬಳ್ಳಾರಿ | ಇಲ್ಲ | ಇಲ್ಲ |
| ಬೀದರ್ | ಇಲ್ಲ | ಇಲ್ಲ |
| ಬಿಜಾಪುರ | ೫೫.೩೪ | ಇಲ್ಲ |
| ಚಿಕ್ಕಮಗಳೂರು | ೧೨.೯೬ | ಇಲ್ಲ |
| ಚಿತ್ರದುರ್ಗ | ಇಲ್ಲ | ಇಲ್ಲ |
| ಕೊಡಗು | ೯.೨೦ | ಇಲ್ಲಿ |
| ಧಾರವಾಡ | ೧೦೦.೦೦ | ಇಲ್ಲ |
| ಗುಲ್ಬರ್ಗ | ೨೭.೬೦ | ೧೦೦.೦೦ |
| ಹಾಸನ | ೪೫.೭೭ | ೯೧.೬೦ |
| ಕೋಲಾರ | ೩೧.೦೭ | ಇಲ್ಲ |
| ಮಂಡ್ಯ | ೪೪.೯೨ | ಇಲ್ಲ |
| ಮೈಸೂರು | ೨೧.೭೮ | ೨೦.೮೮ |
| ಉತ್ತರ ಕನ್ನಡ | ಇಲ್ಲ | ಇಲ್ಲ |
| ರಾಯಚೂರು | ಇಲ್ಲ | ಇಲ್ಲ |
| ಶಿವಮೊಗ್ಗ | ಗೊತ್ತಿಲ್ಲ | ಗೊತ್ತಿಲ್ಲ |
| ದಕ್ಷಿಣ ಕನ್ನಡ | ೨೭.೬೦ | ಇಲ್ಲ |
| ತುಮಕೂರು | ೩೬.೭೬ | ೧೭.೫೭ |
| ಎಲ್ಲ ಜನಾಂಗಗಳೂ ಸೇರಿದಂತೆ | | |
| ರಾಜ್ಯ ಮಟ್ಟದಲ್ಲಿ | ೩೧.೦೩ | ೨೫.೧೨ |

ಈ ಅಧ್ಯಯನದ ಪ್ರಕಾರ ಗ್ರಾಮೀಣ ಪ್ರದೇಶಗಳಲ್ಲಿ ೫೨೬ ರೂ ಗಳಿಗೂ ಕಡಿಮೆ ತಲಾ ವಾರ್ಷಿಕ ವರಮಾನವನ್ನೂ, ನಗರ ಪ್ರದೇಶಗಳಲ್ಲಿ ೭೨೬ ರೂ ಗಳಿಗೂ ಕಡಿಮೆ ತಲಾ ವರಮಾನವನ್ನು ಪಡೆದಿರುವ ವ್ಯಕ್ತಿಗಳನ್ನು ದರಿದ್ರ ಮಟ್ಟದ ಕೆಳಗೆ ಸೇರಿಸಲಾಗಿದೆ. ಈ ಮಟ್ಟಕ್ಕೆ ಒಳಪಡುವ ಎಲ್ಲ ಜನಾಂಗಗಳೂ ಸೇರಿದಂತೆ ರಾಜ್ಯದ ಸರಾಸರಿಯು ಗ್ರಾಮೀಣ ಪ್ರದೇಶಗಳಲ್ಲಿ ಶೇ. ೩೧.೦೩ ರಷ್ಟು ಹಾಗೂ ನಗರ ಪ್ರದೇಶಗಳಲ್ಲಿ ಶೇಕಡ

೨೫.೧೨ ರಷ್ಟಿದೆ. ಇದರಂತೆ ರಾಜ್ಯದ ಅನೇಕ ಜಿಲ್ಲೆಗಳಲ್ಲಿ ಒಕ್ಕಲಿಗರ ಬಡತನದ ಮಟ್ಟವು ರಾಜ್ಯದ ಸರಾಸರಿಗಿಂತ ಹೆಚ್ಚಾಗಿದೆ. ಅದರಲ್ಲಿ ಹೆಚ್ಚು ಕೇಂದ್ರೀಕೃತವಾಗಿರುವ ಹಾಸನ ಮತ್ತು ಮಂಡ್ಯ ಜಿಲ್ಲೆಯಲ್ಲಿ ಗ್ರಾಮೀಣ ಪ್ರದೇಶದಲ್ಲಿ ಬಡತನದ ಮಟ್ಟ ಶೇಕಡ ೪೪.೯೨ ಆದರೆ, ನಗರ ಪ್ರದೇಶದ ಈ ಜನತೆಯಲ್ಲಿ ಬಡತನವಿಲ್ಲ ಎಂದು ಮೇಲಿನ ಪಟ್ಟಿಯು ತೋರಿಸುತ್ತದೆ. ಹಾಸನ ಜಿಲ್ಲೆಯಲ್ಲಿ ಶೇಕಡ ೯೨ ರಷ್ಟು ನಗರ ನಿವಾಸಿಗಳು ಬಡತನದಲ್ಲಿದ್ದಾರೆ. ಮೈಸೂರು, ದಕ್ಷಿಣ ಕನ್ನಡ ಇತ್ಯಾದಿ ಕೆಲವು ಜಿಲ್ಲೆಗಳಲ್ಲಿ ರಾಜ್ಯದ ಸರಾಸರಿಗಿಂತ ಶೇಕಡಾ ಬಡತನ ಕಡಿಮೆಯಿದೆ. ಬಳ್ಳಾರಿ, ಬಿದರ್, ಚಿತ್ರದುರ್ಗ, ರಾಯಚೂರು, ಶಿವಮೊಗ್ಗ ಜಿಲ್ಲೆಗಳಲ್ಲಿ ಒಕ್ಕಲಿಗರಲ್ಲಿ ಬಡತನವಿಲ್ಲ. ಆದರೆ ಈ ಜಿಲ್ಲೆಗಳಲ್ಲಿ ಒಕ್ಕಲಿಗರ ಜನಸಂಖ್ಯೆಯೇ ಕಡಿಮೆ.

ಕೆಳಗಿನ ಪಟ್ಟಿ ೩ ರಲ್ಲಿ ಒಕ್ಕಲಿಗರ ವಿವಿಧ ಆದಾಯದ ಮಟ್ಟವನ್ನು ತೋರಿಸಿದೆ.

ಪಟ್ಟಿ ೩

ವಿವಿಧ ಆದಾಯಗಳಲ್ಲಿ ಒಕ್ಕಲಿಗರ ಶೇಕಡಾವಾರು

| | ಗ್ರಾಮೀಣ | ನಗರ |
|---|---|---|
| ೧. ದಿಕ್ಕಿಲ್ಲದವರು | ೧ | ೨ |
| ೨. ಬಡವರ್ಗ (ವಾರ್ಷಿಕ ತಲಾ ಆದಾಯ ೮೦೦ ರೂ ಹಾಗೂ ಕಡಿಮೆ) | ೫೨ | ೪೨ |
| ೩. ಮಧ್ಯಮ ವರ್ಗ (ವಾರ್ಷಿಕ ತಲಾ ಆದಾಯ ೩೦೦೦ ರೂ ಹಾಗೂ ಕಡಿಮೆ) | ೪೭ | ೫೩ |
| ೪. ಶ್ರೀಮಂತ ವರ್ಗ (ವಾರ್ಷಿಕ ತಲಾ ಆದಾಯ ೩೦೦೦ ರೂ ಹಾಗೂ ಹೆಚ್ಚು) | ೨ | ೩ |
| | ೧೦೦ | ೧೦೦ |

ಈ ಮೇಲಿನ ಪಟ್ಟಿಯಿಂದ ತಿಳಿಯಬರುವಂತೆ ಗ್ರಾಮೀಣ ಪ್ರದೇಶದಲ್ಲಿ ಶೇಕಡ ೧ ರಷ್ಟು ಹಾಗೂ ನಗರ ಪ್ರದೇಶಗಳಲ್ಲಿ ಶೇಕಡ ೨ ರಷ್ಟು ಒಕ್ಕಲಿಗರು ದಿಕ್ಕಿಲ್ಲದವರು. ಇವರಿಗೆ ಜೀವನಕ್ಕೆ ಆಧಾರವಾಗಿ ಯಾವ ಸಾಧನಗಳೂ ಇಲ್ಲ. ೮೦೦ ರೂ ಹಾಗೂ ಕಡಿಮೆ ತಲಾ ವರಮಾನ ಹೊಂದಿರುವ ಬಡವರ್ಗ ಗ್ರಾಮಗಳಲ್ಲಿ ಶೇಕಡ ೫೦, ಹಾಗೂ ನಗರಗಳಲ್ಲಿ ಶೇಕಡ ೪೨. ಶೇಕಡ ೪೭ ರಷ್ಟು, ಗ್ರಾಮೀಣರೂ ಹಾಗೂ ಶೇಕಡ ೩ ರಷ್ಟು ನಗರ ನಿವಾಸಿಗಳೂ ಶ್ರೀಮಂತ ವರ್ಗದಲ್ಲಿ, ಅಂದರೆ ೩,೦೦೦ ರೂ. ಗಳಿಗೂ ಹೆಚ್ಚು ವಾರ್ಷಿಕ ತಲಾ ಆದಾಯವನ್ನು ಹೊಂದಿರುವ ಗುಂಪಿನಲ್ಲಿ ಸೇರಿದ್ದಾರೆ. ಅಧಿಕ ಆದಾಯವುಳ್ಳ ಒಕ್ಕಲಿಗರ ಸಂಖ್ಯೆ ತೀರ ಕಡಿಮೆ. ಹೆಚ್ಚಿನ ಪ್ರಮಾಣದಲ್ಲಿ ಅವರು ಬಡವರ್ಗಕ್ಕೆ ಸೇರಿರುವುದರಿಂದ, ಒಟ್ಟಾರೆ ಒಕ್ಕಲಿಗರ ಆರ್ಥಿಕ ಪರಿಸ್ಥಿತಿ ಪ್ರಗತಿ ಪರವಾಗಿಲ್ಲ.

೩. ಹಸಿರು ಕ್ರಾಂತಿ ಯಾರಿಗೆ?

ರೈತರ ಸ್ಥಿತಿಯನ್ನು ಸುಧಾರಿಸಲು ಸರ್ಕಾರ ಕೈಗೊಳ್ಳುತ್ತಿರುವ ಯಾವುದೇ ಕ್ರಮಗಳು ಹೆಚ್ಚಿನ ರೈತರ ತಿಳುವಳಿಕೆಗೆ ಸಿಗುತ್ತಿಲ್ಲ. ಸಾಧಾರಣ ಹಾಗೂ ಸಣ್ಣ ರೈತರುಗಳಿಗೆ ಸರ್ಕಾರದ ವ್ಯವಸಾಯ ಸುಧಾರಣಾ ಕ್ರಮಗಳ ಅನುಕೂಲಗಳು

ದೊರೆಯುತ್ತಿಲ್ಲ. ಇಂತಹ ಪ್ರಮುಖ ಕಾರ್ಯಕ್ರಮಗಳಲ್ಲಿ ಒಂದಾದ ಹಸಿರು ಕ್ರಾಂತಿ ಸಹ ಕೇವಲ ದೊಡ್ಡ ದೊಡ್ಡ ರೈತರಿಗೆ, ಜಮೀನುದಾರರಿಗೆ ಹಾಗೂ ನೀರಾವರಿ ಜಮೀನನ್ನು ಹೊಂದಿದ ಪ್ರದೇಶಗಳ ರೈತರಿಗೆ ಮಾತ್ರ ಅನುಕೂಲವಾಗಿದ್ದು, ಇತರ ಹೆಚ್ಚಿನ ಹೈತರು ಈ ಅನುಕೂಲಗಳಿಂದ ವಂಚಿತರಾಗಿದ್ದಾರೆ. ಕೆಲವು ಅಧ್ಯಯನಗಳಿಂದ ತಿಳಿದುಬರುವಂತೆ ಸರ್ಕಾರದ ಕೃಷಿ ಅಭಿವೃದ್ಧಿ ಯೋಜನೆಯು ಶ್ರೀಮಂತ ರೈತರ ಆರ್ಥಿಕ ಮಟ್ಟವನ್ನು ವೃದ್ಧಿಗೊಳಿಸುತ್ತಲೇ ಬಂದಿದೆ. ಬಡ ರೈತರ ಬಡತನವಾದರೋ ವಂಶಪಾರಂಪರ್ಯವಾಗಿ, ಅವರ ಜೀವನಕ್ಕೆ ಬಂದ ಬಳುವಳಿಯೋ ಎಂಬಂತೆ, ಇಂದಿಗೂ ಬಡ ರೈತರು ಬಡವರಾಗಿಯೇ ಉಳಿದಿದ್ದಾರೆ.

೪. ಔದ್ಯೋಗಿಕ ರಚನೆ

ಕರ್ನಾಟಕದ ಒಕ್ಕಲಿಗರು ಪ್ರಮುಖ ಕ್ಷೇತ್ರದಲ್ಲಿ, ಅಂದರೆ ಕೃಷಿ ಕ್ಷೇತ್ರದಲ್ಲಿ, ಉದ್ಯೋಗ ನಿರತರಾಗಿರುವಂತೆ ದ್ವಿತಿಯ ಹಾಗೂ ತೃತಿಯ ಕ್ಷೇತ್ರಗಳಲ್ಲಿ, ಅಂದರೆ ಕೈಗಾರಿಕೆ ಹಾಗೂ ಸೇವಾ ಕ್ಷೇತ್ರಗಳಲ್ಲಿ ಹೆಚ್ಚಿನ ಚಟುವಟಿಕೆಗಳಲ್ಲಿ ಪಾಲ್ಗೊಂಡಿಲ್ಲ. ಸರ್ಕಾರಿ ಕಛೇರಿಗಳಲ್ಲಿಯೂ ಹೆಚ್ಚು ಜನ ನೌಕರಿಯಲ್ಲಿಲ್ಲ. ಅಲ್ಪ ಪ್ರಮಾಣದಲ್ಲಿ ಜನ ಸರ್ಕಾರಿ ನೌಕರಿಯಲ್ಲಿದ್ದರೂ, ಅವರು ಕೇವಲ ಕೆಳದರ್ಜೆಯ ನೌಕರಿಯಲ್ಲಿದ್ದಾರೆಯೇ ಹೊರತು ಉನ್ನತ ದರ್ಜೆಯಲ್ಲಿಲ್ಲ. ಆಡಳಿತಗಾರರ ಸಂಖ್ಯೆ ಅತ್ಯಲ್ಪ. ಈ ಕೆಳಗಿನ ಪಟ್ಟಿಯು ಒಕ್ಕಲಿಗರ ಔದ್ಯೋಗಿಕ ರಚನೆಯನ್ನು ಸೂಚಿಸುತ್ತದೆ.

**೧೯೭೪-೭೫, ೧೯೮೫-೮೬ ರಂತೆ ಕರ್ನಾಟಕದ ಒಕ್ಕಲಿಗರ ಔದ್ಯೋಗಿಕ ರಚನೆ**

| | ಗ್ರಾಮೀಣರು (ಶೇಕಡಾವಾರು) | ಪಟ್ಟಣಿಗರು (ಶೇಕಡಾವಾರು) |
|---|---|---|
| ೧. ಕೃಷಿ ಕಾರ್ಮಿಕರು | ೫.೦೫. | ೧.೯೧ |
| ೨. ಕೃಷಿಯೇತರ ಕಾರ್ಮಿಕರು | ೩.೪೧ | ೭.೩೧ |
| ೩. ಶ್ರಮಜೀವಿಗಳಲ್ಲದ ಕೆಲಸಗಾರರು | ೧.೨೪ | ೫.೭೧ |
| ೪. ಕೃಷಿಕರು | ೨೧.೭೦ | ೬.೪೫ |
| ೫. ಉದ್ಯೋಗಿಗಳು | ೨.೦೬ | ೭.೫೧ |
| ೬. ಅನಿಶ್ಚಿತ ಕಸಬುದಾರರು | ೬೬.೫೪ | ೭೧.೧೧ |
| | ೧೦೦.೦೦ | ೧೦೦.೦೦ |

ಈ ಪಟ್ಟಿಯಲ್ಲಿ ನಮೂದಿಸಿರುವಂತೆ ಒಕ್ಕಲಿಗರು ಅನಿಶ್ಚಿತ ಕಸಬುಗಳಲ್ಲಿ ನಿರತವಾಗಿರುವ ಸಂಖ್ಯೆಯೇ ಹೆಚ್ಚಾಗಿದೆ. ಅವರ ಸಂಖ್ಯೆ ಗ್ರಾಮೀಣ ಪ್ರದೇಶಗಳಲ್ಲಿ ಶೇಕಡ ೬೬.೫೪ ಹಾಗೂ ನಗರ ಪ್ರದೇಶಗಳಲ್ಲಿ ಶೇಕಡ ೭೧.೧೧. ಅಂದರೆ ಈ ಗುಂಪಿನ ಜನರಿಗೆ ಒಂದು ನಿಗದಿಯಾದ ಉದ್ಯೋಗವಾಗಲಿ, ನಿರ್ದಿಷ್ಟವಾದ ಆದಾಯವಾಗಲಿ ಇಲ್ಲ. ಇವರು ತಮಗೊದಗಿದಂತೆ ಎಲ್ಲ ಬಗೆಯ ಕೆಲಸಗಳನ್ನೂ ಮಾಡುತ್ತಾರೆ. ಗ್ರಾಮೀಣ ಪ್ರದೇಶಗಳಲ್ಲಿ ಸುಮಾರು ಶೇ. ೨೨ ರಷ್ಟು ಒಕ್ಕಲಿಗರು ಕೃಷಿನಿರತರಾಗಿ ಬೇಸಾಯಗಾರರಾಗಿದ್ದಾರೆ. ನಗರ ಪ್ರದೇಶಗಳಲ್ಲಿ ಶೇ. ೮ಕ್ಕೂ ಕಡಿಮೆ ಜನ ಮಾತ್ರ ಸರ್ಕಾರಿ ಉದ್ಯಮಗಳಲ್ಲಿ ಅಂದರೆ ಇಂಜನಿಯರು, ಡಾಕ್ಟರು

ಇತ್ಯಾದಿ ಉದ್ಯೋಗಗಳಲ್ಲಿದ್ದಾರೆ. ಅಂತೂ, ವಿದ್ಯಾವಂತ ಉದ್ಯೋಗಿಗಳ ಸಂಖ್ಯೆ ಒಕ್ಕಲಿಗರಲ್ಲಿ ತೀರ ಕಡಿಮೆ.

**೫. ಸುಧಾರಣೆಯ ಕೆಲವು ಮಾರ್ಗಗಳು**

**೧. ಒಕ್ಕಲಿಗರ ಸಂಘದ ಪಾತ್ರ**

ಮುಖ್ಯವಾಗಿ ಒಕ್ಕಲಿಗರ ಆರ್ಥಿಕ ಮತ್ತು ಸಾಮಾಜಿಕ ಸ್ಥಿತಿಗಳನ್ನು ಸುಧಾರಿಸಲು ಅವರ ಸಾಮಾಜಿಕ ಹಾಗೂ ಆರ್ಥಿಕ ಮಟ್ಟವನ್ನು ಹೆಚ್ಚಿಸುವ ಮಾರ್ಗಗಳನ್ನು ಪರಿಶೀಲಿಸಬಹುದಾಗಿದೆ. ಈ ದಿಶೆಯಲ್ಲಿ ಮೊದಲಿಗೆ ಉತ್ತಮ ಹಾಗೂ ಪ್ರಗತಿ ಮಾರ್ಗದಲ್ಲಿ ಇವರನ್ನು ಕೊಂಡೊಯ್ಯಲು ಅಗತ್ಯವಾದ ಸಂಘಟನೆ ಹಾಗೂ ಸಾಂಘಿಕ ಶಕ್ತಿಯನ್ನು ಎಲ್ಲ ಮಟ್ಟಗಳಲ್ಲಿಯೂ ಬಲಗೊಳಿಸಬೇಕು. ಈ ಕಾರ್ಯದಲ್ಲಿ ಒಕ್ಕಲಿಗರ ಸಂಘವು ಪ್ರಮುಖ ಪಾತ್ರವನ್ನು ನಿರ್ವಹಿಸಬೇಕು. ಸಂಘವು ತನ್ನ ಸದಸ್ಯತ್ವವನ್ನು ಹೆಚ್ಚಿಸಿ ಅದರ ವ್ಯಾಪ್ತಿಯನ್ನು ವಿಸ್ತರಿಸಬೇಕು. ಅಗತ್ಯವಾದ ಕಡೆಗಳಲ್ಲಿ ತನ್ನ ಶಾಖೆಗಳನ್ನು ತೆರೆಯಬೇಕು. ಸಂಘವು ಮೊದಲಿನಿಂದಲೂ ಒಕ್ಕಲಿಗರ ಸಾಮಾಜಿಕ ಆರ್ಥಿಕ ಸಮಸ್ಯೆಗಳನ್ನು ಗಣನೆಗೆ ತಂದುಕೊಳ್ಳದೆ, ಜನತೆಯಲ್ಲಿ ಜಾಗೃತಿಯನ್ನುಂಟು ಮಾಡುವ ಯಾವ ಕಾರ್ಯವನ್ನೂ ಪ್ರಾಮಾಣಿಕವಾಗಿ ಮಾಡಿಲ್ಲವೆಂದು ಹೇಳಬೇಕಾಗಿದೆ. ಸಂಘದ ಇಂತಹ ತಟಸ್ಥ ನೀತಿಯು ಇನ್ನಾದರೂ ನಿಲ್ಲಬೇಕು. ಸಂಘವು ತನ್ನ ಸದಸ್ಯರ, ಹಾಗೂ ಮತೀಯರ ಸಾಮಾಜಿಕ ಪ್ರತಿಷ್ಠೆಯನ್ನು ಹೆಚ್ಚಿಸುವಲ್ಲಿ, ಆರ್ಥಿಕ ಸಮಸ್ಯೆಗಳನ್ನು ಪರಿಹರಿಸುವಲ್ಲಿ, ಸಕ್ರಿಯ ಹಾಗೂ ಪ್ರಮುಖ ಪಾತ್ರ ವಹಿಸಬೇಕು. ಈ ಕಾರ್ಯವು ಸಿದ್ಧಿಸಲು ಮತೀಯ ಯುವಕರು ಹೆಚ್ಚಿನ ಸಂಖ್ಯೆಯಲ್ಲಿ ಒಕ್ಕಲಿಗರ ಸಂಘ ಸದಸ್ಯರಾಗಬೇಕು.

**೨. ಜಮೀನಿನ ಮೇಲೆ ಒತ್ತಡ**

ಸರ್ಕಾರವು ಜಮೀನಿನ ಮೇಲೆ ಇರುವ ಒಕ್ಕಲಿಗರ ಒತ್ತಡವನ್ನು ಹಾಗೂ ಅವಲಂಬನೆಯನ್ನು ಕಡಿಮೆ ಮಾಡಬೇಕು. ಅಗತ್ಯ ವಿಚಾರಗಳಲ್ಲಿ ಶಿಕ್ಷಣ ಕೊಡುವುದರ ಮೂಲಕ ಜಮೀನನ್ನು ಅವಲಂಬಿಸಿರುವ ಒಕ್ಕಲಿಗರಲ್ಲಿ ಕೆಲವರನ್ನು ಇತರ ಉದ್ಯೋಗಗಳಿಗೆ ವರ್ಗಾಯಿಸಬೇಕು. ಈ ರೀತಿಯ ಶಿಕ್ಷಣವು ಈಗಾಗಲೇ ಬೃಹದಾಕಾರ ತಾಳಿರುವ ನಿರುದ್ಯೋಗ ಸಮಸ್ಯೆಯನ್ನು ಹೆಚ್ಚಿಸುವಂತಾಗದೆ, ಅದು ನಿಯಮಿತ ಕ್ಷೇತ್ರದಲ್ಲಿ ದುಡಿಯಲು, ಅದರಲ್ಲಿ ತಮ್ಮ ದಕ್ಷತೆಯನ್ನು ಹೆಚ್ಚಿಸಲು ಅತ್ಯಗತ್ಯವಾದ ಶಿಕ್ಷಣವಾಗಿರಬೇಕು. ಗ್ರಾಮೀಣ ಕೈಗಾರಿಕೆಗಳನ್ನು ಸ್ಥಾಪಿಸಲು ಕೃಷಿ ಉತ್ಪನ್ನಗಳ ವಿವಿಧ ಘಟಕಗಳು, ಎಂದರೆ, ರೇಶ್ಮೆ ಕೈಗಾರಿಕೆ, ಕೋಳಿ ಸಾಕಣೆ, ಪಶು ಸಂಗೋಪನೆ ಇತ್ಯಾದಿ ವಿಚಾರಗಳಲ್ಲಿ ಶಿಕ್ಷಣ ನೀಡುವುದರಿಂದ, ಒಕ್ಕಲಿಗರ ಜಮೀನಿನ ಮೇಲಿನ ಒತ್ತಡ ಕಡಿಮೆಯಾಗಿ, ಅವರ ಆದಾಯದ ಮಟ್ಟ ಹೆಚ್ಚುತ್ತದೆ. ಇಂತಹ ಅನೇಕ ಕ್ರಮಗಳನ್ನು ಸರ್ಕಾರ ಇತ್ತೀಚೆಗೆ ಕೈಗೊಂಡಿದೆಯಾದರೂ, ಹೆಚ್ಚು ಜನರಿಗೆ ಇವುಗಳ ಅರಿವೇ ಇಲ್ಲ. ಅಲ್ಲದೆ, ಒಕ್ಕಲಿಗರೂ ಸಹ ಹೆಚ್ಚಿನ ಪ್ರಮಾಣದಲ್ಲಿ ಕೈಗಾರಿಕೆ, ಸಾರಿಗೆ, ವಾಣಿಜ್ಯಗಳಲ್ಲಿ ಉದ್ಯೋಗನಿರತರಾಗುವಂತೆ ಪ್ರೇರೇಪಿಸಬೇಕು. ಒಕ್ಕಲಿಗರು ಪ್ರಮುಖವಾಗಿ ಬೇಸಾಯಗಾರರಾದ್ದರಿಂದ ಬೇಸಾಯ ಉತ್ಪನ್ನಗಳಿಗೆ ನ್ಯಾಯವಾದ ಬೆಲೆ ದೊರೆಯುವಂತೆ, ಹಾಗೂ ಎಲ್ಲ ಬೆಲೆಯೂ ಮಧ್ಯವರ್ತಿಗಳಿಂದ ಹಾಳಾಗದೆ ಬೇಸಾಯಗಾರರ ಕೈಗೆ ನೇರವಾಗಿ ತಲುಪುವಂತೆ ಮಾಡಬೇಕು. ಈ ದಿಶೆಯಲ್ಲಿ ಸರ್ಕಾರದ ಶ್ರಮದ ಜೊತೆಗೆ ಒಕ್ಕಲಿಗರ ಸಂಘವೂ ನೇರವಾಗಿ ತೀವ್ರವಾಗಿ ಶ್ರಮಿಸಬೇಕು. ಇದರಿಂದ ಒಕ್ಕಲಿಗರ ಆರ್ಥಿಕ ಸ್ಥಿತಿ ಸುಧಾರಿಸಬಹುದು.

೩. ಉತ್ತಮ ಶಿಕ್ಷಣ

ಸರ್ಕಾರವು ಒಕ್ಕಲಿಗರ ಮಕ್ಕಳಿಗೆ ಉತ್ತಮ ಶಿಕ್ಷಣ ದೊರೆಯುವಂತೆ ಎಲ್ಲ ಏರ್ಪಾಡುಗಳನ್ನೂ ಮಾಡಬೇಕು. ಪ್ರಸ್ತುತ ಇರುವ ಸೌಲಭ್ಯಗಳು ಅಗತ್ಯಕ್ಕಿಂತ ತೀರ ಕಡಿಮೆ. ಅನೇಕ ವೇಳೆ ಪ್ರತಿಭಾವಂತ ಮಕ್ಕಳೂ ಸಹ ಶಿಕ್ಷಣ ಸೌಲಭ್ಯಗಳ ಹಾಗೂ ವಿದ್ಯಾರ್ಥಿವೇತನಗಳ ಅಭಾವದಿಂದಾಗಿ ತಮ್ಮ ವ್ಯಾಸಂಗವನ್ನೇ ಬಿಟ್ಟುಕೊಡಬೇಕಾಗಿದೆ. ಈ ದಿಶೆಯಲ್ಲಿ ಒಕ್ಕಲಿಗರ ಸಂಘದಂತಹ ಸಂಘ ಸಂಸ್ಥೆಗಳು ಹೆಚ್ಚು ಕೆಲಸ ಮಾಡಬೇಕಾಗಿದೆ. ಎಲ್ಲೆಲ್ಲಿ ಶಿಕ್ಷಣ ಸೌಲಭ್ಯಗಳಿಲ್ಲವೋ ಅಂತಹ ಪ್ರದೇಶಗಳಲ್ಲಿ ಹೆಚ್ಚು ಹೆಚ್ಚು ಶಾಲಾ ಕಾಲೇಜುಗಳನ್ನು ತೆರೆದು, ವಸತಿ ಗೃಹಗಳನ್ನು ನಿರ್ಮಿಸಿ, ವಿದ್ಯಾರ್ಥಿವೇತನಗಳನ್ನು ಒದಗಿಸಬೇಕು. ಮಕ್ಕಳ ಮನೋವಿಕಾಸಕ್ಕೆ ಅವರ ದೈಹಿಕ ಹಾಗೂ ಮಾನಸಿಕ ಬೆಳವಣಿಗೆಗೆ ಹಾಗೂ ಉತ್ತಮ ಸಮಾಜ ನಿರ್ಮಾಣಕ್ಕೆ ನೆರವಾಗುವ ಎಲ್ಲ ರೀತಿಯ ಚಟುವಟಿಕೆಗಳಿಗೆ ಶಾಲಾ ಕಾಲೇಜುಗಳಲ್ಲಿ ಆಸ್ಪದ ಕೊಡಬೇಕು. ಇತ್ತೀಚೆಗೆ ಒಕ್ಕಲಿಗರ ಸಂಘವು ತಾಂತ್ರಿಕ (Engineering) ಹಾಗೂ ವೈದ್ಯಕೀಯ ಕಾಲೇಜುಗಳನ್ನು ತೆರೆಯಲು ನಿರ್ಧರಿಸುವುದು ಶ್ಲಾಘನೀಯ. ಶಿಕ್ಷಣ ಕ್ಷೇತ್ರದಲ್ಲಿ ಇಂತಹ ಕಾರ್ಯಗಳು ಇನ್ನೂ ಹೆಚ್ಚಬೇಕು.

೪. ಕಟ್ಟೆಮನೆ

ಒಕ್ಕಲಿಗರಿಗೆ ನ್ಯಾಯ ಒದಗಿಸಲು ಈ ಸಮುದಾಯದ ಮುಖ್ಯಸ್ಥರನ್ನು ಒಳಗೊಂಡಂತೆ ''ನ್ಯಾಯ-ನೆರವು-ಕಟ್ಟೆಮನೆ'' ಯನ್ನು ಪ್ರಾರಂಭಿಸಬೇಕು. ಅನೇಕ ಬಾರಿ ಈ ಜನತೆಗೆ ಅನೇಕ ವಿಚಾರಗಳಲ್ಲಿ ಸರಿಯಾದ ನ್ಯಾಯ ದೊರಕದೆ, ಸಾಮಾಜಿಕ ಜೀವನದಲ್ಲಿ ನೆಮ್ಮದಿಯಿಲ್ಲವಾಗಿದೆ. ನ್ಯಾಯಬದ್ಧ ರೀತಿ, ನೀತಿ, ನಿಯಮಗಳನ್ನು ತಿಳಿಸುವ ವಿವಿಧ ಶಾಸನಗಳು ಸರಿಯಾಗಿ ಜಾರಿಗೆ ಬಂದಲ್ಲಿ, ಅವು ಒಕ್ಕಲಿಗರ ಸಾಮಾಜಿಕ ಹಾಗೂ ಆರ್ಥಿಕ ಜೀವನದ ಮೇಲೆ ಸಮಾಧಾನಕರ ಪರಿಣಾಮ ಬೀರುತ್ತವೆ. ಆದರೆ ಈ ಶಾಸನಗಳು ಕೆಲವು ಬಾರಿ ಒಕ್ಕಲಿಗರ ಮೇಲೆ ಪ್ರತಿಕೂಲವಾಗಿಯೂ ಪರಿಣಾಮ ಬೀರಬಹುದು. ಇಂತಹ ಸಂದರ್ಭದಲ್ಲಿ ಕಟ್ಟೆಮನೆಯವರು ಶಾಸನಗಳನ್ನು ಆಳವಾಗಿ ಅಭ್ಯಸಿಸಿ, ಅವುಗಳ ಮೌಲ್ಯ ನಿಷ್ಕರ್ಷೆಮಾಡಿ, ರೈತರ ಹಾಗೂ ಇತರರ ಮೇಲೆ ದುಷ್ಪರಿಣಾಮ ಬೀರದಂತೆ ನೋಡಿಕೊಳ್ಳಬೇಕು.

೫. ಧನ ಸಹಾಯ

ಯಾವುದೇ ಆರ್ಥಿಕ ಚಟುವಟಿಕೆಗೂ ಹಣವು ಜೀವನದ ಉಸಿರಿದ್ದಂತೆ. ಒಕ್ಕಲಿಗ ಸಮುದಾಯವು ಈ ವಿಚಾರದಲ್ಲಿ ಅರಿವಿನಕೊರತೆ ಅನುಭವಿಸುತ್ತಿದೆ. ಈ ಮತೀಯರಲ್ಲಿ ಧನ ಸಹಾಯ ಮಾಡುವ ಸಹಕಾರ ಸಂಸ್ಥೆಗಳ ಅಭಾವವಿದೆ. ಕಡಿಮೆ ಬಡ್ಡಿ ದರದಲ್ಲಿ ಅವಶ್ಯಕ ಪ್ರಮಾಣದಲ್ಲಿ ಅವರಿಗೆ ಬೇಕಾದ ಆರ್ಥಿಕ ನೆರವುಗಳನ್ನು ನೀಡಿದರೆ ಆಗ ಆರ್ಥಿಕ ಚಟುವಟಿಕೆಗಳಲ್ಲಿ ಆಗ ತೀವ್ರತೆ ಕಂಡು ಬರುತ್ತದೆ. ಅವರ ಸ್ಥಿತಿ ಸುಧಾರಿಸುತ್ತದೆ. ಕೃಷಿ ಸುಧಾರಣೆಗೆ, ನಿವೇಶನಗಳಿಗೆ, ವಾಣಿಜ್ಯ ಮತ್ತು ಸಾರಿಗೆಗಳ ಅಭಿವೃದ್ಧಿ ಹಾಗೂ ಮದುವೆ ಮುಂತಾದ ಧಾರ್ಮಿಕ ಸಮಾರಂಭಗಳನ್ನು ನೆರವೇರಿಸುವುದಕ್ಕೆ ಇವರಿಗೆ ಹಣದ ಅಗತ್ಯವಿದೆ. ಆದರೆ ಈ ವಿಚಾರದಲ್ಲಿ ಅವರು ಬಹಳ ಹಿಂದುಳಿದಿದ್ದಾರೆ. ಇತರ ಅನೇಕ ಮತೀಯರು ತಮ್ಮದೇ ಆದ ಸಂಘ ಸಂಸ್ಥೆಗಳು, ಬ್ಯಾಂಕುಗಳು, ಹಣಕಾಸು ಸಂಸ್ಥೆಗಳನ್ನು ಹೊಂದಿ, ತಮ್ಮ ಮತೀಯರಿಗೆ ಧನ ಸಹಾಯ ಮಾಡುತ್ತಿದ್ದಾರೆ. ಈ ಸಂಸ್ಥೆಗಳು ನೇರವಾಗಿ ತಮ್ಮ

ಮತೀಯರ ಏಳಿಗೆಗೆ ನೆರವಾಗುವುದಲ್ಲದೆ, ಇತರರಿಗೂ ನೆರವು ನೀಡುತ್ತಿವೆ. ಉದ್ಯೋಗಾವಕಾಶಗಳನ್ನೂ ಒದಗಿಸುತ್ತಿವೆ. ಒಟ್ಟಾರೆ ಇವು ತಮ್ಮ ಮತೀಯರಿಗೆ ಪ್ರಮುಖ ಧನಮೂಲಗಳಾಗಿ ಅವರ ಆರ್ಥಿಕ ಚಟುವಟಿಕೆಗಳಿಗೆ ನೆರವಾಗಿರುವುದಲ್ಲದೆ, ಪರೋಕ್ಷವಾಗಿ ದೇಶದ ಅಗತ್ಯಗಳನ್ನೂ ಪೂರೈಸುತ್ತಿವೆ. ದುರದೃಷ್ಟವಶಾತ್ ಈ ರೀತಿಯ ಧನ ಸಹಕಾರಿ ಸಂಸ್ಥೆಗಳು ಒಕ್ಕಲಿಗರಲ್ಲಿ ಸ್ಥಾಪಿತವಾಗಿಲ್ಲ. ಇನ್ನು ಮುಂದಾದರೂ ಒಕ್ಕಲಿಗರ ಸಂಘವು ಈ ದಿಶೆಯಲ್ಲಿ ಸೂಕ್ತ ಕ್ರಮಗಳನ್ನು ಕೈಗೊಂಡು, ಹಣದ ಅಭಿವೃದ್ಧಿಗೆ ನೆರವಾಗುವ ಎಲ್ಲ ಕಾರ್ಯಗಳನ್ನೂ ನಡೆಸಲೆಂದು ಆಶಿಸೋಣ.

**೭.೩. ಒಕ್ಕಲಿಗರ ವ್ಯವಸಾಯ ಸಮಸ್ಯೆಗಳು**

ಭಾರತೀಯ ಸಂಸ್ಕೃತಿ ಪ್ರಪಂಚದ ಅತ್ಯಂತ ಹಳೆಯ ಸಂಸ್ಕೃತಿಗಳಲ್ಲೊಂದು. ವೈವಿಧ್ಯತೆ ಮತ್ತು ವಿಶಾಲತೆಗಳೇ ಈ ಮಹಾನ್ ಸಂಸ್ಕೃತಿಯ ತಳಹದಿ. ಇಂಥ ಉಜ್ವಲ ಸಂಸ್ಕೃತಿಯ ಉತ್ಕರ್ಷಣೆಯಲ್ಲಿ ಕೃಷಿಯ ಪಾತ್ರ ಗಹನ. ಕೃಷಿಯನ್ನು ಆಧರಿಸಿ ಅರಳಿತು ಭಾರತೀಯ ಸಂಸ್ಕೃತಿ. ಕೃಷಿ ಯಾವಾಗ ಪ್ರಾರಂಭವಾಯಿತು ಎನ್ನುವುದನ್ನು ಗುರುತಿಸಲು ಕಷ್ಟವಾದರೂ, ಮಾನವ ಎಂದು ಒಂದೆಡೆಯಲ್ಲಿ ತಳವೂರಿ ನಿಂತು, ತಾನು ಕಾಡಿನಲ್ಲಿ ಶೇಖರಿಸಿದ ಬೀಜಗಳನ್ನು ಹಸಿ ನೆಲದ ಮೇಲೆ ಚೆಲ್ಲಿ, ಅಂಥವೇ ಬೀಜಗಳನ್ನು ಸ್ವಲ್ಪ ಕಾಲದ ನಂತರ ಪಡೆದನೋ, ಕಾಡುಪಶುಗಳನ್ನು ಪಳಗಿಸಿ ಎಂದು ಅವುಗಳ ಹಾಲನ್ನು ಕುಡಿದನೋ, ಕ್ರೂರಪ್ರಾಣಿಗಳನ್ನು ದುಡಿಮೆಗೆ ಎಂದು ಪಳಗಿಸಿಕೊಂಡನೋ ಅಂದೇ ವ್ಯವಸಾಯಕ್ಕೆ ಅಂಕುರಾರ್ಪಣೆಯಾಯಿತು. ಮಾನವನ ಬೌದ್ಧಿಕ ವಿಕಸನ ಹಾಗೂ ಕೃಷಿಯ ವಿಕಸನಗಳು ಅವಿಭಾಜ್ಯ ಅಂಗಗಳಾಗಿ ಮಿಳಿತವಾಗಿರುವುದನ್ನು ನಾವು ಗುರುತಿಸಬಹುದು. ಇವುಗಳಲ್ಲಿ ಒಂದಿಲ್ಲದೆ ಮತ್ತೊಂದು ಇರಲಾರದು.

ಒಕ್ಕಲಿಗರ ವ್ಯವಸಾಯ ಮುನ್ನಡೆಗಳನ್ನು ಕುರಿತು ಚಿಂತಿಸುವಾಗ ಕೇವಲ ಒಂದು ಸೀಮಿತ ಪ್ರದೇಶಕ್ಕಾಗಲಿ, ಒಂದು ಕೋಮಿಗಾಗಲಿ ಅಥವಾ ರಾಜ್ಯಕ್ಕಾಗಲಿ ಅನ್ವಯಿಸಿದೆ, ಒಂದು ಸಾರ್ವತ್ರಿಕ ವಿಚಾರಧಾರೆ, ಅವಲೋಕನ ಹಾಗೂ ಸಮೀಕ್ಷೆಗಳಿಗೆ ಅನ್ವಯಿಸುವುದು ಅಗತ್ಯ ಮತ್ತು ಅನಿವಾರ್ಯ. ಏಕೆಂದರೆ, ಸಾಮಾನ್ಯವಾಗಿ ಬೇಸಾಯದಲ್ಲಿ ತೊಡಗುವ ಜನರು ಕೇವಲ ಕೋಮು ಅಥವಾ ಪಂಗಡದಿಂದ ಗುರುತಿಸಬಹದಾದ ಒಕ್ಕಲಿಗರು ಎಂಬ ಅರ್ಥವಿಲ್ಲದಿರುವುದೇ ಅದಕ್ಕೆ ಕಾರಣ. ಹಾಗೆಯೇ ಮೇಲುನೋಟಕ್ಕೆ ಈ ಸಮಸ್ಯೆಯನ್ನು ಒಳಪಡಿಸಿದಾಗ, ಅಲ್ಲಿ ನಮಗೆ ಗೋಚರವಾಗುವ ಅಂಶ ಹಲವಾರು ಪಂಗಡಗಳಲ್ಲಿರುವ ಜನರು ವ್ಯವಸಾಯದಲ್ಲಿ ಭಾಗಿಗಳಾಗಿರುವುದು. ಈ ಬಗ್ಗೆ ತೀಕ್ಷ್ಣವಾಗಿ ಚಿಂತನ ಹರಿಸಿದಾಗ ಒಂದು ಬೃಹತ್ ಜನಾಂಗವೇ ಈ ಸಮಸ್ಯೆಯನ್ನು ಎದುರಿಸಬೇಕಾದ ಪರಿಸ್ಥಿತಿ ಬಂದೊದಗಿದೆ. ಆದ ಕಾರಣ ಇದರ ಪರಿಮಿತಿ ಕರ್ನಾಟಕವೆಂದಾಗಲಿ, ತಮಿಳುನಾಡೆಂದಾಗಲಿ, ರಾಜಸ್ಥಾನ ಅಥವಾ ಬಂಗಾಳವೆಂದಾಗಲಿ ಅಲ್ಲ, ಇಡೀ ಭರತಖಂಡದಲ್ಲೇ ವ್ಯವಸಾಯದ ಉದ್ಯಮದಲ್ಲಿ ಪಾಲ್ಗೊಂಡಿರುವ ಜನರ ಸಮಸ್ಯೆ ಇದು.

ಇದರಿಂದಾಗಿ ನಾವು ಒಕ್ಕಲಿಗರ ಸಮಸ್ಯೆಯನ್ನು ವಿಶ್ಲೇಷಿಸುವಾಗ ಬಹಳ ಎಚ್ಚರಿಕೆಯಿಂದ ಜವಾಬ್ದಾರಿಯಿಂದ ಮಾತಾಡಬೇಕಾದ ಸಂದರ್ಭ ಸನ್ನಿವೇಶ ಉಂಟಾಗಿದೆ. ಇದಕ್ಕೆ ಸಾಕಷ್ಟು ಕಾರಣವೂ ಇದೆ. ಭರತಖಂಡ ಬದುಕಿರುವುದು ಶೇಕಡಾ ೮೦ ರಷ್ಟು ಇರುವ ಹಳ್ಳಿಗಳಿಂದ ಎಂಬ ಘೋಷಣೆ ಹೇಗೆ 'ವಿಪರ್ಯಾಸ'ದ ಮಾತಾಗಿದೆ ಎಂಬುದನ್ನು

ಗಮನಿಸಬೇಕು. ಏಕೆಂದರೆ ಬಹುತೇಕ ಬೇಸಾಯಗಾರರ ಬವಣೆ, ದಾರಿದ್ರ್ಯ, ಅಜ್ಞಾನ, ಅವಿದ್ಯೆ ಇವೆಲ್ಲ ಶಾಮೀಲಾಗಿ ಆಧುನಿಕ ಜಗತ್ತಿನಲ್ಲಿ ನಮ್ಮ ದೇಶದ ಕೃಷಿಗಾರರು ಯಾವುದೋ ಮಧ್ಯಮಯುಗದ ನಾಡಿನಲ್ಲಿ ಬದುಕಿದ್ದಾರೋ ಎನ್ನುವಷ್ಟು ಭ್ರಮೆ, ಜಿಗುಪ್ಸೆ ಇದರಿಂದ ಉಂಟಾಗಿದೆ. ವ್ಯವಸಾಯಗಾರರ ಸಮಸ್ಯೆಗಳನ್ನು ಪಟ್ಟಿ ಮಾಡುತ್ತಾ ಹೋದರೆ, ನೂರೆಂಟು! ಸಮಸ್ಯೆಗಳನ್ನು ವಿಶ್ಲೇಷಿಸಿ ಪರಿಹಾರ ಹುಡುಕಲು ಹೊರಟರೆ, ನಮಗೆ ಸಿಗುವುದು ಬೆಳಕಲ್ಲ, ಕತ್ತಲೆಯ ಪರಿಧಿ! ಇದರಿಂದಾಗಿ ಎತಂಹ ಚಕ್ರವ್ಯೂಹದಲ್ಲಿ ನಮ್ಮ ರೈತ ಜನಾಂಗ ಸಿಕ್ಕಿ ನರಳುವಂತಾಗಿದೆ ಎಂಬುದನ್ನು ಮೊಟ್ಟ ಮೊದಲು ನಾವು ಮನಗಾಣಬೇಕು. ಇಲ್ಲವಾದರೆ ಸಂಪ್ರದಾಯಿಕ ಚರ್ಚೆ, ಉಪನ್ಯಾಸ, ವಿಸ್ತರಣ ಯೋಜನೆಗಳ ಗುಂಪಿಗೆ ಯಾವ ಅರ್ಥವೂ ಸಿಗದಂತಾಗುತ್ತದೆ. ಈ ಪರಿಸರದ ಪರಿಜ್ಞಾನವನ್ನು ಆಳವಾಗಿ ಅಧ್ಯಯನ ಮಾಡಿ, ಜನನಾಡಿಯನ್ನು ಹಿಡಿದು ಪರೀಕ್ಷಿಸಿ, ಅದರ ಒಳಿತು ಕೆಡಕುಗಳ ಆತ್ಮಾವಲೋಕನ ಎಲ್ಲಕ್ಕಿಂತ ಮುಂಚೆ ಮುಖ್ಯವಾಗಿ ನಡೆಯಬೇಕಾದ ಕಾರ್ಯ. ಈ ದಿಶೆಯಲ್ಲಿ ಚಾರಿತ್ರಿಕವಾಗಿ, ಭೌಗೋಳಿಕವಾಗಿ, ರೈತ ಜನಾಂಗದ ಸಮಸ್ಯೆಗಳ ಸ್ಥೂಲ ವಿಮರ್ಶೆಯ ಕಡೆ ದೃಷ್ಟಿ ಹರಿಸಿ, ಅನಂತರ ನಿಜವಾಗಿ ವ್ಯಾಪಿಸಿರುವ ಸಮಸ್ಯೆಗಳ ಬಗ್ಗೆ ಒಂದು ಪರಿಚಯ, ಸೂಚನೆ, ಪರಿಹಾರ ಕಾಣಲು ಒಂದು ಪ್ರಯತ್ನ ಸಂಶೋಧನೆಯಿಂದ ಕಂಡುಕೊಳ್ಳಬಹುದಾಗಿದೆ.

**ದಶಕಗಳಲ್ಲಿನ ಬೆಳವಣಿಗೆ**

**೧. ಕೃಷಿ ಉತ್ಪನ್ನ**

ಇತ್ತೀಚಿನ ವರ್ಷಗಳಲ್ಲಿ ಪ್ರಪಂಚದಾದ್ಯಂತ, ಅದರಲ್ಲಿಯೂ ವಿಶೇಷವಾಗಿ ಭಾರತದಲ್ಲಿ, ಕೃಷಿ ಉತ್ಪನ್ನವನ್ನು ಹೆಚ್ಚಿಸುವುದಕ್ಕಿಂತಲೂ, ಕೆಲವು ಸಮಸ್ಯೆಗಳನ್ನು ಕುರಿತು ಹೆಚ್ಚು ಹೆಚ್ಚಾಗಿ ಚರ್ಚಿಸಲಾಗುತ್ತಿದೆ. ಪ್ರಪಂಚದಾದ್ಯಂತ ನಡೆಸಲಾಗುತ್ತಿರುವ ಆಶ್ಚರ್ಯಕರ ಸಂಶೋಧನೆಯ ಫಲವಾಗಿ ಅನೇಕ ಉನ್ನತ ತಂತ್ರಗಳು ಅಭಿವೃದ್ಧಿ ಹೊಂದಿದ್ದರೂ ಕೂಡ, ಈ ಸಮಸ್ಯೆ ಅದ್ಭುತವಾದ ಒಂದು ಸವಾಲಾಗಿ ಬೆಳೆಯುತ್ತಿದೆ. ಒಟ್ಟಿನಲ್ಲಿ ಕೃಷಿ ಉತ್ಪನ್ನವನ್ನು ಹೆಚ್ಚಿಸಬೇಕೆಂಬುದು ಒಂದು ಶಾಶ್ವತ ಸವಾಲಾಗಿದೆ. ಅಗತ್ಯ ಉತ್ಪಾದನೆಯ ಮಟ್ಟವನ್ನು ಪ್ರತಿ ವರ್ಷ ಸಾದಿಸಬೇಕಾಗಿದೆ. ಎಲ್ಲೋ ಒಮ್ಮೊಮ್ಮೆ ಸ್ವಾವಲಂಬನೆಯ ಕಾಮನಬಿಲ್ಲು ದಿಗಂತದಲ್ಲಿ ಕಂಡು ಬಂದರೂ, ಇನ್ನೂ ಕ್ಷಾಮವೆಂಬ ದುಃಸ್ವಪ್ನದಿಂದ ನಾವು ಪಾರಾಗಿಲ್ಲ.

ಸುಧಾರಿತ ಕ್ರಮಗಳನ್ನು ಅನುಸರಿಸಲು ಅಗತ್ಯವಿರುವ ಒಳವರಿ (Inputs) ಇತ್ಯಾದಿಗಳ ಬಗೆಗಿನ ತಾಂತ್ರಿಕ ತಿಳಿವಳಿಕೆ ರೈತನಿಗೆ ದೊರಕುವಂತಾದಾಗ ಮಾತ್ರ ಕೃಷಿ ಉತ್ಪಾದನೆಯನ್ನು ಹೆಚ್ಚಿಸುವುದು ಸಾಧ್ಯವಾದೀತು. ಮುಖ್ಯವಾದ ಒಳವರಿಗಳೆಂದರೆ ಬೀಜ, ಸೀಮೆಗೊಬ್ಬರ, ರಾಸಾಯನಿಕಗಳು, ಯಂತ್ರೋಪಕರಣಗಳು ಇತ್ಯಾದಿ. ಭಾರತದಲ್ಲಿನ ರೈತರು ಉತ್ತಮ ಬೀಜದ ಮಹತ್ವವನ್ನು ಅರಿತಿಲ್ಲವೇನೆಂದಲ್ಲ. ಆದರೆ ಅವರು ಇದರ ಉಪಯೋಗ ಪಡೆದುಕೊಳ್ಳುವಂತಾಗಲು ತಕ್ಕ ಸಂಘಗಳಿರಬೇಕಾಗುತ್ತದೆ. ಪ್ರತಿ ವರ್ಷವೂ ಶೇಕಡ.೮೦ರಷ್ಟು ಭಾಗ ಪ್ರದೇಶದಲ್ಲಿ ಉತ್ತಮ ದರ್ಜೆಯ ಬೀಜ ಬಿತ್ತಲು ಸುಮಾರು ೨.೫ ದಶಲಕ್ಷ ಹೆಕ್ಟೇರುಗಳಷ್ಟು ಜಮೀನು ಬೀಜ ಬೆಳೆಗೆ ಬೇಕಾಗುತ್ತದೆಂದು ಅಂದಾಜುಮಾಡಿದ್ದಾರೆ. ರೈತರಿಗೆ ಬೇಕಾದ ೨.೫ ದಶಲಕ್ಷ ಟನ್ನು ಬೀಜಗಳನ್ನು ಉತ್ಪಾದಿಸಿ, ಅದು ಸಕಾಲದಲ್ಲಿ ರೈತನಿಗೆ ಮುಟ್ಟುವಂತೆ ಮಾಡುವುದು ಅತ್ಯಂತ ಪ್ರಯಾಸಕರ ಕೆಲಸ. ಇದಕ್ಕಾಗಿ ಸುಮಾರು ೩೦,೦೦೦ ವಿತರಣಾ ಕೇಂದ್ರಗಳನ್ನು ನೆಲೆಗೊಳಿಸಬೇಕಾಗುತ್ತದೆ. ಲಕ್ಷಾನುಗಟ್ಟಲೆ ಸಣ್ಣ ರೈತರನ್ನು

ಬೀಜೋತ್ಪಾದನೆಯಲ್ಲಿ ಒಳಪಡಿಸಬೇಕಾಗುತ್ತದೆ. ಬೀಜವು ರೈತರು ತಾವೇ ಉತ್ಪತ್ತಿ ಮಾಡಿಕೊಳ್ಳಬೇಕಾದ ಒಂದು ಒಳವರಿ. ಎಷ್ಟು ಪ್ರಮಾಣದ ಬೀಜವನ್ನು ಬೇಕಾದರೂ ರೈತರು ಉತ್ಪಾದಿಸಬಲ್ಲರು. ಅವರು ಆ ತಂತ್ರವನ್ನು ಕಲಿತಿದ್ದಾರೆ. ಆದರೆ ಬೀಜಗಳಿಗೆ ಸಂಸ್ಕರಣ, ಸಂಗ್ರಹಣೆ ಮತ್ತು ಮಾರುಕಟ್ಟೆ ಇತ್ಯಾದಿಗಳ ಸಂಘಟನೆಗಾಗಿ ಒಂದು ನಿಯೋಗದ ಅವಶ್ಯಕತೆ ಇದೆ. ಬೀಜೋತ್ಪಾದನೆಯ ಕಾರ್ಯಕ್ರಮಗಳ ಮೂಲಕ ಗ್ರಾಮೀಣ ಪ್ರದೇಶಗಳಲ್ಲಿ ಉದ್ಯೋಗಾವಕಾಶಗಳನ್ನು ಕಲ್ಪಿಸಿಕೊಡಲೂ ಸಾಧ್ಯವಿದೆ. ಹೈಬ್ರಿಡ್ ಧಾನ್ಯ ಮತ್ತು ಇತರ ಬೆಳವಣಿಗೆಗೆ ಸಂಬಂಧಿಸಿದಂತೆ ಸ್ವಲ್ಪಮಟ್ಟಿನ ಪ್ರಗತಿಯನ್ನು ಸಾಧಿಸಲಾಗಿದೆ. ಆದರೆ ಇತರ ಬೆಳೆಗಳ, ಅದರಲ್ಲೂ ವಿಶೇಷವಾಗಿ ಮೇವು ಬೆಳೆಗಳ, ಬೀಜೋತ್ಪಾದನೆಗೆ ಸಂಬಂಧಿಸಿದಂತೆ ಮಾಡಬೇಕಾದದ್ದು ಇನ್ನೂ ಬೇಕಾದಷ್ಟಿದೆ. ನಮಗೆ ಬೇಕಾಗಿರುವುದಕ್ಕೂ, ನಾವು ಸದ್ಯದಲ್ಲಿ ಉತ್ಪತ್ತಿ ಮಾಡುತ್ತಿರುವುದಕ್ಕೂ ನಡುವೆ ಸಾಕಷ್ಟು ಅಂತರವಿದೆ. ಬೀಜೋತ್ಪಾದನೆಯನ್ನು ಹೆಚ್ಚುಮಾಡಿ ಬೀಜವನ್ನು ರಫ್ತು ಮಾಡುವುದು ಸಾಧ್ಯವಿದೆ. ಇದಕ್ಕಾಗಿ ಸಂಘಟನೆಗಳು ಅವಶ್ಯಕ.

ವಿವಿಧ ಬೆಳೆಗಳ ಉತ್ಪಾದನೆಯನ್ನು ಹೆಚ್ಚಿಸಲು ಬೇಕಾದ ಒಳವರಿಗಳಲ್ಲಿ ಸೀಮೆಗೊಬ್ಬರಗಳು ಹಾಗೂ ರಾಸಾಯನಿಕಗಳು ಪ್ರಮುಖ ಪಾತ್ರ ವಹಿಸುತ್ತವೆ. ಈಗ ಸುಮಾರು ೨.೫ ದಶಲಕ್ಷ ಟನ್ನುಗಳಷ್ಟು ಸೀಮೆಗೊಬ್ಬರವನ್ನು ಬಳಸಲಾಗುತ್ತಿದೆ. ಅಲ್ಲದೆ ವಿವಿಧ ಪೀಡೆಗಳು, ರೋಗಗಳು ಮತ್ತು ಕಳೆಗಳನ್ನು ನಿಯಂತ್ರಿಸುವ ಸಲುವಾಗಿ ಸುಮಾರು ೩೦,೦೦೦ ಟನ್ನುಗಳಷ್ಟು ರಾಸಾಯನಿಕಗಳನ್ನು ಬಳಸಲಾಗುತ್ತಿದೆ. ಈ ಬಳಕೆ ಏನೇನೂ ಸಾಲದು. ರೈತರು ಹೆಚ್ಚು ಹೆಚ್ಚು ಗೊಬ್ಬರಗಳನ್ನೂ, ರಾಸಾಯನಿಕಗಳನ್ನೂ ಬಳಸುವಂತಾಗಬೇಕು. ಅದಕ್ಕನುಗುಣವಾಗಿ ಅಗತ್ಯವಾದ ಗೊಬ್ಬರ ಹಾಗೂ ರಾಸಾಯನಿಕಗಳನ್ನು ಉತ್ಪಾದಿಸಿ ರೈತನಿಗೆ ವಿತರಣೆ ಮಾಡಬೇಕು. ಇವುಗಳ ಸಂಗ್ರಹಣೆ ಹಾಗೂ ವಿತರಣೆಗಾಗಿ, ವ್ಯವಸ್ಥೆಗಳನ್ನು ಮಾಡಬೇಕು. ಇದೂ ಸಹ ಅಷ್ಟು ಸುಲಭವಾದ ಕೆಲಸವೇನಲ್ಲ.

ಫಾರಮ್ ಶಕ್ತಿ (Farm Power) ಮತ್ತು ಸುಧಾರಿತ ಉಪಕರಣಗಳು ಇವು ಇತರ ಮುಖ್ಯ ಒಳವರಿಗಳು. ಹೇರಳವಾದ ಪ್ರಾಣಿಗಳು ಹಾಗೂ ಮಾನವ ಶಕ್ತಿಯಿಂದಾಗಿ, ಶಕ್ತಿಯ ಒಳವರಿಯನ್ನು (Power Input) ಹೆಚ್ಚಿಸಲು ಅಂಥ ಅಗತ್ಯವಿರುವುದಿಲ್ಲವೆಂದು ಭಾವಿಸಲಾಗಿದೆ. ಹೆಚ್ಚಿನ ಪ್ರಮಾಣದಲ್ಲಿ ಯಾಂತ್ರಿಕ ಶಕ್ತಿಯನ್ನು ಬಳಸುವುದರಿಂದ ರಾಷ್ಟ್ರದಲ್ಲಿ ನಿರುದ್ಯೋಗ ಸಮಸ್ಯೆ ಹೆಚ್ಚಾಗುತ್ತದೆ ಎಂಬ ತಿಳಿವಳಿಕೆ ಇದೆ. ಆದರೆ ಇಷ್ಟೆಲ್ಲ ಎತ್ತುಗಳಿದ್ದರೂ ದೇಶದಲ್ಲಿನ ಬಹಳಷ್ಟು ಭಾಗಗಳಲ್ಲಿ ಉತ್ತಮವಾದ ಬೇಸಾಯಕ್ಕೆ ಎತ್ತುಗಳ ಶಕ್ತಿಯ ಕೊರತೆಯಿಂದಾಗಿ ಅಡ್ಡಿಯುಂಟಾಗಿರುವುದು ಬಹಳ ಹಿಂದೆಯೇ ತಿಳಿದುಬಂದಿದೆ. ದೇಶದ ಬಹಳಷ್ಟು ಭಾಗಗಳಲ್ಲಿ ಒಂದು ಹೆಕ್ಟೇರಿಗೆ ಅಗತ್ಯವಿರುವ ೦.೫-೦.೮ ಅಶ್ವಶಕ್ತಿಗೆ ಬದಲಾಗಿ ೦.೧-೦.೨ ಅಶ್ವಶಕ್ತಿಯಷ್ಟು ಕಡಿಮೆ ದೊರಕುತ್ತಿದೆ ಎಂಬುದನ್ನು ಅಧ್ಯಯನಗಳು ತೋರಿಸಿವೆ. ಆದ್ದರಿಂದ ನಮಗೆ ಅಗತ್ಯವಿರುವ ಹೆಚ್ಚು ಶಕ್ತಿಯನ್ನು ಆಯ್ದರೀತಿಯಲ್ಲಿ ಒದಗಿಸಬೇಕಾಗಿದೆ. ನೀರಾವರಿ ಉದ್ದೇಶಕ್ಕಾಗಿ ನೀರನ್ನು ಎತ್ತುವ ಸಲುವಾಗಿ ೩೦-೪೦ ದಶಲಕ್ಷ ಅಶ್ವಶಕ್ತಿಗಳು ಬೇಕಾಗುತ್ತವೆಂಬುದನ್ನು ಅಂದಾಜುಮಾಡಲಾಗಿದೆ. ಇನ್ನು ನಾಲ್ಕಾರು ವರ್ಷಗಳಲ್ಲಿ ಟ್ರಾಕ್ಟರುಗಳು ಹಾಗೂ ಪವರ್ ಟಿಲ್ಲರ್‌ಗಳ ಮೂಲಕ ೧೦-೧೫ ದಶಲಕ್ಷ ಅಶ್ವಶಕ್ತಿಗಳು ಬೇಕಾಗುತ್ತವೆಂದು ಕೂಡ ಅಂದಾಜುಮಾಡಲಾಗಿದೆ. ನಮಗೆ ಅಗತ್ಯವಿರುವ ಶಕ್ತಿಯನ್ನು ದೊರೆಯುವಂತೆ ಮಾಡುವುದು ಒಂದು ಬೃಹತ್

ಸಮಸ್ಯೆಯೇ ಸರಿ. ಈ ಸಮಸ್ಯೆಯನ್ನು ಬೆಳೆ ಉತ್ಪನ್ನವನ್ನು ಹೆಚ್ಚಿಸುವ ದೃಷ್ಟಿಯಿಂದಷ್ಟೇ ಅಲ್ಲದೆ, ಸಾಮಾಜಿಕ, ಆರ್ಥಿಕ ದೃಷ್ಟಿಯಿಂದಲೂ ಸವಿವರವಾಗಿ ಪರೀಕ್ಷೆಮಾಡಿ ನೋಡುವ ಅಗತ್ಯವಿದೆ.

ದೇಶದಲ್ಲಿ ಉತ್ತಮ ಸಾಗುವಳಿ ಉಪಕರಣಗಳನ್ನು ಆಚರಣೆಗೆ ತರಲು ಮಾಡಿದ ಪ್ರಯತ್ನಗಳು ಅಪೇಕ್ಷಿತ ಫಲಿತಾಂಶಗಳನ್ನೇನೂ ಕೊಟ್ಟಿಲ್ಲ. ದೇಶದಲ್ಲಿ ಇಂದಿನವರೆಗೆ ಶೇಕಡ ೧೦ ಭಾಗ ಮಾತ್ರ ಸುಧಾರಿತ ಬಗೆಯ ನೇಗಿಲುಗಳನ್ನು ಬಳಸುತ್ತಿದ್ದಾರೆ. ದೇಶದ ಬಹಳಷ್ಟು ಭಾಗಗಳಲ್ಲಿ ಎರಚಿ ಚೆಲ್ಲುವ ಮೂಲಕವೇ ಬಿತ್ತನೆ ಮಾಡಲಾಗುತ್ತಿದೆ. ಅತ್ಯಂತ ಉಪಯುಕ್ತ ಹಲುಬೆ (Blade Harrow) ಉಪಕರಣ ದೇಶದ ಕೆಲವು ಭಾಗಗಳಲ್ಲಿ ಮಾತ್ರ ಕಂಡು ಬರುತ್ತಿದೆ. ದುಡಿಮೆಯನ್ನು ನಿರ್ಮೂಲನಗೊಳಿಸಿ ಸಾಮರ್ಥ್ಯವನ್ನು ಹೆಚ್ಚಿಸಿಕೊಳ್ಳಲು ಸಾಕಷ್ಟು ಅವಕಾಶವಿದೆ. ಸೂಕ್ತವಾದ ಉಪಕರಣಗಳು ಬೇಕಾದ್ದರಿಂದ ಎಷ್ಟೋ ಕೆಲಸಕಾರ್ಯಗಳು ಸಕಾಲಕ್ಕೆ ನಡೆಯುವುದು ಸಾಧ್ಯವಾಗುತ್ತಿಲ್ಲ. ಇದರ ಪರಿಣಾಮವಾಗಿ ಇಳುವರಿಯೂ ಕಡಿಮೆಯಾಗುತ್ತದೆ. ಸಕಾಲದಲ್ಲಿ ಹೆಚ್ಚು ಸಮರ್ಥವಾಗಿ ಅನೇಕ ಕೆಲಸಕಾರ್ಯಗಳನ್ನು ಮಾಡುವುದರಿಂದ. ಮತ್ತು ಹೆಚ್ಚು ಶಕ್ತಿ ಹಾಗೂ ಸುಧಾರಿತ ಉಪಕರಣಗಳನ್ನು ಆಚರಣೆಗೆ ತರುವಷ್ಟರಿಂದಲೇ ಗಣನೀಯ ಪ್ರಮಾಣದಲ್ಲಿ ಇಳುವರಿಯನ್ನು ಹೆಚ್ಚಿಸಬಹುದು.

**೩. ಜಾನುವಾರು ಅಭಿವೃದ್ಧಿ**

ದೇಶದಲ್ಲಿ ಜಾನುವಾರು ಕೈಗಾರಿಕೆ ಅಭಿವೃದ್ಧಿಯ ಅಗತ್ಯತೆ ಇದ್ದು, ಆಹಾರದಲ್ಲಿ ಉತ್ತಮ ಪೌಷ್ಟಿಕ ಆಹಾರವನ್ನು ದೊರಕಿಸಬೇಕಾದುದು ಇನ್ನೊಂದು ಸಮಸ್ಯೆ. ಆಹಾರದಲ್ಲಿ ಜಾನುವಾರು ಉತ್ಪನ್ನಗಳ ಬಳಕೆ ಇತ್ತೀಚಿನ ವರ್ಷಗಳಲ್ಲಿ ಹೆಚ್ಚಿನಗಮನ ಸೆಳೆಯುತ್ತಿದೆ. ಅಲ್ಲದೆ ಇವುಗಳಿಗಾಗಿ ಬೇಡಿಕೆ ಸತತವಾಗಿ ಹೆಚ್ಚುತ್ತಲೇ ಇದೆ. ಜಾನುವಾರು ಅಭಿವೃದ್ಧಿ ಕಾರ್ಯಕ್ರಮಗಳು ಜಮೀನಿನ ಅತ್ಯುತ್ತಮ ಬಳಕೆಗೆ ದಾರಿಮಾಡಿಕೊಟ್ಟಿವೆ. ಬೆಳೆ ತೆಗೆಯಲು ಸಾಧ್ಯವಿಲ್ಲದ ಜಮೀನಿನಲ್ಲಿ ಅಚ್ಚುಕಟ್ಟಾಗಿ ಹುಲ್ಲು ಮತ್ತು ಮರಗಿಡಗಳನ್ನು ಬೆಳೆಸಬಹುದು. ಮಣ್ಣು ಕೊಚ್ಚಣೆಯನ್ನೂ ಸ್ವಲ್ಪ ಮಟ್ಟಿಗೆ ತಡೆಗಟ್ಟಬಹುದು. ಬೆಳೆ ಸರದಿಯಲ್ಲಿ ಮೇವು ಬೆಳೆಗಳನ್ನು ಹಾಕುವುದು ಬಹಳಮಟ್ಟಿಗೆ ಮಣ್ಣಿನ ಫಲವತ್ತತೆಗೆ ಸಹಾಯಮಾಡುತ್ತದೆ. ಜಾನುವಾರು ಕೈಗಾರಿಕೆಯಿಂದುಂಟಾಗುವ ಇನ್ನೊಂದು ಅನುಕೂಲವೆಂದರೆ ಅದು ಹೆಚ್ಚಿನ ಉದ್ಯೋಗಾವಕಾಶ. ಅದು ವರ್ಷ ಪೂರ್ತಿ ಉದ್ಯೋಗವನ್ನು ಒದಗಿಸುತ್ತದೆ. ಆದುದರಿಂದ ಈ ಕೈಗಾರಿಕೆ ಅಗತ್ಯಗಳ ಅಭಿವೃದ್ಧಿಯ ಪ್ರಶ್ನೆಯನ್ನೂ, ದೇಶದ ಅಗತ್ಯಗಳನ್ನೂ ದೃಷ್ಟಿಯಲ್ಲಿಟ್ಟುಕೊಂಡು ತೀವ್ರವಾಗಿ ಪರೀಕ್ಷಿಸಬೇಕು.

ಜಾನುವಾರು ಉತ್ಪನ್ನಗಳನ್ನು ಹೆಚ್ಚಿಸುವ ಸಮಸ್ಯೆಗಳು ನಿಸ್ಸಂದೇಹವಾಗಿ ಬಹಳಷ್ಟಿವೆ. ತಳಿ ಅಭಿವೃದ್ಧಿ ಕಾರ್ಯ ನೀತಿ ಹಾಗೂ ರೋಗಗಳಿಗೆ ಸಂಬಂಧಪಟ್ಟಂತೆ ಹಲವಾರು ಸಮಸ್ಯೆಗಳಿವೆ. ಅಡ್ಡತಳಿ ಹಾಯ್ಕೆಯ ಮೂಲಕ ಸ್ಥಳೀಯ ತಳಿಗಳನ್ನು ಅಭಿವೃದ್ಧಿಪಡಿಸುವುದರಿಂದ ಹಾಗೂ ಸ್ಥಳೀಯ ತಳಿಗಳನ್ನು ಆಚರಣೆಗೆ ತರುವುದರಿಂದ ಜಾನುವಾರುಗಳ ಸುಧಾರಣೆಯನ್ನು ತೀವ್ರವಾಗಿ ಮುಂದುವರಿಸಲಾಗುತ್ತಿದೆ. ರೋಗಗಳ ಸಮಸ್ಯೆ ಬಹಳಷ್ಟು ಹೆಚ್ಚುವ ಸಂಭವವಿರುತ್ತದೆ. ಅಗತ್ಯಕ್ಕನುಗುಣವಾಗಿ ಸಂಶೋಧನೆ ಹಾಗೂ ರೋಗ ನಿರ್ಣಯ ಮಾಡುವ ಸೌಲಭ್ಯಗಳು ಅಭಿವೃದ್ಧಿ ಹೊಂದಬೇಕು. ಸರಕಾರಿ ಇಲ್ಲವೆ ಖಾಸಗಿ ನಿಯೋಗಗಳ ಮೂಲಕ ಹತೋಟಿ ಕ್ರಮಗಳನ್ನು ತೆಗುದುಕೊಳ್ಳುವ ಸೌಲಭ್ಯಗಳು ಬಹಳಷ್ಟು ಪ್ರಮಾಣದಲ್ಲಿ ಹೆಚ್ಚಬೇಕು. ನಮಗೆ ಬೇಕಾದಷ್ಟು ಪ್ರಮಾಣದ ಹಾಗೂ ಅಪೇಕ್ಷಿತ ಮಟ್ಟದ ಆಹಾರ ಹಾಗೂ ಮೇವನ್ನು ಉತ್ಪತ್ತಿಮಾಡಿ ಸರಬರಾಜು ಮಾಡುವುದು ಅತ್ಯಂತ

ಮುಖ್ಯವಾದ ಸಮಸ್ಯೆಯಾಗಿದೆ. ಈ ಸಮಸ್ಯೆ ಹಿಂದಿನಿಂದಲೂ ಇದ್ದೇ ಇದೆ. ಈ ಸನ್ನಿವೇಶವನ್ನು ಸುಧಾರಿಸುವ ಸಲುವಾಗಿ ಹಲವಾರು ವರ್ಷಗಳಿಂದಲೂ ಬಹಳಷ್ಟು ಸಲಹೆಗಳನ್ನು ಮಾಡಿದ್ದಾರೆ. ಪರಿಹಾರವಂತೂ ದೊರೆತಿಲ್ಲ. ಆದ್ಯತೆಯ ಮೇಲೆ ಮೇವಿನ ಸಂಪನ್ಮೂಲಗಳನ್ನು ಸುಧಾರಿಸದಿದ್ದರೆ ಈ ಸಮಸ್ಯೆ ಬಗೆಹರಿಯುವುದಿಲ್ಲ. ಕಾಡುಪ್ರದೇಶಗಳಲ್ಲಿ ಈ ಉತ್ಪನ್ನವನ್ನು ಹೆಚ್ಚಿಸುವ ಸಾಧ್ಯತೆಗಳು ಹಾಗೂ ನಿರುಪಯೋಗಿ ಜಮೀನನ್ನು ಉಪಯೋಗಿಸಿಕೊಳ್ಳುವಿಕೆ ಮತ್ತು ಇತರ ಜಮೀನನ್ನು ಇದಕ್ಕಾಗಿ ಬಳಸಿಕೊಳ್ಳುವ ಸಾಧ್ಯತೆಗಳನ್ನು ಪರೀಕ್ಷಿಸಿ ನೋಡಬೇಕು. ಇದರ ಜೊತೆಗೆ ಸಾಗುವಳಿ ಜಮೀನಿನಲ್ಲಿ ಮೇವಿನ ಬೆಳೆ ಹಾಕುವ ಪ್ರದೇಶವನ್ನು ಹೆಚ್ಚಿಸುವುದಕ್ಕೆ ಸಾಕಷ್ಟು ಕ್ರಮ ಕೈಗೊಳ್ಳಬೇಕು. ಸಾಮಾನ್ಯವಾಗಿ ಜಾನುವಾರು ಕೈಗಾರಿಕೆಯ ಅಧಿಕ ಪ್ರಮಾಣದ ಬೆಳವಣಿಗೆ ಸಂದಿಗ್ಧ ಸ್ಥಿತಿಯಲ್ಲಿದೆ. ಮೇವು ಹಾಗೂ ಆಹಾರದ ಸಮಸ್ಯೆಯನ್ನು ಬಗೆಹರಿಸಿದಾಗ ಮಾತ್ರ ಇದರ ಬೆಳವಣಿಗೆಯನ್ನು ಬೆಂಬಲಿಸುವುದು ಸಾಧ್ಯ. ಇದು ಈ ನಿರ್ಣಾಯಕ ಅಂಶವನ್ನು ಅವಲಂಬಿಸಿರುತ್ತದೆ.

**೪. ಅರಣ್ಯ ಸಂಪತ್ತು**

ಅರಣ್ಯಗಳು ಪ್ರಕೃತಿಯ ಸ್ವಾಭಾವಿಕ ಕೊಡುಗೆ. ಅರಣ್ಯ ಮತ್ತು ಮಾನವನ ಸಂಬಂಧ ಬಹು ಮುಖ್ಯವಾದುದು. ಮತ್ತು ಅತ್ಯಂತ ಪುರಾತನವಾದುದು. ಅರಣ್ಯಗಳು ಜನರ ಜೀವನಾಧಾರ. ಇವು ಬೇಸಾಯಕ್ಕೆ ಬೆಂಬಲವಾಗಿ ನಿಂತಿವೆ. ಭೂಮಿಯ ಫಲವತ್ತತೆಯನ್ನು ಅಭಿವೃದ್ಧಿಪಡಿಸುತ್ತವೆ. ವಿವಿಧ ಗಿಡ, ಮರ, ಬಳ್ಳಿಗಳನ್ನು ಪುಷ್ಟಿಯಾಗಿ, ಸೊಂಪಾಗಿ ಬಳಸಿ ಭೂಮಿಯನ್ನು ರಕ್ಷಿಸುತ್ತವೆ. ನೆಲದ ತೇವ, ಜಲಾಂಶವನ್ನು ಸಂಗ್ರಹಿಸಿ ಕಾಪಾಡುತ್ತವೆ.

ದೇಶದಲ್ಲಿ ಸುಮಾರು ಶೇಕಡ ೨೨ ಭಾಗ ಪ್ರದೇಶವನ್ನು ಅರಣ್ಯಗಳು ಆವರಿಸಿವೆ. ಒಟ್ಟು ರಾಷ್ಟ್ರೀಯ ಉತ್ಪನ್ನಕ್ಕೆ ಅರಣ್ಯ ವಿಭಾಗದ ಕೊಡುಗೆ ಶೇಕಡ ೧.೫ ಭಾಗ ಆಗಿರುತ್ತದೆ. ಅರಣ್ಯ ವಿಭಾಗದಲ್ಲಿ ಕೇವಲ ಶೇಕಡ ೦.೨ ಭಾಗದಲ್ಲಿ ಮಾತ್ರ ಗ್ರಾಮೀಣ ಕೂಲಿಯವರು ಕೆಲಸ ಮಾಡುತ್ತಿದ್ದಾರೆ. ಮರ ಮಾನವನಿಗೆ ಪ್ರಾಥಮಿಕವಾಗಿ ಅತ್ಯಗತ್ಯವಾಗಿ ಬೇಕಾಗಿರುವ ವಸ್ತು. ಇಷ್ಟಾದರೂ ಇದುವರೆವಿಗೂ ನಾವು ಅರಣ್ಯದ ಕಡೆ ಸಾಕಷ್ಟು ಗಮನ ಹರಿಸಿಲ್ಲ. ಇದಕ್ಕೆ ಕಾರಣವೆಂದರೆ ಪ್ರಕೃತಿ ಇದುವರೆಗೆ ನಮಗೆ ಅತ್ಯಗತ್ಯವಾದ ವಸ್ತುಗಳೆಲ್ಲವನ್ನೂ ಒದಗಿಸಿರುವುದು. ಅರಣ್ಯದ ಕಡೆ ಸಾಕಷ್ಟು ಗಮನ ಹರಿಸದಿದ್ದ ಪಕ್ಷದಲ್ಲಿ ಜೀವಿಪರಿಸರ ಸಮತೋಲನದಲ್ಲಿ (Ecological Balance) ವ್ಯತ್ಯಾಸವುಂಟಾಗುವುದಲ್ಲದೆ, ಮರದಿಂದ ನಮಗೆ ಅತ್ಯಗತ್ಯವಾಗಿ ಬೇಕಾದ ವಸ್ತುಗಳು ಇಲ್ಲದಂತಾಗುತ್ತದೆಂಬ ಅಂಶವನ್ನು ಇತ್ತೀಚೆಗೆ ಅರಿತುಕೊಳ್ಳಲಾಗಿದೆ. ಸ್ವಾಭಾವಿಕ ಅರಣ್ಯಗಳು ನಮ್ಮ ಭವಿಷ್ಯದ ಅಗತ್ಯಗಳನ್ನು ಪೂರೈಸಲಾರವು. ಮಾನವ ನಿರ್ಮಿತ ಅರಣ್ಯಗಳನ್ನು ಯೋಗ್ಯವಾದ ಪ್ರದೇಶಗಳಲ್ಲಿ ನೆಲೆಗೊಳಿಸಿ, ಅವುಗಳಿಂದ ಪ್ರಯೋಜನ ಪಡೆದುಕೊಳ್ಳಬೇಕು. ಇದಲ್ಲದೆ ಸಾಮಾಜಿಕ ಅರಣ್ಯದ ಕಡೆಗೆ ಹೆಚ್ಚಿನ ಗಮನ ನೀಡಬೇಕು.

ವನಮಹೋತ್ಸವದ ಮೂಲಕ ಹಾಕಿಕೊಂಡ ಕಾರ್ಯಕ್ರಮಗಳು ಅಷ್ಟೇನೂ ಫಲಪ್ರದವಾಗಿಲ್ಲ. ಈ ಕಾರ್ಯಕ್ರಮಗಳಲ್ಲಿ ಸುಧಾರಣೆ ತರಲು ಸಾಕಷ್ಟು ಅವಕಾಶವಿದೆ. ಕೃಷಿ ಬೇಸಾಯಕ್ಕಷ್ಟೇ ಸೀಮಿತವಲ್ಲ, ಅದು ಅರಣ್ಯ ಮತ್ತು ಇತರ ಸ್ವಾಭಾವಿಕ ಸಂಪನ್ಮೂಲಗಳ ನಿರ್ವಹಣೆಯೂ ಆಗಿರುತ್ತದೆ. ಉತ್ತಮ ಮಟ್ಟದ ಸಂರಕ್ಷಣೆಯೂ ಆಗಿರುತ್ತದೆ. ಅರಣ್ಯಕ್ಕಾಗಿ ತೊಡಗಿಸಿರುವ ಬಂಡವಾಳ ಬಹಳ ಕಡಿಮೆ. ಇದು ನಮ್ಮಲ್ಲಿ ಒಂದು ಹೆಕ್ಟೇರಿಗೆ ೨೨ ರೂ,ಗಳಷ್ಟಾಗಿದ್ದರೆ, ಅಭಿವೃದ್ಧಿ ಹೊಂದಿದ ರಾಷ್ಟ್ರಗಳಲ್ಲಿ ಒಂದು ಹೆಕ್ಟೇರಿಗೆ ೨೦೦-೪೦೦ ರೂ,ಗಳಷ್ಟು ಬಂಡವಾಳವನ್ನು ತೊಡಗಿಸಿರುವುದು ಕಂಡು ಬರುತ್ತದೆ. ಅರಣ್ಯಗಳಿಂದ ಬರುತ್ತಿರುವ ನಿವ್ವಳ

ಲಾಭವೂ ಬಹಳ ಕಡಿಮೆ. ಅದು ನಮ್ಮಲ್ಲಿ ಹೆಕ್ಟೇರಿಗೆ ೧೧ ರೂ.,ಗಳಷ್ಟಿದ್ದರೆ, ಬಹಳಷ್ಟು ಇತರ ದೇಶಗಳಲ್ಲಿ ೨೦೦ ರೂ.,ಗಳಷ್ಟಿರುತ್ತದೆ. ಆದ್ದರಿಂದ ಅರಣ್ಯ ಅಭಿವೃದ್ಧಿಗಾಗಿ ಸಾಕಷ್ಟು ಬಂಡವಾಳ ಹೂಡುವ ಅಗತ್ಯವಿರುವುದಲ್ಲದೆ, ಸಾಕಷ್ಟು ಗಮನ ನೀಡುವ ಅಗತ್ಯವೂ ಇದೆ. ಇದರಿಂದಾಗಿ ದೇಶಕ್ಕೆ ಬೇಕಾದ ಮರದ ಉತ್ಪನ್ನಗಳ ಪೂರೈಕೆಯೂ ಸಾಧ್ಯವಾಗುತ್ತದೆ.

ಅರಣ್ಯ ಭೂಮಿಯನ್ನು ಸಾಗುವಳಿಗೆ ಕೊಡುವುದು ಸೂಕ್ತವಾದುದ್ದಲ್ಲ. ವ್ಯವಸಾಯ ಯೋಗ್ಯ ಭೂಮಿಯಿಂದ ಆರ್ಥಿಕ ಉತ್ಪನ್ನಗೊಳಿಸುವ ನಮ್ಮ ರಾಷ್ಟ್ರದ ಜನರ ಗುರಿ ಸಾದುವೇನೋ ಸರಿ. ಆದರೆ ಇಂದು ಅರಣ್ಯವಾಗಿರುವ ನೆಲ ಖಂಡಿತವಾಗಿಯೂ ನಿರಂತರ ವ್ಯವಸಾಯ ಯೋಗ್ಯ ಭೂಮಿಯಾಗಲಾರದು. ಸಾಗುವಳಿಯ ಪರಿಣಾಮವಾಗಿ ಮಣ್ಣಿನ ಕೊಚ್ಚಣಿ ಸಂಭವಿಸುವುದಲ್ಲದೆ, ಕೆಲವು ದಿನಗಳಲ್ಲಿ ಹುಲ್ಲು ಬೆಳೆಯಲೂ ಕೂಡ ಯೋಗ್ಯವಾಗಲಾರದು. ಶತಮಾನಗಳ ಕಾಲ ಸೊಂಪಾದ ಕಾಡಾಗಿ ಉಳಿದಿದ್ದ ಈ ಭಾಗ ಕೆಲವೇ ವರ್ಷಗಳಲ್ಲಿ ಬೆಂಗಾಡಾಗುತ್ತದೆ. ಒಂದೇ ಒಂದು ಅಂಗುಲ ಮಣ್ಣಿನ ಪದರ ಉಂಟಾಗಬೇಕಾದರೆ ಸಹಸ್ರಾರು ವರ್ಷಗಳು ಬೇಕು. ಆದರೆ ಅದೇ ರಕ್ಷಣಾ ರಹಿತ ಭೂಮಿಯಲ್ಲಿ ಮಣ್ಣಿನ ಕೊಚ್ಚಣಿಗೆ ಕೇವಲ ಒಂದೆರಡು ವರ್ಷಗಳು ಸಾಕು. ನಿಸರ್ಗ ಸಹಜವಾಗಿ ಶತಮಾನಗಳ ಕಾಲ ಬೆಳೆದ ಮರ ಹಾಗೂ ಇನ್ನಿತರ ಸಸ್ಯ ಜಾತಿಗಳನ್ನು ಕಡಿದು ಹಾಕುವುದು, ಅದರಲ್ಲೂ ಪ್ರವಾಹ ಪೀಡಿತ ಮತ್ತು ಮಣ್ಣು ಕೊಚ್ಚಣೆ ಇರುವ ಪ್ರದೇಶಗಳಲ್ಲಿ ಹೀಗೆ ಮಾಡುವುದು ಹೆಚ್ಚು ಅಪಾಯಕರ.

**೫. ನೀರಿನ ಸಂಪನ್ಮೂಲ**

ಜಮೀನು ಮತ್ತು ನೀರಿನ ಸಂಪನ್ಮೂಲಗಳು ಅತ್ಯಲ್ಪ. ಬುದ್ಧಿವಂತಿಕೆಯಿಂದ ಇವುಗಳನ್ನು ಬಳಸಿಕೊಳ್ಳುವುದು ಅಗತ್ಯ. ದೇಶದಲ್ಲಿ ಒಟ್ಟು ೩೨೮ ದಶಲಕ್ಷ ಹೆಕ್ಟೇರುಗಳಷ್ಟು ಪ್ರದೇಶ ನಿರಾವರಿ ಕೃಷಿಯಲ್ಲಿ ತೊಡಗಿದೆ ಎಂದು ೧೯೬೦ರಲ್ಲಿ ವರದಿಯಾಗಿದೆ. ಇದರಲ್ಲಿ ಶೇಕಡಾ ೪೫ ಭಾಗ ಪ್ರದೇಶದಲ್ಲಿ ಮಾತ್ರ ವಿವಿಧ ಬೆಳೆಗಳಿಗಾಗಿ ಬೀಜ ಬಿತ್ತಲಾಗುತ್ತಿದೆ. ಅರಣ್ಯಗಳು ಶೇಕಡಾ ೨೨ ಭಾಗದಷ್ಟು ಜಮೀನನ್ನು ಆವರಿಸಿದೆ. ಉಳಿದ ಪ್ರದೇಶದ ಪೈಕಿ ಶೇಕಡಾ ೧೫ ಭಾಗ ಸಾಗುವಳಿಗೆ ದೊರಕುವುದಿಲ್ಲ. ಶೇಕಡಾ ೧೧ ಭಾಗದಷ್ಟು ಜಮೀನು ಸಾಗುವಳಿ ಮಾಡಲು ಸಾಧ್ಯವಿಲ್ಲದ ಜಮೀನಾಗಿದ್ದು, ಇದು ಶಾಶ್ವತವಾದ ಗೋಮಾಳವಾಗಿದೆ, ಹಾಗೂ ಇದರಲ್ಲಿ ವಿವಿಧ ಮರ ಗಿಡಗಳನ್ನು ಬೆಳೆಯಲಾಗಿದೆ. ಉಳಿದ ಶೇಕಡಾ ೭ ಭಾಗ ಜಮೀನನ್ನು ವಿವಿಧ ಕಾರಣಗಳಿಗಾಗಿ ಬೀಳು ಬಿಡಲಾಗಿದೆ. ಜಮೀನಿನ ಬಳಕೆಯಲ್ಲಿ ಸುಧಾರಣೆಯನ್ನು ತರಲು ಒಳ್ಳೆಯ ಅವಕಾಶವಿದೆ. ಶೇಕಡಾ ೭ ಭಾಗದಷ್ಟು ಹೆಚ್ಚಿನ ಜಮೀನನ್ನು ಬೀಳುಬಿಡುವ ಅಗತ್ಯವಿಲ್ಲ. ಈ ಜಮೀನನ್ನು ಏತಕ್ಕಾದರೂ ಬೀಳುಬಿಡಬೇಕೆಂಬುದನ್ನು ವಿವರವಾಗಿ ಅಧ್ಯಯನ ಮಾಡುವ ಅಗತ್ಯವಿದೆ. ಈ ಜಮೀನಿನಲ್ಲಿ ಬೆಳೆ ಬೆಳೆಯಲು, ಅರಣ್ಯ ನಿರ್ಮಿಸಲು ಹಾಗೂ ಹುಲ್ಲನ್ನು ಬೆಳೆಯಲು ಇರುವ ಅಡಚಣೆಗಳನ್ನು ನಿವಾರಿಸಬೇಕು. ಹೇರಳವಾದ ಜನಸಂಖ್ಯೆ ಇರುವ ಭಾರತದಲ್ಲಿ ಜಮೀನಿನ ಪ್ರತಿಯೊಂದು ಭಾಗವನ್ನೂ ಸರಿಯಾದ ರೀತಿಯಲ್ಲಿ ಉಪಯೋಗಿಸಿಕೊಳ್ಳಬೇಕು. ಸದ್ಯದಲ್ಲಿ ಸಾಗುವಳಿ ಮಾಡಿದ ಬೆಳೆಗಳ ಇಳುವರಿ ಕಡಿಮೆಯಾಗಿರುವುದು ಮಾತ್ರವಲ್ಲ, ಸಾಗುವಳಿ ಮಾಡದಿರುವ ಜಮೀನನ್ನು ಸಮರ್ಥವಾಗಿ ಬಳಸಿಕೊಂಡಲ್ಲಿ, ದೇಶದಲ್ಲಿನ ಪ್ರತಿಯೊಂದು ಹೆಕ್ಟೇರಿಗೂ ಸಮರ್ಪಕವಾದ ಸಾಗುವಳಿ ಯೋಜನೆ ಮತ್ತು ಜಮೀನು ಬಳಕೆಯನ್ನು ಅಭಿವೃದ್ಧಿಗೆ ತರುವುದರ ಮೂಲಕ ಸುಧಾರಣೆಯನ್ನು ತರುವುದು ಸಾಧ್ಯ.

ಸಾಗುವಳಿ ಯೋಜನೆ ಪ್ರತಿಯೊಂದು ಬೆಳೆಯ ಬಗೆಗಿನ ವಿವರವನ್ನಷ್ಟೇ ಅಲ್ಲದೆ, ಬಹುಬೆಳೆ ಬೆಳೆಯುವ ವಿವರಗಳನ್ನೂ ಒಳಗೊಳ್ಳುತ್ತದೆ. ದೇಶದ ಬಹಳಷ್ಟು ಭಾಗಗಳಲ್ಲಿ ಉಷ್ಣತೆ ಮತ್ತು ಹವಾಮಾನ ಸ್ಥಿತಿಗಳು ಅನುಕೂಲಕರವಾಗಿದ್ದು, ವರ್ಷದಲ್ಲಿ ಒಂದಕ್ಕಿಂತ ಹೆಚ್ಚು ಬೆಳೆಯನ್ನು ಬೆಳೆಯಲು ಸಾಧ್ಯವಿದೆ. ನೀರಾವರಿ ಸೌಲಭ್ಯವಿರುವೆಡೆಗಳಲ್ಲಿ ಬಹುಬೆಳೆ ಬೆಳೆಯಲು ಅದ್ಭುತವಾದ ಅವಕಾಶವಿದೆ. ೧೯೫೦-೫೧ ರಲ್ಲಿ ೧೩ ದಶಲಕ್ಷ ಹೆಕ್ಟೇರುಗಳಲ್ಲಿ ಮಾತ್ರ ಒಂದಕ್ಕಿಂತ ಹೆಚ್ಚು ಬೆಳೆಯನ್ನು ಬೆಳೆಯಲು ಸಾಧ್ಯವಾಗಿತ್ತು. ೧೯೭೦-೭೧ ರಲ್ಲಿ ಇದು ಎರಡರಷ್ಟಾಯಿತು. ಅಂದರೆ, ೨೬ ದಶಲಕ್ಷ ಹೆಕ್ಟೇರುಗಳಲ್ಲಿ ಒಂದಕ್ಕಿಂತ ಹೆಚ್ಚು ಬೆಳೆಯನ್ನು ಬೆಳೆಯಲು ಸಾಧ್ಯವಾಯಿತು. ನೀರಾವರಿ ಪ್ರದೇಶ ಹೆಚ್ಚಾಗಿ ವಿವಿಧ ಬೆಳೆಗಳಲ್ಲಿ ಅಲ್ಪಾವಧಿ ತಳಿಗಳು ದೊರೆಯುಂತಾದುದರಿಂದ ದ್ವಿಬೆಳೆ ಬೆಳೆಯುವುದೂ ಹೆಚ್ಚು ಸಾಧ್ಯವಾಯಿತು. ಸುಮಾರು ಇನ್ನು ಐದು ವರ್ಷಗಳಲ್ಲಿ ಈಗ ಬಿತ್ತುವ ಪ್ರದೇಶ ೧೪೦ ದಶಲಕ್ಷ ಹೆಕ್ಟೇರುಗಳಿಂದ ೧೪೫ ದಶಲಕ್ಷ ಹೆಕ್ಟೇರುಗಳಷ್ಟು ಹೆಚ್ಚಿದ್ದರೂ, ಈಗ ಹುಲ್ಲು ಬೆಳೆ ಬೆಳೆಯುತ್ತಿರುವ ೧೬೫ ದಶಲಕ್ಷ ಹೆಕ್ಟೇರುಗಳನ್ನು ೧೪೦ ದಶಲಕ್ಷ ಹೆಕ್ಟೇರುಗಳಿಗೆ ಹೆಚ್ಚಿಸಬಹುದು. ನೀರಾವರಿ ಪ್ರದೇಶಗಳಲ್ಲಿ ಅರಣ್ಯ ಬೆಳೆಸಲು ಅವಕಾಶವಿದೆ. ಬೆಳೆ ತೆಗೆಯಬಹುದಾದ ಹೆಚ್ಚಿನ ಪ್ರದೇಶದಲ್ಲಿ ತರಕಾರಿ, ಹಣ್ಣು, ಮೇವು ಬೆಳೆಗಳು, ಹಾಗೂ ಸ್ವಲ್ಪ ಮಟ್ಟಿಗೆ ಕಬ್ಬು, ಎಣ್ಣೆ ಕಾಳುಗಳಂಥ ವಾಣಿಜ್ಯ ಬೆಳೆಗಳನ್ನು ಬೆಳೆಯಬೇಕಾಗಿ ಬರಬಹುದು ಹಣ್ಣುಗಳು, ತರಕಾರಿ ಹಾಗೂ ಸಕ್ಕರೆಯ ಉತ್ಪಾದನೆಯನ್ನು ಮಿತಿಯಿಲ್ಲದಷ್ಟು ಹೆಚ್ಚಿಸುವ ಅವಕಾಶವಿದೆ. ಈ ಉತ್ಪನ್ನಗಳಿಗಾಗಿ ಪ್ರಪಂಚದ ಬೇಡಿಕೆಗಳು ದಿನೇ ದಿನೇ ಹೆಚ್ಚಾಗುತ್ತಿವೆ. ಈ ಉತ್ಪನ್ನಗಳು ಹಾಗೂ ಪ್ಲಾಂಟೇಶನ್‌ಬೆಳೆಗಳನ್ನು ರಫ್ತುಮಾಡುವ ಸಾಧ್ಯತೆಗಳೂ ಹೇರಳವಾಗಿವೆ.

**೬. ಬೆಳೆಗಳ ಪರಿವರ್ತನೆ**

ಜಮೀನನ್ನು ಉತ್ತಮವಾಗಿ ಬಳಸಿಕೊಳ್ಳುವ ಇನ್ನೊಂದು ಮುಖ್ಯ ಬೆಳೆ ಬೆಳೆಯುವ ಮಾದರಿಗಳನ್ನು ಕುರಿತದ್ದಾಗಿರುತ್ತದೆ. ದೇಶದಲ್ಲಿ ಪ್ರತಿಯೊಂದು ಪ್ರದೇಶದಲ್ಲಿನ ಪ್ರತಿಯೊಂದು ಹೆಕ್ಟೇರು ಭೂಮಿಯೂ ಕೂಡ ಇಂಥ ಬೆಳೆಗೆ ಯೋಗ್ಯವೆಂದು ದೃಢಪಡಿಸಿದಾಗ ಮಾತ್ರ ದೇಶಕ್ಕೆ ಬೇಕಾದ ಎಲ್ಲ ವ್ಯವಸಾಯ ಉತ್ಪಾದನೆಯನ್ನು ಮಾಡಿಕೊಳ್ಳುವುದು ಸಾಧ್ಯವಾಗುತ್ತದೆ. ಈ ಹೇಳಿಕೆ ಆಶ್ಚರ್ಯಕರವಾಗಿ ತೋರಬಹುದು. ಆದರೆ ವಿಶ್ಲೇಷಣೆಗಳು ಇದು ಖಂಡಿತ ಸಾಧ್ಯವೆಂಬುದನ್ನು ತೋರಿಸಿವೆ. ಹೆಚ್ಚಿನ ಪ್ರದೇಶಗಳಲ್ಲಿ ಮಣ್ಣಿನಲ್ಲಿರುವ ತೇವಕ್ಕನುಗುಣವಾಗಿ ಅದಕ್ಕೆ ಹೊಂದಿಕೊಳ್ಳುವ ಬೆಳೆಗಳನ್ನು ಬೆಳೆಯಲಾಗುತ್ತಿಲ್ಲ. ಬತ್ತದ ಬೆಳೆಗೆ ಸಾಕಷ್ಟು ಮಳೆಯೇ ಬೀಳದಿರುವ ಲಕ್ಷಾಂತರ ಹೆಕ್ಟೇರುಗಳಲ್ಲಿ ಬತ್ತವನ್ನು ಬೆಳೆಯಲಾಗುತ್ತಿದೆ. ಬತ್ತದ ಬೆಳೆಗೆ ಕೊನೆಯ ಪಕ್ಷ ಪ್ರತಿ ತಿಂಗಳಿಗೆ ೩೦ ಸೆಂ.ಮೀ.ನಷ್ಟು ಮಳೆ ೩ ತಿಂಗಳ ಮಟ್ಟಿಗಾದರೂ ಬೇಕಾಗುತ್ತದೆ. ಇಂಥ ಮಾದರಿಯ ಮಳೆ ಭಾರತದ ಈಶಾನ್ಯ ಹಾಗೂ ಪಶ್ಚಿಮತೀರದ ಕಡೆಗಳಲ್ಲಿ ಮಾತ್ರ ಬೀಳುತ್ತದೆ. ಮಳೆಯಾಶ್ರಯದಲ್ಲಿ ಬತ್ತ ಬೆಳೆಯುವ ಇತರ ಕಡೆಗಳಲ್ಲಿ ತಿಂಗಳಿಗೆ ೩೦ ಸೆಂ.ಮೀ. ನಷ್ಟು ಮಳೆ ಎಲ್ಲೋ ಒಂದು ತಿಂಗಳು ಅಥವಾ ಎರಡು ತಿಂಗಳು ಮಾತ್ರ ಬೀಳುತ್ತದೆ. ಮೂರು ವರ್ಷಕ್ಕೋ, ನಾಲ್ಕು ವರ್ಷಕ್ಕೋ ಒಮ್ಮೆ ಇಂಥ ಕಡೆಗಳಲ್ಲಿ ಮೂರು ಅಥವಾ ನಾಲ್ಕು ತಿಂಗಳು ಕಾಲ ಪ್ರತಿ ತಿಂಗಳಿಗೆ ೩೦ ಸೆಂ. ಮೀ. ಮಳೆ ಬೀಳಬಹುದು . ಆದರೆ ಇತರ ವರ್ಷಗಳಲ್ಲಿ ಬತ್ತದ ಬೆಳೆಗೆ ಸಾಕಾಗುವಷ್ಟು ಮಳೆ ಬೀಳುವುದಿಲ್ಲ.

ಇಂಥ ಪ್ರದೇಶಗಳಲ್ಲಿ ಬತ್ತ ಬೆಳೆಯುವ ಬದಲು ಮುಸುಕಿನ ಜೋಳ ಹಾಗೂ ಹತ್ತಿಯನ್ನು ಬೆಳೆಯುವುದು ಯೋಗ್ಯವೆಂದು ರೈತರಿಗೆ ಮನದಟ್ಟು ಮಾಡಿಕೊಂಡಬೇಕು. ಇಲ್ಲಿ ತೆಗೆದುಕೊಳ್ಳಬೇಕಾಗಿರುವ ಒಂದೇ ಒಂದು ಎಚ್ಚರಿಕೆಯೆಂದರೆ. ಸಮರ್ಪಕವಾದ ಬಸಿಚರಂಡಿಗಳನ್ನು ತೋಡಿಸುವುದು; ಏಕೆಂದರೆ, ಹೆಚ್ಚಿನ ಮಳೆ ಬೀಳುವ ವರ್ಷಗಳಲ್ಲಿ ಬೀಳುವ ಹೆಚ್ಚು ನೀರು ಈ ಬೆಳೆಗಳಿಗೆ ಹಾನಿಯನ್ನುಂಟುಮಾಡಬಾರದು, ಮಳೆಯಾಶ್ರಿತ ಪ್ರದೇಶಗಳಲ್ಲಿ ಬತ್ತ ಬೆಳೆಯಲಾಗುತ್ತಿರುವ ಕಡೆಗಳಲ್ಲಿ ಇಳುವರಿ ಕಡಿಮೆಯಾಗುರುತ್ತದೆ. ಈ ಬಗೆಯ ಅನೇಕ ಉದಾಹರಣೆಗಳನ್ನು ಕೊಡಬಹುದು. ಆದ್ದರಿಂದ ವಿವಿಧ ಪ್ರದೇಶಗಳಲ್ಲಿನ ವಿವಿಧ ಪರಿಸರ ಸ್ಥಿತಿಗನುಗುಣವಾಗಿ ಯಾವ ಬೆಳೆ ಬೆಳೆಯುವುದು ಸೂಕ್ತ ಎಂಬುದನ್ನು ವಿವರವಗಿ ಪರೀಕ್ಷಿಸುವ ಅಗತ್ಯತೆ ಇದೆ. ಇದನ್ನು ಮಾಡುವುದು ಕಷ್ಟಸಾಧ್ಯವಿರುದಾದರೂ, ಇದನ್ನು ತಕ್ಷಣ ಕೈಗೊಳ್ಳಬೇಕಾಗಿದೆ. ಒಂದು ಬೆಳೆಗೆ ಬದಲು ಮತ್ತೊಂದು ಬೆಳೆಯನ್ನು ಹಾಕಲು ರೈತನನ್ನು ಒಪ್ಪಿಸುವುದು ಅಷ್ಟು ಸುಲಭ ಕಾರ್ಯವೇನಲ್ಲ. ಆದರೆ ರೈತನ ಜಮೀನಿನಲ್ಲಿ ಇದನ್ನು ಕಾರ್ಯತಃ ಮಾಡಿ, ಯಾವ ಬೆಳೆ ಲಾಭದಾಯಕವೆಂಬುದನ್ನು ಅವನಿಗೆ ತೋರಿಸಿಕೊಟ್ಟಾಗ ಅವನು ತನ್ನ ಜಮೀನಿನಲ್ಲಿ ತಾನು ಬೆಳೆಯುತ್ತಿದ್ದ ಬೆಳೆಗೆ ಬದಲಾಗಿ ಮತ್ತೊಂದು ಬೆಳೆಯನ್ನು ಬೆಳೆಯಲು ಒಪ್ಪಿರುವುದಕ್ಕೆ ಹಲವಾರು ಉದಾಹರಣೆಗಳಿವೆ. ಈ ಎಲ್ಲ ಕಾರಣಗಳಿಂದ ಜಮೀನನ್ನು ಉತ್ತಮವಾಗಿ ಬಳಸಿಕೊಳ್ಳುವ ಸಮಸ್ಯೆಯ ಕಡೆ ನಮ್ಮ ಗಮನಹರಿಸಬೇಕಾದ ಅವಶ್ಯಕತೆಯಿದೆ.

೭. ಮಾರುಕಟ್ಟೆ

ದೇಶದಲ್ಲಿ ಉತ್ಪಾದನೆಯನ್ನು ಹೆಚ್ಚಿಸುವುದು ಎಷ್ಟು ಮುಖ್ಯವೋ ಮಾರುಕಟ್ಟೆಯ ಸ್ಥಿತಿಗಳನ್ನು ಅರಿಯುವುದೂ ಅಷ್ಟೇ ಮುಖ್ಯ. ವ್ಯವಸಾಯೋತ್ಪನ್ನವನ್ನು ಸರಿಯಾದ ರೀತಿಯಲ್ಲಿ ಸಂಸ್ಕರಣಗೊಳಿಸಿ ಸಂಗ್ರಹಿಸಿರುವುದು ಅತಿಮುಖ್ಯ. ಇಲ್ಲದಿದ್ದರೆ ಅದು ಮಾರುಕಟ್ಟೆಗೆ ಬರಲು ಸಾಧ್ಯವಿಲ್ಲದಂತಾಗುತ್ತದೆ. ಸಣ್ಣ ಪ್ರಮಾಣದಲ್ಲಿ ಉತ್ಪಾದಿಸುವ ರೈತರಿಗೆ ಮಾರುಕಟ್ಟೆಯ ಸಮಸ್ಯೆಗಳು ಹೆಚ್ಚು ಸಂದಿಗ್ಧ ಪರಿಸ್ಥಿತಿಯನ್ನುಂಟುಮಾಡಿವೆ. ಸಣ್ಣ ರೈತರು ಬೆಳೆಯುವುದೇ ಸ್ವಲ್ಪ. ಆದರೆ ಅದನ್ನು ಸಂಸ್ಕರಣಗೊಳಿಸಿ, ಸಾಗಿಸಿಕೊಂಡು, ಮಾರುಕಟ್ಟೆಗೆ ತರುವುದಕ್ಕೆ ತಗಲುವ ವೆಚ್ಚ ಅತ್ಯಧಿಕ ಹಾಗೂ ಅದು ಲಾಭದಾಯಕವಲ್ಲ. ಅನೇಕ ಬಗೆಯ ವ್ಯವಸಾಯ ಉತ್ಪನ್ನಗಳನ್ನು ಒಂದೆಡೆ ಸಂಗ್ರಹಿಸಿ ಮಾರಾಟ ಮಾಡುವ ವ್ಯವಸ್ಥೆಗಾಗಿ ಸಂಘಗಳನ್ನು ನಿರ್ಮಿಸಬೇಕಾಗುತ್ತದೆ. ಇದಕ್ಕಾಗಿ ರೈತ ಸೇವಾ ಸಂಘಗಳನ್ನು ನಿರ್ಮಿಸಬೇಕಾಗುತ್ತದೆ. ರೈತರು ಬೆಳೆದು ತಂದ ವಸ್ತುಗಳನ್ನು ಮಾರಾಟ ಮಾಡುವ ಜವಾಬ್ದಾರಿಯನ್ನು ಈ ಸಂಘಗಳು ಹೊರಬೇಕಾಗುತ್ತದೆ. ಈ ಸಂಘಗಳಿಗಾಗಿ ಹಣಕಾಸು ಹಾಗೂ ತಾಂತ್ರಿಕ ತಿಳಿವಳಿಕೆಯುಳ್ಳ ಸಿಬ್ಬಂದಿಯನ್ನು ಒದಗಿಸಿಕೊಡಬೇಕಾಗುತ್ತದೆ. ಇಂಥ ಸೇವಾ ಸಂಘಗಳ ಜೊತೆಗೆ ಹೆಚ್ಚಿನ ಸಂಖ್ಯೆಯ ಮಾರುಕಟ್ಟೆಯ ಕೇಂದ್ರಗಳು ಹಾಗೂ ಸಾರ್ವಜನಿಕ ಆರೋಗ್ಯ ಸೌಲಭ್ಯಗಳನ್ನು ಅಭಿವೃದ್ಧಿ ಪಡಿಸಬೇಕಾಗುತ್ತದೆ. ದೇಶದಲ್ಲಿ ಇಂದು ಸುಮಾರು ೨೨,೦೦೦ ಮಾರುಕಟ್ಟೆಯ ಸ್ಥಳಗಳಿವೆ. ಬಹುಶಃ ಹೊಸದಾಗಿ ಅಭಿವೃದ್ಧಿ ಹೊಂದುತ್ತಿರುವ ಪ್ರದೇಗಳಲ್ಲಿ ಇನ್ನಷ್ಟು ಮಾರುಕಟ್ಟೆಯ ಸ್ಥಳಗಳನ್ನು ಅಭಿವೃದ್ಧಿ ಪಡಿಸಬೇಕಾಗುತ್ತದೆ. ಒಟ್ಟು ಸುಮಾರು ೩೦,೦೦೦ ದಷ್ಟು ಮಾರುಕಟ್ಟೆಯ ಸ್ಥಳಗಳಿರಬೇಕಾಗುತ್ತದೆ. ಇಷ್ಟು ಮಟ್ಟಿನ ಮಾರುಕಟ್ಟೆಯ ಸ್ಥಳಗಳನ್ನು ಅಭಿವೃದ್ಧಿ ಪಡಿಸುವುದರಿಂದ ಬಹಳ ಮಟ್ಟಿಗೆ ಹಳ್ಳಿಯಿಂದ ಪಟ್ಟಣಕ್ಕೆ ವಲಸೆ ಹೋಗುವುದನ್ನೂ ಸಹ ತಡೆಗಟ್ಟಬಹುದು.

೮. ಅಭಿವೃದ್ಧಿ ಪ್ರಕ್ರಿಯೆ

ಅಭಿವೃದ್ಧಿ ಪ್ರಕ್ರಿಯೆಯಲ್ಲಿ ರಾಜ್ಯದಲ್ಲಿನ ಕೆಲವೇ ಕೆಲವು ಪ್ರದೇಶಗಳು ಹಾಗೂ ಒಂದು ಪ್ರದೇಶದಲ್ಲಿನ ಕೆಲವೇ ಕೆಲವು ಕುಟುಂಬಗಳು ಮಾತ್ರ ಅನುಕೂಲವನ್ನು ಪಡೆದುಕೊಳ್ಳುತ್ತವೆ. ಉದಾಹರಣೆಗಾಗಿ, ಕರ್ನಾಟಕ ರಾಜ್ಯದಲ್ಲಿ ಮಂಡ್ಯ ವ್ಯವಸಾಯದಲ್ಲಿ ಮುಂದುವರಿದ ಜಿಲ್ಲೆಯೆಂದು ಸಾಮಾನ್ಯವಾಗಿ ಪರಿಗಣಿಸುತ್ತಾರೆ. ಅದು ಮೇಲುನೋಟಕ್ಕೆ ನಿಜವೂ ಹಾದು. ಆದರೆ ಒಳಹೊಕ್ಕು ನೋಡಿದಾಗ, ಅಂದರೆ ಮಂಡ್ಯ ಜಿಲ್ಲೆಯಲ್ಲಿನ ಮಂಡ್ಯ ತಾಲ್ಲೂಕನ್ನು ಅದೇ ಜಿಲ್ಲೆಯ ನಾಗಮಂಗಲ ತಾಲ್ಲೂಕಿನೊಂದಿಗೆ ಹೋಲಿಸಿ ನೋಡಿದಾಗ, ಒಂದಕ್ಕೊಂದಕ್ಕೆ ಅಜಗಜಾಂತರ ವ್ಯತ್ಯಾಸವಿರುವುದು ಕಂಡು ಬರುತ್ತದೆ. ಅಷ್ಟೇ ಅಲ್ಲ, ನಾಗಮಂಗಲ ತಾಲ್ಲೂಕನ್ನು ವ್ಯವಸಾಯದಲ್ಲಿ ಮುಂದುವರಿದ ತಾಲ್ಲೂಕೆಂದು ಪರಿಗಣಿಸುವುದು ಅಭಾಸವಾದೀತು. ಇದು ಫಾರಮ್ಮಿನಿಂದ ಫಾರಮ್ಮಿಗೆ ಹಾಗೂ ಪ್ರದೇಶದಿಂದ ಪ್ರದೇಶಕ್ಕೆ ಆದಾಯ ಹಂಚಿಕೆಯ ಸಮಸ್ಯೆಯನ್ನು ಗಮನಕ್ಕೆ ತರುತ್ತದೆ. ಎಲ್ಲ ಪ್ರದೇಶಗಳೂ ಅಭಿವೃದ್ಧಿಯ ಅನುಕೂಲಗಳನ್ನು ಪಡೆದುಕೊಳ್ಳುವುದು ಸಾಧ್ಯವಾಗಿಲ್ಲ ಹಾಗೂ ಒಂದೇ ಪ್ರದೇಶದಲ್ಲಿನ ಎಲ್ಲಾ ಕುಟುಂಬಗಳೂ ಅನುಕೂಲಗಳನ್ನು ಪಡೆಯುವುದು ಸಾಧ್ಯವಾಗಿಲ್ಲ. ಈ ಕಾರಣಕ್ಕೋಸ್ಕರವಾಗಿಯೇ ಆರ್ಥಿಕ ಅಭಿವೃದ್ಧಿಯಲ್ಲಿ (Percolation) ಸಿದ್ಧಾಂತ ತಿರಸ್ಕೃತವಾಗಿದೆ.

೯. ಧಾರಣೆಗಳು

ರೈತರು ಎದುರಿಸುತ್ತಿರುವ ಇನ್ನೊಂದು ಬೃಹತ್ ಸಮಸ್ಯೆಯೆಂದರೆ, ಹಿಂದೆಯೇ ಪ್ರಸ್ತಾಪಿಸಿರುವಂತೆ ವ್ಯವಸಾಯದ ಒಳವರಿ ಹಾಗೂ ಉತ್ಪನ್ನದ ಏರಿಕೆಗಳು ಪ್ರಮಾಣಾನುಗುಣವಾಗಿಲ್ಲದಿರುವುದು, ಇದನ್ನೇ ಇನ್ನೊಂದು ಮಾತಿನಲ್ಲಿ ಹೇಳುವುದಾದರೆ, ಬಹಳಷ್ಟು ಸಂದರ್ಭಗಳಲ್ಲಿ ಕೃಷಿ ಒಳವರಿಯ ಧಾರಣೆಗಳು ಉತ್ಪನ್ನದ ಧಾರಣೆಗಳಿಗಿಂತ ಹೆಚ್ಚಿರುತ್ತದೆ. ರೈತ ಬೆಳೆ ಬೆಳೆಯಲು ಹಾಕಬೇಕಾದ ಒಲವರಿಗೆ ಜಾಸ್ತಿ ಹಣ ತೆತ್ತು. ಅವನ ಉತ್ಪನ್ನಕ್ಕೆ ಕಡಿಮೆ ಬೆಲೆ ಸಿಗುವಂತಾದಾಗ ಅವನ ಶ್ರಮಕ್ಕೆ ತಕ್ಕ ಪ್ರತಿಫಲವಾದರೂ ಏನು? ಇದರಿಂದಾಗಿ ಎಷ್ಟೋ ವೇಳೆ ರೈತ ತನ್ನ ಕೈಯಿಂದ ಹಣ ಕಳೆದುಕೊಳ್ಳಬೇಕಾದ ಪ್ರಮೇಯ ಬಂದರೂ ಬರಬಹುದು. ಕನಿಷ್ಠ ಪಕ್ಷ ಒಳವರಿಯ ಧಾರಣೆಗನುಗುಣವಾದ ಬೆಲೆಯಾದರೂ ಅವನ ಉತ್ಪನ್ನಕ್ಕೆ ಬೇಡವೇ? ಇಂಥ ಪ್ರತಿಫಲಕ್ಕೆ ರೈತ ವ್ಯವಸಾಯವನ್ನಾದರೂ ಏಕೆ ಮಾಡಬೇಕು? ಬೆಳೆಯನ್ನಾದರೂ ಏಕೆ ಬೆಳೆಯಬೇಕು? ಇದರಿಂದಾಗಿ ರೈತ ವ್ಯವಸಾಯ ಲಾಭದಾಯಕವಲ್ಲವೆಂದು ವಾದಿಸುತ್ತಾನೆ. ಆದ್ದರಿಂದ ಇಡೀ ವ್ಯವಸಾಯ ಮಾರುಕಟ್ಟೆಯ ವ್ಯವಸ್ಥೆಯನ್ನು ಬದಲಿಸಿ. ರೈತನಿಗೆ ನ್ಯಾಯಬೆಲೆ ದೊರೆಯುವಂತೆ ಮಾಡಬೇಕಾಗಿದೆ.

೪. ರೈತರ ಕೆಲವು ಸಮಸ್ಯೆಗಳಿಗೆ ಪರಿಹಾರಗಳು

೧. ಸಮಾನ ಬೆಲೆ (Parity Price)

ರೈತರು ಬೆಳೆಯುವ ಪ್ರತಿ ಬೆಳೆಯ ಬೆಲೆಯನ್ನು ನಿಗದಿ ಮಾಡಲು ರಾಷ್ಟ್ರೀಯ ಬೆಲೆ ನಿರ್ಧಾರ ಸಮಿತಿ ಇರುತ್ತದೆ. ಪ್ರತಿ ಬೆಳೆಯ ಬೆಲೆಯನ್ನು ನಿರ್ಧಾರ ಮಾಡಲು ಬೆಳೆಗೆ ತಗಲುವ ವ್ಯವಸಾಯದ ಖರ್ಚು ಹಾಗೂ ಮಾನವ ಶಕ್ತಿಯ ಗಂಟೆಗಳನ್ನು ಲೆಕ್ಕಕ್ಕೆ ತೆಗೆದುಕೊಳ್ಳಬೇಕಾಗುತ್ತದೆ. ಈ ಬೆಳೆ ನಿರ್ಧಾರದ ಸಮಿತಿಯಲ್ಲಿ ರೈತರನ್ನು ಪ್ರತಿನಿಧಿಸುವ ಸದಸ್ಯರುಗಳಿರಬೇಕಾಗುತ್ತದೆ. ರಾಜ್ಯಗಳಲ್ಲಿನ ರೈತರು ಸಹಕಾರಿ ಸಂಘಗಳ ಮೂಲಕ ಸಾಲ

ಪಡೆಯುತ್ತಾರೆ. ಕೆಲವು ವೇಳೆ ರೈತರು ಸಾಲ ಮರುಪಾವತಿ ಮಾಡಿದರೂ, ಅವರಿಗೆ ಮತ್ತೆ ಸಾಲ ದೊರೆಯುತ್ತಿಲ್ಲ. ಸಾಲದ ಮರುಪಾವತಿ ಮಾಡಿದವರಿಗೆ ಯಾವ ನಿರ್ಬಂಧವನ್ನೂ ಹಾಕದೆ ಸಾಲವನ್ನು ಧಾರಾಳವಾಗಿ ಕೊಡುವುದರಿಂದ ಸಹಕಾರಿ ಸಂಘಗಳೂ ಅಭಿವೃದ್ಧಿಯಾಗುತ್ತವೆ. ತನ್ಮೂಲಕ ರೈತರಿಗೂ ಸಹಾಯವಾಗುತ್ತದೆ.

**೨. ವರ್ಷಕ್ಕೊಮ್ಮೆ ರೈತ ಸಭೆ**

ರಾಜ್ಯಮಟ್ಟದಲ್ಲಿ, ಹಾಗೂ ಜಿಲ್ಲೆ ಹಾಗೂ ತಾಲ್ಲೂಕುಗಳಲ್ಲಿ ಕ್ರಮವಾಗಿ ಮುಖ್ಯಮಂತ್ರಿಗಳು, ಜಿಲ್ಲಾ ಮಂತ್ರಿಗಳು, ವಿಭಾಗಾಧಿಕಾರಿಗಳು ಹಾಗೂ ಜಿಲ್ಲಾಧಿಕಾರಿಗಳ ಸಮ್ಮುಖದಲ್ಲಿ ವರ್ಷಕ್ಕೊಮ್ಮೆಯಾದರೂ ರೈತರ ಸಭೆ ನಡೆದು, ಅಲ್ಲಿ ರೈತರ ಸಮಸ್ಯೆಗಳನ್ನು ಕುರಿತು ಚರ್ಚಿಸುವಂತಾಗಬೇಕು. ವ್ಯವಸಾಯಕ್ಕೆ ಯೋಗ್ಯವಲ್ಲದ ಚೌಳು ಜಮೀನುಗಳನ್ನು ಯೋಗ್ಯವನ್ನಾಗಿಸುವ ಯಾವುದಾದರೂ ಯೋಜನೆಯನ್ನು ಕಾರ್ಯರೂಪಕ್ಕೆ ತರಬೇಕು. ಈ ರೀತಿಯ ಜಮೀನನ್ನು ಪಡೆದ ರೈತರಿಂದ ಕಂದಾಯ ಮುಂತಾದವುಗಳನ್ನು ವಸೂಲಿ ಮಾಡದೆ ರಿಯಾಯಿತಿ ನೀಡಬೇಕು. ರೇಷ್ಮೆ ಉದ್ಯಮಕ್ಕೆ ಸಂಬಂಧಿಸಿದಂತೆ ರೇಷ್ಮೆ ಗುಡೂಗಳನ್ನು ಕೊಳ್ಳಲು ಸಾಕಷ್ಟು ವ್ಯವಸ್ಥೆ ಇರುವುದಿಲ್ಲ. ಮಾರಾಟದ ಸಲುವಾಗಿ ರೈತರು ರೇಷ್ಮೆಗೂಡುಗಳನ್ನು ಹೊತ್ತುಕೊಂಡು ಬಹಳ ದೂರ ಹೋಗಬೇಕಾಗಿದೆ. ಯೋಗ್ಯವಾದ ದರಕ್ಕೆ ಮಾರಾಟ ಮಾಡಲು ಸರ್ಕಾರದವರು ಅಲ್ಲಲ್ಲಿ ರೇಷ್ಮೆ ಮಾರುಕಟ್ಟೆಯ ವ್ಯವಸ್ಥೆ ಮಾಡಬೇಕು. ಅತಿವೃಷ್ಟಿಯಿಂದ, ಅನಾವೃಷ್ಟಿ ಹಾಗೂ ರೋಗರುಜಿನಗಳಿಂದ ಎಷ್ಟೋ ವೇಳೆ ರೈತನ ಬೆಳೆ ಹಾಳಾಗುತ್ತಿರುವುದನ್ನು ಕಣ್ಣಾರೆ ಕಾಣುತ್ತಿದ್ದೇವೆ. ಇದರಿಂದಾಗಿ ರೈತನಿಗೆ ತಾನು ಬೆಳೆದ ಬೆಳೆಗೆ ಪ್ರತಿಫಲ ಸಿಗದೆ ಕಂಗಾಲಾಗುತ್ತಾನೆ, ಇಂಥ ಸಂದರ್ಭಗಳಲ್ಲಿ ಬೆಳೆಗೆ ವಿಮೆಯ ಅಗತ್ಯವಿರುತ್ತದೆ. ಇದನ್ನು ಜಾರಿಗೆ ತಂದು ರೈತನನ್ನು ಕಷ್ಟದಿಂದ ಪಾರುಮಾಡಬೇಕು.

**೩. ಸಣ್ಣ ನೀರಾವರಿ ಯೋಜನೆಗಳು**

ರಾಜ್ಯದಲ್ಲಿ ಬೃಹತ್ ನೀರಾವರಿ ಯೋಜನೆಗಳ ಜೊತೆಗೆ ಅಲ್ಲಲ್ಲಿ ಚಿಕ್ಕ ಚಿಕ್ಕ ನೀರಾವರಿ ಯೋಜನೆಗಳನ್ನು ಕೈಗೊಳ್ಳುವುದರಿಂದ ತೀವ್ರಗತಿಯಲ್ಲಿ ನೀರನ್ನು ಒದಗಿಸಲು ಅನುಕೂಲವಾಗುತ್ತದೆ. ಆದ್ದರಿಂದ ಸರ್ಕಾರ ಸಣ್ಣ ನೀರಾವರಿ, ಏತ ನೀರಾವರಿ, ಬೋರ್ ಬಾವಿ ಮುಂತಾದವುಗಳಿಗೆ ಆದ್ಯತೆ ನೀಡಬೇಕು. ದೇಶದಲ್ಲಿ ಬಹಳಷ್ಟು ಬೇಸಾಯ ಮಳೆಯನ್ನು ಅವಲಂಬಿಸಿದೆ. ಖುಷ್ಕಿ ಬೇಸಾಯ ಲಾಭದಾಯಕವಾಗುವಂತೆ ಮಾಡುವ ಯೋಜನೆಯನ್ನು ರೂಪಿಸಿ ಕಾರ್ಯಗತ ಮಾಡಬೇಕು.

**೪. ಕೃಷಿ ಒಂದು ಉದ್ಯಮ (Industry)**

ಕೃಷಿಯನ್ನು ಒಂದು ಉದ್ಯಮವೆಂದು ಪರಿಗಣಿಸಬೇಕು. ಪ್ರತಿಯೊಂದು ಕೃಷಿ ಕುಟುಂಬವನ್ನೂ ಒಂದು ಔದ್ಯೋಗಿಕ ಘಟಕವೆಂದು ಪರಿಗಣಿಸಬೇಕು. ಎಂದರೆ, ಕೃಷಿ ಕಾರ್ಮಿಕರಿಗೆ ಇತರ ಕಾರ್ಮಿಕರಿಗೆ ಸಿಗುವಂತೆ ಎಲ್ಲ ಸೌಲಭ್ಯಗಳೂ ಸಿಗುವಂತಾಗಬೇಕು. ಮಳೆ, ಗಾಳಿ, ಬಿಸಿಲೆನ್ನದೆ ಕೆಲಸಮಾಡುವ ರೈತ ಸಮುದಾಯಕ್ಕೆ ಕೃಷಿಯಲ್ಲಿ ಹೆಚ್ಚಿನ ಉತ್ಪಾದನೆ ಮಾಡುವವರಿಗೆ, ಸಂಶೋಧನೆ ನಡೆಸುತ್ತಿರುವವರಿಗೆ ಪ್ರತಿವರ್ಷ ಆಯ್ಕೆ ಮಾಡಿ, ಸೂಕ್ತವಾಗಿ ಪ್ರೋತ್ಸಾಹಿಸುವುದು ಅಗತ್ಯ.

### ೫. ಕೃಷಿ ಯೋಜನೆಗಳು ಫಲಪ್ರದವೇ?

ಕೃಷಿ ಯೋಜನೆಗಳಲ್ಲಿ ಹಾಗೂ ಯೋಜನೆಗಳನ್ನು ಕಾರ್ಯಗತಗೊಳಿಸುವಲ್ಲಿ ರೈತ ಸಮುದಾಯವನ್ನು ತೊಡಗಿಸುವುದರಿಂದ ರೈತರ ಎಷ್ಟೋ ಸಮಸ್ಯೆಗಳಿಗೆ ಪರಿಹಾರ ಸಿಕ್ಕಿದಂತಾಗುತ್ತದೆ. ನಮ್ಮಲ್ಲಿ ಎರಡು ಬಗೆಯ ಯೋಜನೆಗಳಿವೆ. ಮೇಲ್ಮಟ್ಟದಿಂದ ಕೆಳಗಿಳಿಯುವ ಯೋಜನೆ (Top-down Planning) ಹಾಗೂ ಕೆಳಮಟ್ಟದಿಂದ ಮೇಲೇರುವ ಯೋಜನೆ (Bottom-up Planning) ಈಗ ನಮ್ಮಲ್ಲಿ ಹೆಚ್ಚು ಬಳಕೆಯಲ್ಲಿರುವುದು ಮೇಲ್ಮಟ್ಟದಿಂದ ಕೆಳಗಿಳಿಯುವ ಯೋಜನೆ. ಇದು ಅಷ್ಟು ಫಲ ಪ್ರದವಲ್ಲ. ಕಾರಣ ಈ ಯೋಜನೆಯನ್ನು ತಯಾರಿಸುವ ಅಧಿಕಾರಿಗಳು ಎಷ್ಟೋ ವೇಳೆ ಕೆಳಮಟ್ಟದವರ, ಅಂದರೆ ರೈತರ ಕಷ್ಟಸುಖಗಳು, ಹೆಚ್ಚು ಸಮಸ್ಯೆಗಳು ಅರ್ಥವಾಗಿಲ್ಲವೆಂದೇ ಹೇಳಬೇಕು. ಕೆಳಮಟ್ಟದಿಂದ ಮೇಲೇರುವ ಯೋಜನೆಗಳೂ ನಮ್ಮಲ್ಲಿ ಫಲಪ್ರದವಾಗಿಲ್ಲ. ಈ ಯೋಜನೆ ನಮ್ಮಲ್ಲಿ ಹಳ್ಳಿಯ ಪಂಚಾಯಿತಿ, ತಾಲ್ಲೂಕು ಮಟ್ಟ ಹಾಗೂ ಇತರ ಸಂಘ ಸಂಸ್ಥೆಗಳ ಮಟ್ಟದಲ್ಲಿ ಬಳಕೆಯಲ್ಲಿದೆ. ಆದರೆ ಇದರಲ್ಲಿ ರೈತ ಸಮುದಾಯವನ್ನು ಪ್ರತಿನಿಧಿಸುವ ಪ್ರತಿನಿಧಿಗಳಿಗೆ ಪರಿಣಾಮಕಾರಿಯಾಗಿ ಭಾಗವಹಿಸಲು ಬೇಕಾದ ಮುನ್ನೋಟ ಹಾಗೂ ಸಾಮರ್ಥ್ಯವಿರುವುದಿಲ್ಲ. ಎಷ್ಟೋ ವೇಳೆ ಈ ಪ್ರತಿನಿಧಿಗಳು ಇಂಥ ಸಭೆಗಳಲ್ಲಿ ಪಾಲ್ಗೊಳ್ಳುವುದೇ ಇಲ್ಲ. ಒಂದು ವೇಳೆ ಪಾಲ್ಗೊಂಡರೂ, ಅವರು ತಮ್ಮ ಸಮಸ್ಯೆಗಳನ್ನು ಪರಿಣಾಮಕಾರಿಯಾಗಿ ಮುನ್ನುಗ್ಗುವ, ಚರ್ಚಿಸುವ, ಪ್ರತಿಭಾವಂತರಾಗಿರುವುದಿಲ್ಲ. ಅಂಥ ಸಂದರ್ಭಗಳಲ್ಲಿ ಆ ಮಟ್ಟದಲ್ಲಿನ ಬಿ.ಡಿ.ಓ. ಮತ್ತಿತರ ಅಧಿಕಾರಿಗಳು ಹೇಳಿದ್ದೇ ರೈತರ ಸಮಸ್ಯೆಯಾಗುತ್ತದೆ. ಇದರಿಂದಾಗಿ ಕೆಳಮಟ್ಟದಿಂದ ಮೇಲೇರುವ ಯೋಜನೆಗಳೂ ನಮ್ಮಲ್ಲಿ ಫಲಪ್ರದವಾಗಿಲ್ಲ.

ಇಷ್ಟಾದರೂ ಮೇಲ್ಮಟ್ಟದಿಂದ ಕೆಳಗಿಳಿಯುವ ಯೋಜನೆಗಳು ಎಲ್ಲಿಯವರೆಗೆ ಬಳಕೆಯಲ್ಲಿರುತ್ತವೋ ಅಲ್ಲಿಯವರೆಗೆ ರೈತರ ಅಭಿವೃದ್ಧಿಯಾಗುವುದಿಲ್ಲ. ರೈತರ ಸಮಸ್ಯೆಗೆ ಪರಿಹಾರವೂ ಸಿಗುವುದಿಲ್ಲ. ಕೆಳಮಟ್ಟದಿಂದ ಮೇಲೇರುವ ಯೋಜನೆಗಳಲ್ಲಿ ಹಾಗೂ ಅವುಗಳನ್ನು ಕಾರ್ಯಗತಗೊಳಿಸುವಲ್ಲಿ ರೈತರ ಮೂಲಭೂತ ಸಮಸ್ಯೆಯನ್ನರಿತ, ಸಾಕಷ್ಟು ಪ್ರತಿಭಾವಂತರಾಗಿರುವ, ರೈತ ಪ್ರತಿನಿಧಿಗಳು ಪಾಲ್ಗೊಳ್ಳುವಂತಾಗಬೇಕು. ಆಗಲೇಗ ಕೆಳಮಟ್ಟದಿಂದ ಮೇಲೇರುವ ಯೋಜನೆಗಳು ಫಲಪ್ರದವಾಗುತ್ತವೆ, ಕೆಲವೊಂದು ವ್ಯವಸಾಯ ಸಮಸ್ಯೆಗಳಿಗಾದರೂ ಪರಿಹಾರ ದೊರಕಿದಂತಾಗುತ್ತದೆ.

### ೭.೪. ಒಕ್ಕಲಿಗರ ತೋಟಗಾರಿಕೆ ಸಮಸ್ಯೆಗಳು

ಕರ್ನಾಟಕ ರಾಜ್ಯದ ತೋಟಗಾರಿಕೆಯಲ್ಲಿ ಒಕ್ಕಲಿಗರ ಪಾತ್ರ ಹಿಂದಿಗಿಂತಲೂ ಇಂದು ಮಹತ್ವಪೂರ್ಣವಾಗಿದೆ. ಅಲ್ಲದೆ, ಅವರ ಕೊಡುಗೆ ರಾಜ್ಯದಲ್ಲಿ ತುಂಬ ಹೆಚ್ಚಿನದು. ಒಕ್ಕಲಿಗರು ಅತಿ ಹೆಚ್ಚಿನ ಸಂಖ್ಯೆಯಲ್ಲಿ ಹಳ್ಳಿಗಾಡಿನಲ್ಲೇ ವಾಸಿಸತಕ್ಕವರು. ಇವರ ಕುಲಕಸುಬೇ ಕೃಷಿ ಮತ್ತು ತೋಟಗಾರಿಕೆ. ಹಳೆಯ ತೋಟಗಾರಿಕೆ ಹಿಂದಿನ ಮೈಸೂರು ರಾಜ್ಯದಲ್ಲಿ ಪ್ರಪ್ರಥಮವಾಗಿ ಬೆಳೆದು ಬಂದರೂ, ಬಹಳಷ್ಟು ಸಮಸ್ಯೆಗಳು ಇಂದಿಗೂ ಹಾಗೆಯೇ ಮುಂದುವರಿದಿವೆ. ರೈತರ ಕಷ್ಟ ಕಾರ್ಪಣ್ಯಗಳನ್ನು ಮೆಲುಕುಹಾಕಿದರೆ, ಇವರೇನು ಶಾಪಗ್ರಸ್ತರಾಗಿಯೇ ಹುಟ್ಟಿರುವರೇನೊ ಎಂಬ ಅಭಿಪ್ರಾಯ ಮೂಡುತ್ತದೆ. ಏಕೆಂದರೆ, ಇವರು ಕೂಡಿಡುವುದಕ್ಕಿಂತ ಕೊಡುವುದರಲ್ಲೇ ತಮ್ಮ ಧಾರಾಳಕ್ಕೆ ಹೆಸರಾದವರು. ಸರ್ಕಾರದ ಮಟ್ಟದಲ್ಲಿ ಚರ್ಚಿಸುವುದಾದರೆ 'ಕೊಟ್ಟದ್ದು ತನಗೆ, ಕಟ್ಟಿಟ್ಟದ್ದು ಪರರಿಗೆ' ಎಂಬ

ಸರ್ವಜ್ಞನ ನುಡಿ ಇವರಿಗೆ ಸಲ್ಲಬೇಕು. ಪ್ರತಿನಿತ್ಯದಿನಕರ ಉದಯವಾದಂದಿನಿಂದ ಅಸ್ತಮವಾಗುವವರೆಗೆ ಮೈಮುರಿದು ಮನೆ ಮಂದಿ ಎಲ್ಲರೂ ದುಡಿದರೂ, ಒಂದೆ ಹೊತ್ತಿಗೆ ಸಾಲದೇ ಅನೇಕ ಕುಟುಂಬಗಳನ್ನು ಈ ನಾಡಿನ ಹಳ್ಳಿಗಳ್ಳಲ್ಲಿ ಹುಟ್ಟಿ ಬೆಳೆದು, ಅವರೊಂದಿಗೆ ಬಾಳದೆ, ಪಟ್ಟಣ ಸೇರಿರುವವರಿಗೆ ಗೊತ್ತಿರುವ ವಿಷಯ.

**ಮಳೆಗಾಲ :** ಒಕ್ಕಲಿಗರಿಗೆ ನೈಸರ್ಗಿಕವಾದ ಸಮಸ್ಯೆಗಳು ಬಹಳ. ಪ್ರತಿ ವರ್ಷವೂ ಒಂದಲ್ಲ ಒಂದು ಕಡೆ ಈ ಸಮಸ್ಯೆಗಳನ್ನು ಅವು ಎದುರಿಸಬೇಕಾಗಿ ಬಂದಿದೆ. ಅದರಲ್ಲೂ, ಬಯಲು ಸೀಮೆಯಲ್ಲಿ ವಾಸಿಸುವ ಲಕ್ಷಾಂತರ ಕುಟುಂಬಗಳು ವರುಣನನ್ನೇ ನಂಬಿ, ದಿಗಂತದತ್ತ ಮುಖಮಾಡಿ, ಕೊನೆಗೂ ಒಂದು ಹನಿ ಮಳೆಯಿಲ್ಲದೆ ಬೆಳೆಗಳನ್ನು ಬೆಳೆಯುವುದಿರಲಿ, ಕುಡಿಯಲಿಕ್ಕೂ ಕೆಲವು ಸಲ ಒಂದು ಹನಿ ನೀರಿರುವುದಿಲ್ಲ. ಒಂದೆರಡು ಬಾರಿ ಮುಂಗಾರು ಬಂತೆಂದು ಜಮೀನು ಹಸನು ಮಾಡಿದವರು ಆ ಮೇಲೆ ಭರವಸೆ ಇಟ್ಟು, ಬೀಜವತ್ತಿ, ಮುಂದೆ ಮಳೆಯಿಲ್ಲದೆ ಬಿತ್ತಿದ ಬೀಜ, ಉಳುಮೆ ಬಿತ್ತು ಇತರ ಖರ್ಚುಗಳೆಲ್ಲಾ ಹಾಗೆಯೇ ಹಾಳಾಗಿ ನಿರಾಶರಾಗುವ ಸಂಸಾರಗಳೆಷ್ಟೋ. ಮಲೆನಾಡು ಮತ್ತು ಪಶ್ಚಿಮ ಘಟ್ಟಗಳ ಕೆಳಗೆ ವಾಸಿಸುವ ಒಕ್ಕಲಿಗರ ಸಮಸ್ಯೆಗಳು ಮತ್ತೊಂದು ರೂಪ. ಬಯಲು ಸೀಮೆಯವರಿಗಿಂತ ಆರ್ಥಿಕವಾಗಿ ಇವರು ಮುಂದುವರಿದ ಜನಾಂಗವೆಂಬುದು ತಾತ್ವಿಕವಾಗಿ ನಿಜವಾದರೂ, ಅವರು ವರುಣನ ಕೋಪಕ್ಕೆ ತುತ್ತಾಗಿ ಬೆಳೆಗಳು ಹಾಳಾಗಿ ನಷ್ಟ ಅನುಭವಿಸುತ್ತಾರೆ.

**ತೋಟಗಾರಿಕೆ :** ಮಲೆನಾಡಿನಲ್ಲಿ ತೋಟಗಾರಿಕೆ ಅಲ್ಲಿನ ನೈಸರ್ಗಿಕ ವಾತಾವರಣದಿಂದ ಅನಾದಿಕಾಲದಿಂದಲೂ ಇದೆ. ಅಲ್ಲಲ್ಲಿ ತೆಂಗು, ಅಡಿಕೆ ತೋಟಗಳು ಮೊದಲಿನಿಂದಲೂ ಇವೆ. ಆದರೆ ಬಯಲು ಸೀಮೆಯಲ್ಲಿ ಕೃಷಿಯೇ ಒಕ್ಕಲಿಗರ ಮುಖ್ಯ ಬೆಳೆ. ತೋಟಗಾರಿಕೆ ಹಿಂದೆ ಕೆಲವೇ ಒಕ್ಕಲಿಗ ಜನಾಂಗಗಳಲ್ಲಿ ಬಯಲು ಸೀಮೆಯ ಚನ್ನಪಟ್ಟಣ, ರಾಮನಗರ, ತುಮಕೂರು, ತಿಪಟೂರು, ಅರಸೀಕೆರೆ, ಮೈಸೂರಿನ ಒಂದೆರಡು ತಾಲ್ಲೂಕು ಹೀಗೆ ಎಣಿಸುವಷ್ಟು ಮಾತ್ರ ಕೆಲವೇ ವರ್ಗಗಳಲ್ಲಿ ಬಳಕೆಯಲ್ಲಿತ್ತು.

ದಿವಂಗತ ಎಚ್.ಸಿ. ಜವರಯ್ಯನವರ ಕಾಲದಲ್ಲಿ ಕ್ರಮವಾದ ತೋಟಗಾರಿಕೆ ಅಂಕುರಾರ್ಪಣವಾಯಿತು. ಆ ತರುವಾಯ ತೋಟಗಾರಿಕೆಯ ಬೆಳೆಗಳಿಂದ ಮಾತ್ರವೇ ಹಳ್ಳಿಗಾಡಿನ ಜನಕ್ಕೆ ಮೋಕ್ಷವೆಂಬುದನ್ನು ಮಾಡಿ, ತೋರಿಸಿ ಕೊಟ್ಟ ಕೀರ್ತಿ ಡಾಕ್ಟರ್ ಎಂ.ಎಚ್. ಮರಿಗೌಡರಿಗೆ ಸಲ್ಲಬೇಕು. ಹಂಚಿ ಕಡ್ಡಿ ಬೆಳೆಯುವ ಬರಡು ಭೂಮಿಯಲ್ಲಿ ರಸಭರಿತವಾದ ಸಪೋಟ, ಹಲಸು, ಮಾವು ಮುಂತಾದ ಹಣ್ಣಿನ ತೋಟಗಳನ್ನು ಮಾಡುವ ವಿಧಾನವನ್ನು ಇವರು ತೋರಿಸಿಕೊಟ್ಟರು. ಈಗಲೂ ನಾವು ಅನೇಕ ಹೆದ್ದಾರಿಗಳಲ್ಲಿ ಅವರ ಕಾಲದಲ್ಲಿ ಮಾಡಿರುವ ನೂರಾರು ಎಕರೆ ದಿಣ್ಣೆ ತೋಟಗಳು (Dry Orchrds) ಫಲ ಕೊಡುತ್ತಿರುವುದನ್ನು ನೋಡಬಹುದು. ಇದರಿಂದ ರಾಗಿ, ಜೋಳವನ್ನೇ ಬೆಳೆಯುತ್ತ ಸುಖ ಭವಿಷ್ಯವನ್ನೇ ಕಾಣದಿದ್ದ ಅನೇಕ ಜನಕ್ಕೆ ತಾವು ತೋಟಗಾರಿಕೆ ಮಾಡಿದರೆ ಉತ್ತಮ ಭವಿಷ್ಯ ರೂಪಿಸಿಕೊಳ್ಳಬಹುದೆಂದು ತೋರಿಸಿಕೊಟ್ಟ ಮಹಾಶಿಲ್ಪಿ ಇವರು. 'ಅದೇ ನಮ್ ಮರಿಗೌಡ್ರು, ಪುಣ್ಯಾತ್ಮ, ನಮ್ಗೆಲ್ಲಾ ಬೋ ಉಪಕಾರ ಮಾಡವ್ರೆ. ನಂಮ್‌ಗೆ ಗೊತ್ತಿತ್ತ ಅಂಚಿ ಕಡ್ಡಿ ಬೆಳೆಯೋ ಕಡೆ, ಹಣ್ಣಿನ ಗಿಡ ಬೆಳೆಸ್‌ಬೌದು ಅಂತ.' ಇಲ್ಲಿನ ಜನ ತಮ್ಮ ಹೃತ್ಪೂರ್ವಕ ಕೃತಜ್ಞತೆ ಸಲ್ಲಿಸುವುದನ್ನು ಕಾಣಬಹುದು.

**ತೋಟಗಾರಿಕೆ ಸಮಸ್ಯೆಗಳು :** ಮುಖ್ಯವಾಗಿ, ತೋಟಗಾರಿಕೆಯ ಸಮಸ್ಯೆಗಳನ್ನು ಐದು ಭಾಗವಾಗಿ ಮಾಡಿಕೊಳ್ಳಬಹುದು. ತೋಟಗಾರಿಕೆಯ ಅಭಿವೃದ್ಧಿಗೆ ಕರ್ನಾಟಕ ಸರ್ಕಾರ ಎಲ್ಲಾ ರೀತಿಯ ಸಹಾಯವನ್ನೂ

ನೇರವಾಗಿ ಅಥವಾ ಸಹಕಾರ ಸಂಸ್ಥೆ ಮತ್ತು ಷೆಡ್ಯೂಲ್ಡ್ ಬ್ಯಾಂಕುಗಳ ಮೂಲಕ ನೀಡುತ್ತಿದ್ದರೂ ಅದು ಶ್ರೀಸಾಮಾನ್ಯರ ಕೈಗೆ ಎಟುಕುತ್ತಿಲ್ಲ ಎನ್ನಬಹುದು.

ಮೊದಲನೆಯದಾಗಿ ನಮ್ಮ ಜನರ ಸಮಸ್ಯೆ, ಎಂದರೆ ತೋಟಗಾರಿಕೆ ತಮ್ಮ ಕುಲಕಸುಬೆಂದು ಗೊತ್ತಿದ್ದರೂ, ತಮ್ಮ ಸಂತಾನಕ್ಕೆ ಇತರ ಕಸುಬಿಗೆ ದಾರಿಯಾಗುವ ವಿದ್ಯೆಯನ್ನು ಕಲ್ಲಿಸುತ್ತಿರುವುದನ್ನು ನಾವು ಸಾಮಾನ್ಯವಾಗಿ ನೋಡುತ್ತಿದ್ದೇವೆ. ಮೂರ ಜನ ಮಕ್ಕಳಿದ್ದರೆ ತೋಟಗಾರಿಕೆಯೇ ಜೀವನಾಧಾರವೆಂದು ಗೊತ್ತಿದ್ದರೂ, ಹೆಚ್ಚಿಗೆ ಆ ದಿಶೆಯಲ್ಲಿ ವಿದ್ಯೆ ಕಲಿಸುತ್ತಿಲ್ಲ. ವೈಜ್ಞಾನಿಕವಾಗಿ ತೋಟದ ಬೆಳೆಗಳನ್ನು ಬೆಳೆದು ಆರ್ಥಿಕವಾಗಿ ಕುಟುಂಬವನ್ನು ಮುಂದುವರಿಸಬಹುದೆಂಬುದನ್ನು ಮರೆತು, ಸಾಕಷ್ಟು ಭೂಮಿ ಹೊಂದಿರುವ ಅನೇಕ ಕುಟುಂಬಗಳು ಮಕ್ಕಳನ್ನು ವೈದ್ಯರನ್ನಾಗಿಯೋ, ಇಂಜನಿಯರನ್ನಾಗಿಯೋ, ಅಥವಾ ವಕೀಲರನ್ನಾಗಿಯೋ ಮಾಡಿ, ಕೈಲಿದ್ದ ಮೂವರನ್ನೂ ಹಳ್ಳಿಯಿಂದ ಕಳಿಸುವುದರಿಂದ, ಕುಲಕಸುಬು ತಂದೆ, ತಾಯಿ ಇರುವವರೆಗೆ ನಡೆದು, ಮುಂದೆ ಮೊಟಕಾಗಿರುವ ಅನೇಕ ಕುಟುಂಬಗಳನ್ನು ನಾವು ನೋಡಬಹುದು. ಇದರಿಂದ ಒಂದು ಸಂಸಾರಕ್ಕೇ ಅಲ್ಲ, ಆ ಹಳ್ಳಿಗೇ ಧಕ್ಕೆಯಾಗಿರುವುದೂ ಉಂಟು. ಏಕೆಂದರೆ, ಈ ತೋಟಗಾರಿಕೆಯಲ್ಲಿ ಕಲಿತ ತರುಣರಿದ್ದರೆ ತಮ್ಮ ಕುಟುಂಬದ ಭೂಮಿಯನ್ನು ಅಭಿವೃದ್ಧಿಪಡಿಸುವುದೇ ಅಲ್ಲದೆ, ತಮ್ಮ ನೆರೆ ಹೊರೆಯವರಿಗೂ ಮಾರ್ಗದರ್ಶನ ಮಾಡಬಹುದು. ಇಂದಿಗೂ ಅನೇಕ ಕುಟುಂಬಗಳ ಸಮಸ್ಯೆ ಹಾಗೆಯೇ ಉಳಿದಿದೆ. ಅದರಲ್ಲೂ ತೋಟಗಾರಿಕೆಯಲ್ಲಿ ಕಲಿತಿರುವವರೂ ಕೂಡ ಹಳ್ಳಿಯಿಂದ ಬಂದು, ಒಬ್ಬಿಬ್ಬರು ನೌಕರಿ ಮಾಡಿದರೆ ಮರ್ಯಾದೆ ಎಂದು ಪಟ್ಟಣ ಸೇರಿ, ತಮ್ಮ ಕುಲಕಸುಬನ್ನು ಹಿರಿಯರಿಗೆ ಬಿಟ್ಟು ಹೋಗಿರುವವರನ್ನೂ ಕಾಣಬಹುದು.

ಎರಡನೆಯದಾಗಿ, ಹಳ್ಳಿಯ ಒಕ್ಕಲಿಗರಲ್ಲಿ ಬಹುಪಾಲು ಸಣ್ಣಪ್ರಮಾಣ ಅಥವಾ ಮಧ್ಯಮ ವರ್ಗಕ್ಕೆ ಸೇರಿದವರು. ಅವರಿಗೆ ಕೆಲವು ಉತ್ತಮ ಜಾತಿಯ ಹಣ್ಣು. ತರಕಾರಿಗಳನ್ನು ಬೆಳೆಯಬೇಕೆಂಬ ಆಸೆ ಇದ್ದರೂ, ಕಾಲಕ್ಕೆ ತಕ್ಕಂತೆ ಧನಸಹಾಯವಿಲ್ಲದೆ ಕೈಬಿಡುವುದು ಸರ್ವೇಸಾಮಾನ್ಯವಾಗಿದೆ. ನಮ್ಮ ಸಹಕಾರ ಸಂಸ್ಥೆಗಳ ಮೂಲಭೂತ ನೀತಿಯಲ್ಲಿ ಅನೇಕ ಮಾರ್ಪಾಡಾಗುವ ವರೆಗೆ ಒಕ್ಕಲುತನ ಮಾಡುವವರ ಸಮಸ್ಯೆ ಬಗೆಹರಿಯಲಾರದು. ಇದರ ಜೊತೆಗೆ ಹಳ್ಳಿಯಲ್ಲಿ ಉಳಿದಿರುವ ಮತ್ತು ಹಳ್ಳಿಯಲ್ಲಿ ಬೆಳೆದು, ವ್ಯಾಸಂಗ ಮಾಡಿ, ಪಟ್ಟಣಗಳಲ್ಲಿ ಜೀವನ ನಡೆಸುತ್ತಿರುವ ಅನೇಕ ವಿದ್ಯಾವಂತರು ತಮ್ಮ ತಮ್ಮ ಹಳ್ಳಿಗಳ ವಿಷಯದಲ್ಲಿ ಶ್ರದ್ಧೆ ವಹಿಸಿ, ಅವರ ಸಮಸ್ಯೆಗಳನ್ನು ಬಗೆಹರಿಸುವುದರಲ್ಲಿ ಮಾರ್ಗದರ್ಶನ ನೀಡಬೇಕು.

ಮೂರನೆಯದಾಗಿ, ಹಳ್ಳಿಯ ಜನ ತೋಟಗಾರಿಕೆ ಬೆಳೆ ಬೆಳೆಯಬೇಕೆಂದು ಮನಸ್ಸುಮಾಡಿ, ಸರಿಯಾಗಿ ಮಾರ್ಗದರ್ಶನವಿಲ್ಲದೆ, ಯಾವ ಬೆಳೆ ಎಲ್ಲಿ ಹೇಗೆ ಬೆಳೆಯಬೇಕೋ ಹಾಗೆ ಬೆಳೆಯದೆ, ಮಾಡಿದ ಸಾಲವನ್ನು ತೀರಿಸಲಾಗದೆ, ಜೀವಿತವೆಲ್ಲಾ ಸಾಲಗಾರರಾಗಿ, ಈ ಸಾಲದ ಹೊರೆಯನ್ನು ಮುಂದಿನ ಪೀಳಿಗೆಗೆ ಬಿಟ್ಟುಹೋಗಿರುವ ಸಂದರ್ಭಗಳಿಗೇನೂ ಕಡಿಮೆ ಇಲ್ಲ, ಏಕೆಂದರೆ, ಯಾವ ಬೆಳೆ ಬೆಳೆಯಬೇಕಾದರೂ ಮೊದಲು ಸ್ಥಳವನ್ನು ಆರಿಸಿಕೊಳ್ಳಬೇಕು. ಅದರಲ್ಲಿ ಆ ಸ್ಥಳದ ಭೂಗುಣ, ಹವಾಗುಣ ಮತ್ತು ಮಣ್ಣಿನ ಬಗ್ಗೆ ಅನುಭವ ಬೇಕು. ಇದನ್ನು ತಾಂತ್ರಿಕವಾಗಿ ಸಂಬಂಧಪಟ್ಟ ಅಧಿಕಾರಿಗಳು ಅವರಿಗೆ ಸೂಕ್ತವಾದ ಸಲಹೆಗಳನ್ನು ನೀಡಬೇಕು. ಇಲ್ಲದಿದ್ದರೆ, ತೋಟಗಾರ ದೀವಾಳಿಯಾಗುವುದು ಖಚಿತ. ಪ್ರತಿಯೊಂದು ಹಣ್ಣು, ತರಕಾರಿ ಇವುಗಳಿಗೆ ಮಣ್ಣಿನ ಕ್ಷಾರ ಮತ್ತು ಗಾಳಿಯ ಪ್ರಮಾಣ ಇರಬೇಕೆಂದಿದೆ. ಅದು ಹೆಚ್ಚು ಕಡಿಮೆಯಾದರೆ ಬೆಳೆದ ಬೆಳೆ ಸರಿಯಾಗಿ ಕೈ ಸೇರುವುದಿಲ್ಲ.

ಒಕ್ಕಲಿಗರು ಸ್ವಲ್ಪ ಆತುರದ ಜನ. "ನನ್ನ ಜಮೀನು ಚಿನ್ನ, ಕಾಣಯ್ಯಾ, ಏನು ಬೇಕಾದರೂ ಬೆಳೆಯಬಹುದು" ಎಂದು ಆರಂಭ ಶೂರತ್ವ ತೋರಿಸಿ, ತಾವು ಹಾಕಬೇಕಾದ ಹಣ್ಣು ಗಿಡಕ್ಕೆ ಎಲ್ಲಾ ಸಿದ್ಧತೆ ಮಾಡಿ, ಸಾಕಷ್ಟು ಹಣ ಖರ್ಚುಮಾಡಿ, ಗಿಡ ಹಾಕಿಯೂ ಬಿಡುತ್ತಾರೆ. ಬೆಳೆ ಬಾರದೆ ಕುಂಟಿತವಾದಾಗ ತಜ್ಞರ ಸಂಪರ್ಕ ಬೆಳೆಸುತ್ತಾರೆ. ಆ ಬೆಳೆಗೆ ಆ ಭೂಮಿ ಯೋಗ್ಯವಲ್ಲವೆಂದು ಆಗ ಅವರಿಗೆ ಅರಿವಾಗುತ್ತದೆ. ಅಷ್ಟರಲ್ಲಿ ಬಹಳಷ್ಟು ಹಣ ಖರ್ಚಾಗಿ ಮುಂದೆ ಸರಿಪಡಿಸಲು ಹಣವಿಲ್ಲದೆ, ಅಷ್ಟಕ್ಕೇ ಕೈ ಬಿಟ್ಟು ನಿರಾಶರಾಗಿರುವವರ ಸಂಖ್ಯೆ ವಿರಳವೇನಲ್ಲ.

ನಾಲ್ಕನೆಯದಾಗಿ, ತೋಟಗಾರಿಕೆ ಬೆಳೆಗಳನ್ನು ಬೆಳೆಸಲು, ಕಾಲ ಕಾಲಕ್ಕೆ ತಾಂತ್ರಿಕ ನೆರವು ದೊರೆಯುವುದಿಲ್ಲ, ಎಂದರೆ, ಯಾವ ಕಾಲದಲ್ಲಿ ಯಾವ ಬೆಳೆ ಬೆಳೆಸಬೇಕು. ಅದನ್ನು ಬಿತ್ತನೆ ಯಾವಾಗ ಮಾಡಬೇಕು, ಉತ್ತಮ ತಳಿಯ ಬೀಜಗಳನ್ನು ಯಾವ ರೀತಿ ನೆಡಬೇಕು, ಬೇಸಾಯ ಕ್ರಮ ಮತ್ತು ಯಾವ ಪ್ರಮಾಣದಲ್ಲಿ ರಸ ಗೊಬ್ಬರ ಹಾಕಬೇಕು ಇವೆಲ್ಲಾ ಬಹಳ ಮುಖ್ಯ. ಇದರ ಬಗ್ಗೆ ಮೂಲೆ ಹಳ್ಳಿಗಳಲ್ಲಿ ಒಕ್ಕಲಿಗರಿಗೆ ಮಾಹಿತಿ ಖಂಡಿತ ಸಿಗುತ್ತಿಲ್ಲವೆಂದರೆ ಅತಿಶಯೋಕ್ತಿಯಾಗಲಾರದು. ಪಟ್ಟಣಗಳ ಅಕ್ಕಪಕ್ಕದಲ್ಲಿರುವವರಿಗೆ ಇವುಗಳ ಸೌಲಭ್ಯ ಶೀಘ್ರವಾಗಿ ಆಗುತ್ತದೆ. ಒಂದು ಪಕ್ಷ ಬೆಳೆ ಬೆಳೆದರೂ ಅದಕ್ಕೆ ತಗಲುವ ರೋಗರುಜಿನಗಳ ಬಗ್ಗೆ ನಿವಾರಣೋಪಾಯಗಳು ಕಾಣದೆ, ಬೆಳೆ ಕಳೆದುಕೊಳ್ಳುವುದೂ, ಅಥವಾ ಸಕಾಲಕ್ಕೆ ಔಷಧಿಗಳು ಸಿಗದೆ ಹೋಗುವುದೂ ಸರ್ವೇ ಸಾಮಾನ್ಯ. ಯಾವುದೋ ಮೂಲೆಯಲ್ಲಿರುವ ಒಕ್ಕಲಿಗರು ಬೆಳೆಗೆ ಅಂಟಿರುವ ರೋಗವನ್ನು ತೋರಿಸಲು ಮೈಲಿಗಟ್ಟಲೆ ಪಟ್ಟಣಕ್ಕೆ ಬಂದರೂ, ತಜ್ಞರು ಅವರನ್ನು ಒಬ್ಬರಿಂದ ಮತ್ತೊಬ್ಬರಿಗೆ ಅಲೆದಾಡಿಸುವ ಸಂಭವವೂ ಉಂಟು. ಹೀಗಾಗಿ, ಮೊದಲೇ ಋಣಬಾಧೆಯಲ್ಲಿರುವ ಬೆಳೆಗಾರನಿಗೆ ಪಟ್ಟಣದ ಈ ವೈಪರೀತ್ಯ ನೋಡಿ, ಮನಸ್ಸಿಗೆ ನೋವಾಗಿ ಇಂತಹ ಬೆಳೆ ಬೆಳೆಯದೆ ಕೈಬಿಡುವ ಸಂಭವವೂ ಉಂಟು. ಹಾಗಾಗದಂತೆ ನಮ್ಮ ತಜ್ಞರು ನೋಡಿಕೊಂಡರೆ ಅನುಕೂಲ.

ಐದನೆಯದಾಗಿ, ಈ ದಿಶೆಯಲ್ಲಿ ಕೃಷಿ ವಿಶ್ವವಿದ್ಯಾನಿಲಯದ ತಜ್ಞರು, ಕೇಂದ್ರ ತೋಟಗಾರಿಕೆ ಮತ್ತು ರಾಜ್ಯ ತೋಟಗಾರಿಕೆ ಇಲಾಖೆಗಳು ಸಾಕಷ್ಟು ಶ್ರಮಿಸುತ್ತಿದ್ದರೂ, ಕೆಲವು ಸಮಸ್ಯೆಗಳು ಹಾಗೆಯೇ ಉಳಿದಿವೆ. ಉದಾಹರಣೆಗೆ, ತೆಂಗಿಗೆ ಕೆಲವು ವರ್ಷಗಳಿಂದ ಬಂದಿರುವ ಕಪ್ಪು ತಲೆ ಕಂಬಳಿಹುಳುಗಳ ಹಾವಳಿಯಿಂದ ಅನೇಕ ತೋಟಗಾರರು ಭಯದಿಂದ ಕೂಡಿದ್ದಾರೆ ಮತ್ತು ಸಾವಿರಾರು ಎಕರೆ ತೆಂಗಿನ ಫಸಲು ಕಳೆದುಕೊಳ್ಳುತ್ತೇವೆಯೋ ಎಂದು ದಿಗ್ಭ್ರಾಂತರಾಗಿದ್ದಾರೆ. ತೋಟಗಾರರ ಇಂತಹ ಸಮಸ್ಯೆ ಹಾಗೆಯೇ ಮುಂದುವರಿಯುತ್ತಿದೆ. ಹೀಗೆಯೆ ಅಡಿಕೆ, ದ್ರಾಕ್ಷಿ, ಮಾವು, ಮುಂತಾದ ಬೆಳೆಗಳು ಕೆಲವು ವೇಳೆ ರೋಗರುಜಿನಾದಿಗಳಿಂದ ಸಕಾಲಕ್ಕೆ ತಾಂತ್ರಿಕ ನೆರವು ಸಿಗದೆ ಹಾಳಾಗಿರುವುದನ್ನು ನಾವು ಕೇಳುತ್ತಿದ್ದೇವೆ. ಅನೇಕ ಒಕ್ಕಲಿಗರು ಬೆಂಗಳೂರಿನ ಸುತ್ತಮುತ್ತ ಮತ್ತು ಕೋಲಾರ ಜಿಲ್ಲೆ, ಕಡೂರು ತಾಲ್ಲೂಕುಗಳಲ್ಲಿ ದ್ರಾಕ್ಷಿ ಬೆಳೆಯಲ್ಲಿ ಉತ್ತಮವಾದ ಬೆಳೆ ತೆಗೆದು ಆರ್ಥಿಕವಾಗಿ ಮುಂದುವರಿದಿದ್ದಾರೆ. ಹಾಗೆಯೇ ಮಲೆನಾಡಿನಲ್ಲಿ ತೆಂಗು, ಅಡಿಕೆ, ಬಾಳೆ, ಪೈನಾಪಲ್, ಏಲಕ್ಕಿ ಮುಂತಾದವುಗಳಿಂದ ಆರ್ಥಿಕವಾಗಿ ಮುಂದುವರಿದಿರುವ ಒಕ್ಕಲಿಗರಿಗೇನೂ ಕಡಿಮೆಯಿಲ್ಲ.

**ನಾಗರೀಕತೆಯ ಮೋಜು :** ಇಷ್ಟೆಲ್ಲಾ ಆಗಿದ್ದರೂ, ಒಕ್ಕಲಿಗರಲ್ಲಿ, ಅವರ ಪೀಳಿಗೆಯಲ್ಲಿ, ಇತ್ತೀಚೆಗೆ ನಾಗರೀಕರೂ ಕೂಡ ಹಣದ ಮೋಜಿನ ಜೀವನಕ್ಕೆ ಮಾರುಹೋಗಿಯೋ ಅಥವಾ ಆಡಂಬರದ ಜೀವನಕ್ಕೆ ಶರಣಾಗಿಯೋ ತಮ್ಮ ಕುಲದ ವೃತ್ತಿಯನ್ನು ಕೀಳಾಗಿ ಪರಿಗಣಿಸಿ, ಇರುವ ಜಮೀನನ್ನು ಸಾಗುವಳಿ ಮಾಡದೆ ಪಟ್ಟಣ ಸೇರಿ,

ಕುಲಕಸುಬನ್ನು ವಯಸ್ಸಾದವರ ಮೇಲೆ ಬಿಟ್ಟುಬಂದಿರುವುದನ್ನೂ, ಬರುತ್ತಿರುವುದನ್ನೂ ನೋಡಿದರೆ, ಮುಂದೆ ನಮ್ಮ ಜನಗಳಲ್ಲಿ ಈ ಕಸುಬು ಕೈಬಿಡುವುದೇನೋ ಎಂದು ಗಾಬರಿಯಾಗುತ್ತದೆ. ಹಳ್ಳಿಗಳಲ್ಲಿಯೂ ಸಹ ಈ ಪಟ್ಟಣದ ಸೋಂಕು ಅಂಟಿ, ಅಲ್ಲಲ್ಲಿ ಹೋಟೆಲ್, ಟೆಂಟು, ದೂರದರ್ಶನಗಳು ಮುಂತಾದವು ಕಾಣಿಸಿಕೊಂಡು, ಅನೇಕ ತೋಟಗಾರರು ಬೆಳಿಗ್ಗೆಯಿಂದ ಸಂಜೆಯವರೆಗೆ ಈ ಸ್ಥಳಗಳಲ್ಲಿ ಸೇರಿ, ಕಾಲಕಳೆಯುವುದನ್ನು ನೋಡಬಹುದು. ಆದ್ದರಿಂದ ಮುಂದಿನ ಜನಾಂಗ ಹೀಗಾಗುವುದಕ್ಕೆ ವಿದ್ಯಾವಂತರೂ, ನಮ್ಮಲ್ಲಿರುವ ತಜ್ಞರೂ ಬಿಡಬಾರದು. ಇಷ್ಟೆಲ್ಲಾ ಎಚ್ಚರಿಕೆ ವಹಿಸಿದರೆ ಹಳ್ಳಿಗಳ ತೋಟಗಾರಿಕೆ ಸಮಸ್ಯೆಗಳನ್ನು ಆದಷ್ಟು ಶೀಘ್ರಗತಿಯಲ್ಲಿ ಪರಿಹರಿಸಬಹುದು.

**೭.೫. ಒಕ್ಕಲಿಗರ ಸಾಮಾಜಿಕ ಸಮಸ್ಯೆಗಳು**

ಮಾನವ ಸ್ವಭಾವತಃ ಸಂಘ ಜೀವಿ. ಯಾವ ನೆಲ, ಹವೆ, ನೆಲೆ ಆಗಿರಲಿ, ಅಲ್ಲಿ ಒಂದು ಸಮೂಹ, ಬುಡಕಟ್ಟು ಹಾಗೂ ಸಂಗ ಜೀವನದಲ್ಲಿ ತನ್ನ ಅಸ್ತಿತ್ವವನ್ನು ಕಂಡು ಕೊಳ್ಳಲು ಆತನು ಪ್ರಯತ್ನಿಸುತ್ತಾನೆ. ಇದರ ಹಿನ್ನೆಲೆಯಲ್ಲಿ ಮಾನವ ಮತ್ತು ಸಮಾಜದ ಆಂತರಿಕ ಕ್ರಿಯೆಗಳನ್ನು ನಾವು ಗಮನಿಸುವುದು. ಇದು ಒಂದು ದೇಶಕ್ಕೆ ಅನ್ವಯವಾಗುವ ಸೂತ್ರ. ಒಂದು ದೇಶದ ರಾಷ್ಟ್ರೀಯತೆಯನ್ನು ಕುರಿತು ಚಿಂತಿಸುವಾಗ, ಇಂತಹ ಒಂದು ಸಂಬಂಧ, ಬಾಂಧವ್ಯವೇ ಬುನಾದಿಯಾಗಿರುತ್ತದೆ. ಪ್ರಸ್ತುತ ಭರತಖಂಡದಲ್ಲಿ ಹಲವಾರು ಧರ್ಮಗಳು, ಪಂಥಗಳು, ಕೋಮುಗಳು ಅನೇಕ ಶತಮಾನಗಳಿಂದಲೂ ಮುಂದುವರಿದುಕೊಂಡು ಬಂದಿರುವುದು ಗಮನಾರ್ಹ. ವೈವಿಧ್ಯತೆ ಏನೇ ಇದ್ದರೂ, ಸಾಮಾಜಿಕ ಭಾವನೆ ಬೇರೂರಬೇಕಾದರೆ, ವ್ಯಕ್ತಿಗಳಲ್ಲಿ ಪರಸ್ಪರ ಅಭಿಮಾನ, ಗೌರವ, ಕೆಲವೊಮ್ಮೆ ಸಂಘರ್ಷ ಅನಿವಾರ್ಯ. ಇಂತಹ ಕ್ರಿಯೆ ಪ್ರತಿಕ್ರಿಯೆಯ ಪ್ರತಿಫಲವೇ ಸಾಮಾಜಿಕ ಪ್ರಜ್ಞೆಗೆ ಕಾರಣವಾಗುತ್ತದೆ. ಹೀಗೆ ಸಾಮಾಜಿಕ ಸಮಸ್ಯೆಗಳನ್ನು ಮೂಲಭೂತವಾದ ಸಾಮಾಜಿಕ ಪ್ರಜ್ಞೆಯ ಮೂಲಕ ವಿಶ್ಲೇಷಿಸುವುದು ಅತ್ಯಗತ್ಯ.

**ವಿಶಾಲವಾದ ಅರ್ಥ :** ಪ್ರಸ್ತುತ ಒಕ್ಕಲಿಗರ ಸಾಮಾಜಿಕ ಸಮಸ್ಯೆಗಳನ್ನು ನಾವು ಸೂಕ್ಷ್ಮವಾಗಿ ಪರಿಶೀಲಿಸಿದಲ್ಲಿ, ಅಂತಹ ಸಾಮಾಜಿಕ ಪ್ರಜ್ಞೆ ಇಲ್ಲಿಯ ತನಕ ಮೂಡಿಬಂದಿದೆಯೇ ಎಂಬ ಸಂದೇಹ ತಲೆದೋರುತ್ತದೆ. ಪ್ರಮುಖವಾಗಿ, ಒಕ್ಕಲಿಗ ಜನಾಂಗ ತನ್ನತನವನ್ನು ಇನ್ನೂ ಕಂಡುಕೊಳ್ಳಬೇಕಾಗಿರುವುದೇ ಇಂತಹ ಸಂಶಯಕ್ಕೆ ಎಡೆಮಾಡಿಕೊಡುತ್ತದೆ. ಏಕೆಂದರೆ ಒಕ್ಕಲಿಗರು ಒಂದು ಬುಡಕಟ್ಟಿನವರು, ಒಂದು ಜನಾಂಗದವರು. ಆಚಾರ ವ್ಯವಹಾರಗಳು, ದಿನನಿತ್ಯದ ಆಗುಹೋಗುಗಳು, ಪದ್ಧತಿ ಕಟ್ಟಳೆಗಳು ಇತ್ಯಾದಿ ವಿಷಯಗಳಲ್ಲಿ ಅನನ್ಯತೆ (Identity) ಸೊನ್ನೆಯಲ್ಲದಿದ್ದರೂ, ಆಶಾದಾಯಕವಾದ ಸಮೀಕರಣಕ್ಕೆ ಇನ್ನೂ ಆಸ್ಪದ ಕೊಟ್ಟಿಲ್ಲ. ಅಂದರೆ, ವಿಚಾರವನ್ನು ಹೀಗೆ ವಿಭಜಿಸಿ ನೋಡಬಹುದು. ಸಾಮಾನ್ಯವಾಗಿ ಗ್ರಾಮೀಣ ಪ್ರದೇಶಗಳಲ್ಲಿ ಹಲವರು ತಲೆತಲಾಂತರಗಳಿಂದ ಬೇಸಾಯವನ್ನೇ ತಮ್ಮ ಉದ್ಯಮವನ್ನಾಗಿ ಮಾಡಿಕೊಂಡು ಒಂದು ಜೀವನಕ್ರಮಕ್ಕೆ ನಿಲುಕುವ ಜನರನ್ನು ನಾವು ಒಕ್ಕಲಿಗರೆಂದು ಕರೆಯಬೇಕಾಗುತ್ತದೆ. ಆದರೆ ವಿಶಾಲವಾದ ಅರ್ಥದಲ್ಲಿ ಒಕ್ಕಲಿಗ ಎಂಬ ಪದ ಒಂದು ಕೋಮಿಗಷ್ಟೇ ಸೀಮಿತವಲ್ಲ. ಬೇಸಾಯದಲ್ಲಿ ತೊಡಗಿರುವವರನ್ನೂ, ಒಕ್ಕಲುತನ ಮಾಡುವವರನ್ನೂ ಸಹ ಒಕ್ಕಲಿಗರೆಂದೇ ಕರೆಯಲಾಗುತ್ತದೆ. ಇಂಥ ಪ್ರತಿಪಾದನೆಗೆ ಸಾಕಷ್ಟು ಸಕಾರಣವೂ ನಮಗೆ ದೊರೆಯುತ್ತದೆ. ಏಕೆಂದರೆ ಶೂದ್ರರಲ್ಲದೆ, ಮುಂದುವರಿದ ಜನಾಂಗ ಸಹ ಬೇಸಾಯದಲ್ಲಿ ತೊಡಗಿರುವುದು ಅಪರೂಪವೇನಲ್ಲ. ಆದರೂ ಒಂದು ಚೌಕಟ್ಟಿನಲ್ಲಿ ಒಂದು ಕೋಮಿನ ಹಿನ್ನೆಲೆಯನ್ನೇ ಪ್ರಧಾನವಾಗಿ ಪರಿಗಣಿಸಿ, ಒಕ್ಕಲಿಗರನ್ನು ಮಾತ್ರ ಗಮನದಲ್ಲಿಟ್ಟುಕೊಂಡು, ಅವರ

ಸಾಮಾಜಿಕ ಸಮಸ್ಯೆಗಳತ್ತ ದೃಷ್ಟಿ ಹರಿಸಿದಾಗ, ಸ್ಫೂರ್ತಿದಾಯಕ ಬುಡಕಟ್ಟಿನ ಸಾಮರಸ್ಯವಾಗಲಿ, ಪಂಗಡದಲ್ಲಿರಬೇಕಾದ ನಿಕಟ ಬಾಂಧವ್ಯವಾಗಲಿ, ಅಷ್ಟಾಗಿ ಕಾಣಸಿಗದಿರುವುದು ಅಚ್ಚರಿಯ ವಿಷಯವೇ ಸರಿ. ಒಕ್ಕಲಿಗರು ಒಂದೇ ಜನಾಂಗ, ಒಂದೇ ಕೋಮು ಎಂಬ ಭಾವನೆ ರೂಢಿಬದ್ಧವಾಗಿ ಕಾಲಾನುಕಾಲವಾಗಿ ಹರಿದುಬಂದಿರುವುದಕ್ಕೆ ಸಾಕಷ್ಟು ಆಧಾರವಾಗಲಿ, ಪ್ರಮಾಣವಾಗಲಿ, ಸಾಕ್ಷಿಯಾಗಲಿ ಸಿಕ್ಕದೆ ಇದ್ದರೂ, ಆ ಜನಾಂಗದ ಸಾಮಾಜಿಕ ಸಮಸ್ಯೆಗಳನ್ನು ಗುರುತಿಸಬೇಕಾಗಿದೆ.

**ಕವಲೊಡೆದ ಸಮುದಾಯ :** ಒಕ್ಕಲಿಗ ಜನಾಂಗದಲ್ಲಿ ಎಷ್ಟು ಪಂಗಡಗಳು, ಒಳಪಂಗಡಗಳು, ವಿರಸ ವೈಫಲ್ಯಗಳು ತಾಂಡವಮಾಡುತ್ತಿವೆ ಎಂದರೆ ಅದು ವಿಡಂಬನೆಯ ಮಾತಾಗದು. ಇಷ್ಟು ಜನರನ್ನು ಬಂಧಿಸುವ ಬೆಸುಗೆ ಸಾಮಾಜಿಕವಾಗಿ ಇನ್ನೂ ಕಾರ್ಯಗತವಾಗದಿರುವುದೇ ಈ ಲೋಪ, ಕೊರತೆಗಳಿಗೆ ಮುಖ್ಯ ಕಾರಣ. ಉದಾಹರಣೆಗೆ, ಒಕ್ಕಲಿಗರಲ್ಲಿ ಗಂಗಡಿಕಾರ ಒಕ್ಕಲಿಗರು, ಮರಸು ಒಕ್ಕಲಿಗರು, ದಾಸ ಒಕ್ಕಲಿಗರು, ಬಂಟ ಒಕ್ಕಲಿಗರು, ಕುಂಚಿಟಿಗ ಒಕ್ಕಲಿಗರು, ಮಲೆನಾಡ ಒಕ್ಕಲಿಗರು, ರೆಡ್ಡಿ ಒಕ್ಕಲಿಗರು, ಹಳ್ಳಿಕಾರ ಒಕ್ಕಲಿಗರು, ನಾಮಧಾರಿ ಒಕ್ಕಲಿಗರು ಹೀಗೆ ಹಲವು ಬಗೆಯಲ್ಲಿ, ಹಲವಾರು ರೀತಿಯಲ್ಲಿ ಕವಲೊಡೆದ ಸಮುದಾಯ ನಮ್ಮ ಕಣ್ಮುಂದೆ ಚಾಚಿ ನಿಲ್ಲುತ್ತದೆ. ಮಂಗಳೂರಿನ ಬಂಟರು, ಮೈಸೂರಿನ ಗಂಗಡಿಕಾರರು, ಕೋಲಾರದ ಮರುಸುಗಳು, ಚಿತ್ರದುರ್ಗದ ರೆಡ್ಡಿಗಳು, ಎಲ್ಲರೂ ಒಂದೇ ಬುಡಕಟ್ಟಿನವರು ಎಂಬ ವಿಚಾರ ಬಹಳ ಪ್ರಿಯ. ಆದರೆ ಅವರಲ್ಲಿ ನಾವೆಲ್ಲ ಒಂದೇ ಮೂಲದಿಂದ ಸಿಡಿದು ಬಂದ ಜನ ಎಂಬ ಭಾವನೆ ಖಚಿತವಾಗಿ ಬೇರೂರಿದೆಯೇ? ಇಲ್ಲಿ ನಾವು ಆದರ್ಶವಾಗಿರುವುದನ್ನು ಉತ್ಪ್ರೇಕ್ಷೆಮಾಡುವ ಬದಲು ನಿಜ ಸಂಗತಿಯನ್ನು ವಿಮರ್ಶಿಸಿದಾಗ, ಕೆಲವೊಂದು ವಿಚಾರ ಬೆಳಕಿಗೆ ಬರುತ್ತದೆ. ಮೊದಲನೆಯದಾಗಿ, ನಾಯಕತ್ವ ಎಂಬುದನ್ನು ಪರಿಶೀಲಿಸಬಹುದು. ಪ್ರದೇಶ, ಭಾಷೆ ವಿಭಿನ್ನವಾಗಿದ್ದರೂ, ಒಕ್ಕಲಿಗರಿಗೆ ಒಬ್ಬ ಆದರ್ಶ ನಾಯಕನ ಅಗತ್ಯ ಬಹಳವಿದೆ ಎಂದು ಹೃತ್ಪೂರ್ವಕವಾಗಿ, ಪ್ರಾಮಾಣಿಕವಾಗಿ, ನಿಃಸ್ವಾರ್ಥ ದೃಷ್ಟಿಯಿಂದ ಎಷ್ಟು ಮಂದಿ ಚಿಂತಿಸಿದ್ದಾರೆ? ಇಂಥ ವಿಷಯಗಳಲ್ಲಿ ಸಾಮಾಜಿಕ ಪ್ರಶ್ನೆ ಗೌಣವಾಗಿ ರಾಜಕೀಯ ಧೋರಣೆ ಮೇಲ್ಸೈಯಾಗಿರುವುದು ಸ್ವಾತಂತ್ರ್ಯೋತ್ತರ ದಿನಗಳಲ್ಲಿ ಸಾಕಷ್ಟು ಮನವರಿಕೆಯಾಗಿದೆ. ಒಕ್ಕಲಿಗ ಜನಾಂಗ ಎನ್ನುವ ವಿಚಾರ ಎಲ್ಲೋ ಹಿಂದೆ ಬಿದ್ದ ಸರಕಾಗಿ, ಕೇವಲ ಆಯಾ ಪ್ರದೇಶ, ಭಾಷೆಯ ಜನರ ಒಲವು ನಿಲುವುಗಳು ಮಾತ್ರ ಒರೆಗಲ್ಲಾಗುವುದು ಸರ್ವವಿದಿತವಾದ ಸಂಗತಿ. ಇಂತಹ ವಿಷಯಗಳನ್ನು ಬಹಿರಂಗ ಪಡಿಸುವಾಗ, ಜನರಲ್ಲಿರಬಹುದಾದ ಅಲ್ಪಸ್ವಲ್ಪ ಸ್ನೇಹಭಾವ, ಒಂದುಗೂಡುವಿಕೆ, ಸೌಹಾರ್ದತೆ ಇವುಗಳನ್ನು ಮೊಟಕುಮಾಡಬೇಕೆಂಬ ಉದ್ದೇಶವೇನಿಲ್ಲ. ವಿಚಾರವೇನೆಂದು ಸಮೀಕ್ಷಿಸಿ ನಿಗೂಢ ಸತ್ಯವನ್ನು ಹುಡುಕಹೊರಟಾಗ, ಅನೇಕ ಅಂಶಗಳು ಬಯಲಿಗೆ ಬಂದರೆ ಯಾರೂ ವಿಸ್ಮಯಪಡಬೇಕಾಗಿಲ್ಲ.

**ಧಾರ್ಮಿಕವಾಗಿ :** ಧಾರ್ಮಿಕವಾಗಿ ಎಲ್ಲ ಒಕ್ಕಲಿಗರೂ, ಒಂದು ಒಕ್ಕೂಟದ ಪ್ರಣಾಳಿಕೆಯಲ್ಲಿ ಸೇರಿ, ತಮ್ಮ ಶ್ರದ್ಧೆ, ವಿಶ್ವಾಸ, ಕಾರ್ಯನಿಷ್ಠೆಯನ್ನೂ ತೋರಿಸಬಲ್ಲರೇ, ಎಂದು ಪ್ರಶ್ನಿಸಿಕೊಂಡಾಗ, ಅಲ್ಲಿಯೂ ಅವರನ್ನು ಒಂದುಗೂಡಿಸುವ ಒಂದು ಧಾರ್ಮಿಕ ಪಂಥ ಸ್ಪಷ್ಟವಾಗಿ ಕಾಣಿಸುವುದಿಲ್ಲ. "ದೇವರು ಒಬ್ಬ, ನಾಮ ಹಲವು" ಎಂಬ ಉಕ್ತಿಗನುಗುಣವಾಗಿ ಒಕ್ಕಲಿಗರು ಆಚರಿಸುವ, ನಂಬಿರುವ, ದೇವರ ವಿಚಾರ ಹಲವು ಬಗೆಯದು. ಹೇಗೆಂದರೆ, ಕೆಲವರು ವಿಷ್ಣುವಿನ ಆರಾಧಕರು, ಮತ್ತೆ ಕೆಲವರು ಶಿವನ ಆರಾಧಕರು, ಇನ್ನೂ ಕೆಲವರು ಮಾರಿಮಸಣಿಯ ಆರಾಧಕರು, ಮತ್ತೂ ಹಿಂದುಳಿದ ಕೆಲವರು ದೆವ್ವ, ಭೂತ ಪಿಶಾಚಿಗಳ ಆರಾಧಕರು, ಇದರಿಂದಾಗಿ

ಅವರು ನಂಬಿರುವ ಧರ್ಮ ಒಂದು ಸಾಮಾಜಿಕ ಚೌಕಟ್ಟಿನಲ್ಲಿ ಇಂಥದೇ ಜನಾಂಗ ಎಂದು ನಿರ್ದೇಶಿಸಲು ಅಸಮರ್ಥವಾಗಿದೆ. ಧಾರ್ಮಿಕ ಗುರುಗಳು ಯಾವುದೇ ದೈವವನ್ನು ಆರಾಧಿಸಿದರೂ ಚಿಂತೆ ಇಲ್ಲ. ಇದರಿಂದಾಗಿ ಅನುಯಾಯಿಗಳಲ್ಲಿ ಏಕತೆ, ಸಂಘಟನೆ ಎಂಬ ಮನೋಧರ್ಮ ಸಾಧ್ಯವಿಲ್ಲದಿರುವುದು ಅನಿವಾರ್ಯವಾಗಿ ಪರಿಣಮಿಸಿದೆ.

**೫.ಆರ್ಥಿಕವಾಗಿ**

ಒಕ್ಕಲಿಗರ ಆರ್ಥಿಕಮಟ್ಟವನ್ನು ಕುರಿತು ಚಿಂತಿಸಿದಾಗ, ಅದು ಚಿಂತಾಜನಕವೇ ಸರಿ. ನೂರಕ್ಕೆ ತೊಂಬತ್ತು ಭಾಗ ಒಕ್ಕಲಿಗರು ಭೂಮಿಯನ್ನೇ ನಂಬಿದ್ದರೂ ಅವರಿಗೆ ಸಾಕಷ್ಟು ಊಟ, ವಸತಿ, ಉಡುಪು, ಇನ್ನೂ ಸಿಕ್ಕಿಲ್ಲವೆಂದರೆ ಅವರು ಎಂಥ ಪರಿಸ್ಥಿತಿಯಲ್ಲಿ ಸಿಕ್ಕಿಬಿದ್ದಿದ್ದಾರೆ ಎಂಬ ಸತ್ಯ ಮಿಂಚೀತು. ಹೊಲ, ಗದ್ದೆ, ಉತ್ತು ಬಿತ್ತಿ ಬೆಳೆ ತೆಗೆದು, ಆಹಾರ ಒದಗಿಸುವ ಒಕ್ಕಲಿಗರು ಕೂಲಿಯಾಳಾಗಿ ದುಡಿದು, ದಣಿದು, ಬವಣೆಯಲ್ಲೇ ಕಾಲ ಸವೆಸುವುದು ಗ್ರಾಮಾಂತರ ಒಕ್ಕಲಿಗರನ್ನು ಕಂಡರೆ ಮನದಟ್ಟಾಗದಿರದು. ಇಷ್ಟು ಜನ ಈ ದುಃಸ್ಥಿತಿಯಲ್ಲಿ ಬಿದ್ದಿರುವುದಕ್ಕೆ ಏನು ಕಾರಣ ಎಂದು ಎಷ್ಟು ಮಂದಿ ತೀಕ್ಷ್ಣವಾಗಿ ಆಲೋಚಿಸಿ ಅವರ ಸಮಸ್ಯೆಯನ್ನು ಬಗೆಹರಿಸಲು ಮುಂದೆ ಬಂದಾರು? ಕ್ಷೋಭೆಗೊಂಡ ಜನತೆಯ ಜೀವನದಲ್ಲಿ ಆರ್ಥಿಕ ಪರಿಸ್ಥಿತಿ ಉತ್ತಮಗೊಳ್ಳದೆ ಸಾಮಾಜಿಕ ಸಮಸ್ಯೆಗಳು ಉದ್ಭವಿಸುವುದಾದರೂ ಹೇಗೆ? ತಾನೊಬ್ಬ ವ್ಯಕ್ತಿ, ತನ್ನದೊಂದು ಸಂಸಾರ, ಇಂಥದೇ ಪಂಗಡಕ್ಕೆ ತಾನು ಸೇರಿದವನು ಎಂಬ ಅರಿವು ಒಕ್ಕಲಿಗನಲ್ಲಿ ಎಷ್ಟರಮಟ್ಟಿಗೆ ಪ್ರಕಾಶಗೊಂಡಿದೆ.? ''ದೇವರು ಹುಟ್ಟಿಸಿದ ಹುಟ್ಟಿಸಿದ ದೇವರು ಹುಲ್ಲು ಮೇಯಿಸುವುದಿಲ್ಲ'' ಎಂಬ ಯಾವುದೋ ಮೌಢ್ಯ ವಿಧಿಯ ವಿಲಾಸಕ್ಕೆ ತನ್ನನ್ನೇ ಅರ್ಪಿಸಿಕೊಂಡು, ಗುಲಾಮಗಿರಿಯಲ್ಲಿ ಬಾಳುತ್ತಿರುವ ಚಿತ್ರ ಎಂಥ ಸಂವೇದನಾಶೀಲ ವ್ಯಕ್ತಿಗಾದರೂ ಅರಿವಾದೀತು. ನೂರಾರು ಸಂಸಾರಗಳಿಗೆ ವಾಸಿಸಲು ಜೋಪಡಿಯೇ ಇಲ್ಲ. ಹಿಡಿ ಕೂಳು, ಗಂಜಿ ಪಾಡಿನ ಜೀವನ ಈ ಜನಗಳನ್ನು ಮುತ್ತಿ ನೋಣಚಿರುವಾಗ ತಮ್ಮ ಗುಂಪಿನ ಇತರ ವ್ಯಕ್ತಿಗಳೊಡನೆ ಎಂಥ ಬಾಂಧವ್ಯ ಬೆಳೆಯಲು ಸಾಧ್ಯ? ಎಲ್ಲಿ ಆರ್ಥಿಕ ಮಟ್ಟ ಇಷ್ಟು ಅದೋಗತಿಗಿಳಿದಿರುತ್ತದೆಯೋ ಅಲ್ಲಿ ಅವಿದ್ಯೆ, ಅಜ್ಞಾನ ಮೂರ್ತತ್ವಪಡೆಯುತ್ತವೆ. ತಂದೆತಾಯಿಗಳೆನಿಸಿಕೊಂಡವರಿಗೆ ಅಕ್ಷರ ಜ್ಞಾನವಿಲ್ಲ. ಅವರ ಸಂತತಿಯೂ ಅದೇ ಜಾಡಿನಲ್ಲಿ ಮುಂದುವರಿದು, ಹೇಗೋ ಹೊಟ್ಟೆ ತುಂಬಿಕೊಂಡು ಬದುಕಿದ್ದಾರೆ ಅದೊಂದು ಮಹತ್ಸಾಧನೆ ಎಂಬುದೇ ಇಂತಹ ಸರ್ವಸಾಮಾನ್ಯ ಚಿತ್ರಣ. ವಿದ್ಯೆ ಇಲ್ಲದೆ ಅವರ ಎಲ್ಲ ಅರಿವೂ ಕತ್ತಲ ಹೊಂಡದಲ್ಲೇ ಅಡಗಿಹೋಗಿದೆ. ಇಂಥ ಜನರ ಬಗ್ಗೆ ಸಾಮಾಜಿಕವಾಗಿ ಮಾಡಬೇಕಾದದ್ದು ಬೆಟ್ಟದಷ್ಟು ಉಂಟು. ಸರ್ಕಾರ ಕೇವಲ ಅಮೂರ್ತವಾಗಿ ಯೋಜನೆಗಳ ಮುಖಾಂತರ ಸರ್ವರ ಸುಖೀರಾಜ್ಯವನ್ನು ಕಟ್ಟಿಸುತ್ತದೆ ಎಂಬ ನಂಬಿಕೆ ಬಿಸಿಲುಗುದುರೆಯನ್ನರಸಿ ಹೊರಟಂತಾದೀತು. ವಿದ್ಯಾವಂತ ಒಕ್ಕಲಿಗ ಪ್ರಜಾವರ್ಗ ತಮ್ಮ ಕುಲಬಾಂಧವರಿಗೆ ನೀಡಿರುವ ನಿದರ್ಶನ, ಎಸಗಿರುವ ಉಪಕಾರ, ಸಾಧಿಸಿರುವ ಯೋಜನೆಗಳೆಷ್ಟು? ನಿಜಕ್ಕೂ ಇದೊಂದು ಸಂಕಟ ಉಂಟುಮಾಡುವ ಭೀಕರ ವಾತಾವರಣ ಅನುಕಂಪವುಳ್ಳ ಯಾರ ಹೃದಯವೂ ಬಿರಿಯುವಂಥ ದೃಶ್ಯ. ಕೃಷಿ ಪ್ರಧಾನವಾದ ರೈತ ಜನಾಂಗ ಹೇಗೆ ಬಡತನದ ಬೇಗುದಿಯಲ್ಲಿ, ದಾರಿದ್ರ್ಯ ದಾಸ್ಯದಲ್ಲಿ, ದಾರಿ ಸಾಗಿ ನರಳಿ ಸೊರಗಿದೆ.

**೬.ರಾಜಕಾರಣಿಗಳ ಕುಯುಕ್ತಿ**

ಈ ಜನರ ನಿಸ್ಸಹಾಯಕ ಪರಿಸ್ಥಿತಿಯನ್ನು ಮತ್ತೊಂದು ನಿಟ್ಟಿನಲ್ಲಿ ವೀಕ್ಷಿಸುವುದಾದರೆ, ಅಲ್ಲಿಯೂ ಆಶಾಕಿರಣ ಕಂಡು ಬರುವುದಿಲ್ಲ. ಅಜ್ಞಾನದಲ್ಲಿ ಮುಳುಗಿರುವ ಈ ಒಕ್ಕಲಿಗರು ಹೆಚ್ಚು ಕಡಿಮೆ, ವಿನಾಯಿತಿ ಇಲ್ಲದೆ ಕೆಲವೇ

ಕೆಲವು ಸ್ವಾರ್ಥ ರಾಜಕಾರಣಿಗಳ, ಕುಯುಕ್ತಿ ನಾಯಕರ ಕೈಗೊಂಬೆಗಳಷ್ಟೇ ಅಲ್ಲ, ಪಗಡೆಯಾಟದ ದಾಳಗಳಾಗಿದ್ದಾರೆ. ತಮ್ಮ ವ್ಯಕ್ತಿತ್ವದ ಪರಿವೆಯೇ ಇಲ್ಲದ ಗ್ರಾಮಾಣ ಒಕ್ಕಲಿಗರು ಕೆಲವೇ ರಾಜಕಾರಣಿಗಳ ಅಥವಾ ಸ್ಥಳೀಯ ಪುಡಾರಿಗಳ, ಸ್ವಾರ್ಥಿಗಳು ಹಾಗೂ ನಯವಂಚಕರ ಶೋಷಣೆಗೆ ಒಳಗಾಗಿ, ತಮ್ಮ ಕೆಳಗೆ ತಾವೇ ಗುಂಡಿಯನ್ನು ನಿರ್ಮಿಸಿಕೊಂಡು ದುರಂತಕ್ಕೆ ಒಳಗಾಗಿದ್ದಾರೆ. ಹಣಕಾಸಿನ ವಿಚಾರದಲ್ಲಿ ಅಲ್ಪಸ್ವಲ್ಪ ಮುಂದುವರಿದ ಒಕ್ಕಲಿಗರೂ ತಮ್ಮ ಕುಲದ ಬಡ ಒಕ್ಕಲಿಗರ ಸಾಮಾಜಿಕ ಸ್ಥಿತಿಗತಿಗಳ ಬಗ್ಗೆ ಚಿಂತಿಸುವುದೇ ಅಪಾಯವೆಂದು ಅದರ ಗೋಜಿಗೆ ಹೋಗದೆ ತಮ್ಮ ಪಾಡಿಗಿದ್ದಾರೆ. ಎಲ್ಲಿ ಜನಜಾಗೃತಿ, ಸಾಮಾಜಿಕ ಅರಿವು, ಗರಿಗೆದರಿ ಉತ್ಕರ್ಷ ಸ್ಥಿತಿಯನ್ನು ಮುಟ್ಟುವುದೋ ಅಲ್ಲಿ ಶೋಷಣೆ, ಅಸಮಾನತೆ, ಕ್ರೌರ್ಯ, ದೌರ್ಜನ್ಯ, ಗುಲಾಮಗಿರಿ ಮುಟ್ಟುಗೋಲಾಗುವುದು. ಸರ್ಕಾರ ಶಾಸನ ಸಭೆಗಳ ಮುಖಾಂತರ ಎಂತಹ ಸುಧಾರಿತ ಕಾನೂನು ನಿಯಮಗಳನ್ನು ರಚಿಸಿ ಘೋಷಿಸಿದರೂ ಅವುಗಳಿಂದ ಮೇಲಾದ ಉಪಯೋಗ ದೊರೆಯದಿರುವುದು ನಮಗೆಲ್ಲ ತಿಳಿದಿರುವ ಸಂಗತಿ.

**೭. ತಾರತಮ್ಯ ಭಾವ**

ಶ್ರೀಮಂತ ಒಕ್ಕಲಿಗರು ತಮ್ಮದೇ ಆದ ವರ್ಗವನ್ನು ರಚಿಸಿಕೊಂಡು, ತಮ್ಮ ಸುತ್ತಮುತ್ತ ಒಂದು ಅಭೇದ್ಯವಾದ ಕೋಟೆಯನ್ನೇ ಸೃಷ್ಟಿಸಿಕೊಂಡಿದ್ದಾರೆ. ಬೆಂಗಳೂರು ನಗರದಲ್ಲಿ ಪ್ರತಿಷ್ಠಿತ ಕುಟುಂಬ ವರ್ಗದ ಶ್ರೀಮಂತ ಒಕ್ಕಲಿಗರೊಬ್ಬರು ಒಮ್ಮೆ ತಮ್ಮ ದೊಡ್ಡಸ್ತಿಕೆಯನ್ನು ಹೀಗೆ ವ್ಯಕ್ತಪಡಿಸಿದರು. "You know, we are Brahmins among vokkaligas" ಬಹುಶಃ ಹೀಗೆ ಲೇಖನದಲ್ಲಿ ಅವರ ಈ ಮಾತು ಪ್ರಸ್ತಾಪಗೊಳ್ಳಬಹುದೆಂಬ ಕಲ್ಪನೆ ಅವರಿಗಿರಲಿಕ್ಕಿಲ್ಲ. ಮುಂದುವರಿದ ಒಕ್ಕಲಿಗರೆನಿಸಿಕೊಂಡವರು ತಮ್ಮದೇ ಜನಾಂಗಕ್ಕೆ ಸೇರಿದ ಬಡ ಒಕ್ಕಲಿಗನನ್ನು ಕಾಲಕಸಕ್ಕಿಂತಲೂ ಕೀಳಾಗಿ ಕಾಣುತ್ತಾರೆಂಬುದಕ್ಕೆ ಈ ಮಾತು ಸ್ಪಷ್ಟ ನಿದರ್ಶನ. ದುರದೃಷ್ಟವಶಾತ್ ಇಂಥ ಒಕ್ಕಲಿಗರು ಎಷ್ಟೇ ಇಚ್ಛೆಪಟ್ಟು ಬ್ರಾಹ್ಮಣತ್ವ ಬೆಳೆಸಿಕೊಂಡರೂ ಸದರಿ ಬ್ರಾಹ್ಮಣರು ಇವರನ್ನು ಒಪ್ಪಿಕೊಂಡು ಆದರಿಸುವುದು ಗಗನಕುಸುಮವೇ ಸರಿ. ತಮ್ಮ ಜನಾಂಗಕ್ಕೆ ಸೇರಿದ ಬಡ ಒಕ್ಕಲಿಗರನ್ನು ಅಸ್ಪೃಶ್ಯರಾಗಿ ಕಾಣತಕ್ಕಂಥ ಈ ನೀತಿಯಿಂದ ಯಾರಾದರೂ ಪಾಠ ಕಲಿಯಬೇಕಾದದ್ದೇ.

ಮತ್ತೊಂದು ಕೋಮಿನ ತಾರತಮ್ಯ ಜ್ಞಾನವನ್ನು ವಿಷದಪಡಿಸಲು ಒಂದು ಸೂಕ್ತ ಉದಾಹರಣೆ ಇಲ್ಲಿ ನೀಡಲಾಗಿದೆ. ಅವರು ಜಾತಿಯಲ್ಲಿ ಬ್ರಾಹ್ಮಣರು, ನಿವೃತ್ತ ಜಿಲ್ಲಾಧಿಕಾರಿಗಳು. ತಮ್ಮ ಕಾರ್ಯಾಚರಣೆಯ ಬಗ್ಗೆ ಹೆಮ್ಮೆಪಟ್ಟುಕೊಳ್ಳುವ ವ್ಯಕ್ತಿ. ಬ್ರಾಹ್ಮಣರ ವಿಚಾರದಲ್ಲಿ ಹೃದಯಸ್ಪರ್ಶಿ ಮಾತುಗಳಿಂದ ಹೀಗೆ ತಮ್ಮ ಅನುಕಂಪವನ್ನು ವ್ಯಕ್ತಪಡಿಸಿದರು.

**Brahmin Officer :-** "Mr.Ramakrishna, it makes me shed tears when I realise that many Brahmin families in Bangalore are without a roof over their heads (meaning thereby that these Brahmins na doubt live in rented houses, but do yet own their own)".

Ramakrishna :- "Sir, don't you shed tears that there are thousands of families in Bangalore on the pavements without a square meal, let alone a roof over their heads ? It is becauseof I.A.S. Officers like you that our country has been so backward".

ಹೀಗಿದೆ ಅಧಿಕಾರಿಗಳನೇಕರ ಮರ್ಜಿ. ವರ್ಚಸ್ಸು ಹಾಗೂ ಧೋರಣೆ, ಸತ್ಯ ಎಂದೂ ಕಠೋರ, ಅದನ್ನು ಎದುರಿಸಬೇಕಾದರೆ ನೈತಿಕ ಬಲ ಬೇಕು.

ಈ ಮಾತುಗಳಿಂದ ವ್ಯಕ್ತವಾಗುವ ಅಂಶವೆಂದರೆ ಮುಂದುವರಿದ ಜನಾಂಗಕ್ಕೆ ಸೇರಿದ ಅಧಿಕಾರಿಗಳು ತಮ್ಮ ಜಾತಿಯ ಬಗ್ಗೆ ಎಷ್ಟು ಕಾಳಜಿ ವಹಿಸುತ್ತಾರೆಂಬುದು. ಎಷ್ಟು ಜನ ಉನ್ನತ ಅಧಿಕಾರಿದಲ್ಲಿ ಇದ್ದು ಇರುವ ಒಕ್ಕಲಿಗರು ತಮ್ಮ ಜಾತಿ ಬಗ್ಗೆ, ಜಾತಿಯಲ್ಲಿ ಹಿಂದುಳಿದವರ ಬಗ್ಗೆ ಸಹಾನುಭೂತಿ, ಅನುಕಂಪಗಳನ್ನು ಪ್ರದರ್ಶಿಸುವವರಿದ್ದಾರೆ?. ಅಥವಾ ಜಾತೀಯತೆಯ ವಿಷವೃಕ್ಷವನ್ನು ನೀರೆರೆದು ಪೋಷಿಸುವ ಮಾತಲ್ಲ. ಇದರ ಹಿನ್ನೆಲೆಯಲ್ಲಿನ ಮರ್ಮ, ಸತ್ಯ, ಕಾರ್ಯಾಚರಣೆ ಯಾವ ತೆರನಾದುದು, ಯಾವ ದಿಕ್ಕಿನಲ್ಲಿ ಹರಿಯುತ್ತಿದೆ ಎಂಬುದನ್ನು ಬೇರಾವ ಕಾರಣಕ್ಕಾಗಿಯಲ್ಲದಿದ್ದರೂ, ತಮ್ಮ ಸ್ವಂತಕ್ಕೆ, ಸ್ವಾಭಿಮಾನದಿಂದ ತಮ್ಮ ಪರಿಸರದ ಪರಿವೆಗಳನ್ನು ಉತ್ತಮಪಡಿಸಿಕೊಳ್ಳುವುದಕ್ಕಾದರೂ, ಪ್ರತಿಯೊಬ್ಬ ಒಕ್ಕಲಿಗನೂ ಆತ್ಮಾವಲೋಕನ ಮಾಡಿಕೊಳ್ಳಬೇಕಾಗಿದೆ.

**ಶಿಕ್ಷಣದ ಮಹತ್ವ :** ಒಕ್ಕಲಿಗ ಜನಾಂಗದವರಲ್ಲಿ ವಿದ್ಯಾಭ್ಯಾಸ ಯಾವ ದಾರಿಯಲ್ಲಿ ಸಾಗಿದೆ, ಯಾವ ಸಾಧನೆಯನ್ನು ಗಳಿಸಿದೆ, ಅದರ ಏರಿಳಿತಗಳೇನು ಎಂಬ ವಿಚಾರವನ್ನು ಅವಲೋಕಿಸುವಾಗ ಯಾವ ಸಾಮಾಜಿಕ ಸಮಸ್ಯೆಗಳು ಅಲ್ಲಿಂದ ಹೊರಹೊಮ್ಮುತ್ತವೆ ಎಂಬುದರ ಬಗ್ಗೆ ಚರ್ಚಿಸಲಾಗಿದೆ. ಒಕ್ಕಲಿಗರು ಇನ್ನುಳಿದ ಶೂದ್ರರಂತೆಯೇ ಬಹಳ ಹಿಂದೆ ಬಿದ್ದವರು. ವ್ಯಾಸಂಗ ಕ್ಷೇತ್ರದಲ್ಲಿ ಆಸಕ್ತಿ, ಆಸ್ಥೆ ವಹಿಸಿ, ತಂದೆತಾಯಿಗಳ ಪ್ರೇರಣೆಯಿಂದ ಹೆಸರು ಗಳಿಸಿದ ಮಕ್ಕಳ ಸಂಖ್ಯೆ ವಿರಳವೆಂದೇ ಹೇಳಬಹುದು. ಯಾವುದೋ ಕಾರಣ, ಪ್ರೇರಣೆಯಿಂದ ಕೆಲವರು ತಮ್ಮ ಅರ್ಹತೆ, ದಕ್ಷತೆ, ಜ್ಞಾನಾರ್ಜನೆ ಇತ್ಯಾದಿಗಳನ್ನು ಬೆಳೆಸಿಕೊಂಡಿರುವುದು ನಿಜವಾದರೂ ವಿಷಯದ ಅಂತರಾಳವನ್ನು ಒಳಹೊಕ್ಕು ನೋಡಿದಾಗ ಇದೆಲ್ಲ ಆಕಸ್ಮಿಕವೋ ಎನ್ನುವಷ್ಟರಮಟ್ಟಿಗೆ ಘಟನೆಗಳು ಜರುಗಿರುವುದನ್ನು ಕಂಡು ಕೊಳ್ಳಬಹುದಾಗಿದೆ. ವ್ಯವಸಾಯವನ್ನೇ ಪ್ರಮುಖ ಉದ್ಯಮವನ್ನಾಗಿ ಮಾಡಿಕೊಂಡ ಒಕ್ಕಲಿಗರಲ್ಲಿ ವಿದ್ಯೆಯ ಮಹತ್ವ ಇನ್ನೂ ಸಾಕಷ್ಟು ಪ್ರಮಾಣದಲ್ಲಿ ಅರಿವಾಗಬೇಕಾದುದರ ಅಗತ್ಯ ಇದೆ.

ಈ ವಿಚಾರವನ್ನು ಪರಿಶೀಲಿಸುವಾಗ ಒಕ್ಕಲಿಗರ ಕೆಲವೇ ವಿದ್ಯಾವಂತರ ಕುಟುಂಬಗಳನ್ನು ಮಾತ್ರ ಗಮನದಲ್ಲಿಟ್ಟುಕೊಳ್ಳದೆ ಬಹುತೇಕ ಅನಕ್ಷರಸ್ಥ ಜನರನ್ನೂ ದೃಷ್ಟಿಯಲ್ಲಿಟ್ಟುಕೊಳ್ಳಬೇಕಾಗಿದೆ. ಕೇವಲ ಅಕ್ಷರಜ್ಞಾನವನ್ನು ಮಾತ್ರಗಳಿಸಿಕೊಂಡಿರುವವರ ಸಂಖ್ಯೆ ರಾಜ್ಯದ ಸರಾಸರಿಗೆ ಅಥವಾ ಇಡೀ ದೇಶದ ಸರಾಸರಿಗೆ ಹೊಂದಿಕೊಳ್ಳಬಹುದಾದರೂ ಅವರಲ್ಲಿ ಮುಂದುವರಿದು ಸಾಮಾಜಿಕ ಪ್ರಜ್ಞೆಯನ್ನು ಬೆಳೆಸಿಕೊಂಡವರ ಸಂಖ್ಯೆ ಬೆರಳೆಣಿಕೆಗೆ ಮಾತ್ರ ಸಿಗುವಂತಹದು. ಇಲ್ಲಿ ವಿದ್ಯಾವಂತ ಒಕ್ಕಲಿಗರ ಪಾತ್ರವೇನು? ಬಹಳ ಹಿಂದೆ ಬಿದ್ದಿರುವ, ಅಜ್ಞಾನದಲ್ಲೇ ಕೊಳೆಯುತ್ತಿರುವ ತಮ್ಮ ಒಕ್ಕಲಿಗ ಸಹೋದರ ಸಹೋದರಿಯರಿಗೆ ಸಲ್ಲಿಸಬೇಕಾದ ಕರ್ತವ್ಯವೇನು? ಯಾವ ಜವಾಬ್ದಾರಿ ಹೊಣೆ ಹೊತ್ತುಕೊಂಡರೆ ಹೀನಾಯಸ್ಥಿತಿಯಲ್ಲೇ ಉಳಿದಿರುವ ಒಕ್ಕಲಿಗ ಬಾಂಧವರ ಭವಿಷ್ಯ ಸಾಕಷ್ಟು ಸುಧಾರಿಸೀತು? ಎಲ್ಲಿ ಯಾರಿಗೆ ಹೇಗೆ ಸಹಾಯ, ಸಹಕಾರ, ಪ್ರೋತ್ಸಾಹ, ಉತ್ತೇಜನ ನೀಡಿದರೆ ಪ್ರಯೋಜನ ಅಧಿಕ ಮಟ್ಟದಲ್ಲಿ ಲಭಿಸೀತು? ಅನೇಕ ಸಂದರ್ಭಗಳಲ್ಲಿ ಸೌಕರ್ಯ ಸೌಲಭ್ಯಗಳು ಇದ್ದರೂ ಸಹ, ಜನರೇಕೆ ವಿದ್ಯಾಭ್ಯಾಸದ ಬಗ್ಗೆ ಮಮತೆ, ಮಮಕಾರಗಳನ್ನು ಇನ್ನೂ ಬೆಳೆಸಿಕೊಂಡಿಲ್ಲ ಎಂಬ ಬಗ್ಗೆ ಚಿಂತಿಸಬೇಕಾಗಿದೆ. ಕೆಲವೊಮ್ಮೆ ಮತ್ತಷ್ಟು ಚಕಿತಗೊಳಿಸುವ ವಿಚಾರವನ್ನು ನಾವು ಮನಗಾಣಬಹುದಾಗಿದೆ. ಗ್ರಾಮಾಂತರ ಪ್ರದೇಶಗಳಲ್ಲಿ

ಕೆಲವು ಒಕ್ಕಲಿಗ ಕುಟುಂಬಗಳು ಸರಾಸರಿ ಜೀವನಮಟ್ಟಕ್ಕಿಂತ ಹೆಚ್ಚಿನ ರೀತಿಯಲ್ಲಿ ಬದುಕನ್ನು ನಡೆಸಿಕೊಂಡು ಬಂದಿದ್ದರೂ, ಅವರಲ್ಲಿ ತಮ್ಮ ಮಕ್ಕಳನ್ನು ವಿದ್ಯೆಯಲ್ಲಿ ತೊಡಗಿಸಿ, ತಮ್ಮ ಚರಾಚರ ಆಸ್ತಿಗಳಿಗಿಂತಲೂ ಅತ್ಯಂತ ಹೆಚ್ಚಿನ ರೀತಿಯನ್ನು ಜ್ಞಾನಾರ್ಜನೆಯ ಮುಖಾಂತರ ಒದಗಿಸಿಕೊಡಬೇಕೆಂಬ ಉತ್ಕಟ ಆಕಾಂಕ್ಷೆ ಅವರಿಗೆ ಇನ್ನೂ ಏಕೆ ಬಂದಿಲ್ಲ?

ಹಣಕಾಸಿನ ಪರಿಸ್ಥಿತಿ ಉತ್ತಮವಿದ್ದರೂ ಸಹ ಅವರಲ್ಲಿ ಈ ರೀತಿಯ ಒಂದು ಆಂತರಿಕ ದೃಷ್ಟಿ ಮಿಂಚದೆ ಇರುವುದನ್ನು ನೋಡಿದರೆ ಮತ್ತಷ್ಟು ಶೋಚನೀಯವೆನಿಸುತ್ತದೆ. ಈ ವಿಚಾರವನ್ನು ಮತ್ತೊಂದು ದಿಕ್ಕಿನಲ್ಲಿ ವಿಮರ್ಶಿಸಬಹುದೇನೋ, ಮಣ್ಣಿನಿಂದ ಬಂದ ಜನ ನಾವು, ಮಣ್ಣಿನಿಂದಲೇ ನಮ್ಮ ಬದುಕು, ಮಣ್ಣಿನ ಮಕ್ಕಳಾದ ನಮಗೆ ಮಣ್ಣಲ್ಲದೆ ಬೇರೆ ಉದ್ಯಮದ ಹವ್ಯಾಸವೇಕೆ? ಎಂಬ ಚಿಂತನೆ ಅವರನ್ನು ಬಂಧಿಸಿದೆ. ಅದಕ್ಕೆ ಏನೋ ಅನೇಕ ಒಕ್ಕಲಿಗ ಯುವಕರು ಹೈಸ್ಕೂಲು ಹಂತದಲ್ಲೇ ತಮ್ಮ ವ್ಯಾಸಂಗಕ್ಕೆ ಮಂಗಳ ಹಾಡಿಬಿಡುತ್ತಾರೆ. ಆದರೆ ಬದಲಿಸಿದ ಪರಿಸ್ಥಿತಿಯಲ್ಲಿ ಕೆಲವು ಕಾಲಾನಂತರ ಅದೇ ಯುವಕರು ಬೇಸಾಯದಲ್ಲಿ ಸಿಗುವ ವರಮಾನ ಸಾಲದೆ ಯಾವುದೋ ಸರಕಾರಿ ಚಾಕರಿಗೆ ಸೇರುವ ನಿದರ್ಶನಗಳೂ ಹಲವಾರು.

**ಗ್ರಾಮಾಂತರ ಪ್ರದೇಶಗಳಲ್ಲಿ :** ಗ್ರಾಮಾಂತರ ಪ್ರದೇಶಗಳಲ್ಲಿ ಸರ್ಕಾರಿ ಶಾಲೆಗಳ ಸ್ಥಿತಿಗತಿಗಳು ಅಧೋಗತಿಗಿಳಿದಿವೆ. ಕಟ್ಟಡಗಳಿಲ್ಲದೆ, ವ್ಯವಸ್ಥಿತ ಶಿಕ್ಷಕರಿಲ್ಲದೆ, ಪ್ರೋತ್ಸಾಹ ನೀಡುವ ತಾಯಿತಂದೆಯರಿಲ್ಲದೆ ಬೆಳೆಯುವ ಮಕ್ಕಳು ವ್ಯಾಸಂಗದಲ್ಲಿ ಮುಂದುವರಿಯುವ ಬಗೆಯಾದರೂ ಹೇಗೆ? ಇಂಥ ಪ್ರಮುಖ ಸಾಮಾಜಿಕ ಸಮಸ್ಯೆಯನ್ನು ಪ್ರಜ್ಞಾವಂತ ಒಕ್ಕಲಿಗರಲ್ಲದೆ ಬೇರೊಬ್ಬರು ಮಾಡಲು ನಿರೀಕ್ಷಿಸುವುದು ಸುಲಭ ಸಾಧ್ಯವಾದೀತೇ? ಆ ದಿಶೆಯಲ್ಲಿ ಅಗತ್ಯ ಪೂರೈಕೆಗೆ ಏನೇನು ಮಾಡಿದರೆ ಜನ ಮುಂದೆ ಬರಲು ಸಾಧ್ಯ ಎಂಬ ನಕಾಶೆ, ಯೋಜನೆ, ಕಲ್ಪನೆ ನಮಗೆ ಬಂದು ಅದನ್ನು ಕಾರ್ಯರೂಪಕ್ಕೆ ಇಳಿಸುವುದು ಯಾವಾಗ?

ವಿದ್ಯಾವಂತ ಒಕ್ಕಲಿಗರ ಸಮುದಾಯವೇ ಬೇರೊಂದು ವರ್ಗವಾಗಿರುವುದು ಮತ್ತೊಂದು ರೀತಿಯ ಸಾಮಾಜಿಕ ವಿಡಂಬನೆ. ಈ ವಿದ್ಯಾವಂತರ ಮಕ್ಕಳು ದೊಡ್ಡ ದೊಡ್ಡ ಪಟ್ಟಣ, ನಗರಗಳಲ್ಲಿ ಸುವ್ಯವಸ್ಥಿತ ಶಾಲಾಕಾಲೇಜುಗಳಲ್ಲಿ ಓದುವ ಅವಕಾಶ, ಅದೃಷ್ಟಗಳಿಸಿಕೊಂಡು ಮುಂದುವರಿಯುವುದನ್ನು ಯಾರೂ ಅಸೂಯೆಯ ದೃಷ್ಟಿಯಿಂದ ನೋಡಿ, ಬೆರಳು ತೋರಿಸಿ, ಮೂಗುಮುರಿಯುವುದು ಆರೋಗ್ಯಕರ ಲಕ್ಷಣವಲ್ಲ. ಹೌದು, ಆ ಮಕ್ಕಳು ಒಳ್ಳೆಯ ವಾತಾವರಣ, ಸಹವಾಸ, ಪರಿಸರದಲ್ಲಿ ತಮ್ಮ ಜ್ಞಾನ ಕ್ಷಿತಿಜವನ್ನು ವೃದ್ಧಿಸಿಕೊಂಡು ಪ್ರಬುದ್ಧರಾಗಲಿ. ಆದರೆ ಜೊತೆಜೊತೆಗೆ ಇದೇ ಬುಡಕಟ್ಟಿಗೆ ಸೇರಿದ ಲಕ್ಷಾಂತರ ಎಳೆಯ ಹೃದಯಗಳು ಚಿಗುರುವ ಮನಸ್ಸುಗಳು, ಹೇಗೆ ಹಳ್ಳಿಹಳ್ಳಿಗಳಲ್ಲಿ ಕುಂದಿ ಕೊರಗಿ ಚಿವುಟಿಹೋಗಿವೆ? ಅವರ ಈ ದಾರುಣ ಪರಿಸ್ಥಿತಿಯನ್ನು ಹೋಗಲಾಡಿಸಿ ಅವರ ಕತ್ತಲಿನ ಜೀವನಕ್ಕೆ ಆಶಾಜ್ಯೋತಿಯನ್ನು ನೀಡುವವರಾರು? ಅಂತಹ ಮಕ್ಕಳು ಅಪ್ಪಿತಪ್ಪಿ ಕಾಲೇಜು, ವಿಶ್ವವಿದ್ಯಾನಿಲಯ ವ್ಯಾಸಂಗಕ್ಕೆ ಬಂದಾಗ, ದಿಕ್ಕು ದೆಶೆ ಕಳೆದುಕೊಂಡಷ್ಟು ದಿಗ್ಭ್ರಮೆ ಉಂಟಾದರೆ ಅಸಹಜವೇನಲ್ಲ. ಇಷ್ಟು ಅತಿರೇಕ ವೈಪರಿತ್ಯ ತಾರತಮ್ಯವನ್ನು ಸದೆಬಡಿದು ಸಮಾನತೆಯ ಅವಕಾಶವನ್ನು ಕಲ್ಪಿಸಿಕೊಳ್ಳುವ ಸಾಧ್ಯಾಸಾಧ್ಯತೆಗಳ ಬಗ್ಗೆ ಒಕ್ಕಲಿಗ ಜನಾಂಗದವರು ದೃಢ ನಿರ್ಧಾರ ತೆಗೆದುಕೊಳ್ಳುವಾಗ ಪೈಪೋಟಿ, ಈರ್ಷ್ಯೆ, ಕ್ಷೋಭೆಗಳ ಗೊಂದಲವನ್ನೇ ನಾವು ಗಮನಿಸಬಹುದು. ಪ್ರತಿಷ್ಠಿತ ಒಕ್ಕಲಿಗ ಕುಟುಂಬದ ವ್ಯಕ್ತಿಗಳಿಗೆ ಸಿಗುವ ಸ್ಥಾನಮಾನ, ಉಪಚಾರ, ಪುರಸ್ಕಾರ, ಸದ್ಭಾವನೆ, ಸೌಹಾರ್ದತೆ, ಎಷ್ಟೇ ಪ್ರತಿಭಾವಂತರೆನಿಸಿಕೊಂಡಿರಬಹುದಾದ,

ಆದರೆ ಬೆಂಬಲಹೀನ, ಒಕ್ಕಲಿಗರ ಮಕ್ಕಳಿಗೆ ಸಿಕ್ಕದೆ ನಿರಾಶೆಗೊಂಡು ಭ್ರಮೆನಿರಸವಾಗಿರುವುದು ಅಪರೂಪದ ಸಂಗತಿ ಏನಲ್ಲ. ಅಂದರೆ ಶಕ್ತಿ, ಅರ್ಹತೆ, ಸಹಜ ಕಾರ್ಯಶೀಲತೆ ಇವೆಲ್ಲ ಗೌಣವಾಗಿ ಸೋಗು, ಆಡಂಬರಕ್ಕೆ ಪ್ರಧಾನ ಸ್ಥಾನ ಸಿಗುತ್ತಿರುವುದು ಹೃದಯ ವಿದ್ರಾವಕವಾದ ದೃಶ್ಯ.

**ಗ್ರಾಮ ನೈರ್ಮಲ್ಯ :** ಹಳ್ಳಿಗಾಡಿನ ಜನರ ಆರೋಗ್ಯ ಹಾಗೂ ಗೃಹನೈರ್ಮಲ್ಯ ಸುತ್ತಮುತ್ತಲಿನ ವಾತಾವರಣ ವಿಶೇಷಗಳನ್ನು ಗಮನಿಸಿದಾಗ ಇನ್ನೂ ಈ ಒಕ್ಕಲಿಗರು ಅಂಧಕಾರಯುಗದಲ್ಲಿಯೇ ಬದುಕಿದ್ದಾರೋ ಎಂಬ ಚಿಂತೆಯ ಭ್ರಮೆ ಬಾರದಿರದು. ರಾಶಿರಾಶಿಗಟ್ಟಲೆ ಗೊಬ್ಬರದ ಗುಂಡಿಗಳು ಹಳ್ಳಿಗಾಡಿನ ಇತರ ಜನಾಂಗದವರಂತೆಯೇ ಒಕ್ಕಲಿಗ ಜನಾಂಗದ ವಸತಿಗೃಹ ಗುಡಿಸಿಲುಗಳ ನಡುವೆ ರಾರಾಜಿಸುತ್ತಿವೆ. ಸರಿಯಾದ ರಸ್ತೆ ಏರ್ಪಾಟಾಗಲಿ, ವಾಹನ ಸೌಕರ್ಯವಾಗಲಿ, ನೀರಿನ ಸೌಕರ್ಯವಾಗಲಿ ಕಾಣದ ಈ ಜನ ಬಹಳ ಹಿಂದುಳಿಯದೆ ಇನ್ನೇನಾಗಲು ಸಾಧ್ಯ? ಕೊಳೆತು ನಾರುವ ಚರಂಡಿಗಳು ಇವರ ಗಮನಕ್ಕೆ ಬರುವುದೇ ಇಲ್ಲವೇನೋ! ಒಂದು ವೇಳೆ ಬಂದರೂ, ಇವರ ಗೋಳನ್ನು ಕೇಳುವವರಾರು. ಸಾಮಾನ್ಯವಾಗಿ ಹಳ್ಳಿಗಾಡಿನ ಜನರಿಗೆ ಜನಸಂಖ್ಯೆ ಸಮಸ್ಯೆ ಖಂಡಿತ ಬಾಧಿಸಿಲ್ಲ. ಮನೆ ತುಂಬ ಹೆಣ್ಣು ಮಕ್ಕಳೂ ಇದ್ದರೂ, ಪುತ್ರ ಸಂತಾನಕ್ಕೆ ಪ್ರಯತ್ನಮಾಡಿ ವಂಶೋದ್ಧಾರಕ ಜನನವಾಗುವ ತನಕ ಸಮಾಧಾನವಾಗಲಿ, ಮನಶ್ಶಾಂತಿಯಾಗಲಿ ದೊರೆಯುವುದಿಲ್ಲ. ಒಂದು ಕಡೆ ಜನಸಂಖ್ಯಾ ಆಸ್ಫೋಟದ ಸಮಸ್ಯೆ ಬೃಹದಾಕಾರವಾಗಿ ಇಡೀ ರಾಷ್ಟ್ರವನ್ನು ಮೆಟ್ಟಿದ್ದರೂ, ಈ ಜನರಿಗೆ ಅದರ ಬಾಧೆ ತಗಲಿಲ್ಲ. ಈ ದಿಕ್ಕಿನಲ್ಲಿ ಈ ಬಡ ರೈತಾಪಿ ಜನರಿಗೆ ಯಾವ ರೀತಿ ಎಚ್ಚರಿಕೆ, ಹಿತವಚನ, ನಿರ್ದೇಶನ ನೀಡಲು ಯಾವ ಒಕ್ಕಲಿಗ ವಿದ್ಯಾವಂತರು ಮುಂದೆ ಬಂದಿದ್ದಾರೆ?, ಏಕೆಂದರೆ ಸರ್ಕಾರದ ಕುಟುಂಬ ಯೋಜನಾ ಕ್ರಮಗಳು ಕಾಗದದ ಮೇಲೆ ಘೋಷಣಾ ವ್ಯವಸ್ಥೆಗಳಾಗಿವೆಯೇ ವಿನಾ ಕಾರ್ಯರೂಪದಲ್ಲಿ ಅವು ಇಳಿದಿರುವುದಿಲ್ಲ.

**ಸ್ತ್ರೀಯರ ಸ್ಥಾನ :** ಇತರ ಕೋಮಿನ ಶೂದ್ರರಂತೆ ಹಳ್ಳಿಗಾಡಿನ ಒಕ್ಕಲಿಗರೂ ಸಹ ಹೆಣ್ಣಿಗೆ ಅಂತಹ ಒಳ್ಳೆಯ ಸ್ಥಾನವನ್ನು ಕೊಟ್ಟಿಲ್ಲದಿರುವುದು ದುಃಖಕರ ಸಂಗತಿ. ಇದಕ್ಕೆ ಮೂಲಭೂತ ಕಾರಣ ಗಂಡು ಹೆಚ್ಚು, ಹೆಣ್ಣು ಕಡಿಮೆ, ಎಂಬ ಭೇದಭಾವವೇ ಆಗಿರುತ್ತದೆ. ಏಕೆಂದರೆ ಅವರ ಅಭಿಪ್ರಾಯದಲ್ಲಿ 'ಕೊಟ್ಟ ಹೆಣ್ಣು ಕುಲಕ್ಕೆ ಹೊರಗು' ಎಂಬ ಮೌಢ್ಯ. ಇತ್ತೀಚಿನ ವರ್ಷಗಳಲ್ಲಿ ಎಲ್ಲೋ ಕೆಲವು ಹೆಣ್ಣು ಮಕ್ಕಳು ಹೈಸ್ಕೂಲು ವ್ಯಾಸಂಗಕ್ಕೆ ಹೋಗುತ್ತಿರುವುದಷ್ಟೇ. ವಿಶ್ವವಿದ್ಯಾಲಯಕ್ಕೆ ಹೋಗಿ ತಮ್ಮ ಮಾನಸಿಕ ವಿಕಾಸವನ್ನು ಕಂಡುಕೊಂಡ ಹೆಣ್ಣುಮಕ್ಕಳ ಸಂಖ್ಯೆ ಕೇವಲ ಬೆರಳೆಣಿಸುವಷ್ಟು ಮಂದಿ. ಈ ವಿಚಾರದಲ್ಲಿ ನಗರದಲ್ಲೇ ಹುಟ್ಟಿ ಬೆಳೆದ ಹೆಣ್ಣುಮಕ್ಕಳ ಪಥವೇ ಬೇರೆ. ಆದರೆ ನಾವಿಲ್ಲಿ ವಿಮರ್ಶಿಸುತ್ತಿರುವುದು ಗ್ರಾಮೀಣ ಮಹಿಳಾ ಸಮಸ್ಯೆಗಳನ್ನು. ಗಂಡು ಶಾರೀರಕವಾಗಿ ಮೇಲು ಎಂಬ ಕಾರಣದಿಂದಲೋ ಏನೋ ಆತನು ಹೆಣ್ಣನ್ನು ದೌರ್ಜನ್ಯ ಕ್ರೌರ್ಯಗಳಿಗೆ ಒಳಪಡಿಸುತ್ತಾನೆ. ಹೆಣ್ಣಿಗೆ ಗಂಡಿಗಿರುವ ಸ್ವಾತಂತ್ರ್ಯ, ಆಯ್ಕೆಯ ವಿಚಾರ, ಸ್ವಂತ ನಿಲುವು, ಒಲವುಗಳ ಪ್ರಶ್ನೆ ಇನ್ನೂ ಎದ್ದುಕಾಣುತ್ತಿಲ್ಲ, ಈ ಮನೋಭಾವನೆಗೆ ಮುಖ್ಯವಾಗಿ ಗಂಡಸೇ ಕಾರಣ. ಒಟ್ಟಿನಲ್ಲಿ ಹೆಣ್ಣು ಗಾದೆಯ ಮಾತಿನಂತೆ ಕಷ್ಟಸಹಿಷ್ಣುವಾಗಿ ದುಃಖವನ್ನು ನುಂಗಿಕೊಂಡು ಅಲ್ಪಸ್ವಲ್ಪಸುಖವೇ ಪರಮಬಾಗ್ಯವೆಂದೂ, ಗಂಡ ಎಂಥವನೇ ಇರಲಿ ತನ್ನ ದೈವವೆಂದೂ ಬದುಕಬೇಕಾಗಿರುವ ಸನ್ನಿವೇಶ ನಿಜಕ್ಕೂ ಚಿಂತಾಜನಕ. ಈ ಮಾತನ್ನು ಎಲ್ಲ ಶೂದ್ರ ಸಂಸಾರಗಳಿಗೂ ಅನ್ವಯಿಸಬಹುದು. ಗಂಡಸು ವಿರಾಮವೇಳೆಯಲ್ಲಿ ಬಯಲುನಾಟಕ, ಸಿನಿಮಾ, ಜೂಜಾಟ, ಕುಡಿತ, ವೇಷಕಟ್ಟುವುದು, ಸುಗ್ಗಿ ಕುಣಿತ, ಇತ್ಯಾದಿಗಳಲ್ಲಿ ತಮ್ಮ ಸಮಯವನ್ನು ಕಳೆಯುತ್ತಾರೆಂಬುದು ನಿಜ, ಆದರೆ

ದುರ್ದೈವವಶಾತ್ ಹೆಣ್ಣುಮಕ್ಕಳು ಪ್ರೇಕ್ಷಕರಾಗಿ ಗಂಡಸರ ಈ ದೃಶ್ಯಾವಳಿ ಗಳನ್ನು ನೋಡುವುದಲ್ಲದೆ, ಬೇರಾವ ಮನರಂಜನೆಯೂ ಅವರಿಗೆ ಸಿಗಲೋಲ್ಲದು. ಹೆಣ್ಣಿನ ಜೀವನ ಕಷ್ಟಕ್ಕಾಗಿಯೇ ಹುಟ್ಟಿ ಬೆಳೆದದ್ದು ಎಂಬ ಗೊಡ್ಡು, ಸಂಪ್ರದಾಯದಿಂದ ಹೊರಗೆ ಬರಲು ಹೋರಾಟಮಾಡಬೇಕಾಗಿದೆ.

**ವಿವಾಹ :** ಸ್ವಾತಂತ್ರ್ಯೋತ್ತರ ದಿನಗಳಲ್ಲಿಯೂ ಸಹ ಗ್ರಾಮೀಣ ಪ್ರದೇಶಗಳಲ್ಲಿ ಒಕ್ಕಲಿಗರ ಹೆಣ್ಣುಮಕ್ಕಳು ಉಳಿದ ಶೂದ್ರರ ಹೆಣ್ಣು ಮಕ್ಕಳಂತೆ ಬಹಳ ಸಣ್ಣ ವಯಸ್ಸಿನಲ್ಲಿಯೇ ವಿವಾಹ ವಿಧಿಗೆ ನೂಕಲ್ಪಡುತ್ತಾರೆ. ಋತುಮತಿಯಾದ ಹೆಣ್ಣು ಮಕ್ಕಳನ್ನು ಹೆಚ್ಚುಕಾಲ ಮನೆಯಲ್ಲಿಯೇ ಇಟ್ಟುಕೊಂಡರೆ, ಹೆತ್ತ ತಂದೆ ತಾಯಿಗಳಿಗೆ ಅಪಕೀರ್ತಿ ಬಂದೀತು ಎಂಬ ಭಯ ಭೀತಿ. ಹೆಣ್ಣು ವಯಸ್ಕಳಾಗುವವರೆಗೆ ಚಿಂತೆ ಇಲ್ಲ. ವಯಸ್ಕಳಾದ ಮೇಲೆ ಆಕೆಯನ್ನು ಬಹಳ ದಿವಸ ವಿವಾಹಮಾಡದೆ ಮನೆಯಲ್ಲಿಟ್ಟುಕೊಂಡು ನ್ಯಾಯ ಹೇಳಲು ಹೊರಟ ಗೌಡನಿಗೆ ಜನರು 'ಋತುವಾದ ಮಗಳನ್ನು ಮನೆಯಲ್ಲಿಟ್ಟುಕೊಂಡು ನ್ಯಾಯ ಹೇಳಲು ಬಂದಿದ್ದಾನೆ.' ಎಂದು ಛೀಮಾರಿ ಹಾಕುವ ಸಂಪ್ರದಾಯವೂ ನಮ್ಮಲ್ಲಿ ಬಳಕೆಯಲ್ಲಿದೆ. ಹಾಗಾಗಿ, ಹೆಣ್ಣು ತಾನೂ ಒಂದು ಮಾನವ ಜೀವಿ, ತನಗೂ ಹೃದಯವಿದೆ, ತಾನೂ ಚಿಂತಿಸಬಲ್ಲೆ, ತನಗೂ ಬೇಕು ಬೇಡಗಳ ಪ್ರಶ್ನೆಗಳಿವೆ ಎಂಬ ಅರಿವಾಗಲಿ ತನ್ನ ಹಕ್ಕು, ಕರ್ತವ್ಯ, ಜವಾಬ್ದಾರಿಗಳೇನು ಎಂಬ ಅರಿವಾಗಲಿ ಹೊಳೆಯದೆ ಇರುವುದಕ್ಕೆ ಕಾರಣ ಗಂಡಸೇ.

ಸಣ್ಣ ವಯಸ್ಸಿನಲ್ಲಿ ದುರದೃಷ್ಟವಶಾತ್ ಗಂಡನನ್ನು ಕಳೆದುಕೊಂಡ ಹೆಣ್ಣಿನ ದುರಂತ ಹೇಳತೀರದು. ಪುನರ್ವಿವಾಹ ಮಾಡಿಕೊಳ್ಳಲು ಸಮಾಜ ಅವಳಿಗೆ ಇನ್ನೂ ಅಷ್ಟು ಸ್ವಾತಂತ್ರ್ಯವನ್ನು ನೀಡಿಲ್ಲ. ಗಂಡು ತನ್ನ ೫೦-೬೦ ನೇ ವಯಸ್ಸಿನಲ್ಲಿ ೩ ನೇ ಅಥವಾ ೪ ನೇ ಮದುವೆಯಾದರೂ ಅದಕ್ಕೆ ಅಭ್ಯಂತರವಿಲ್ಲ. ಆದರೆ ಪ್ರಾಪ್ತವಯಸ್ಸಿನಲ್ಲೇ ವಿಧವೆಯಾದರೆ ಹೆಣ್ಣಿನ ಗತಿಯ ಬಗ್ಗೆ ಯಾರೂ ಚಿಂತೆ ಹರಿಸಿಲ್ಲ. ಅಕಸ್ಮಾತ್ ಅಂಥ ಹೆಣ್ಣು ಯಾವುದೇ ಕೆಟ್ಟಗಳಿಗೆಯಲ್ಲಿ ಒಂದು ಪಕ್ಷ ಮನಸೋತು ತಪ್ಪಿನಡೆದರೆ, ಅವಳನ್ನು ಮನ್ನಿಸಲಾರದಷ್ಟು ಕಠಿಣ ಹೃದಯಿಗಳು ಗ್ರಾಮೀಣ ಜನರು. ಇದು ಅಲ್ಲಿನ ಎಲ್ಲ ಕೋಮಿನವರಿಗೂ ಅನ್ವಯವಾಗುತ್ತದೆ.

ಒಮ್ಮೊಮ್ಮೆ ಸಣ್ಣ ವಯಸ್ಸಿನ ವಿಧವೆ 'ಕೂಡುವಳಿ' ಮಾಡಿಕೊಳ್ಳುವ ಪದ್ಧತಿಯೂ ಇದೆ. ಆದರೆ ಅಂಥ ಸಂಪ್ರದಾಯಕ್ಕೆ ಕೊಟ್ಟಿರುವ ಸ್ಥಾನ ಬಹಳ ಕೀಳುಮಟ್ಟದ್ದು. ನಿಕೃಷ್ಟವಾದದ್ದು. ಯಾವುದೋ ಒಂದು ಮೌಢ್ಯ ಕಟ್ಟಳೆಯನ್ನು ಆದರ್ಶವಾಗಿ ಉಳಿಸಿಕೊಂಡಿರುವುದೇ ಇಂಥ ಬಿಕ್ಕಟ್ಟು, ಅನ್ಯಾಯಗಳಿಗೆ ಕಾರಣ. ಆದರೆ ಇದಕ್ಕೆ ನಿವಾರಣೆ ಎಂದರೆ, ವಿಧವಾ ವಿವಾಹ ದೋಷಬಾಹಿರವೂ, ನ್ಯಾಯ ಸಮ್ಮತವೂ ಎಂದು ತಿಳಿದು ಅದಕ್ಕೆ ಮನ್ನಣೆ ನೀಡಬೇಕು.

**ದೇವರ ಹೆಸರಿನಲ್ಲಿ ಬಲಿ :** ಶೂದ್ರ ಜನಾಂಗಕ್ಕೆ ಸೇರಿದ ಒಕ್ಕಲಿಗರು ಮಾಂಸಾಹಾರಿಗಳು; ಕುರಿ, ಕೋಳಿ, ಮೀನು ಇವರಿಗೆ ಬಹಳ ಪ್ರಿಯ.ಯಾವುದೇ ಹಬ್ಬ ಹರಿದಿನಗಳ ಮರುದಿನ ಇದರ ಔತಣ ನಡೆದರೇನೇ ತೃಪ್ತಿ. ಅದರಲ್ಲೂ ಉಗಾದಿ ಹಬ್ಬದ ಮರುದಿನ ಸಂಭ್ರಮ ಹೇಳತೀರದು. 'ವರ್ಷತೊಡಕು' ಎಂಬ ನಾಮಾಂಕಿತವನ್ನಿಟ್ಟುಕೊಂಡು, ಕೋಳಿ, ಕುರಿ ಕುಯ್ದು ಆ ಹಬ್ಬದ ಮರುದಿನವನ್ನು ಅತ್ಯಂತ ಸಂಭ್ರಮದಿಂದ ಆಚರಿಸುತ್ತಾರೆ. ಯಾರಾದರೂ ಆಪ್ತರೂ, ನೆಂಟರಿಷ್ಟರೂ, ರಕ್ತಸಂಬಂಧಿಗಳೂ ಮನೆಗೆ ಬಂದರೆ ಅವರಿಗೆ ಹೆಚ್ಚುಗಟ್ಟಲೆ ಕಾರ್ಯಕ್ರಮವೆಂದರೆ ಮಾಂಸದ ಔತಣವೇ. ಇದರಿಂದ ಹಬ್ಬದ ಹೆಸರಿನಲ್ಲಿ ಅಥವಾ ನೆಂಟರಿಷ್ಟರ ಹೆಸರಿನಲ್ಲಿ ಪುಷ್ಟಿಕರವಾದ ಆಹಾರ ತಿನ್ನುವಂತಾಗುತ್ತದೆ. ಆದಕಾರಣ ಕುರಿ, ಕೋಳಿ ಸಾಗಾಣಿಕೆ ಚೆನ್ನಾಗಿ ಮಾಡುವುದು

ಒಳ್ಳೆಯದು. ಆದರೆ ಮಾರಿ ಹಬ್ಬ, ಗ್ರಾಮ ದೇವತೆ ಹಬ್ಬ, ವನದೇವತೆ ಹಬ್ಬ ಇತ್ಯಾದಿಗಳಲ್ಲಿ ಎಷ್ಟೋ ಕುರಿ ಕೋಳಿಗಳು ದೇವರ ಹೆಸರಿನಲ್ಲಿ ಬಲಿಯಾಗಿ ರಕ್ತದ ಹೊಳೆಯೇ ಹರಿಯುತ್ತದೆ. ರಕ್ತಶಾಂತಿ ಆದರೆ ಮಾತ್ರ ಊರಿನ ಜನರಿಗೆ ನೆಮ್ಮದಿ, ಶಾಂತಿ, ಸಮಾಧಾನ, ಸಮೃದ್ಧಿಯಾಗುತ್ತದೆ ಎಂಬ ನಂಬಿಕೆ ಈ ಜನರಲ್ಲಿ ಬೇರೂರಿದೆ.

**ಪುರೋಹಿತ ವರ್ಗ :** ತಮಗೇ ಅಗತ್ಯವಸ್ತುಗಳ ಕೊರತೆ ಇದ್ದರೂ, ಪುರೋಹಿತ ವರ್ಗದವರು ಏನಾದರೂ ಧರ್ಮವಿಚಾರ ಪ್ರಸ್ತಾಪಮಾಡಿ ಸಹಾಯ ನಿರೀಕ್ಷಿಸಿದರೆ, ಉದಾರಹಸ್ತದಿಂದ ನೆರವಾಗುವರು. ಉದಾಹರಣೆಗೆ, ಸುಮಾರು ೧೫-೨೦ ವರ್ಷಗಳ ಹಿಂದೆ ಶ್ರೀರಂಗಪಟ್ಟದಲ್ಲಿ ಶತಕೋಟಿ ರಾಮೋತ್ಸವವನ್ನು ಒಂದು ವಾರ ಕಾಲ ನರಸಿಂಹಸ್ವಾಮಿ ದೇವಸ್ಥಾನದಲ್ಲಿ ಕೆಲವು ಬ್ರಾಹ್ಮಣ ಭಕ್ತರು ಏರ್ಪಡಿಸಿದ್ದರು. ಆ ಸಂದರ್ಭದಲ್ಲಿ ರಾಜ್ಯದ ನಾನಾ ಕಡೆಯಿಂದಲ್ಲದೆ, ಹೊರರಾಜ್ಯಗಳಿಂದಲೂ ಧನ ಸಹಾಯ ದೇವರ ಹೆಸರಿನಲ್ಲಿ ಬಂದಿತು. ಉತ್ಸವದ ಯಶಸ್ಸಿಗಾಗಿ ಸುತ್ತಮುತ್ತಲಿನ ಹಳ್ಳಿಗಾಡಿನ ಜನರು, ಅದರಲ್ಲೂ ವಿಶೇಷವಾಗಿ ಒಕ್ಕಲಿಗ ಕುಟುಂಬದವರು, ಬಡಬಗ್ಗರಾದಿಯಾಗಿ ಧನ, ಧಾನ್ಯ, ಹಾಲು, ಮೊಸರು, ಬೆಣ್ಣೆ ಇತ್ಯಾದಿಗಳನ್ನು ಕಾರ್ಯಕರ್ತರಿಗೆ ಸರಬರಾಜು ಮಾಡಿದರು. ನಾಲ್ಕಾರು ದಿವಸಗಳ ಈ ಪೂಜೆ ಸಮಾರಂಭದಲ್ಲಿ ಹಲವಾರು ಬ್ರಾಹ್ಮಣ ಕುಟುಂಬಗಳು ಸಂತೃಪ್ತಿಯಿಂದ ಪೂಜೆ ಪುನಸ್ಕಾರದ ನೆವದಲ್ಲಿ ಉಂಡು ತಿಂದು ತೇಗಿದರು. ಶೂದ್ರ ಭಕ್ತಾದಿಗಳಿಗೆ ಕೊನೆಯ ದಿನ ಕಾವೇರಿ ನದಿಯ ಸೋಪಾನ ಗಟ್ಟೆಯ ಮೇಲೆ ಕೈತುತ್ತಿನಲ್ಲಿ ಪ್ರಸಾದ ವಿನಿಯೋಗವಾಯಿತು. ಒಕ್ಕಲಿಗರ ಸಾಮಾಜಿಕ ಪ್ರಜ್ಞೆ, ಧಾರ್ಮಿಕ ಚಿಂತನೆ, ಎಷ್ಟರಮಟ್ಟಿಗೆ ವಿಕಸಿತಗೊಂಡಿದೆ ಎಂಬುದಕ್ಕೆ ಇದೊಂದು ಪ್ರತ್ಯಕ್ಷ ಸಾಕ್ಷಿ.

ಪಟ್ಟಣಗಳಲ್ಲಿರುವ 'ಪ್ರತಿಷ್ಠಿತ' ಅಥವಾ ಆರ್ಥಿಕವಾಗಿ ಮುಂದುವರಿದಿರುವ ಒಕ್ಕಲಿಗ ಕುಟುಂಬದವರ ವಿಚಾರವೂ ದೇವರು ದಿಂಡರ ಹೆಸರು ಬಂದಾಗ ಬಹಳಮಟ್ಟಿಗೆ ವಿಭಿನ್ನವೇನಲ್ಲ. ಪುರೋಹಿತರು ಹೇಳಿದ, ಸೂಚಿಸಿದ, ಮಾತನ್ನು ವಿಮರ್ಶಿಸಿ ನೋಡುವ ಗೋಜಿಗೆ ಹೋಗುವುದಿಲ್ಲ. ಒಮ್ಮೆ ಸತ್ಯನಾರಾಯಣ ಪೂಜೆಯಲ್ಲಿ ಕಂಡ ಸಂಗತಿ:- ಓರ್ವ ಎಕ್ಸಿಕ್ಯುಟಿವ್ ಎಂಜಿನಿಯರ್‌ರವರ ಗೃಹ. ಪತ್ನಿಸಮೇತ ಪೂಜೆಗೆ ಕುಳಿತಿದ್ದಾರೆ. ಪೂಜೆ ಮಾಡಿಸುವ ಪುರೋಹಿತ ಅಪಭ್ರಂಶಗಳ ಅವತಾರ. ಅವನ ಮಾತಿನಲ್ಲಿ, ಶ್ಲೋಕದಲ್ಲಿ ಉಚ್ಚಾರಣೆಯ ದೋಷವಲ್ಲದೆ, ಬೇರೆ ಯಾವ ಗುಣವೂ ಕಾಣಸಿಗುತ್ತಿರಲಿಲ್ಲ. ದಂಪತಿಗಳು ತಮ್ಮ ಆಹ್ವಾನಿತರೊಂದಿಗೆ ಈ ಸತ್ಯನಾರಾಯಣ ಪೂಜೆಯಲ್ಲಿ ತೊಡಗಿದ್ದರು. ಯಾರಿಗೂ ಯಾವ ಶ್ರವಣವೂ ಅರ್ಥವಾಗಲಿಲ್ಲವಾದರೂ ಸತ್ಯನಾರಾಯಣ ಪೂಜೆ ಆಗಬೇಕು ಎಂಬಷ್ಟೇ ವಿಚಾರ ಅವರ ಮನಸ್ಸನ್ನು ಕವಿದಿತ್ತು. ಪೂಜೆಯೆಲ್ಲಾ ಮುಗಿದ ಮೇಲೆ, ಸದರಿ ದಂಪತಿಗಳು ಆ ಬ್ರಾಹ್ಮಣನ ಪಾದ ಬಿಗಿಹಿಡಿದು, ಸಾಷ್ಟಾಂಗ ನಮಸ್ಕಾರ ಹಾಕಿದರು. ಎಲ್ಲಾ ಮುಗಿದ ಮೇಲೆ ಲೋಕಾಭಿರಾಮವಾಗಿ "ನೀವು ಏಕೆ ಹಾಗೆ ಮಾಡಿದಿರಿ?" ಎಂದು ಎಂಜಿನಿಯರ್ ಅವರ ಪತ್ನಿಯನ್ನು ಪ್ರಶ್ನಿಸಿದಾಗ ಅವರಿಂದ ಬಂದ ಉತ್ತರ: "ಬ್ರಾಹ್ಮಣರು ದೇವತಾ ಸ್ವರೂಪರು". ಅಷ್ಟೇ ಅಜ್ಞಾನ' ಮೌಢ್ಯ ಮತ್ತೊಂದು ಸಂದರ್ಭದಲ್ಲೂ ಪ್ರದರ್ಶಿತವಾಯಿತು. ಅದು ಡಾಕ್ಟರ್ ಒಬ್ಬರ ಗೃಹಪ್ರವೇಶ ಸಮಾರಂಭದಲ್ಲಿ. ಇಂಥ ಘಟನೆಗಳನ್ನು ಗಮನಿಸಿದಾಗ ಇವರು ನಿಜವಾಗಲೂ ಅವಿದ್ಯಾವಂತರೆಂದು ತಿಳಿಯದಿರಲಾಯಿತು.

**ಸಫಲತೆಯ ಹಾದಿ :** ಪ್ರಸ್ತುತ ಇಲ್ಲಿ ಒಕ್ಕಲಿಗರ ಜೀವನ ಕ್ರಮ, ವೈವಿಧ್ಯತೆ, ಕಟ್ಟಳೆ, ಕಟ್ಟುಪಾಡು, ಆಚಾರ, ವ್ಯವಹಾರ ಪದ್ಧತಿಗಳು ಎಷ್ಟು ಸ್ತರಗಳಲ್ಲಿ ಹೇಗೆ ವ್ಯಕ್ತಗೊಂಡಿವೆ ಎಂಬುದನ್ನು ಸ್ಥೂಲವಾಗಿ ಪರಿಚಯ ಮಾಡಿಕೊಡಲಾಗಿದೆ. ಸಂಶೋಧನೆಯಲ್ಲಿ ಯಾವಾಗಲೂ ಸತ್ಯ ಕಠೋರ. ಅದನ್ನು ನಾವೆದುರಿಸಬೇಕಾದರೆ

ವಸ್ತುಸ್ಥಿತಿಯನ್ನು ಅರ್ಥೈಸಿಕೊಂಡು, ಡೊಂಕುಗಳನ್ನು ತಿದ್ದಿಕೊಂಡು, ಸಮಸ್ಯೆಗಳ ಜಟಿಲತೆಯನ್ನು ಮನಗಂಡು, ಅವುಗಳಲ್ಲಿ ಯಾವುದು ಸರಿ, ಯಾವುದು ತಪ್ಪು ಎಂಬ ವಿಮರ್ಶೆ ಹೇಗೆ ಬೆಳೆಸಿಕೊಳ್ಳಬೇಕು ಎಂಬ ಹಲವು ಮುಖಗಳ ಸಂದರ್ಶನ ನಮಗೆ ಲಭಿಸಿದಾಗ ಮಾತ್ರ ಜನರ ಸಾಮಾಜಿಕ ಪ್ರಜ್ಞೆ ವಿಕಸನಗೊಂಡು, ಸಫಲತೆಯ ಹಾದಿಯಲ್ಲಿ ಮುಂದುವರಿಯುತ್ತಾರೆ. ಈ ಆಶಯವನ್ನು ಪ್ರಬಲವಾಗಿ ಎತ್ತಿಹಿಡಿದು ತೋರಿಸಬೇಕೆಂಬುದೇ ಇವರ ಉದ್ದೇಶವಾಗಿದೆ.

ಬಹಳ ಮುಖ್ಯವಾಗಿ ಸೂಚಿಸಬೇಕಾದ ನಿವಾರಣಾ ಅಂಶಗಳೆಂದರೆ, ಪ್ರತಿಭೆಯನ್ನು ಗುರುತಿಸಿ, ಅಂತಹ ಪ್ರತಿಭೆಯ ಪ್ರಕಾಶಕ್ಕೆ ಶ್ರಮಿಸುವುದು. ಆಮೇಲೆ ಬೆಳೆಯುವ ಮಕ್ಕಳು ಎಲ್ಲೇ ಇರಲಿ, ಅವರಿಗೆ ಪ್ರೋತ್ಸಾಹ ನೀಡಿ, ಆ ಪೈಕಿ ವಿಶೇಷವಾಗಿ ಬುದ್ಧಿವಂತರಿರುವ ಮಕ್ಕಳಿಗೆ ಎಲ್ಲ ತರಹದ ನೆರವು ನೀಡುವುದು. ಇದು ಅತ್ಯಗತ್ಯವಾಗಿ ವಿದ್ಯಾಕ್ಷೇತ್ರದಲ್ಲಿ ಆಗಲೇಬೇಕಾದ ಕೆಲಸ. ಅಖಿಲ ಭಾರತೀಯ ಸೇವಾಪರೀಕ್ಷೆಯಲ್ಲಿ (ಐ.ಎ.ಎಸ್) 'ನೇರವಾಗಿ' ತೇರ್ಗಡೆ ಹೊಂದಿ ಹೆಸರು ಗಳಿಸಿರುವ ಒಕ್ಕಲಿಗರಿಲ್ಲವೆಂದರೆ ಎಂತಹ ಅಭಾಸ! (ಇಲ್ಲಿ ರಾಜ್ಯ ಆಡಳಿತ ಸೇವಾಪರಧಿಯಲ್ಲಿ ಬಡ್ತಿ ಪಡೆದಿರುವವರ ವಿಷಯವನ್ನು ಪ್ರಸ್ತಾಪಿಸುತ್ತಿಲ್ಲ). ಹಲವಾರು ಸಾವಿರ ಒಕ್ಕಲಿಗ ಮಕ್ಕಳಿಗೆ ಅರ್ಹತೆ ಇದ್ದರೂ, ಊಟ ತಿಂಡಿ ವ್ಯಾಸಂಗ ವ್ಯವಸ್ಥೆಯ ಕೊರತೆಯಿಂದಾಗಿ ಅರಳುವ ಹೂ ಚಿಗುರಿನಲ್ಲೇ ಚಿವುಟಿಹೋದಂತಹ ಪರಿಸ್ಥಿತಿ ನಮಗೆ ತಿಳಿದಿಲ್ಲವೇ? ಅಂತಹ ಎಳೆಯ ಜೀವಿಗಳು ತೇಜಃಪುಂಜ ವ್ಯಕ್ತಿಗಳಾಗಲು ಯಾವ ಸಂಘ, ಸಂಸ್ಥೆ ಕಾರ್ಯಶೀಲವಾಗಿದೆ? ಎಂದು ನೆನೆದರೆ ನಿರಾಶೆಯಾಗುತ್ತದೆ. ಈ ದೃಷ್ಟಿಯಲ್ಲಿ ಒಕ್ಕಲಿಗರ ಸಂಘ ಯಾವ ಕಾರ್ಯಕ್ರಮವನ್ನು ಹಮ್ಮಿಕೊಂಡಿದೆ. ಈ ಸಮಸ್ಯೆಯನ್ನು ಒಕ್ಕಲಿಗರ ಅನೇಕ ಸಮಸ್ಯೆಗಳಲ್ಲೊಂದು ಎಂದು ಪರಿಗಣಿಸದೆ, ಪ್ರಮುಖ ಜೀವನಪ್ರದ ಅವಶ್ಯಕತೆ ಎಂದು ಚಿಂತನ ಹರಿಸಿ, ಕಾಯಾ ವಾಚಾ ಮನಸಾ ಶ್ರಮಿಸಿದಲ್ಲಿ, ಮುಂಬರುವ ಪೀಳಿಗೆಯಾದರೂ ಪ್ರಬುದ್ಧಮಾನವಾಗಿ ಬೆಳೆದು, ತಾವೂ ಎಲ್ಲ ರೀತಿಯಲ್ಲೂ ಗಣನೀಯ ವಂಶ ಹಾಗೂ ಜನಾಂಗದವರೆಂದು ಹೆಮ್ಮೆಯಿಂದ ಹೇಳಿಕೊಳ್ಳಲು ಸಾಧ್ಯವಾಗುದೆಂಬುದರಲ್ಲಿ ಸಂಶಯ ಬೇಡ. ಅದಕ್ಕಾಗಿ ಶಾಬ್ದಿಕ ಆಡಂಬರ, ಭಾಷಣಗಳ ಉಪಚಾರ ತೊರೆದು ಕಾರ್ಯೋನ್ಮುಖವಾಗಬೇಕಾದುದು ಆದ್ಯ ಕರ್ತವ್ಯ.

**೭.೬. ಒಕ್ಕಲಿಗರು-ಇಂದಿನ ಸ್ಥಿತಿ, ಮುಂದಿನ ಗತಿ**

ಒಕ್ಕಲಿಗರು ಆರಂಭಶೂರರೆಂಬುದು ಬಹುಮಟ್ಟಿಗೆ ನಿಜ. ಇನ್ನು ಮುಂದಾದರೂ ಈ ಕೆಟ್ಟ ಹೆಸರು ಈ ಜಾತಿಗೆ ಬರುವುದು ಬೇಡ. ಹಿಡಿದ ಕೆಲಸವನ್ನು ಪಟ್ಟುಹಿಡಿದು ಮಾಡುವುದನ್ನು ಅವರು ಕಲಿಯಬೇಕಾಗಿದೆ. ಇದಕ್ಕೆಲ್ಲ ನಿಷ್ಠಾವಂತರಾದ ಜನ ಬೇಕು. ಆದರೆ ನಿಷ್ಠೆಯ ಅಭಾವ ಇವರಲ್ಲಿ ಎದ್ದು ಕಾಣುತ್ತಿದೆ.

**ಜಾತಿ-ರೀತಿ:**

ಭಾರತವು ಜಾತಿ ಮತ ಪಂಥಗಳ ತವರೂರು. ಬೇರೆ ಯಾವ ದೇಶದಲ್ಲಿಯೂ ಇಲ್ಲಿರುವಷ್ಟು ಜಾತಿ ಮತ ಪಂಥಗಳನ್ನು ಕಾಣಲಾಗದು. ಇಡೀ ಭಾರತದ ದೃಷ್ಟಿಯಿಂದ ನೋಡುವುದಾದರೆ, ಇವುಗಳಿಂದ ರಾಷ್ಟ್ರದ ಪ್ರಗತಿಗೆ ಅಡ್ಡಿಯೇ ಹೊರತು, ಅನುಕೂಲ ಎಂದು ಹೇಳುವುದಕ್ಕಾಗುತ್ತವೆಯೋ, ಅಷ್ಟು ಜಾಗ್ರತೆ ನಮ್ಮ ರಾಷ್ಟ್ರದ ಪ್ರಗತಿ ಸಾಧ್ಯ. ಯಾವುದೇ ಜಾತಿ ಮತವಾಗಲಿ ಈ ದೃಷ್ಟಿಯಿಂದಲೇ ಆಲೋಚನೆ ಮಾಡಿ ತನ್ನ ಮುಂದಿನ ದಾರಿಯನ್ನು

ಕಂಡುಕೊಳ್ಳಬೇಕಾಗಿದೆ. ನಿಜವಾಗಿ, ಎರಡೇ ಜಾತಿಗಳು ಇರಬೇಕಾದ್ದು: ಒಂದು ಗಂಡು, ಒಂದು ಹೆಣ್ಣು. ಯಾವ ರೀತಿ ಆಲೋಚನೆ ಮಾಡಿದರೂ ನಮ್ಮಲ್ಲಿರುವ ಅಸಂಖ್ಯಾತ ಜಾತಿ ಮತಗಳಿಗೆ ಅರ್ಥವೇ ಇಲ್ಲ. ಹೇಗೋ ಅವು ಹುಟ್ಟಿಕೊಂಡು ಹೆಮ್ಮರಗಳಾಗಿ ಬೆಳೆದು, ಅವುಗಳ ಅಡಿಯಲ್ಲಿ ಪ್ರಗತಿ ಬೆಳೆಯದಂತೆ ಮಾಡಿವೆ. ಇಲ್ಲಿ ಒಕ್ಕಲಿಗರ ಜಾತಿಯನ್ನು ಕುರಿತು ಮಾತನಾಡುವಾಗ ಆ ಜಾತಿ ಹೀಗೇ ಮುಂದುವರಿಯಬೇಕು ಎಂದು ಹೇಳುವುದಿಲ್ಲ. ಅವರ ಬೆಳವಣಿಗೆ ರಾಷ್ಟ್ರೀಯ ಭಾವನೆಗೆ, ಇನ್ನೊಂದು ಜಾತಿಯ ಉನ್ನತಿಗೆ, ಊನವಾಗದಂತೆ ಇರಬೇಕೇ ಹೊರತು, ತಮ್ಮ ಸುತ್ತ ಕೋಟೆ ಕಟ್ಟಿಕೊಂಡು, ಇನ್ನಷ್ಟು ಬಲವಾಗಿ ಜಾತಿಯನ್ನು ಬೆಳೆಸುವುದಲ್ಲ. ಈ ದೃಷ್ಟಿಯಿಂದಲೇ ಮುಂದಿನ ಚರ್ಚೆಯನ್ನು ಬೆಳೆಸಬಹುದಾಗಿದೆ.

ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಎಂಬೀ ನಾಲ್ಕು ವರ್ಣಗಳು ಸಾವಿರಾರು ವರ್ಷಗಳ ಹಿಂದೆಯೇ ಇದ್ದುವು ಎಂಬುದಕ್ಕೆ ಇತಿಹಾಸದ ಆಧಾರವಿದೆ. ಒಂದೊಂದು ವರ್ಣದಲ್ಲಿಯೂ ನೂರಾರು ಜಾತಿಗಳು, ಒಳಜಾತಿಗಳು ಬಹುಕಾಲದಿಂದ ಇದ್ದುವೆಂಬುದಕ್ಕೂ ಆಧಾರವಿದೆ. ಒಂದು ಜಾತಿಯನ್ನು ಆ ಜಾತಿಯ ಜನ ಅನುಸರಿಸುವ ಕಸಬು ಅಥವಾ ವೃತ್ತಿ, ಊಟೋಪಚಾರ ಹಾಗೂ ಹೆಣ್ಣು ಕೊಟ್ಟು ತರುವುದರಲ್ಲಿ ಇರುವ ನಿಯಮ ಇವುಗಳಿಂದ ಗುರುತಿಸಬಹುದು. ಅನೇಕ ಜಾತಿಗಳ ಕಸಬು ಒಂದೇ ಆದರೂ, ಅವರು ತಮ್ಮ ಊಟೋಪಚಾರ ಮತ್ತು ವಿವಾಹ ಸಂಬಂಧಗಳಿಂದಾಗಿ ಬೇರೆ ಬೇರೆ ಜಾತಿಯಾಗಿ ಪರಿಗಣಿಸಲ್ಪಡುತ್ತಾರೆ. ಉದಾಹರಣೆಗೆ, ಒಕ್ಕಲಿಗರು ಮತ್ತು ಕುರುಬರು. ಕುರುಬರ ಮುಖ್ಯ ಕಸುಬು ಕುರಿಸಾಕುವುದು ಮತ್ತು ಉಣ್ಣೆಯ ಕಂಬಳಿ ನೇಯುವುದು. ಆದರೂ ಅವರು ಬೇಸಾಯವನ್ನೂ ಮಾಡುತ್ತಾರೆ. ಒಕ್ಕಲಿಗರ ಮುಖ್ಯ ಕಸಬು ಬೇಸಾಯವಾದರೂ ಅವರು ಕುರಿಗಳನ್ನೂ ಸಾಕುತ್ತಾರೆ. ಹೀಗಿದ್ದರೂ, ಅವರು ಬೇರೆ ಬೇರೆ ಜಾತಿಗಳಾಗಿದ್ದಾರೆ. ಕಾರಣ, ಅವರಲ್ಲಿ ಪರಸ್ಪರ ಭೋಜನ ಮತ್ತು ವೈವಾಹಿಕ ಸಂಬಂಧ ಇಲ್ಲದಿರುವುದು.

ಜಾತಿ ಇಷ್ಟಕ್ಕೇ ಉಳಿಯದೆ, ಅದು ನೂರೆಂಟು ಒಳ ಜಾತಿಗಳಾಗಿ ಒಡೆದಿದೆ. ಒಕ್ಕಲಿಗರಲ್ಲಿ ಹತ್ತಾರು ಒಳಜಾತಿಗಳಿವೆ ಗಂಗಡಿಕಾರ, ಕುಂಚಟಿಕ, ಮರಸು, ರೆಡ್ಡಿ, ನಾಮಧಾರಿ ಇತ್ಯಾದಿಯಾಗಿ. ಇತ್ತೀಚಿನವರೆಗೆ ಈ ಒಳಜಾತಿಗಳಲ್ಲಿ ಪರಸ್ಪರ ಭೋಜನ ಮತ್ತು ಕೊಟ್ಟು ತರುವುದು ಇರಲೇ ಇಲ್ಲ. ಅಲ್ಲದೆ, ಅವರವರ ಮನೆದೇವರ ಮೇಲೂ ಒಳಜಾತಿಗಳಾದುದೂ ಉಂಟು. ಉದಾಹರಣೆಗೆ, ಚುಂಚನ ಗಿರಿ ಭೈರಪ್ಪನ ಒಕ್ಕಲಾದ ಗಂಗಡಿಕಾರರು ತಿರುಪತಿ ತಿಮ್ಮಪ್ಪನ ಒಕ್ಕಲುಗಳಿಗೆ ಅವರು ಹೆಂಡ ಕುಡುಯುತ್ತಾರೆಂದು, ಹೆಣ್ಣು ಕೊಟ್ಟು ತರುವುದಿರಲಿ; ಗಂಗಳ, ಚೆಂಬೂ ಕೊಡುತ್ತಿರಲಿಲ್ಲ ಎಂಬುವುದು ವಿಶೇಷ.

**ಜಾತಿ-ರೀತಿಗಳಲ್ಲಿ ಸಡಿಲಿಕೆ:**

ಇಷ್ಟೆಲ್ಲಾ ನಿಯಮ ಕಟ್ಟುಪಾಡುಗಳನ್ನು ಚಾಚೂ ತಪ್ಪದೆ ನಡೆಸಿಕೊಂಡು ಬರುತ್ತಿದ್ದ ಒಕ್ಕಲಿಗರು ಬೇರೆ ಜಾತಿಯವರಂತೆ ಬದಲಾಗುತ್ತಿದ್ದಾರೆ. ಹಿಂದಿನ ಅನೇಕ ಕಟ್ಟುಪಾಡುಗಳು ಈಗ ಉಳಿದಿಲ್ಲ. ಅವರ ಕಸಬು ಹಿಂದೆ ಒಂದೇ ಆಗಿತ್ತು. ಅದೆಂದರೆ ಒಕ್ಕಲುತನ. ಈಗ ಅವರ ಕಸಬು ಕೇವಲ ಒಕ್ಕಲುತನವಾಗಿ ಉಳಿದಿಲ್ಲ. ಊಟೋಪಚಾರದಲ್ಲೂ ಹಿಂದಿನ ನೇಮ ನಿಯಮಗಳಿಲ್ಲ. ಪರಿಚಯವಿದ್ದರೆ, ಸ್ನೇಹಿತರಾದರೆ, ಅಧಿಕಾರದ ಸ್ಥಾನಮಾನಗಳಿದ್ದರೆ, ಯಾರ ಮನೆಯಲ್ಲಾದರೂ ಊಟ ಮಾಡುತ್ತಾರೆ. ಹೆಣ್ಣು ಕೊಟ್ಟು ತರುವುದರಲ್ಲೂ ಒಕ್ಕಲಿಗರ

ಒಳಜಾತಿಗಳಲ್ಲಿ ಕಟ್ಟುಪಾಡು ಕೊಂಚ ಸಡಿಲಿದೆ. ಸಮಾಜದ ವಿರೋಧ ವಿಲ್ಲದೆ ಒಳಜಾತಿಗಳಲ್ಲಿ ಮದುವೆ ಸಂಬಂಧಗಳೂ ನಡೆಯುತ್ತಿವೆ. ಬೇರೆ ಜಾತಿಯಲ್ಲಿ ಮದುವೆಯಾಗುವುದಕ್ಕೆ ಮಾತ್ರ ಒಕ್ಕಲಿಗರ ಸಮಾಜ ಇನ್ನೂ ಒಪ್ಪಿಗೆ ಕೊಟ್ಟಿಲ್ಲ. ಬೇರೆ ಜಾತಿಯಲ್ಲಿ ವಿವಾಹಗಳು ನಡೆದರೆ ಹಾಗೆ ವಿವಾಹವಾದವರನ್ನು ಜಾತಿಯಿಂದ ಹೊರಗೆ ಹಾಕದಿದ್ದರೂ, ಅವನ್ನು ಮನಃಪೂರ್ವಕವಾಗಿ ಒಪ್ಪಿಕೊಳ್ಳುವುದಕ್ಕೆ ಹೋಗಿಲ್ಲ. ಇಷ್ಟಾದರೂ ಸುಧಾರಣೆ ಆಗುತ್ತಿರುವುದು ಸಂತೋಷದ ವಿಷಯವೇ. ಏಕೆಂದರೆ, ಒಕ್ಕಲಿಗರು, ಅಂದರೆ ಬೇಸಾಯ ಮಾಡುವ ಜನ, ನೇಮ ನಿಯಮಗಳಲ್ಲಿ ಬಹು ಕಠಿಣ. ಅವರು ಅವನ್ನು ಅಷ್ಟು ಸುಲಭವಾಗಿ ಬಿಟ್ಟುಕೊಡುವ ಜನ ಅಲ್ಲ. ಆದರೆ ಸಮಾಜವೇ ತೀರಾ ಬದಲಾವಣೆಗೆ ಒಳಗಾಗಿರುವಾಗ, ಅವರೂ ಅದರಂತೆ ಬದಲಾಯಿಸದೆ ಬೇರಾ ಮಾರ್ಗವೇ ಇಲ್ಲ. ಈ ಬದಲಾವಣೆ ದೇಶದ ಸ್ವಾತಂತ್ರ್ಯಕ್ಕಾಗಿ ನಡೆದ ಹೋರಾಟದಿಂದ ಆರಂಭವಾಗಿ, ಇಂದು ಜನರಲ್ಲಿ ಆಧುನಿಕ ವಿದ್ಯಾಭ್ಯಾಸ ಹೆಚ್ಚಿದಂತೆ, ಆ ವಿದ್ಯಾಭ್ಯಾಸದ ಕಾರಣ ಜನರಲ್ಲಿ ವೈಜ್ಞಾನಿಕ ದೃಷ್ಟಿ ಹಾಗೂ ವೈಚಾರಿಕ ದೃಷ್ಟಿ ಬೆಳೆದಂತೆ, ಗ್ರಾಮೀಣ ಸಂಸ್ಕೃತಿಯ ಜೊತೆಗೆ ನಗರ ಸಂಸ್ಕೃತಿ ಹೆಚ್ಚಿದಂತೆ, ನಗರ ಸಂಸ್ಕೃತಿಯ ಪರಿಣಾಮವಾಗಿ ನಗರೀಕರಣವಾಗಿ, ಆ ನಗರೀಕರಣದಿಂದಾಗಿ ನಲ್ಲಿಯ ನೀರು, ಬಸ್ಸು, ರೈಲುಗಳ ಪ್ರಯಾಣ, ಹೋಟೇಲುಗಳ ಊಟ, ತಿಂಡಿ, ರಾಜಕೀಯ ಸಭೆ ಸಮ್ಮೇಳನಗಳಲ್ಲಿ ನಡೆಯುವ ಸಹಪಂಕ್ತಿ ಭೋಜನ ಇವೆಲ್ಲಾ ಬಹು ಹಿಂದಿನಿಂದ ಬಂದ ಮಡಿ ಮೈಲಿಗೆ ಭಾವನೆಗಳಿಗೆ ಅರ್ಥ ಇಲ್ಲದಂತೆ ಮಾಡಿವೆ. ಅಸ್ಪೃಶ್ಯತಾ ನಿವಾರಣೆಗೆ ಸುಮಾರು ಅರ್ಧ ಶತಮಾನದಿಂದ ನಡೆದುಬಂದ ಪ್ರಚಾರವೂ ಜಾತಿ ಎಂಬ ಕೋಟೆಯಲ್ಲಿ ಕನ್ನ ಹಾಕಿದೆ. ಈವತ್ತಲ್ಲ ನಾಳೆ ನಮ್ಮ ಮತ್ತು ನಮ್ಮ ಮರಿಮಕ್ಕಳ ಕಾಲಕ್ಕಾದರೂ ಈ ಜಾತಿ ಎಂಬ ಪಿಡುಗು ಹೋದೀತೆಂದು ನಾವು ಭಾವಿಸಬಹುದು.

**ಹೊಸ ಜಾತಿ ವೈಷಮ್ಯ:**

ಆದರೂ, ಬೇರೊಂದು ಬಗೆಯಲ್ಲಿ ಅಸ್ಪೃಶ್ಯತೆ ಹಾಗೂ ಜಾತೀಯ ಭಾವನೆಗಳನ್ನು ಮತ್ತೆ ಪ್ರಚೋದಿಸುವ ಪ್ರಯತ್ನ ನಡೆದಿದೆ. ರಾಜಕೀಯ ಸ್ವಾತಂತ್ರ್ಯ ಬಂದಮೇಲೆ, ಓಟುಪಡೆದು ತಮ್ಮ ದೇಶವನ್ನು ತಾವೇ ಆಳುವ ಹಕ್ಕು ಪಡೆದ ಮೇಲೆ, ಅವು ಬೇರೊಂದು ಬಗೆಯಾಗಿ ಉಲ್ಬಣಗೊಳ್ಳುತ್ತಿವೆ. ಹಿಂದೆ, ಅಸ್ಪೃಶ್ಯತೆ ಮನಸ್ಸಿನ ಹೊರಗಿತ್ತು; ಜಾತೀಯತೆ ಅದೊಂದು ಒಣ ಸಂಪ್ರದಾಯವಾಗಿತ್ತು. ಉದಾಹರಣೆ, ಒಕ್ಕಲಿಗರು ಹೊಲೆಯರನ್ನು ಮುಟ್ಟಿಸಿಕೊಳ್ಳುತ್ತಿದ್ದರು. ಅವರೊಡನೆ ಹೊಲಗದ್ದೆಗಳಲ್ಲಿ ಕುಳಿತು ತಾವು ಉಂಡುದನ್ನೇ ಅವರಿಗೂ ಕೊಟ್ಟು ಒಟ್ಟಿಗೆ ಊಟಮಾಡುತ್ತಿದ್ದರು. ಅಪ್ಪ ಅವ್ವ, ಅಣ್ಣ ತಮ್ಮ, ಮಾವ ಭಾವ ಎಂದು ಪರಸ್ಪರ ಸಂಬೋಧಿಸುತ್ತಿದ್ದರು. ಅವರ ಮದುವೆ ಮುಂಜಿಗಳಲ್ಲಿ ಅನುವು ಆಪತ್ತುಗಳಲ್ಲಿ ಭಾಗಿಯಾಗುತ್ತಿದ್ದರು. ಮನೆಯ ಒಳಕ್ಕೆ ಸೇರಿಸುವುದೊಂದು ಬಿಟ್ಟರೆ, ಬೇರೆಲ್ಲ ರೀತಿಯಲ್ಲಿ ಅಸ್ಪೃಶ್ಯತೆ ಇರಲಿಲ್ಲ ಎನ್ನಬಹುದು. ಆದರೆ, ಈಗ ಅಸ್ಪೃಶ್ಯತೆ ಹೊರಗಿಲ್ಲ, ಒಳಗಿದೆ. ಇಬ್ಬರಲ್ಲಿಯೂ ದ್ವೇಷಾಸೂಯೆಗಳು ಒಳಗೊಳಗೇ ಕುದಿಯುತ್ತಿವೆ. ಆಗಾಗ ಅವು ಬಹಿರಂಗವಾಗುತ್ತಿರುವುದನ್ನೂ ನಾವು ಕಾಣುತ್ತಿದ್ದೇವೆ. ಇದಕ್ಕೆಲ್ಲಾ ರಾಜಕೀಯ (ಕೀಳು ರಾಜಕೀಯ) ಕಾರಣ. ಇದರಿಂದಾಗಿ ಜಾತಿ ವೈಷಮ್ಯಗಳೂ ಹೆಚ್ಚಿವೆ. ಓಟು ಪಡೆಯಲು ಜಾತಿಯ ಮೇಲೆ ಇನ್ನೊಂದು ಜಾತಿಯನ್ನು ಎತ್ತಿಕಟ್ಟುವುದು ಪಂಚಾಯ್ತಿ ಚುನಾವಣೆಯಿಂದ ಪಾರ್ಲಿಮೆಂಟ್ ಚುನಾವಣೆವರೆಗೆ ನಡದೇ ನಡೆಯುತ್ತಿದೆ. ಹಾಗಾಗಿ, ಕೋಮುವಾರು ಭಾವನೆ ಒಳಗೊಳಗೇ ಹೋಗೆಯಾಡುತ್ತಿದೆ. ಉದ್ಯೋಗಾವಕಾಶಗಳು ಹೆಚ್ಚಿದಂತೆ, ಅವುಗಳಲ್ಲಿ ಕೋಮುಗಳು ತಮ್ಮ ತಮ್ಮ ಸಿಂಹಪಾಲು ಕೇಳುವ ಕಾರಣದಿಂದ ಈ ವೈಷಮ್ಯ ಇನ್ನೂ ಹೆಚ್ಚುತ್ತಿದೆ.

ಇವನ್ನೆಲ್ಲಾ ಒಕ್ಕಲಿಗರು ಗಮನಿಸಬೇಕು. ನೆರೆಮನೆ ಬದುಕಿಗೆ ಹೆಗ್ಗಣಗಳು ಗುದ್ದಾಡಿದುವು ಎಂಬಂತೆ ರಾಜಕೀಯ ಜನರ ಮಾತು ಕೇಳಿ, ಹಿಂದಿದ್ದ ಸೌಹಾರ್ದತೆಯನ್ನು ಕಳೆದುಕೊಳ್ಳಬಾರದು. ಹಳ್ಳಿಗಳಲ್ಲಿ ವೈಷಮ್ಯಕಟ್ಟಿಕೊಂಡು ರೈತ ಬದುಕಲು ಸಾಧ್ಯವಾಗುವುದಿಲ್ಲ. ಎಂದಿನಂತೆ ತಮ್ಮ ತಮ್ಮ ಪ್ರೀತಿ ವಿಶ್ವಾಸಗಳನ್ನು ಉಳಿಸಿಕೊಂಡು ಹೋಗುವುದು ಹಳ್ಳಿ ಹಾಗೂ ದೇಶಕ್ಕೆ ಕ್ಷೇಮ.

ಇದನ್ನೆಲ್ಲಾ ಗಮನದಲ್ಲಿಟ್ಟುಕೊಳ್ಳುವ ಒಕ್ಕಲಿಗರು ತಮ್ಮ ಮುಂದಿನ ಭವಿಷ್ಯವನ್ನು ರೂಪಿಸಿಕೊಳ್ಳುವ ಬಗೆ ಹೇಗೆ ಎಂಬ ಬಗ್ಗೆ ಚಿಂತಿಸುವುದು ಅವಶ್ಯಕವಾಗಿದೆ. ಇಲ್ಲಿ ಒಕ್ಕಲಿಗರು ಎಂದರೆ, ಜಾತಿಯಲ್ಲಿ ಒಕ್ಕಲಿಗರನ್ನು ಕುರಿತು ಹೇಳಲಾಗಿದೆ. ಆದರೆ, ಒಂದು ಜಾತಿಗೆ ಹೇಳಿದ ಮಾತುಗಳು ಕಸಬಿನಲ್ಲಿ ಒಕ್ಕಲಿಗರಾಗಿರುವವರೆಲ್ಲರಿಗೂ ಬಹುಮಟ್ಟಿಗೆ ಅನ್ವಯಿಸುತ್ತವೆ. ಹಳೆಯ ಮೈಸೂರಿನ ಉತ್ತರ ಭಾಗದಲ್ಲಿ ಮತ್ತು ಕರ್ನಾಟಕದ ಉತ್ತರ ಭಾಗಗಳಲ್ಲಿ ಬೇಸಾಯ ಮಾಡುವವರೆಲ್ಲರನ್ನೂ ಒಕ್ಕಲಿಗರೆಂದೇ ಕರೆಯುತ್ತಾರೆ. ಅವರು ಲಿಂಗಾಯಿತರಾಗಿರಬಹುದು. ಕುರುಬರಾಗಿರಬಹುದು, ಮತ್ತಿತರ ಜಾತಿಯವರಾಗಿರಬಹುದು. ಒಕ್ಕಲಿಗರ ಸಮಸ್ಯೆಗಳು ಎಲ್ಲಾ ಕಡೆಯೂ ಒಂದೇ. ಆದ್ದರಿಂದ ಮುಂದೆ ಹೆಳುವ ಕೆಲವು ಮಾತುಗಳನ್ನು ಕೇವಲ ಜಾತಿ ಒಕ್ಕಲಿಗರಷ್ಟೇ ಅಲ್ಲದೆ, ಬೇರೆ ಒಕ್ಕಲಿಗರೂ ಅನ್ವಯಿಸಿ ಗಮನಿಸುವುದು ಸೂಕ್ತ.

**ಸುಖ ಸಂಸಾರ**

'ಮನೆ ಗೆದ್ದು, ಮಾರು ಗೆಲ್ಲು' ಎಂಬುದು ಹಳ್ಳಿಯ ನಾಣ್ಣುಡಿ. ತನ್ನ ಮನೆಯನ್ನು, ತನ್ನ ಗೃಹಕೃತ್ಯವನ್ನು, ತನ್ನ ಹಂಡತಿ ಮಕ್ಕಳನ್ನು ಗೆಲ್ಲಲಾರದವನು ದೇಶಕೋಶಗಳನ್ನು ಗೆಲ್ಲಲಾರ. ಆದ್ದರಿಂದ, ಒಕ್ಕಲಿಗರು ತಮ್ಮ ಗೃಹಕೃತ್ಯವನ್ನು ಅಚ್ಚುಕಟ್ಟಾಗಿ ನಡೆಸುವುದನ್ನು ಕಲಿಯಬೇಕು. ಆದರೆ, ಒಕ್ಕಲಿಗರ ಸಂಸಾರಗಳನ್ನು ನೋಡಿದಾಗ ಸಂಕಟವಾಗುತ್ತದೆ. ಹೆಂಗಸು ಕೀಳೆಂಬ ಭಾವನೆ ಗಂಡಸರಲ್ಲಿ ಇದೆ. ಆಕೆ ಗಂಡಸಿನಂತೆ ಹೊಲಗದ್ದೆಗಳಲ್ಲಿ ದುಡಿಯುವುದರ ಜೊತೆಗೆ, ಮನೆಯಲ್ಲೂ ದುಡಿಯಬೇಕು. ಮನೆ ಗೆಲಸ ತನ್ನದಲ್ಲ, ಎಂಬ ಭಾವನೆ ಹಳ್ಳಿಯ ಗಂಡಸಿಗೆ. ಆಕೆ ಬಸರಿಯಾಗಬೇಕು, ಬಾಣಂತನವಾಗಬೇಕು, ಮಕ್ಕಳನ್ನು ಸಾಕಬೇಕು, ಮನೆಗೆ ಬಂದವರನ್ನು ವಿಚಾರಿಸಿಕೊಳ್ಳಬೇಕು, ಮನೆಯಲ್ಲಿ ಮದುವೆ ಮುಂಜಿಗಳಾದರಂತೂ ಆಕೆ ಹಗಲೂ ರಾತ್ರಿ ನಿದ್ದೆಗೆಟ್ಟು ದುಡಿಯಬೇಕು. ಮನೆಯ ಮರ್ಯಾದೆ ಉಳಿಸಿಕೊಳ್ಳುವುದರಲ್ಲಿ ಆಕೆ ಉಂಡರೆ ಉಂಡಳು, ಇಲ್ಲದಿದ್ದರೆ ಇಲ್ಲ. ಕುಡಿಯುವ ನೀರಿಗೇ ಪರದಾಡಬೇಕಾಗಿ ಬಂದಾಗ, ಒಲೆಯ ಸೌದೆಗೇ ಅಭಾವ ಇರುವಾಗ ಆಕೆ ಪಡುವ ಕಷ್ಟ ನೋಡಿದರೆ, ಕಣ್ಣಲ್ಲಿ ನೀರು ಬರುತ್ತದೆ. ಇದನ್ನೆಲ್ಲಾ ಗಂಡಸರಾದವರು ಸೂಕ್ಷ್ಮವಾಗಿ ಗಮನಿಸಬೇಕು. ತಾನು ಹೊಲದಲ್ಲಿ ದುಡಿದು ಬಂದಿದ್ದೀನಿ. ತಾನು ಗಂಡಸು, ಮನೆಗೆಲಸ ತನ್ನ ಮರ್ಯಾದೆಗೆ ಕಡಮೆ ಎಂದು ಭಾವಿಸದೆ, ಗೃಹಕೃತ್ಯಗಳಲ್ಲಿ ತಾನೂ ಭಾಗಿಯಾಗಬೇಕು. ಮನೆಯಲ್ಲಿ ನೂರೆಂಟು ಕೆಲಸಗಳಿರುತ್ತವೆ: ದನಗಳಿಗೆ ಹುಲ್ಲು, ಸೊಪ್ಪು, ಕಸ ಮುಸುರೆ, ನೀರು ನೀಡಿ ಇವುಗಳಲೆಲ್ಲಾ ಹೆಂಗಸಿಗೆ ನೆರವಾಗಬೇಕು. ಹೀಗೆಲ್ಲಾ ತನ್ನ ಗಂಡ ತನ್ನ ಕಷ್ಟದಲ್ಲಿ ಭಾಗಿ ಎಂದು ಹೆಂಡತಿಗೆ ಅರಿವಾದರೆ, ಆಕೆಗೆ ಎಷ್ಟೋ ಸಮಾಧಾನ; ಸಂಸಾರದಲ್ಲಿ ತೃಪ್ತಿ. ಇಲ್ಲದೆ, ತಾನೊಬ್ಬಳು ಬಾಡಿಗೆ ಎತ್ತು ಎಂಬ ಭಾವನೆ ಆಕೆಗೆ ಬಂದರೆ, ತಾನು ಮದುವೆಯಾಗದೆ ಹಾಗೇ ಇದ್ದಿದ್ದರೆ ಚಂದಾಗಿತ್ತೇನೋ ಎನ್ನಿಸಿಬಿಡುತ್ತದೆ. ತೌರಿಗೆ ಆಸೆಪಡುವುದು ಹೆಣ್ಣಿನ ಮನೋಧರ್ಮವಾದರೂ, ಕೈ ಹಿಡಿದ

ಗಂಡ ತನ್ನನ್ನು ಸರಿಯಾಗಿ ನೋಡಿಕೊಳ್ಳುತ್ತಿಲ್ಲ ಎಂದಾಗ, ಆಕೆ ದಿನವೂ ತೌರನ್ನು ನೆನೆಯುವುದು, ಹೆಣ್ಣಿನ ಬಾಳನ್ನು ಶಪಿಸಿಕೊಳ್ಳುವುದು ಅನಿವಾರ್ಯ.

ಅನುಕೂಲ ಇದ್ದವರೂ ಹೆಂಡತಿ ಮಕ್ಕಳನ್ನು ಸುಖವಾಗಿ ಸಾಕುವುದಿಲ್ಲ. ದುಡಿದದ್ದನ್ನೆಲ್ಲಾ ಗಂಟುಹಾಕಿ, ಕೋರ್ಟು ಕಛೇರಿಗಳಿಗೂ, ದಂಡದೋಷಗಳಿಗೂ ಹಾಕುತ್ತಾರೆಯೇ ವಿನಃ, ಹೆಂಡತಿಗೆ ಒಂದು ಸೀರೆ, ಮಕ್ಕಳಿಗೆ ಬಟ್ಟೆಬರೆ ತರಬೇಕೆಂಬ ಭಾವನೆಯೇ ಇರುವುದಿಲ್ಲ. ಅನೇಕ ಹೆಂಗಸರು ತೌರುಮನೆ ಬಿಟ್ಟರೆ, ಬೇರೆ ಊರುಗಳನ್ನು ನೋಡಿಯೇ ಇರುವುದಿಲ್ಲ. ಗಂಡಸು ಒಂದಲ್ಲ ಒಂದು ಕಾರಣಕ್ಕೆ ಹೊರಗೆ ಅಡ್ಡಾಡಿ ಬರುತ್ತಾನೆ. ಆದರೆ, ಹೆಂಗಸು ಅದೇ ಮನೆ, ಅದೇ ನೀರು, ಅದೇ ಬೀದಿ, ಅದೇ ಜನ ನೋಡಿ ಸಾಕಾಗಬೇಕು. ಈಗ ಹೊರಗಡೆ ಅಡ್ಡಾಡಿ ಬರಲು ವಾಹನ ಸೌಕರ್ಯವಿದೆ. ಒಂದೆರಡು ವರ್ಷಕ್ಕೊಮ್ಮೆಯಾದರೂ ಗಂಡಹೆಂಡಿರು ಹೊರಗೆ ಹೋಗಿ ಬಂದರೆ ದೊಡ್ಡ ದೊಡ್ಡ ಊರುಕೇರಿಗಳು, ದೇವಸ್ಥಾನಗಳು, ನದಿ ಸಮುದ್ರಗಳು, ಸಿನಿಮಾ ನಾಟಕಗಳು ಇವನ್ನೆಲ್ಲಾ ನೋಡಿದರೆ, ತಮ್ಮ ಬಾಳಿನ ಬಗ್ಗೆ ತಮಗೇ ನಾಚಿಕೆಯಾಗುತ್ತದೆ. ನೋಡುವುದು ಎಷ್ಟಿದೆ, ಕಲಿಯುವುದು ಎಷ್ಟಿದೆ ಎಂಬುದು ಅರ್ಥವಾಗುತ್ತದೆ. ತಾವೂ ಹಾಗೆ ಬಾಳಬೇಕು, ತಮ್ಮ ಸಂಸಾರವನ್ನೂ ಸುಧಾರಿಸಿಕೊಳ್ಳಬೇಕು, ಹಣ ಗಳಿಸುವುದಷ್ಟೇ ಸಾಲದು, ಅದನ್ನು ಸರಿಯಾಗಿ ಉಪಯೋಗಿಸಿ ತೃಪ್ತಿಯಾಗಿ ನಗುನಗುತ್ತಾ ಬಾಳಬೇಕೆಂಬ ಭಾವನೆ ಬರುತ್ತದೆ.

**ಮಿತಸಂತಾನ**

ಹಿಂದಿನ ಕಾಲದಲ್ಲಿ, ಏಕೋ ಏನೋ, ಹೆಚ್ಚಾಗಿ ಮಕ್ಕಳು ಹುಟ್ಟುತ್ತಿರಲಿಲ್ಲ. ಎರಡೋ ಮೂರೋ ಮಕ್ಕಳು, ಅಷ್ಟೇ. ಈಗ ಮನೆ ತುಂಬ ಮಕ್ಕಳು. 'ಮಳೆಯಾಗಿ ಮಕ್ಕಳಾದ್ರೆ ಏನೂ ಕೆಡಿಲ್ಲ ಬಿಡಪ್ಪ!' ಎಂದು ಹಳ್ಳಿಯವರು ಈಗಲೂ ಹೇಳುತ್ತಾರೆ. ಇದು ಸರಿಯಾದುದಲ್ಲ. ಈಗಾಗಲೇ ಒಂದು ಮನೆ ನಾಲ್ಕು ಮನೆಗಳಾಗಿವೆ. ಇದ್ದ ನಾಲ್ಕು ಎಕರೆ ಭೂಮಿ ನಾಲ್ಕು ಪಾಲಾಗಿ ಹಂಚಿಹೋಗಿದೆ. ಮಳೆ ಬೆಳೆ ಸರಿಯಾಗಿ ಆದರೂ, ಜೀವನ ಸಾಗಿಸುವುದು ಕಷ್ಟ. ಹೀಗಿರುವಾಗ, ಹೆಚ್ಚು ಮಕ್ಕಳನ್ನು ಹೆತ್ತು, ಅವರನ್ನು ಸಾಕಿ ಸಲಹಿ, ವಿದ್ಯಾಬುದ್ಧಿಗಳನ್ನು ಕಲಿಸುವುದು ತೀರಾ ಕಷ್ಟ. ಆದ್ದರಿಂದ ಸುಖ ಸಂಸಾರಕ್ಕೆ ಮಿತ ಸಂತಾನ ಅನಿವಾರ್ಯ. ಹಳೆಯ ನಂಬಿಕೆಗಳನ್ನು ಬಿಟ್ಟು, ಎರಡೇ ಮಕ್ಕಳನ್ನು ಪಡೆದು, ನಾಲ್ಕು ಜನರಂತೆ ಸುಖವಾಗಿ ಬಾಳುವುದನ್ನು ಹಳ್ಳಿಯ ಜನ ಕಲಿಯಲೇಬೇಕು. ಮಕ್ಕಳನ್ನು ಮಿತಿಗೊಳಿಸುವುದಕ್ಕೆ ಇರುವ ಹಲವಾರು ಸಾಧನಗಳನ್ನು ರೈತಾಪಿ ಜನ ತಪ್ಪದೆ ಉಪಯೋಗಿಸಿಕೊಳ್ಳಬೇಕು.

**ಮನೆ-ಮಠ**

ಬಯಲು ಸೀಮೆಯ ಹಳ್ಳಿಗಳನ್ನು ನೋಡಿದರೆ ಈ ಜನ ನಾಯಿ, ಹಂದಿಗಳೋ ಅಥವಾ ಮನುಷ್ಯರೋ ಎಂದು ಸಂದೇಹಪಡಬೇಕಾಗುತ್ತದೆ. ಕೊರಕಲು ಹಾದಿ ಬೀದಿಗಳು, ಮುರುಕಲು ಮನೆಗಳು, ಇಲಿ ಹೆಗ್ಗಣಗಳ ಬಿಲದಂತಹ ಮನೆಗಳು, ಮನೆ ಹಿಂದೆ ಮುಂದೆಲ್ಲ ತಿಪ್ಪೆ ಗುಂಡಿಗಳು, ಮಳೆಗಾಲ ಬಂತೆಂದರೆ ಆ ಗುಂಡಿಗಳಲ್ಲಿ ಹೊಲಸು ನೀರು, ಸೊಳ್ಳೆಗಳ ಕಾಟ ಇವು ಹಳ್ಳಿಗಳಲ್ಲಿ ಸಾಮಾನ್ಯ. ಮನೆ ಒಳಗಂತೂ ನರಕ. ಕಿಟಕಿ ಗವಾಕ್ಷಗಳಿಲ್ಲದ ಮನೆಗಳು ನರಕದಂತೆಯೇ ಇರುತ್ತವೆ. ಇರುವ ಒಂದೆರುಡು ಚಿಕ್ಕಕಿಟಕಿಗಳನ್ನೂ ಮುಚ್ಚಿ, ಹೊಗೆ ಕುಡಿದು, ಉಸಿರು ಕಟ್ಟಬೇಕಾಗುತ್ತದೆ. ಇದರಿಂದ ಗಂಡಸಿಗಿಂತ ಹೆಚ್ಚಾಗಿ ಹೆಂಗಸೇ ಕಷ್ಟ ಅನುಭವಿಸಬೇಕಾಗುತ್ತದೆ. ಕೆಲವು

ಹೆಂಗಸರಂತೂ ಹೊಗೆ ಹಿಡಿದುಹೋಗಿರುತ್ತಾರೆ. ಹಗಲು ಹೊತ್ತು ಹೊಲ ಗದ್ದೆಗಳಲ್ಲಿ ಕೆಲಸಮಾಡುವುದರಿಂದ ಅವರು ಬದುಕಿದ್ದಾರೆ ಎನ್ನಬಹುದು. ಮೂರು ಹೊತ್ತೂ ಆ ಕತ್ತಲೆ ಗೂಡಿನೊಳಗೆ ಇದ್ದುಬಿಟ್ಟಿದ್ದರೆ, ಅವರ ಗತಿ ಯಾವತ್ತೋ ಮುಗಿಯುತ್ತಿತ್ತು! ಹಳ್ಳಿಯ ಜನರಿಗೆ ಬರುವ ಅನೇಕ ಕಾಯಿಲೆಗಳಿಗೆ ಅವರ ವಾಸದ ಮನೆ ಮತ್ತು ಕುಡಿಯುವ ನೀರೇ ಬಹುಮಟ್ಟಿಗೆ ಕಾರಣ.

ಈ ದೃಷ್ಟಿಯಿಂದ ರೈತರು ತಮ್ಮ ವಾಸದ ಮನೆಗಳ ಕಡೆ ಹೆಚ್ಚು ಗಮನ ಕೊಡಬೇಕು. ಅನುಕೂಲವಾದ ಮನೆ ಕಟ್ಟಿಕೊಳ್ಳುವುದು ಈಗಿರುವ ಕಡೆ ಸಾಧ್ಯವೇ ಇಲ್ಲ. ಆದ್ದರಿಂದ ಈಗಿರುವ ಸ್ಥಳ ಬಿಟ್ಟು, ಬೇರೆ ಕಡೆ ಹೋಗುವುದೇ ಸರಿಯಾದ ಮಾರ್ಗ. ಸ್ಥಳ ಬದಲಾಯಿಸಿದರೆ ಬೆಳೆಯುವ ಹೊಲ ಗದ್ದೆ ಕಡಿಮೆಯಾಗುವುದೆಂದು ಭಾವಿಸಿ, ಹಳ್ಳಿಯವರು ಹಾಗೆ ಮಾಡಲು ಹೋಗುವುದಿಲ್ಲ. ಇದು ತಪ್ಪು. ತಮ್ಮ ಹೊಲಗದ್ದೆಗಳ ಬಳಿ ವಾಸಮಾಡುವುದುರಿಂದ ಅನಾನುಕೂಲಗಳಿಗಿಂತ ಅನುಕೂಲಗಳೇ ಹೆಚ್ಚು. ರೈತನಿಗೆ ವಾಸದ ಮನೆಯಷ್ಟೇ ಅಲ್ಲದೆ, ತನ ದನ ಕುರಿಗಳಿಗೆ, ಮರಮುಟ್ಟುಗಳಿಗೆ, ಗಾಡಿ ಗಬಟೆಗಳಿಗೆ, ಸೊಪ್ಪು ಸೆದೆಗಳಿಗೆ, ಕೀರೆ ಮಡಿ, ತರಕಾರಿಗಳಿಗೆ, ಕಾರ್ಯಕಟ್ಟಳೆಗಳಿಗೆ ಜಾಗ ಬೇಕು. ಇವೆಲ್ಲಾ ಈಗ ಬೇರೆ ಬೇರೆ ಕಡೆ ಇವೆ. ಆದರೆ ಅವು ಒಟ್ಟಿಗೇ ಇದ್ದರೆ ತುಂಬಾ ಅನುಕೂಲ. ಹತ್ತು ಗುಂಟೆ ಜಾಗ ಅನ್ಯಾಯವಾಗಿ ಹೊಗುತ್ತಲ್ಲಾ ಎಂದು ಆಲೋಚಿಸಬಾರದು. ಆದ್ದರಿಂದ ಎಷ್ಟು ಸಾಧ್ಯವೋ ಅಷ್ಟು ರೈತರು ತಮ್ಮ ಊರೊಳಗಿನ ಗೂಡುಗಳನ್ನು ಬಿಟ್ಟು ಹೊರಗೆ ಹೊಲಗದ್ದೆಗಳ ಬಳಿ ಗಾಳಿ ಬೆಳಕಿನ ಮನೆಗಳನ್ನು ಕೊಟ್ಟಿಕೊಳ್ಳುವುದೊಳ್ಳೆಯದು. ಹಳ್ಳಿಯ ನೆರೆಹೊರೆ ಚೆನ್ನಾಗಿರುವುದಿಲ್ಲ. 'ಸಂಸಾರ ಗುಟ್ಟು, ವ್ಯಾಧಿ ರಟ್ಟು' ಈ ಮಾತನ್ನು ಹಳ್ಳಿಯವರು ನೆನಪಿಡಬೇಕು. ಆದರೆ ಹಳ್ಳಿಯಲ್ಲಿ ಯಾವ ಸಂಸಾರದ ಗುಟ್ಟೂ ರಟ್ಟಾಗದೆ ಇರುವುದಿಲ್ಲ. ಅಲ್ಲದೆ, ನೆರೆಹೊರೆಯವರು ಸೋಮಾರಿಗಳಾಗಿದ್ದರೆ ಇವನೂ ಸೋಮಾರಿಯಾಗಿರುತ್ತಾನೆ. ಅವರ ಕೆಟ್ಟ ಚಾಳಿ, ಸೋಮಾರಿತನಗಳು ಇವನಿಗೂ ಸೋಕುತ್ತವೆ. ಅವರಂತೆ ಇವನೂ ಬೀಡಿ ಸೇದಿಕೊಂಡು, ಹರಟೆ ಹೊಡೆಯುವ ಸ್ವಭಾವದವನಾಗುತ್ತಾನೆ. 'ಮಾತು ಮನೆ ಕೆಡಿಸಿತು, ತೂತು ಒಲೆ ಕೆಡಿಸಿತು' ಎಂಬ ಗಾದೆ ಇದರಿಂದಲೇ ಬಂದದ್ದು. ಇವು ತಪ್ಪಬೇಕಾದರೆ ಒಂದೊಂದು ಸಂಸಾರವೂ ದೂರ ದೂರ ಇರಬೇಕು.

ಹೊಸದಾಗಿ ಮನೆಗಳನ್ನು ಕಟ್ಟುವಾಗ ಪಟ್ಟಣದ ಮನೆಗಳ ಮಾದರಿಯಲ್ಲಿ ಕಟ್ಟಬಾರದು. ಗಾಳಿ ಬೆಳಕು ಬರುವಂತೆ ಮನೆಗಳನ್ನು ಕಟ್ಟಿಕೊಳ್ಳಬೇಕು. ಕಟ್ಟಿದರೆ ನಮ್ಮ ಹಿಂದಿನ ಕಾಲದ ತೊಟ್ಟಿಮನೆಗಳು ಸರ್ವಶ್ರೇಷ್ಠ. ಬಹು ದೂರದೃಷ್ಟಿಯಿಂದಲೇ ಇಂತಹ ಮನೆಗಳನ್ನು ಹಳ್ಳಿಯವರು ಕಟ್ಟುತ್ತಿದ್ದರೆಂದು ನಮ್ಮ ಭಾವನೆ. ದನಕರುಗಳಿಗಷ್ಟೇ ಅಲ್ಲದೆ, ಮನೆಯಲ್ಲಿ ಆಗುವ ಕಾರ್ಯ ಕಟ್ಟಲೆಗಳಿಗೂ ಇಂತಹ ಮನೆಗಳು ಅನುಕೂಲ. ಇಂತಹ ಮನೆಗಳನ್ನು ಕಟ್ಟಿಕೊಂಡು, ತಮ್ಮ ಹುಲ್ಲುಸೊಪ್ಪಿಗೂ, ಸೊಪ್ಪು ತರಕಾರಿಗಳನ್ನು ಬೆಳೆಯುವುದಕ್ಕೂ ಅನುಕೂಲ ಮಾಡಿಕೊಂಡರೆ ಸಾಕು. ದಿನದಲ್ಲಿ ಕೊಂಚ ಹೊತ್ತಾದರೂ ಅನ್ಯರ ಸಂಪರ್ಕವಿಲ್ಲದೆ ಇರುವುದರಿಂದ ತನ್ನ ಸಂಸಾರದ ಬಗ್ಗೆ ತನ್ನ ಬಾಳಿನ ಬಗ್ಗೆ ಕೊಂಚ ಆಲೋಚಿಸುವ ಸ್ವಭಾವ ಬರುತ್ತದೆ. ಮಲೆನಾಡಿನಲ್ಲಿ, ಕರಾವಳಿ ತೀರದ ಪ್ರದೇಶಗಳಲ್ಲಿ ಮನೆಗಳನ್ನು ಈ ರೀತಿ ಕಟ್ಟಿಕೊಂಡಿರುವುದನ್ನು ನೋಡಬಹುದು. ಒಂದು ಪಕ್ಷ ಹೊಲಗದ್ದೆಗಳಲ್ಲಿ ಕಟ್ಟಿಕೊಳ್ಳದೆ ಊರೊಳಗೇ ಕಟ್ಟಿಕೊಂಡರೂ ಒಂದು ಮನೆ ಇನ್ನೊಂದು ಮನೆಯಿಂದ ಪ್ರತ್ಯೇಕವಾಗಿರುವುದು ಉತ್ತಮವಾಗಿರುತ್ತದೆ.

**ಹಬ್ಬ-ಹರಿದಿನ**

ನಮ್ಮ ಗ್ರಾಮೀಣ ಸಂಸ್ಕೃತಿಯ ನಿಜ ಸ್ವರೂಪವನ್ನು ಹಳ್ಳಿಯ ಹಬ್ಬಗಳಲ್ಲಿ ಕಾಣಬಹುದು. ಹಬ್ಬ ಹರಿದಿನಗಳೆಂದರೆ ಹಳ್ಳಿಯವರಿಗೆ ಬಹು ಸಡಗರ. ಆ ಸಂದರ್ಭಗಳಲ್ಲಾದರೂ ಅವರು ತಮ್ಮ ಮನೆಮಠಗಳನ್ನು ಗುಡಿಸಿ, ಸಾರಿಸಿ, ಸ್ನಾನ, ಮಡಿ ಮಾಡಿಕೊಂಡು. ನೇಮ, ನಿಯಮಗಳಿಂದ ಹಬ್ಬಗಳನ್ನು ಆಚರಿಸುತ್ತಾರೆ. ಅವು ಅವರ ಸುಖ ಸಂತೋಷದ ಸಂದರ್ಭಗಳು.

ಒಕ್ಕಲಿಗನಾದನು ಆಚರಿಸುವ ಹಬ್ಬಗಳು ಬೇರೆ ಜಾತಿಯವರು ಆಚರಿಸುವ ಹಬ್ಬಗಳಿಗಿಂತ ಹೆಚ್ಚಾಗಿರುತ್ತವೆ ಮತ್ತು ಸೊಗಸಾಗಿಯೂ ಇರುತ್ತವೆ. ವರ್ಷವೆಲ್ಲಾ ದುಡಿವ ಜನಕ್ಕೆ ಆಗಾಗ್ಗೆ ವಿಶ್ರಾಂತಿ ಹಾಗೂ ಖುಷಿ ಕೊಡುವ ಈ ಹಬ್ಬಗಳನ್ನು ಒಕ್ಕಲಿಗರು ತಪ್ಪದೆ ಆಚರಿಸುವುದು ಒಳ್ಳೆಯದು. ಹಬ್ಬಗಳೇ ಇಲ್ಲದ ಹಳ್ಳಿ ಸ್ಮಶಾನಕ್ಕಿಂತಲೂ ಕಡೆ.

ಹಳ್ಳಿಯವರ ಹಬ್ಬಗಳು ಗ್ರಾಮ ದೇವತೆಗೋ, ಅವರ ಬೇಸಾಯಕ್ಕೆ ಸಂಬಂಧಪಟ್ಟಂತೆಯೋ ಇರುತ್ತವೆ. ಊರಿನ ಮಾರಮ್ಮನ ಹಬ್ಬ ಎಲ್ಲ ಹಬ್ಬಗಳಿಗಿಂತ ಬಲು ಸೊಗಸು. ಮಾರಮ್ಮ ಎಂಥ ದೇವರು ಎಂದು ಅಲ್ಲಗಳೆಯಬಾರದು. ಯಾವ ದೇವರೇ ಆಗಲಿ, ಅದನ್ನು ಮಾಡಿರುವುದು ಕಲ್ಲು, ಮಣ್ಣು ಮರಗಳಿಂದ ತಾನೆ?

ಹಳ್ಳಿಯ ಮಾರಮ್ಮ, ದಿಲ್ಲಿಯ ಮಹಾಲಕ್ಷ್ಮಿ ಎರಡೂ ಒಂದೇ. ಭಕ್ತಿ ಮುಖ್ಯವೇ ಹೊರತು, ದೇವರಿಗಿರುವ ಒಡವೆ, ವಸ್ತ್ರ, ಪಾಸ್ತ್ರೀ ಮುಖ್ಯವಲ್ಲ. ಈ ಕಾರಣ, ಹಳ್ಳಿಯವರು ತಮ್ಮ ದೇವರುಗಳನ್ನು ಅಲ್ಲಗಳೆದು ಅವುಗಳ ಹಬ್ಬ ಆಚರಿಸದೆ ಬಿಡುವುದು ಸರಿಯಲ್ಲ.

ಅಲ್ಲದೆ ಹಬ್ಬಗಳು ಆದರೆ ಮಾತ್ರ ನಮ್ಮ ಹಳ್ಳಿಗರ ಬಾಯಲ್ಲಿರುವ ಅಸಂಖ್ಯಾತ ಹಾಡುಗಳನ್ನೂ, ತಮಟೆ, ಹರೆ, ದೋಣು ಇವುಗಳ ಬಡಿತದ ವೈಖರಿಗಳನ್ನೂ ಕಾಣಬಹುದು; ಸುಗ್ಗಿ ಕುಣಿತ, ಕೋಲಾಟ, ಸೋಮನ ಕುಣಿತ, ಇತ್ಯಾದಿ ಗ್ರಾಮೀಣ ಕಲೆಗಳನ್ನು ನೋಡಿ ಕಣ್ತಣಿಸಬಹುದು. ಇವೆಲ್ಲ ಹಳೆಯ ಕಾಲದವು ಎಂಬ ಭಾವನೆ ಇಂದಿನ ಯುವಕರಿಗೆ ಬರುತ್ತಿದೆ. ಇದು ಸರಿಯಲ್ಲ. ಕೆಲವು ಕಡೆ ನಡೆಯುವ ಪಶುಬಲಿಗೆ ವಿರೋಧ ಇದೆ. ಇದು ಸರಿ. ಪಶುಗಳನ್ನು ಬಲಿ ಕೊಡುವುದು ದೇವರನ್ನು ತೃಪ್ತಿಪಡಿಸುವುದಕ್ಕಿಂತ ಹೆಚ್ಚಾಗಿ ತಮ್ಮ ಬಾಯ ತೃಪ್ತಿಗಾಗಿ. ಆದ್ದರಿಂದ ದೇವರ ಹಿಸರಿನಲ್ಲಿ ಬಲಿಕೊಡುವುದು ನಿಂತು, ಸಾತ್ವಿಕ ಆಚರಣೆಗಳಾದ ಕಂಬ, ಮಡೆ, ಆರತಿ ಮುಂತಾದುವುಗಳನ್ನು ನಡೆಸಿಕೊಂಡು ಬಂದರೆ, ದೇವರೇನೂ ಸಿಟ್ಟಾಗುವುದಿಲ್ಲ. ಪಶುಬಲಿ ನಿಲ್ಲಿಸಿದ ಮೇಲೆ, ಯಾವ ದೇವರೂ ಸಿಟ್ಟಾಗಿ ಊರಿಗೆ ಕೇಡು ಮಾಡಿದ ಪ್ರಸಂಗ ಇಲ್ಲ.

ಕೆಲವು ಹಬ್ಬಗಳ ಆಚರಣೆಯಲ್ಲಿ ಮೂಢ ನಂಬಿಕೆಯೂ ಇದೆ. ಮೂಢ ನಂಬಿಕೆಗಳನ್ನು ಒಮ್ಮೆಲೇ ತಡೆಯುವುದು ಕಷ್ಟ. ಬರಬರುತ್ತಾ ಆ ಮೂಢನಂಬಿಕೆಗಳ ಹಿಂದಿರುವ ಸರಿಯಾದ ಭಾವನೆಯನ್ನು ಅರ್ಥಮಾಡಿಕೊಂಡು, ಚೆನ್ನಾಗಿ ವಿಚಾರಮಾಡಿಯೇ ಹಬ್ಬಗಳನ್ನು ಆಚರಿಸಬೇಕಾಗುತ್ತದೆ. ಇದು ನಿಧಾನವಾಗಿ ಆಗಬೇಕಾದ ಕೆಲಸ. ಯಾವ ದೇಶದವರೂ ತಮ್ಮ ಹಬ್ಬ ಹರಿದಿನಗಳನ್ನು ಬಿಟ್ಟಿಲ್ಲ. ನಾವೂ ಬಿಡಬಾರದು. ಏಕೆಂದರೆ, ಅವೇ ನಮ್ಮ ಹಳ್ಳಿಯ ಸುಖ ಸಂತೋಷಗಳ ಸಂಕೇತಗಳು.

ಹಬ್ಬಗಳೆಂದರೆ ದುಂದುವೆಚ್ಚಕ್ಕೆ ಕಾರಣವಾಗಬಾರದು. ಅದ್ದೂರಿಯನ್ನು ತೋರಿಸಿಕೊಳ್ಳದೆ, ಹೆಚ್ಚು ವೆಚ್ಚಕ್ಕೆ ಅವಕಾಶ ಕೊಡದೆ, ತೀರಾ ಹತ್ತಿರದ ನೆಂಟರಿಷ್ಟರೊಡನೆ ಒಂದೆರಡು ದಿನ ಕಳೆಯುವುದು ಮನಸ್ಸಿಗೆ ನಿಜವಾಗಿಯೂ ಹಿತಕರ. ಒಕ್ಕಲಿಗರೆಲ್ಲ ಸಾಮಾನ್ಯವಾಗಿ ಮಾಂಸಹಾರಿಗಳು. ಈ ಮಾಂಸಹಾರದ ಚಟ ಒಂದು ಊರಿನಲ್ಲಿರುವ ಶಾಖಾಹಾರಿಗಳಿಗೆ ಬೇಸರವನ್ನುಂಟುಮಾಡುವಷ್ಟು ಹೊಲಸಾಗಿ ತೋರಿಕೊಳ್ಳುವುದುಂಟು. ಇದರಿಂದ ಒಕ್ಕಲಿಗರ ಜಾತಿಯ ಬಗ್ಗೆ ತಪ್ಪು ಅಭಿಪ್ರಾಯಗಳು ಉಂಟಾಗಬಹುದು. ಇದನ್ನು ತಪ್ಪಿಸಿ ತಮ್ಮ ಶುಚಿ ರುಚಿಯ ಬಗ್ಗೆ ಹೆಮ್ಮೆಪಟ್ಟುಕೊಳ್ಳಬೇಕಾದ್ದು ಒಕ್ಕಲಿಗರ ಕರ್ತವ್ಯ.

**ಮದುವೆ-ಮುಂಜಿ:**

ಇತ್ತೀಚಿನವರೆಗೆ ಒಕ್ಕಲಿಗರಲ್ಲಿ ಮದುವೆಗಳು ಐದು ದಿನಗಳವರೆಗೆ ನಡೆಯುತ್ತಿದ್ದುವು. ಆಮೇಲೆ ಅವು ಮೂರು ದಿನಕ್ಕಿಳಿದುವು. ಈಗ ಅವು ಒಂದು ದಿನಕ್ಕೆ ಬಂದಿವೆ. ಆದರೆ ಐದು ದಿನಗಳ ಮದುವೆಯಲ್ಲಿ ಆಗುತ್ತಿದ್ದ ಖರ್ಚಿಗಿಂತ ಒದು ದಿನದ ಮದುವೆ ಖರ್ಚು ನೂರು ಪಟ್ಟುಹೆಚ್ಚಿದೆ. ವೈಭವದ ಪ್ರದರ್ಶನವೇ ಈ ಮದುವೆಗಳಲ್ಲಿ ನಾವು ಕಾಣುವಂಥಾದ್ದು. ಆ ಗೌಡನನ್ನು ನೋಡಿ ಈ ಗೌಡ, ಈಗೌಡನನ್ನು ನೋಡಿ ಆ ಗೌಡ, ಮದುವೆಯಲ್ಲಿ ಖರ್ಚುಮಾಡಿದ್ದೂ ಮಾಡಿದ್ದೇ. ಇಡೀ ಜೀವಮಾನವೆಲ್ಲ ದುಡಿದರೂ ತೀರಿಸದಷ್ಟು ಸಾಲ ಸೋಲ ಮಾಡಿ, ಮದುವೆ ಮಾಡುವುದು ಸಾಮಾನ್ಯವಾಗಿದೆ. ಇದರಿಂದ ಒಕ್ಕಲಿಗರ ಅವನತಿಯೇ ಹೊರತು ಏಳಿಗೆ ಇಲ್ಲ.

ಮದುವೆಗಳಲ್ಲಿ ಅನೇಕ ಶಾಸ್ತ್ರಗಳುಂಟು. ಹಿಂದೆ ಈ ಶಾಸ್ತ್ರಗಳನ್ನು ಚಾಚೂ ತಪ್ಪದೆ ಅನುಸರಿಸುತ್ತಿದ್ದರು. ಶಾಸ್ತ್ರಗಳಿಗೆ ಹೆಚ್ಚು ಗಮನವಿತ್ತೇ ಹೊರತು, ದುಬಾರಿ ವೆಚ್ಚದ ಬೇರೆ ಏರ್ಪಾಡುಗಳಿಗೆ ಅಲ್ಲ. ಈಗ ಶಾಸ್ತ್ರಗಳನ್ನು ಕಾಟಾಚಾರಕ್ಕೆ ಮಾತ್ರ ಮಾಡುತ್ತಾರೆ, ಅಷ್ಟೆ. ಈಗಿನ ಕಾಲದಲ್ಲಿ ಎಲ್ಲಾ ಶಾಸ್ತ್ರಗಳನ್ನು ಮಾಡಲು ಸಾಧ್ಯವಾಗದಿದ್ದರೂ, ಕೆಲವನ್ನಾದರೂ ವಿಧಿವತ್ತಾಗಿ ಆಚರಿಸುವುದು ಸರಿ ಎನಿಸುತ್ತದೆ. ಉದಾಹರಣೆಗೆ, ಅರಿಶಿಣ-ಎಣ್ಣೆ ಹಚ್ಚುವ ಶಾಸ್ತ್ರ. ಹಿಂದೆ ಇಡೀ ಒಂದು ರಾತ್ರಿಯೇ ಆಗುತ್ತಿತ್ತು. ಈ ಶಾಸ್ತ್ರ ಮಾಡಿ ಮುಗಿಸಲು. ಹೆಣ್ಣು ಗಂಡುಗಳ ಅಕ್ಕತಂಗಿಯರು, ಸೋದರಮಾವಂದಿರು, ಗೆಳೆಯ ಗೆಳತಿಯರು ಸೇರಿ, ಮೂರು ಸಲ ಅರಿಶಿಣ-ಎಣ್ಣೆ ತೀಡಿ, ಮೂರು ಸಲ ಸ್ನಾನ ಮಾಡಿಸಿ. ಹೊಸ ಬಟ್ಟೆ ಉಡಿಸಿ, ಮಾರನೆಯ ದಿನದ ಧಾರೆಗೆ ಸಿದ್ಧಮಾಡುತ್ತಿದ್ದರು. ಅರಿಶಿಣ-ಎಣ್ಣೆ ಶಾಸ್ತ್ರದ ವೇಳೆ ಎಂತೆಂತಹ ಧಾಟಿಯ ಸೋಬಾನೆ ಪದಗಳು! ಹೀಗೆ ಅರಿಶಿಣ ಎಣ್ಣೆ ಹಚ್ಚಿಸಿಕೊಂಡ ಗಂಡು-ಹೆಣ್ಣುಗಳ ಮೈಕಳೆಯೇ ಬೇರೆಯಾಗುತ್ತಿತ್ತು. ಅಲ್ಲದೆ, ಈ ಶಾಸ್ತ್ರದಲ್ಲಿ ಬೇರೊಂದು ಬಹುಮುಖ್ಯವಾದ ಉದ್ದೇಶವೂ ಇತ್ತು. ಮದುವೆಗೆ ನಾನಾ ಜನ ಬರುತ್ತಾರೆ. ಯಾರಲ್ಲಿ ಯಾವ ಅಂಟುಜಾಡ್ಯ ಇರುತ್ತದೆಯೋ ಹೇಳಲಾಗುವುದಿಲ್ಲ. ಅವರನ್ನು ಸೋಕಿಸಿಕೊಂಡಾಗ ಬರಬಹುದಾದ ಅಂಟುಜಾಡ್ಯಗಳಿಗೆ ಅರಿಶಿಣ ವಜ್ರಕವಚ ಇದ್ದಂತೆ. ಇಡೀ ಮದುವೆಯ ವೇಳೆ ಉಪಯೋಗಿಸುವ ಅಕ್ಷತೆ, ಹೊಂಗನೂಲು ಇವನ್ನೆಲ್ಲಾ ಅರಿಶಿಣಮಯವಾಗಿ ಮಾಡಿರುವುದು ಇದೇ ಉದ್ದೇಶದಿಂದಲೇ. ಈಗ ಇದೊಂದು ಒಣ ಆಚರಣೆಯಾಗಿದೆ. ಕೈಯುಗುರು ಕಾಲುಗುರುಗಳಿಗೆ, ಕೆನ್ನೆಗಳಿಗೆ, ಒಂದಿಷ್ಟು ಸೋಕಿಸಿ ಶಾಸ್ತ್ರಮುಗಿಸುತ್ತಾರೆ. ಈಗಿನ ಕಾಲದ ಹೆಣ್ಣು ಗಂಡುಗಳ ಮುಖದಲ್ಲಿ ಕಳೆಯೇ ಇರುವುದಿಲ್ಲ. ನೆರೆದವರ ಮಧ್ಯೆ ಗಂಡು ಯಾರು, ಹೆಣ್ಣು ಯಾರು ಎಂದು ಗೊತ್ತಾಗುವುದೇ ಇಲ್ಲ. ಮೊದಲು ಹೋಗೋ ನಂತರವೂ ಹಾಗೆಯೇ. ಆದ್ದರಿಂದ ದುಂದುವೆಚ್ಚದ ಮದುವೆಗಳನ್ನು ಮಾಡುವದಕ್ಕಿಂತ ಕೆಲವು ಮುಖ್ಯ ಶಾಸ್ತ್ರಗಳ

ಕಡೆಗೆ ಹೆಚ್ಚು ಗಮನ ಕೊಡುವುದು ಒಳ್ಳೆಯದು. ಇದರಿಂದ ಅಂತಹ ಖರ್ಚೂ ಆಗುವುದಿಲ್ಲ. ಬಂದ ನೆಂಟರಿಷ್ಟರಿಗೂ ನಿಜವಾಗಿಯೂ ಮದುವೆ ಮಾಡಿದೆವೆಂಬ ಸಮಾಧಾನವಾಗುತ್ತದೆ.

ಈ ಕಾರಣ ಹಿಂದಿನ ಕೆಲವು ಮುಖ್ಯ ಶಾಸ್ತ್ರಗಳನ್ನು ಉಳಿಸಿಕೊಂಡು, ಕೇವಲ ಹತ್ತಿರದ ನೆಂಟರಿಷ್ಟರಿಗಷ್ಟೇ ಸೀಮಿತವಾದ ಸರಳ ಮದುವೆಗಳನ್ನು ಮಾಡುವುದು ಸಮಾಜದ ಏಳಿಗೆಯ ದೃಷ್ಟಿಯಿಂದ ತುಂಬ ಆವಶ್ಯಕ. ಈ ಕೆಲಸದಲ್ಲಿ ಸಮಾಜದ ಹಿರಿಯರೂ, ಅನುಕೂಲಸ್ಥರೂ ಮುಂದಾಗಬೇಕು. ಯಾವ ಯಾವ ಖರ್ಚುಗಳನ್ನು ಕಡಿಮೆ ಮಾಡಬೇಕು. ರಿಸೆಪ್ಷನ್ ಅನಾವಶ್ಯಕ. ಈಗೀಗ ರಿಸೆಪ್ಷನ್‌ನಲ್ಲಿ ತಿಂಡಿ ತೀರ್ಥಗಳ ಏರ್ಪಾಡೂ ಆಗುತ್ತಿದೆ. ಇದರಿಂದ ಮದುವೆಯಷ್ಟೇ ಖರ್ಚು. 'ನವಿಲು ನೋಡಿ ಕೆಂಬುತ ಪುಕ್ಕ ತೆರಕೊಳ್ತು' ಎಂಬಂತೆ ಅನುಕೂಲಸ್ಥರನ್ನು ಬಡವರು ಅನುಸರಿಸಲು ಹೋಗಿ, ಮನೆ ಮಠ ಹಾಳು ಮಾಡಿಕೊಳ್ಳುತ್ತಿದ್ದಾರೆ.

ವರದಕ್ಷಿಣೆ ಒಕ್ಕಲಿಗರಲ್ಲಿ ಅಷ್ಟು ಹೆಚ್ಚಿಲ್ಲದಿದ್ದರೂ ಸ್ವಲ್ಪ ಮಟ್ಟಿಗಾದರೂ ಇದೆ. ದಕ್ಷಿಣ ಕನ್ನಡ ಜಿಲ್ಲೆಯ ಬಂಟರಲ್ಲಿ ಒಂದು ಲಕ್ಷದಿಂದ ಹತ್ತು ಲಕ್ಷದವರೆಗೆ ವರದಕ್ಷಿಣೆ ಕೊಡಬೇಕು. ಹೆಣ್ಣೆತ್ತವರ ಗೋಳು ಹೇಳತೀರದು. ಅವರೇನೋ ಮೊದಲಿಗೆ ಹದಿನೈದು ದಿನಗಳು ಮಾಡುತ್ತಿದ್ದ ಮದುವೆಯನ್ನು ಹದಿನೈದು ನಿಮಿಷಕ್ಕೆ ಇಳಿಸಿದ್ದಾರೆ. ಆದರೆ, ವರದಕ್ಷಿಣೆಯನ್ನು ಮಾತ್ರ ನೂರುಪಟ್ಟು ಹಿಚ್ಚಿಸಿದ್ದಾರೆ. ವಿದ್ಯೆಯಲ್ಲಿ ಬಹು ಮುಂದುವರಿದ ಆ ಜನ ಈ ವರದಕ್ಷಿಣೆಯ ಪಾಪದಿಂದಿನ್ನೂ ಮುಕ್ತರಾಗದಿರುವುದು ಆಶ್ಚರ್ಯ. ಆ ಪಿಡುಗು ಈಕಡೆಯ ಒಕ್ಕಲಿಗರಲ್ಲಿ ಬೇರು ಬಿಡುವ ಮುನ್ನ ನಾವು ಎಚ್ಚರಿಕೆ ವಹಿಸಬೇಕು. ವಿದ್ಯಾವಂತ ಯುವಕ ಯುವತಿಯರು ಈ ಬಗ್ಗೆ ಆಲೋಚಿಸಬೇಕು. ಮಾವ ಕೊಟ್ಟ ಸ್ಕೂಟರ್, ಕಾರುಗಳಲ್ಲಿ ಓಡಾಡುವುದು, ಅವರು ಕಟ್ಟಿಸಿಕೊಟ್ಟ ಮನೆಯಲ್ಲಿ ವಾಸಮಾಡುವುದು ಅವಮಾನಕರವೆಂಬ ಭಾವನೆ ಅವರಲ್ಲಿ ಬರಬೇಕು.

ಒಕ್ಕಲಿಗರಲ್ಲಿ ಇನ್ನೂ ಸಾಮೂಹಿಕ ವಿವಾಹ ಪದ್ಧತಿ ಜಾರಿಗೆ ಬಂದಿಲ್ಲ. ಮದುವೆಗಳಲ್ಲಿ ಆಗುವ ದುಂದುವೆಚ್ಚ ತಪ್ಪಿಸಲು ಇದೊಂದು ಉತ್ತಮ ಮಾರ್ಗ. ಈಗ ನಡೆಯುವ ಒಂದು ವಿವಾಹದ ಖರ್ಚಿನಲ್ಲಿ ಹತ್ತು ಸಾಮೂಹಿಕವಿವಾಹಗಳನ್ನು ನಡೆಸಲು ಸಾಧ್ಯ. ಎಷ್ಟೋ ಬಡ ಕುಟುಂಬಗಳಿಗೆ ಇದೊಂದು ವರವಾಗಿ ಪರಿಣಮಿಸುವುದರಲ್ಲಿ ಸಂದೇಹವಿಲ್ಲ. ಬೇರೆ ಜಾತಿಗಳೊಡನೆ ಸಾಮೂಹಿಕ ವಿವಾಹದಲ್ಲಿ ಭಾಗವಹಿಸುವುದು ಅನೇಕ ಒಕ್ಕಲಿಗರಿಗೆ ಒಗ್ಗುವುದಿಲ್ಲವಾದರಿಂದ, ಸದ್ಯಕ್ಕೆ ಒಕ್ಕಲಿಗರಲ್ಲಿಯೇ ಸಾಮೂಹಿಕ ವಿವಾಹ ಪದ್ಧತಿಯನ್ನು ಜಾರಿಗೆ ತರಬಹುದು. ಇಲ್ಲಿ ಹೆಣ್ಣಿಗೆ ಸಂಬಂಧಪಟ್ಟ ಒಂದು ವಿಷಯ ಪ್ರಸ್ತಾಪಮಾಡಬೇಕು. ಇತ್ತೀಚಿನವರೆಗೆ, ಈಗಲೂ ಕೆಲವು ಹಳ್ಳಿಗಳಲ್ಲಿ ಹೆಣ್ಣು ಮೈನೆರೆಯುವುದನ್ನು ತುಂಬ ಸಂತೋಷದಿಂದ ಶಾಸ್ತ್ರೋಕ್ತವಾಗಿ ಆಚರಿಸುತ್ತಾರೆ. ಮೈನೆರೆಯುವವರೆಗೆ ಎಲ್ಲರಂತೆ ಕೆಲಸ ಬೊಗಸೆ ಮಾಡಿಕೊಂಡಿದ್ದ ಹೆಣ್ಣು ಋತುವಾದ ಮೇಲೆ ತನ್ನ ಬಾಳಿನಲ್ಲಿ ಒಂದು ಹಂತ ಮುಟ್ಟುತ್ತಾಳೆ. ಮುಂದೆ ಆಕೆ ಮದುವೆಯಾಗಿ, ಗೃಹಿಣಿಯಾಗಿ ಎರಡು ಮೂರು ಮಕ್ಕಳು ಹಡೆದು, ಆರೋಗ್ಯವಾಗಿ ಸಂಸಾರ ಸಾಗಿಸಬೇಕಾಗುತ್ತದೆ. ಆಕೆಯ ಈ ಹೊಣೆಯನ್ನು ಅರಿತ ನಮ್ಮ ಹಿರಿಯರು ಮೈನೆರೆದ ಹೆಣ್ಣಿಗೆ ಪೌಷ್ಟಿಕ ಆಹಾರ, ತಿಂಡಿ ತೀರ್ಥಗಳನ್ನು ಕೊಟ್ಟು ಬೆಳೆಸುತ್ತಿದ್ದರು. ಆಕೆಗೆ ತಾಯಿಮನೆ ಒಸಗೆ, ಬಳಗದ ಒಸಗೆ ಎಂದು ಒಸಗೆಗಳನ್ನು ಹಾಕುತ್ತಿದ್ದರು. ಆ ಒಸಗೆಗಳಲ್ಲಿ ಚಕ್ಕಲಿ, ತಂಬಿಟ್ಟು, ಕೊಬ್ಬರಿ, ಬೆಲ್ಲ, ಕಡಲೆ ಇತ್ಯಾದಿ ಮೈಬೆಳೆಸುವ ಪುಷ್ಟಿಯಾದ ವಸ್ತುಗಳನ್ನು ಮಡಿಲು ತುಂಬುತ್ತಿದ್ದರು. ಆ ತಿಂಡಿಗಳನ್ನು ತಿಂಗಳಾನುಗಟ್ಟಲೆ ತಿಂದ ಹೆಣ್ಣಿನ ಬಣ್ಣ, ಮೈ ಕೈ ಬೆಳವಣಿಗೆ ಆಶ್ಚರ್ಯಕರವಾದ ರೀತಿಯಲ್ಲಿ ಆಗುತ್ತಿದ್ದುವು.

ಅಂತಹ ಹೆಣ್ಣು ಎಳು ಹೆತ್ತರೂ, ನವತರುಣಿಯಂತೆಯೇ ಕಾಣುತ್ತಿದ್ದಳು. ಆದರೆ ಈಗ ಪಟ್ಟಣಗಳಲ್ಲಿ ಹೆಣ್ಣು ಮೈನೆರೆಯುವುದನ್ನು ಸಾಮಾನ್ಯವೆಂದು ಭಾವಿಸಿ, ಆಕೆಗೆ ಯಾವ ಪೌಷ್ಟಿಕ ಆಹಾರವನ್ನೂ ಕೊಡದೆ ಹೋಗುತ್ತಾರೆ. ಇಥ ಹೆಣ್ಣುಗಳು ಒಂದು ಹೆರುವುದರೊಳಗೆ ಮುದುಕಿಯರಂತೆ ಕಾಣುತ್ತಾರೆ. ಕೆಲವರು ಮೈನೆರೆಯುವುದನ್ನು ಮುಚ್ಚಿಡುವುದೂ ಉಂಟು. ಎಷ್ಟೇ ಮುಚ್ಚಿಟ್ಟರೂ ವಯಸ್ಸಾದ ಹುಡುಗಿಯನ್ನು ನೋಡಿದರೆ, ಆಕೆ ಮೈನೆರೆದಿದ್ದಾಳೆ ಎಂಬ ತೀರ್ಮಾನಕ್ಕೆ ಬಂದೇ ಬರುತ್ತಾರೆ. ಆದ್ದರಿಂದ ಹಾಗೆ ಮುಚ್ಚಿಡದೆ, ನಮ್ಮ ಹಿರಿಯರಂತೆ ಆಕೆಗೆ ಬೇಕಾದ ತಿಂಡಿ ತೀರ್ಥಗಳನ್ನು ಕೊಟ್ಟು, ಆಕೆಯ ದೇಹದ ಬೆಳವಣಿಗೆಯ ಕಡೆಗೆ ಗಮನ ಕೊಡುವುದನ್ನು ಬಿಡಬಾರದು. ಇದೊಂದು ಸಣ್ಣ ವಿಷಯ, ಇದಕ್ಕೇಕೆ ಇಷ್ಟು ಹೇಳಬೇಕು ಎಂದು ಭಾವಿಸಬಾರದು. ಈಗಿನ ಕಾಲದ ಮದುವೆಯಾಗುವ ಹೆಣ್ಣುಮಕ್ಕಳನ್ನು ನೋಡಿ, ಅಯ್ಯೋ ಪಾಪ ಎನ್ನುವಷ್ಟರಮಟ್ಟಿಗೆ ಇರುವ ಅವರ ಸಪ್ಪೆಮೋರೆಗಳನ್ನು ನೋಡಿ, ಅವರ ಹಿತದೃಷ್ಟಿಯಿಂದಲೇ ಈ ಮಾತು ಹೇಳಬೇಕಾಗಿ ಬಂದಿತು.

**ನ್ಯಾಯ-ನಿಕರ:**

ಹಿಂದೆ ಹಳ್ಳಿಗಳಲ್ಲಿ ಜನರು ತಮ್ಮ ನ್ಯಾಯ ನಿಕರಗಳನ್ನು ತಮ್ಮಲ್ಲಿಯೇ ಬಗೆಹರಿಸಿಕೊಕೊಳ್ಳುತ್ತಿದ್ದರು. ಕೋರ್ಟುಕಛೇರಿಗಳಿಗೆ ಹೋದದ್ದು ತೀರಾ ಕಡಿಮೆ. ಹತ್ತು ಜನ ಹಿರಿಯರು ಹೇಳಿದ ತೀರ್ಮಾನಕ್ಕೆ ತಲೆಬಾಗುತ್ತಿದ್ದರು. ಹಾಗೆ ತಲೆಬಾಗದವರಿಗೆ ಊರಿನಲ್ಲಿ ಬೆಂಕಿ, ಬಿಸಿನೀರು ಸಿಕ್ಕದಂತೆ ಮಾಡುತ್ತಿದ್ದರು. ಇವು ಸಿಕ್ಕದಿದ್ದರೆ, ಪಟ್ಟಣಗಳಲ್ಲಿ ಬಾಳುವೆ ಮಾಡುವುದೇನೋ ಸುಲಭ. ಆದರೆ ಹಳ್ಳಿಗಳಲ್ಲಿ ಸಾಧ್ಯವಿರಲಿಲ್ಲ.

ಈಗ ಹಳ್ಳಿಯವರೆಲ್ಲ ಸಣ್ಣಪುಟ್ಟ ವ್ಯವಹಾರಗಳಿಗೆ ಕೋರ್ಟು ಕಛೇರಿಗಳ ಮೆಟ್ಟಲು ಹತ್ತುತ್ತಿದ್ದಾರೆ. ಲಾಯರುಗಳಿಗೆ ಹಣ ಸುರಿದು ಮನೆ ಹಾಳುಮಾಡಿಕೊಳ್ಳುತ್ತಿದ್ದಾರೆ. 'ಸೋತವನು ಸತ್ತ, ಗೆದ್ದವನು ಸೋತ' ಎನ್ನುವ ಗಾದೆಯೇ ಹುಟ್ಟಿಕೊಂಡಿದೆ ಹಳ್ಳಿಗಳಲ್ಲಿ. ಇದು ನಿಜವಾದ ಪರಿಸ್ಥಿತಿ, ಮತ್ತೊಮ್ಮೆ ಹಿಂದಿನ ಪದ್ಧತಿಯನ್ನು ಜಾರಿಗೆ ತರದ ಹೊರತು, ಒಕ್ಕಲಿಗರು ಬದುಕುವುದು ಕಷ್ಟವಾಗಿದೆ. ಕೋರ್ಟು ಕಛೇರಿಗಳಿಂದ ಊರಿನ ಅವ್ಯವಹಾರಗಳನ್ನು ಬಗೆಹರಿಸುವುದು ಕಷ್ಟ. ಊರುಗಳಲ್ಲಿ ಬಿಗಿಯೇ ತಪ್ಪಿ, ಕಳ್ಳತನ, ಮೋಸ, ದಗಾ, ಹಾದರ ಇತ್ಯಾದಿಗಳ ಆಗರವೇ ಆಗುತ್ತಿವೆ ಅವು. ಮೈಬಗ್ಗಿಸಿ ದುಡಿಯುವ ಸ್ವಭಾವ ಹೋಗಿ ಕಳ್ಳತನದಿಂದ ಜೀವನ ಸಾಗಿಸುವ ಚಟ ಹೆಚ್ಚಿದೆ. ಈಗಲೂ ಯಾವ ಯಾವ ಊರಿನಲ್ಲಿ ಒಗ್ಗಟ್ಟು ಇದ್ದು, ಕಳ್ಳತನ ಇತ್ಯಾದಿಗಳಿಗೆ ದಂಡ ದೋಷ ಹಾಕುವ ಪದ್ಧತಿ ಇದೆಯೋ ಅಂತಹ ಊರುಗಳು ನೆಮ್ಮದಿಯಿಂದ ಇವೆ. ಆದರೆ ಬಹುತೇಕ ಊರುಗಳಲ್ಲಿ ಹತೋಟಿ ತಪ್ಪಿದೆ. ಏನಾದರೂ ಮಾಡಿ, ಇದನ್ನು ತಪ್ಪಿಸಬೇಕು. ಹಾಗೆ ತಪ್ಪಿಸದ ಹೊರತು ಹಳ್ಳಿಗಳಿಗೆ ಉಳಿಗಾಲವಿಲ್ಲ.

ರಾಜಕೀಯ ಸಣ್ಣ ಪುಟ್ಟ ಹಳ್ಳಿಗಳನ್ನೂ ಹೊಕ್ಕು, ಊರಿನಲ್ಲಿ ಬಿಗಿ ತಪ್ಪಲು ಕಾರಣವಾಗಿದೆ. ಓಟಿಗಾಗಿ ಹಳ್ಳಿಗಳಲ್ಲಿ ಪಾರ್ಟಿಗಳನ್ನು ಸೃಷ್ಟಿಮಾಡಿದ ಮಹನೀಯರು ಗೆದ್ದಮೇಲೆ ಪಟ್ಟಣ ಸೇರಿ ಸುಖವಾಗಿರುತ್ತಾರೆ. ಆದರೆ ಹಳ್ಳಿಯಲ್ಲಿ ಹತ್ತಿಸಿದ ಬೆಂಕಿ ಆರುವುದೇ ಇಲ್ಲ. ಆ ಓಟಿನ ಕಾಲದಲ್ಲಿ ಹುಟ್ಟಿಕೊಂಡ ಮರಿಪುಢಾರಿಗಳು ಪಾರ್ಟಿ ವೈಷಮ್ಯಗಳನ್ನು ಮುಂದುವರಿಸಿ, ತಮ್ಮ ಬೇಳೆ ಬೇಯಿಸಿಕೊಳ್ಳುತ್ತಿದ್ದಾರೆ ಮುಗ್ಧ ಹಳ್ಳಿಯ ಜನರನ್ನು ಹೆದರಿಸಿ, ಬೆದರಿಸಿ, ಅವರನ್ನು ದಿಕ್ಕೆಡಿಸಿ, ಹಳ್ಳಿಗೆ ಬೆಂಕಿ ಇಡುತ್ತಿದ್ದಾರೆ. ಒಂದು ಹೊಸ ಬಗೆಯ ಪುಢಾರಿ ಉಡುಪು ಧರಿಸಿ, ಕಪ್ಪು ಕನ್ನಡಕ ಹಾಕಿ, ಊರುಗಳನ್ನು ಹೊಕ್ಕು, ತಾನೊಬ್ಬ ಮಹಾಮಂತ್ರಿಯೋ ಎಂಬಂತೆ ಅದು ಇದು ರಾಜಕೀಯ ಮಾತನಾಡುತ್ತಾ. ಹಳ್ಳಿಗರನ್ನು ಮೋಸದ ಬಲೆಯಲ್ಲಿ ಸಿಕ್ಕಿಸುತ್ತಿದ್ದಾರೆ. ಹಿರಿಯರು ಹಿಂದೆ ಬೀಳುತ್ತಾರೆ. ಈ

ಕಿರಿಯರ ಉಪಟಳ ಸಹಿಸಲಾರದೆ. ಹಳ್ಳಿಗರು ಇದನ್ನು ಸೂಕ್ಷ್ಮವಾಗಿ ಅರಿತುಕೊಳ್ಳಬೇಕು. ಓಟಿನ ವೇಳೆ ಹುಟ್ಟಿದ ಮನಸ್ತಾಪಗಳನ್ನು ಮರೆತು, ಎಂದಿನಂತೆ ತಮ್ಮ ಊರಿನಲ್ಲಿ ಒಗ್ಗಟ್ಟು ಕಾಪಾಡಿಕೊಂಡು ಬರಬೇಕು, ಅಷ್ಟೇ ಅಲ್ಲ, ತಾವು ಕೊಟ್ಟ ಓಟಿನಿಂದ ಎಂ.ಎಲ್.ಎ. ಅಥವಾ ಮಂತ್ರಿಯಾದವನು ತಮ್ಮ ಊರಿನ ಯೋಗಕ್ಷೇಮ ಎಷ್ಟರಮಟ್ಟಿಗೆ ನೋಡುಕೊಳ್ಳುತ್ತಿದ್ದಾನೆ ಎಂಬುದನ್ನು ಗಮನಿಸುತ್ತಿರಬೇಕು. ಅಯೋಗ್ಯ ಪುಢಾರಿಗಳಿಗೆ ಊರಿನಲ್ಲಿ ಜಾಗ ಕೊಡಬಾರದು. ಊರಿನ ಹಿರಿಯರು ತಮ್ಮ ಹಿರಿತನವನ್ನು ಬಿಡಬಾರದು. ಅವರ ಅನುಭವ ಹಾಗೂ ಯೋಗ್ಯತೆಗಳಿಂದ ಹಳ್ಳಿಗಳಲ್ಲಿ ಮತ್ತೆ ತಮ್ಮ ಸ್ಥಾನಮಾನವನ್ನು ಸ್ಥಾಪಿಸಬೇಕು. ಮಧ್ಯಸ್ಥಿಕೆ ವಹಿಸಿ, ಹಳ್ಳಿಯ ಅತ್ಯಾಚಾರ ಅನಾಚಾರಗಳನ್ನು ತಪ್ಪಿಸಬೇಕು. 'ಮಧ್ಯಸ್ಥರಿಲ್ಲದ ಊರಿನಲ್ಲಿ ಮಧ್ಯಾಹ್ನ ತನಕ ಇರಬಾರದು' ಎಂಬ ನಾಣ್ನುಡಿ ಸತ್ಯವಾಗಬೇಕಾದರೆ, ಹಿರಿಯರಾದವರು ಮಧ್ಯಸ್ಥಿಕೆ ವಹಿಸಿ, ಅನೇಕ ಸಣ್ಣಪುಟ್ಟ ವ್ಯವಹಾರಗಳನ್ನು ಊರಲ್ಲಿಯೇ ಪರಿಹರಿಸಿ. ಊರಿನ ಶಾಂತಿ ಸಮಾಧಾನಗಳನ್ನು ಕಾಪಾಡಬೇಕು. ಇಲ್ಲದೇ ಹೋದರೆ, ಹಳ್ಳಿಗಳು ನರಕಕ್ಕೆ ಸಮಾನ. ಅಂತಹ ಊರುಗಳಲ್ಲಿರುವುದಕ್ಕಿಂತ ಊರು ಬಿಡುವುದೇ ಲೇಸು.

**ಊಟ-ಉಪಚಾರ:**

ಹಿಂದಿನಿಂದ ಒಕ್ಕಲಿಗರಲ್ಲಿ ಕೆಲವು ಊಟೋಪಚಾರಗಳು ನಡೆದುಕೊಂಡು ಬಂದಿದ್ದುವು. ಇವು ಸರಳವೂ, ರುಚಿಯೂ ಆಗಿರುತ್ತಿದ್ದುವು. ನಮ್ಮ ಹಳ್ಳಿಯ ತಾಯಂದಿರು ಸಿಕ್ಕಿದುದರಲ್ಲಿ ಬಗೆಬಗೆಯ ಅಡುಗೆಗಳನ್ನು ಮಾಡಿ ಬಡಿಸುತ್ತಿದ್ದರು. ಅಂಗಡಿಯಿಂದ ಸಾಮಾನು ತಂದು ಮಾಡುತ್ತಿದ್ದ ಅಡುಗೆಗಳು ಇರಲೇ ಇಲ್ಲ. ಹಿಟ್ಟುಸೊಪ್ಪಿನ ಅಡುಗೆಯಾಗಲಿ, ಮಡಿ ಮಾಂಸದ ಊಟವಾಗಲಿ, ಅರದು ಎತ್ತಿದ ಕೈಯಾಗಿರುತ್ತಿತ್ತು. ಕಾಫಿ, ಉಪ್ಪಿಟ್ಟುಗಳು ಇರಲೇ ಇಲ್ಲ. ಹಬ್ಬ ಹರಿದಿನಗಳಲ್ಲಿ ಮಾತ್ರ ವಡೆ, ಕಜ್ಜಾಯ, ಪಾಯಸ, ಹೋಳಿಗೆ ಅಷ್ಟೆ. ಈ ಬಗೆಯ ಸರಳ ಆಹಾರದಿಂದ ಅವರ ಆರೋಗ್ಯ ತುಂಬಾ ಚೆನ್ನಾಗಿರುತ್ತಿತ್ತು. ವರ್ಷವೆಲ್ಲಾ ಕೆಲಸ ಬೊಗಸೆ ಮಾಡುತ್ತಿದ್ದ ಅವರಿಗೆ ದಡಿಹೊಟ್ಟೆಯಾಗಲಿ, ಸೀಮೂತ್ರ ಮುಂತಾದ ರೋಗಗಳಾಗಲಿ ಇರಲಿಲ್ಲ. ಊರಿನಲ್ಲೇ ಸಿಕ್ಕುವ ಸೊಪ್ಪು ಸೆದೆಗಳಿಂದ ಬಂದ ಕಾಯಿಲೆಗಳನ್ನು ಬಗೆಹರಿಸಿಕೊಳ್ಳುತ್ತಿದ್ದರು.

ಈಗ ಅವನ್ನೆಲ್ಲಾ ಕೈಬಿಟ್ಟು, ಪಟ್ಟಣದ ತಿಂಡಿ ತೀರ್ಥಗಳಿಗೆ ಮಾರುಹೋಗಿ, ದುಬಾರಿ ಖರ್ಚಿನಲ್ಲಿ ಅಡುಗೆಮಾಡುವ ಪದ್ಧತಿ ಅನುಸರಿಸುತ್ತಿದ್ದಾರೆ. ಮದುವೆಗಳಲ್ಲಂತೂ ಹಿಂದಿನ ಕಾಲದ ಊಟೋಪಚಾರ ಇಲ್ಲವೇ ಇಲ್ಲ. ಎಂಥದೋ ಎಣ್ಣೆ ಹಾಕಿ ಮಾಡಿದ ತಿಂಡಿ ತೀರ್ಥಗಳನ್ನು ತಿನ್ನಿಸಿ ಅಪಾರ ಹಣ ವ್ಯಯಮಾಡುವುದಲ್ಲದೆ, ತಿಂದವರ ಹೊಟ್ಟೆಗಳನ್ನೂ ಕೆಡಿಸುತ್ತಿದ್ದಾರೆ. ಹೊಸ ಬಗೆಯ ಅಡುಗೆಗಳನ್ನು ಮಾಡುವುದು ಹೆಚ್ಚಾಗಿದೆ. ಅವನ್ನು ಮಾಡುವುದುಕ್ಕಾಗದೆ ಪಟ್ಟಣಗಳಿಂದ ಅಡುಗೆಯವರನ್ನು ಕರೆಸುವುದು ಹೆಚ್ಚುತ್ತಿದೆ. ಇವೆಲ್ಲಾ ಸರಿಯಾದ ರೀತಿಗಳಲ್ಲ. ಸರಳವಾದ, ರುಚಿಯಾದ ಹೆಚ್ಚು ಖರ್ಚಿಲ್ಲದ ಅಡುಗೆಗಳತ್ತ ನಮ್ಮವರು ಮತ್ತೆ ಗಮನ ಹರಿಸಬೇಕಾಗಿದೆ. ತರಕಾರಿ, ಕಾಳು ಕಡಿ ಹಾಕಿದ ಸಾರು, ಪಾಯಸ, ಮೊಸರು, ಮಜ್ಜಿಗೆಗಳಿಗಿಂತ ಶ್ರೇಷ್ಠವಾದ ಊಟ ಬೇರೊಂದಿಲ್ಲ.

ತಾವು ಕರೆದ ಹಾಲು ತಮ್ಮ ಮಕ್ಕಳಿಗೇ ಸಿಗದಂತೆ ಮಾರಿಕೊಳ್ಳುವುದೂ ಹಳ್ಳಿಗಳಲ್ಲಿ ಹೆಚ್ಚಿದೆ. ಬರುವ ನಾಲ್ಕು ಕಾಸಿಗೆ ಆಸೆಪಟ್ಟು ಹಾಲು ಬೆಣ್ಣೆಗಳನ್ನೂ, ತರಕಾರಿ ಕಾಯಿಪಲ್ಯಗಳನ್ನೂ ಪಟ್ಟಣಕ್ಕೆ ಸಾಗಿಸಿಬಿಡುತ್ತಾರೆ. ಪಟ್ಟಣಗಳಲ್ಲಿ ಸಿಗುವ ಹಾಲು, ಬೆಣ್ಣೆ, ಹಣ್ಣುಹಂಪಲು, ತರಕಾರಿ ಕಾಯಿಪಲ್ಯಗಳು ಅವು ಹಳ್ಳಿಗಳಿಂದಲೇ ಅವೇ ಹಳ್ಳಿಗಳಿಗೆ ಹೋಗಬೇಕಾದ ಸ್ಥಿತಿ ಒದಗಿದೆ.

ಇವೆಲ್ಲ ಕಾರಣಗಳಿಂದ ಹಳ್ಳಿಯವರ ಮುಖದಲ್ಲಿ ಕಾಂತಿಯಾಗಲಿ, ದೇಹಪುಷ್ಟಿಯಾಗಲಿ ಇಲ್ಲ. ಕಾಯಿಲೆ ಕಸಾಲೆಗಳಿಂದ ನರಳುತ್ತ, ಈಗ ಎಲ್ಲೆಲ್ಲೂ ಇರುವ ವೈದ್ಯನಿಗೆ ಹಣ ಸುರಿಯುವ ಕಾಲ ಬಂದಿದೆ. ಎಷ್ಟು ಆಸ್ಪತ್ರೆಗಳನ್ನು ಕಟ್ಟಿದರೂ ಜಾಗ ಸಾಲದಾಗಿದೆ.

**ಮದ್ಯ - ಮಾಂಸ:**

ಕುಡಿತ ಮುಂತಾದ ಚಟಗಳೂ ಹಳ್ಳಿಯವರ ಆರೋಗ್ಯಕ್ಕೆ ಅಪಾಯಕಾರಿಯಾಗಿವೆ. ಒಂದು ಕಾಲದಲ್ಲಿ ಕುಡಿತ ಎಂಬುದು ಒಕ್ಕಲಿಗರಲ್ಲಿ ಇರಲೇ ಇಲ್ಲ. ಕುಡಿಯುವವರಿಗೆ ಮನೆಯಲ್ಲಿ ಗಂಗಳ, ಚೆಂಬು ಕೊಡುತ್ತಿರಲಿಲ್ಲ. ಆದರೆ, ಈಗ ಕುಡಿತ ಸಾಮಾನ್ಯವಾಗಿಹೋಗಿದೆ. ಹಳ್ಳಿಯ ಜನ ಕುಡಿಯುವಷ್ಟನ್ನು ಪಟ್ಟಣದವರೂ ಕುಡಿಯುತ್ತಿಲ್ಲ. ಮಾಡಿದ ಸಂಪಾದನೆಯೆಲ್ಲಾ ಕುಡುತಕ್ಕೆ ಮೀಸಲಾಗಿದೆ  ಇದು ಹೀಗೆ ಮುಂದುವರೆದರೆ ಇವರ ಸ್ಥಿತಿ ಚಿಂತಾಜನಕವಾಗುತ್ತದೆ.

ಕುಡಿತದಿಂದ ಒಕ್ಕಲಿಗನ ಸಂಸಾರ ಹಾಳು. 'ಹೊಲೆಯ ಮಾಡುವುದು ಹೆಂಡಕ್ಕೆ, ಒಕ್ಕಲಿಗ ಮಾಡುವುದು ದಂಡಕ್ಕೆ' ಎಂಬ ಹಳೆಯ ನಾಣ್ಣುಡಿ ಈಗ ಬದಲಾವಣೆಯಾಗಿದೆ. ಒಕ್ಕಲಿಗ ಮಾಡುವುದು ದಂಡ, ಹೆಂಡ ಎರಡಕ್ಕೂ ಎಂಬ ಹೊಸ ನಾಣ್ಣುಡಿಯನ್ನು ಕಟ್ಟಬೇಕಾಗಿದೆ. ಕುಡಿಯುವವನ ಸಂಸಾರದ ಗೋಳು ಹೇಳತೀರದು. ಹಳ್ಳಿಗಳಲ್ಲಿ ಕಳ್ಳತನ, ಮೋಸಗಳು ತಾಂಡವವಾಡುತ್ತಿವೆ. ಹಾದರ ಇತ್ಯಾದಿಗಳು ಒಂದೇ ಎರಡೇ? ಸಂಜೆಯಾಯಿತೆಂದರೆ ಅನೇಕ ಹಳ್ಳಿಗಳಿಗೆ ಮುಖ ಹಾಕುವುದಕ್ಕಾಗುವುದಿಲ್ಲ. ಅಷ್ಟರಮಟ್ಟಿಗೆ ಒಕ್ಕಲಿಗರು ಕೆಟ್ಟು ಹೋಗಿದ್ದಾರೆ. ಹಿಂದೆ ಒಕ್ಕಲಿಗರು ಸಮಾಜದಲ್ಲಿ ಒಳ್ಳೆಯ ಹೆಸರು ಪಡೆದಿದ್ದರು.

ಶುಚಿ, ರುಚಿ, ನೇಮ, ನಿಯಮಗಳಿಗೆ ಒಮ್ಮೆ ಅಷ್ಟೊಂದು ಹೆಸರಾಗಿದ್ದ ಒಕ್ಕಲಿಗರು ಇಷ್ಟು ಕೆಟ್ಟಿರುವುದು ಸಮಾಜದ ಕೇಡಿಗಲ್ಲದೆ ಒಳ್ಳೆದಕ್ಕಲ್ಲ. ಈ ಬಗ್ಗೆ ಸಮಾಜದ ಹಿರಿಯರು ಆಲೋಚಿಸಬೇಕಾಗಿದೆ. ಇದು ಬಹು ಮುಖ್ಯವಾದ ವಿಷಯ. ಒಕ್ಕಲಿಗರ ಸಮಾಜ ತಲೆಯೆತ್ತಿಕೊಂಡಿರಬೇಕಾದರೆ ಆ ಸಮಾಜದಲ್ಲಿ ಸರ್ವವ್ಯಾಪ್ತಿಯಾಗಿರುವ ಈ ಪಿಡುಗುಗಳನ್ನು ತಪ್ಪಿಸಲೇಬೇಕು. ವಿದ್ಯಾವಂತರನ್ನು ಅವಿದ್ಯಾವಂತರು, ಅನುಕೂಲಸ್ಥರನ್ನು ಬಡವರು, ದೊಡ್ಡವರನ್ನು ಚಿಕ್ಕವರು, ಮುಂದಾಳುಗಳನ್ನು ಹಿಂಬಾಲಕರು ಅನುಸರಿಸುತ್ತಾರೆ, ಅನುಕರಿಸುತ್ತಾರೆ. ಆದ್ದರಿಂದ ಅವರ ಮೇಲೆ ದೊಡ್ಡ ಚಾಳಿಗಳಿಗೆ ಮೇಲ್ಪಂಕ್ತಿಯಾಗುತ್ತಿದ್ದಾರೆ. ಅವರಿಂದಲೇ ಹೆಚ್ಚು ಅನಾಹುತ ಹಳ್ಳಿಗಳಲ್ಲಿ ಆಗುತ್ತಿರುವುದು. ಇದನ್ನೆಲ್ಲಾ ಒಕ್ಕಲಿಗ ಸಮಾಜವೂ, ಸಂಘವೂ ಬಹು ತೀವ್ರವಾಗಿ ಗಮನಿಸಬೇಕು. ಇಲ್ಲದಿದ್ದರೆ, ಒಕ್ಕಲಿಗರು, ಒಕ್ಕಲುತನ, ಒಕ್ಕಲಿಗ ಸಮಾಜ ಇವೆಲ್ಲಾ ನಿರ್ನಾಮ!

**ಉಡುಗೆ-ತೊಡುಗೆ:**

ಒಕ್ಕಲಿಗರ ಉಡುಗೆ ತೊಡುಗೆ ಬೇರೆಲ್ಲ ಹಳ್ಳಿಯ ಜನರ ಉಡುಗೆ ತೊಡುಗೆಗಳಂತೆಯೇ ಇವೆ. ಸರಳತನ ಅದರ ಮುಖ್ಯ ಲಕ್ಷಣ. ಬೇಸಾಯಮಾಡುವ ಜನ ತಮ್ಮ ಕೆಲಸಕಾರ್ಯಗಳಿಗೆ ಅನುಕೂಲವಾದ ಉಡುಪನ್ನೇ ಧರಿಸಬೇಕು. ಅದರಲ್ಲೇನೂ ತಪ್ಪಿಲ್ಲ. ಆದರೆ ಊರು ಬಿಟ್ಟು ಹೊರಗೆ ಬಂದಾಗ, ಕೋರ್ಟು ಕಛೇರಿಗಳಿಗೆ ಹೋದಾಗ, ಬಸ್ಸು ರೈಲು ಮುಂತಾದುವುಗಳಲ್ಲಿ ಪ್ರಯಾಣಮಾಡುವಾಗ ಮರ್ಯಾದೆಯಾದ ಉಡುಪು ತೊಡುವುದು ಅವಶ್ಯಕ. ಹೇಗಿದ್ದರೇನು ಎಂಬ ಭಾವನೆ ಸರಿಯಲ್ಲ. ಒಬ್ಬನು ಧರಿಸುವ ಉಡುಪಿನ ಮೇಲೆ ಅವನ ಅಂತಸ್ತನ್ನು

ನೋಡುವ ಕಾಲ ಇದು. ಹೊಲಗದ್ದೆಗಳಲ್ಲಿ ಕೆಲಸಮಾಡುವಾಗ ಚಡ್ಡಿಯಲ್ಲೋ ಲಪಾಟಿಯಲ್ಲೋ ಇರಬಹುದು. ಅವು ಆಗ್ಗೆ ಸರಿ. ಆದರೆ, ಹೊರಗೆ ಹೋದಾಗಲೂ ಅದೇ ಉಡುಪಿನಲ್ಲಿ ಹೋಗುವುದು ತೀರಾ ಅಸಹ್ಯ. ಅಂಥವರನ್ನು ಬಸ್ ಕಂಡಕ್ಟರ್ ಮತ್ತು ಪ್ರಯಾಣಿಕರು ಕಾಣುವ ಬಗೆಯೇ ಇದಕ್ಕೆ ಸಾಕ್ಷಿ. ಅಂಥವರಿಗೆ ಸೀಟಿದ್ದರೂ ಸೀಟುಕೊಡದೆ ನಿಲ್ಲಿಸುವುದೂ ಉಂಟು. ಇದಕ್ಕೆಲ್ಲಾ ಹಳ್ಳಿಯ ಜನ ಉಟ್ಟ ಬಟ್ಟೆಯಲ್ಲೇ ಹೊರಗೆ ಹೊರಡುವುದು ಕಾರಣವಾಗಿದೆ. ಸೂಟು ಬೂಟುಗಳನ್ನು ಧರಿಸಬೇಕು. ನೂರಾರು ರೂಪಾಯಿ ರೇಷ್ಮೆ ಸೀರೆ ಉಡಬೇಕು ಎಂದಲ್ಲ. ಸರಳವಾದ, ಸಾಧಾರಣವಾದ ಉಡುಪಾದರೂ ಅದು ಅಚ್ಚುಕಟ್ಟಾಗಿ ಲಕ್ಷಣವಾಗಿರಬೇಕು. ಅಂತಹ ಉಡುಪು ಧರಿಸಿ ಹೊರಗೆ ಕಾಣಿಸಿಕೊಳ್ಳುವುದು ಮರ್ಯಾದೆಯ ಲಕ್ಷಣ.

ಹಳ್ಳಿಯ ಜನ ವಾರಗಟ್ಟಲೆ ಸ್ನಾನವನ್ನೇ ಮಾಡುವುದಿಲ್ಲ. ಇದಕ್ಕೆ ನೀರಿನ ಅಭಾವ ಒಂದು ಕಾರಣವಾದರೆ, ಸೋಮಾರಿತನವೂ ಇನ್ನೊಂದು ಕಾರಣ. ನೀರಿದ್ದರೂ ವಾರಗಟ್ಟಲೆ ಸ್ನಾನಮಾಡದ ಜನ ಇರುತ್ತಾರೆ. ಅವರು ಹತ್ತಿರ ಬಂದರೆ ದುರ್ವಾಸನೆ. ತಲೆಯಲ್ಲಿ ಹೇನು, ಬಟ್ಟೆಬರೆಗಳಲ್ಲಿ ಕೂರೆ! ಯಾರಾದರೂ ಅಸಹ್ಯಪಡಲೇಬೇಕಾಗುತ್ತದೆ. ಅಂಥವರನ್ನು ತೀರಾ ಹತ್ತಿರದವರೂ ಅಸಹ್ಯವಾಗಿ ಕಾಣುವುದು ಸ್ವಾಭಾವಿಕವೇ. ಆದ್ದರಿಂದ ನಮ್ಮ ಹಳ್ಳಿಯವರು ದಿನಕ್ಕೊಂದು ಸಲ ಅಲ್ಲದಿದ್ದರೂ ವಾರಕ್ಕೆರಡು ಮೂರು ಸಲವಾದರೂ ಸ್ನಾನಮಾಡುವುದು, ದಿನವೂ ತಲೆ ಬಾಚಿಕೊಳ್ಳುವುದು, ಹಣೆಗೆ ಕುಂಕುಮ ಇಟ್ಟುಕೊಳ್ಳುವುದು, ಹೊರಗೆ ಬಂದಾಗ ಹೂಮುಡಿದುಕೊಳ್ಳುವುದು, ಶುಚಿಯಾದ ಬಟ್ಟೆತೊಡುವುದು ಇವನ್ನೆಲ್ಲಾ ತಪ್ಪದೆ ಪಾಲಿಸಬೇಕು. ಇದರಿಂದ ಅವರ ಮರ್ಯಾದೆಯು ನೆರೆಹೊರೆಯಲ್ಲಿ, ಸಮಾಜದಲ್ಲಿ, ಕೋರ್ಟು ಕಛೇರಿಗಳಲ್ಲಿ ಹೆಚ್ಚುತ್ತದೆ. ನೋಡಿದವರು ಮರ್ಯಾದೆಯಿಂದ ಮಾತಾಡಿಸುತ್ತಾರೆ. ಮಾಡಿಕೊಡಬೇಕಾದ ಕೆಲಸವನ್ನು ಕೊಂಚ ಜಾಗ್ರತೆಯಿಂದ ಮಾಡಿಕೊಡುತ್ತಾರೆ. ಒಟ್ಟಿನಲ್ಲಿ, ಆತನ ಸ್ಥಾನಮಾನ ಹೆಚ್ಚುತ್ತದೆ. ಇದನ್ನು ಅರಿತೇ ದಕ್ಷಿಣ ಕನ್ನಡ ಮತ್ತು ಉತ್ತರ ಕನ್ನಡ ಜಿಲ್ಲೆಗಳ ಜನ ಗದ್ದೆಯಲ್ಲಿ ಕೆಲಸ ಮಾಡುವಾಗ ಲಂಗೋಟಿ ಕಟ್ಟಿಕೊಂಡಿದ್ದರೂ, ಊರಿನಿಂದ ಹೊರಗೆ ಬರುವಾಗ ಶುಚಿಯಾದ ಅಚ್ಚುಕಟ್ಟಾದ ಉಡುಪಿನಲ್ಲಿ ಬರುತ್ತಾರೆ. ಹೆಂಗಸರು ಕಾರ್ಖಾನೆ ಕೆಲಸಗಳಿಗೆ ಹೋಗುವಾಗ ಮಡಿ ಸೀರೆ ಉಟ್ಟು, ಹೂ ಮುಡಿದು ಹೋಗುತ್ತಾರೆ. ಬರುವಾಗಲೂ ಹಾಗೆಯೇ ಬರುತ್ತಾರೆ. ಅಂದರೆ, ಕೆಸಮಾಡದೆಯೇ ಬರುತ್ತಾರೆ ಎಂದು ಭಾವಿಸಬಾರದು. ಅವರ ಕೈಯಲ್ಲಿರುವ ಚೀಲದಲ್ಲಿ ಕೆಲಸಮಾಡುವಾಗ ಉಡುವ ಸೀರೆ ಇರುತ್ತದೆ. ಅದನ್ನು ಉಟ್ಟು ಕೆಲಸಮಾಡಿ, ಬರುವಾಗ ಒಳ್ಳೆ ಬಟ್ಟೆ ತೊಡುತ್ತಾರೆ. ಇಂಥವರಿಂದ ನಾವು ಕಲಿಯಬೇಕಾದ್ದು ಬಹಳ ಇದೆ.

**ನಡೆ-ನುಡಿ:**

ಒಕ್ಕಲಿಗರು ತಮ್ಮ ನಡೆ ನುಡಿಯಲ್ಲಿ ತುಂಬ ಒರಟು ಎಂಬ ಭಾವನೆ ಇದೆ. ಇದು ಬಹುಮಟ್ಟಿಗೆ ನಿಜ. ಎಲ್ಲಿರಲಿ, ಅವರು ತಮ್ಮ ನಡೆನುಡಿಗಳನ್ನು ಬದಲಾಯಿಸದೆ, ತಾವು ನಡೆದದ್ದೇ ದಾರಿ, ನುಡಿದದ್ದೇ ಮಾತು ಎಂಬಂತೆ ಇರುತ್ತಾರೆ. 'ಕುಲ ನಾಲಿಗೆ ನುಡಿಯಿತು' ಎಂಬ ಮಾತಿಗೆ ಒಕ್ಕಲಿಗರು ಅವಕಾಶ ಮಾಡಿಕೊಡಬಾರದು. ಮಾತು ಬಲ್ಲವರಿಗೆ ಜಗಳ ಇಲ್ಲ ಸರಿಯಾದ ಮಾತಿನಿಂದಲೇ ಆತ ಸುಲಭವಾಗಿ ಇನ್ನೊಬ್ಬರನ್ನು ಗೆಲ್ಲಬಹುದು. ಉಡುಪು ಎಷ್ಟು ಮುಖ್ಯವೋ, ಮಾತೂ ಅಷ್ಟೇ ಮುಖ್ಯ. ಒರಟಾಗಿ ಮಾತಾಡುವುದು ಕೆಲವರ ಸ್ವಭಾವ. ಅದರಿಂದ ಯಾವ ಉಪಯೋಗವೂ ಆಗುವುದಿಲ್ಲ. ಹಳ್ಳಿಯಲ್ಲಿ ಏನೇ ಆಡಿದರೂ ನಡೆಯುತ್ತದೆ. ಆದರೆ ಪಟ್ಟಣ

ಮುಂತಾದವುಗಳಿಗೆ ಬಂದಾಗ ತಮ್ಮ ಮಾತಿನ ಒರಟುತನವನ್ನು ಬಿಟ್ಟು, ಮರ್ಯಾದೆಯಿಂದ, ಪ್ರೀತಿಯಿಂದ ಮಾತಾಡುವುದನ್ನು ಕಲಿಯಬೇಕು. ಹಳ್ಳಿಯ ಹಿರಿಯರು ಈಗಲೂ ತಮ್ಮ ಮಾತಿನಲ್ಲಿ ತೋರಿಸುವ ನಯ, ವಿನಯ, ಹಿತ ಮಿತಿಗಳನ್ನು ನಾವು ಅನುಸರಿಸಬೇಕು. ಕುರಿ ಕಾಯುವವನಲ್ಲಿ, ದನ ಮೇಯಿಸುವವನಲ್ಲಿ ಎಂತಹ ಸಂಸ್ಕೃತಿ ಇದೆ ಎಂಬುದನ್ನು ಅವರನ್ನು ಹತ್ತಿರವಾಗಿ ನೋಡಿದಾಗ, ಮಾತಾಡಿಸಿದಾಗ ಗೊತ್ತಾಗುತ್ತದೆ. ಶಾಲೆಗೆ ಹೋಗದಿದ್ದರೂ, ರಾಮಾಯಣ ಮಹಾಭಾರತಗಳು ಅವರ ಬಾಯಲ್ಲಿರುತ್ತವೆ. ಸಂಸ್ಕೃತ ಶ್ಲೋಕಗಳನ್ನೂ ಅವರ ಬಾಯಿಂದ ಕೇಳಬಹುದು. ಅಂತಹ ನಡೆ-ನುಡಿಗಳನ್ನು ಈಗಿನವರು, ಅದರಲ್ಲಿಯೂ ವಿದ್ಯಾವಂತರೆನಿಸಿಕೊಂಡವರು, ಬೆಳೆಸಿಕೊಳ್ಳಬೇಕು. ನಾಲ್ಕಕ್ಷರ ಇಂಗ್ಲಿಷ್ ಕಲಿತು, ತಾವು ಎಲ್ಲಾ ಬಲ್ಲವರೆಂದು ಮೆರೆಯುವುದು ನಮ್ಮ ಇಂದಿನ ಪೀಳಿಗೆಯ ಲಕ್ಷಣ. ಇದು ಲಕ್ಷಣವಲ್ಲ, ಅವಲಕ್ಷಣ.

ಬಹು ರುಚಿಕಟ್ಟಾದ, ಅಚ್ಚುಕಟ್ಟಾದ ನುಡಿ ನಮ್ಮ ಒಕ್ಕಲಿಗರದು. ಆ ನುಡಿಯನ್ನು ಸಂಗ್ರಹಿಸಿದರೆ, ಧ್ವನಿ ಮುದ್ರಣ ಮಾಡಿಕೊಟ್ಟರೆ, ಪ್ರಪಂಚದಲೆಲ್ಲಿಯೂ ಕಾಣಲಾರದಂತಹ ಭಾಷಾಕೋಶಗಳನ್ನು ರಚಿಸಬಹುದು. ಆದರೆ, ಈಗ ಹಳ್ಳಿಯವರೂ ಪಟ್ಟಣಿಗರ ಭಾಷೆ ಅನುಕರಿಸಲು ಹೊರಟಿದ್ದಾರೆ. ದೊಡ್ಡವರು ಇಂಗ್ಲಿಷ್ ಮಾತಾಡುತ್ತಾರೆ, ಆದ್ದರಿಂದ ತಾವೂ ಅಲ್ಲೊಂದು ಇಲ್ಲೊಂದು ಇಂಗ್ಲಿಷ್ ಪದ ಸೇರಿಸಿ ಮಾತಾಡಿದರೆ, ತಮ್ಮ ಮರ್ಯಾದೆ ಹೆಚ್ಚು ಎಂಬ ಭಾವನೆ ಹಳ್ಳಿಯವರಿಗೆ ಬರುತ್ತಿದೆ. ಇನ್ನು ಅವರು ಉಪಯೋಗಿಸುವ ಇಂಗ್ಲಿಷ್ ಪದಗಳು ಎಷ್ಟು ವಿಚಿತ್ರವಾಗಿರುತ್ತವೆ, ಅಸಂಬದ್ಧವಾಗಿರುತ್ತವೆ ಎಂಬುದನ್ನು ಕೇಳಿದಾಗ, ಅದಕ್ಕೇ ಒಂದು ಇಂಗ್ಲಿಷ್ ನಿಘಂಟು ಬೇಕಾಗುತ್ತದೆ. ಇಂಥ ಅಧ್ವಾನದ ಭಾಷೆ ಹಳ್ಳಿಗಳಲ್ಲಿ ಕಾಣಿಸಿಕೊಳ್ಳುವುದಕ್ಕೆ ನಮ್ಮ ಅಲ್ಪ ಸ್ವಲ್ಪ ಇಂಗ್ಲಿಷ್ ಕಲಿತ ಯುವಕರೂ ಕಾರಣ. ಅವರು ಹಳ್ಳಿಗೆ ಹೋಗಿ, ಅವರ ಇಂಗ್ಲಿಷ್‌ನಲ್ಲಿ ಮಾತಾಡಿದರು ಎಂದರೆ, ಹಳ್ಳಿಯವರು ಬಾಯಿ ಬಿಟ್ಟುಕೊಂಡು ಕೇಳುತ್ತಾರೆ. ಇವೆಲ್ಲಾ ನಮ್ಮ ಗ್ರಾಮೀಣ ಭಾಷೆಯ ಸವಿ, ಸೊಗಸು ಇತ್ಯಾದಿಗಳು ಕೆಡುತ್ತಿರುವುದಕ್ಕೆ ಕಾರಣ. ಇಂತಹ ಸ್ಥಿತಿ ಒದಗದಂತೆ ನೋಡಿಕೊಳ್ಳಬೇಕಾದ್ದು ಹಳ್ಳಿಗರಿಗಿಂತ ಹೆಚ್ಚಾಗಿ ಓದಿದ ಯುವಕರ ಕರ್ತವ್ಯವಾಗಿದೆ.

**ಹಣ-ಕಾಸು:**

ಒಕ್ಕಲಿಗನ ಆರ್ಥಿಕ ಸ್ಥಿತಿ ತೀರಾ ಶೋಚನೀಯ. ಅವನ ಸಂಪಾದನೆ ಹೊಟ್ಟೆಗಾದರೆ ಬಟ್ಟೆಗಿಲ್ಲ, ಬಟ್ಟೆಗಾದರೆ ಹೊಟ್ಟೆಗಿಲ್ಲ. ಮಳೆಯನ್ನೇ ನಂಬಿಕೊಂಡಿರುವವರ ಗತಿಯಂತೂ ತೀರಾ ಹೀನಸ್ಥಿತಿ. ಅಂತಹ ಹೀನಸ್ಥಿತಿಯಲ್ಲಿರುವವರನ್ನು ಕಂಡಾಗ ಕಣ್ಣಲ್ಲಿ ನೀರು ಬರುತ್ತದೆ. ದೇವರು ಇಂಥವರನ್ನು ಈ ಭೂಮಿಯ ಮೇಲೆ ಏಕೆ ಸೃಷ್ಟಿಮಾಡಿದ ಎನ್ನಬೇಕಾಗುತ್ತದೆ. ದುಡಿದು ಸಂಪಾದನೆ ಮಾಡುತ್ತೇನೆಂದರೂ, ಅನೇಕ ಕಡೆ ಅವಕಾಶವಿರುವುದಿಲ್ಲ. ಕೇವಲ ಹತ್ತು, ಹನ್ನೆರಡು ಅಂಗುಲ ಮಳೆಯಾಗುವ ನಾಗಮಂಗಲ, ಶಿರಾ ಮುಂತಾದ ಕಡೆಯ ಜನರು ಪಡುವ ಕಷ್ಟ ದೇವರಿಗೆ ಪ್ರೀತಿ. ಎತ್ತ ನೋಡಿದರೂ ಒಂದು ಮರವಿಲ್ಲ, ಗಿಡವಿಲ್ಲ. ಹಸುರೇ ಕಾಣದು. ಬೇಸಾಯ ಬಿಟ್ಟು ಬೇರೆನಾದರೂ ಮಾಡೋಣವೆಂದರೂ ಅವಕಾಶವಿಲ್ಲ. ದನಕುರಿಗಳನ್ನು ಹೊಡೆದುಕೊಂಡು, ಸಂಸಾರ ಕಟ್ಟಿಕೊಂಡು, ಮೇವು ಸಿಕ್ಕುವ ಕಡೆ ಅಲೆಯುವುದೇ ಇವರ ಜೀವನದ ರೀತಿಯಾಗಿದೆ.

ಇದಕ್ಕೇನೂ ಪರಿಹಾರ ಕಾಣದಾಗಿದೆ. ಇಂತಹ ಪ್ರದೇಶಗಳಲ್ಲಿ ಯಾವುದಾದರೂ ಹೆಚ್ಚು ಉದ್ಯೋಗ ದೊರಕುವ ಕೈಗಾರಿಕೆಗಳನ್ನು ಸ್ಥಾಪಿಸುವುದೇ ಉತ್ತಮ ಮಾರ್ಗವಾಗಿ ಕಾಣುತ್ತದೆ. ಭಾವಿಗಳನ್ನು ತೋಡಿ, ಬೇಸಾಯಕ್ಕೆ ನೀರು

ಒದಗಿಸುವುದು ಇನ್ನೊಂದು ಮಾರ್ಗ. ಆದರೆ ಬೆಂಗಾಡು ಸೀಮೆಯಲ್ಲಿ ಬಾವಿ ತೋಡುವುದೂ ಅಪಾಯಕಾರಿ, ನೀರು ಸಿಕ್ಕಿದರೆ ಸಿಕ್ಕಿತು, ಇಲ್ಲದಿದ್ದರೆ ಇಲ್ಲ. ಸಾಲಮಾಡಿ ಹಾಕಿದ ಹಣವೆಲ್ಲಾ ವ್ಯರ್ಥ. ಆಮೇಲೆ ಅವನ ಮನೆಯೇ ಹಾಳು.

ಸಣ್ಣ ಪುಟ್ಟ ಗೃಹಕೈಗಾರಿಕೆಗಳಾದರೂ ಸೂಕ್ತವಾಗಿ ಕಾಣುತ್ತವೆ, ಬೆಂಗಳೂರು ಮುಂತಾದ ದೊಡ್ಡ ಪಟ್ಟಣಗಳಲ್ಲಿಯೇ ಕಾರ್ಖಾನೆಗಳನ್ನು ಸ್ಥಾಪಿಸಿ, ಹತೋಟಿ ಮೀರಿ ನಗರಗಳು ಬೆಳೆಯುವಂತೆ ಮಾಡಿ, ಇಲ್ಲದ ಸಮಸ್ಯೆಗಳನ್ನು ಉಂಟುಮಾಡುವುದಕ್ಕಿಂತ ಗ್ರಾಮಾಂತರ ಪ್ರದೇಶಗಳಲ್ಲಿ ಸಣ್ಣಪುಟ್ಟ ಕಾರ್ಖಾನೆಗಳನ್ನೋ, ಗೃಹಕೈಗಾರಿಕೆಗಳನ್ನೋ ಸ್ಥಾಪಿಸುವುದು ಅವಶ್ಯಕ.

ಮುಖ್ಯವಾಗಿ ಗಮನಿಸಬೇಕಾಗಿರುವುದು ಒಳ್ಳೆಯ ಸೌಕರ್ಯವಿರುವ ಪ್ರದೇಶಗಳಲ್ಲಿ ಕಾಣುವ ಸೋಮಾರಿತನ. ರೈತನಿಗೆ ವರ್ಷವೆಲ್ಲಾ ಏನಾದರೊಂದು ಕೆಲಸವಿರುತ್ತದೆ ನಿಜ. ಆದರೆ ಅವೆಲ್ಲ ಕೆಲಸಕ್ಕೆ ಬಾರದ ಕೆಲಸಗಳು. ಆರು ತಿಂಗಳು ಬಹುಪಾಲು ಒಕ್ಕಲಿಗರಿಗೆ ಹೇಳಿಕೊಳ್ಳುವಂತಹ ಕೆಲಸವೇ ಇರುವುದಿಲ್ಲ. ಅಂತಹ ವೇಳೆ ಅವರು ಮಾಡಬಹುದಾದ ಉಪಯುಕ್ತ ಕೆಲಸಗಳು ಅನೇಕ. ಈಗ ಏನು ಬೆಳೆದರೂ ಬೆಲೆ ಇದೆ. ಬರೇ ರಾಗಿ, ಬತ್ತ ಅಷ್ಟೇ ಅಲ್ಲ; ತರಕಾರಿ, ಕಾಯಿಸೊಪ್ಪು ಇವುಗಳನ್ನು ಬೆಳೆದರೆ ಸಾಕು. ಆದರೆ ಮನೆಯ ಮುಂದೆ ಕಾಲುವೆ ಹರಿಯುತ್ತಿದ್ದರೂ, ಆ ನೀರನ್ನು ಉಪಯೋಗಿಸಿ ಏನಾದರೂ ಬೆಳೆಯುವ ಮನಸ್ಸು ಮಾಡುವುದಿಲ್ಲ. ಸೋಮಾರಿತನ ಇದಕ್ಕೆ ಮೂಲ ಕಾರಣ. ಆ ಸೋಮಾರಿತನವನ್ನು ಬಿಟ್ಟು, ಏನಾದರೊಂದು ಉಪಕಸುಬು ಮಾಡಿ, ದಿನವೂ ನೂರಾರು ರೂಪಾಯಿ ದುಡಿಯುವ ಮನಸ್ಸು ಮಾಡಬೇಕು.

ಹಾಗೆ ದುಡಿಯುವವನನ್ನು ಹಳ್ಳಿಯ ಜನ ಹಿಯ್ಯಾಳಿಸುವುದುಂಟು, ಬೇಸಾಯ ಮಾಡುವ ಒಕ್ಕಲಿಗ ಬೇರೊಂದು ಕಸಬು ಮಾಡಿದರೆ ಏನೋ ತಪ್ಪುಮಾಡಿದಂತೆ ಎಂಬ ಭಾವನೆ ಹಳ್ಳಿಗಳಲ್ಲಿ ಉಂಟು. ಸುಖ ಜೀವನಕ್ಕೆ ಏನು ಮಾಡಿದರೂ ತಪ್ಪಿಲ್ಲ. ಸಣ್ಣ ಪುಟ್ಟ ವ್ಯಾಪಾರ ಮಾಡುವುದಂತೂ ಒಳ್ಳೆಯದೆ. ಎಲ್ಲಿಂದಲೋ ಬಂದವರು ತಮ್ಮ ಊರಿನಲ್ಲಿ ಅಂಗಡಿ ಇಟ್ಟು ವ್ಯಾಪಾರ ಮಾಡಬಹುದಾದರೆ, ಅವರೇ ಏಕೆ ಮಾಡಬಾರದು? ಹೊರಗಡೆಯವರು ಬಂದು ತಮ್ಮೂರಿನ ತರಕಾರಿ, ದವಸ ಧಾನ್ಯ, ಕುರಿ ಕೋಳಿ, ಹಣ್ಣು ಹಂಪಲುಗಳನ್ನು ಕೊಂಡು ವ್ಯಾಪಾರ ಮಾಡಬಹುದಾದರೆ, ಅವರೇ ಏಕೆ ಮಾಡಬಾರದು? ಈಗ ಮೊದಲಿನಂತೆ ಸಾಗಾಣಿಕೆ ಕಷ್ಟ ಇಲ್ಲ. ಬಸ್ಸುಗಳೂ, ಲಾರಿಗಳೂ ಹೇರಳವಾಗಿ ಓಡಾಡುತ್ತವೆ. ಮನೆಯ ಮುಂದೆಯೇ ಮಾಡಬಹುದಾದ ಅನೇಕ ಉಪಕಸುಬುಗಳಿವೆ. ಉದಾಹರಣೆಗೆ, ತೆಂಗಿನ ತೋಟಗಳಿರುವ ಕಡೆ ತಿಂಗಿನ ನಾರಿನ ಹಗ್ಗ, ಕಡ್ಡಿಯ ಪೊರಕೆ, ಸಿಪ್ಪೆ, ಗರಿ, ಕರಟ, ಕೂರೊಂಬಾಳೆ, ಸೀಬಿ ಇವೆಲ್ಲವುಗಳಿಂದ ಸಾಕಷ್ಟು ಹಣ ಸಂಪಾದಿಸಬಹುದು. ಬೂತ್ತಾಳೆ ಬೆಳೆದು ಹಗ್ಗ ಹುರಿಗಳನ್ನು ಮಾಡಬಹುದು. ಈಗ ರೈತರು ಅವರ ಹಗ್ಗ ಅವರೇ ಹೊಸೆದುಕೊಳ್ಳುವ ಬದಲು ಸಂತೆಯಲ್ಲಿ ಕೊಂಡುತರುವುದನ್ನು ಕಾಣುತ್ತೇವೆ. ದೊಡ್ಡದಾಗಿ ಅಲ್ಲದಿದ್ದರೂ, ಸಣ್ಣ ಪುಟ್ಟದಾಗಿ, ಕುರಿ ಕೋಳಿ, ಆಡುಗಳನ್ನು ಸಾಕಿದರೂ ಕೈತುಂಬದುಡ್ಡುಂಟು. ಹಿಂದೆ ಒಂದು ಎತ್ತಿಗಿದ್ದ ಬೆಲೆ ಈಗ ಒಂದು ಕುರಿಗೆ ಇದೆ.

ಹೆಂಗಸರು ಹೊಲಿಗೆ, ಕಸೂತಿ ಮುಂತಾದವನ್ನು ಕಲಿಯಬಹುದು. ಹಳ್ಳಿಗಳಲ್ಲಿ ಮಹಿಳಾ ಕೂಟಗಳನ್ನು ಮಾಡಿಕೊಂಡು, ಅವುಗಳಿಗೆ ಸರ್ಕಾರದವರು ಕೊಡುವ ಸಹಾಯವನ್ನು ಉಪಯೋಗಿಸಿಕೊಂಡು, ತಮ್ಮ ಮಕ್ಕಳಿಗೆ ಬಟ್ಟೆ ಬರೆಗಳನ್ನು ಹೊಲಿಯುವುದನ್ನು ಕಲಿಯಬಹುದು. ಎಲೆ ಹಚ್ಚುವುದು, ದೊನ್ನೆ ಕಟ್ಟುವುದು ಮುಂತಾದ

ಕಸುಬುಗಳು ಕೂತ ಕಡೆಯೇ ಮಾಡಬಹುದು, ಬೇರೆಯವರು ಮಾಡಬಾರದು ಎಂಬ ಭಾವನೆ ಹಳ್ಳಿಗಳಲ್ಲಿ ಇದೆ. ಒಕ್ಕಲಿಗರೂ ಸಹ ತಮ್ಮ ಬಿಂಕ ಬಿಡಾರಗಳನ್ನು ಬಿಟ್ಟು, ಏನು ಕಸಬು ಮಾಡಿದರೆ ಯಾವ ಸಂಪಾದನೆ ಇದೆ ಎಂಬುದನ್ನು ಸೂಕ್ಷ್ಮವಾಗಿ ಅರಿತು, ಕಾಲಕ್ಕೆ ತಕ್ಕಂತೆ ನಡೆದುಕೊಳ್ಳುವುದು ಒಳ್ಳೆಯದು. ಇಲ್ಲದಿದ್ದರೆ ಅವರಿಗೆ ಬಡತನ ತಪ್ಪಿದ್ದಲ್ಲ.

ನಮ್ಮ ಹಿರಿಯರು ಹಾಸಿಗೆ ಇದ್ದಷ್ಟು ಕಾಲು ನೀಡುವ ಸ್ವಭಾವದವರಾಗಿದ್ದರು. ಅಲ್ಪ ಆದಾಯದಲ್ಲಿ ಅಷ್ಟು ಇಷ್ಟು ಉಳಿಸಿ, ಕಷ್ಟ ಕಾಲಕ್ಕೆ ಇಡುತ್ತಿದ್ದರು. ಸಾಲಸೋಲ ಮಾಡುವುದು ತಪ್ಪೆಂದು ಭಾವಿಸುತ್ತಿದ್ದರು. ಆದರೆ ಈಗ ಸಾಲ ಮಾಡದ ರೈತ ಇಲ್ಲ. 'ಕಡ ಹುಟ್ಟಿ ಬಡವ ಕೆಟ್ಟ' ಎಂಬಂತೆ ಸುಲಭವಾಗಿ ಸಿಕ್ಕುವ ಸರ್ಕಾರಿ ಸಾಲ, ಸೊಸೈಟಿ ಸಾಲಗಳನ್ನು ಮಾಡಿ, ಮೈತುಂಬ ಸಾಲಗಾರರಾಗಿದ್ದಾರೆ. ಸಾಲ ಮಾಡುವುದು ತಪ್ಪಲ್ಲ. ಆದರೆ ಆ ಸಾಲವನ್ನು ಪಡೆದ ಉದ್ದೇಶಗಳಿಗೇ ಉಪಯೋಗಿಸಬೇಕು. ಅನೇಕ ಸಾಲಗಳನ್ನು ಮದುವೆ, ಮುಂಜಿ, ಹಬ್ಬ, ಹರಿದಿನ ಇವುಗಳಿಗೆ ಉಪಯೋಗಿಸಿಬಿಡುತ್ತಾರೆ. ಇದರಿಂದ ಸಾಲ ಹೊರೆಯಾಗುವುದೆ ಹೊರತು, ಪಡೆದವರ ಏಳಿಗೆಗೆ ಸಹಾಯವಾಗುವುದಿಲ್ಲ. ಮಳೆಯನ್ನೇ ನಂಬಿ. ಆ ಬೆಳೆಬರುತ್ತೆ, ಈ ಬೆಳೆ ಬುರುತ್ತೆ ಎಂದು ಸಾಲಮಾಡಿ, ಅದಕ್ಕೆ ಬರಿಬಡ್ಡಿ ತೆತ್ತು, ಆತ್ಮಹತ್ಯೆಗೆಶರಣಾಗಿ ಮನೆ ಹಾಳುಮಾಡಿಕೊಳ್ಳುವುದಕ್ಕಿಂತ ಒಕ್ಕಲಿಗನಾದವನು ಸಾಲಮಾಡಿದಿರುವುದೇ ಒಳ್ಳೆಯದು. ಮಾಡಿದರೆ ಅದನ್ನು ಪಡೆದ ಉದ್ದೇಶಕ್ಕೇ ಉಪಯೋಗಿಸಬೇಕು.

ಇನ್ನು ರೈತಾಪಿಯಿಂದಲೇ ಜೀವನ ಸಾಗಿಸುವ ಒಕ್ಕಲಿಗರು ತಮ್ಮ ಇರುವಷ್ಟು ಭೂಮಿಯಲ್ಲಿ ಎಷ್ಟೆಷ್ಟು, ಏನೇನು ಬೆಳೆಯಬಹುದೆಂಬುದನ್ನು ಆಲೋಚಿಸಬೇಕು. ಹೊಸ ವ್ಯವಸಾಯ ಪದ್ಧತಿಗಳನ್ನೂ ಗಮನಿಸಬೇಕು. ಆದರೆ ಹೊಸ ಪದ್ಧತಿಗಳೆಲ್ಲಾ ಸರಿಯೆಂದು ಹೇಳುವುದಕ್ಕಾಗುವುದಿಲ್ಲ. ಅತಿಯಾದ ರಸಗೊಬ್ಬರ ಭೂಮಿಗೆ ಹಾನಿ ಎಂಬುದನ್ನು ಅದನ್ನು ಉಪಯೋಗಿಸಿದ ರೈತರು ಹೇಳುತ್ತಾರೆ. ರಸಗೊಬ್ಬರದ ಜೊತೆಗೆ, ಕೊಟ್ಟಿಗೆ ಗೊಬ್ಬರ ಇತ್ಯಾದಿಗಳನ್ನು ಉಪಯೋಗಿಸಿದರೇನೇ ಅದರಿಂದ ಉತ್ತಮ ಬೆಳೆ ಬರುವುದು, ಮತ್ತು ಭೂಮಿಯು ತನ್ನ ಸಾರವನ್ನು ಉಳಿಸಿಕೊಳ್ಳುವುದು. ಯಾವುದಕ್ಕೂ ಅನುಭವ ಮುಖ್ಯ. ನಮ್ಮ ಒಕ್ಕಲಿಗರು ಬೇಸಾಯದಲ್ಲಿ ನೂರಾರು ವರ್ಷಗಳ ಅನುಭವವುಳ್ಳವರು. ಆ ಅನುಭವ ಮತ್ತು ಹೊಸ ವಿಧಾನ ಇವೆರಡನ್ನೂ ಅವರು ಉಪಯೋಗಿಸಿಕೊಂಡು ತಮ್ಮ ಜೀವನಾಧಾರವಾದ ಕೃಷಿಯನ್ನು ಉತ್ತಮಪಡಿಸಿಕೊಂಡು, ವರ್ಷಕ್ಕಾಗುವ ಆಹಾರವನ್ನು ಬೆಳೆಯುವುದು ಹೇಗೆಂಬುದನ್ನು ಅವರೇ ಆಲೋಚಿಸಿಕೊಳ್ಳಬೇಕು. ನಮ್ಮ ಕಲ್ಯಾಣ ನಮ್ಮ ಕೈಯಲ್ಲಿ ಇನ್ನೊಬ್ಬರನ್ನು ನಂಬಿ ಕುಳಿತುಕೊಳ್ಳಬಾರದು.

ರೈತರೇ ದೇಶದ ಬೆನ್ನುಮೂಳೆ ಎಂದು ವೋಟಿನ ವೇಳೆ ನಮ್ಮ ರಾಜಕೀಯ ಮುಖಂಡರು ಭಾಷಣ ಬಿಗಿದಿದ್ದೇ ಬಿಗಿದ್ದದ್ದು. ಅಸೆಂಬ್ಲಿ, ಪಾರ್ಲಿಮೆಂಟ್‌ಗಳಲ್ಲಿ ಕುಳಿತು, ಅವರಿಗೆ ಇದು ಮಾಡಬೇಕು. ಅದು ಮಾಡಬೇಕು ಎಂದು ಹೇಳಿದ್ದೇ ಹೇಳಿದ್ದು. ಅವರ ಈ ಆಲೋಚನೆಗಳಿಗೆಲ್ಲ ನಗರದ ಆಲೋಚನೆಗಳೇ ಬಹುಮಟ್ಟಿಗೆ ತಳಹದಿ. ಇಂತಹ ತಳಹದಿಯ ಮೇಲೆ ಗ್ರಾಮೀಣರ ಆರ್ಥಿಕ ಸ್ಥಿತಿಯನ್ನು ಸುಧಾರಿಸುವುದು ಆಗದ ಮಾತು. ಅವು 'ಪ್ರಾಕ್ಟಿಕಲ್' ಆಗಿರುವುದಿಲ್ಲ. ಯಾವುವು ಹಾಗಿಲ್ಲವೋ ಅವುಗಳಿಗೆ ಹಳ್ಳಿಯವರಿಂದ ಮಾನ್ಯತೆ ಇರುವುದಿಲ್ಲ. ಆದ್ದರಿಂದ ಗ್ರಾಮೀಣರ ಉನ್ನತಿಯನ್ನು ಗ್ರಾಮೀಣರೇ ಚಿಂತಿಸುವ ವ್ಯವಸ್ಥೆಯಾಗಬೇಕು. ರೈತರು ಮುಷ್ಕರ ಇತ್ಯಾದಿಗಳನ್ನು ನಡೆಸುವುದು ಕಷ್ಟ. ಏಕೆಂದರೆ ಅವರಲ್ಲಿ ಒಗ್ಗಟ್ಟು ಇರುವುದಿಲ್ಲ. ಎಲ್ಲೋ ಒಮ್ಮೊಮ್ಮೆ ಇರುತ್ತದೆ. ಆದರೆ

ಜೀವನಾಧಾರವಾದ ಬೇಸಾಯ ಬೆನ್ನುಹತ್ತಿದಾಗ ಚಳುವಳಿ ಮುತಾದುವನ್ನು ಕೈಬಿಟ್ಟು ತಮ್ಮ ಪಾಡಿಗೆ ತಾವು ಇದ್ದುಬಿಡುತ್ತಾರೆ. ಹೀಗಾಗಿ ಅವರ ಆರ್ಥಿಕ ಸಮಸ್ಯೆ ಪರಿಹಾರವಿಲ್ಲದೆ ಹಾಗೇ ಉಳಿಯುತ್ತದೆ. ಆದ್ದರಿಂದ ಈ ಬಗ್ಗೆ ಒಕ್ಕಲಿಗರ ಸಂಘ ಜಿಲ್ಲೆ ಮತ್ತು ತಾಲೂಕುಗಳಲ್ಲಿ ರೈತರ ಸಂಘಗಳನ್ನು ಸ್ಥಾಪಿಸಿ, ಒಕ್ಕಲುತನದ ಸಮಸ್ಯೆಗಳತ್ತ ಗಮನ ಹರಿಸಬೇಕಾಗಿದೆ

**ವಿದ್ಯೆ-ಉದ್ಯೋಗ**

ಇದು ಬಹು ಮುಖ್ಯ ವಿಷಯ. ಇಂದಿನ ನಮ್ಮ ವಿದ್ಯಾಭ್ಯಾಸ ಪದ್ಧತಿಯಲ್ಲಿ ಅನೇಕ ಲೋಪದೋಷಗಳಿವೆ. ಇದನ್ನು ಎಲ್ಲರೂ ಒಪ್ಪಿಕೊಳ್ಳುತ್ತಾರೆ. ಆದರೆ ಅವನ್ನು ಸರಿಪಡಿ, ಸರಿಯಾಗಿಲ್ಲದ ವಿದ್ಯಾಭ್ಯಾಸ ಪದ್ಧತಿ ರೈತನ ಮಗನನ್ನು ನಿರುದ್ಯೋಗಿಯನ್ನಾಗಿ ಮಾಡುತ್ತಿದೆ. ವಿದ್ಯೆ ಇಲ್ಲದಿದ್ದರೆ ಕೃಷಿಗೆ ಸಂಬಂಧಿಸಿದ ಯಾವುದಾದರೂ ಕೆಲಸವನ್ನು ಮಾಡಿಕೊಂಡಿರುತ್ತಿದ್ದವನು ಒಂದು ಎಸ್.ಎಸ್.ಎಲ್.ಸಿ. ಓದಿದ ಕೂಡಲೇ ಹೊಲದಲ್ಲಿ ಕೆಲಸ ಮಾಡುವುದು ತನ್ನ ಗೌರವಕ್ಕೆ ಕುಂದು ಎಂದು ಭಾವಿಸುತ್ತಾನೆ. ಸರ್ಕಾರಿ ಕೆಲಸಕ್ಕೆ ಅಲೆಯುತ್ತಾನೆ. ಅದು ಸಿಕ್ಕದಿದ್ದರೆ ಓದಿಸಿದ ತಂದೆ ತಾಯಿಗಳಿಗೂ, ಹುಟ್ಟಿದ ಊರಿಗೂ ಹೊರೆಯಾಗುತ್ತಾನೆ. ಅವನಿಗೆ ಹಳ್ಳಿಯ ಬಾಳು ಉತ್ತಮ ಆಗದು. ಈ ಸ್ಥಿತಿ ಹಿಂದಿಗಿಂತ ಈಗ ಬಹು ಉಲ್ಬಣವಾಗಿದೆ. ಅಸಂಖ್ಯಾತ ನಿರುದ್ಯೋಗಿ ವಿದ್ಯಾವಂತ ಯುವಕರು ದೇಶಕ್ಕೆ ಹೊರೆಯಾಗಿದ್ದಾರೆ. ಆದರೆ 'ಕೆಲಸ' ಎಂದರೆ ಸರ್ಕಾರಿ ಕೆಲಸ, ಎಂದು ಭಾವಿಸುವುದರಿಂದಲೇ ತಾನು ನಿರುದ್ಯೋಗಿ, ಕೆಲಸ ಇಲ್ಲದವನು ಎಂದು ಅವನಿಗೆ ಅನ್ನಿಸುವುದು. ಬೇಸಾಯ 'ಕೆಲಸ' ಅಲ್ಲವೇನು? ಅದೂ ಕೆಲಸವೇ. ಆದರೆ ಅದು ಕೈ ಕೆಸರಾಗುವ ಕೆಲಸ. ಕೈ ಕೆಸರಾಗದೆ ಬಾಯಿ ಮೊಸರಾಗಬೇಕಾದರೆ, ಸರ್ಕಾರಿ ನೌಕರಿಯೊಂದೇ. ಇಂತಹ ಕೆಲಸಕ್ಕೆ ಆಸೆಪಟ್ಟು ನಮ್ಮ ಯುವಕರು ನಿರಾಶರಾಗುತ್ತಿದ್ದಾರೆ. ಯಾವ ದೇಶದಲ್ಲಿಯೂ ಈ ಸ್ಥಿತಿ ಇದ್ದಂತೆ ಕಾಣುವುದಿಲ್ಲ. ಈ ಸ್ಥಿತಿ ಹೋಗಬೇಕಾದರೆ ಕೆಲಸ ಎಂದರೆ ದೇಹಶ್ರಮದಿಂದ ದುಡಿಯುವುದೂ ಕೆಲಸವೇ ಸರ್ಕಾರಿ ನೌಕರಿಯೂ ಕೆಲಸವೇ ಎಂಬ ಭಾವನೆ ಬರಬೇಕು. ಆ ಭಾವನೆ ಬರುವಂತೆ ಮಾಡುವುದೇ ನಮ್ಮ ವಿದ್ಯಾಭ್ಯಾಸ ಪದ್ಧತಿಯಲ್ಲಿ ಆಗಬೇಕಾದ ಬದಲಾವಣೆ. ಆದಾಗ್ಯೂ ಬೇರೆ ವಿದ್ಯಾಭ್ಯಾಸ ಪದ್ಧತಿ ಬರುವವರೆಗೆ ಒಕ್ಕಲಿಗರು ತಮ್ಮ ಮಕ್ಕಳನ್ನು ಓದಿಸುವುದನ್ನು ಬಿಡಬಾರದು. ಏನಿಲ್ಲದಿದ್ದರೂ ಅಕ್ಷರ ಜ್ಞಾನವಾದರೂ ಅವರಿಗೆ ಬರಬೇಕು. ಕ್ಷೇಮ ಸಮಾಚಾರದ ಕಾಗದ ಬರೆಯುವುದು, ವೃತ್ತಪತ್ರಿಕೆಗಳನ್ನೂ, ಸರಳವಾದ ಪುಸ್ತಕಗಳನ್ನೂ ಓದುವುದು ಇಂದಿನ ಕಂಪ್ಯೂಟರ್ ಯುಗದಲ್ಲಿ ಇಷ್ಟಾದರೂ ಮನುಷ್ಯನಿಗೆ ಬೇಕೇ ಬೇಕು. ಇಟ್ಟ ಕಾಗದಕ್ಕೆ ಹೆಬೆಟ್ಟು ಒತ್ತುವುದು ಬಂದ ಕಾಗದವನ್ನು ಇನ್ನೊಬ್ಬರಿಂದ ಓದಿಸುವುದು ಇಂತಹ ಸ್ಥಿತಿ ಹಳ್ಳಿಗಳಲ್ಲಿ ಇನ್ನುಮುಂದೆ ಇರಬಾರದು.

ಒಮ್ಮೆ ಅಕ್ಷರ ವಿದ್ಯೆಯಲ್ಲಿ ಒಕ್ಕಲಿಗರು ಬಹು ಹಿಂದೆ ಉಳಿದಿದ್ದರು. ಜಿಲ್ಲೆಗೊಂದು ಹೈಸ್ಕೂಲು, ರಾಜ್ಯಕೊಂದು ಕಾಲೇಜು ಇದ್ದ ಕಾಲವೊಂದಿತ್ತು. ಆ ಕಾರಣ ತಾಲ್ಲೂಕಿಗೆ ಒಬ್ಬರೋ ಇಬ್ಬರೋ ಅದು ಅನುಕೂಲಸ್ಥರ ಮಕ್ಕಳು, ಹೈಸ್ಕೂಲು ಕಾಲೇಜು ಮೆಟ್ಟಿಲು ಹತ್ತುತ್ತಿದ್ದರು. ಹಿಂದೆ ತಾಲೂಕಿಗೆ ಒಂದು ಜಾತಿಯಲ್ಲಿ ಇಬ್ಬರು ಮೂವರು ಪದವೀಧರಿದ್ದರೆ ಹೆಚ್ಚು

ಅಲ್ಲದೆ ಬೇಸಾಯಗಾರರಿಗೆ ಸಾಮಾನ್ಯವಾಗಿ ವಿದ್ಯೆಯ ಬಗ್ಗೆ ತಾತ್ಸಾರ. ಮನೆಯಲ್ಲಿ ಎಷ್ಟು ಜನರಿದ್ದರೂ ಬೇಸಾಯಕ್ಕೆ ಸಾಲದು. ಒಬ್ಬ ಕುರಿ, ಒಬ್ಬ ದನ, ಒಬ್ಬ ಬೇಸಾಯ ಹೀಗೆ ಹಲವಾರು ಬಾಬ್ತುಗಳಿಗೆ ಹಲವಾರು

ಜನರ ಅವಶ್ಯಕತೆ ಇತ್ತು. ಏನಿಲ್ಲದಿದ್ದರೂ ತಂದೆ ತಾಯಿಗಳು ಹೊಲಗದ್ದೆಗಳ ಕೆಲಸಕ್ಕೆ ಹೋದಾಗ ಮನೆಯಲ್ಲಿ ಮಕ್ಕಳನ್ನು ನೋಡಿಕೊಳ್ಳುವುದಕ್ಕಾದರೂ ಹೆಣ್ಣು ಮಕ್ಕಳು ಗಂಡು ಮಕ್ಕಳು ಬೇಕಾಗಿತ್ತು. ಹಳ್ಳಿಯ ಶಾಲೆಗಳಲಿ ಅಂದು ಹಾಜರಾತಿ ಕಡಿಮೆ ಇರುವುದಕ್ಕೆ ಕಾರಣ ಇದೇ ಆಗಿತ್ತು.

ಮಕ್ಕಳನ್ನು ಓದಿಸಬೇಕಾಗಿಲ್ಲವೆಂಬ ಒಕ್ಕಲಿಗರ ಭಾವನೆ ಈಗ ಬದಲಾವಣೆಯಾಗಿದೆ. ಗ್ರಾಮಾಂತರ ಪ್ರದೇಶದಲ್ಲಿ ಹೈಸ್ಕೂಲುಗಳೂ, ಕಾಲೇಜುಗಳೂ, ಸ್ಥಾಪನೆಯಾದದ್ದು ಈ ಬದಲಾವಣೆಗೆ ಒಂದು ಕಾರಣ. ಓದಿದ ಹುಡುಗ, ಹುಡುಗಿಯರಿಗೆ ಸರ್ಕಾರಿ ನೌಕರಿಗಳು ಹೆಚ್ಚು ಹೆಚ್ಚಾಗಿ ಸಿಕ್ಕಿದ್ದು ಇನ್ನೊಂದು ಕಾರಣ. ಅಲ್ಲದೆ ಮನೆಯಲ್ಲಿ ಮಕ್ಕಳ ಸಂಖ್ಯೆ ಹೆಚ್ಚಿ, ಇದ್ದ ಅಲ್ಪ ಸ್ವಲ್ಪ ಜಮೀನನ್ನು ಆಗಲೇ ಹಂಚಿಕೊಂಡು ಇನ್ನೂ ಹಂಚಿದರೆ ಹೇಗೆ ಬೆಳದರೂ, ಏನೇ ಬೆಳೆದರೂ ಜೀವನಕ್ಕೆ ಕಷ್ಟ ಎಂಬುದು ಸ್ಪಷ್ಟವಾಯಿತು. ಬೇಸಾಯ ಬಿಟ್ಟು ಬೇರೆ ಯಾವುದಾದರೂ ಜೀವನಮಾರ್ಗ ಹಿಡಿಯುವುದು ಅನಿವಾರ್ಯವಾಯಿತು. ಸದ್ಯಕ್ಕೆ ಮಕ್ಕಳು ಓದಲಿ ಆಮೇಲೆ ನೋಡೋಣ ಎಂದು ಮಕ್ಕಳನ್ನು ಶಾಲಾ ಕಾಲೇಜುಗಳಿಗೆ ಕಳುಹಿಸಲಾರಂಭಿಸಿದರು. ಹೀಗಾಗಿ ಈಗ ಒಕ್ಕಲಿಗರಲ್ಲಿ ಸಾಕಷ್ಟು ವಿದ್ಯಾವಂತರಿದ್ದಾರೆ ಎಂದು ಹೇಳುಬಹುದು. ಇವರಲ್ಲಿ ಬಹು ಮಂದಿ ಬಿ.ಎ., ಬಿ.ಎಸ್ಸಿ.ಗಳು ಮತ್ತು ಎಲ್.ಎಲ್.ಬಿಗಳು. ಇತ್ತೀಚಿನ ವರೆಗೆ ಇಂಥ ಪದವಿಗಳಿಗೆ ನಮ್ಮವರು ಆಸೆಪಡುತ್ತಿದ್ದುದಕ್ಕೆ ಕಾರಣವಿಲ್ಲದೆಯೂ ಇಲ್ಲ. ಹಳ್ಳಿಗರಿಗೆ ಹೆಚ್ಚಾಗಿ ಪರಿಚಯ ವಿದ್ದವರೆಂದರೆ ಲಾಯರುಗಳು ಮತ್ತು ಅವರಿಗಿದ್ದ ಒಳ್ಳೆಯ ಸಂಪಾದನೆ. ಲಾಯರುಗಳು ಹೆಚ್ಚಾಗಿ ರಾಜಕೀಯ ಮುಖಂಡರಾಗಿ ಸ್ಥಾನಮಾನ ಗಳಿಸುತ್ತಿದ್ದರಿಂದ ಸ್ವಾಭಾವಿಕವಾಗಿ ರೈತರು ತಮ್ಮ ಮಕ್ಕಳನ್ನು ವಕೀಲರಾಗಿ ಮಾಡುವ ಮನಸ್ಸು ಮಾಡಿದರು. ಲಾಯರ್‌ಗಳನ್ನು ಬಿಟ್ಟರೆ, ಹಳ್ಳಿಯವರ ಸಂಪರ್ಕ ಹೆಚ್ಚಾಗಿ ಷೇಕದಾರ್ ಮತ್ತು ಅಮಲ್ದಾರ್ ಅವರೊಡನೆ. ಅವರು ಕುದುರೆಯ ಮೇಲೆ ಧಿಮಾಕಿನಿಂದ ಊರಿಗೆ ಬಂದಾಗ ಊರಿನ ಪಟೇಲ್ ಶ್ಯಾನುಭೋಗರೂ, ಜನರೂ ಅವರನ್ನು ಕಾಣುತ್ತಿದ್ದ ರೀತಿಯನ್ನು ಕಂಡ ಹಳ್ಳಿಯ ಜನ ಅಂಥ ಒಂದು ಕೆಲಸ ನನ್ನ ಮಗನಿಗೂ ಸಿಕ್ಕಬೇಕೆಂದು ಆಸೆಪಡುತ್ತಿದ್ದುದು ಸ್ವಾಭಾವಿಕ. ಡಾಕ್ಟರುಗಳು, ಇಂಜಿನಿಯರ್‌ಗಳು, ವ್ಯವಸಾಯ ಮತ್ತು ಸೊಸೈಟಿ ಇಲಾಖೆ ಅಧಿಕಾರಿಗಳು ಹಳ್ಳಿಯವರ ಕಣ್ಣಿಗೆ ಬಿದ್ದದ್ದು ಇತ್ತೀಚೆಗೆ. ಅಧಿಕಾರವಿಲ್ಲದ ಆ ಅಧಿಕಾರಿಗಳೂ ಅಷ್ಟು ಹಳ್ಳಿಯವರಿಗೆ ಹಿಡಿಸಲಿಲ್ಲ. ಈಗಲೂ, ನನ್ನ ಮಗ ತಹಶೀಲ್ದಾರನಾಗಬೇಕು, ಅಸಿಸ್ಟೆಂಟ್ ಕಮೀಷನರ ನಾಗಬೇಕು, ಡೆಪ್ಯೂಟಿ ಕಮೀಷನರ್ ಆಗಬೇಕು ಎಂದು ಹಳ್ಳಿಯವರು ಹಂಬಲಿಸುತ್ತಾರೆಯೇ ವಿನಃ ಇಂಜಿನಿಯರ್ ಆಗಬೇಕು, ಡಾಕ್ಟರಾಗಬೇಕು ಎಂದು ಹಂಬಲಿಸುವುದಿಲ್ಲ.

ಸರ್ಕಾರಿ ಆಫಿಸರ್ ಆಗದಿದ್ದರೂ ವಕೀಲನಾದರೂ ಆಗಬೇಕೆಂದು ಆಸೆಪಡುವುದಿಲ್ಲ. ಸರಿಯಾಗಿ ಮಾಡಿದರೆ ಅದರಲ್ಲೂ ಸಂಪಾದನೆ ಇದೆ. ಅನೇಕ ಜನ ಎಲ್ಲೆಲ್ಲಿಂದಲೋ ಬೆಂಗಳೂರು ಮುಂತಾದ ಪಟ್ಟಣಗಳಿಗೆ ಬಂದು ಭಾರಿ ಸಂಪಾದನೆ ಮಾಡುತ್ತಿದ್ದಾರೆ. ಆದರೆ, ನಮ್ಮ ವಕೀಲರು ಒಂದು ಬೋರ್ಡು ಹಾಕುವುದರಲ್ಲಿ ತಮ್ಮ ವಕೀಲಿ ಕೆಲಸ ಮುಗಿಸಿ, ರಾಜಕಾರಣಿಗಳಾಗಿ ಎಂ.ಎಲ್.ಎ., ಎಂ.ಪಿ. ಮತ್ತು ಮಂತ್ರಿಗಳಾಗಬೇಕೆಂದು ಆಸೆಪಡುತ್ತಾರೆ. ರಾಜಕೀಯ, ವಕೀಲಿತನ ಎರಡನ್ನೂ ಒಟ್ಟಿಗೆ ಮಾಡಲು ಸಾಧ್ಯವಿಲ್ಲ. ಬರೇ ಬೋರ್ಡು ನೋಡಿ ಕಕ್ಷಿದಾರರು ಬರುವುದಿಲ್ಲ. ಕೋರ್ಟಿಗೆ ಸರಿಯಾಗಿ ಹೋಗುತ್ತಾರೆಯೇ ಇಲ್ಲವೇ ಇವನ್ನು ಹೆಚ್ಚಾಗಿ ಗಮನಿಸುತ್ತಾರೆ. ಆದರೆ, ಇಂತಹ ಒಕ್ಕಲಿಗ ವಕೀಲರು ಬಹಳ ಕಡಮೆ.

ಇತ್ತೀಚೆಗೆ, ಅಂದರೆ ಎರಡು ಮೂರು ದಶಕಗಳಿಂದ ಪರಿಸ್ಥಿತಿ ಬದಲಾಗಿದೆ. ಬೇಕಾಗಿಯೋ, ಬೇಡವಾಗಿಯೋ, ನಮ್ಮ ಯುವಕರು ಬಿ.ಇ., ಎಂ.ಬಿ.ಬಿ.ಎಸ್., ಮುಂತಾದ ತಾಂತ್ರಿಕ ವಿದ್ಯೆಗಳ ಕಡೆ ಗಮನ ಹರಿಸಿದ್ದಾರೆ. ಬರೇ ಬಿ.ಎ., ಬಿ.ಎಸ್ಸಿ. ಗಳಿಂದ ತೃಪ್ತರಾಗದೆ, ಎಂ.ಎ., ಎಂ.ಎಸ್ಸಿ.ಗಳನ್ನೂ ಓದಲಾರಭಿಸಿದ್ದಾರೆ. ಒಕ್ಕಲಿಗರಿಗೆ ವಿದ್ಯೆ ಹತ್ತುವುದಿಲ್ಲ ಎಂಬ ಮಾತಿದೆ. ಇದು ಕೊಂಚಮಟ್ಟಿಗೆ ನಿಜ. ಎಲ್ಲಿಯವರೆಗೆ ಹಳ್ಳಿಯಲ್ಲೇ ಇದ್ದು, ರೈತಾಪಿ ಕೆಲಸ ಮಾಡಿಕೊಂಡು ಶಾಲಾ ಕಾಲೇಜುಗಳಿಗೆ ಹೋಗುತ್ತಾರೋ ಅಂತಹ ಹುಡುಗರು ಅನಿವಾರ್ಯವಾಗಿ ವಿದ್ಯೆಯಲ್ಲಿ ಹಿಂದೆ ಬೀಳುತ್ತಾರೆ. ಏಕೆಂದರೆ, ರೈತಾಪಿ ಕೆಲಸದ ಜೊತೆಗೆ ಓದುವುದು ಕಷ್ಟ. ಆದರೆ ಯಾರು ಊರು ಬಿಟ್ಟು ಪಟ್ಟಣ ಸೇರಿ, ಹಾಸ್ಟಲ್‌ಗಳಲ್ಲಿ ಇದ್ದುಕೊಂಡು ಓದಿದರೋ ಅವರೆಲ್ಲಾ ಸಾಕಷ್ಟು ಮೇಲ್ತರಗತಿಯಲ್ಲಿ ಪಾಸಾಗಿದ್ದಾರೆ ಎನ್ನಬಹುದು. ಪಾಸಾಗಿರುವುದು ಅಷ್ಟೇ ಅಲ್ಲ. ಅವರು ಪಡೆದ ಹುದ್ದೆಗಳಲ್ಲಿ ಹೆಸರು ಗಳಿಸಿದ್ದಾರೆ. ಇಂದು ವೈದ್ಯಕೀಯ ರಂಗದಲ್ಲಿ ಹೆಸರು ಗಳಿಸಿರುವವರು ಹೆಚ್ಚಾಗಿ ಕೃಷಿ ಸಮಾಜದಿಂದ ಬಂದವರೆಂದರೆ ಅಚ್ಚರಿಯಾಗಬಹುದು. ಮಂಗಳೂರು ಕಡೆಯ ಬಂಟರಾಗಲಿ, ಈ ಕಡೆಯ ಎಲ್ಲಾ ಜಾತಿಯ ಒಕ್ಕಲಿಗರಾಗಲಿ, ಒಬ್ಬೊಬ್ಬರೂ ಹೆಸರಾಂತ ವೈದ್ಯರಾಗಿದ್ದಾರೆ. ಅಷ್ಟೇ ಅಲ್ಲ, ಪರದೇಶಗಳಿಗೂ ಹೋಗಿ ಅಲ್ಲಿ ಹೆಸರುಗಳಿಸಿದ್ದಾರೆ. ವೈದ್ಯರೇ ಏಕೆ, ಒಕ್ಕಲಿಗರ ಇಂಜಿನಿಯರುಗಳು, ಆಡಳಿತ ಅಧಿಕಾರಿಗಳು, ಬೇರೆ ತಾಂತ್ರಿಕ ತಜ್ಞರು ಎತ್ತಿ ಹೇಳುವಷ್ಟು ಕೀರ್ತಿ ಪಡೆದಿದ್ದಾರೆ. ದಕ್ಷತೆಗೂ ನಿಷ್ಠೆಗೂ ಒಕ್ಕಲಿಗರು ಹೆಸರಾಗಿದ್ದಾರೆ. ಇದು ನಿಜವಾಗಿಯೂ ನಾವು ಸಂತೋಷಪಡಬೇಕಾದ ವಿಷಯ. ಆದರೆ ಇದು ಏನೇನೂ ಸಾಲದು. ಕೇವಲ ಶೇಕಡ ಒಂದರಷ್ಟೂ ಇಂದು ಒಕ್ಕಲಿಗರಲ್ಲಿ ಪದವೀಧರರಿಲ್ಲ. ಇದು ಹತ್ತು ಪಟ್ಟೋ ಇಪ್ಪತ್ತುಪಟ್ಟೋ ಹೆಚ್ಚಿದರೆ, ಎಂತೆಂತಹ ಪ್ರತಿಭಾವಂತರು ನಮಗೆ ಸಿಗಬಹುದು!

ತಾಂತ್ರಿಕ ವಿದ್ಯೆ ಎಂದರೆ ಬಿ.ಇ. ಮತ್ತು ಎಂ.ಬಿ.ಬಿ.ಎಸ್.ಗಳಷ್ಟೇ ಎಂದು ಹಳ್ಳಿಯ ಜನರಿಗಷ್ಟೇ ಅಲ್ಲ, ಯುಕರಿಗೂ ಮೆಚ್ಚಿಗೆಯಾಗುವುದು. ಆದರೆ ತಾಂತ್ರಿಕ ವಿದ್ಯೆ ಎಷ್ಟು ವ್ಯಾಪಕವಾದುದು ಎಂಬುದರ ಅರಿವೇ ನಮ್ಮವರಿಗೆ ಇನ್ನೂ ಬಂದಿಲ್ಲ. ಬಂದಿದ್ದರೂ ಅವೆಲ್ಲ ಅಷ್ಟು ಗೌರವಯುತವಾದ ವಿದ್ಯೆಗಳಲ್ಲ ಎಂಬ ತಪ್ಪು ಭಾವನೆ ಇದೆ. ಪಾಲಿಟೆಕ್ನಿಕ್, ಐ.ಟಿ.ಐ.ಗಳು ಕೊಡುವ ಇಪ್ಪತ್ತು ಮುವತ್ತು ಬಗೆಯ ತಾಂತ್ರಿಕ ವಿದ್ಯೆಗಳಿಂದ ಸುಲಭವಾಗಿ ಜೀವನ ಸಂಪಾದಿಸಬಹುದಾಗಿದೆ. ಆದ್ಯಾಗ್ಯೂ ಅದರ ಕಡೆ ಗಮನ ಇಲ್ಲ. ಒಬ್ಬ ಬಿ.ಇ. ಮಾಡಿದವನು ಸಂಪಾದಿಸಬಹುದಾದ್ದಕ್ಕಿಂತ ಹೆಚ್ಚು ಹಣವನ್ನು ವೈರ್‌ಮನ್, ಫಿಟ್ಟರ್, ಮಿಷನ್‌ಮನ್, ಎಲೆಕ್ಟ್ರೀಷಿಯನ್, ಬಡಗಿ, ಕಮ್ಮಾರ ಇತ್ಯಾದಿ ವೃತ್ತಿ ಶಿಕ್ಷಣಗಳಿಂದ ಸಂಪಾದಿಸಬಹುದು. ಈಗ ಗ್ರಾಮಾಂತರ ಪ್ರದೇಶಗಳಲ್ಲಿಯೂ ಇಂಥವರು ಬೇಕಾಗಿದ್ದಾರೆ. ಹಳ್ಳಿಹಳ್ಳಿಗಳಲ್ಲಿ ವಿದ್ಯುಚ್ಛಕ್ತಿ, ಪಂಪ್‌ಸೆಟ್, ರೇಡಿಯೋ, ಟ್ರಾನ್ಸಿಸ್ಟರ್, ಟ್ರಾಕ್ಟರ್, ಸ್ಕೂಟರ್, ಮೋಟಾರ್ ಸೈಕಲ್, ಕಾರು ಇತ್ಯಾದಿ ಸೌಕರ್ಯಗಳೂ ಯಂತ್ರಗಳೂ ಇವೆ. ಇವುಗಳ ರಿಪೇರಿ ಇತ್ಯಾದಿ ಕೆಲಸಗಳಿಗೆ ಯಾವತ್ತಾದರೂ ಜನ ಬೇಕು. Early bird catehes the worm ಎಂದ ಹಾಗೆ, ಯಾರು ಮೊದಲು ಹಳ್ಳಿಗಳಲ್ಲಿ ತಮ್ಮ ಕೆಲಸ ಆರಂಭಿಸುತ್ತಾರೋ ಅವರಿಗೆ ಸಂಪಾದನೆ ಗ್ಯಾರಂಟಿ.

ಹಳ್ಳಿಯಲ್ಲಿ ಹಿಂದೆ ಇದ್ದ ಬಡಗಿ ಕಮ್ಮಾರರುಗಳು ಈಗ ಇಲ್ಲ. ಏನಾದರೂ ಮಾಡಿಸಬೇಕೆಂದರೆ, ದೊಡ್ಡ ದೊಡ್ಡ ಪಟ್ಟಣಗಳಿಗೇ ಬರಬೇಕು. ಜನ ಈಗ ಕುರ್ಚಿ, ಬೆಂಚು, ಮಂಚ, ಸೋಫಾಗಳ ಮೇಲೆ ಕೂರಬೇಕೆಂದು ಆಸೆಪಡುತ್ತಿದ್ದಾರೆ. ಆದರೆ, ಇವುಗಳು ದೊರಕುವುದು ನಗರದಂತಹ ದೊಡ್ಡ ಪಟ್ಟಣಗಳಲ್ಲಿ. ಅವರಿಗೇ ಹಳ್ಳಿಯ ದುಡ್ಡು ಹೋಗುತ್ತಿರುವುದು. ನಮ್ಮ ಯುವಕರು ಏಕೆ ಇವುಗಳ ತಯಾರಿ, ವ್ಯಾಪಾರ ಇವುಗಳಿಗೆ ಕೈಹಾಕಬಾರದು?

ಆಯಾ ಕಸಬನ್ನು ಆಯಾ ಜಾತಿಯವರೇ ಮಾಡುತ್ತಿದ್ದ ಕಾಲ ಹೋಯಿತು. ಯಾರು ಏನು ಬೇಕಾದರೂ ಮಾಡಬಹುದು, ಮಾಡುತ್ತಿದ್ದಾರೆ. ಬ್ರಾಹ್ಮಣರು ಮಾಡದ ಕಸಬಿಲ್ಲ ಈಗ. ಷೂ ಅಂಗಡಿ ಇಟ್ಟಿದ್ದಾರೆ, ವಾಷಿಂಗ್ ಏಜೆನ್ಸಿ ಇಟ್ಟಿದ್ದಾರೆ. ಆಟೋ ಓಡಿಸುತ್ತಾರೆ, ವ್ಯಾಪಾರ ಮಾಡುತ್ತಾರೆ. ಇದೆಲ್ಲ ಅವರಿಗೆ ಒಂದು ಕಾಲದಲ್ಲಿ ನಿಷಿದ್ಧ. ಅಂಥವರೇ ಇಂತಹ ಕಸಬುಗಳನ್ನು ಮಾಡುತ್ತಾರೆಂದರೆ ಬೇರೆಯವರು ಏಕೆ ಹಿಂಜರಿಯಬೇಕು? ಆದ್ದರಿಂದ ಅದು ಹೆಚ್ಚು, ಇದು ಕಡಮೆ ಎಂಬ ಭಾವನೆ ಬಿಟ್ಟು, ಹಣ ಗಳಿಸುವ ಯಾವ ಕೆಲಸವಾದರೂ ಸರಿ, ಮಾಡಲು ಒಕ್ಕಲಿಗ ಹುಡುಗರು ಸಿದ್ಧರಾಗಬೇಕು.

ವ್ಯಾಪಾರದಲ್ಲಿ ಒಕ್ಕಲಿಗರು ಬಹಳ ಹಿಂದೆ ಬಿದಿದ್ದಾರೆ. ಕೇರಳದವರು, ಗುಜರಾತಿಗಳು, ಸಿಂಧಿಗಳು ಹಾಗೂ ತಮಿಳರು ಬೆಂಗಳೂರಿನ ಇಡೀ ವ್ಯಾಪಾರವನ್ನು ತಮ್ಮ ಕೈಯಲ್ಲಿಟ್ಟುಕೊಂಡಿದ್ದಾರೆ. ಬೆಂಗಳೂರಿನಲ್ಲಿ ಅಷ್ಟೇ ಅಲ್ಲ, ಸಣ್ಣ ಪುಟ್ಟ ನಗರಗಳಲ್ಲಿಯೂ ಅವರೇ ದೊಡ್ಡ ವ್ಯಾಪಾರಿಗಳು. ಸಣ್ಣ ಬೀಡಿ ಅಂಗಡಿಯಿಂದ ಆರಂಭಿಸಿ, ಇಡೀ ಊರನ್ನೇ ಕೊಂಡುಕೊಳ್ಳುವಷ್ಟು ಸಾಹುಕಾರರಾಗಿದ್ದಾರೆ. ಅಂಥರಿಗೆ ಬೇಕಾದ ಜಾಗ ಇತ್ಯಾದಿಗಳನ್ನು ಒದಗಿಸುವುದು ನಮ್ಮವರೆ. ಆದರೆ, ಒಬ್ಬ ಒಕ್ಕಲಿಗ ಮಾಡಲು ಮುಂದಾದರೆ ಅಸೂಯೆಪಡುತ್ತಾರೆ. ತಮ್ಮ ಪಾರ್ಟಿ ವೈಷಮ್ಯಗಳನ್ನು ಮುದೆಮಾಡುತ್ತಾರೆ. ಅಸೂಯೆ ಒಕ್ಕಲಿಗರ ಹುಟ್ಟುಗುಣ. ಇದು ಹೋಗದ ಹೊರತು ಅವರಿಗೆ ಏಳಿಗೆ ಎಂಬುದೇ ಇಲ್ಲ. ಇಂತಹ ಅಸೂಯೆ ವೈಷಮ್ಯಗಳನ್ನು ದೂರ ಇರಿಸಿ. ಮುಂದೆ ಬರುವ ಯುವಕರಿಗೆ ಸಹಾಯಮಾಡುವ ಬುದ್ಧಿ ಕಲಿಯಬೇಕು. ಹಾಗೆ ಆದರೆ. ಈಗ ನಿರುದ್ಯೋಗಿಗಳಾಗಿರುವ ಅನೇಕ ವಿದ್ಯಾವಂತರು ತಮ್ಮ ಜೀವನವನ್ನು ತಾವೇ ನಡೆಸಲು ಸಾಧ್ಯವಾಗುವುದಲ್ಲದೆ. ಹತ್ತಾರು ಜನರಿಗೆ ಜೀವನ ದೊರಕಿಸಿಕೊಟ್ಟಂತಾಗುತ್ತದೆ.

ಹೋಟೆಲ್, ರೆಸ್ಟೋರೆಂಟ್ ಉದ್ಯಮ ಭಾರಿ ಉದ್ಯಮ. ನಮ್ಮವರು ಇದಕ್ಕೆ ಅಷ್ಟಾಗಿ ಕೈಹಾಕಿಯೇ ಇಲ್ಲ. ಅದು ಈಗ ಉಡುಪಿಯವರಿಗೆ ಮೀಸಲಾಗಿದೆ. ಆದರೆ, ಮಂಗಳೂರು ಕಡೆಯ ಬಂಟರು ಉಡುಪಿ ಬ್ರಾಹ್ಮಣರನ್ನೂ ಮೀರಿಸಿದ್ದಾರೆ. ಬೊಂಬಾಯಿಯಲ್ಲಿ ಈಗ ಐದಾರು ಸಾವಿರ ಬಂಟರ ಹೋಟೆಲ್‌ಗಳಿವೆ. ಅಂದರೆ, ಸರಿಯಾಗಿ ನಡೆಸಿದರೆ ಯಾರಾದರೂ ಹೊಟೆಲ್ ನಡೆಸಬಹುದು ಎಂದಾಯಿತು. ಮಂಗಳೂರು ಉಡುಪಿಯವರ ಹೋಟೇಲುಗಳು ಮುಂದೆ ಬಂದಿರುವುದಕ್ಕೆ ಕಾರಣ ಅವುಗಳಲ್ಲಿ ನೇಮಕಗೊಂಡ ಅಡಿಗೆಯವರು ಮತ್ತು ಮಾಣಿಗಳು. ಇವರೆಲ್ಲ ಬಹುಮಟ್ಟಿಗೆ ಆ ಕಡೆಯವರೇ. ನಂಬಿಕಸ್ತರಾಗಿ ನಿಷ್ಠೆಯಿಂದ ಕೆಲಸ ಮಾಡುವ ಜನ ಅವರು. ಅವರನ್ನು ಮಾಲೀಕರೂ ಚೆನ್ನಾಗಿ ನೋಡಿಕೊಳ್ಳುತ್ತಾರೆ. ಹೊಟೇಲಿನಲ್ಲಿ ದೋಸೆ ಇಡ್ಲಿಗೆ ಅಕ್ಕಿ ಆಡಿಸುತ್ತಿದ್ದವರು ಇಂದು ಪಂಚ ತಾರಾ ಹೊಟೇಲು ಮಾಲೀಕರಾಗಿದ್ದಾರೆ. ಇಂತಹ ಉದ್ಯಮಕ್ಕೆ ಲೋಟ ತಟ್ಟೆ ತೊಳೆದುಕೊಂಡಿರುವ ನಮ್ಮ ಒಕ್ಕಲಿಗರೂ ಕೈ ಹಾಕಬೇಕು. ಈ ಉದ್ಯಮ ಮುಂದೆ ದೊಡ್ಡದಾಗಿ ಬೆಳೆಯುತ್ತದೆ. ಇನ್ನು ಮುಂದೆ ಪಟ್ಟಣಗಳಲ್ಲಿ ಬಹು ಜನ ಮಧ್ಯಾಹ್ನದ ಊಟ ಮನೆಯಲ್ಲಿ ಮಾಡದೆ, ಹೊಟೇಲಿನಲ್ಲಿಯೇ ಮಾಡಬೇಕಾಗುತ್ತದೆ. ಪಟ್ಟಣಗಳಿಗೆ ಬರುವ ಅಸಂಖ್ಯಾತ ಜನ ಹೋಟೆನಲ್ಲಿಯೇ ಬಿಡಾರ ಮಾಡಬೇಕಾಗುತ್ತದೆ. ಒಕ್ಕಲಿಗರು ಇದನ್ನು ಸೂಕ್ಷ್ಮವಾಗಿ ಅರಿತುಕೊಂಡು ನಿಷ್ಠಾವಂತರನ್ನು ನೇಮಿಸಿಕೊಂಡು ಸಣ್ಣದಾಗಿಯಾದರೂ ಈ ಉದ್ಯಮ ಕೈಗೊಳ್ಳಬೇಕು. ಹೋಟೇಲ್ ಉದ್ಯಮಕ್ಕೆ ಪೋಷಕವಾದುದ್ದು ಪ್ರವಾಸೋದ್ಯಮ ಇದರಲ್ಲೂ ನಮ್ಮ ವಿದ್ಯಾವಂತ ಯುವಕರು ಕೈ ಹಾಕಬೇಕು.

ಇನ್ನು ಕಾರ್ಖಾನೆಗಳಲ್ಲಿ ಸಿಗಬಹುದಾದ ಸಣ್ಣ ಕೆಲಸವಾಗಲಿ, ದೊಡ್ಡ ಕೆಲಸವಾಗಲಿ ಸೇರಲು ಹಿಂಜರಿಯಬಾರದು. ತಾವೇ ಸಣ್ಣಪುಟ್ಟ ಕೈಗಾರಿಕೆಗಳನ್ನು ಸಣ್ಣದಾಗಿ ಆರಂಭಿಸಿ, ದೊಡ್ಡದಾಗಿ ಬೆಳೆಸುವುದನ್ನು ಕಲಿಯಬೇಕು. ಕೈಗಾರಿಕೆಗಳಲ್ಲಿ ಒಕ್ಕಲಿಗರು ಬಹಳ ಹಿಂದಾಗಿದ್ದಾರೆ. ಇದಕ್ಕೆ ಕಾರಣವೂ ಉಂಟು. ಅವುಗಳ ಆಳ ಅಗಲಗಳನ್ನು ತಿಳಿಯದ ಬೇಸಾಯ ಮಾಡಿಕೊಂಡಿರುವ ಜನ ಹೆದರುವುದು ಸ್ವಾಭಾವಿಕವೇ, ಆದರೆ ನಾಲ್ಕಾರು ವರುಷಗಳ ಅನುಭವ ಸಾಕು. ಅವನ್ನು ನಡೆಸಲು ಬೇಕಾದ ಧೈರ್ಯ ಸ್ಥೈರ್ಯಗಳನ್ನು ಇವರೂ ಪಡೆಯಲು.

ಇದು ಲೆಕ್ಕ ಪತ್ರಗಳ ಸರ್ಕಾರದ ಮಿತಿಯಿಲ್ಲದ ಕಾನೂನು ಕಟ್ಟಳೆಗಳು, ಅವುಗಳಿಂದಾಗಿ ಇಡಬೇಕಾದ ಲೆಕ್ಕ ಪತ್ರಗಳು, ಅವುಗಳ ತಪಾಸಣೆ (Audit ) ಇತ್ಯಾದಿಗಳಲ್ಲಿ ಬೇಕಾದಷ್ಟು ಅವಕಾಶವಿದೆ. ನಮ್ಮಲ್ಲಿ ಎಷ್ಟು ಜನ ಚಾರ್ಟರ್ಡ್ ಅಕೌಂಟೆಂಟುಗಳಿದ್ದಾರೆ? ಬರಬರುತ್ತಾ ಒಂದೊಂದು ತಾಲೂಕಿನಲ್ಲಿ ನಾಲ್ಕಾರು ಚಾರ್ಟರ್ಡ್ ಅಕೌಂಟೆಂಟರುಗಳು ಬೇಕಾಗುತ್ತದೆ ಲೆಕ್ಕ ಪತ್ರ ಬರೆಯುವ ಹತ್ತಾರು ಬಿ.ಕಾಂ.ಪದವೀದರರುಗಳು ಬೇಕಾಗುತ್ತಾರೆ. ಇಂತಹ ವಿದ್ಯೆಗಳನ್ನು ಪಡೆದು ಅದಕ್ಕೆ ತಕ್ಕ ನಿಷ್ಠೆಗಳನ್ನು ರೂಢಿಸಿಕೊಂಡರೆ ತಿಂಗಳಿಗೆ ಏಳೆಂಟು ಸಾವಿರ ರೂಪಾಯಿಗಳ ಸಂಪಾದನೆಗೆ ಕೊರತೆ ಇಲ್ಲ.

ಆಡಳಿತ ಕ್ಷೇತ್ರದಲ್ಲಿ ಕೇಂದ್ರ ಹಾಗೂ ರಾಜ್ಯ ಸಕಾರಿ ಹುದ್ದೆಗಳು ಅಸಂಖ್ಯಾತ. ಅವೆಲ್ಲ ಸ್ಪರ್ಧಾ ಪರೀಕ್ಷೆಗಳ ಮೂಲಕ ಆಯ್ಕೆಯಾಗುತ್ತವೆ. ಸ್ಪರ್ಧಾ ಪರೀಕ್ಷೆಗಳೆಂದರೆ ನಮ್ಮ ಹುಡುಗರು ಹೆದರುತ್ತಾರೆ. ಆದರೆ ಹೆದರುವ ಕಾರಣವಿಲ್ಲ. ಹೆದರದೆ ಆ ಪರೀಕ್ಷೆಗಳಿಗೆ ಕುಳಿತವರು ತೇರ್ಗಡೆಯಾಗಿದ್ದಾರೆ. ಐ.ಎ.ಎಸ್.ಅಧಿಕಾರಿಗಳು ಇಲ್ಲಿಯವರೆಗೆ ಇದ್ದವರು ಸರ್ವಿಸ್‌ನಿಂದ ಬಂದವರು ಅವರೆಲ್ಲ ನಿವೃತ್ತಿಯಾಗಿಬಿಟ್ಟಿದ್ದಾರೆ. ಹೊಸಬರು ಮುಂದೆ ಬರುತ್ತಿಲ್ಲ ಹೇಗೇ ಆದರೂ ಆಡಳಿತಾಧಿಕಾರಿಗಳೇ ದೇಶ ಆಳುವವರು.

ಬ್ಯಾಂಕ್ ಉದ್ಯಮದಲ್ಲಿ ಒಕ್ಕಲಿಗರು ಕೈ ಹಾಕಿಯೇ ಇಲ್ಲ. ಬ್ಯಾಂಕ್ ಉದ್ಯಮದಲ್ಲಿ ದೊರೆಯಬಹುದಾದ ಉದ್ಯೋಗಾವಕಾಶಗಳನ್ನು ಉಪಯೋಗಿಸಿಕೊಂಡಿಲ್ಲ. ಅಂಚೆ, ತಂತಿ ಇಲಾಖೆಗಳಲ್ಲಿ ರೈಲ್ವೆ ಇಲಾಖೆಯಲ್ಲಿ ಒಕ್ಕಲಿಗರು ಇದ್ದಾರೋ ಇಲ್ಲವೋ ಗೊತ್ತಿಲ್ಲ. ಆಸ್ಪತ್ರೆಗಳಲ್ಲಿ ದಾದಿಯರಾಗಿ ಒಕ್ಕಲಿಗ ಹೆಣ್ಣುಮಕ್ಕಳು ಇದ್ದಂತೆ ಕಾಣುವುದಿಲ್ಲ. ಸಂಗೀತ, ನೃತ್ಯ, ನಾಟಕ, ಚಿತ್ರಕಲೆ ಇವು ಒಕ್ಕಲಿಗರಿಗೆ ಒಗ್ಗಿಯೇ ಇಲ್ಲ. ಪ್ರತಿಭಾವಂತ ಯುವಕ ಯುವತಿಯರಿಗೆ ಇವುಗಳಲ್ಲಿ ತಮ್ಮ ತಮ್ಮ ಹಳ್ಳಿಗಳಲ್ಲಿ ಶಿಶುವಿಹಾರಗಳನ್ನು ಸ್ಥಾಪಿಸಿ ಮಾಡಬಹುದಾದ ಸೇವೆಗೆ ಬೇಕಾದಷ್ಟು ಅವಕಾಶ ಉಂಟು, ಈಗ ಮಂಗಳೂರಿಗೆ ಮೀಸಲಾಗಿರುವ ಬೀಡಿ ಕಟ್ಟುವ ಉದ್ಯಮವನ್ನೂ ಬಯಲು ಸೀಮೆಯಲ್ಲಿಯೂ ಆರಂಭಿಸಬಹುದು. ಇದರಿಂದ ಕೆಲಸವಿಲ್ಲದೆ ಕುಳಿತು ಹಳ್ಳಿಯ ಹೆಂಗಸರು ಗಂಡಸರಿಗೆ ನಾಲ್ಕಾರು ರೂಪಾಯಿ ಸಂಪಾದಿಸುವ ಅವಕಾಶ ಸಿಕ್ಕಿದಂತಾಗುತ್ತದೆ. ಈಗ ಎಲ್ಲರೂ ಮುದ್ರಣ ಮಾಡಿಸುವ ಅಭ್ಯಾಸ ಮಾಡಿಕೊಂಡಿದ್ದಾರೆ. ಈ ಮುದ್ರಣ ಮಾಡಿಸುವ ಅಭ್ಯಾಸ ಮಾಡಿಕೊಂಡಿದ್ದಾರೆ. ಇದರ ಜೊತೆಗೆ ಕಂಪ್ಯೂಟರ್ ಶಿಕ್ಷಣಕ್ಕೆ ಹೆಚ್ಚಿನ ಗಮನ ನೀಡಬೇಕಾಗಿದೆ.

ಈ ಮೇಲ್ಕಂಡ ವೃತ್ತಿಗಳಲ್ಲಿ ತರಬೇತಿ ಕೊಡುವ, ಶಿಕ್ಷಣ ನೀಡುವ ಸಂಸ್ಥೆಗಳನ್ನು ಸೇರಿ ಅವನ್ನು ಕಲಿಯಬೇಕು. ತಕ್ಕ ಶಿಕ್ಷಣವಿಲ್ಲದೆ ಹೋದರೆ ಅವನ್ನು ನಡೆಸುವ ಧೈರ್ಯ ಬರುವುದೂ ಕಷ್ಟ.

ಇನ್ನು ಒಕ್ಕಲಿಗರು ಹೆಸರೇ ಕೇಳದ ಕೆಲವು ಕ್ಷೇತ್ರಗಳುಂಟು. ಭೂಸೇನೆ, ವಾಯುಸೇನೆ, ನೌಕಾಸೇನೆಗಳಲ್ಲಿ ಒಕ್ಕಲಿಗರು ಇಲ್ಲವೇ ಇಲ್ಲ. ಸೈನ್ಯ ಎಂದರೆ ಹೆದರಿ ನಡುಗಿಬಿಡುತ್ತಾರೆ ಈ ಜನ. ಸೈನ್ಯಕ್ಕೆ ಸೇರಿದವರೆಲ್ಲ ಸಾಯುತ್ತಾರೆ

ಎಂಬುದೇ ಅವರ ತೀರ್ಮಾನ, ಸಾಯುವವರು ಎಲ್ಲಿದ್ದರೂ ಸಾಯುತ್ತಾರೆ. ವಾಯುಸೇನೆಯಲ್ಲಿ ಅಥವಾ ವಿಮಾನಗಳಲ್ಲಿ ಸಾಯುವುದಕ್ಕಿಂತ ಇಪ್ಪತ್ತೈದರಷ್ಟು ಹೆಚ್ಚು ಜನ ಬಸ್ಸು, ರೈಲುಗಳ ಅಪಘಾತದಲ್ಲಿ ಸಾಯುತ್ತಾರೆಂಬ ಅಂಕಿ ಅಂಶಗಳಿಂದ ತಿಳಿಯುತ್ತದೆ. ನೌಕಾಪಡೆಯಲ್ಲಿ ಸೇರಿದವರು ಸಮುದ್ರದಲ್ಲಿ ಮುಳುಗಿ ಸಾಯುತ್ತಾರೆಂಬ ಹೆದರಿಕೆ ಇದೆ. ಆದರೆ ಹಾಗೆ ಸತ್ತವರ ಸಂಖ್ಯೆ ಭಾರಿ ಕಡಿಮೆ. ಸಮುದ್ರದ ಮೇಲೆ ಹಡಗಿನಲ್ಲಿ ಓಡಾಡುವವರು ಸಂಖ್ಯೆಗಿಂತ ಸಾವಿರಪಟ್ಟು ಜನ ಸಮುದ್ರ ದಡದಲ್ಲಿ ಹಾಯಾಗಿದ್ದವರು ಸಮುದ್ರ ಉಕ್ಕಿ ಸತ್ತಿದ್ದಾರೆ. ಸಮುದ್ರತೀರ ಬೇಡ ಒಳನಾಡಿನಲ್ಲಿ ಇದ್ದರೂ ಭೂಕಂಪ, ಬಿರುಗಾಳಿ, ಪ್ರವಾಹ ಇತ್ಯಾದಿಗಳು ಒಂದೆರಡು ನಿಮಿಷಗಳಲ್ಲಿ ಊರಿಗೆ ಊರನ್ನೇ ನೆಲಸಮ ಮಾಡಿಬಿಡುತ್ತವೆ. ಕೆಲವು ಸಾಂಕ್ರಾಮಿಕ ರೋಗಗಳು ಬಂದರೆ ಮನೆಯಲ್ಲಿ ಮಲಗಿದ್ದರೂ ಸಾವು ತಪ್ಪುವುದಿಲ್ಲ. ಆದ್ದರಿಂದ ಸಾವಿಗೆ ಹೆದರದೆ ಯುವಕರು ಮೇಲ್ಕಂಡ ಪಡೆಗಳಲ್ಲಿ ಸೇರಬೇಕು. ಈ ಕಾರ್ಯದಿಂದಾಗಿ ರಾಜ್ಯದ ಹಾಗೂ ರಾಷ್ಟ್ರದ ಪ್ರಗತಿಗೆ ಕೊಡುಗೆ ನೀಡಬೇಕೆನ್ನಬಹುದು.

ಊರು ಬಿಟ್ಟು ಪರಸ್ಥಳಕ್ಕೆ ಹೋಗುವುದೆಂದರೆ ಆಗದು ಒಕ್ಕಲಿಗರಿಗೆ. ಊರಲ್ಲೇ ಗೊಣ್ಣೆಯೊಳಗಿನ ನೊಣದಂತೆ ಒದ್ದಾಡುತ್ತಾ ಇರುತ್ತಾರೆ. ಇದರಿಂದ ಅವರ ಸ್ಥಿತಿ ಖಂಡಿತ ಉತ್ತಮಗೊಳ್ಳುವುದಿಲ್ಲ. ಹಳ್ಳಿಗಳಲ್ಲಿರುವ ಅಸೂಯೆ, ವೈಷಮ್ಯ ಹಾಗೂ ಏನುಮಾಡಲು ಹೊರಟರೂ ಕಾಲು ಹಿಡಿದು ಎಳೆಯುವ, ಹಳ್ಳಿಗರ ಸ್ವಭಾವ ಇವು ಮುಂದೆ ಹೋಗಲು ಅವಕಾಶಕೊಡುವುದಿಲ್ಲ. ಹೀಗಾಗಿ ಕಾರ್ಯತತ್ಪರತೆಯೇ ನಾಶವಾಗಿ ಸೋಮಾರಿತನ ಮುಂದುವರಿಯುತ್ತಿದೆ. ಆದ್ದರಿಂದ, ಯಾರು ಏನಾದರೂ ಹೊಸದು ಮಾಡಬೇಕೆಂಬ ಉತ್ಸಾಹವುಳ್ಳವರಾಗಿದ್ದಾರೋ ಅವರು ಊರು ಬಿಡುವುದೊಳ್ಳೆಯದು, ಹೊಸ ಸ್ಥಳ, ಹೊಸ ವಾತಾವರಣ, ಅವರ ಬುದ್ಧಿಶಕ್ತಿಯ ಉಪಯೋಗಕ್ಕೆ ಅವಕಾಶ ಮಾಡಿಕೊಡುತ್ತದೆ. ತಮ್ಮ ಹುಟ್ಟೂರು ಬಿಟ್ಟು ಭದ್ರಾವತಿ, ನೀಲಗಿರಿ, ಬೊಂಬಾಯಿ, ಬೆಂಗಳೂರು ಈ ಕಡೆ ಹೋದವರ ಸ್ಥಿತಿಯನ್ನು ನೋಡಿದರೆ ಇದು ಮನದಟ್ಟಾಗುತ್ತದೆ. ಅವರಲ್ಲಿ ಒಬ್ಬನಾದರೂ ಕೆಟ್ಟುಹೋದ ಉದಾಹರಣೆ ಇಲ್ಲ. ಅದರ ಬದಲು, ಮೊದಲು ಇದ್ದುದಕ್ಕಿಂತ ಸಾವಿರಪಾಲು ಒಳ್ಳೆಯ ಸ್ಥಿತಿಯಲ್ಲಿದ್ದಾರೆ.

ಊರು ಬಿಟ್ಟಾಕ್ಷಣಕ್ಕೆ ನಾವು ಮುಂದುವರಿಯುತ್ತಿವೆಂದು ಭಾವಿಸಬಾರದು. ಕೆಲವು ಗುಣಗಳನ್ನು ನಾವು ಬೆಳೆಸಿಕೊಳ್ಳಬೇಕಾಗುತ್ತದೆ. ಹಳ್ಳಿಯಲ್ಲಿ ಇಲ್ಲದ ಚಟಗಳು ಪಟ್ಟಣಗಳಲ್ಲಿ ಉಂಟು. ಇವಕ್ಕೆ ಬಲಿಬೀಳಬಾರದು. ಪಟ್ಟಣಗಳ ನಡೆನುಡಿಗಳು ಹಳ್ಳಿಯವರಿಗಿಂತ ಭಿನ್ನವಾಗಿರುತ್ತವೆ. ಹಲವು ಭಾಷೆ, ಹಲವು ಮತ, ಹಲವು ಭಾವನೆಗಳ ಜನ ಇರುತ್ತಾರೆ ಪಟ್ಟಣಗಳಲ್ಲಿ. ನಾವೇ ಬುದ್ಧಿವಂತರೆಂದರೆ ನಮಗಿಂತ ಬುದ್ಧಿವಂತರಾದ ಜನ ಇರುತ್ತಾರೆ ಅಲ್ಲಿ. ಅವರೊಡನೆ ಬೆರೆತು, ಅವರ ಪ್ರೀತಿ ವಿಶ್ವಾಸಗಳಿಸುವುದು ಅವಶ್ಯಕ. ವಿನಯ, ನಿಷ್ಠೆ, ನಂಬಿಕೆ ಇವು ಬಹು ಅವಶ್ಯಕ. ಪಟ್ಟಣ ಸೇರಿದ ಅನೇಕ ಒಕ್ಕಲಿಗ ಯುವಕರು ಕೀಳು ರಾಜಕೀಯ ಪ್ರಭಾವಕ್ಕೆ ಒಳಗಾಗಿ, ಗಂಡಾಗುಂಡಿ ಮಾಡಿ, ಗಡಿಗೆ ತುಪ್ಪ ಕುಡಿಯಲು ಹೊರಟಿದ್ದಾರೆ. ಆದರೆ, ಇದು ತೀರಾ ಅಯೋಗ್ಯವಾದ ನಡತೆ. ಇಂಥವರಿಂದ ದೂರ ಇದ್ದು, ದುಡಿಯುವ ಜನ ಹೇಗೆ ದುಡಿಯುತ್ತಾರೆ, ಅವರ ಗುಣಾವಗುಣಗಳೇನು ಎಂಬುದನ್ನು ಅರಿತು, ತಮ್ಮ ಮುಂದಿನ ಮಾರ್ಗವನ್ನು ಯುವಕರು ರೂಪಿಸಿಕೊಳ್ಳಬೇಕು.

**ಸಂಸ್ಕೃತಿ-ಸಾಹಿತ್ಯ**

ಗ್ರಾಮೀಣ ಸಂಸ್ಕೃತಿ ನಗರ ಸಂಸ್ಕೃತಿಗಿಂತ ಭಿನ್ನವಾದದ್ದು. ಆ ಸಂಸ್ಕೃತಿ ಬಹು ಪ್ರಾಚೀನವಾದದ್ದೂ ಹೌದು. ಇದನ್ನೇ ಜಾನಪದ ಸಂಸ್ಕೃತಿ ಎಂತಲೂ ಕರೆಯುತ್ತಾರೆ. ಈ ಸಂಸ್ಕೃತಿಯನ್ನು ಇಲ್ಲಿಯವರೆಗೆ ಕಾಪಾಡಿಕೊಂಡು

ಬಂದವರು ಕೃಷಿಜೀವನ ನಡೆಸುವ ಎಲ್ಲಾ ಜಾತಿಯ ಒಕ್ಕಲಿಗರು ಮತ್ತು ಈಗ ದಲಿತರೆಂದು ಕರೆಯಲ್ಪಡುವ ಆದಿಕರ್ನಾಟಕರು, ಆದಿದ್ರಾವಿಡರು ಮತ್ತು ಆದಿಜಾಂಬವರು. ಹಳ್ಳಿಗಳಲ್ಲಿ ಕಾಣಬರುವ ಜನಪದ ನುಡಿ, ನಡೆ, ಸಾಹಿತ್ಯ, ಸಂಗೀತ, ನೃತ್ಯ ಇತ್ಯಾದಿಗಳೆಲ್ಲ ಇವರಿಂದ ಸಾವಿರಾರು ವರ್ಷಗಳಿಂದ ಪೋಷಿಸಲ್ಪಡುತ್ತಾ ಬಂದಿವೆ. ಇಂತಹ ಸಂಸ್ಕೃತಿಗೆ ಈಗ ಧಕ್ಕೆ ಒದಗಿದೆ. ಆಧುನಿಕ ವಿದ್ಯಾಭ್ಯಾಸ ಈ ಸಂಸ್ಕೃತಿಯನ್ನು ಅಲ್ಲಗೆಳೆಯುತ್ತಿದೆ. ತಾವು ಏನೋ ಹೊಸದಾಗಿ ಕಲಿತಿದ್ದೇವೆಂಬ ನಾಲ್ಕಕ್ಷರ ಇಂಗ್ಲಿಷ್ ಕಲಿತವರು ಅದರ ಬಗ್ಗೆ ತಾತ್ಸಾರ ತಳೆಯುತ್ತಿದ್ದಾರೆ. ಅಲ್ಲದೆ, ಹಳ್ಳಿಗಳಲ್ಲಿ ಕಾಣಬರುತ್ತಿರುವ ಹೊಸ ಬಗೆಯ ಬಾಳು ಗ್ರಾಮೀಣ ಸಂಸ್ಕೃತಿಯ ಮುಂದುವರಿಕೆಗೆ ಅವಕಾಶ ಮಾಡಿ ಕೊಡುತ್ತಿಲ್ಲ.

ನಮ್ಮ ಹಳ್ಳಿಯ ಸುಖ ಸಂತೋಷಗಳಿಗೆ ಕಾರಣವಾಗಿದ್ದ ಜನಪದ ಹಾಡು, ಪಾಡು, ಕುಣಿತ, ಮೆರತಗಳು ಮಾಯವಾದರೆ, ಹಳ್ಳಿಯ ಬಾಳು ಬಿಕೋ ಎನಿಸುತ್ತದೆ. ಅವುಗಳ ಬದಲು, ಅವುಗಳಿಗಿಂತ ಉತ್ತಮವಾದುದನ್ನು ನಾವುಹಳ್ಳಿಗಳಿಗೆ ಏನನ್ನೂ ಕೊಡಲು ಶಕ್ತರಾಗಿಲ್ಲ. ಹೀಗಿರುವಾಗ, ಆ ಜಾನಪದವನ್ನು ಹೇಗಾದರೂ ಮಾಡಿ ಉಳಿಸುವ ಪ್ರಯತ್ನ ಆಗಬೇಕು. ಇದರಲ್ಲಿ ಒಕ್ಕಲಿಗರ ಪಾತ್ರ ಬಹುಮುಖ್ಯವಾದದ್ದು. ಆದರೆ, ಒಕ್ಕಲಿಗರೇ ಆ ಬಗ್ಗೆ ತಾತ್ಸಾರ ತಾಳಿರುವುದು ಕಂಡುಬರುತ್ತದೆ. ತಮ್ಮದರಲ್ಲಿ ತಮಗೇ ನಂಬಿಕೆ ಇಲ್ಲ. ಹಬ್ಬಹರಿದಿನಗಳನ್ನೂ, ಮದುವೆ ಮುಂಜಿಗಳನ್ನೂ ಹಿಂದಿನ ರೀತಿಯಲ್ಲಿ ನಡೆಸುವ ಆಸಕ್ತಿ ಇಲ್ಲ. ಊರಿನಲ್ಲಿ ಒಗ್ಗಟ್ಟು ಹೋಗಿ, ರಾಜಕೀಯ ಪ್ರವೇಶಿಸಿ, ಗ್ರಾಮೀಣ ಸಂಸ್ಕೃತಿ ತಲೆಯೆತ್ತುವುದು ಕಷ್ಟವಾಗುತ್ತಿದೆ. ದಲಿತರಿಗೂ, ಬೇರೆ ಜಾತಿಯವರಿಗೂ ವೈಷಮ್ಯ ಹುಟ್ಟಿದೆ. ಇದು ಉತ್ತಮ ಬೆಳವಣಿಗೆಯಾಗಿ ಕಂಡುಬರುವುದಿಲ್ಲ.

ಗ್ರಾಮೀಣ ಸಂಸ್ಕೃತಿಯ ಅಧ್ಯಯನಕ್ಕಾಗಿ ಒಕ್ಕಲಿಗರು ಸಾಕಷ್ಟು ಕೆಲಸ ಮಾಡಿದ್ದಾರೆ. ಇದು ಹೆಮ್ಮೆಪಟ್ಟುಕೊಳ್ಳುವ ವಿಷಯ. ಆದರೆ ಮಾಡುವುದು ಬಹಳ ಇದೆ. ಜಾನಪದ ಒಂದು ಸಾಗರ. ಆ ಸಾಗರದ ಆಳ ಅಗಲಗಳನ್ನು ಅರಿತವರಿಲ್ಲ. ಆದ್ದರಿಂದ ಈ ಬಗ್ಗೆ ಹಳ್ಳಿಯಿಂದ ಬಂದ ಒಕ್ಕಲಿಗ ವಿದ್ಯಾವಂತರು ಹೆಚ್ಚು ಹೆಚ್ಚು ಆಸಕ್ತಿವಹಿಸಬೇಕು. ತಾವು ಗ್ರಾಮೀಣ ಸಂಸ್ಕೃತಿಯ ಪ್ರತಿನಿಧಿಗಳು ಎಂದು ಭಾವಿಸಿ, ಅದರ ಉಳಿವಿಗೆ ಬೆಳವಣಿಗೆಗೆ ನೆರವಾಗಬೇಕು. ತಾವು ಓದಿದವರು ಎಂಬ ಬಿಂಕ ಬಡಿವಾರಗಳನ್ನು ಬಿಟ್ಟು, ಹಳ್ಳಿಯವರೊಡನೆ ಸೇರಿ, ಅವರ ಹಾಡು-ಪಾಡು, ಕುಣಿತ-ಮೆರೆತಗಳಲ್ಲಿ ಪಾಲುಗೊಳ್ಳಬೇಕು. ಹಾಗೆ ಆದಾಗಲೇ, ತಾತ್ಸಾರ ಅಸಡ್ಡೆಗಳಿಗೆ ಒಳಗಾಗಿರುವ ಗ್ರಾಮೀಣ ಕಲೆಗಳು ಮತ್ತೆ ಚೇತರಿಸಿಕೊಂಡಾವು.

ಒಕ್ಕಲಿಗರಲ್ಲಿ ಹೆಸರಾದ ಸಾಹಿತಿಗಳಿದ್ದಾರೆ. ಗ್ರಾಮೀಣ ಸಂಸ್ಕೃತಿಯನ್ನು ಕಥೆ, ಕಾದಂಬರಿಗಳ ಮೂಲಕ ಪರಿಚಯಮಾಡಿಕೊಟ್ಟವರಿದ್ದಾರೆ. ಆದರೆ ಸಾಲದು. ಇತ್ತೀಚಿನ ವಿದ್ಯಾವಂತರು ಹೇಳಿಕೊಳ್ಳುವಷ್ಟು ಕೆಲಸಮಾಡುತ್ತಿಲ್ಲ. ಹಳ್ಳಿಯ ಬಾಳಿನ ವಿವಿಧ ಮುಖಗಳ ಪರಿಚಯಮಾಡಿ ಕೊಡುವುದು ಬಹಳ ಇದೆ. ಗ್ರಾಮೀಣ ಭಾಷೆಯ ಸೊಗಡು, ಸವಿ, ಬನಿಗಳನ್ನು ಸಾಹಿತ್ಯದಲ್ಲಿ ಹಿಡಿದಿಡುವ ಕೆಲಸ ಆಗಬೇಕಾಗಿದೆ. ಇವನ್ನೆಲ್ಲಾ ಹಳ್ಳಿಯಿಂದ ಬಂದ ಒಕ್ಕಲಿಗ ವಿದ್ಯಾವಂತರಿಗಿಂತ ಚೆನ್ನಾಗಿ ಬೇರೆಯವರು ಮಾಡಲಾರರು. ಆದ್ದರಿಂದ ಅವರು ತಮ್ಮ ಗ್ರಾಮೀಣ ಅನುಭವ ಮಾಸಿಹೋಗುವ ಮುನ್ನ, ತಮ್ಮ ಬರವಣಿಗೆಯ ಭಾಷೆ ಪುಸ್ತಕದ ಭಾಗವಾಗುವ ಮುನ್ನ, ಗ್ರಾಮೀಣ ಭಾಷೆಯ ನುಡಿಗಟ್ಟನ್ನು ಉಪಯೋಗಿಸಿಕೊಂಡು, ಹಳ್ಳಿಹಳ್ಳಿಗಳಲ್ಲಿ ಹೇರಳವಾಗಿ ಸಿಕ್ಕುವ ವಸ್ತುಗಳನ್ನು

ಬಳಸಿಕೊಂಡು ಕಥೆ, ಕಾದಂಬರಿ, ನಾಟಕ, ಕವನ ಇತ್ಯಾದಿಗಳನ್ನು ರಚಿಸಬೇಕು. ಒಕ್ಕಲಿಗರ ಸಂಘವೂ ಇಂತಹ ಸಾಹಿತ್ಯರಚನೆಗೆ ಸೂಕ್ತ ಪ್ರೋತ್ಸಾಹ ನೀಡಬೇಕು.

**ಸಂಘ-ಸಂಘಟನೆ**

ಮೇಲೆ ಅನೇಕ ವಿಷಯಗಳ ಬಗ್ಗೆ ಪ್ರಸ್ತಾಪ ಮಾಡಲಾಗಿದೆ. ಒಕ್ಕಲಿಗರ ಇಂದಿನ ಸ್ಥಿತಿಯ ಸ್ಥೂಲ ಪರಿಚಯ ಮಾಡಿಕೊಡಲಾಗಿದೆ. ಮುಂದೆ ಅವರು ನಡೆಯಬೇಕಾದ ದಾರಿ ಏನು ಎಂದು ಹೇಳಲಾಗಿದೆ. ಬಲ್ಲವರು ಬಹಳಷ್ಟಿದ್ದಾರೆ. ಅವರ ಅಭಿಪ್ರಾಯಗಳನ್ನೂ ಗಮನಿಸಿ. ಒಕ್ಕಲಿಗರ ಏಳಿಗೆಯ ಬಗ್ಗೆ ಸೂಕ್ತ ಕಾರ್ಯಕ್ರಮ ಹಾಕಿಕೊಳ್ಳಬೇಕಾಗಿದೆ. ಕೇವಲ ಪುಸ್ತಕದಲ್ಲಿ ಬರೆದಿಟ್ಟ ಈ ಅಭಿಪ್ರಾಯಗಳು ಪುಸ್ತಕದಲ್ಲೇ ಉಳಿಯುತ್ತವೆ. ಓದುವವರೇ ಇಲ್ಲದಿರುವಾಗ, ಈ ಅಭಿಪ್ರಾಯಗಳು ಜನರನ್ನು ಮುಟ್ಟುವುದು ಹೇಗೆ ಸಾಧ್ಯ. ನಮ್ಮ ಅನೇಕ ಆಲೋಚನೆಗಳು, ಭಾವನೆಗಳೂ ಜನರನ್ನು ಮುಟ್ಟದಯೇ ಹುಟ್ಟಿದ ಕಡೆಯೇ ಸತ್ತುಹೋಗುತ್ತಿವೆ. ಆದ್ದರಿಂದ, ಇವನ್ನೆಲ್ಲಾ ಜನರಿಗೆ ಮುಟ್ಟಿಸುವ ಕೆಲಸ ಆಗಬೇಕು. ಸಭೆ ಸಮ್ಮೇಳನಗಳು ನಡೆಯಬೇಕು; ಪ್ರಚಾರ ಭಾಷಣಗಳಾಗಬೇಕು; ಜನರ ಅಭಿಪ್ರಾಯವನ್ನು ತಿಳಿದುಕೊಳ್ಳುವ ಕೆಲಸ ಆಗಬೇಕು; ಜನರ ಸಂಘಟನೆ ಆಗಬೇಕು; ನಮ್ಮ ಗುರುಮಠವೂ ಈ ಕೆಲಸದಲ್ಲಿ ನಿರತವಾಗಬೇಕು. ಈ ದೃಷ್ಟಿಯಿಂದ ಈ ಕೆಳಗೆಕಂಡ ಸಂಘ-ಸಂಘಟನೆಗೆ ಕಾರ್ಯಗಳನ್ನು ಸೂಚಿಸಬಯಸುತ್ತೇನೆ;

೧. ಒಕ್ಕಲಿಗರ ಸಂಘ ಈಗ ತನ್ನ ಚಟುವಟಿಕೆಗಳನ್ನು ನಗರಕ್ಕೆ ಮೀಸಲಾಗಿಟ್ಟುಕೊಂಡಿದೆ. ಹಳ್ಳಿಗಳಿಗೆ ಅದಿನ್ನೂ ಹೋಗಿಯೇ ಇಲ್ಲ. ಇನ್ನು ಮುಂದೆ, ಅದು ತಾಲ್ಲೂಕು ಮಟ್ಟದಲ್ಲಿ ಹಾಗೂ ಜಿಲ್ಲಾ ಮಟ್ಟದಲ್ಲಿ ಸಂಘಗಳನ್ನು ಸ್ಥಾಪಿಸಿ, ಅವುಗಳ ಮೂಲಕ ಈ ಕೆಲಸಗಳನ್ನು ಮಾಡಬೆಕು. ಒಕ್ಕಲಿಗರು ಆರಂಭಶೂರರೆಂಬುದು ಬಹುಮಟ್ಟಿಗೆ ನಿಜ. ಇನ್ನು ಮುಂದಾದರೂ ಈ ಹೆಸರು ಬರುವುದು ಬೇಡ. ಹಿಡಿದ ಕೆಲಸವನ್ನು ಪಟ್ಟುಹಿಡಿದು ಮಾಡುವುದನ್ನು ಕಲಿಯಬೇಕಾಗಿದೆ. ಇದಕ್ಕೆಲ್ಲಾ ನಿಷ್ಠಾವಂತರಾದ ಜನ ಬೇಕು. ಆದರೆ, ನಿಷ್ಠೆಯ ಅಭಾವ ಎದ್ದು ಕಾಣುತ್ತಿದೆ. ವಸೂಲು ಮಾಡಿದ ದುಡ್ಡಿಗೆ ಲೆಕ್ಕ ಪತ್ರ ಇಲ್ಲ. ಇಂಥವಕ್ಕೆ ಅವಕಾಶ ಕೊಡಬಾರದು.

೨. ಬೆಂಗಳೂರಿನಲ್ಲಿರುವ ಸಂಘ ಹೆಚ್ಚು ಪ್ರಾತಿನಿಧಿಕವಾಗಬೇಕು. ಈ ಸಂಘದ ಮುಖಂಡತ್ವ ಸರಿಯಾದವರ ಕೈಯಲ್ಲಿರಬೇಕು. ಅವರ ಬಗ್ಗೆ ಜನಗಳಿಗೆ ನಂಬಿಕೆ ಹುಟ್ಟಬೇಕು. ಅಂತಹ ಒಂದು ವಿಧಾನವನ್ನು ಸಂಘವು ಆಲೋಚಿಸಬೇಕು.

೩. ಆದಿ ಚುಂಚನಗಿರಿ ಕ್ಷೇತ್ರ ಈಗ ಅನೇಕ ಕಾರ್ಯಚಟುವಟಿಕೆಗಳಲ್ಲಿ ತೊಡಗಿದೆ. ಅದರ ಇಂದಿನ ಶ್ರೀಗಳು ಬಹು ಉತ್ಸಾಹದಿಂದ ಕ್ಷೇತ್ರವನ್ನು ಅಭಿವೃದ್ಧಿ ಪಡಿಸುತ್ತಿರುವುದಲ್ಲದೆ, ಬೇರೆ ಬೇರೆ ಕಡೆಗಳಲ್ಲೂ ಹೊಸ ಹೊಸ ಕೆಲಸಗಳನ್ನು ನಡೆಸಲಾರಂಭಿಸಿದ್ದಾರೆ. ಇನ್ನೂ ಆಗಬೇಕಾದ ಕೆಲಸಗಳಿವೆ. ಅವೆಂದರೆ, ಜನರಲ್ಲಿ ಒಗ್ಗಟ್ಟು ಉಂಟುಮಾಡುವುದು, ಅವರ ನಡೆನುಡಿಗಳನ್ನು ತಿದ್ದುವುದು, ಕೆಟ್ಟ ಪದ್ಧತಿಗಳನ್ನು ಬಿಡಿಸುವುದು, ಅಗತ್ಯವಾಗಿ ಆಗಬೇಕಾದ ಕೆಲವು ಸಾಮಾಜಿಕ ಸುಧಾರಣೆಗಳನ್ನು ತರುವುದು ಇವನ್ನೆಲ್ಲಾ ಶ್ರೀಗಳ ನೇತೃತ್ವದಲ್ಲಿ ನಡೆಯಬೇಕಾಗಿವೆ. ಈ ಹಿಂದೆಯೇ ಹೇಳಿದಂತಹ ಸಾಮೂಹಿಕ ವಿವಾಹ ಪದ್ಧತಿಯನ್ನು ಶ್ರೀಗಳೂ, ಸಮಾಜದ ಹಿರಿಯರೂ ಆಲೋಚಿಸಿ, ಕೂಡಲೇ ಕಾರ್ಯಗತಗೊಳಿಸಬೇಕಾಗಿದೆ.

